ಶ್ರೀ ಗುರುಸಾರ್ವಭೌಮರ

# ಪರಿಮಳ ವಿಶೇಷಾಧ್ಯಯನ




ಬ್ರಹ್ಮಸೂತ್ರ ಸನ್ನ್ಯಾಯರತ್ನಾವಳಿ ಶ್ರೀಮನ್ ನ್ಯಾಯಸುಧಾ ಗುರ್ವರ್ಥದೀಪಿಕಾ
ಅನುವ್ಯಾಖ್ಯಾನ ನಯಚಂದ್ರಿಕಾ ಪರಿಮಳ ವಾಕ್ಯಾರ್ಥಚಂದ್ರಿಕಾ

ಈ ಎಂಟು ಗ್ರಂಥಗಳ ಆಮೂಲಾಗ್ರ ಅನುವಾದ, ಹತ್ತಾರು ಟಿಪ್ಪಣಿಗಳ ಪಕ್ಷಿನೋಟ



ಅಧ್ಯಕ್ಷರು:

ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು.

ಪೀಠಾಧಿಪತಿಗಳು

ಸಂಪಾದನೆ ಹಾಗೂ ಅನುವಾದ:

ವಿ॥ ಚೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

## ಸಂಪುಟ -1

# ಪರಿಮಳ
# ವಿಶೇಷಾಧ್ಯಯನ

ಬ್ರಹ್ಮಸೂತ್ರ
ಅನುವ್ಯಾಖ್ಯಾನ
ಸನ್ನ್ಯಾಯರತ್ನಾವಳೀ
ನಯಚಂದ್ರಿಕಾ
ಶ್ರೀಮನ್ನ್ಯಾಯಸುಧಾ
ಪರಿಮಳ
ಗುರ್ವರ್ಥದೀಪಿಕಾ
ವಾಕ್ಯಾರ್ಥಚಂದ್ರಿಕಾ

ಈ ಎಂಟೂ ಗ್ರಂಥಗಳ ಆಮೂಲಾಗ್ರ ಅನುವಾದ, ಹತ್ತಾರು ಟಿಪ್ಪಣಿಗಳ ಪಕ್ಷಿನೋಟ, ರಾಯರ ಪರಿಮಳಕ್ಕೆ ವಿವರಣೆ, ವಿಶೇಷವಿಚಾರ, ವಿಮರ್ಶೆ, ಸಾರ ವೈಶಿಷ್ಟ್ಯಗಳೊಂದಿಗೆ ಕನ್ನಡಾನುವಾದ,

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

'ಪರಿಮಳ-ವಿಶೇಷಾಧ್ಯಯನ -1': ದುರ್ಮುಖನಾಮಸಂವತ್ಸರದ ಮಾರ್ಗಶಿರಮಾಸ ಕೃಷ್ಣಪಕ್ಷ ದ್ವಿತೀಯಾ ದಿನಾಂಕ 15-12-2016 ಶ್ರೀರಾಘವೇಂದ್ರಸ್ವಾಮಿಗಳ ಪವಿತ್ರಕ್ಷೇತ್ರವಾದ ಮಂತ್ರಾಲಯದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸುಬುಧೇಂದ್ರತೀರ್ಥಶ್ರೀಪಾದಂಗಳವರು ಹದಿನೆಂಟು ವಿದ್ಯಾರ್ಥಿಗಳಿಗೆ 25 ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮನ್ನ್ಯಾಯಸುಧಾಗ್ರಂಥದಪಾಠಮಾಡಿಸುಧಾಮಂಗಳಮಾಡುವಶುಭಕ್ಷಣಗಳಲ್ಲಿ ಈ ಕೃತಿಯನ್ನುಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.

| | | |
|---|---|---|
| ಪ್ರಕಾಶನ | : | ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : | ವಿ॥ ಚೆಮ್ಮರ್ತಿ ವೇಂಕಟೇಶಾಚಾರ್ಯ,<br>ಬೆಂಗಳೂರು. ದೂರವಾಣಿ 9141495120 |
| ಪ್ರಥಮಮುದ್ರಣ | : | 2016 |
| ಪುಟಗಳು | : | **704** |
| ಬೆಲೆ | : | 500 ರೂ |
| ಪ್ರತಿಗಳು | : | 1000 |



ಅಕ್ಷರಜೋಡಣೆ :
ಸುಬ್ಬಣ್ಣ ಕೆಂಪದಾಳಿಹಳ್ಳಿ. (080-26761614)
ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

Srimanmularamo vijayate — Sri Gururajo vijayate

# VOLUME - 1

# PARIMAḶA

## VIŚEṢĀDHYANA

BRAHMASŪTRAS
ANUVYĀKHYĀNA
SATTARKADĪPĀVAḶĪ
NAYACHANDRIKĀ
SRĪMANNYĀSUDHĀ
PARIMAḶA
GURVARTHADĪPIKĀ
VAKYĀRTHACHANDRIKĀ

**with meanings in Kannada of the above eight great works alongwith important points of other glossaries of Nyāyasudhā, Notes, Q&A and Headings, Explanatory Notes on Parimala of Sri Raghavendra swamiji**

*****

PUBLISHERS
**SRI GURUSĀRVABHOUMA SAMŚHODHANA MANDIRA**
Jagaduguru Śrimanmadhvāchārya Mūlamahāsamsthāna
Sri Rāghavendraswāmigala Matha, Mantralayam- 518 345
ANDHRAPRADESH

**PARIMAḶA VIŚEṢĀDHYANA** **was released on the auspicious occassion of Mangaḷa of Śrimannyāsudhā Pāṭa done by His Holiness Sri Sri Subudhendra Swamiji on 15-12-2016. Sri Durmukha Margaśhira Kṛṣṇa Dvitiyā at Mantralayam**

PUBLISHERS : **SRI GURUSĀRVABHOUMA SAMŚHODHANA MANDIRA**
Jagaduguru Śrimanmadhvāchārya Mūlamahāsamsthāna
Sri Rāghavendraswāmigala Matha, Mantralayam- 518 345
ANDHRAPRADESH

**COMPILED, EDITED AND TRANSLATED BY** : **Vidwan Bemmatti Venkateshacharya,** Bangalore **Ph.** 9141495120

**YEAR OF PUBLICATION** : **2016**

**NO OF PAGES** : **704**
**PRICE** : **Rs 500 only**

**No of copies** : **1000**



**D.T.P.**
**Subbanna Kempadhali Halli (080-26761624)**

**PRINTERS:**
**MUKTIPATHA MUDRANALAYA,**
**BANGALORE**

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ

# ಪರಿಮಳ

## ವಿಶೇಷಾಧ್ಯಯನ

* * * *

ಅಧ್ಯಕ್ಷರು :

**ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು**

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :

ವಿ॥ ರಾಜಾ ಎಸ್. ಗಿರಿಆಚಾರ್ಯ

ಮಂತ್ರಾಲಯ.

ಸಂಪಾದನೆ ಮತ್ತು ಅನುವಾದ :

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

* * *

# ಮೊದಲನೆಯ ವಾಙ್ಮಯಪುಷ್ಪಗುಚ್ಛಸಮರ್ಪಣೆ

## ಪರಿಮಳ-ವಿಶೇಷಾಧ್ಯಯನ ಸಂಪುಟ-1



ರಾಯರು ಎಂದರೆ ಪರಿಮಳ ಪರಿಮಳ ಎಂದರೆ ರಾಯರು. ಆದ್ದರಿಂದಲೇ 'ಪರಿಮಳಾಚಾರ್ಯರು' ಎಂಬ ಬಿರುದು ಪಡೆದಿರುವರು. ಹೀಗೆ ರಾಯರ ಸ್ವರೂಪದಂತಿರುವ ಪರಿಮಳಗ್ರಂಥದ ಹೆಸರು ಕೇಳದ ಭಕುತರಿಲ್ಲ. ಆದರೆ ಇಲ್ಲಿಯ ತನಕ ಈ ಪರಿಮಳಗ್ರಂಥ ಕೇವಲ ಸಂಸ್ಕೃತಭಾಷೆಯಲ್ಲೇ ಉಳಿದಿತ್ತು. ಪರಿಮಳಗ್ರಂಥ ಪ್ರತಿಯೊಬ್ಬಜಿಜ್ಞಾಸುವಿಗೂ ತಲುಪಬೇಕೆಂಬ ಹೆಬ್ಬಯಕೆ ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರದ್ದು. ಆದ್ದರಿಂದ ಇದೇ ಮೊದಲಬಾರಿ ಕನ್ನಡಭಾಷೆಯಲ್ಲಿ ಪ್ರತಿಯೊಬ್ಬರಿಗೂ ಅರ್ಥವಾಗುವಂತೆ ಪ್ರಕಟನೆ ಮಾಡುತ್ತಿರುವರು. ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮಧ್ವಾಚಾರ್ಯರ ಅಂತರ್ಯಾಮಿಯಾದ ಶ್ರೀಮನ್ಮೂಲರಾಮಚಂದ್ರದೇವರಿಗೆ ಮೊದಲನೆಯ ವಾಙ್ಮಯಪುಷ್ಪಗುಚ್ಛವನ್ನಾಗಿ ಈ ಗ್ರಂಥವನ್ನು ಸಮರ್ಪಣೆ ಮಾಡುತ್ತಿರುವರು.

# ಅನುಕ್ರಮಣಿಕೆ



* * * * * * *

# ಗ್ರಂಥಗಳು ಹಾಗೂ ಗ್ರಂಥಕಾರರ ಪರಿಚಯ

| | |
|---|---|
| ಬ್ರಹ್ಮಸೂತ್ರಗಳು | ಶ್ರೀವೇದವ್ಯಾಸದೇವರು |
| ಅನುವ್ಯಾಖ್ಯಾನ | ಜಗದ್ಗುರು ಶ್ರೀಮಧ್ವಾಚಾರ್ಯರು |
| ಸನ್ನ್ಯಾಯರತ್ನಾವಳಿ | ಶ್ರೀಪದ್ಮನಾಭತೀರ್ಥರು<br>(ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು) |
| ನಯಚಂದ್ರಿಕಾ | ಶ್ರೀನಾರಾಯಣಪಂಡಿತಾಚಾರ್ಯರು<br>ಕವಿಕುಲತಿಲಕ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು |
| ಶ್ರೀಮನ್ನ್ಯಾಯಸುಧಾ | ಶ್ರೀಜಯತೀರ್ಥರು<br>ಶ್ರೀಮದಕ್ಷೋಭ್ಯತೀರ್ಥರ ಶಿಷ್ಯರು |
| ಪರಿಮಳ | ಶ್ರೀರಾಘವೇಂದ್ರತೀರ್ಥರು<br>ಶ್ರೀಸುಧೀಂದ್ರತೀರ್ಥರ ಶಿಷ್ಯರು |
| ಗುರ್ವರ್ಥದೀಪಿಕಾ | ಶ್ರೀವಾದಿರಾಜತೀರ್ಥರು<br>ಶ್ರೀವಾಗೀಶತೀರ್ಥರ ಶಿಷ್ಯರು |
| ವಾಕ್ಯಾರ್ಥಚಂದ್ರಿಕಾ | ಶ್ರೀವಿದ್ಯಾಧೀಶತೀರ್ಥಶ್ರೀಪಾದರು<br>ಶ್ರೀವೇದವ್ಯಾಸತೀರ್ಥರ ಶಿಷ್ಯರು |

## ಉಳಿದ ವ್ಯಾಖ್ಯಾನಗಳ ಹಾಗೂ ವ್ಯಾಖ್ಯಾನಕರ್ತೃಗಳ ಪರಿಚಯ

| | |
|---|---|
| ಯಾದುಪತ್ಯ | ಯಾದುಪತ್ಯಾಚಾರ್ಯರು |
| ವಾಕ್ಯಾರ್ಥವಿವೃತಿ | ವಂಶಪಲ್ಲಿ ಆಚಾರ್ಯರು |
| ಆನಂದ | ಗಲಗಲಿ ನರಸಿಂಹಾಚಾರ್ಯರು |
| ವಿವೃತಿ | ಕಂಬಾಲೂರು ರಾಮಚಂದ್ರತೀರ್ಥರು |
| ಶ್ರೀನಿಧೀಯ | ಶ್ರೀನಿಧಿತೀರ್ಥರು |
| ವಾಕ್ಯಾರ್ಥರತ್ನಮಾಲಾ | ಪಾಂಡುರಂಗೀನರಸಿಂಹಾಚಾರ್ಯರು |
| ರಸಕೂಲಂಕಷ | ಕುಂಡಲಗಿರಿ ಆಚಾರ್ಯರು |
| ಸುಧಾವಿವೃತಿ | ಸತ್ಯವ್ರತತೀರ್ಥರು |
| ದುರ್ಘಟವಾಕ್ಯಾರ್ಥವಿಚಾರ | ಶ್ರೀಸತ್ಯನಾಥತೀರ್ಥರು |
| ವಿಟ್ಠಲಭಟ್ಟೀಯ | ವಿಟ್ಠಲಭಟ್ಟರು |
| ರಸರಂಜಿನೀ | ಶ್ರೀವಿಷ್ಣುತೀರ್ಥರು |
| ಲಘುರಸರಂಜಿನೀ | ಅಡವಿ ಕೃಷ್ಣಾಚಾರ್ಯರು |
| ಚಷಕಃ | ಮನ್ನಾರೀಕೃಷ್ಣಾಚಾರ್ಯರು |
| ಉಪಸ್ಪರ್ಶಃ | ಏರೀಬಾಳಾಚಾರ್ಯರು |
| ಗೂಢಕರ್ತೃಕ | ಹೆಸರಿನ ಉಲ್ಲೇಖವಿಲ್ಲ |

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಪೂರ್ಣಾಗಣ್ಯಗುಣೋದಾರಮೂರ್ತಯೇ ಪುಣ್ಯಕೀರ್ತಯೇ ।
ನಮಃ ಶ್ರೀಪತಯೇ ಭಕ್ತದತ್ತಸ್ವಾನಂದಮೂರ್ತಯೇ ॥

ಲಕ್ಷ್ಮೀಪತಿಯಾದ ನಾರಾಯಣನು ಪೂರ್ಣವಾದ ಹಾಗೂ ಉತ್ಕೃಷ್ಟವಾದ ಗುಣಗಳುಳ್ಳವನು. ಮಂಗಳಮಯವಾದ ಕೀರ್ತಿಶಾಲಿಯಾದವನು. ತನ್ನ ಜ್ಞಾನಾನಂದಾತ್ಮಕವಾದ ಶರೀರವನ್ನು ಭಕ್ತರಿಗೆ ಪ್ರಕಟಪಡಿಸುವವನು ಆಗಿರುತ್ತಾನೆ.

ಹೀಗೆ ಪರಿಮಳಗ್ರಂಥವು ಪ್ರಾರಂಭವಾಗುತ್ತದೆ. ಈ ಗ್ರಂಥವನ್ನು ಅಧ್ಯಯನ ಮಾಡುವುದರಿಂದ ಭಗವಂತನ ದರ್ಶನವೇ ಆಗುತ್ತದೆಂಬುದು ಈ ಶ್ಲೋಕದ ಧ್ವನಿ. ನಾವು ಬೇರೆ ಯಾವುದೇ ಉಪಕಾರ ಮಾಡಿದರೂ ಅದೆಲ್ಲವೂ ಕ್ಷಣಿಕ. ಭಗವಂತನ ಅಪರೋಕ್ಷವಾಗುವಂತಹ ಉಪಕಾರ ಮಾಡುವುದು ಶಾಶ್ವತ. ಯಾವ ಪರಿಮಳಗ್ರಂಥದ ಅಧ್ಯಯನದಿಂದಲೇ ಭಗವಂತನ ದರ್ಶನವಾಗುತ್ತದೋ ಅಂಥ ಪರಿಮಳಗ್ರಂಥದ ಪ್ರಕಾಶನವನ್ನು ಈಗ ನಾವು ಮಾಡುತ್ತಿದ್ದೇವೆ.

ಸರ್ವೇಂದ್ರಿಯಪ್ರೇರಕೇಣ ಶ್ರೀಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಯತಾಂ ಕಮಲಾಲಯಃ ।

ಸರ್ವೇಂದ್ರಿಯಪ್ರೇರಕನಾದ ಮುಖ್ಯಪ್ರಾಣನಿಗೆ ಒಡೆಯನಾದ ಲಕ್ಷ್ಮೀಪತಿಯು ನಮ್ಮ ಮಾತುಗಳಿಂದ ಪ್ರೀತನಾಗಲಿ.

ಹೀಗೆ ಪರಿಮಳಗ್ರಂಥವು ಸಮಾಪ್ತಿಗೊಳ್ಳುತ್ತದೆ. ನಮ್ಮ ಪ್ರತಿಯೊಂದು ಕಾರ್ಯಗಳು ಹರಿಸಮರ್ಪಣೆ ಭಾವದಿಂದ ಕೂಡಿರಬೇಕು. ಆಗ ಮಾತ್ರ ಭಗವಂತನ ಪ್ರೀತಿಗೆ ಕಾರಣವಾಗುತ್ತದೆ. ಏತನ್ಮೂಲಕ ಈ ಗ್ರಂಥದ ಅಧ್ಯಯನವು ಕೂಡ ಸಾರ್ಥಕವಾಗುತ್ತದೆ. ಈ ಸಂದೇಶವನ್ನು ತಿಳಿಸುವ ಮೂಲಕ ಶ್ರೀರಾಘವೇಂದ್ರಗುರು-ಸಾರ್ವಭೌಮರು ಪರಿಮಳ ಗ್ರಂಥವನ್ನು ಮುಕ್ತಾಯ ಮಾಡಿದ್ದಾರೆ.

ಶ್ರೀಮನ್ನ್ಯಾಯಸುಧಾಗ್ರಂಥಕ್ಕೆ ಆಮೂಲಾಗ್ರವಾದ ಅತ್ಯಂತ ವಿವರಾತ್ಮಕವಾದ ಟಿಪ್ಪಣಿ ಎಂದರೆ ಅದು ಪರಿಮಳ ಗ್ರಂಥ. ನ್ಯಾಯಸುಧೆಯ ನಾಕೂ ಅಧ್ಯಾಯಗಳಿಗೆ ಟಿಪ್ಪಣಿ ಬರೆದ ಅದ್ಭುತ ಗ್ರಂಥಕಾರರಿವರು. ಆಕಾರದಲ್ಲಿ ಮತ್ತು ಅರ್ಥದಲ್ಲಿ ಇದೊಂದು ಮೇರು ಕೃತಿ. ಇಷ್ಟಾದರೂ ರಾಯರ ದೃಷ್ಟಿಯಲ್ಲಿ ಇದು ಅತ್ಯಂತ ಕಿರಿದಾದ ಕೃತಿ. ತಮಗೆ ತಿಳಿದ ಅರ್ಥಗಳನ್ನೆಲ್ಲಾ ಈ ಗ್ರಂಥದಲ್ಲಿ ತಿಳಿಸಲು ಸಾಧ್ಯವಾಗುತ್ತಿಲ್ಲ ಎಂದು ಪರಿಮಳಾ-ಚಾರ್ಯರು ಉದ್ಗರಿಸುವರು –

ಪ್ರತ್ಯಕ್ಷರಂ ಪ್ರತಿಪದಂ ಅನೇಕಾಕೂತಿಗರ್ಭಿತಾ ।
ಪ್ರತಿಭಾತಿ ಸುಧಾಽಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ।

ಶ್ರೀಮನ್ನ್ಯಾಯಸುಧಾಗ್ರಂಥವು ಪ್ರತಿಯೊಂದು ಅಕ್ಷರ ಮತ್ತು ಪದಗಳಲ್ಲಿಯೂ ಅನೇಕ ಅಭಿಪ್ರಾಯ-ವಿಶೇಷದಿಂದ ಒಳಗೊಂಡಿದೆ. ಆದರೂ ಕೂಡ ಪರಿಮಳಗ್ರಂಥವು ಸಂಕ್ಷೇಪವಾಗಿರಲಿ ಬೃಹತ್ತಾಗಿರುವುದು ಬೇಡ ಎಂಬ ಉದ್ದೇಶದಿಂದ ನನಗೆ ತಿಳಿದ ವಿಷಯಗಳನ್ನು ವಿವರಿಸಲು ಸಾಧ್ಯವಾಗುತ್ತಿಲ್ಲ ಎಂದು. ಆದರೂ ಕೂಡ ರಾಯರಿಗೆ ತಮ್ಮ ಉಳಿದೆಲ್ಲ ಟಿಪ್ಪಣಿಗಳಿಂತ ಈ ಪರಿಮಳಗ್ರಂಥದ ವಿಷಯದಲ್ಲಿ ಹೆಚ್ಚು ಹೆಮ್ಮೆಯ ಭಾವನೆ ಇದೆಯೆಂದು ಕಾಣಿಸುತ್ತದೆ.

ಯೇ ತು ನ್ಯಾಯಸುಧಾಪಾನಕಾಮುಕಾ ರಸಿಕಾಃ ಬುಧಾಃ ।
ಆಘ್ರಾಯೇಮಂ ಪರಿಮಳಂ ಸೇವ್ಯತಾಂ ತೇ ಸುಧಾಮಿಮಾಮ್ ।

ಶ್ರೀಮನ್ನ್ಯಾಯಸುಧೆಯನ್ನು ಪಾನಮಾಡಲು ಬಯಸಿದ ಜ್ಞಾನಿಗಳಾದ ರಸಿಕರು ನ್ಯಾಯಸುಧೆಯಿಂದ ಹೊರಹೊಮ್ಮುತ್ತಿರುವ ಈ ಪರಿಮಳವನ್ನು ಆಘ್ರಾಣಿಸಿರಿ. ಸುಧಾಗ್ರಂಥವು ಅಮೃತವಾದರೆ ಅದರ ಸುಗಂಧ-ಪರಿಮಳವೇ ಈ ಗ್ರಂಥವಾಗಿದೆ ಎಂದು ಹೆಮ್ಮೆ ಪಡುವರು.

ಪರಿಮಳಗ್ರಂಥದ ವೈಶಿಷ್ಟ್ಯಗಳು ಹತ್ತಾರು. ಇದನ್ನು ವರ್ಣಿಸಿ ಮುಗಿಸಲು ಸಾಧ್ಯವಿಲ್ಲ. ಆದರೂ ನಮ್ಮ ದೃಷ್ಟಿಗೆ ಬಿದ್ದಂತೆ ಈ ಟಿಪ್ಪಣಿಯ ವೈಶಿಷ್ಟ್ಯ ಹೀಗಿದೆ.

1. ಸುಧಾಗ್ರಂಥದ ಪ್ರತಿಯೊಂದು ವಾಕ್ಯಗಳು ಏಕೆ ಹೊರಟಿವೆ ಎಂಬುದಕ್ಕೆ ಸಂಗತಿಯ ಪ್ರದರ್ಶನ.

2. ಟೀಕಾರಾಯರು ಇದೇ ಶಬ್ದವನ್ನು ಏಕೆ ಬಳಸಿದರು? ಇದರ ಔಚಿತ್ಯವೇನು?

3. ವ್ಯಾಕರಣದ ಪ್ರಕಾರ ಈ ಶಬ್ದವು ಸಾಧುವೇ ಅಥವಾ ಅಲ್ಲವೇ? ಎಂಬುದರ ವಿಮರ್ಶೆ.

4. ನ್ಯಾಯಸುಧಾಗ್ರಂಥದಲ್ಲಿ ಕೆಲವೊಮ್ಮೆ ಪದಚ್ಛೇದ ಹೇಗೆ ಮಾಡಬೇಕು? ಎಂದು ತೋರಿಸುವಿಕೆ.

5. ಹಸ್ತಪ್ರತಿಗಳಲ್ಲಿ ಕಾಣುವ ಲಿಪಿಕಾರರ ದೋಷಗಳು.

6. ಸಮಗ್ರ ಟೀಕೆಯ ಸಾರಸರ್ವಸ್ವ.

7. ನ್ಯಾಯಸುಧಾಗ್ರಂಥದ ಮೇಲೆ ಹುಟ್ಟುವ ಹಲವಾರುಪ್ರಶ್ನೆಗಳಿಗೆ ಅಪೂರ್ವ ಉತ್ತರ.

8. ಅನುವ್ಯಾಖ್ಯಾನಕ್ಕೆ ಸುಧೆಯು ಹೇಗೆ ವ್ಯಾಖ್ಯಾನವಾಗಿದೆ ಎಂಬುದರ ಸಮನ್ವಯ ಪ್ರತಿಯೊಂದೆಡೆ.

9. ಯಾವುದೇ ಇತರ ಜ್ಞಾನಿಗಳನ್ನು ನಿರಾಕರಣೆ ಮಾಡದಿರುವುದು.

10. ಇದಮಿತ್ಥಂ ಎಂಬ ನಿರ್ಧಾರದ ವ್ಯಾಖ್ಯಾನ.

11. ವ್ಯಾಕರಣ, ಮೀಮಾಂಸಾ, ನ್ಯಾಯಶಾಸ್ತ್ರ, ವೇದಾಂತಶಾಸ್ತ್ರಗಳಲ್ಲಿ ಇದಮಿತ್ಥಂ ಎಂಬ ನಿರ್ಧಾರಾತ್ಮಕ-ವಾದ ವಿಮರ್ಶೆ.

ಇಂಥ ಇನ್ನೂ ಅನೇಕ ವೈಶಿಷ್ಟ್ಯಗಳಿಂದ ಪರಿಮಳಗ್ರಂಥವು ಪರಿಪೂರ್ಣವಾಗಿದೆ.

ಈ ಪರಿಮಳಗ್ರಂಥವು ಧೀರರೂ ಯತಿಗಳೂ ಕರುಣಾಸಂಪನ್ನರೂ ಆದ ರಾಯರ ಪ್ರತಿರೂಪದಂತಿದೆ.

ಧೀರಪುರುಷನಲ್ಲಿರಬೇಕಾದ ಸಮಸ್ತಗುಣಗಳು ಈ ಪರಿಮಳಟಪ್ಪಣಿಯಲ್ಲಿದೆ. ಯತಿಯಲ್ಲಿರಬೇಕಾದ ಸಮಸ್ತಗುಣಗಳು ಈ ಪರಿಮಳಟಪ್ಪಣಿಯಲ್ಲಿದೆ. ಕರುಣಾಶಾಲಿಯಾದ ಜ್ಞಾನಿಯಾದ ಸಜ್ಜನನಾದ ಅನೇಕ-ಗುಣಗಳುಳ್ಳ ವ್ಯಕ್ತಿಯಲ್ಲಿ ಎಷ್ಟು ಗುಣಗಳಿರಬೇಕೋ ಆ ಎಲ್ಲಾ ಗುಣಗಳು ಈ ಪರಿಮಳಗ್ರಂಥದಲ್ಲಿದೆ. ಆದ್ದ-ರಿಂದ ಈ ಪರಿಮಳಗ್ರಂಥವು ಶ್ರೀರಾಘವೇಂದ್ರಗುರುಸಾರ್ವಭೌಮರ ಪ್ರತಿಬಿಂಬ ಎಂದು ಹೇಳಿದರೆ ತಪ್ಪಾಗುವುದಿಲ್ಲ. ಸರ್ವಮೂಲಗ್ರಂಥಗಳು ಶ್ರೀಮಧ್ವಾಚಾರ್ಯರ ಪ್ರತಿರೂಪದಂತಿವೆ 'ರೂಪಮನ್ಯದಿವ ಧನ್ಯಮಾತ್ಮನಃ' ಎಂಬುದಾಗಿ ನಾರಾಯಣಪಂಡಿತರು ಪ್ರಶಂಸೆ ಮಾಡುತ್ತಾರೆ. ನಾವೂ ಕೂಡ ಅದೇ ಮಾತನ್ನು ಇವರಲ್ಲಿ ಸಮನ್ವಯಗೊಳಿಸಿ ಇವರನ್ನು ಪರಿಮಳಾಚಾರ್ಯರೆಂದೇ ಗೌರವಭಾವದಿಂದ ಕಾಣುತ್ತೇವೆ.

ಶ್ರೀರಾಘವೇಂದ್ರಗುರುಸಾರ್ವಭೌಮರಿಗೆ ಬೇರೆ ಯಾವುದೇ ಸೇವೆ ಮಾಡಿದರೂ ಅಷ್ಟು ಸಂತೋಷ-ವಾಗುವುದಿಲ್ಲ. ಆದರೆ ತಮ್ಮ ಪ್ರತಿರೂಪದಂತಿರುವ ಪರಿಮಳಗ್ರಂಥದ ಅಧ್ಯಯನ ಹಾಗೂ ಅಧ್ಯಾಪನಗಳಿಂದ ಅಪಾರವಾದ ಸಂತೋಷವನ್ನು ಹೊಂದುತ್ತಾರೆ. ಆದ್ದರಿಂದ ನಾವು ಪ್ರತಿನಿತ್ಯ ಇದೇ ಗ್ರಂಥವನ್ನು ಹತ್ತಾರು ವಿದ್ಯಾರ್ಥಿಗಳಿಗೆ ಪಾಠವನ್ನು ಮಾಡುತ್ತಿದ್ದೇವೆ. ಶ್ರೀರಾಘವೇಂದ್ರಗುರುಸಾರ್ವಭೌಮರ ಸನ್ನಿಧಾನದಲ್ಲಿ ಕುಳಿತು

ಪರಿಮಳಗ್ರಂಥವನ್ನು ಪಾಠಮಾಡುವಾಗ ಹತ್ತಾರು ಅಲೌಕಿಕ ಅನುಭವಗಳಾಗಿದ್ದು, ರಾಯರ ದಿವ್ಯವಾದ ಕೃಪೆಗೆ ಪಾತ್ರರಾಗಿದ್ದೇವೆ. 'ಶ್ರೀಕರೋಽಯಂ ಗ್ರಂಥಃ' ನ್ಯಾಯಸುಧಾಗ್ರಂಥವು ಶ್ರೀಕರ ಗ್ರಂಥವಾಗಿದೆ ಎಂಬುದಾಗಿ ಶ್ರೀವಾದಿರಾಜಪೂಜ್ಯಚರಣರು ಪ್ರಶಂಸೆ ಮಾಡುತ್ತಾರೆ. ಪರಿಮಳಗ್ರಂಥದಿಂದ ಕೂಡಿದ ನ್ಯಾಯಸುಧಾಗ್ರಂಥ ಅದಕ್ಕಿಂತಲೂ ಹೆಚ್ಚಿನ ಫಲ ನೀಡುತ್ತದೆಂಬುದರಲ್ಲಿ ಸ್ವತಃ ನಾವೇ ಸಾಕ್ಷಿಯಾಗಿದ್ದೇವೆ. 25ಟಿಪ್ಪಣಿಗಳಿಂದ ಕೂಡಿದ ಪರಿಮಳಗ್ರಂಥದ ಜೊತೆಗೆ ನ್ಯಾಯಸುಧಾಗ್ರಂಥದ ಸಂಪಾದಕತ್ವವನ್ನು ನಾವು ಪೂರ್ವಾಶ್ರಮದಲ್ಲಿ ವಹಿಸಿಕೊಂಡೆವು. ಹತ್ತಾರುವರ್ಷಗಳ ಕಾಲ ಅನೇಕ ವಿದ್ವಾಂಸರ ಜೊತೆ ಚರ್ಚಿಸಿ ಸಂಶೋಧಿಸಿ "ಶ್ರೀಮನ್ನ್ಯಾಯಸುಧಾ ಪರಿಮಳಾದ್ಯುಪೇತಾ" ಎಂಬ ಸಂಸ್ಕೃತಗ್ರಂಥವನ್ನು ಪ್ರಕಾಶನ ಮಾಡುವ ಅವಕಾಶ ದೊರಕಿತು. ಹತ್ತಾರುವರ್ಷಗಳ ಕಾಲ ನಿರಂತರಪರಿಶ್ರಮದಿಂದ ಈ ಕೃತಿಯನ್ನು ಪ್ರಕಾಶನ ಮಾಡಿರುವ ಕಾರಣದಿಂದಲೇ ಶ್ರೀಮನ್ಮೂಲರಾಮಚಂದ್ರದೇವರು ನಮಗೆ ಇಂಥ ಪೀಠಾಧಿಪತ್ಯದ ಉತ್ತಮಸ್ಥಾನವನ್ನು ಕರುಣಿಸಿದನು. ಇಂಥ ವಾಙ್ಮಯಸೇವೆಯಿಂದಷ್ಟೇ ನಮಗೆ ಶ್ರೀಮೂಲರಾಮಚಂದ್ರದೇವರ ಪೂಜಾಕೈಂಕರ್ಯದ ಸೌಭಾಗ್ಯ ಒದಗಿ ಬಂದಿದೆ.

ಇಷ್ಟರಿಂದಲೇ ನಮಗೆ ತೃಪ್ತಿಯಿಲ್ಲ. ನ್ಯಾಯಸುಧಾ ಹಾಗೂ ಪರಿಮಳಗ್ರಂಥದ ಪ್ರಚಾರ ಇನ್ನೂ ಹೆಚ್ಚು ಹೆಚ್ಚು ಆಗಬೇಕು. ಪ್ರತಿಯೊಬ್ಬ ಜಿಜ್ಞಾಸುವೂ ಇದರ ಸದುಪಯೋಗ ಪಡೆದುಕೊಳ್ಳಬೇಕೆಂದು ನಮ್ಮ ಮನದಾಳದಲ್ಲಿ ನಿರಂತರ ಇದೆ. ಅದಕ್ಕಾಗಿ ಈ ಯೋಜನೆಯನ್ನು ಗುರುಗಳ ಅನುಗ್ರಹದಿಂದ ಪ್ರಾರಂಭ ಮಾಡಿದ್ದೇವೆ. ಪರಿಮಳಗ್ರಂಥವನ್ನು ಆಮೂಲಾಗ್ರವಾಗಿ ಕನ್ನಡಭಾಷೆಯಲ್ಲಿ ಅನುವಾದ ಮಾಡಬೇಕು. ಏತನ್ಮೂಲಕ ಸಂಸ್ಕೃತವನ್ನು ಕಲಿಯದ ಗುರುರಾಜರ ಭಕ್ತರು ಪರಿಮಳಗ್ರಂಥದ ಜ್ಞಾನವನ್ನು ಪಡೆದುಕೊಳ್ಳಬೇಕು ಎಂಬುದು ನಮ್ಮ ಹೆಬ್ಬಯಕೆ. ಕೇವಲ ಅನುವಾದ ಮಾಡಿದರೆ ಸಾಲದು. ಅದರಿಂದ ಮೂಲಪಂಕ್ತಿಗಳ ಅರ್ಥವನ್ನು ಸಮಗ್ರವಾಗಿ ತಿಳಿಯಲು ಸಾಧ್ಯವಿಲ್ಲ. ಅದಕ್ಕಾಗಿ ಅನುವಾದ ಮಾಡಿದ ಭಾಗವನ್ನೇ ವಿಶೇಷವಾಗಿ ವಿವರಣೆ ಮಾಡಿ, ಕೆಲವೊಮ್ಮೆ ವಿಮರ್ಶೆಗಳನ್ನು ನೀಡಿ ಜಿಜ್ಞಾಸುಗಳಿಗೆ ಅರ್ಥ ಮಾಡಿಸಬೇಕಾಗುತ್ತದೆ. ಇಷ್ಟಾದ ಮೇಲೆ ಸಮಗ್ರ ಆ ಮೂಲದಿಂದ ತಿಳಿಯುವ ಸಾರಭಾಗವನ್ನು ಹಾಗೂ ಪರಿಮಳಗ್ರಂಥದಲ್ಲಿರುವ ವೈಶಿಷ್ಟ್ಯವನ್ನು ತಿಳಿಸಬೇಕಾಗುತ್ತದೆ. ಈ ಎಲ್ಲಾ ದೃಷ್ಟಿಯಿಂದ ಈ ಗ್ರಂಥವು ಪ್ರಕಟನೆ ಆಗುತ್ತಿದೆ. ಕೇವಲ ಪರಿಮಳಗ್ರಂಥವನ್ನಷ್ಟೇ ಓದಿದರೆ ಸಾಕು ಎಂಬುದು ನಮ್ಮ ಧೋರಣೆಯಲ್ಲ. ಬೇರೆ ಹತ್ತಾರು ಜ್ಞಾನಿಗಳು ಇದೇ ನ್ಯಾಯಸುಧಾಗ್ರಂಥಕ್ಕೆ ವಾಙ್ಮಯಸೇವೆಯನ್ನು ಮಾಡಿದ್ದಾರೆ. ಅವುಗಳನ್ನು ಕೂಡ ಗೌರವಭಾವದಿಂದ ಅಧ್ಯಯನ ಮಾಡಬೇಕು. ಆದ್ದರಿಂದ ನಮ್ಮ ಮಠದ ಕಡೆಯಿಂದ ಇಪ್ಪತ್ತೈದು ಟಿಪ್ಪಣಿಗಳ ಜೊತೆ ನ್ಯಾಯಸುಧಾಗ್ರಂಥವು ಪ್ರಪ್ರಥಮಬಾರಿಗೆ ಮುದ್ರಣವಾಗಿದೆ. ಆ ಪುಸ್ತಕದಲ್ಲಿರುವ ಎಲ್ಲಾ ವ್ಯಾಖ್ಯಾನಗಳನ್ನೂ ಕನ್ನಡಭಾಷೆಯಲ್ಲಿ ಅನುವಾದ ಮಾಡಿದರೆ ಅಧ್ಯಯನ ಮಾಡುವವರಿಗೆ ಕಠಿಣವಾಗುತ್ತದೆ. ಎಲ್ಲಿ ಯಾವ ಭಾಗವನ್ನು ಓದಲೇಬೇಕೋ ಅಷ್ಟನ್ನು ಮಾತ್ರ ಈ ಕೃತಿಯಲ್ಲಿ ಅನುವಾದ ಮಾಡಲಾಗಿದೆ. ಜೊತೆಯಲ್ಲಿ ನ್ಯಾಯಸುಧಾಗ್ರಂಥದ ರಚನೆಗೂ ಮೊದಲು ವಿರಚಿತ-

ವಾದ ಶ್ರೀಪದ್ಮನಾಭತೀರ್ಥರ ಸನ್ನ್ಯಾಯರತ್ನಾವಳೀ, ಹಾಗೂ ಶ್ರೀನಾರಾಯಣಪಂಡಿತಾಚಾರ್ಯರ ನಯ-ಚಂದ್ರಿಕಾ ಟೀಕೆಗಳನ್ನು ಕೂಡ ಸೇರಿಸಲಾಗಿದೆ. ನ್ಯಾಯಸುಧಾಗ್ರಂಥಕ್ಕೆ ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರು ಅನುಪಮವಾದ ವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ. ಉತ್ತರಾದಿಮಠದ ಪರಂಪರೆಯಲ್ಲಿ ಬಂದ ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರ ಪಾಂಡಿತ್ಯವನ್ನು ಮೆಚ್ಚದ ವ್ಯಕ್ತಿಯಿಲ್ಲ. ಅವರ ಟಿಪ್ಪಣಿ ನ್ಯಾಯಸುಧಾಗ್ರಂಥಕ್ಕೆ ಪರಿಪೂರ್ಣವಾಗಿ ಇಲ್ಲದೇ ಇದ್ದರೂ ಎಲ್ಲಿಯ ತನಕವಿದೆಯೋ ಅಲ್ಲಿಯತನಕ ಕನ್ನಡಭಾಷೆಯಲ್ಲಿ ಅನುವಾದ ಮಾಡಿಸಲಾಗಿದೆ. ಹಾಗೂ ಶ್ರೀವಾದಿರಾಜಪೂಜ್ಯಚರಣರ ಗುರ್ವರ್ಥದೀಪಿಕಾ ಗ್ರಂಥದ ಅನುವಾದವೂ ಕೂಡ ಈ ಕೃತಿಯಲ್ಲಿದೆ. ಹೀಗೆ ಅನೇಕ ಟಿಪ್ಪಣಿಗಳ ಹಾಗೂ ಟೀಕೆಗಳ ಜೊತೆ ಅನು-ವ್ಯಾಖ್ಯಾನಗ್ರಂಥವನ್ನು ಅಧ್ಯಯನ ಮಾಡಬೇಕು. ವಿಶೇಷವಾಗಿ ಪರಿಮಳಗ್ರಂಥವನ್ನು ಅಧ್ಯಯನ ಮಾಡಬೇಕು. ಆದ್ದರಿಂದಲೇ ಈ ಕೃತಿಗೆ ''ಪರಿಮಳವಿಶೇಷಾಧ್ಯಯನ'' ಎಂಬ ಹೆಸರನ್ನು ಇಡಲಾಗಿದೆ.

ಪರಿಮಳಗ್ರಂಥವನ್ನು ಹಾಗೂ ಇನ್ನೂ ಅನೇಕ ಟಿಪ್ಪಣಿಗಳನ್ನು ಮತ್ತು ಟೀಕೆಗಳನ್ನು ವಿದ್ವಾಂಸರಿಂದ ವಿದ್ವತ್ಪೂರ್ಣವಾಗಿ ಸುಲಲಿತವಾಗಿ ಚೆನ್ನಾಗಿ ಅನುವಾದ ಮಾಡಿಸಬೇಕೆಂಬ ಸಂಕಲ್ಪ ಮೂಡಿದಾಗ ನಮಗೆ ನೆನಪಾದವರು ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರು. ನಮ್ಮ ಶ್ರೀಮಠದ ಶಿಷ್ಯರಾದ ಇವರು ಈಗಾಗಲೇ ಹತ್ತಾರು ಉದ್ಗ್ರಂಥಗಳ ಕನ್ನಡಾನುವಾದವನ್ನು ಮಾಡುವ ಮೂಲಕ ಲೇಖನದಲ್ಲಿ ಪರಿಣತಿಯನ್ನು ಪಡೆದಿದ್ದಾರೆ. ಅನೇಕ ವಿದ್ವಾಂಸರ ಹಾಗೂ ಜಿಜ್ಞಾಸುಗಳ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಇವರನ್ನು ಹೆಚ್ಚು ಪ್ರಶಂಸೆ ಮಾಡುವುದಕ್ಕಿಂತ ರಾಯರ ಕೃಪೆಗೆ ಪಾತ್ರರಾಗಿದ್ದಾರೆ ಎಂಬ ಒಂದೇ ಮಾತನ್ನು ಇವರ ವಿಷಯದಲ್ಲಿ ಹೇಳಿದರೆ ಸಾಕು. ಇವರು ಸುಮಾರು ಹನ್ನೆರಡು ವರ್ಷಗಳ ಹಿಂದೆ ''ಸುಧಾಸೌರಭ'' ಕೃತಿಯ ಸಂಪಾದನೆ ಮಾಡಿದ್ದರು. ಹಾಗೂ ನ್ಯಾಯಸುಧಾಗ್ರಂಥವನ್ನು ಆಮೂಲಾಗ್ರವಾಗಿ ಪರೀಕ್ಷೆ ನೀಡಿ ಪ್ರಶಸ್ತಿ ಪಡೆದಿದ್ದಾರೆ. ಆದ್ದರಿಂದ ಎಲ್ಲಾ ಟಿಪ್ಪಣಿಗಳ ಜೊತೆ ''ಪರಿಮಳವಿಶೇಷಾಧ್ಯಯನ'' ಎಂಬ ಕೃತಿಯನ್ನು ರಚನೆ ಮಾಡಲು ಸಮರ್ಥರಾಗಿದ್ದಾರೆ.

ಇವರಿಗೆ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ- ಭಾರತೀರಮಣಮುಖ್ಯ-ಪ್ರಾಣಾಂತರ್ಗತ - ಶ್ರೀಮನ್ಮೂಲರಘುಪತಿ - ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# ಈಗ ಪರಿಮಳವಿಶೇಷಾಧ್ಯಯನ

ಜೀವನದ ಮುಖ್ಯಸಾಧನೆ ಬ್ರಹ್ಮಜಿಜ್ಞಾಸೆ. ಅದಕ್ಕಾಗಿ ಹತ್ತಾರು ಮುಖಗಳ ಅಧ್ಯಯನ.

ಲೌಕಿಕಶಿಕ್ಷಣದಲ್ಲಿ ಪ್ರತಿಯೊಂದು ತರಗತಿಗಳ ಪಠ್ಯಪುಸ್ತಕಗಳು ಬೇರೆ ಬೇರೆ. ವೈದಿಕಶಿಕ್ಷಣದಲ್ಲಿ ಒಂದನೇ ತರಗತಿಯಿಂದ ಹದಿನೈದನೆಯ ತರಗತಿಯ ತನಕ ಪಠ್ಯಪುಸ್ತಕ ಒಂದೇ. ವೇದ ಮತ್ತು ಶಾಸ್ತ್ರ. ಆದರೆ ಪ್ರತಿಯೊಂದು ತರಗತಿಗಳಲ್ಲಿ ತಿಳಿಯುವ ಮಜಲಿನ ಅರ್ಥಗಳು ವಿಭಿನ್ನ. ವೇದಗಳಂತೆಯೇ ಬ್ರಹ್ಮಸೂತ್ರಗಳ ಕಂಠಪಾಠ ಮೊದಲು. ಅನಂತರ ಅರ್ಥಚಿಂತನೆ. ಪ್ರತಿಯೊಂದು ಸೂತ್ರಗಳ ಅಭಿಪ್ರಾಯವನ್ನು ತಿಳಿದ ಮೇಲೆ ಅಧಿಕರಣದ ಬಗ್ಗೆ ಪಾದದ ಬಗ್ಗೆ, ಅಧ್ಯಾಯದ ಬಗ್ಗೆ, ಹೊಸ ಆಯಾಮಗಳಲ್ಲಿ ವಿವಿಧ ಚಿಂತನೆ. ಮುಂದೆ ಬ್ರಹ್ಮಸೂತ್ರಭಾಷ್ಯದ ಅಧ್ಯಯನ. ಭಾಷ್ಯಗಳ ಕುರಿತಾದ ಅನೇಕ ಟೀಕೆಗಳ ಅಧ್ಯಯನ. ಅಂತಿಮವಾಗಿ ಟಿಪ್ಪಣಿಗಳ ಅಧ್ಯಯನ. ಹೀಗೆ ಹತ್ತಾರು ಮಜಲುಗಳಲ್ಲಿ ಬ್ರಹ್ಮಸೂತ್ರಗಳ ಅಧ್ಯಯನ ಮುಗಿದ ಮೇಲೆ ಎಲ್ಲ ಟಿಪ್ಪಣಿಗಳ ಜೊತೆ ಟೀಕೆಯನ್ನು ಸೇರಿಸಿ, ಭಾಷ್ಯದ ಮೂಲಕ ಬ್ರಹ್ಮಸೂತ್ರದ ವಿಶೇಷಾಧ್ಯಯನ. ಇದುವೇ ನಿಜವಾದ ಅಧ್ಯಯನದ ಸರಣಿ.

ದ್ವಾಪರಯುಗದ ಕೊನೆಯಲ್ಲಿ ಶ್ರೀವೇದವ್ಯಾಸದೇವರಿಂದ ಬ್ರಹ್ಮಸೂತ್ರಗಳ ರಚನೆಯಾಯಿತು. 800 ವರ್ಷಗಳ ಹಿಂದೆ ವಾಯುದೇವರು ಮಧ್ವರಾಗಿ ಅವತರಿಸಿ ಅದಕ್ಕೆ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ ಹಾಗೂ ಅಣುಭಾಷ್ಯಗಳೆಂಬ ನಾಕು ವ್ಯಾಖ್ಯಾನಗಳ ರಚನೆ ಮಾಡಿದರು. ಸುಮಾರು 600

ವರ್ಷಗಳ ಹಿಂದೆ ಶ್ರೀಮಟ್ಟೀಕಾಕೃತ್ಪಾದರೆಂದೇ ಪ್ರಸಿದ್ಧರಾದ ಶ್ರೀಜಯತೀರ್ಥಪೂಜ್ಯಚರಣರು ಅನುವ್ಯಾಖ್ಯಾನಕ್ಕೆ "ನ್ಯಾಯಸುಧಾ" ಎಂಬ ಟೀಕೆಯನ್ನು ರಚಿಸಿದರು. ಇದಕ್ಕೂ ಮೊದಲು ಆಚಾರ್ಯರ ಕಾಲದಲ್ಲಿಯೇ ಅವರ ಸಾಕ್ಷಾತ್ ಶಿಷ್ಯರಾದ ಶ್ರೀಪದ್ಮನಾಭತೀರ್ಥರು "ಸನ್ನ್ಯಾಯರತ್ನಾವಳಿ" ಎಂಬ ಟೀಕೆಯನ್ನು ರಚನೆ ಮಾಡಿದ್ದಾಗಿತ್ತು. ಮತ್ತು ಅದೇ ಕಾಲದಲ್ಲಿ ಶ್ರೀಮನ್ನಾರಾಯಣಪಂಡಿತಾಚಾರ್ಯರು "ನಯಚಂದ್ರಿಕಾ" ಎಂಬ ಟೀಕೆಯನ್ನು ಬರೆದಿದ್ದರು. ಹೀಗೆ ಅನುವ್ಯಾಖ್ಯಾನಗ್ರಂಥಕ್ಕೆ ಮೂರು ಟೀಕೆಗಳು ಆರುನೂರು ವರ್ಷಗಳ ಹಿಂದೆಯೇ ರಚನೆಗೊಂಡಿದ್ದವು. ಆದರೆ ಅತ್ಯಂತ ವಿಶದವಾದ ಮತ್ತು ಅಧ್ಯಯನಕ್ಕೆ ಅನುಕೂಲವಾದ ಶ್ರೀಮನ್ನ್ಯಾಯಸುಧಾಗ್ರಂಥದ ಅಧ್ಯಯನ ಹೆಚ್ಚು ರೂಢಿಯಲ್ಲಿ ಬಂದಿತು. ಇದೇ ನ್ಯಾಯಸುಧಾಗ್ರಂಥಕ್ಕೆ ಸುಮಾರು 500ವರ್ಷಗಳಿಂದ ಅನೂಚಾನವಾಗಿ ಅನೇಕ ಜ್ಞಾನಿವರೇಣ್ಯರು ಟಿಪ್ಪಣಿಗಳನ್ನು ಬರೆಯುತ್ತಲೇ ಬಂದಿದ್ದಾರೆ. ಆದ್ದರಿಂದ ನೂರಕ್ಕೂ ಹೆಚ್ಚು ಟಿಪ್ಪಣಿಗಳು ಈ ಗ್ರಂಥಕ್ಕೆ ಇವೆ ಎಂಬುದು ಸಂಶೋಧನೆಯಿಂದ ತಿಳಿದು ಬಂದಿದೆ. ಬಹುಶಃ ವಾಙ್ಮಯಪ್ರಪಂಚದಲ್ಲೇ ಇಷ್ಟೊಂದು ಟಿಪ್ಪಣಿಗಳಿರುವ ಏಕೈಕ ಕೃತಿಯೆಂದರೆ ಶ್ರೀಮನ್ನ್ಯಾಯಸುಧಾ ಮಾತ್ರ. ಬೇರೆ ಯಾವುದೇ ಗ್ರಂಥಕ್ಕೆ ಇಷ್ಟೊಂದು ಟಿಪ್ಪಣಿಗಳಿರುವುದು ಕಂಡಿಲ್ಲ. ಕಾಣಿಸುತ್ತಲೂ ಇಲ್ಲ. ಮುಂದೆ ಕಾಣಿಸುವ ಸಾಧ್ಯತೆಯೂ ಇಲ್ಲ.

ಶ್ರೀಮನ್ನ್ಯಾಯಸುಧಾಗ್ರಂಥವನ್ನು ಪರಿಪೂರ್ಣವಾಗಿ ಅಧ್ಯಯನ ಮಾಡುವುದರಿಂದ ಸಮಗ್ರ ವೇದಾಧ್ಯಯನದ ಫಲ ದೊರಕುವುದರಲ್ಲಿ ಸಂದೇಹವಿಲ್ಲ. ಹಿಂದಿನ ಕಾಲದಲ್ಲಿ ವೇದಮಂಗಳ ಮಾಡಿಕೊಂಡವನು ದೊಡ್ಡ ಜ್ಞಾನಿ ಆಗಿರುತ್ತಿದ್ದ. ಈಗಿನ ಕಾಲದಲ್ಲಿ ಸರಿಯಾಗಿ ನ್ಯಾಯಸುಧಾಗ್ರಂಥದ ಅಧ್ಯಯನ ಮಾಡಿ ಮಂಗಳ ಮಾಡಿಕೊಂಡಿರುವವನು ದೊಡ್ಡ ಜ್ಞಾನಿ ಎಂಬ ವಾಡಿಕೆ ಅನೂಚಾನವಾಗಿ ಬಂದಿದೆ. ಬ್ರಹ್ಮಮೀಮಾಂಸಾಶಾಸ್ತ್ರವು ಸಮಗ್ರ ವೇದಗಳ ಸಾರ ಎಂಬುದು ಇದರಿಂದಲೇ ಅರಿವಾಗುತ್ತದೆ.

ಇಂಥ ಶ್ರೇಷ್ಠವಾದ ನ್ಯಾಯಸುಧಾಗ್ರಂಥಕ್ಕೆ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಪರಿಮಳ ಎಂಬ ಟಿಪ್ಪಣಿಯನ್ನು ಬರೆದಿರುವರು. ಇದರ ಮೂಲಕ ಸಮಗ್ರನ್ಯಾಯಸುಧೆಯ ಹಾಗೂ ಅನುವ್ಯಾಖ್ಯಾನದ ನಿಜಹೃದಯವನ್ನು ತೆರೆದಿಟ್ಟಿರುವರು. ಪರಿಮಳಗ್ರಂಥವನ್ನು ಆದರಿಸದ ವಿದ್ವಾಂಸನಿಲ್ಲ. ಯಾವುದೇ ವಿವಾದವಿಲ್ಲದ ಹಾಗೂ ಪರಿಪೂರ್ಣವಾದ ಅಪೂರ್ವವಾದ ಕೃತಿಯೆಂದರೆ ಅದು ಪರಿಮಳಗ್ರಂಥ. ಇದನ್ನು ಓದುವುದೇ ಜೀವನದ ಒಂದು ದೊಡ್ಡ ಸಾಧನೆ. ಆದರೆ ಪರಿಮಳಗ್ರಂಥದ ಅಧ್ಯಯನ ಎಲ್ಲರಿಂದಲೂ ಸಾಧ್ಯವಾಗುವುದಿಲ್ಲ. ಸಂಸ್ಕೃತದ ಪಾಂಡಿತ್ಯ, ಕಾವ್ಯ, ವ್ಯಾಕರಣ, ವೇದಾಂತಶಾಸ್ತ್ರಗಳ ಪರಿಚಯ, ಉಪನಿಷತ್ತು ಮೊದಲಾದವುಗಳ ಅಧ್ಯಯನ ಹಾಗೂ ಅನುವ್ಯಾಖ್ಯಾನ-ನ್ಯಾಯಸುಧಾಗ್ರಂಥಗಳ ಅಧ್ಯಯನ ಇಷ್ಟು ಇದ್ದರೆ ಮಾತ್ರ ಅನಂತರ ಪರಿಮಳಗ್ರಂಥವನ್ನು ಅಧ್ಯಯನ ಮಾಡಬಹುದು. ಒಂದೇ ಬಾರಿ ಅಧ್ಯಯನ ಮಾಡಲು ಸಾಧ್ಯವಾಗುವುದಿಲ್ಲ. ಆದರೆ ಅನೇಕ ಜಿಜ್ಞಾಸುಗಳಿಗೆ ಇದೇ ಮಾರ್ಗದಲ್ಲಿ ಅಧ್ಯಯನ ಮಾಡಲು

ಸಾಧ್ಯವಾಗದೇ ನೇರವಾಗಿ ಪರಿಮಳಗ್ರಂಥವನ್ನೇ ಅಧ್ಯಯನ ಮಾಡಬೇಕೆಂಬ ಕುತೂಹಲವಿದ್ದರೆ ಅವರಿಗೆ ತಕ್ಕ ಮಟ್ಟಿಗೆ ಪರಿಚಯ ಮಾಡಿಸಬಹುದು. ನ್ಯಾಯಸುಧಾಗ್ರಂಥದ ಪರ್ಯಂತ ಅಧ್ಯಯನ ಮಾಡಿದವರಿಗೆ ಮಾತ್ರ ವಿಶೇಷಾಧ್ಯಯನವನ್ನು ಮಾಡಿಸಬಹುದು. ಈ ನಿಟ್ಟಿನಲ್ಲಿ ಈ 'ಪರಿಮಳ ವಿಶೇಷಾಧ್ಯಯನ' ಎಂಬ ಕೃತಿಯು ಹೊರಟಿದೆ. ಸಾಮಾನ್ಯಜಿಜ್ಞಾಸುಗಳಿಗೂ ಇದರಿಂದ ಉಪಯೋಗವಿದೆ. ವಿಶೇಷ ಜಿಜ್ಞಾಸುಗಳಿಗೂ ಇದರಿಂದ ಉಪಯೋಗವಿದೆ. ಈ ದೃಷ್ಟಿಯಿಂದ ಅನೇಕ ಕಠಿಣವಿಚಾರಗಳ ವಿಮರ್ಶೆ ಮಾಡುವುದರ ಜೊತೆ ಸುಲಲಿತವಾಗಿ ಪರಿಮಳಗ್ರಂಥವನ್ನು ಅರ್ಥಮಾಡಿಸಲು ಸಾರಭಾಗ ಹಾಗೂ ವೈಶಿಷ್ಟ್ಯಗಳನ್ನು ನೀಡಲಾಗಿದೆ.

## ಪರಿಮಳವಿಶೇಷಾಧ್ಯಯನ ಎಂಬ ಕೃತಿಯ ಉದ್ದೇಶ

ಇಂದು ಅನೇಕ ಕಡೆ ಕೇವಲ ನ್ಯಾಯಸುಧಾಗ್ರಂಥದ ತನಕ ಮಾತ್ರ ಅಧ್ಯಯನ ಮಾಡುವ ಕ್ರಮವಿದೆ. ಇಷ್ಟಕ್ಕೇ ನಿಲ್ಲಬಾರದು. ನ್ಯಾಯಸುಧಾಗ್ರಂಥದ ಅನೇಕ ಟಿಪ್ಪಣಿಗಳ ಅಧ್ಯಯನ ಮಾಡಬೇಕು. ವಿಶೇಷವಾಗಿ ಪರಿಮಳಗ್ರಂಥದ ಅಧ್ಯಯನವನ್ನು ಮಾಡಬೇಕು. ಅಧ್ಯಯನ ಮಾಡಬೇಕೆಂದರೆ ಅದಕ್ಕೆ ಅನುಕೂಲವಾಗುವ ಪುಸ್ತಕ ಮೊದಲು ದೊರಕಬೇಕು. ಮತ್ತು ಆಯಾ ಜಿಜ್ಞಾಸುಗಳ ಭಾಷೆಗಳಲ್ಲಿ ಪುಸ್ತಕಗಳು ದೊರಕುವಂತೆ ಮಾಡಬೇಕು. ಈ ದೃಷ್ಟಿಯಿಂದ ಈ ಕೃತಿಯನ್ನು ಶ್ರೀಪಾದರು ಪ್ರಕಟನೆ ಮಾಡುತ್ತಿದ್ದಾರೆ. ಸಂಸ್ಕೃತ ಬಾರದ ಜಿಜ್ಞಾಸುಗಳು, ಸಂಸ್ಕೃತ ಬರುವ ಸಾಮಾನ್ಯಜಿಜ್ಞಾಸುಗಳು, ವಿದ್ಯಾರ್ಥಿಗಳು, ವಿದ್ವಾಂಸರು ಎಲ್ಲರಿಗೂ ಕೂಡ ಈ ಕೃತಿಯು ಉಪಯುಕ್ತವಾಗುತ್ತದೆ.

## ಈ ಕೃತಿಯ ವೈಶಿಷ್ಟ್ಯ

ಪರಿಮಳವಿಶೇಷಾಧ್ಯಯನ ಎಂಬ ಈ ಕೃತಿಯಲ್ಲಿ ಬ್ರಹ್ಮಸೂತ್ರ ಹಾಗೂ ಅನುವ್ಯಾಖ್ಯಾನ ಗ್ರಂಥಗಳ ಯಥಾರ್ಥವಾದ ಅನುವಾದವಿದೆ. ಸನ್ನ್ಯಾಯರತ್ನಾವಳಿ, ನಯಚಂದ್ರಿಕಾ, ನ್ಯಾಯಸುಧಾ ಎಂಬ ಮೂರು ಟೀಕೆಗಳ ಅನುವಾದ ಅನಂತರವಿರುತ್ತದೆ. ಕೆಲವೊಮ್ಮೆ ನ್ಯಾಯಸುಧಾ ಗ್ರಂಥಕ್ಕೆ ಅನುವಾದ ಮಾಡಿದ ಮೇಲೆ ಅರ್ಥವಾಗಲು ವಿವರಣೆ ಮಾಡಲಾಗಿರುತ್ತದೆ. ನ್ಯಾಯಸುಧಾಗ್ರಂಥದ ಅನುವಾದವಾದ ಮೇಲೆ ಪರಿಮಳ ಗ್ರಂಥದ ಅನುವಾದ. ಪ್ರತಿಯೊಂದು ಅನುವಾದದ ನಂತರ ಸುಲಲಿತವಾಗಿ ಅರ್ಥವಾಗಲು ವಿಶೇಷವಿವರಣೆ, ಹಾಗೂ ವಿಶೇಷವಿಚಾರಗಳನ್ನು ಬರೆಯಲಾಗಿದೆ. ಇಷ್ಟನ್ನು ಓದುವುದರಿಂದ ನ್ಯಾಯಸುಧಾ ಗ್ರಂಥವು ಸುಸ್ಪಷ್ಟವಾಗಿ ಅರ್ಥವಾಗುತ್ತದೆ. ಅನಂತರ ಶ್ರೀವಾದಿರಾಜತೀರ್ಥರ ಗುರ್ವರ್ಥದೀಪಿಕಾ ಎಂಬ ಟಿಪ್ಪಣಿಯ ಅನುವಾದವಿದೆ. ಅನಂತರ ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರ ವಾಕ್ಯಾರ್ಥಚಂದ್ರಿಕಾ ಟಿಪ್ಪಣಿಯ ಅನುವಾದವಿದೆ. ಈ ಟಿಪ್ಪಣಿಯಲ್ಲಿ ಅನೇಕ ಅಪೂರ್ವವಿಷಯಗಳು ಇರುವುದಷ್ಟೇ ಅಲ್ಲದೇ ನ್ಯಾಯಸುಧಾ ಪಂಕ್ತಿಗಳಿಗೆ ಹೊಸದಾದ ವ್ಯಾಖ್ಯಾನವನ್ನೂ ಕೂಡ ಇದರಲ್ಲಿ ಕಾಣಬಹುದು. ಹೀಗೆ ಎಂಟು ಗ್ರಂಥಗಳ

ಅನುವಾದ ಹಾಗೂ ವಿಶೇಷವಿಚಾರ ವಿಮರ್ಶೆಗಳು ಮುಗಿದ ಮೇಲೆ ಹತ್ತಾರು ಟಿಪ್ಪಣಿಗಳ ಸಾರಭಾಗಗಳನ್ನು ನೀಡಲಾಗಿದೆ. ಯಾವ ಟಿಪ್ಪಣಿಗಳಲ್ಲಿ ಯಾವ ಅಂಶವನ್ನು ಓದಲೇ ಬೇಕೋ ಅದನ್ನು ತಿಳಿದ ಮಟ್ಟಿಗೆ ಆಯ್ಕೆ ಮಾಡಿ ಜೋಡಿಸಲಾಗಿದೆ. ಹೀಗೆ ನ್ಯಾಯಸುಧಾ ಗ್ರಂಥದ ಯಾವುದೇ ಮೂಲ ತೆಗೆದುಕೊಂಡರೂ ಇಷ್ಟು ಮಜಲುಗಳಲ್ಲಿ ಅನುವಾದವನ್ನು ನೀವು ಕಾಣಬಹುದು.

ಹತ್ತಾರು ಪೀಠಾಧಿಪತಿಗಳ ಹಾಗೂ ಐವತ್ತಕ್ಕೂ ಹೆಚ್ಚು ವಿದ್ವಾಂಸರ ಅನುವಾದದಿಂದ ಕೂಡಿರುವ "ಸುಧಾಸೌರಭ" ಎಂಬ ಕೃತಿಯ ಸಂಪಾದನೆಯನ್ನು ನನ್ನಿಂದ ಶ್ರೀಹರಿವಾಯುಗುರುಗಳ ಮಾಡಿಸಿದರು. 2004ನೇ ವರ್ಷದಲ್ಲಿ ಅದು ಏಳು ಸಂಪುಟಗಳಿಂದ ಲೋಕಾರ್ಪಣೆಯಾಯಿತು. ಪುನಃ 2014ನೇ ವರ್ಷದಲ್ಲಿ ದ್ವಿತೀಯ ಮುದ್ರಣವಾಯಿತು. ಈ ಸುಧಾಸೌರಭದ ಸಂಪಾದನೆಯಿಂದ ಭಗವಂತನು ನನಗೆ ನಿಜವಾದ ವ್ಯಕ್ತಿತ್ವವನ್ನು ನಿರೂಪಣೆ ಮಾಡಿದನು. ಇದರ ಕೃತಜ್ಞತೆಗಾಗಿ ಮತ್ತಷ್ಟು ಜಿಜ್ಞಾಸುಗಳಿಗೆ ಅನುಕೂಲವಾಗುವಂತೆ ನ್ಯಾಯಸುಧಾ ಗ್ರಂಥಕ್ಕೆ ಸೇವೆ ಸಲ್ಲಿಸಬೇಕೆಂಬ ಮನದಾಳದ ಆಸೆ ನಿರಂತರ ಹಂಬಲಿಸುತ್ತಿತ್ತು. ಸುಮಾರು ಏಳೆಂಟು ವರ್ಷಗಳ ಹಿಂದೆಯೇ ನ್ಯಾಯಸುಧಾಗ್ರಂಥವನ್ನು ಪರಿಮಳಟಿಪ್ಪಣಿಯ ಜೊತೆ ಅನುವಾದ ಮಾಡಿ ಸುಧಾಸೌರಭದಲ್ಲಿ ಮತ್ತಷ್ಟು ಸೇರಿಸಬೇಕಾದ ಅಂಶಗಳನ್ನೆಲ್ಲಾ ಸೇರಿಸಿ ಮುದ್ರಿಸಬೇಕೆಂಬ ಉತ್ಕಟಅಪೇಕ್ಷೆಯಿಂದ ಪ್ರವೃತ್ತಿಯನ್ನೂ ಮಾಡಿದ್ದಾಗಿತ್ತು. ಆದರೆ ಇಂದು ಅದರ ಪಕ್ವಕಾಲ ಬಂದೊದಗಿದೆ.

## ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥರ ಕಾರುಣ್ಯ

ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥರ ಕಾರುಣ್ಯಲೇಶದಿಂದಷ್ಟೇ ಈ "ಪರಿಮಳವಿಶೇಷಾಧ್ಯಯನ" ಎಂಬ ಕೃತಿಯನ್ನು ಬರೆಯಲು ನನ್ನಿಂದ ಸಾಧ್ಯವಾಗಿದೆ. ಶ್ರೀಪಾದಂಗಳವರು ಪೂರ್ವಾಶ್ರಮದಿಂದಲೂ ಕೂಡ ಪರಿಮಳಗ್ರಂಥದ ಅನುವಾದ ನೀವು ಮಾಡಬೇಕೆನ್ನುತ್ತಿದ್ದರು. ಆದರೆ ಅವರೇ ಸ್ವತಃ ಪಾಠ ಮಾಡಿ ನಡೆಸು-ತ್ತಿರುವ ಚೊಚ್ಚಲ ಸುಧಾಮಂಗಳದಲ್ಲಿ ಈ ಪರಿಮಳಗ್ರಂಥದ ಅನುವಾದದ ಪುಸ್ತಕಪ್ರಕಟನೆ ಆಗಬೇಕೆಂಬುದು ಹರಿಚಿತ್ತವಿತ್ತು. ಆದ್ದರಿಂದ ಈಗ ಅದರ ಪಕ್ವಕಾಲ ಸನ್ನಿಹಿತವಾಗಿದೆ. ಶ್ರೀಪಾದಂಗಳವರ ವಿಶಾಲ ಮನೋ-ಭಾವನೆಯಿಂದ ಕೇವಲ ಪರಿಮಳಗ್ರಂಥವಷ್ಟೇ ಅಲ್ಲದೇ ಶ್ರೀವಿದ್ಯಾಧೀಶತೀರ್ಥಶ್ರೀಪಾದರ ವಾಕ್ಯಾರ್ಥಚಂದ್ರಿಕಾ, ಹಾಗೂ ಉಳಿದ ಟಿಪ್ಪಣಿಗಳ ಸಾರಭಾಗದ ಅನುವಾದವೂ ಕೂಡ ಇದರಲ್ಲಿ ಸೇರಿಸುವ ಸೌಭಾಗ್ಯ ದೊರಕಿದೆ. ಶ್ರೀಪಾದಂಗಳವರಲ್ಲಿ ಇರುವ ಜ್ಞಾನದೀಕ್ಷೆ ಹಾಗೂ ತತ್ವಜ್ಞಾನಪ್ರಸಾರದ ನಿಷ್ಠೆ ಇವುಗಳನ್ನು ನೋಡಿ ನಾವೆಲ್ಲರೂ ನಿಬ್ಬೆರಗಾಗಿದ್ದೇವೆ. ನೂರಾರು ರೀತಿಯಿಂದ ರಾಯರ ಹಾಗೂ ಶ್ರೀಮೂಲರಾಮದೇವರ ಸೇವೆಯಲ್ಲಿ ಶ್ರೀಪಾದಂಗಳವರು ನಿರತರಾಗಿದ್ದಾರೆ. ಇವರ ಅನುಗ್ರಹದಿಂದ ಇಂದು ಹಗಲಿರುಳು ಜ್ಞಾನಕಾರ್ಯದಲ್ಲಿ ತಲ್ಲೀನನಾಗಿ ಸಾಧನೆ ಮಾಡಿಕೊಳ್ಳುವ ದಿವ್ಯ ಅವಕಾಶವು ದೊರಕಿದೆ. ಉತ್ತಮ ತತ್ವಜ್ಞಾನವನ್ನು ನೀಡಿ

ಮೋಕ್ಷಸಾಧನೆಯನ್ನೇ ಮಾಡಿಸುತ್ತಿರುವ ಶ್ರೀಪಾದಂಗಳವರ ಕಾರುಣ್ಯದ ಬಗ್ಗೆ ಬೇರೆ ಯಾವುದೇ ಪ್ರಶಂಸೆಯ ಮಾತನ್ನು ಹೇಳಿದರೂ ಅವು ಅಲ್ಪವಾಗುತ್ತವೆ. ಹೀಗೆ ಆಜೀವನ ಜ್ಞಾನಕಾರ್ಯದಲ್ಲೇ ನಿರತನಾಗಿದ್ದು, ರಾಯರಗ್ರಂಥಗಳ ಅನುವಾದವನ್ನೇ ಮಾಡುತ್ತಾ ಜೀವನವು ಸಾರ್ಥಕವಾಗುವಂತೆ ಆಶೀರ್ವದಿಸಿರಿ ಎಂದಷ್ಟೇ ಶ್ರೀಪಾದಂಗಳವರಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

## ಪರವಿದ್ಯೆಯ ಬಗ್ಗೆ ಸಾಕಷ್ಟು ವಿವರಣೆ ಇದರಲ್ಲಿದೆ

ಈ ಸಂಪುಟಕ್ಕೆ ಒಂದು ವೈಶಿಷ್ಟ್ಯವಿದೆ. ಬ್ರಹ್ಮಸೂತ್ರಪರವಿದ್ಯೆಯೋ? ವೇದ ಪರವಿದ್ಯೆಯೋ? ಎಂಬುದರ ಬಗ್ಗೆ ವಿದ್ವತ್‌ಪ್ರಪಂಚದಲ್ಲಿ ಸಾಕಷ್ಟು ಚರ್ಚೆಗಳು ನಡೆಯುತ್ತಲೇ ಬಂದಿವೆ. ನ್ಯಾಯಸುಧೆಯ ಎಲ್ಲಾ ಟಿಪ್ಪಣೀಕಾರರೂ ಇದರ ಬಗ್ಗೆ ಬಹಳಷ್ಟು ವಿಮರ್ಶೆಯನ್ನು ಮಾಡಿರುತ್ತಾರೆ. ಮತ್ತು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿರುತ್ತಾರೆ. ಈ ಸಂಪುಟದಲ್ಲಿ ಪರವಿದ್ಯೆಯ ಬಗ್ಗೆ ಯಾವ ಯಾವ ಟಿಪ್ಪಣಿಗಳಲ್ಲಿ ಏನೇನು ಹೇಳಿದ್ದಾರೋ ಅದನ್ನೆಲ್ಲಾ ಯಥಾವತ್ತಾಗಿ ಅನುವಾದ ಮಾಡಲಾಗಿದೆ. ಕಾಶೀ ತಿಮ್ಮಣ್ಣಾಚಾರ್ಯರು ಅತ್ಯಂತ ವಿವರವಾಗಿ ಇದರ ಬಗ್ಗೆ ವಿಮರ್ಶೆ ನಡೆಸಿದ್ದನ್ನು ಈ ಸಂಪುಟದಲ್ಲಿ ನೀವು ಕಾಣಬಹುದು.

''ವೇದಗಳೇ ಪರವಿದ್ಯೆ'' ಎಂಬುದು ನಮ್ಮ ಶ್ರೀಮಠದ ಅನೂಚಾನವಾದ ಜ್ಞಾನಪರಂಪರೆ. 'ನಾನ್ಯಃ ಪಂಥಾ ಅಯನಾಯ ವಿದ್ಯತೇ' 'ವೇದಶಾಸ್ತ್ರಾತ್ ಪರಂ ನಾಸ್ತಿ' ಇವೇ ಮೊದಲಾದ ಶ್ರುತಿ, ಸ್ಮೃತಿಗಳು ಈ ವಿಷಯದಲ್ಲಿ ನಿರವಕಾಶಪ್ರಮಾಣಗಳಾಗಿವೆ. ಹಾಗಾದರೆ 'ಚಕ್ರೇ ಶಾಸ್ತ್ರಮನುತ್ತಮಮ್' ಎಂಬ ಅನುವ್ಯಾಖ್ಯಾನದ ಮಾತಿನ ಅಭಿಪ್ರಾಯವೇನು? ನ್ಯಾಯಸುಧೆಯಲ್ಲಿ ಬ್ರಹ್ಮಸೂತ್ರಗಳೇ ಪರವಿದ್ಯೆ ಎಂದು ಹೇಳಿದ ಆಂತರ್ಯವೇನು? ಎಂಬುದರ ಬಗ್ಗೆ ನಾವು ತಿಳಿಯಬೇಕಾಗಿದೆ. ಈ ವಿಷಯದಲ್ಲಿ ದೊಡ್ಡಬಳ್ಳಾಪುರ ವಾಸುದೇವಾಚಾರ್ಯರು 'ವಿದ್ಯಾವಿನಿರ್ಣಯ' ಎಂಬ ಕೃತಿಯನ್ನು ರಚನೆಮಾಡಿದ್ದಾರೆ. ವೇದಗಳೇ ಪರವಿದ್ಯೆ ಎಂಬುದರಲ್ಲಿ ನೂರಾರು ಪ್ರಮಾಣಗಳನ್ನು ಉಲ್ಲೇಖಿಸಿ, ಅನುವ್ಯಾಖ್ಯಾನ ಹಾಗೂ ನ್ಯಾಯಸುಧಾಗ್ರಂಥಗಳ ಅಭಿಪ್ರಾಯವನ್ನು ಸ್ಪಷ್ಟ ಪಡಿಸಿದ್ದಾರೆ. ಈ ಸಂಪುಟದಲ್ಲಿ ದೊಡ್ಡಬಳ್ಳಾಪುರ ವಾಸುದೇವಾಚಾರ್ಯರು ಬರೆದಿರುವ ವಿದ್ಯಾವಿನಿರ್ಣಯಃ ಎಂಬ ಕೃತಿಯನ್ನು ಆಮೂಲಾಗ್ರವಾಗಿ ಅನುವಾದ ಮಾಡಲಾಗಿದೆ. ಅದು ಸಂಸ್ಕೃತಗ್ರಂಥವಾದ್ದರಿಂದ ಅದರ ಮೂಲವನ್ನು ಕೂಡ ಮುದ್ರಿಸಲಾಗಿದೆ. ಪರಿಶಿಷ್ಟದಲ್ಲಿ ಇದನ್ನು ನೀವು ಕಾಣಬಹುದು. ಅವರ ಕೃತಿಯನ್ನು ಅನುವಾದ ಮಾಡಿದ ಮೇಲೆ ಪುನಃ ಪ್ರತ್ಯೇಕವಾಗಿ ಬರೆಯಬೇಕಾದ ವಿಷಯ ಯಾವುದೂ ಉಳಿದಿಲ್ಲವಾದ್ದರಿಂದ ಪ್ರತ್ಯೇಕವಿಮರ್ಶೆಯನ್ನು ಮಾಡಿರುವುದಿಲ್ಲ.

ಈ ಪರವಿದ್ಯೆಯ ವಿಚಾರವನ್ನು ವಿದ್ವಾನ್ ರಾಜಾ.ಎಸ್.ಗಿರಿ ಆಚಾರ್ಯರು ತಿಳಿಸಿಕೊಟ್ಟರು. ಹಾಗೂ ಹೇಗೆ ಬರೆಯಬೇಕೆಂಬುದನ್ನು ಮಾರ್ಗದರ್ಶನ ಮಾಡಿದರು. ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಅನೇಕ ಅಪೂರ್ವವಿಷಯಗಳನ್ನು ಈ ವಿಷಯದಲ್ಲಿ ತಿಳಿಸಿ ದೊಡ್ಡಬಳ್ಳಾಪುರ

ವಾಸುದೇವಾಚಾರ್ಯರ ಕೃತಿಯನ್ನು ಆಮೂಲಾಗ್ರವಾಗಿ ಅನುವಾದ ಮಾಡಬೇಕೆಂದು ಅಪ್ಪಣೆ ಮಾಡಿದರು. ಆದ್ದರಿಂದ ಈ ಕೃತಿಯಲ್ಲಿ ಪರವಿದ್ಯೆಯ ಬಗ್ಗೆ ಅಪೂರ್ವವಿಷಯಗಳಿವೆ ಮತ್ತು ಸಾಕಷ್ಟು ವಿಮರ್ಶೆಗಳಿವೆ. ಇದರ ಸದುಪಯೋಗವನ್ನು ಜಿಜ್ಞಾಸುಗಳು ಪಡೆದುಕೊಳ್ಳಬೇಕೆಂದು ವಿನಂತಿ.

## ಕೃತಜ್ಞತೆಗಳು

ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದಂಗಳವರಲ್ಲಿ ಅನೇಕ ಗ್ರಂಥಗಳನ್ನು ಪಾಠ ಕೇಳುವ ಅವಕಾಶ ಈ ಜನ್ಮದಲ್ಲಿ ಒದಗಿತು. ಅವರ ಅನುಗ್ರಹದಿಂದ ಅವರೇ ಬರೆಸಿಟ್ಟ ಸುಧಾ ಲೇಖನಗಳನ್ನು ಮುದ್ರಿಸುವ ಸೌಭಾಗ್ಯ ಒದಗಿತು. ಹೀಗೆ ಜೀವನೋದ್ಧಾರ ಮಾಡಿದ ಗುರು ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರಿಗೆ ಅನಂತ ನಮನಗಳು.

ಗುರುಗಳಾದ ಶ್ರೀವಿಶ್ವೇಶತೀರ್ಥಶ್ರೀಪಾದಂಗಳವರು ಸಮಗ್ರ ನ್ಯಾಯಸುಧಾಗ್ರಂಥವನ್ನು ಪಾಠ ಮಾಡಿ ಸಮಗ್ರ ನ್ಯಾಯಸುಧಾಗ್ರಂಥದ ಪರೀಕ್ಷೆಯನ್ನು ತೆಗೆದುಕೊಳ್ಳುವ ಮೂಲಕ ಸುಧಾಗ್ರಂಥದ ಜ್ಞಾನವನ್ನು ನೀಡಿ ಅನುಗ್ರಹಿಸಿದ ಇವರಿಗೆ ಜನ್ಮಜನ್ಮಾಂತರದಲ್ಲೂ ಚಿರಋಣಿ.

ಈ ಕೃತಿಯ ಗೌರವಸಂಪಾದಕರಾದ ವಿದ್ವಾನ್ ರಾಜಾ.ಎಸ್.ಗಿರಿ ಆಚಾರ್ಯ ಇವರಿಗೆ ನನ್ನ ಅನಂತ ನಮಸ್ಕಾರಗಳು. ನನ್ನ ಎಲ್ಲಾ ಪುಸ್ತಕಗಳಿಗೂ ಗೌರವಸಂಪಾದಕರಾಗಿ ಅನೇಕ ರೀತಿಯಲ್ಲಿ ಪ್ರೋತ್ಸಾಹ ಹಾಗೂ ಉತ್ತೇಜನಗಳನ್ನು ನೀಡಿ ವಿಮರ್ಶೆಗಳನ್ನು ತಿಳಿಸಿ ಆಶೀರ್ವಾದ ಮಾಡುತ್ತಿರುವ ಕೃತಜ್ಞತಾಪೂರ್ವಕ ಅನೇಕ ಸಾಷ್ಟಾಂಗ ನಮಸ್ಕಾರಗಳು.

ಎಷ್ಟೇ ಅಧ್ಯಯನ ಮಾಡಿದ್ದರೂ ಕೂಡ ಅನೇಕ ಕಡೆ ಜಟಿಲವಾದ ವಾಕ್ಯಗಳಿಗೆ ಇದಮಿತ್ಥಂ ಎಂದು ನಿರ್ಧಾರಾತ್ಮಕವಾಗಿ ಅರ್ಥವನ್ನು ಬರೆಯುವುದು ಕಠಿಣ. ಅನೇಕ ವಿದ್ವಾಂಸರ ಜೊತೆ ಚರ್ಚೆಮಾಡಿ ಹೇಗೆ ವ್ಯಾಖ್ಯಾನ ಮಾಡುವುದರಿಂದ ಮೂಲಕ್ಕೆ ಅಪಾರ್ಥವಾಗುವುದಿಲ್ಲ ಎಂಬುದನ್ನು ವಿಚಾರ ಮಾಡಬೇಕಾಗುತ್ತದೆ. ಆದರೆ ಅನೇಕ ವಿದ್ವಾಂಸರ ಬಳಿ ವಿಮರ್ಶೆ ಮಾಡುವಷ್ಟು ಸಮಯಾವಕಾಶ ಹಾಗೂ ಅನುಕೂಲಗಳು ಈಗಿನ ಪರಿಸ್ಥಿತಿಯಲ್ಲಿ ಯಾರಿಗೂ ಇರುವುದಿಲ್ಲ. ಆದರೆ ಅನೇಕ ವಿದ್ವಾಂಸರ ಬಳಿ ಚರ್ಚಿಸಿದಾಗ ಯಾವ ನಿರ್ಧಾರಾತ್ಮಕವಾದ ವಿಷಯವು ಹೊರಹೊಮ್ಮುತ್ತದೋ ಅಂಥ ವಿಷಯವು ಬಲಿಷ್ಠ- ನಾದ ಒಬ್ಬನೇ ವಿದ್ವಾಂಸನಿಂದ ದೊರಕುವುದಾದರೆ ಅಂಥ ವಿದ್ವಾಂಸರ ಬಳಿಯೇ ನೇರವಾಗಿ ಚರ್ಚಿಸುವುದು ಸೂಕ್ತವಾಗುತ್ತದೆ. ಈ ದೃಷ್ಟಿಯಲ್ಲಿ ನನಗೆ ಉಪಕರಿಸಿದವರು ಹಾಗೂ ನಿರಂತರ ಉಪಕಾರ ಮಾಡುತ್ತಲೇ ಇರುವವರು ವಿದ್ವಾನ್ ಆರ್. ವೇಂಕಟೇಶಾಚಾರ್ಯ, ಶ್ರೀರಂಗಮ್ ಅವರು. ಪರಿಮಳ, ವಾಕ್ಯಾರ್ಥಚಂದ್ರಿಕಾ, ಯಾದುಪತ್ಯ ಈ ಟಿಪ್ಪಣಿಗಳು ಅತ್ಯಂತ ಕಠಿಣವಾಗಿವೆ. ಎಷ್ಟೋ ಕಡೆ ಪ್ರಕ್ಷೇಪ ಭಾಗವಿರುತ್ತದೆ. ಎಷ್ಟೋ ಕಡೆ

ವಿಕ್ಷೇಪ ಭಾಗವಿರುತ್ತದೆ. ಸಾಂಪ್ರದಾಯಿಕವಾದ ಅದರ ನಿಜವಾದ ಪಾಠವನ್ನು ತಿಳಿಸಿ, ಅಷ್ಟೇ ಅಲ್ಲದೇ ಅನೇಕ ವಿದ್ವಾಂಸರ ವಿವಿಧ ಅಭಿಪ್ರಾಯಗಳನ್ನು ಕೂಡ ತಿಳಿಸಿ ಇದಮಿತ್ಥಂ ಎಂಬ ನಿರ್ಧಾರಾತ್ಮಕವಾಗಿ ವಿಷಯಗಳನ್ನು ತಿಳಿಸಿದ ವಿದ್ವಾನ್ ಆರ್. ವೇಂಕಟೇಶಾಚಾರ್ಯ, ಶ್ರೀರಂಗಂ ಇವರಿಗೆ ಅನಂತ ಕೃತಜ್ಞತೆಗಳು ಹಾಗೂ ನಮಸ್ಕಾರಗಳು. ''ಪರಿಮಳವಿಶೇಷಾಧ್ಯಯನ'' ಎಂಬ ಈ ಗ್ರಂಥವು ಕೂಡ ಇವರ ಆಶೀರ್ವಾದದೊಂದಿಗೇ ಕೊನೆಗೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ನನ್ನ ಸಹಾಧ್ಯಾಯಿಗಳಾದ ಹಾಗೂ ಸಹಚಿಂತಕರಾದ ಜೆ. ವಿಜಯಾನಂದ ಇವರು ಅನೇಕ ರೀತಿಯಲ್ಲಿ ನನಗೆ ಉಪಕಾರ ಮಾಡುತ್ತಿದ್ದಾರೆ. ಇವರ ಉಪಕಾರವನ್ನು ಎಂದೂ ಮರೆಯಲಾರೆ. ನಿರಂತರ ಇವರಿಗೆ ಕೃತಜ್ಞತೆಗಳನ್ನು ಸಲ್ಲಿಸುವೆ.

'ವಿದ್ಯಾವಿನಿರ್ಣಯಃ' ಎಂಬ ಗ್ರಂಥದ ಅನುವಾದ ಕಾರ್ಯದಲ್ಲಿ ಬಹಳಷ್ಟು ಉಪಕರಿಸಿದ ವಿದ್ವಾನ್ ಪ್ರದೀಪಸಿಂಹಾಚಾರ್ಯರಿಗೆ ಅನಂತ ಕೃತಜ್ಞತೆಗಳು. ಸುಧಾಸೌರಭ ಗ್ರಂಥದಲ್ಲಿ ಅನೇಕ ಪೀಠಾಧಿಪತಿಗಳು ಹಾಗೂ ವಿದ್ವಾಂಸರುಗಳು ಅನುವಾದವನ್ನು ಮಾಡಿ ನನಗೆ ಆಶೀರ್ವಾದ ಮಾಡಿದ್ದಾರೆ. ಈ 700 ಪುಟಗಳ ಪುಸ್ತಕದಲ್ಲಿ ಸುಮಾರು 50 ಪುಟಗಳಷ್ಟು ವಿಷಯಗಳನ್ನು ಸುಧಾಸೌರಭದಿಂದಲೇ ತೆಗೆದುಕೊಂಡಿದ್ದೇನೆ. ವಿಶೇಷವಿಚಾರ ಎಂಬ ಶೀರ್ಷಿಕೆಯನ್ನು ನೀಡಿದ್ದೇನೆ. ಆದ್ದರಿಂದ ಈ ಕೃತಿಯಲ್ಲಿ ಎಲ್ಲವೂ ಕೂಡ ಸ್ವತಃ ನನ್ನ ಲೇಖನವು ಆಗಿರುವುದಿಲ್ಲ. ಕೆಲವೊಮ್ಮೆ ವಿಶೇಷವಿಚಾರ ಎಂಬ ಶೀರ್ಷಿಕೆಯಲ್ಲಿ ಬಂದಿರುವ ಲೇಖನವು ಸುಧಾಸೌರಭದಲ್ಲಿ ಬರೆದ ವಿದ್ವಾಂಸರುಗಳ ಲೇಖನಗಳೇ ಆಗಿವೆ. ಇದನ್ನು ಅತ್ಯಂತ ವಿನಯಪೂರ್ವಕವಾಗಿ ಆಯಾ ವಿದ್ವಾಂಸರುಗಳ ಬಳಿ ಪ್ರಾರ್ಥಿಸುತ್ತಾ ಅವರ ಆಶೀರ್ವಾದವೆಂದು ತಿಳಿಯುತ್ತೇನೆ.

ಸುಧಾಸೌರಭದ ಗ್ರಂಥ ಸಂಪಾದಕತ್ವದಲ್ಲಿ ಉಪಕರಿಸಿದ ಎಲ್ಲಾ ಪೀಠಾಧಿಪತಿಗಳಿಗೂ ವಿದ್ವಾಂಸರುಗಳಿಗೂ ಕೃತಜ್ಞತೆಗಳು.

ಕೇವಲ ಎರಡೇ ತಿಂಗಳುಗಳಲ್ಲಿ ಹಗಲಿರುಳು ಡಿ.ಟಿ.ಪಿ ಮಾಡಿಕೊಟ್ಟ ಸುಬ್ಬಣ್ಣ ಕೆಂಪದಾಳಿಹಳ್ಳಿ ಇವರಿಗೆ ನನ್ನ ಕೃತಜ್ಞತೆಗಳು. ಅಕ್ಷರಗಳಲ್ಲಿ ಯಾವುದೇ ತಪ್ಪುಗಳಿಲ್ಲದೇ ಉತ್ತಮರೀತಿಯಲ್ಲಿ ಸಹಕರಿಸಿದ ಇವರ ಉಪಕಾರವನ್ನು ಎಂದೂ ಮರೆಯಲಾರೆ. ಪುಸ್ತಕದ ಮುಖಪುಟವನ್ನು ನಿರ್ಮಾಣ ಮಾಡಿಕೊಟ್ಟ ಗಿರಿ ಕೆಂಪದಾಳಿಹಳ್ಳಿ ಇವರಿಗೆ ಅನಂತ ಕೃತಜ್ಞತೆಗಳು. ಹಾಗೂ ಇನ್ನೂ ಹತ್ತು ಹಲವಾರು ರೀತಿಯಲ್ಲಿ ಉಪಕರಿಸಿದ ಅನೇಕರಿಗೆ ನನ್ನ ಕೃತಜ್ಞತೆಗಳು.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು,
ಸಂಪಾದಕರು ಮತ್ತು ಲೇಖಕರು

# ಅನುವಾದಕರ ಮಂಗಳಾಚರಣೆ

ಸಿರಿಸಹಿತ ನರಸಿಂಹದೇವನೆ ದುರಿತಕೋಟಿಯ ತರಿದು ಎನ್ನಯ
ಶಿರದಿ ತವಶುಭ ಅಭಯ ಹಸ್ತವ ಇರಿಸಿ ಪೊರೆಯುತಿರು ।
ನರಹಯಾಖ್ಯ ಉಪಾಸ್ಯದೇವನೇ ಮರೆಯೆ ನಿನ್ನಯ ಕರುಣ ರಸವನು
ಹರಿಯ ಮರೆಯದೆ ಪೊರೆಯೊ ಜಡಮತಿಯೆಂದು ತಿಳಿಯದಲೆ ॥೧॥

ಜಗವ ಸೆಳೆವ ಶ್ರೀರಾಮದೇವನೇ ಕೈಮುಗಿವ ಸಂತಗೆ ಮುಕುತಿ ದಾತನೆ
ಬಿಗಿದ ಕಂಠದಿ ಕರೆವೆ ಮುಕುತಿಮಾರ್ಗದಲಿ ನಡೆಸೋ ।
ಸೊಗಸಿನರ್ಥದ ನಿಗಮತತಿಗಳ ಭಾಗ ಬಿಡಿಸುತ ಸೂತ್ರಪೊಸೆದಿಹ
ಹೃದ್ಗಮಧ್ವರ ಒಡಯ ವ್ಯಾಸರೇ ನಿಮಗೆ ನಿಗಮನುತಿ ॥೨॥

ಶುದ್ಧಹೃದಯದ ಮಧ್ವಗುರುಗಳೇ ಬದ್ಧಕರದಲಿ ಬಿದ್ದು ನುತಿಸುವೆ
ಮುಗ್ಧಮನುಜಗೂ ಸರ್ವಮೂಲದ ಮನನ ಮಾಡಿಸಿರಿ ।
ಸಿದ್ಧಪುರುಷ ಜಯಾರ್ಯಮುನಿಯೇ ಪ್ರಸಿದ್ಧ ಸಿರಿಸುಧೆ ಗ್ರಂಥವದ್ಭುತ
ಶ್ರದ್ಧೆ ಬುದ್ಧಿಲಿ ನೆನೆದು ನಮಿಸುವ ಭಾಗ್ಯವೀಯುವೆಯ ॥೩॥

ಮೂರು ಗ್ರಂಥದಿ ಮತವ ಬೆಳಗಿದ ಧೀರ ಯತಿಕುಲ ವ್ಯಾಸರಾಜರೇ
ಸರ್ವಮೂಲದ ಭಾವ ಬೆಳಗಿದ ರಾಘವೇಂದ್ರ ನಮೋ ।

ಇರುಳು ಹಗಲಲಿ ನಿಮ್ಮ ಕೃತಿಗಳ ತಿರುಳು ಕಾಣುವ ಭಾಗ್ಯ ದೊರೆಯಲಿ
ಕರುಣೆರಕ್ಷೆಯ ನೀಡಿ ನಿಮ್ಮಯ ಗ್ರಂಥ ಬರೆಸುತಿರಿ ॥೪॥

ಮಾನ್ಯ ವಿದ್ಯಾಮಾನ್ಯಯತಿಕುಲಧನ್ಯರಿಗೆ ಪೊಡಮಡುವೆ ನಿತ್ಯದಿ
ಅನ್ಯಗೊಲಿಯದ ಗ್ರಂಥಲೇಖನ ಭಾಗ್ಯ ನೀಡಿಹರು ।
ಪುಣ್ಯಪುರುಷಗೆ ಮಿಗಿಲು ಎನಿಸುವ ಎನ್ನ ಗುರು ವಿಶ್ವೇಶಯತಿಗಳ
ಘನ್ನ ಕರುಣೆಯ ತುಣುಕು ಎನ್ನಲಿ ವಲಿದು ಬರುತಿರಲಿ ॥೫॥

ಸುಜಯೀಂದ್ರತಪದ ಫಲವಾಗಿ ಚರಿಪ ಸುಬುಧೇಂದ್ರಧೀರಯತಿಯು
ಪದರಸದಿ ತೆರದಿ ಪಟಪಟನೆ ಪುಟಿವ ಮಮಕುಲದ ಪುಣ್ಯಗುರುವು ।
ವರಶಾಸ್ತ್ರಪಠನ ಗುರುಗ್ರಂಥಘಟನ ಗುರುಮಠದಿ ನಡೆಯುವಂತೆ
ಹಾರೈಸಿ ನಡೆವ ಹಗಲಿರುಳು ದುಡಿವ ಗುರುಪದಕೆ ನಿತ್ಯ ನಮನ ॥೬॥

ರಾಘವೇಂದ್ರಗುರು ಭಾವದೀಪ ನವಪ್ರಭೆಯ ಜ್ಯೋತಿ ಬೆಳಗಿ
ಅಜ್ಞಾನ ತರಿವ ಸುಜ್ಞಾನ ತರುವ ಪರಿಮಳದ ಭಾವಲಹರಿ ।
ಹೊರಸೂಸಿ ಜಗವ ಬಳಿ ಸೆಳೆಯಲೀಗ ಕನ್ನಡದ ತುಂಗೆಯಾಗಿ
ನಿಮ್ಮೊಡಲ ತಟಕೆ ಹರಿವಂತೆ ಯತನ ಸುಬುಧೇಂದ್ರಯತಿಗೆ ನಮನ ॥೭॥

* * * *

## ಶ್ರೀಮನ್ ಮೂಲರಾಮ ದೇವರು
## ಶ್ರೀ ರಾಘವೇಂದ್ರಸ್ವಾಮಿಗಳ ಮಠ - ಮಂತ್ರಾಲಯ



ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥

## ಚತುರ್ದಶಲೋಕಗುರುಗಳಾದ
## ಭಗವಾನ್ ಶ್ರೀ ವೇದವ್ಯಾಸದೇವರು



ವಿಜ್ಞಾನರೋಚೀಃ ಪರಿಪೂರಿತಾಂತರ್ಬಾಹ್ಯಾಂಡಕೋಶಂ ಹರಿತೋಪಲಾಭಮ್ ।
ತರ್ಕಾಽಭಯೋ ತಂ ವಿಧಿಶರ್ವಪೂರ್ವಗೀರ್ವಾಣವಿಜ್ಞಾನದಮಾನತೋಽಸ್ಮಿ ॥

## ಜಗದ್ಗುರು ಶ್ರೀಮಧ್ವಾಚಾರ್ಯರು



ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಳಂ ಭಜೇ ತಾಪತ್ರಯಾಪಹಮ್ ॥

## ಪ್ರಾಚೀನ ಟೀಕಾಕಾರರಾದ
## ಪರಮಪೂಜ್ಯ ಶ್ರೀ ಪದ್ಮನಾಭತೀರ್ಥ ಶ್ರೀಪಾದಂಗಳವರು



ಪೂರ್ಣಪ್ರಜ್ಞಕೃತಂ ಭಾಷ್ಯಮಾದೌ ತದ್-ಭಾವಪೂರ್ವಕಮ್ ।
ಯೋ ವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ॥

## ಶ್ರೀಮಟ್ಟೀಕಾಕೃತ್ಪಾದರೆಂದೇ ಪ್ರಸಿದ್ಧರಾದ
## ಪರಮಪೂಜ್ಯ ಶ್ರೀಜಯತೀರ್ಥ ಮುನಿಗಳು



ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥

ಮಂತ್ರಾಲಯ ಪ್ರಭುಗಳಾದ ಕಲಿಯುಗ ಕಾಮಧೇನು ಕಲ್ಪತರುಗಳೆಂದೇ ಪ್ರಸಿದ್ಧರಾ
ಶ್ರೀ ರಾಘವೇಂದ್ರಗುರುಸಾರ್ವಭೌಮರು



ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ।
ಶ್ರೀ ರಾಘವೇಂದ್ರಗುರವೇ ನಮೋಽತ್ಯಂತದಯಾಲವೇ ॥

ಪರಮಪೂಜ್ಯ।। ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು



ಸುಯಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ।।

# ಪರಮಪೂಜ್ಯ॥ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು



ಸುಧೀಜನಸುಮಂದಾರಂ ಸುಧೀಂದ್ರಸುತಸುಪ್ರಿಯಮ್।
ಸುಶಮೀಂದ್ರಗುರುಂ ವಂದೇ ಸುಜಯೀಂದ್ರಕರೋದ್ಭವಂ ॥

ಪರಮಪೂಜ್ಯ।। ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರು



ಸುಶಮೀಂದ್ರಕರಾಬ್ಜೋತ್ಥಂ ರಾಘವೇಂದ್ರಗುರುಪ್ರಿಯಂ ।
ಸುಯತೀಂದ್ರಗುರುಂ ವಂದೇ ಮೂಲರಾಮಾರ್ಚನೇ ರತಮ್ ॥

ಹಂಸನಾಮಕ ಪರಮಾತ್ಮನ ಸಾಕ್ಷಾತ್ ಪರಂಪರೆಯ
ಶ್ರೀಮಠದ ಪ್ರಸ್ತುತ ಪೀಠಾಧಿಪತಿಗಳಾಗಿ ವಿರಾಜಮಾನರಾದ
ಪರಮಪೂಜ್ಯ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು



ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥

  

# ಸುಧಾಪರಿಮಳಸಾರ

ಶ್ರೀಜಯತೀರ್ಥಮುನಿಗಳು ಶ್ರೀಮನ್ನ್ಯಾಯಸುಧಾಗ್ರಂಥವನ್ನು ರಚಿಸಲು ಪ್ರಾರಂಭ ಮಾಡುತ್ತಿದ್ದಾರೆ. ಗ್ರಂಥಾರಂಭದಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುವ ಮೂಲಕ ಮಂಗಲಾಚರಣೆ ಮಾಡುತ್ತಿದ್ದಾರೆ. ಶ್ರೀಹರಿಯು ಗ್ರಂಥಕಾರರಾದ ಶ್ರೀಜಯತೀರ್ಥರಿಗೆ ಅತ್ಯಂತ ಇಷ್ಟನಾಗಿದ್ದಾನೆ. ಸಕಲ ದೇವತೆಗಳಿಗಿಂತ ಸರ್ವೋತ್ತಮನಾಗಿದ್ದಾನೆ. ಗ್ರಂಥಪ್ರತಿಪಾದ್ಯನೂ ಆಗಿದ್ದಾನೆ. ಇಂಥ ಶ್ರೀಹರಿಗೆ ಗ್ರಂಥಾರಂಭದಲ್ಲಿ ನಮಸ್ಕಾರ ಮಾಡುವುದು ಅತ್ಯಂತ ಉಚಿತವಾಗಿದೆ. ಮತ್ತು ಅನೇಕ ಗುಣಗಳಿಂದ ಶ್ರೀಹರಿಯನ್ನು ಈ ಶ್ಲೋಕದಲ್ಲಿ ಸ್ತುತಿಸಿದ್ದಾರೆ –

ಶ್ರಿಯಃಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ–
ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ।
ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ
ನಮೋಽಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ ॥

ಈ ಮಂಗಳಶ್ಲೋಕದಲ್ಲಿ ಒಂದೊಂದು ವಿಶೇಷಣಗಳೂ ಕೂಡ ಬಹಳ ಅರ್ಥಪೂರ್ಣವಾಗಿವೆ. ಅಷ್ಟೇ ಅಲ್ಲದೇ ಶ್ರೀಮದಾಚಾರ್ಯರ ಅನುವ್ಯಾಖ್ಯಾನದ ಮಂಗಳಶ್ಲೋಕಕ್ಕೆ ವ್ಯಾಖ್ಯಾನರೂಪವೂ ಆಗಿದೆ.

ಅನುವ್ಯಾಖ್ಯಾನದಲ್ಲಿ ಶ್ರೀಮಧ್ವಾಚಾರ್ಯರು ಮಾಡಿದ ಮಂಗಳಶ್ಲೋಕ ಹೀಗಿದೆ.

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ಈ ಮಂಗಳಶ್ಲೋಕದಲ್ಲಿ 'ಅಶೇಷವಿಶೇಷತೋಽಪಿ ವಂದ್ಯಂ ಎಂಬುದರಿಂದ ನಾರಾಯಣನು ಸಕಲ ದೇವತೆಗಳಿಂದ ನಮ್ಯನಾಗಿದ್ದಾನೆಂದು ಹೇಳಿದ್ದಾರೆ. ಇದರಿಂದ ಗ್ರಂಥಾರಂಭದಲ್ಲಿ ಸಕಲದೇವತೆಗಳ ಸ್ಮರಣೆಯನ್ನು ಮಾಡಿದಂತಾಗುತ್ತದೆ. ಆ ಸಕಲ ದೇವತೆಗಳಿಗೆ ತಾಯಿಯಾದ ಮಹಾಲಕ್ಷ್ಮಿಯನ್ನು ಕೂಡ ಸ್ಮರಣೆ ಮಾಡಿದಂತಾ–



ಗುತ್ತದೆ. ಈ ವೈಶಿಷ್ಟ್ಯ ಅಶೇಷವಿಶೇಷತಃ ಎಂಬಲ್ಲಿ ಅಡಗಿದೆ. ಇದನ್ನು ನ್ಯಾಯಸುಧಾಕಾರರು 'ಶ್ರಿಯಃ ಪತ್ಯೇ' ಎಂಬುದರಿಂದ ತೋರಿಸಿದ್ದಾರೆ. ಗ್ರಂಥಾರಂಭದಲ್ಲಿ ಸಕಲವಾಙ್ಮನೋಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಸ್ಮರಣೆ ಮಾಡಲೇಬೇಕು. ಆದರೆ ಅವಳೊಬ್ಬಳನ್ನೇ ಮುಖ್ಯವಾಗಿ ಸ್ಮರಣೆ ಮಾಡುವಂತಿಲ್ಲ. ಪರಮಾತ್ಮನ ಜೊತೆ ಲಕ್ಷ್ಮಿಯನ್ನು ನಮಿಸಬೇಕು. ಇದನ್ನು ಅನುವ್ಯಾಖ್ಯಾನದಲ್ಲಿ 'ಅಶೇಷವಿಶೇಷತೋಽಪಿ' ಎಂದು ಸೂಚ್ಯವಾಗಿ ಹೇಳಿದ್ದಾರೆ. ಅದನ್ನೇ ನ್ಯಾಯಸುಧೆಯಲ್ಲಿ ಸ್ಪಷ್ಟವಾಗಿ 'ಶ್ರಿಯಃ ಪತ್ಯೇ' ಎಂಬುದರಿಂದ ಸ್ಪಷ್ಟಪಡಿಸಿದ್ದಾರೆ. 'ಶ್ರೀಪತಯೇ' ಎಂದು ಒಟ್ಟಿಗೆ ಹೇಳದೇ 'ಶ್ರಿಯಃ ಪತ್ಯೇ' ಎಂದು ಬಿಡಿಸಿ ಹೇಳಿದ್ದರಿಂದ ಪರಮಾತ್ಮನಂತೆ ಲಕ್ಷ್ಮಿಯನ್ನು ಮುಖ್ಯವಾಗಿ ನಮಿಸುವಂತಿಲ್ಲ. ಗೌಣವಾಗಿ ನಮಸ್ಕರಿಸಬೇಕು ಎಂಬ ಅಪೂರ್ವಸಂಗತಿಯನ್ನು ತಿಳಿಸಿರುತ್ತಾರೆ.

ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಥಮಾಧ್ಯಾಯವು ನಾರಾಯಣನಲ್ಲಿ ಸಕಲಗುಣಪರಿಪೂರ್ಣತ್ವವನ್ನು ಪ್ರತಿಪಾದನೆ ಮಾಡುತ್ತದೆ. ಎರಡನೇ ಅಧ್ಯಾಯವು ಸಕಲದೋಷವಿದೂರತ್ವವನ್ನು ಪ್ರತಿಪಾದನೆ ಮಾಡುತ್ತದೆ. ಎರಡನೆಯ ಅಧ್ಯಾಯದಲ್ಲಿ ಪ್ರತಿಪಾದನೆ ಮಾಡುವ ಸಕಲದೋಷವಿದೂರತ್ವಕ್ಕೆ ಪ್ರಥಮಾಧ್ಯಾಯ ಪ್ರತಿಪಾದ್ಯವಾದ ಸಕಲಗುಣಪರಿಪೂರ್ಣತ್ವವು ಹೇತುವಾಗಿದೆ. ಈ ಎರಡು ಅಧ್ಯಾಯಗಳ ಸಾರವನ್ನು ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಮತ್ತು 'ನಿರ್ದೋಷಂ' ಎಂಬ ಎರಡು ವಿಶೇಷಣಗಳಿಂದ ಸಂಗ್ರಹ ಮಾಡಿದ್ದಾರೆ. ನಿರ್ದೋಷತ್ವಕ್ಕೆ ನಿಖಿಲಪೂರ್ಣಗುಣೈಕದೇಹತ್ವವು ಹೇತುವಾಗಿದೆ ಎಂಬುದನ್ನು ಇಲ್ಲಿ ಗಮನಿಸಬೇಕು. ಈ ಅಪೂರ್ವವಿಷಯವನ್ನು ನ್ಯಾಯಸುಧೆಯಲ್ಲಿ 'ನಿತ್ಯಾನಿತ್ಯಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣದಿಂದ ಸ್ಪಷ್ಟವಾಗಿ ತಿಳಿಸಿದ್ದಾರೆ.

ಮೂಲದಲ್ಲಿ ಹೇಳಲ್ಪಟ್ಟ ಸಕಲಗುಣಪರಿಪೂರ್ಣತ್ವ ಸಕಲದೋಷವಿದೂರತ್ವವು ನಾರಾಯಣ ಶಬ್ದದ ಅರ್ಥವಾಗಿದೆ. ಬ್ರಹ್ಮಶಬ್ದಕ್ಕೂ ಕೂಡ ಇದೇ ಅರ್ಥ. ಆದ್ದರಿಂದ ಬ್ರಹ್ಮನೇ ನಾರಾಯಣನಾಗಿದ್ದಾನೆ. ಶುದ್ಧಬ್ರಹ್ಮ ಬೇರೆ ವಿಶಿಷ್ಟಬ್ರಹ್ಮನೆನಿಸಿದ ನಾರಾಯಣನೇ ಬೇರೆ ಎಂಬ ಅದ್ವೈತಿಮತವು ಅಯುಕ್ತ ಎಂದು ಇದರಿಂದಲೇ ತಿಳಿಸಿದಂತಾಯಿತು. 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣಕ್ಕೆ ಮತ್ತೊಂದು ಪ್ರಯೋಜನ ಹೀಗಿದೆ – ಜಗತ್ತಿನಲ್ಲಿ ಮಿತವಾದ ಗುಣವಿದ್ದರೆ ದೋಷವಿದ್ದೇ ಇರುತ್ತದೆ. ನಾರಾಯಣನಲ್ಲಿ ಮಿತವಾದ ಗುಣಗಳಿದ್ದರೆ ದೋಷಿಯಾಗಬೇಕಲ್ಲವೇ? ಎಂದು ಆಕ್ಷೇಪ ಮಾಡಿದರೆ ಅಗಣಿತವಾದ ಗುಣಗಳುಳ್ಳವನಾದ್ದರಿಂದ ದೋಷಗಳಿಗೆ ಅವಕಾಶವಿಲ್ಲ.

ಅಥವಾ ದೇಹವು ಜ್ಞಾನಾನಂದಾತ್ಮಕವಾದರೆ ಈ ಗುಣಗಳು ಅನಿತ್ಯವಾದ್ದರಿಂದ ದೇಹವೂ ಕೂಡ ಅನಿತ್ಯವಾಗಲಿ? ಎಂಬ ಪ್ರಶ್ನೆ ಬಂದರೆ ಪರಮಾತ್ಮನಲ್ಲಿರುವ ಗುಣಗಳು ನಿತ್ಯವಾಗಿವೆ ಎಂಬುದಾಗಿ ನಿತ್ಯತ್ವವಿಶೇಷಣದಿಂದ ತಿಳಿಸಿದ್ದಾರೆ.

  



ಅನುವ್ಯಾಖ್ಯಾನ ಶ್ಲೋಕದಲ್ಲಿ ಸದಾ ಎಂಬ ಪದಕ್ಕೆ ನಿಖಿಲಪೂರ್ಣಗುಣೈಕದೇಹಂ ಎಂಬುದಕ್ಕೂ ಅನ್ವಯ ತಿಳಿಯಬೇಕೆಂಬುದನ್ನು 'ನಿತ್ಯ' ಎಂಬ ವಿಶೇಷಣದಿಂದ ತಿಳಿಸಿದ್ದಾರೆ. ನಿರ್ದೋಷಂ ಎಂಬಲ್ಲಿರುವ ದೋಷಪದವು ಸಕಲದೋಷಗಳಿಗೂ ವಾಚಕವಾಗಿದೆ ಎಂಬುದನ್ನು 'ಸಕಲಾವದ್ಯ' ಎಂಬುದರಿಂದ ತಿಳಿಸಿದ್ದಾರೆ.

'ಅಸ್ಯೋದ್ಭವಾದಿದಂ' ಎಂಬುದಾಗಿ ಮೂಲಶ್ಲೋಕದಲ್ಲಿ ಸಮಸ್ತಜಗತ್ತಿನ ಉತ್ಪತ್ತ್ಯಾದಿಗಳಿಗೆ ನಾರಾಯಣನು ಮುಖ್ಯಕಾರಣನಾಗಿದ್ದಾನೆಂದು ಹೇಳಲಾಗಿದೆ. ಸಮಸ್ತಜಗತ್ತಿನಲ್ಲಿ ನಾರಾಯಣನೂ ಕೂಡ ಸೇರಿರುವುದರಿಂದ ಇವನಿಗೂ ಕೂಡ ಉತ್ಪತ್ತ್ಯಾದಿಗಳಿವೆ ಎಂಬ ಅಪಾರ್ಥಗಳಾಗುವ ಸಂಭವವಿದೆ. ಅದಕ್ಕಾಗಿ 'ಜಗಜ್ಜನ್ಮ' ಇತ್ಯಾದಿಯಾದ ವಿಶೇಷಣದಿಂದ ನಾರಾಯಣನನ್ನು ಬಿಟ್ಟು ಉಳಿದ ಜಗತ್ತನ್ನು ವಿವಕ್ಷಿಸಬೇಕೆಂದು ನ್ಯಾಯಸುಧೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಮತ್ತು 'ಉದ್ಭವಾದಿದಂ' ಎಂಬಲ್ಲಿ ಸೃಷ್ಟ್ಯಾದ್ಯಷ್ಟಕಗಳನ್ನು ವಿವಕ್ಷಿಸಬೇಕಾಗಿಲ್ಲ. ಉತ್ಪತ್ತಿಸ್ಥಿತಿಸಂಹಾರಗಳನ್ನು ವಿವಕ್ಷಿಸಿದರೆ ಸಾಕು. ಏಕೆಂದರೆ, ಚೇತನಾಚೇತನಸಾಧಾರಣವಾದ ಧರ್ಮಗಳು ಈ ಮೂರು ಮಾತ್ರ , ಜ್ಞಾನಾಜ್ಞಾನಬಂಧಮೋಕ್ಷಗಳು ಜಡಪದಾರ್ಥದಲ್ಲಿ ಹೇಳಲಾಗದು. ನಿಯತಿ ಎಂಬುದನ್ನು ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು.

'ಶೀಲ' ಎಂಬ ವಿಶೇಷಣದಿಂದ ಸೃಷ್ಟ್ಯಾದಿವ್ಯಾಪಾರಗಳಲ್ಲಿ ತೊಡಗುವಿಕೆಯು ನಾರಾಯಣನ ಸ್ವಭಾವವಾಗಿದೆ. ಆದ್ದರಿಂದ ಪ್ರಯೋಜನದ ಅವಶ್ಯಕತೆ ಇರುವುದಿಲ್ಲ ಎಂದು ವ್ಯಾಖ್ಯಾನ ಮಾಡಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿರುವ 'ದೇಹಂ' ಎಂಬ ಪದವನ್ನು 'ವಪುಷೇ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಜ್ಞಾನಾದಿಗುಣಗಳು ಇರುವುದಿಲ್ಲ ಎಂಬ ಪಕ್ಷಕ್ಕೆ 'ದೇಹಂ' ಎಂಬ ಪದವು ಉತ್ತರಿಸುತ್ತಿದೆ. ಮತ್ತು ದೇಹವೇ ಇಲ್ಲದ ಬ್ರಹ್ಮನು ಹೇಗೆ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ? ಎಂಬ ಆಕ್ಷೇಪವನ್ನೂ ಕೂಡ ಈ 'ದೇಹಂ' ಎಂಬ ಪದವು ಉತ್ತರಿಸುತ್ತಿದೆ. ಈ ವಿಶೇಷವಿಷಯವನ್ನು ತಿಳಿಸಲು ನ್ಯಾಯಸುಧೆಯಲ್ಲಿ 'ವಪುಷೇ' ಎಂದಿದ್ದಾರೆ.

ನ್ಯಾಯಸುಧೆಯಲ್ಲಿ 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬ ವಿಶೇಷಣದಿಂದ 'ಸುವಾಕ್ಯೈಃ' ಎಂಬ ಪದವನ್ನು ವ್ಯಾಖ್ಯಾನ ಮಾಡಿದ್ದಾರೆ. ವೇದ ಹಾಗೂ ವೇದಾನುಸಾರಿಯಾದ ಸಕಲಪೌರುಷೇಯಗ್ರಂಥಗಳಿಂದ ನಾರಾಯಣನು ಪ್ರತಿಪಾದ್ಯನಾಗಿದ್ದಾನೆಂಬುದು ಇದರ ಅಭಿಪ್ರಾಯ. ವೇದಗಳನ್ನು ನೋಡಿದಾಗ ಆಪಾತತಃ ಗುಣಪರಿಪೂರ್ಣತ್ವವು ತಿಳಿಯುವುದೇ ಇಲ್ಲವಲ್ಲ ಎಂಬುದನ್ನು ತಿಳಿಸಲು 'ಹೃದಯ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ವೇದಗಳ ಮುಖ್ಯತಾತ್ಪರ್ಯಕ್ಕೆ ಇವನೇ ವಿಷಯ ಹೊರತು ಬೇರೆ ಪದಾರ್ಥವಲ್ಲ.

'ತಮೇವ ಶಾಸ್ತ್ರಪ್ರಭವಂ' ಎಂಬ ಶ್ಲೋಕದಲ್ಲಿ ನಾರಾಯಣನೇ ವೇದವ್ಯಾಸದೇವರೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದರೆ ಬ್ರಹ್ಮಸೂತ್ರಭಾಷ್ಯದಲ್ಲಿ 'ಪ್ರಾದುರ್ಭೂತೋ ಹರಿಃ ವ್ಯಾಸಃ' ಎಂಬುದಾಗಿ ಹರಿಯೇ ವೇದವ್ಯಾಸದೇವರಾಗಿ ಅವತರಿಸಿದನೆಂದು ಹೇಳಿದ್ದಾರೆ. ಹಾಗಾದರೆ ವೇದವ್ಯಾಸದೇವರು ನಾರಾಯಣನೋ ಅಥವಾ ಶ್ರೀಹರಿಯೋ? ಎಂಬ ಗೊಂದಲವುಂಟಾದರೆ ನ್ಯಾಯಸುಧಾಕಾರರು 'ಹರಯೇ' ಎಂಬ ಪದ-



ಪ್ರಯೋಗ ಮಾಡುವ ಮೂಲಕ ಉತ್ತರಿಸಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿ ನಾರಾಯಣನಿಗೆ ಯಾವ ವಿಶೇಷಣಗಳನ್ನು ಹೇಳಿದ್ದಾರೋ ಅವೇ ವಿಶೇಷಣಗಳು ಶ್ರೀಹರಿಗೂ ಅನ್ವಯವಾಗುವುದರಿಂದ ನಾರಾಯಣನೇ ಶ್ರೀಹರಿಯಾಗಿದ್ದಾನೆ ಎಂದು ವ್ಯಾಖ್ಯಾನ ಮಾಡುವ ಮೂಲಕ ವೇದವ್ಯಾಸದೇವರು ನಾರಾಯಣನ ಸ್ವರೂಪ ಎಂದು ಹೇಳಿದರೆ ಶ್ರೀಹರಿಯ ಸ್ವರೂಪರು ಕೂಡ ಆಗಿದ್ದಾರೆಂದು ಸ್ಪಷ್ಟವಾಗುತ್ತದೆ.

ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂದು ಹೇಳಿದ ಮೇಲೆ 'ಅಪ್ರತಮಮಪ್ಯಖಿಲೈಃ ಸುವಾಕ್ಯೈಃ' ಎಂಬುದರಿಂದ ಸಮಸ್ತವೇದಪ್ರತಿಪಾದ್ಯನೆಂದು ತಿಳಿಸಿದ್ದಾರೆ. ಅದಕ್ಕೆ ವ್ಯಾಖ್ಯಾನರೂಪದಲ್ಲಿರುವ ನ್ಯಾಯಸುಧೆಯ ಮಂಗಳಶ್ಲೋಕದಲ್ಲಿ ಕೂಡ ಹಾಗೆಯೇ ಹೇಳಬೇಕಿತ್ತು. ಆದರೆ ಮಧ್ಯದಲ್ಲಿ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂದು ಹೇಳಿದ್ದಾರೆ. ಇದು ಏಕೆ? ಎಂಬ ಪ್ರಶ್ನೆಯು ಬಂದರೆ ಅನುವ್ಯಾಖ್ಯಾನಶ್ಲೋಕದಲ್ಲಿ ಹೇಳಲ್ಪಟ್ಟ ಮೂರು ವಿಶೇಷಣಗಳಿಗೆ ವೇದವೇ ಪ್ರಮಾಣವಾಗಿದೆ. ಆದ್ದರಿಂದ ನಿರಾಧಾರವಲ್ಲ ಎಂಬ ಪ್ರಮೇಯವನ್ನು ತಿಳಿಸುವುದು ಇದರ ಮುಖ್ಯಉದ್ದೇಶವಾಗಿದೆ.

ಗ್ರಂಥಪ್ರತಿಪಾದ್ಯನನ್ನು ನಮಸ್ಕಾರ ಮಾಡುವುದು ಎಷ್ಟು ಮುಖ್ಯವೋ ಗ್ರಂಥಕರ್ತೃವನ್ನೂ ನಮಸ್ಕಾರ ಮಾಡುವುದೂ ಕೂಡ ಅಷ್ಟೇ ಮುಖ್ಯ ಮೊದಲನೆಯ ಶ್ಲೋಕದಲ್ಲಿ ಗ್ರಂಥಪ್ರತಿಪಾದ್ಯನಾದ ನಾರಾಯಣನನ್ನು ನಮಸ್ಕಾರ ಮಾಡಿದ್ದಾಯಿತು. ಎರಡನೆಯ ಶ್ಲೋಕದಲ್ಲಿ ಗ್ರಂಥಕರ್ತೃಗಳಾದ ಶ್ರೀವೇದವ್ಯಾಸದೇವರನ್ನು ನಮ–ಸ್ಕಾರ ಮಾಡುತ್ತಿದ್ದಾರೆ –

ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ
ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ತ್ವಂ ಪರಮ್ ।
ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಚಾಕಾರಿ ಸನ್ಮಾರ್ಗತಃ
ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್ ॥2॥

ವೇದವ್ಯಾಸದೇವರು ಭೂಮಿಯಲ್ಲಿ ಅವತರಿಸಿ ಮಹಾಭಾರತ, ಪುರಾಣ, ಬ್ರಹ್ಮಸೂತ್ರ ಮೊದಲಾದ ಗ್ರಂಥಗಳನ್ನುನಿರ್ಮಾಣ ಮಾಡಿದರು. ಇದನ್ನು ವ್ಯಸ್ತಾರಿ ಗೋಸಂತತಿಃ ಎಂಬ ವಿಶೇಷಣವು ಸ್ಪಷ್ಟ ಪಡಿಸುತ್ತಿದೆ. ಗೋಶಬ್ದಕ್ಕೆ ಮೇಲೆ ಹೇಳಿದ ಪೌರುಷೇಯಗ್ರಂಥಗಳು ಹಾಗೂ ಕಿರಣಗಳ ಸಮೂಹ ಎಂಬುದಾಗಿ ಎರಡರ್ಥ. ಪ್ರಾಬೋಧಿ ಶ್ರುತಿಪಂಕಜಂ ಎಂಬಲ್ಲಿ ಪ್ರಾಬೋಧಿ ಎಂಬ ಪದವನ್ನು ಪ್ರಯೋಗಮಾಡಿದ್ದರಿಂದ ಅನುವ್ಯಾಖ್ಯಾನದ ತಮೇವ ಶಾಸ್ತ್ರಪ್ರಭವಂ ಎಂಬುದನ್ನು ವ್ಯಾಖ್ಯಾನ ಮಾಡಿದಂತಾಯಿತು. ಶಾಸ್ತ್ರಪ್ರಭವತ್ವ ಎಂದರೆ, ವೇದವ್ಯಂಜಕತ್ವ ಎಂದರ್ಥ. ಗೋಸಂತತಿಃ ಎಂಬಲ್ಲಿ ಗೋ ಪದವನ್ನು ಶ್ರುತಿಪಂಕಜಂ ಎಂಬಲ್ಲಿ ಶ್ರುತಿಪದವನ್ನು ಪ್ರಯೋಗ ಮಾಡಿದ್ದರಿಂದ ಶಾಸ್ತ್ರಪ್ರಭವಂ ಎಂಬ ಅನುವ್ಯಾಖ್ಯಾನದ ಶ್ಲೋಕದಲ್ಲಿ ಶಾಸ್ತ್ರಪದದಿಂದ ಪೌರುಷೇಯಗ್ರಂಥ ಹಾಗೂ ಅಪೌರುಷೇಯಗ್ರಂಥಗಳೆರಡನ್ನೂ ವಿವಕ್ಷಿಸಬೇಕೆಂದು ಸೂಚಿಸಿದ್ದಾರೆ. ಹೀಗೆ ಈ ಎರಡನೆಯ ಪದ್ಯವು







ಕೇವಲ ಗ್ರಂಥಕರ್ತೃಗಳಾದ ವೇದವ್ಯಾಸದೇವರನ್ನು ನಮಸ್ಕರಿಸುವುದೆಂಬ ಪ್ರಯೋಜನವನ್ನು ಹೊಂದಿರುವುದಿಲ್ಲ. 'ತಮೇವ ಶಾಸ್ತ್ರಪ್ರಭವಂ' ಎಂಬುದನ್ನೂ ವ್ಯಾಖ್ಯಾನ ಮಾಡುತ್ತಿದೆ.

ಭಾಷ್ಯಕಾರರಾದ ಶ್ರೀಮಧ್ವಾಚಾರ್ಯರನ್ನು ಮೂರನೆಯ ಪದ್ಯದಿಂದ ನಮಸ್ಕರಿಸುತ್ತಿದ್ದಾರೆ. ಹಾಗೂ ಅವರ ಆಶೀರ್ವಾದವನ್ನು ಬೇಡುತ್ತಿದ್ದಾರೆ.

ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೋ ಸರ್ವಿರ್ನ ವೈ ಬಾಧಿತೇ । ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸ ಮೇ ಭೂಯಾತ್ ತತ್ವವಿನಿರ್ಣಯಾಯ ಭಗವಾನ್ ಆನಂದತೀರ್ಥೋ ಮುನಿಃ ॥

ಶ್ರೀಮಧ್ವಾಚಾರ್ಯರು ಅನುಮಾನಪ್ರಮಾಣರಾಗಿದ್ದಾರೆ ಎಂದು ಇಲ್ಲಿ ವರ್ಣಿಸಲಾಗಿದೆ. ಅನುಮಾನ-ಪ್ರಮಾಣದಲ್ಲಿ ಪಕ್ಷವೃತ್ತಿತ್ವ, ಸಪಕ್ಷೇ ಸತ್ವ, ವಿಪಕ್ಷಾತ್‌ವ್ಯಾವೃತ್ತತ್ವ, ಅಬಾಧಿತವಿಷಯತ್ವ, ಅಸತ್ಪ್ರತಿಪಕ್ಷತ್ವ ಎಂಬುದಾಗಿ ಐದು ಅಂಗಗಳು ಇರುತ್ತವೆ. ಶ್ರೀಮಧ್ವಾಚಾರ್ಯರಲ್ಲೂ ಕೂಡ ಈ ಐದು ಅಂಗಗಳಿವೆ.

1. ಯಾವುದು ಸಾಧ್ಯಸಂದೇಹಕ್ಕೆ ಆಶ್ರಯವಾಗಿರುತ್ತದೋ ಅದು ಪಕ್ಷ ಎಂದು ಕರೆಸಿಕೊಳ್ಳುತ್ತದೆ. ಭಕ್ತ-ವರ್ಗವು ಯಾವುದು ತತ್ವಜ್ಞಾನ ಎಂಬ ಸಂದೇಹಕ್ಕೆ ಒಳಗಾದಾಗ ವಾಯುದೇವರು ಮಧ್ವಾಚಾರ್ಯರಾಗಿ ಅವತರಿಸಿದರು. ಆದ್ದರಿಂದ ಇಲ್ಲಿ ಸಂದೇಹಕ್ಕೆ ಆಶ್ರಯರಾದ ಭಕ್ತವರ್ಗವೇ ಪಕ್ಷ ಎನಿಸುತ್ತದೆ. ಇಂಥ ಪಕ್ಷೀಭೂತ-ರಾದ ಭಕ್ತರಲ್ಲಿ ಆಚಾರ್ಯರು ಸನ್ನಿಹಿತರಾಗಿದ್ದಾರೆ. ಪ್ರತಿಯೊಬ್ಬ ಭಕ್ತರಲ್ಲೂ ಆಚಾರ್ಯರು ನೆಲೆಸಿದ್ದಾರೆ ಎಂದರ್ಥ. ಆದ್ದರಿಂದ ಅನುಮಾನದ ಒಂದು ಅಂಗವೆನಿಸಿದ ಪಕ್ಷವೃತ್ತಿತ್ವವು ಆಚಾರ್ಯರಲ್ಲಿ ಬಂದಿತು.

2. ಸಪಕ್ಷೇ ಸತ್ವ – ಸಾಧ್ಯನಿಶ್ಚಯ ಇರುವ ಸ್ಥಳವೇ ಸಪಕ್ಷ ಎನಿಸುತ್ತದೆ. ತತ್ವನಿರ್ಣಯವುಳ್ಳ ಭಗವಂತ-ನೊಬ್ಬನೇ ಸಪಕ್ಷ ಎನಿಸುತ್ತಾನೆ ಅವನಲ್ಲಿ ನಿರಂತರ ಆಸಕ್ತರಾಗಿರುವುದರಿಂದ ಸಪಕ್ಷೇ ಸ್ಥಿತತ್ವ ಎಂಬ ಎರಡನೆಯ ಅಂಗವು ಶ್ರೀಮಧ್ವಾಚಾರ್ಯರಲ್ಲಿ ಬಂದಿತು. ಸಪಕ್ಷದಲ್ಲಿ ಸ್ಥಿತಿಯಷ್ಟೇ ವಿವಕ್ಷಿತ. ಏಕೆಂದರೆ ಭಗವಂತನ ವಿಷಯದಲ್ಲಿ ಪರಿಪೂರ್ಣವಾದ ಅರಿವು ವಾಯುದೇವರಿಗೆ ಇರುವುದಿಲ್ಲ.

3. ವಿಪಕ್ಷಾತ್ ವ್ಯಾವೃತ್ತತ್ವ – ಸಾಧ್ಯವು ಇರುವುದಿಲ್ಲವೆಂದು ನಿಶ್ಚಯವಾದ ಸ್ಥಳವೇ ವಿಪಕ್ಷ ಎನಿಸುತ್ತದೆ. ತತ್ವನಿರ್ಣಯದ ಲೇಶವೂ ಇಲ್ಲದ ಅಯೋಗ್ಯಜನರು ವಿಪಕ್ಷ ಎನಿಸುತ್ತಾರೆ. ಅವರ ವಿಷಯದಲ್ಲಿ ಶ್ರೀಮಧ್ವಾ-ಚಾರ್ಯರು ಎಂದೂ ಕೂಡ ಉದ್ಧಾರಕ್ಕಾಗಿ ಪ್ರವೃತ್ತಿ ಮಾಡುವುದಿಲ್ಲ. ಆದ್ದರಿಂದ ವಿಪಕ್ಷಾತ್ ವ್ಯಾವೃತ್ತತ್ವವು ಆಚಾರ್ಯರಲ್ಲಿ ಪ್ರಾಪ್ತವಾಯಿತು.

4. ಅಬಾಧಿತವಿಷಯತ್ವ – ಬಾಧಿತವಾದ ವಿಷಯದಲ್ಲಿ ಪ್ರವೃತ್ತಿ ಮಾಡಬಾರದು ಎಂದು ಇದರ ಅರ್ಥ. ನಿಷಿದ್ಧವಿಷಯದಲ್ಲಿ ಎಂದೂ ಕೂಡ ಪ್ರವೃತ್ತಿಯನ್ನು ಮಾಡುವುದಿಲ್ಲ. ಋಜುಗಳಾದ ಶ್ರೀಮಧ್ವಾಚಾರ್ಯರು ಯಾವುದೇ ರೀತಿಯಲ್ಲಿಯೂ ಭ್ರಾಂತಿರಹಿತರಾಗಿದ್ದಾರೆ ಎಂದು ಕೂಡ ತಿಳಿಯಬಹುದು.



5. ಅಸತ್ಪ್ರತಿಪಕ್ಷತ್ವ – ಪ್ರತಿಪಕ್ಷ ಇರಬಾರದು ಎಂಬುದು ಇದರ ಅರ್ಥ. ಮಧ್ವಾಚಾರ್ಯರ ವಿಷಯದಲ್ಲಿ ಪ್ರತಿಭಟರ ಸಂಬಂಧವೇ ಇರುವುದಿಲ್ಲ. ಇವರಿಗೊಬ್ಬ ಎದುರಾಳಿ ಇರಲು ಸಾಧ್ಯವೇ ಇಲ್ಲ.

ಹೀಗೆ ಐದು ಅಂಗಗಳಿಂದ ಯುಕ್ತರಾಗಿರುವ ಕಾರಣ ಶ್ರೀಮಧ್ವಾಚಾರ್ಯರು ನಿರ್ದುಷ್ಟವಾದ ಪ್ರಮಾಣ-ಸ್ವರೂಪರಾಗಿದ್ದಾರೆ.

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ ॥

ಎಂಬ ಮಂಗಳಶ್ಲೋಕದಿಂದ ಮಹಾಭಾರತವು ಪ್ರಾರಂಭವಾಗುತ್ತದೆ. ಗ್ರಂಥಪ್ರಾರಂಭದಲ್ಲಿ ಇಷ್ಟು ಮಂದಿಗೆ ಅವಶ್ಯವಾಗಿ ನಮಸ್ಕಾರಮಾಡಬೇಕು. ಇದೇ ಶಿಷ್ಟಾಚಾರಪರಂಪರೆ. ಇದಕ್ಕನುಗುಣವಾಗಿಯೇ ಭಾರತೀದೇವಿ-ಯನ್ನು ಮುಂದಿನ ಶ್ಲೋಕದಿಂದ ಪ್ರಾರ್ಥಿಸುತ್ತಿದ್ದಾರೆ.

ಭವತಿ ಯದನುಭಾವಾತ್ ಏಡಮೂಕೋಽಪಿ ವಾಗ್ಮೀ ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।
ಸಕಲವಚನಚೇತೋದೇವತಾ ಭಾರತೀ ಸಾ ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥

ಕೇಳುವುದಕ್ಕಾಗಲೀ, ಹೇಳುವುದಕ್ಕಾಗಲೀ ಅತ್ಯಂತ ಅಸಮರ್ಥನಾದ ಜಡಪ್ರಾಯನಾದ ಅಜ್ಞಾನಿಯೂ ಕೂಡ ಭಾರತೀದೇವಿಯ ಅನುಗ್ರಹದಿಂದ ಪಂಡಿತಶ್ರೇಷ್ಠನಾಗುತ್ತಾನೆ. ಹೀಗಿರುವಾಗ ಏಡಮೂಕರಾಗದ ಜಡಮತಿಗಳಾದ ಭಕ್ತರು ಶ್ರದ್ಧೆಯಿಂದ ಭಾರತಿಯನ್ನು ಪ್ರಾರ್ಥಿಸಿದರೆ ವಿಶಿಷ್ಟವಾಕ್ಪಟುತ್ವ ಹಾಗೂ ಶ್ರೇಷ್ಠಪಾಂಡಿತ್ಯ-ಗಳು ಬಾರದೇ ಇರುತ್ತವೇನು?

ಪ್ರಾಚೀನಟೀಕಾಕಾರರಾದ ಪದ್ಮನಾಭತೀರ್ಥರನ್ನು ಹೀಗೆ ಸ್ಮರಿಸುತ್ತಿದ್ದಾರೆ.

ರಮಾನಿವಾಸೋಚಿತವಾಸಭೂಮಿಃ ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿಃ ಭವತಾದ್ ವಿಭೂತ್ಯೈ ॥

ಅನುವ್ಯಾಖ್ಯಾನಗ್ರಂಥಕ್ಕೆ ಶ್ರೀಪದ್ಮನಾಭತೀರ್ಥರು ಸನ್ನ್ಯಾಯರತ್ನಾವಳೀ ಎಂಬ ಟೀಕೆಯನ್ನು ಬರೆದಿದ್ದಾರೆ. ಇದೇ ಮೊಟ್ಟಮೊದಲ ಟೀಕೆಯಾಗಿದೆ. ನ್ಯಾಯಸುಧಾಗ್ರಂಥವು ಕೇವಲ ಅಮೃತವಾದರೆ ಈ ಸನ್ನ್ಯಾಯ-ರತ್ನಾವಳಿಗ್ರಂಥವು ಅಮೃತಸಮುದ್ರವೇ ಆಗಿದೆ ಎಂಬುದನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ. ಇವರಲ್ಲಿರುವ ವೈರಾಗ್ಯವೇ ಸಮುದ್ರದಲ್ಲಿರುವ ಶ್ವೇತವರ್ಣದಂತೆ ಕಂಗೊಳಿಸುತ್ತಿದೆ.

ತಮಗೆ ಸನ್ನ್ಯಾಸಾಶ್ರಮವನ್ನು ನೀಡಿ ವಿದ್ಯಾದಾನವನ್ನು ಕೂಡ ಮಾಡಿದ ಮುಖ್ಯಗುರುಗಳಾದ ಶ್ರೀಅಕ್ಷೋಭ್ಯತೀರ್ಥರಲ್ಲಿ ಭಕ್ತಿಪೂರ್ವಕವಾದ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದಾರೆ.







ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ ಮಮ ॥

ಶಬ್ದಶಾಸ್ತ್ರ, ಮೀಮಾಂಸಾಶಾಸ್ತ್ರ, ನ್ಯಾಯಶಾಸ್ತ್ರಗಳಲ್ಲಿ ಶ್ರೀಅಕ್ಷೋಭ್ಯತೀರ್ಥರು ಅದ್ವಿತೀಯ- ರಾಗಿದ್ದಾರೆ. ಇವರನ್ನು ಮನಸ್ಸಿನಲ್ಲಿಯೇ ಪೂಜಿಸುತ್ತೇನೆ.

ಮಂಗಳಾಚರಣೆ ಮುಗಿಯಿತು. ಮುಂದೆ ಗ್ರಂಥಪ್ರತಿಜ್ಞೆಯನ್ನು ಮಾಡಿ ವ್ಯಾಖ್ಯೇಯವಾದ ಗ್ರಂಥದ ವರ್ಣನೆಯನ್ನು ಮಾಡುತ್ತಿದ್ದಾರೆ.

ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ।
ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥

ಅನುವ್ಯಾಖ್ಯಾನಗ್ರಂಥವನ್ನು ಒಮ್ಮೆ ವ್ಯಾಖ್ಯಾನ ಮಾಡಿ ಮುಗಿಸಿದ್ದೇನೆ. ಪುನಃ ವ್ಯಾಖ್ಯಾನ ಮಾಡ-ಬೇಕೆಂದೆನಿಸುತ್ತದೆ. ಎರಡನೇ ವ್ಯಾಖ್ಯಾನ ಮಾಡಿ ಮುಗಿಸಿದಾಗ ಪುನಃ ಮತ್ತೊಂದು ರೀತಿಯಲ್ಲಿ ವ್ಯಾಖ್ಯಾನ ಮಾಡಬೇಕೆನಿಸುತ್ತದೆ. ಹೀಗೆ ದುಂಬಿಯು ಕಮಲದ ಮಕರಂದವನ್ನು ಪುನಃ ಪುನಃ ಬಂದು ಆಸ್ವಾದಿಸುವಂತೆ ನನ್ನ ಸ್ಥಿತಿಯಾಗಿದೆ. ಅನುವ್ಯಾಖ್ಯಾನಗ್ರಂಥವು ಆಚಾರ್ಯರ ಹೃದಯಸರೋವರದಲ್ಲಿ ಹುಟ್ಟಿದ ಕಮಲದಂತಿದೆ.

ನ್ಯಾಯಸುಧಾ ಎಂಬ ಮೇರುಕೃತಿಯನ್ನು ಬರೆಯುತ್ತಿರುವ ಶ್ರೀಮಟ್ಟೀಕಾಕೃತ್ಪಾದರಿಗೆ ಅಹಂಕಾರ ಲೇಶವೂ ಇಲ್ಲ ಎಂಬುದು ತಿಳಿಯುತ್ತದೆ.

ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ
ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಮ್ ।
ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ
ಪ್ರಪನ್ನಾ ಮಾನ್ಯಾಃ ಸ್ಮ ಕಿಮಪಿ ಚ ವದಂತೋಽಪಿ ಮಹತಾಮ್ ॥

ಶಬ್ದಶಾಸ್ತ್ರದಲ್ಲಿ ನಾವು ಪ್ರವೀಣರಲ್ಲ. ವೇದವಿಚಾರದಲ್ಲಿ ಚತುರರಲ್ಲ; ನ್ಯಾಯಶಾಸ್ತ್ರದಲ್ಲಿ ಪ್ರೌಢಿಮೆ ಇಲ್ಲ. ಆದರೂ ಆಚಾರ್ಯರ ಕರುಣೆಯನ್ನು ಆಶ್ರಯಿಸಿ ತಪ್ಪನ್ನು, ಅಥವಾ ಸರಿಯಾದದ್ದನ್ನು ಹೇಳಿದರೂ ಮಾನ್ಯ-ರಾಗಿದ್ದೇವೆ.

ಶ್ಲೋಕದಿಂದ ಸ್ವಾಹಂಕಾರಖಂಡನೆಯನ್ನು ಮಾಡಿರುತ್ತಾರೆ. ಯಾವುದೇ ಪಾಂಡಿತ್ಯವಿಲ್ಲದಿದ್ದರೆ ಗ್ರಂಥ-ಬರೆಯುವ ಅರ್ಹತೆ ನಿಮಗೆಲ್ಲಿದೆ ಎಂಬ ಪ್ರಶ್ನೆಗೂ ಇದರಲ್ಲೇ ಉತ್ತರವಿದೆ. ನನ್ನಲ್ಲಿ ಎಲ್ಲಾ ತರಹದ ಪಾಂಡಿತ್ಯಗಳಿವೆ. ಆದರೂ ಕೂಡ ಪಾಂಡಿತ್ಯದ ಮದದಿಂದ ನಾನು ಈ ಗ್ರಂಥವನ್ನು ಬರೆಯುತ್ತಿರುವುದಲ್ಲ. ಗುರುಗಳಾದ ಶ್ರೀಮದಾಚಾರ್ಯರ ಕರುಣೆಯಿಂದಷ್ಟೇ ಈ ಗ್ರಂಥವನ್ನು ಬರೆಯಲು ಸಮರ್ಥನಾಗಿದ್ದಾನೆ. ಈ ವಿಷಯವು ಬಹುವಚನಪ್ರಯೋಗದಿಂದ ತಿಳಿಯುತ್ತದೆ.



  



ಏಕತ್ವ, ಅಥವಾ ದ್ವಿತ್ವವು ವಿವಕ್ಷಿತವಾದ ಅಸ್ಮತ್ ಶಬ್ದಕ್ಕೆ ಬಹುವಚನವು ವಿಕಲ್ಪವಾಗಿ ಬರುತ್ತದೆಂದು 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರವು ಹೇಳುತ್ತಿದೆ. 'ಅಹಂ' ಎಂಬರ್ಥದಲ್ಲೇ ವಯಂ ಎಂಬ ಬಹುವಚನವನ್ನು ಈ ಶ್ಲೋಕದಲ್ಲಿ ಮಾಡಿರುತ್ತಾರೆ. ವಾಸ್ತವಿಕವಾಗಿ 'ಸವಿಶೇಷಣಸ್ಯ ಪ್ರತಿಷೇಧಃ' ವಿಶೇಷಣವಿಶಿಷ್ಟವಾದ ಅಸ್ಮತ್ ಶಬ್ದಕ್ಕೆ ಬಹುವಚನವು ಬರುವುದಿಲ್ಲ ಎಂಬುದು ಇದರ ಅರ್ಥ. ಇದರ ಪ್ರಕಾರ 'ಪ್ರಪನ್ನಾಃ' ಇತ್ಯಾದಿ ವಿಶೇಷಣವಿಶಿಷ್ಟವಾದ ಅಸ್ಮತ್ ಶಬ್ದಕ್ಕೆ ಬಹುವಚನಪ್ರಾಪ್ತಿಯ ಅವಕಾಶವಿಲ್ಲ. ಆದರೂ ಕೂಡ ಗಾಢಾಃ ಇತ್ಯಾದಿಯಾಗಿ ಹೇಳಲ್ಪಟ್ಟ ಗಾಢತ್ವಾದಿಗಳು ನಿಷೇಧಕ್ಕೆ ಪ್ರತಿಯೋಗಿಯಾಗಿವೆ. ವಿಶೇಷಣಗಲಾಗಿರುವುದಿಲ್ಲ. 'ಗುರುಕಾರುಣ್ಯಸರಣಂ ಪ್ರಪನ್ನಾಃ' ಎಂಬಲ್ಲಿ ಹೇಳಲ್ಪಟ್ಟ ಪ್ರಪನ್ನತ್ವವು ಕೂಡ ಕೇವಲ ಮಾನ್ಯತ್ವಕ್ಕೆ ಉಪಪಾದಕವಾಗಿದೆ. ಹಾಗಾಗಿ ಇದೂ ಕೂಡ ವಿಶೇಷಣವಾಗಿರುವುದಿಲ್ಲ. ಮಾನ್ಯತ್ವವು ವಿಧೇಯವಾಗಿರುವುದರಿಂದ 'ಮಾನ್ಯಾಃ' ಎಂಬುದು ಕೂಡ ವಿಶೇಷಣವಲ್ಲ. ಹೀಗೆ ಅಸ್ಮತ್‌ಶಬ್ದವು ವಿಶೇಷಣವಿಶಿಷ್ಟವಾಗದ ಕಾರಣ ಬಹುವಚನವು ಪ್ರಾಪ್ತವಾಗುತ್ತದೆ. ಆದ್ದರಿಂದ ಒಬ್ಬನೇ ವ್ಯಕ್ತಿಯಾದರೂ 'ವಯಂ' ಎಂಬ ಬಹುವಚನಪ್ರಯೋಗವು ಸಾಧುವಾಗಿದೆ.

ನ್ಯಾಯಸುಧಾಗ್ರಂಥವು ಪ್ರಾರಂಭವಾಗುತ್ತಿದೆ. 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬ ಅನುವ್ಯಾಖ್ಯಾನಶ್ಲೋಕಕ್ಕೆ ಪೀಠಿಕೆಯನ್ನು ನೀಡುತ್ತಿದೆ. ಬ್ರಹ್ಮಮೀಮಾಂಸಾಶಾಸ್ತ್ರವು ತತ್ವಜ್ಞಾನವನ್ನು ನೀಡುವು-ದರಲ್ಲಿ ಸೂರ್ಯನಂತೆ ಇದೆ. ಆದರೆ ದುಷ್ಟರ ಭಾಷ್ಯಗಳಿಂದ ಮುಚ್ಚಿಹೋಗಿದೆ. ಅವರ ಭಾಷ್ಯಗಳಿಂದ ಪ್ರಾಪ್ತವಾದ ಸಂಶಯ ಹಾಗೂ ವಿಪರೀತಜ್ಞಾನಗಳನ್ನು ಪರಿಹರಿಸಿ ನಿಜವಾದ ಅರ್ಥವನ್ನು ತಿಳಿಸಿದಾಗ ಪುನಃ ಆ ಬ್ರಹ್ಮಮೀಮಾಂಸಾಶಾಸ್ತ್ರವೆಂಬ ಸೂರ್ಯೋದಯವಾಗುತ್ತದೆ. ಅದಕ್ಕಾಗಿ ಶ್ರೀಮಧ್ವಾಚಾರ್ಯರು ಯಥಾರ್ಥ-ವಾದ ವ್ಯಾಖ್ಯಾನರೂಪವಾಗಿ ಅನುವ್ಯಾಖ್ಯಾನ ಎಂಬ ಗ್ರಂಥವನ್ನು ರಚನೆ ಮಾಡುತ್ತಿದ್ದಾರೆ. ಮೊದಲು ಮಂಗಳಾಚರಣೆಯು ಶಿಷ್ಟಾಚಾರಪರಂಪರಾಪ್ರಾಪ್ತವಾಗಿರುವುದರಿಂದ ತನಗಿಷ್ಟವಾದ ನಾರಾಯಣನನ್ನು ಭಕ್ತಿಯಿಂದ ನಮಸ್ಕಾರ ಮಾಡುತ್ತಿದ್ದಾರೆ.

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ನಾರಾಯಣನು ಜಗಜ್ಜನ್ಮಾದಿಕಾರಣನಾಗಿದ್ದಾನೆ. ನಿರ್ದೋಷನಾಗಿದ್ದಾನೆ. ನಿಖಿಲಪೂರ್ಣಗಳೇ ದೇಹವುಳ್ಳ-ವನಾಗಿದ್ದಾನೆ. ಸಕಲವೇದಪ್ರತಿಪಾದ್ಯನಾಗಿದ್ದಾನೆ. ಸರ್ವೋತ್ತಮನಾಗಿ ವಂದ್ಯನಾಗಿದ್ದಾನೆ. ತಮಗೆ ಅತ್ಯಂತ ಪ್ರೇಮಾಸ್ಪದನಾಗಿದ್ದಾನೆ. ಇಂಥ ನಾರಾಯಣನಿಗೆ ಭಕ್ತಿಯ ನಮಸ್ಕಾರಗಳು.

ಹೀಗೆ ಶ್ರೀಮಧ್ವಾಚಾರ್ಯರು ತಮಗೆ ಪ್ರಿಯತಮನಾದ ನಾರಾಯಣನನ್ನು ಗ್ರಂಥಪ್ರಾರಂಭದಲ್ಲಿ ನಮಸ್ಕಾರ ಮಾಡುತ್ತಿದ್ದಾರೆ.





ವಿಶೇಷಣಗಳಿರುವುದೇ ವ್ಯಾವೃತ್ತಿಮಾಡುವುದಕ್ಕಾಗಿ; ಇದು ಒಂದರಿಂದಲೇ ಸಿದ್ಧವಾಗುವಾಗ ಅನೇಕ-ವಿಶೇಷಣಗಳೇಕೇ ಎಂಬ ಪ್ರಶ್ನೆಗೆ ವಿಶೇಷಭೂತನಾದ ನಾರಾಯಣನ ಪ್ರಶಂಸೆಯೇ ಅನೇಕ ವಿಶೇಷಣಗಳ ಪ್ರಯೋಜನವಾಗಿದೆ. ಸ್ತೋತ್ರದಲ್ಲಿ ಆರ್ಥಿಕಪುನರುಕ್ತಿಯು ದೋಷವಾಗುವುದಿಲ್ಲ. ಹೆಚ್ಚು ವಿಶೇಷಣಗಳಿಂದ ಪರಮಾತ್ಮನನ್ನು ಸ್ತೋತ್ರಮಾಡಿದರೆ ಅವನ ಪ್ರೀತಿ ಅಧಿಕವಾಗಿ ಲಾಭವಾಗುತ್ತದೆ. ಆದ್ದರಿಂದ ಗುಣಪರಿಪೂರ್ಣತ್ವ -ದಿಂದಲೇ ನಿರ್ದೋಷತ್ವವು ಲಾಭವಾಗುವಾಗ ಪುನಃ ನಿರ್ದೋಷಂ ಎಂಬ ವಿಶೇಷಣವು ವ್ಯರ್ಥವಾಗಿದೆ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

ನಾರಾಯಣನನ್ನು 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳಿಂದ ಸ್ತುತಿಸಿದ್ದಾರೆ. ಬೇರೆ ರೀತಿಯಲ್ಲೂ ಕೂಡ ಸ್ತೋತ್ರ ಮಾಡಬಹುದಿತ್ತು. ಇದೇ ವಿಶೇಷಣಗಳನ್ನು ಹೇಳಲು ಏನಾದರೂ ಕಾರಣ-ವಿದೆಯೇ? ಎಂಬ ಪ್ರಶ್ನೆಗೆ ಸುಧಾಕಾರರು ಉತ್ತರಿಸುತ್ತಿದ್ದಾರೆ. ಒಟ್ಟು ಎರಡು ಮುಖ್ಯಕಾರಣ. ನಮಸ್ಕಾರ ಮಾಡಿಸಿ -ಕೊಳ್ಳಲು ಯೋಗ್ಯವಾದ ಎಲ್ಲ ಧರ್ಮಗಳು ನಾರಾಯಣನಲ್ಲಿವೆ. ಮತ್ತು ನಮಸ್ಕಾರ ಮಾಡಿಸಿಕೊಳ್ಳಲ್ಪಡುವ ಲಕ್ಷ್ಮೀ, ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಂದಲೂ ಕೂಡ ನಾರಾಯಣನು ನಮ್ಯನಾಗಿದ್ದಾನೆ. ಈ ಎರಡು ಕಾರಣಗಳಿಗಾಗಿ ಈ ಐದು ವಿಶೇಷಣಗಳನ್ನು ಮಂಗಲಾಚರಣೆಯಲ್ಲಿ ಹೇಳಿರುತ್ತಾರೆ. ಈ ವೈಶಿಷ್ಟ್ಯವನ್ನು ಅನುವ್ಯಾಖ್ಯಾನ ಶ್ಲೋಕದಲ್ಲಿಯೇ 'ಅಶೇಷವಿಶೇಷತೋऽಪಿ ವಂದ್ಯಮ್' ಎಂಬ ವಿಶೇಷಣದಿಂದ ತಿಳಿಸಿರುತ್ತಾರೆ. ಆದ್ದರಿಂದ 'ಅಶೇಷವಿಶೇಷತೋऽಪಿ' ಎಂಬ ವಿಶೇಷಣವು ಎಲ್ಲರಿಂದಲೂ ವಂದ್ಯನಾಗಿರುವ ಎಂದಷ್ಟೇ ಹೇಳುತ್ತಿಲ್ಲ. ಉಳಿದ ವಿಶೇಷಣಗಳಿಗೆ ಸಾರ್ಥಕ್ಯವನ್ನೂ ಕೂಡ ಸಮರ್ಥನೆ ಮಾಡುತ್ತಿದೆ. ಗ್ರಂಥಪ್ರಾರಂಭದಲ್ಲಿ ಹೇಳಲೇಬೇಕಾದ ವಂದ್ಯತ್ವಪ್ರಯೋಜಕ ಧರ್ಮವನ್ನು ಹೇಳುತ್ತಿದೆ. ಮತ್ತು ವಿಷ್ಣುಸರ್ವೋತ್ತಮತ್ವವನ್ನು ಕೂಡ ಸಮರ್ಥಿಸುತ್ತಿದೆ. ಹೀಗೆ 'ಅಶೇಷವಿಶೇಷತೋऽಪಿ' ಎಂಬ ವಿಶೇಷಣದ ವೈಶಿಷ್ಟ್ಯವನ್ನು ತಿಳಿಯಬೇಕು.

ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' 'ಅಸ್ಯೋದ್ಭವಾ-ದಿದಂ' ಎಂಬ ಮೂರು ವಿಶೇಷಣಗಳು ನಾರಾಯಣನೇ ಸರ್ವೋತ್ತಮನಾಗಿದ್ದಾನೆಂದು ಸಮರ್ಥಿಸುತ್ತಿವೆ. 'ಅಖಿಲೈಃ ಸುವಾಕ್ಯೈಃ ಆಪ್ಯತಮಂ' ಎಂಬ ವಿಶೇಷಣವು ನಾರಾಯಣನೇ ಗ್ರಂಥಪ್ರತಿಪಾದ್ಯನಾಗಿದ್ದಾನೆಂದು ಹೇಳುತ್ತಿದೆ. 'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣವು ಗ್ರಂಥಕಾರರಿಗೆ ಅತ್ಯಂತ ಇಷ್ಟನಾಗಿದ್ದಾನೆಂದು ಹೇಳುತ್ತಿದೆ. ಹೀಗೆ ಒಟ್ಟು ಐದು ವಿಶೇಷಣಗಳಲ್ಲಿ ಮೂರು ವಿಶೇಷಣಗಳು ಸರ್ವೋತ್ತಮತ್ವವನ್ನು ಉಳಿದೆರಡು ವಿಶೇಷಣಗಳು ಅಧಿಕೃತತ್ವ ಮತ್ತು ಇಷ್ಟತ್ವಗಳನ್ನು ಸಮರ್ಥಿಸುತ್ತಿವೆ. ಇದರಿಂದ ವಂದ್ಯತ್ವಪ್ರಯೋಜಕವಾದ ಮೂರು ಧರ್ಮಗಳು ನಾರಾಯಣನಲ್ಲಿ ಅಸಂಕುಚಿತವಾಗಿ ಇರುತ್ತವೆ. ಆದ್ದರಿಂದ ಇವನನ್ನು ಗ್ರಂಥಾರಂಭದಲ್ಲಿ ನಮಸ್ಕಾರ ಮಾಡುವುದು ಅತ್ಯಂತ ಸಾರ್ಥಕ ಮತ್ತುಕರ್ತವ್ಯವೆಂದು ತಿಳಿಸಿದಂತಾಯಿತು. ಗ್ರಂಥಾರಂಭದಲ್ಲಿ ವಿಶಿಷ್ಟನಾದ-ವನನ್ನು ನಮಸ್ಕರಿಸಿದಾಗ ವಿಘ್ನಪರಿಹಾರ, ಗ್ರಂಥಸಮಾಪ್ತಿ, ಗ್ರಂಥದ ಕೀರ್ತಿ ಇವುಗಳು ಪ್ರಾಪ್ತವಾಗುತ್ತವೆ. ಗ್ರಂಥಪ್ರತಿಪಾದ್ಯನನ್ನು ನಮಸ್ಕರಿಸಿದಾಗ ಗ್ರಂಥದಿಂದ ಯಥಾರ್ಥಜ್ಞಾನವು ಉಂಟಾಗುತ್ತದೆ. ಇಷ್ಟನಾದ

  



ದೇವತೆಯನ್ನು ನಮಸ್ಕರಿಸಿದಾಗ ಭಕ್ತ್ಯತಿಶಯ ಶ್ರದ್ಧಾತಿಶಯಗಳ ನಮಸ್ಕಾರವು ಸಾರ್ಥಕವಾಗುತ್ತದೆ. ಆದ್ದರಿಂದ ಗ್ರಂಥಾರಂಭದಲ್ಲಿ ಈ ಎಲ್ಲಾ ಧರ್ಮಗಳಿಂದ ಕೂಡಿದ ನಾರಾಯಣನನ್ನು ಶ್ರೀಮಧ್ವಾಚಾರ್ಯರು ನಮಸ್ಕಾರ ಮಾಡಿದ್ದಾರೆ.

ಪರಮಾತ್ಮನಲ್ಲಿ ವಂದ್ಯತ್ವವು ಮುಖ್ಯವಾಗಿದೆ. ಇದಕ್ಕೆ ಕಾರಣ ವಂದ್ಯತ್ವಪ್ರಯೋಜಕವಾದ ಮೂರೂ ಧರ್ಮಗಳು ನಿರವಧಿಕವಾಗಿ ಇರುವುದು ಅವನಲ್ಲಿ ಮಾತ್ರ ಎಂದು ಹೇಳಿದರು. ಆ ಮೂರು ವಂದ್ಯತ್ವ-ಪ್ರಯೋಜಕಧರ್ಮಗಳಲ್ಲಿ ವೈಶಿಷ್ಟ್ಯವನ್ನು ಉಪಪಾದನೆ ಮಾಡಲು ನಿಖಿಲಪೂರ್ಣಗುಣೈಕದೇಹಂ ಇತ್ಯಾದಿ ಮೂರು ವಿಶೇಷಣಗಳು ಪ್ರವೃತ್ತವಾಗಿವೆ. ಅವುಗಳ ಅರ್ಥವನ್ನು ತಿಳಿಯಬೇಕು. ಯಾವ ಕಾರಣದಿಂದ ನಿರವಧಿಕವಾದ ಗುಣಗಳೇ ಶರೀರವುಳ್ಳವನಾಗಿದ್ದಾನೋ ಪ್ರಾಕೃತಶರೀರವನ್ನು ಹೊಂದಿರುವುದಿಲ್ಲವೋ ಆದ್ದರಿಂದ ನಾರಾಯಣನು ಸರ್ವೋತ್ತಮನಾಗಿದ್ದಾನೆ. ಮತ್ತು ನಿರ್ದೋಷ ಎಂಬ ವಿಶೇಷಣವು ಪಾರತಂತ್ರ್ಯಾದಿ ದೋಷಗಳಿಂದ ರಹಿತನಾಗಿದ್ದಾನೆಂದು ಹೇಳುತ್ತಿದೆ. ಪಾರತಂತ್ರ್ಯವಿಲ್ಲವೆಂದರೆ ಸರ್ವೋತ್ತಮತ್ವವು ಇದೆ ಎಂದೇ ಅರ್ಥ. ಹೀಗೆ ನಿರ್ದೋಷ ಎಂಬ ವಿಶೇಷಣವೂ ಕೂಡ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡಿದೆ. ಇದರಂತೆ ಅಸ್ಯೋದ್ಭವಾದಿದಂ ಎಂಬ ವಿಶೇಷಣವೂ ಸಮಸ್ತ ಪ್ರಪಂಚಕ್ಕೆ ಜನ್ಮಾದ್ಯಷ್ಟಕಗಳನ್ನು ಆಯಾಯ ವಸ್ತುಗಳ ಸ್ವಭಾವ-ಕ್ಕನುಗುಣವಾಗಿ ನೀಡುತ್ತಾನೆಂದು ಹೇಳುತ್ತಿದೆ. ಆದ್ದರಿಂದಲೂ ಇವನು ಸರ್ವೋತ್ತಮನಾಗಿದ್ದಾನೆ.

ಇಲ್ಲಿ ಕೆಲವು ವ್ಯಾಕರಣವಿಚಾರ – 'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲಿ ಏಕಶಬ್ದವನ್ನು ಸೇರಿಸಿ ಸಮಾಸ ಮಾಡಿದ್ದಾರೆ. ಇದು ವ್ಯಾಕರಣಸೂತ್ರಕ್ಕೆ ವಿರುದ್ಧ. ಸಂಖ್ಯಾವಾಚಕವಾದ ಏಕಶಬ್ದವಿದ್ದರೆ ಪ್ರಥಮಾವಿಭಕ್ತಿಯೇ ಬರಬೇಕೆಂದು 'ಪೂರ್ವಕಾಲೈಕ' ಇತ್ಯಾದಿ ವ್ಯಾಕರಣಸೂತ್ರವು ಹೇಳಿದೆ. ಯಾವುದು ಪ್ರಥಮಾ ವಿಭಕ್ತಿಯಲ್ಲಿ-ರುತ್ತದೋ ಅದು ಉಪಸರ್ಜನಸಂಜ್ಞೆಯನ್ನು ಹೊಂದಿ ಪೂರ್ವನಿಪಾತವನ್ನು ಹೊಂದುತ್ತದೆ. ಆಗ 'ನಿಖಿಲ-ಪೂರ್ಣಗುಣೈಕದೇಹಂ' ಎಂಬುದಾಗಿ ಸಮಾಸವಾಗುವುದಿಲ್ಲ. ಏಕನಿಖಿಲಪೂರ್ಣಗುಣದೇಹಂ ಎಂದಾಗು-ತ್ತದೆ. ಆದ್ದರಿಂದ ಅನುವ್ಯಾಖ್ಯಾನಕಾರರು ನಿಖಿಲಪೂರ್ಣಗುಣೈಕದೇಹಂ ಎಂದು ಹೇಗೆ ಪ್ರಯೋಗಿಸಿದರು? ಈ ಪ್ರಶ್ನೆಗೆ ಉತ್ತರ ಹೀಗಿದೆ– ಸಂಖ್ಯಾವಾಚಕವಾದ ಏಕಪದವನ್ನು ವಿವಕ್ಷಿಸಿದ್ದರೆ ಪೂರ್ವನಿಪಾತವು ಬರಬೇಕಾಗಿತ್ತು. ಆದರೆ ಕೇವಲ ಎಂಬರ್ಥದಲ್ಲಿ ಏಕಶಬ್ದವನ್ನು ವಿವಕ್ಷಿಸಲಾಗಿದೆ. ಆಗ ಪೂರ್ವನಿಪಾತವು ಬರಬೇಕಾಗಿಲ್ಲ. ದೋಷೈಕದೃಕ್ ಎಂಬಲ್ಲಿ ಹ್ಲಾದೈಕಮಯೀಮ್ ಎಂಬಲ್ಲಿ ಇಂಥ ಪ್ರಯೋಗಗಳು ಕಂಡಿವೆ. ಆದ್ದರಿಂದ ವ್ಯಾಕರಣಕ್ಕೆ ವಿರುದ್ಧವಾಗಿ ಪ್ರಯೋಗ ಮಾಡಿರುವುದಿಲ್ಲ.

ಮತ್ತೊಂದು ವ್ಯಾಕರಣವಿಚಾರ – ನಿರ್ ಎಂಬ ಉಪಸರ್ಗವು ಅತಿಕ್ರಮಣಾರ್ಥದಲ್ಲಿ ಪಂಚಮ್ಯಂತದೊಡನೆ ಸಮಾಸವಾಗುತ್ತದೆ. ಆದ್ದರಿಂದ ನಿಷ್ಕ್ರಾಂತಃ ದೋಷೇಭ್ಯಃ ಎಂಬುದಾಗಿ ನ್ಯಾಯಸುಧೆಯಲ್ಲಿ ಪ್ರಯೋಗ ಮಾಡಿದ್ದಾರೆ.









ಸೃಷ್ಟಿಸ್ಥಿತ್ಯಾದಿಗಳನ್ನು ಸಮಸ್ತಜಗತ್ತಿಗೆ ಪರಮಾತ್ಮನು ನೀಡುತ್ತಾನೆಂದು ಹೇಳುವಾಗ ತನ್ನನ್ನು ಬಿಟ್ಟು ಎಂಬ ವಿಶೇಷಣವನ್ನು ಸೇರಿಸಬೇಕು. ಇಲ್ಲದಿದ್ದರೆ ಪರಮಾತ್ಮನಿಗೆ ಸೃಷ್ಟಿಸ್ಥಿತ್ಯಾದಿಗಳು ಇಲ್ಲವೆಂದು ಸಮರ್ಥಿಸುವ ಅಸಂಭವಾದ್ಯಧಿಕರಣಗಳಿಂದ ವಿರೋಧ ಬರುತ್ತದೆ. ವ್ಯಾಘಾತವೂ ಬರುತ್ತದೆ.

'ಅಸ್ಯೋದ್ಭವಾದಿದಂ' ಎಂಬಲ್ಲಿ ಅಸ್ಯ ಎಂಬ ಷಷ್ಠೀವಿಭಕ್ತಿಯು ಹೇಗೆ ಸರಿ? ಸಂಪ್ರದಾನಸಂಜ್ಞೆಯು ಬಂದು ಅಸ್ಮೈ ಎಂದಾಗಬೇಕಲ್ಲವೇ? ಈ ಪ್ರಶ್ನೆಗೆ ಪರಿಮಳದಲ್ಲಿ ಸುಂದರವಾಗಿ ಉತ್ತರಿಸಿದ್ದಾರೆ. ಎಲ್ಲಿ ತನ್ನಲ್ಲಿರುವ ಸ್ವಾಮಿತ್ವವನ್ನು ಪರಿತ್ಯಾಗ ಮಾಡಿ ಪರರ ಸ್ವಾಮಿತ್ವವನ್ನು ಸ್ಥಾಪಿಸುವ ಉದ್ದೇಶವಿರುತ್ತದೋ ಅಲ್ಲಿಮಾತ್ರ ಅಂಥ ಸಂಪ್ರದಾನಸಂಜ್ಞೆಯು ಪ್ರಾಪ್ತವಾಗುತ್ತದೆ. ಆಗ ಚತುರ್ಥೀವಿಭಕ್ತಿಯನ್ನು ಹೇಳಬೇಕು. ಪರಮಾತ್ಮನು ಯಾವ ಜಗತ್ತಿನ ಯಾವ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುತ್ತಿದ್ದಾನೋ ಅಂಥಲ್ಲಿ ತನ್ನಲ್ಲಿರುವ ಸ್ವಾಮಿತ್ವವನ್ನು ಪರಿತ್ಯಾಗ ಮಾಡುತ್ತಿಲ್ಲ. ಆದ್ದರಿಂದ ಸಂಪ್ರದಾನಸಂಜ್ಞೆಯು ಬಾರದೇ ಸಾಮಾನ್ಯವಾದ ಸಂಬಂಧವನ್ನಷ್ಟೇ ವಿವಕ್ಷಿಸಿ ಷಷ್ಠೀವಿಭಕ್ತಿಯನ್ನು ಹೇಳಲಾಗಿದೆ. 'ಅಸ್ಯ' ಎಂಬ ಷಷ್ಠೀವಿಭಕ್ತಿಯ ಪ್ರಯೋಗದಿಂದಲೇ ಜಗತ್ತಿನ ಸೃಷ್ಟಿಸ್ಥಿತ್ಯಾದಿಗಳಲ್ಲಿ ಪರಮಾತ್ಮನ ಸ್ವಾಮಿತ್ವವು ಇದ್ದೇ ಇರುತ್ತದೆ; ನಷ್ಟವಾಗಿಲ್ಲ ಎಂಬ ಪ್ರಮೇಯವನ್ನು ತಿಳಿಸಿರುತ್ತಾರೆ.

ಷಷ್ಠೀವಿಭಕ್ತಿಯು ಇಲ್ಲಿ ಕರ್ತ್ರರ್ಥದಲ್ಲಿಯೂ ಬಂದಿಲ್ಲ. ಕರ್ಮಾರ್ಥದಲ್ಲಿಯೂ ಬಂದಿಲ್ಲ. ಕೇವಲ ಸಂಬಂಧಾರ್ಥದಲ್ಲಿ ಬಂದಿದೆ ಎಂದು ಅರ್ಥ.

ಶ್ಲೋಕದಲ್ಲಿರುವ ಅಶೇಷವಿಶೇಷತೋऽಪಿ ಎಂಬುದನ್ನು ಅಸ್ಯೋದ್ಭವಾದಿದಂ ಎಂಬಲ್ಲಿಯೂ ಅನ್ವಯಿಸಿಕೊಳ್ಳಬೇಕು. ಆಗ ಎಲ್ಲಾ ರೀತಿಯ ಅವಾಂತರಭೇದಗಳಿಂದ ಸಹಿತವಾದ ಸೃಷ್ಟ್ಯಾದಿಗಳನ್ನು ಜಗತ್ತಿಗೆ ನೀಡುವವನು ನಾರಾಯಣ ಎಂದು ಅರ್ಥವಾಗುತ್ತದೆ. ಇದರ ವಿವರಣೆಯನ್ನು ಹೀಗೆ ತಿಳಿಯಬೇಕು— ನಿತ್ಯವಾದ ಪದಾರ್ಥಗಳಿಗೆ ಪರಾಧೀನವಿಶೇಷದ ಸಂಬಂಧವಾಗುವುದೇ ಸೃಷ್ಟಿ. ಪ್ರಕೃತಿಗೆ ಜಡರೂಪವಾಗಿ ಪರಿಣಾಮ ಹೊಂದುವಿಕೆಯೇ ಸೃಷ್ಟಿ. ಲಕ್ಷ್ಮೀದೇವಿಗೆ ಸೃಷ್ಟಿಸುವ ಇಚ್ಛಾಪ್ರಾಪ್ತಿಯೇ ಸೃಷ್ಟಿ. ಅವ್ಯಾಕೃತಾಕಾಶಕ್ಕೆ ಮೂರ್ತ-ಪದಾರ್ಥಗಳ ಸಂಬಂಧವಾಗುವಿಕೆಯೇ ಸೃಷ್ಟಿ. ಅನಾದಿಯಾದ ಇಂದ್ರಿಯಗಳಿಗೂ ಪಂಚಭೂತಾಂಶಗಳ ಸಂಬಂಧದಿಂದ ಉಪಚಯವಾಗುತ್ತದೆ. ಅದೇ ಅವುಗಳ ಉತ್ಪತ್ತಿ. ಹೀಗೆ ಅನೇಕ ರೀತಿಯಾದ ಉತ್ಪತ್ತಿಗಳನ್ನು ನಾರಾಯಣನು ಕೊಡುತ್ತಾನೆ. ಹಾಗೆಯೇ ಜೀವರಿಗೆ ಅನ್ನಾದಿಗಳನ್ನು ಕೊಡುವ ಮೂಲಕ ಸ್ಥಿತಿಯನ್ನು, ಇತರ ನಿತ್ಯಪದಾರ್ಥಗಳಿಗೆ ಉತ್ತರಕಾಲಸಂಬಂಧರೂಪವಾದ ಸ್ಥಿತಿಯನ್ನೂ ವಿಷ್ಣುವು ಕೊಡುತ್ತಾನೆ. ಹೀಗೆ ಅನೇಕ ರೀತಿಯಾದ ಸ್ಥಿತಿಗಳ ಕರ್ತಾ ನಾರಾಯಣನೇ ಆಗಿದ್ದಾನೆ. ಇದೇ ರೀತಿಯಾಗಿ ಜಡಪದಾರ್ಥಗಳಿಗೆ ಧ್ವಂಸರೂಪ-ವಾದ ಲಯವನ್ನು, ಚೇತನರಿಗೆ ದೇಹನಾಶರೂಪವಾದ ಲಯವನ್ನೂ ಲಕ್ಷ್ಮೀದೇವಿಗೆ ಅತ್ಯಂತಸಾಮೀಪ್ಯ-ರೂಪವಾದ ಲಯವನ್ನೂ ಈಶನು ಕೊಡುತ್ತಾನೆ. ಹೀಗೆ ಅನೇಕ ರೀತಿಯ ವಿಶೇಷಗಳಿಂದ ಕೂಡಿದ ಸೃಷ್ಟಿ, ಸ್ಥಿತಿ, ಲಯಗಳನ್ನು ಕೊಡುತ್ತಾನಾದ್ದರಿಂದ 'ಅಶೇಷವಿಶೇಷತೋऽಪಿ ಅಸ್ಯೋದ್ಭವಾದಿದಂ' ಎಂದು ಸಿದ್ಧವಾಗುತ್ತದೆ.





ನಾರಾಯಣನು ಸರ್ವೋತ್ತಮನಾಗಿರುವ ಕಾರಣ ಗ್ರಂಥಾರಂಭದಲ್ಲಿ ವಂದ್ಯನಾಗಿದ್ದಾನೆಂದು ಸಮರ್ಥನೆ ಮಾಡಲಾಯಿತು. ಇದೊಂದೇ ಕಾರಣವಲ್ಲ. ಗ್ರಂಥಪ್ರತಿಪಾದ್ಯನಾಗಿದ್ದರಿಂದಲೂ ಗ್ರಂಥಾರಂಭದಲ್ಲಿ ವಂದ್ಯನಾಗಿದ್ದಾನೆ. ಕೇವಲ ಬ್ರಹ್ಮಸೂತ್ರಗಳಿಂದಷ್ಟೇ ಪ್ರತಿಪಾದ್ಯನಲ್ಲ; ಸಮಸ್ತವೇದಗಳಿಂದ ಮುಖ್ಯವಾಗಿಯೇ ಪ್ರತಿಪಾದ್ಯನಾಗಿದ್ದಾನೆ. ಅಂಥ ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳಿಂದಲೂ ಕೂಡ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಪದವರ್ಣಸ್ವರ ಇವೆಲ್ಲದರ ಮುಖ್ಯಾರ್ಥ ನಾರಾಯಣನೊಬ್ಬನೇ ಹೊರತು ಬೇರಾರೂ ಅಲ್ಲ. ವೇದದ ಕೆಲವು ಭಾಗದಲ್ಲಿ ಧರ್ಮದ ವಿಚಾರ ಇರಬಹುದು, ಮುಖ್ಯಪ್ರಾಣ, ಇಂದ್ರ ಮೊದಲಾದ ದೇವತೆಗಳ ವಿಚಾರವೂ ಇರಬಹುದು. ಆದರೆ ಅವುಗಳನ್ನು ಪ್ರತಿಪಾದನೆ ಮಾಡುವುದು ವೇದದ ನಿಜವಾದ ಅಭಿಪ್ರಾಯವಲ್ಲ. ನಾರಾಯಣನನ್ನು ಪ್ರತಿಪಾದನೆ ಮಾಡುವುದೇ ವೇದದ ಮುಖ್ಯ ಉದ್ದೇಶ. ಅದಕ್ಕೆ ಪೂರಕವಾಗಿ ಅಲ್ಲಲ್ಲಿ ಧರ್ಮಾದಿಗಳ ವಿಚಾರ ದೇವತೆಗಳ ವಿಚಾರ ಪ್ರಸಕ್ತವಾಗುತ್ತದೆ. ಐತರೇಯಭಾಷ್ಯದಲ್ಲಿ 'ತಾ ವಾ ಏತಾ ಸರ್ವಾ ಋಚಃ' ಇತ್ಯಾದಿ ಪ್ರಮಾಣಗಳಿಂದ ಸಮಗ್ರವೇದದಿಂದ ವಾಯುದೇವರು ಪ್ರತಿಪಾದ್ಯರಾಗಿದ್ದಾರೆಂದು ಹೇಳಲಾಗಿದೆ. ಮುಖ್ಯಪ್ರತಿಪಾದ್ಯತ್ವವು ವಾಯುದೇವರಲ್ಲಿ ಲಕ್ಷ್ಮೀದೇವಿಯಲ್ಲಿ ಯಾರಲ್ಲೂ ಕೂಡ ಇಲ್ಲ. ಈ ಎಲ್ಲಾ ವಿಷಯವನ್ನು ತಮಪ್ ಪ್ರತ್ಯಯ, ಅಖಿಲ ಹಾಗೂ ಅಪಿ ಪದಗಳು ತಿಳಿಸುತ್ತಿವೆ.

ವಂದ್ಯತ್ವಪ್ರಯೋಜಕವಾದ ಇಷ್ಟತ್ವವೂ ಕೂಡ ನಾರಾಯಣಲ್ಲಿದೆ. ಇದನ್ನು ತಿಳಿಸಲು 'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣವನ್ನು ಹೇಳಿದ್ದಾರೆ. ಶ್ರೀಮದಾನಂದತೀರ್ಥರಿಗೆ ನಾರಾಯಣನು ನಿರಂತರ ಪ್ರಿಯತಮನಾಗಿದ್ದಾನೆ. ಕೆಲವು ಸಂದರ್ಭದಲ್ಲಷ್ಟೇ ಅಲ್ಲ ಅಥವಾ ಉಳಿದವರಂತೆ ಕೇವಲ ಪ್ರಿಯನೂ ಅಲ್ಲ ನಿರಂತರ ಪ್ರಿಯತಮನಾಗಿದ್ದಾನೆ. ಇದು ಶ್ರೀಮದಾಚಾರ್ಯರಲ್ಲಿ ಮಾತ್ರ ಇರಲು ಸಾಧ್ಯ . ಉಳಿದವರಲ್ಲಿ ಸ್ವರೂಪಸುಖವೇ ಮುಖ್ಯವಾದ್ದರಿಂದ ನಾರಾಯಣನಲ್ಲಿ ಸದಾ ಪ್ರಿಯತಮತ್ವವನ್ನು ಹೇಳಲು ಕಷ್ಟ. ಋಜುಗಣಸ್ಥರಾದ ಶ್ರೀಮಧ್ವಾಚಾರ್ಯರಲ್ಲಿ ಮಾತ್ರ ಇದು ಕೂಡುತ್ತದೆ.

ಧರ್ಮಪ್ರಾಣಾದಿಗಳು ಕೇವಲ ಪ್ರಿಯವೇ ಆಗುತ್ತವೆ ಹೊರತು ಪ್ರಿಯತಮ ಆಗುವುದಿಲ್ಲ. ಅದೂ ಕೂಡ ಭಗವಂತನ ಜ್ಞಾನಕ್ಕೆ ಪೂರಕ ವಾಗುವುದರಿಂದ ಅಥವಾ ಭಗವಂತನ ಪರಿವಾರದವರಲ್ಲಿ ಸೇರಿರುವುದರಿಂದ ಕೆಲವೊಮ್ಮೆ ಮಾತ್ರ ಪ್ರಿಯವಾಗುತ್ತವೆ. ಆದ್ದರಿಂದ ವಂದ್ಯತ್ವವು ಧರ್ಮಪ್ರಾಣಾದಿಗಳಲ್ಲಿ ಬಾರದೆ ವಿಷ್ಣುವಿನಲ್ಲಿ ಮಾತ್ರ ಬರುತ್ತದೆ. ಹೀಗೆ ವಂದ್ಯತ್ವಪ್ರಯೋಜಕವಾದ ವಿಶಿಷ್ಟತ್ವ, ಅಧಿಕೃತತ್ವ ಹಾಗೂ ಇಷ್ಟತ್ವಗಳು ನಾರಾಯಣಲ್ಲಿವೆ ಎಂದು ಸಿದ್ಧವಾಯಿತು.

ಇಲ್ಲಿಯ ತನಕ ನಾರಾಯಣನಲ್ಲಿ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವಗಳ ಉಪಪಾದನೆಗಾಗಿ ವಿಶೇಷಣಗಳು ಸಾರ್ಥಕವಾಗಿವೆ ಎಂಬುದಾಗಿ ವಿಚಾರಮಾಡಿದ್ದಾಯಿತು. ಈಗ ಅವನನ್ನು ವಂದಿಸಬೇಕಾದರೆ ಅವನ ಸ್ವರೂಪ ನಿರ್ಧಾರವಾಗಬೇಕು. ಅಂಥ ಸ್ವರೂಪದ ನಿರ್ಧಾರಕ್ಕಾಗಿ ಲಕ್ಷಣವನ್ನು ಹೇಳಲು ಈ ಶ್ಲೋಕವು ಹೊರಟಿದೆ ಎಂಬುದನ್ನು ಸಮರ್ಥನೆ ಮಾಡುತ್ತಿದ್ದಾರೆ. ಈ ಒಂದೇ ಶ್ಲೋಕದಲ್ಲಿ ಅನೇಕ ಗುಣಗಳು ಹೇಳಲ್ಪಟ್ಟಿವೆ.



  



1. ನಿಖಿಲಗುಣತ್ವ, 2.ಪೂರ್ಣಗುಣತ್ವ, 3. ಸ್ವತಃ ಗುಣೈಕದೇಹತ್ವ, 4.ನಿರ್ದೋಷತ್ವ, 5.ವೇದಾದಿ ಮುಖ್ಯಾರ್ಥತ್ವ, 6.ಅಖಿಲವೇದಾದ್ಯರ್ಥತ್ವ, 7.ಉದ್ಭವದತ್ವ, 8.ಸೃಷ್ಟಿದತ್ವ, 9.ಸ್ಥಿತಿದತ್ವ, 10.ನಿಯಮನದತ್ವ, 11.ಜ್ಞಾನದತ್ವ, 12.ಅಜ್ಞಾನದತ್ವ, 13.ಬಂಧದತ್ವ, 14.ಮೋಕ್ಷದತ್ವ, 15.ಮುಖ್ಯವಂದ್ಯತ್ವ, 16.ಅಶೇಷವಂದ್ಯತ್ವ, 17.ಸದಾ ಪರಮಪ್ರೇಮಯೋಗ್ಯತ್ವ ಹೀಗೆ ಅನೇಕಲಕ್ಷಣಗಳು ಈ ಶ್ಲೋಕದಲ್ಲಿ ಹೇಳಲ್ಪಟ್ಟಿವೆ.

ಅಪರೋಕ್ಷಜ್ಞಾನಿಗಳಿಗೂ ಪರಮಾತ್ಮನು ಪ್ರಿಯನಾಗಿದ್ದಾನೆ. ಆದರೆ ಶ್ರೀಮದಾನಂದತೀರ್ಥರಿಗೆ ನಿರಂತರ ಪರಮಪ್ರೇಮಾಸ್ಪದನಾಗಿದ್ದಾನೆ.

ವೈಭವೋಪೇತನಾದ ನಾರಾಯಣನಲ್ಲಿ ಅನೇಕ ಲಕ್ಷಣಗಳನ್ನು ಹೇಳಲಾಯಿತು. ಆ ಲಕ್ಷಣಗಳಿಗೆ ಪ್ರಮಾಣವನ್ನು ಹೇಳಲು ಇದೇ ಮಂಗಳಶ್ಲೋಕವು ಪ್ರವೃತ್ತವಾಗಿದೆ. ಮುಖ್ಯವಾಗಿ 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಿಂದ ಗುಣಪರಿಪೂರ್ಣತ್ವಪ್ರಮೇಯವನ್ನು ಈ ಶ್ಲೋಕದಲ್ಲಿ ಸಮರ್ಥನೆ ಮಾಡಲಾಗಿದೆ. ಅದಕ್ಕಾಗಿ 'ಆಪ್ಯತಮಮ್' 'ಸುವಾಕ್ಯೈಃ' ಎಂಬುದನ್ನು ಪ್ರಮಾಣವನ್ನಾಗಿ ಉಲ್ಲೇಖ ಮಾಡಿದ್ದಾರೆ. ವಾಸ್ತವಿಕವಾಗಿ ಕೇವಲೋ ನಿರ್ಗುಣಶ್ಚ ಎಂಬ ಶ್ರುತಿಯು ನಿರ್ಗುಣತ್ವವನ್ನು, ಜನಿತೋಽತ ವಿಷ್ಣೋಃ ಎಂಬ ಶ್ರುತಿಯು ಜನ್ಯತ್ವವನ್ನು ಹೇಳಿದೆ. ಹೀಗೆ ವೇದೇಕದೇಶಗಳಲ್ಲಿ ಅನ್ಯಥಾ ಪ್ರತೀತವಾಗುತ್ತದಲ್ಲವೇ ಎಂದು ಪ್ರಶ್ನೆ ಮಾಡಬಾರದು. ಪರಾಮರ್ಶ ಮಾಡದೇ ಇದ್ದಾಗ ಹಾಗೆ ಅಪಾರ್ಥವಾಗುತ್ತದೆ? ನಿಜವಾಗಿಯೂ ಸಮಸ್ತವೇದಗಳಿಂದ ಗುಣಪರಿಪೂರ್ಣನಾಗಿಯೇ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆ. ಹಾಗಾದರೆ ಧರ್ಮಾಧರ್ಮಗಳ ಸಿದ್ಧಿ ಹೇಗೆ? ಎಂದು ಪ್ರಶ್ನಿಸಬಾರದು. ಅಮುಖ್ಯವೃತ್ತಿಯಿಂದ ಧರ್ಮಾದಿಗಳು ಪ್ರತಿಪಾದ್ಯವಾಗುತ್ತವೆ. ಮುಖ್ಯವೃತ್ತಿಯಿಂದಷ್ಟೇ ಪರಮಾತ್ಮನು ಪ್ರತಿಪಾದ್ಯನಾಗುತ್ತಾನೆ. ಜಗತ್ಕರ್ತೃತ್ವವೆಂಬ ಕಾರಣದಿಂದ ಗುಣಪರಿಪೂರ್ಣತ್ವವಷ್ಟೇ ಸಿದ್ಧವಾಗು–ವುದಲ್ಲ ನಿರ್ದೋಷತ್ವವೂ ಸಿದ್ಧವಾಗುತ್ತದೆ. ಏಕೆಂದರೆ ಯಾರಲ್ಲಿ ದೋಷಗಳಿವೆಯೋ ಅವನು ಜಗತ್ತನ್ನು ನಿರ್ಮಾಣ ಮಾಡಲು ಸಮರ್ಥನಾಗುವುದಿಲ್ಲ.

ಜನ್ಮಾದಿಕಾರಣತ್ವವೆಂಬ ಹೇತುವೇ ನಾರಾಯಣನಲ್ಲಿ ಕೂಡುವುದಿಲ್ಲ. ಏಕೆಂದರೆ ಆವನಿಗೆ ಶರೀರವೇ ಇಲ್ಲ. ಶರೀರವಿಲ್ಲದವನಿಗೆ ಜನ್ಮಾದಿಕಾರಣತ್ವವು ಹೇಗೆ ಕೂಡುತ್ತದೆ? ಜನ್ಮಾದಿಕಾರಣತ್ವವೆಂಬ ಹೇತುವೇ ಕೂಡದಿದ್ದಾಗ ತನ್ಮೂಲಕವಾಗಿ ನಿಖಿಲಪೂರ್ಣಗುಣೈಕದೇಹತ್ವವನ್ನು ಸಮರ್ಥಿಸಲು ಕೂಡ ಸಾಧ್ಯವಾಗುವುದಿಲ್ಲ. ಮತ್ತು ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿ ಕಾರಣತ್ವವೇ ನಾರಾಯಣನ ಲಕ್ಷಣವಾಗಲಿ. ನಿಖಿಲಪೂರ್ಣ–ಗುಣೈಕದೇಹತ್ವವೇ ಹೇತುವಾಗಲಿ. ಈ ಪ್ರಶ್ನೆಗೆ ಉತ್ತರಿಸುವ ಮೂಲಕ ಜಗಜ್ಜನ್ಮಾದಿಕಾರಣತ್ವವನ್ನು ಸಾಧನೆ ಮಾಡುತ್ತಿದ್ದಾರೆ. ಸೂತ್ರಕಾರರು ದೋಷಗಳಿದ್ದರೆ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲವೆಂದು ಪತ್ಯುರಧಿ–ಕರಣದಲ್ಲಿ ಹೇಳಿದ್ದಾರೆ. ಜ್ಞಾನಾನಂದಾದಿಗುಣಗಳು ಇಲ್ಲದಿದ್ದರೆ ಜಗತ್ಕಾರಣತ್ವವು ಕೂಡುವುದಿಲ್ಲವೆಂದು







'ಅಂತವತ್ತ್ವಮ್ ಅಸರ್ವಜ್ಞತಾ ವಾ' ಎಂಬಲ್ಲಿ ಹೇಳಿದ್ದಾರೆ. ಇವೆರಡನ್ನೂ ಕೂಡಿಸಬೇಕೆಂದರೆ ಜ್ಞಾನಾನಂದಾತ್ಮಕವಾದ ಗುಣಗಳು ಪರಮಾತ್ಮನ ಶರೀರವಾಗಿರುವುದರಿಂದ ಜಗತ್ಕಾರಣತ್ವವು ಯುಕ್ತವಾಗುತ್ತದೆಂದು ಒಪ್ಪಬೇಕು.

ಇದು ಬ್ರಹ್ಮಮೀಮಾಂಸಾಶಾಸ್ತ್ರ. ಬ್ರಹ್ಮನ ಜಿಜ್ಞಾಸೆಯನ್ನು ಮಾಡಲು ಹೊರಟಿರುವ ಶಾಸ್ತ್ರ. ಪ್ರಾರಂಭದಲ್ಲಿ ಬ್ರಹ್ಮನನ್ನೇ ನಮಸ್ಕಾರ ಮಾಡುವುದು ಸಮಂಜಸವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಂಬಂಧಪಡದ ನಾರಾಯಣನನ್ನು ನಮಸ್ಕಾರ ಮಾಡುವುದು ಅಸಂಗತವಾಗುತ್ತದೆ. ಹೀಗೆ ಆಕ್ಷೇಪ ಮಾಡಿದರೆ ಬ್ರಹ್ಮ ಬೇರೆಯಲ್ಲ; ನಾರಾಯಣ ಬೇರೆಯಲ್ಲ. ಬ್ರಹ್ಮಶಬ್ದಾರ್ಥ ಬೇರೆಯಲ್ಲ; ನಾರಾಯಣಶಬ್ದಾರ್ಥ ಬೇರೆಯಲ್ಲ. ಬ್ರಹ್ಮಶಬ್ದವು ಯಾವ ಗುಣಪರಿಪೂರ್ಣತ್ವವನ್ನು ಹೇಳುತ್ತದೋ ನಾರಾಯಣಶಬ್ದವೂ ಕೂಡ ಅದನ್ನೇ ಹೇಳುತ್ತದೆ ಎಂಬ ಉತ್ತರವನ್ನು ತಿಳಿಯಬೇಕು. ಆದ್ದರಿಂದ ನಾರಾಯಣಶಬ್ದವು ದೇವದತ್ತ, ಡಿತ್ಥ ಮೊದಲಾದ ಶಬ್ದಗಳಂತೆ ಸಾಂಕೇತಿಕವಲ್ಲ; ಘಟಾದಿಶಬ್ದಗಳಂತೆ ರೂಢವೂ ಅಲ್ಲ; ಸಕಲಗುಣಪರಿಪೂರ್ಣತ್ವ, ದೋಷರಾಹಿತ್ಯ ಮೊದಲಾದ ವಿಶಿಷ್ಟಗುಣಗಳನ್ನು ಹೇಳುವ ಶಬ್ದವಾಗಿದೆ. ಮಂಗಳಶ್ಲೋಕದಲ್ಲಿರುವ ಉಳಿದೆಲ್ಲ ವಿಶೇಷಣಗಳು ಇದೇ ನಾರಾಯಣಶಬ್ದಾರ್ಥವನ್ನು ವಿವರಿಸುತ್ತಿವೆ. ಹೀಗೆ ಅನುವ್ಯಾಖ್ಯಾನಶ್ಲೋಕಕ್ಕೆ ಆರನೇ ವ್ಯಾಖ್ಯಾನವನ್ನು ತಿಳಿಯಬೇಕು.

1. ಅರ ಎಂದರೆ ದೋಷ. ದೋಷವಿರುದ್ಧವಾದ ಗುಣಗಳೇ ನಾರಗಳು. ಆ ಗುಣಗಳಿಗೆ ಆಶ್ರಯನಾದವನುಅಂದರೆ ಗುಣಪೂರ್ಣನಾದವನು ನಾರಾಯಣ.

2. ದೋಷಗಳಿಗೆ ಆಶ್ರಯನಾಗದವನು ಅಂದರೆ ನಿರ್ದೋಷನಾದವನು ನಾರಾಯಣ.

3. ಉಪಕಾರವನ್ನು ಮಾಡುವುದರ ಮೂಲಕ ನರರೊಂದಿಗೆ ಸಂಬಂಧವನ್ನು ಹೊಂದಿರುವ ವೇದಗಳೇ ನಾರಗಳು. ಆ ವೇದಗಳಿಗೆ ಆಶ್ರಯನಾದವನು ಅಂದರೆ ವೇದಪ್ರತಿಪಾದ್ಯನು ನಾರಾಯಣ.

4. ನರರಿಗೆ ಸಂಬಂಧಿಸಿದ ಸೃಷ್ಟಿ ಮೊದಲಾದದ್ದೇ ನಾರವೆನಿಸುತ್ತದೆ. ಆ ಸೃಷ್ಟ್ಯಾದಿಗಳನ್ನು ಮಾಡುವುದರ ಮೂಲಕ ಆಶ್ರಯನಾದವನು ಅಂದರೆ ನರರಿಗೆ ಸೃಷ್ಟ್ಯಾದಿಗಳನ್ನು ನೀಡುವವನು ನಾರಾಯಣ.

5. ನರಸಮೂಹವೇ ನಾರ. ನರರ ಸಮೂಹದಿಂದ ವಂದ್ಯನಾಗುವುದರ ಮೂಲಕ ಆಶ್ರಯನಾದವನು ಅಂದರೆ ನರಸಮೂಹದಿಂದ ವಂದ್ಯನಾದವನು ನಾರಾಯಣ.

6. ಸ್ವಾಮಿಯಾಗುವುದರ ಮೂಲಕ ನರರೊಂದಿಗೆ ಸಂಬಂಧವನ್ನು ಹೊಂದಿದ ಮುಖ್ಯವಾಯುವೇ ನಾರ. ಆ ಮುಖ್ಯಪ್ರಾಣನಿಗೆ ಹಾಗೂ ಮುಖ್ಯಪ್ರಾಣಾವತಾರರಾದ ನನಗೆ (ಆನಂದತೀರ್ಥರಿಗೆ) ಪರಮಪ್ರೇಮಾಸ್ಪದನಾಗುವುದರ ಮೂಲಕ ಆಶ್ರಯನಾದವನು ನಾರಾಯಣ. ಹೀಗೆ ನಾರಾಯಣಶಬ್ದವು, ಮೊದಲ ಪದ್ಯದಲ್ಲಿ ಹೇಳಿರುವ ಗುಣಪೂರ್ಣತ್ವ, ನಿರ್ದೋಷತ್ವ ಮೊದಲಾದ ನಾರಾಯಣನ ಅಸಾಧಾರಣಧರ್ಮಗಳನ್ನು ಕ್ರಮವಾಗಿ ತಿಳಿಸುತ್ತದೆ ಎಂದು ತಿಳಿಯಬೇಕು.



  



ಶಾಸ್ತ್ರಶ್ರವಣದಲ್ಲಿ ಯಾರು ತೊಡಗುತ್ತಾರೋ ಅವರಿಗೆ ಅನುಕೂಲವಾಗಬೇಕೆಂಬ ದೃಷ್ಟಿಯಿಂದ ಸಕಲ–ಶಾಸ್ತ್ರಾರ್ಥವನ್ನು ಸಂಕ್ಷೇಪವಾಗಿ ಹೇಳುವುದು ಸಂಪ್ರದಾಯ. ಸಾಮಾನ್ಯವಾಗಿ ಓದುಗರಿಗೆ ಗ್ರಂಥದಲ್ಲಿ ಏನಿದೆ ಎಂಬ ಕುತೂಹಲವಿರುತ್ತದೆ. ಅದಕ್ಕೆ ಗ್ರಂಥಕಾರರು ಪ್ರಾರಂಭದಲ್ಲಿ ಉತ್ತರಿಸುತ್ತಾರೆ. ಈ ದೃಷ್ಟಿಯಿಂದ ಅನುವ್ಯಾಖ್ಯಾನದ ಮಂಗಲಶ್ಲೋಕವು ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿರುವ ವಿಷಯವನ್ನು ಸಂಕ್ಷೇಪವಾಗಿ ನಿರೂಪಣೆ ಮಾಡುತ್ತಿದೆ. ಆಚಾರ್ಯರು ಮುಂದಿನ ಶ್ಲೋಕದಲ್ಲಿ 'ಅನ್ವಪಿ ವ್ಯಾಖ್ಯಾಂ ಕರೋಮಿ' ಮತ್ತೊಮ್ಮೆ ಸೂತ್ರಗಳಿಗೆ ವ್ಯಾಖ್ಯಾನ ಮಾಡುತ್ತೇನೆ ಎನ್ನುತ್ತಾರೆ. ಮತ್ತೊಮ್ಮೆ ಸೂತ್ರಗಳಿಗೆ ವ್ಯಾಖ್ಯಾನ ಮಾಡುತ್ತೇನೆ ಎಂದು ಹೇಳಿದರೆ ಈಗಾಗಲೇ ಒಮ್ಮೆ ವ್ಯಾಖ್ಯಾನ ಮಾಡಿದ್ದೇನೆ ಎಂದು ಅರ್ಥ. ಅಂದರೆ ಮಂಗಳಶ್ಲೋಕದಿಂದ ಒಮ್ಮೆ ವ್ಯಾಖ್ಯಾನ ಮಾಡಿದ್ದಾಗಿದೆ ಎಂಬರ್ಥವನ್ನೇ ಹೇಳಬೇಕು. ಆದ್ದರಿಂದ ಸಂಕ್ಷೇಪ ಶಾಸ್ತ್ರಾರ್ಥವನ್ನು ಈ ಮಂಗಳಶ್ಲೋಕದಿಂದ ತಿಳಿಯುವುದು ಆಚಾರ್ಯರಿಗೆ ಸಮ್ಮತವಾಗಿದೆ. ಸಂಕ್ಷೇಪವಾಗಿ ತಿಳಿದ ಮೇಲೆ ವಿವರವಾಗಿ ತಿಳಿಯುವುದರ ಬಗ್ಗೆ ಜಿಜ್ಞಾಸೆಯು ಉಂಟಾಗುತ್ತದೆ.

'ಸದಾ ವಂದ್ಯಮ್' ಎಂಬುದರಿಂದ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರಾರ್ಥವನ್ನು ಹೇಳಿದ್ದಾರೆ. ನನಗಿಂತ ಭಗವಂತನು ಅತ್ಯಂತ ಉತ್ಕೃಷ್ಟನಾಗಿದ್ದಾನೆ ಎಂಬ ಮನೋವ್ಯಾಪಾರವೇ ನಮಸ್ಕಾರ ಎನಿಸುತ್ತದೆ. ಜಿಜ್ಞಾಸೆಯು ಕೂಡ ಭಗವಂತನ ಉತ್ಕರ್ಷವನ್ನು ವಿಷಯೀಕರಿಸುವ ಮನನ ರೂಪವಾದ ಮನೋ–ವ್ಯಾಪಾರವಿಶೇಷವೇ ಆಗಿದೆ. ಆದ್ದರಿಂದ ಜಿಜ್ಞಾಸೆಯು ನಮನವಿಶೇಷವೇ ಆಯಿತು. ಹಾಗಾಗಿ 'ಸದಾ ವಂದ್ಯಮ್' ಎಂಬ ಪದವು ನಿರಂತರ ಬ್ರಹ್ಮಜಿಜ್ಞಾಸೆ ಮಾಡಬೇಕು ಎಂಬರ್ಥವನ್ನು ಹೇಳುತ್ತಿದೆ. ಪ್ರಥಮಸೂತ್ರದಲ್ಲಿರುವ ಬ್ರಹ್ಮ–ಶಬ್ದವು ಜಿಜ್ಞಾಸೆಗೆ ವಿಷಯನಾಗಿರುವವನು ಗುಣಪೂರ್ಣನಾಗಿದ್ದಾನೆಂದು ತಿಳಿಸುತ್ತಿದೆ. ಇದನ್ನು ಉಪಪಾದನೆ ಮಾಡಲು ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವನ್ನು ಹೇಳುವ ಎರಡನೆಯ ಸೂತ್ರ ಹೊರಟಿದೆ. ಇದೇ ವಿಷಯ–ದಲ್ಲಿ ಶಾಸ್ತ್ರಪ್ರಮಾಣಗಳನ್ನು ಮೂರನೆಯ ಸೂತ್ರವು ಹೇಳುತ್ತಿದೆ. ಅದಕ್ಕನುಗುಣವಾಗಿ ಅನುವ್ಯಾಖ್ಯಾನ–ಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' 'ಅಸ್ಯೋದ್ಭವಾದಿದಂ' 'ಅಪ್ರತಮಮಪ್ರಖಿಲೈಃ ಸುವಾಕ್ಯೈಃ' ಎಂಬ ಮೂರು ವಿಶೇಷಣಗಳನ್ನು ಹೇಳಿದ್ದಾರೆ. ನಿಖಿಲಪೂರ್ಣಗುಣೈಕದೇಹಂ ಎಂಬುದು ಮೊದಲನೆಯ ಸೂತ್ರಾರ್ಥ. 'ಅಸ್ಯೋದ್ಭವಾದಿದಂ' ಎಂಬುದು ಎರಡನೆಯ ಸೂತ್ರಾರ್ಥ. 'ಅಪ್ರತಮಮಪ್ರಖಿಲೈಃ ಸುವಾಕ್ಯೈಃ' ಎಂಬುದು ಮೂರನೆಯ ಸೂತ್ರಾರ್ಥವಾಗಿದೆ. ಪ್ರಥಮಸೂತ್ರಾರ್ಥ ಹಾಗೂ ದ್ವಿತೀಯಸೂತ್ರಾರ್ಥಗಳನ್ನು ಹೇಳುವ ಶಬ್ದಗಳ ನಡುವೆ ಮೂರನೆಯ ಸೂತ್ರಾರ್ಥವನ್ನು 'ಅಪ್ರತಮಮಪ್ರಖಿಲೈಸುವಾಕ್ಯೈಃ' ಎಂಬ ವಿಶೇಷಣವನ್ನು ಹೇಳಿದ್ದರಿಂದ ಹಿಂದಿನ ಮುಂದಿನ ಸೂತ್ರಾರ್ಥಗಳಲ್ಲಿ ಶಾಸ್ತ್ರವೇ ಪ್ರಮಾಣ ಎಂಬ ಪ್ರಮೇಯವು ಸೂಚಿತವಾಗಿದೆ. ಇದು ನ್ಯಾಯಸುಧೆಯಲ್ಲಿ ಮಾಡಿದ ವ್ಯಾಖ್ಯಾನ. ಆದರೆ ಸನ್ನ್ಯಾಯರತ್ನಾವಳೀ ಹಾಗೂ ನಯಚಂದ್ರಿಕಾಗಳಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬುದು ಪ್ರಥಮಾಧ್ಯಾಯದ ಸಾರ; 'ನಿರ್ದೋಷಂ' ಎಂಬುದು ಎರಡನೆಯ ಅಧ್ಯಾಯದ ಸಾರ, 'ಅಪ್ರತಮಮಪ್ರಖಿಲೈಃ ಸುವಾಕ್ಯೈಃ' ಎಂಬುದು ಮೂರನೆಯ ಅಧ್ಯಾಯದ ಸಾರ, 'ಅಸ್ಯೋದ್ಭವಾದಿದಂ' ಎಂಬುದು ನಾಕನೆಯ ಅಧ್ಯಾಯದ ಸಾರ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

ನಿರ್ದೋಷಂ ಎಂಬ ವಿಶೇಷಣವು ಎರಡನೇ ಅಧ್ಯಾಯದ ಪ್ರಮೇಯವನ್ನು ಸಂಗ್ರಹಿಸಿದೆ. ಇದರಿಂದ ಪ್ರಥಮಾಧ್ಯಾಯದಿಂದ ಸಿದ್ಧವಾದ ಪ್ರಮೇಯದಲ್ಲಿ ಬರುವ ಆಶಂಕೆಗಳನ್ನು ಪರಿಹರಿಸಿದಂತಾಯಿತು. ಮೂರನೆಯ ಸೂತ್ರಾರ್ಥವನ್ನು ಹೇಳುವ ಮೊದಲೇ ಎರಡನೇ ಅಧ್ಯಾಯದ ಪ್ರಮೇಯವನ್ನು ಸಂಗ್ರಹ ಮಾಡಿದ್ದರಿಂದ ನಿರ್ದೋಷತ್ವದ ವಿಷಯದಲ್ಲೂ ಶಾಸ್ತ್ರಗಳೇ ಪ್ರಮಾಣವಾಗಿವೆ ಎಂಬುದನ್ನು ಸೂಚಿಸಿದ್ದಾರೆ. ಹೀಗೆ ಮೊದಲೆರಡು ಅಧ್ಯಾಯಗಳಿಂದ ಬ್ರಹ್ಮಸ್ವರೂಪವು ನಿರ್ಧಾರವಾದ ಮೇಲೆ ಇಂಥ ಬ್ರಹ್ಮನನ್ನು ಯಾವ ಅಧಿಕಾರಿಯು ಹೊಂದುತ್ತಾನೋ ಆವನಿಗೆ ಭಗವಂತನ ಪ್ರಸಾದವು ಅತ್ಯಾವಶ್ಯಕ. ಅಂಥ ಪ್ರಸಾದಕ್ಕೆ ಸಾಧನಾಭೂತವಾದ ಉಪಾಯವೆಂದರೆ ಸಾಕ್ಷಾತ್ಕಾರವೇ ಆಗಿದೆ. ಈ ಸಾಕ್ಷಾತ್ಕಾರಕ್ಕಾಗಿ ವೈರಾಗ್ಯ ಮತ್ತು ಭಕ್ತಿಗಳನ್ನು ಹೊಂದಬೇಕು. ಹೀಗೆ ಸಕಲ ವೇದಾರ್ಥಗಳ ಶ್ರವಣ, ಮನನಾದಿಗಳಲ್ಲಿ ತೊಡಗಬೇಕು ಎಂದು ಮೂರನೆಯ ಅಧ್ಯಾಯದಲ್ಲಿ ನಿರೂಪಣೆ ಮಾಡಿದ್ದಾರೆ. ಅದರ ಸಂಗ್ರಹವನ್ನೇ 'ಅಶೇಷವಿಶೇಷತೋಽಪಿ' 'ಪ್ರಿಯತಮಂ' 'ಆಪ್ತತಮಂ' ಎಂದು ಹೇಳಿದ್ದಾರೆ. ಅಶೇಷವಿಶೇಷತಃ ಎಂಬಲ್ಲಿರುವ ಪಂಚಮೀ ವಿಭಕ್ತಿಯಿಂದ ಎಲ್ಲಾ ಪದಾರ್ಥಗಳನ್ನು ಬಿಟ್ಟು ಶ್ರೀಹರಿಯನ್ನೇ ಸರ್ವೋತ್ತಮನೆಂದು ತಿಳಿಯಬೇಕು ಎಂಬರ್ಥವು ತಿಳಿಯುತ್ತದೆ. ಲ್ಯಬ್‌ಲೋಪವಾಗಿರುವ ಪಂಚಮೀವಿಭಕ್ತಿಯನ್ನು ಪ್ರಯೋಗಮಾಡಿದ್ದರಿಂದ ವೈರಾಗ್ಯವು ಪ್ರಾಪ್ತವಾಯಿತು. 'ಮಮ' ಎಂಬ ವಿಶೇಷಣದಿಂದ ಮೂರನೆಯ ಅಧ್ಯಾಯದಲ್ಲಿರುವ ಇಯದಾಮನನಾತ್ ಎಂಬ ಅಧಿಕರಣದ ಪ್ರಮೇಯವನ್ನು ಸಂಗ್ರಹಿಸಿದ್ದಾರೆ.

ಭಕ್ತನ ವಿಷಯದಲ್ಲಿ ಪ್ರಸನ್ನನಾದ ಭಗವಂತನು ಮೋಕ್ಷವೆಂಬ ಪುರುಷಾರ್ಥವನ್ನು ನೀಡುತ್ತಾನೆ. ಅಂಥ ಮೋಕ್ಷಸ್ವರೂಪದ ನಿರೂಪಣೆಗಾಗಿ ನಾಕನೆಯ ಅಧ್ಯಾಯವು ಹೊರಟಿದೆ. ಅದನ್ನೇ ಆಪ್ತತಮಮ್ ಎಂಬ ವಿಶೇಷಣವು ಸಂಗ್ರಹಿಸಿದೆ. ಭಗವಂತನು ಎಲ್ಲೆಡೆಯೂ ವ್ಯಾಪ್ತನಾಗಿರುವುದರಿಂದ ಅವನು ಸಂಸಾರಾವಸ್ಥೆಯಲ್ಲೂ ಪ್ರಾಪ್ಯನೇ ಆಗಿದ್ದಾನೆ. ಆದರೆ ಅನಂತಾಸನ, ಶ್ವೇತದ್ವೀಪ, ವೈಕುಂಠ ಮೊದಲಾದ ಸ್ಥಾನಗಳಲ್ಲಿರುವ ಅವನ ರೂಪವಿಶೇಷವು ಸಂಸಾರಾವಸ್ಥೆಯಲ್ಲಿ ಪ್ರಾಪ್ಯವಾಗಿರುವುದಿಲ್ಲ. ಇಂಥ ಪ್ರಾಪ್ತಿಯನ್ನು ಹೊಂದಬೇಕು. ಅದಕ್ಕಾಗಿ ತಮಪ್‌ಪ್ರತ್ಯಯವನ್ನು ಶ್ಲೋಕದಲ್ಲಿ ಉಲ್ಲೇಖ ಮಾಡಿದ್ದಾರೆ.

'ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥'

ದೇವತೆಯಲ್ಲಿ ಹೇಗೆ ಭಕ್ತಿಯನ್ನು ಮಾಡುತ್ತೇವೋ ಅದರಂತೆ ಗುರುಗಳಲ್ಲೂ ಮಾಡಬೇಕು. ಆಗ ಮಾತ್ರ ಗುರುಗಳು ಹೇಳಿಕೊಟ್ಟ ಅರ್ಥವು ಸ್ಫುರಣವಾಗುತ್ತವೆ. ಅವರ ಅನುಗ್ರಹವಿಶೇಷವಿದ್ದಾಗ ಅವರು ಹೇಳದ ಅರ್ಥವೂ ಕೂಡ ಸ್ಫುರಣವಾಗುತ್ತವೆ. ಈ ವಿಷಯವನ್ನು ನಮಗೆ ತಿಳಿಸುವುದಕ್ಕಾಗಿ ಶ್ರೀಮಧ್ವಾಚಾರ್ಯರು ಪ್ರಾರಂಭದ ಶ್ಲೋಕದಲ್ಲಿ ದೇವತೆಯಾದ ನಾರಾಯಣನ ವಂದನೆಯನ್ನು ಮಾಡಿ, ಈಗ ಗುರುಗಳಿಗೆ ಪ್ರಣಾಮವನ್ನು ಮಾಡುತ್ತಿದ್ದಾರೆ. ಗ್ರಂಥಾರಂಭದಲ್ಲಿ ಗುರುಗಳ ನಮಸ್ಕಾರವು ಅತ್ಯಾವಶ್ಯಕ. ಅವರ ಅನುಗ್ರಹವು

  



ಆಗದಿದ್ದರೆ ತತ್ವಜ್ಞಾನದ ಸಂಪಾದನೆಯೇ ಆಗುವುದಿಲ್ಲ. ಆದ್ದರಿಂದ ತತ್ವಜ್ಞಾನವೆಂಬ ಅಭೀಷ್ಟವು ಸಿದ್ಧವಾಗಬೇಕೆಂದರೆ ಗ್ರಂಥಾರಂಭದಲ್ಲಿ ಅವಶ್ಯವಾಗಿ ಗುರುಪ್ರಣಾಮವನ್ನು ಮಾಡಬೇಕು. ಆದ್ದರಿಂದ ಗುರುಪ್ರಣಾಮವನ್ನು ಮಾಡಿ ತಾವು ಮಾಡುತ್ತಿರುವ ಗ್ರಂಥಪ್ರತಿಜ್ಞೆಯನ್ನು ಮಾಡುತ್ತಿದ್ದಾರೆ.

ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ ಜಗದ್ಗುರೂಣಾಂ ಗುರುಮಂಜಸೈವ।
ವಿಶೇಷತೋ ಮೇ ಪರಮಾಖ್ಯವಿದ್ಯಾವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ॥

ಓ ಗುರುಗಳಾದ ವೇದವ್ಯಾಸದೇವರೇ! ತಾವು ವೇದಗಳನ್ನು ವಿಭಾಗ ಮಾಡಿದಿರಿ; ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಿರ್ಮಾಣ ಮಾಡಿರುವಿರಿ. ಜಗತ್ತಿನ ಗುರುಗಳಾದ ಬ್ರಹ್ಮಾದಿಗಳಿಗೂ ಕೂಡ ತಾವು ಗುರುಗಳಾಗಿರುವಿರಿ. ಅದರಲ್ಲೂ ವಿಶೇಷವಾಗಿ ಎನಗೆ ಗುರುವಾಗಿರುವಿರಿ. ಗುರುಗಳಾದ ತಮಗೆ ಭಕ್ತ್ಯತಿಶಯ, ಶ್ರದ್ಧಾತಿಶಯಗಳಿಂದ ಪುನಃ ಪ್ರಣಾಮ ಮಾಡುವೆ. ಪರವಿದ್ಯಾ ಎಂದು ಕರೆಸಿಕೊಳ್ಳುವ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವ್ಯಾಖ್ಯಾನ ಮಾಡಲು ಪ್ರಾರಂಭಿಸುವೆ.

ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನವು ಇನ್ನೂ ಪ್ರಾರಂಭವೇ ಆಗಿಲ್ಲ. ಹೀಗಿರುವಾಗ ಕರೋಮಿ ವ್ಯಾಖ್ಯಾನವನ್ನು ಮಾಡುತ್ತಿದ್ದೇನೆ ಎಂಬ ಪ್ರಯೋಗವನ್ನು ಹೇಗೆ ಮಾಡಿದರು? ಎಂಬ ಪ್ರಶ್ನೆಗೆ ಎರಡು ರೀತಿಯಲ್ಲಿ ಉತ್ತರ ತಿಳಿಯಬಹುದು.

1. ವರ್ತಮಾನಕಾಲವು ಸಮೀಪದಲ್ಲಿದ್ದಾಗ ವರ್ತಮಾನಪ್ರಯೋಗವನ್ನು ಮಾಡಿದ್ದಾರೆ.

2. ಈಗಾಗಲೇ ಪ್ರಥಮಶ್ಲೋಕದಲ್ಲಿ ಸಂಕ್ಷೇಪವಾಗಿ ಶಾಸ್ತ್ರಾರ್ಥವನ್ನು ಹೇಳಿರುವುದರಿಂದ ವ್ಯಾಖ್ಯಾನವು ಪ್ರಾರಂಭವಾಗಿದೆ. ಆದ್ದರಿಂದಲೂ ವರ್ತಮಾನಪ್ರಯೋಗವು ಯುಕ್ತವಾಗುತ್ತದೆ.

ವೇದವ್ಯಾಸದೇವರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾರೆ. ವೇದಾದಿಗಳನ್ನು ವಿಭಾಗ ಮಾಡಿ ಉಪದೇಶಪರಂಪರೆಯನ್ನು ಮುಂದುವರೆಸಿದ್ದಾರೆ. ಆದ್ದರಿಂದ ಇವರನ್ನು ಶಾಸ್ತ್ರಪ್ರಭವ ಎನ್ನುತ್ತಾರೆ. ಮತ್ತು ಶಾಸ್ತ್ರಸಂಪ್ರದಾಯಪ್ರವರ್ತಕರಾಗಿರುವುದರಿಂದ ನಾರಾಯಣದೇವರೇ ಶ್ರೀಮಧ್ವಾಚಾರ್ಯರಿಗೆ ಗುರುಗಳಾಗಿದ್ದಾರೆ. ಸಮಸ್ತಜಗತ್ತಿಗೆ ಗುರುಗಳೆನಿಸಿದ ಬ್ರಹ್ಮಾದಿದೇವತೆಗಳಿಗೂ ಕೂಡ ಗುರುಗಳಾದವರು ಶ್ರೀವೇದವ್ಯಾಸದೇವರು. ಇವರನ್ನು ಭಕ್ತಿಯಿಂದ ನಮಸ್ಕಾರ ಮಾಡಿ ಅನುವ್ಯಾಖ್ಯಾನ ಎಂಬ ಗ್ರಂಥವನ್ನು ರಚನೆ ಮಾಡಲು ಪ್ರಾರಂಭಿಸಿರುತ್ತೇನೆ ಎಂಬುದಾಗಿ ಶ್ರೀಮದಾಚಾರ್ಯರು ಗ್ರಂಥಾರಂಭದಲ್ಲಿ ಪ್ರತಿಜ್ಞೆ ಮಾಡಿರುವರು.

ಸಮಸ್ತಜಗತ್ತಿಗೆ ಗುರುಗಳೆಂದರೆ ಸಜ್ಜನರ ಪ್ರಪಂಚಕ್ಕೆ ಮಾತ್ರ ಗುರುಗಳೆಂದು ತಿಳಿಯಬೇಕು. ದುಷ್ಟರಿಗೆ ಅಥವಾ ನಿತ್ಯಸಂಸಾರಿಗಳಿಗೆ ಇವರು ಗುರುಗಳಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು.



  



ಶ್ರೀಮಧ್ವಾಚಾರ್ಯರು ನಾರಾಯಣದೇವರಿಂದ ನೇರವಾಗಿ ಎಲ್ಲಾ ಶಾಸ್ತ್ರಗಳನ್ನೂ ಉಪದೇಶ ಪಡೆದುಕೊಂಡಿದ್ದಾರೆ. ಈ ವಿಷಯವನ್ನು

ಇತಿಹಾಸುಂದರಪುರಾಣಸೂತ್ರಸತ್ಕ್ರಿಯಪಂಚರಾತ್ರನಿಜಭಾವಸಂಯುತಮ್ ।
ಅಶ್ರಣೋದನಂತಹೃದನಂತತೋಽಚಿರಾತ್ ಪರಮಾರ್ಥಮಪ್ಯಗಣತಾಗಮಾವಲೇಃ –

ಎಂಬ ಮಧ್ವವಿಜಯಶ್ಲೋಕವು ಸಮರ್ಥನೆ ಮಾಡುತ್ತಿದೆ. ಆದ್ದರಿಂದ ಜಗತ್ತಿಗೆ ಹೇಗೆ ಗುರುಪರಂಪರೆಯ ಮೂಲಕ ಭಗವಂತನು ಗುರುವಾಗಿದ್ದಾನೋ ಅದರಂತೆ ನನಗೆ ಗುರುವಾಗಿಲ್ಲ; ಆದರೆ ಸಾಕ್ಷಾತ್ತಾಗಿಯೇ ಗುರುವಾಗಿದ್ದಾನೆ ಎಂಬ ವಿಷಯವನ್ನು 'ವಿಶೇಷತಃ' ಎಂಬ ಪದಪ್ರಯೋಗವನ್ನು ಮಾಡುವುದರ ಮೂಲಕ ತಿಳಿಸುತ್ತಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿ ತಮೇವ ಎಂದು ಹೇಳದಿದ್ದರೆ ದೇವತೆಯೇ ಬೇರೆ ಗುರುವೇ ಬೇರೆ ಎಂಬ ಸಂಶಯ ಬರುತ್ತಿತ್ತು. ಆದ್ದರಿಂದ ಯಾರು ದೇವತೆಯೋ ಅವನೇ ಎನಗೆ ಗುರುವಾಗಿದ್ದಾನೆಂಬುದನ್ನು ತಮೇವ ಎಂಬುದಾಗಿ ಆಚಾರ್ಯರು ತಿಳಿಸಿದ್ದಾರೆ. ಲೋಕದಲ್ಲಿ ಮಗನಿಗೆ ತಂದೆಯೇ ಗುರುವಾಗಿದ್ದಾಗ ಎರಡು ನಿಮಿತ್ತದಿಂದ ಮಗನು ತಂದೆಗೆ ನಮಸ್ಕರಿಸುವುದು ಕಾಣಿಸುತ್ತಿಲ್ಲ. ಅದರಂತೆ ಮಧ್ವಾಚಾರ್ಯರೂ ಕೂಡ ಒಂದು ಬಾರಿ ನಮಸ್ಕಾರ ಮಾಡಿದರೆ ಸಾಕು; ಎರಡು ಬಾರಿ ನಮಸ್ಕಾರ ಏಕೆ ಮಾಡಬೇಕು? ಎಂಬ ಪ್ರಶ್ನೆ ಬರುತ್ತದೆ. ಲೋಕದಲ್ಲಿ ಮಗನು ಎರಡು ಬಾರಿ ನಮಸ್ಕಾರ ಮಾಡದೇ ಇರಬಹುದು; ಆದರೆ ಎಲ್ಲಾ ಕಡೆ ಎರಡು ನಿಮಿತ್ತಗಳು ಒಟ್ಟಿಗೇ ಸೇರಿದಾಗ ಆ ನಿಮಿತ್ತಗಳ ಎರಡು ಕಾರ್ಯಗಳನ್ನು ಬಿಡುವ ಕ್ರಮ ಕಂಡಿಲ್ಲ. ಆದ್ದರಿಂದ ಪ್ರಕೃತ ಗುರುತ್ವ, ದೇವತಾತ್ವವೆಂಬ ಎರಡು ನಿಮಿತ್ತಗಳ ಸಮಾವೇಶವಿರುವುದರಿಂದ ಅನುಗ್ರಹಾತಿಶಯಕ್ಕಾಗಿ ಆಚಾರ್ಯರು ಎರಡು ಬಾರಿ ನಮಸ್ಕಾರವನ್ನು ಮಾಡಿರುತ್ತಾರೆ.

ಕೇವಲ ಶಿಷ್ಯರ ಶಿಕ್ಷಣೆಗೋಸ್ಕರ ಮಂಗಳಾಚರಣೆಯನ್ನು ಉಲ್ಲೇಖ ಮಾಡಿದ್ದಾರೆ. ಪ್ರತಿಯೊಬ್ಬ ಶಿಷ್ಯರಿಗೂ ನಾರಾಯಣನೇ ದೇವತೆಯಾಗಿದ್ದಾನೆ. ಬ್ರಹ್ಮಾದಿದೇವತೆಗಳು ಗುರುಗಳಾಗಿದ್ದಾರೆ. ಆದ್ದರಿಂದ ದೇವತೆಯೇ ಬೇರೆ ಗುರುಗಳೇ ಬೇರೆ. ಗ್ರಂಥಾರಂಭದಲ್ಲಿ ದೇವತೆಗೆ ನಮಸ್ಕಾರ ಮಾಡುವುದು ಎಷ್ಟು ಮುಖ್ಯವೋ ಗುರುಗಳಿಗೆ ನಮಸ್ಕಾರ ಮಾಡುವುದೂ ಅಷ್ಟೇ ಮುಖ್ಯ. ಇದನ್ನು ತಿಳಿಸುವುದಕ್ಕಾಗಿ ಪ್ರತ್ಯೇಕವಾಗಿ ಗುರುನಮಸ್ಕಾರದ ಉಲ್ಲೇಖವನ್ನು ಆಚಾರ್ಯರು ಮಾಡಿರುತ್ತಾರೆ.

'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಆಚಾರ್ಯರು ವ್ಯಾಖ್ಯಾನ ಮಾಡಲು ಹೊರಟಿದ್ದಾರೆ. ಆದರೆ ಯಾವುದೇ ಗ್ರಂಥವನ್ನು ವ್ಯಾಖ್ಯಾನ ಮಾಡಬೇಕಾದರೆ ಆ ಗ್ರಂಥವು ಅರ್ಥ–ವಿವಕ್ಷಾಪೂರ್ವಕವಾಗಿರಬೇಕು. ಗ್ರಂಥವನ್ನು ರಚನೆ ಮಾಡಿದವನು ವಿಶೇಷವಾದ ಮತ್ತು ಗಹನವಾದ ಅರ್ಥಗಳಿರುವಂತೆ ಆ ಗ್ರಂಥವನ್ನು ರಚನೆ ಮಾಡಿರಬೇಕು. ಕ, ಖ, ಗ, ಘ, ಙ ಇತ್ಯಾದಿ ವರ್ಣಮಾಲೆಯನ್ನು ಯಾರೂ ಕೂಡ ವ್ಯಾಖ್ಯಾನ ಮಾಡುವುದಿಲ್ಲ. ಬಾಲಕರ ವಾಕ್ಯ , ಗಿಳಿ ವಾಕ್ಯಗಳನ್ನು ವ್ಯಾಖ್ಯಾನಮಾಡಲು







ಯಾರೂ ಪ್ರವೃತ್ತರಾಗುವುದಿಲ್ಲ. ಆದ್ದರಿಂದ ಅರ್ಥವಿವಕ್ಷಾಪೂರ್ವಕವಾಗಿದ್ದರಷ್ಟೇ ವ್ಯಾಖ್ಯಾನಕ್ಕೆ ಅರ್ಹವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರವು ಹಾಗೆ ಅರ್ಥವಿವಕ್ಷಾಪೂರ್ವಕವಾಗಿದೆಯೆನ್ನಲು ಪ್ರಮಾಣವಿಲ್ಲ. ಕೇವಲ ಬರೆದಿದ್ದಾರೆಂಬ ಕಾರಣದಿಂದ ವ್ಯಾಖ್ಯಾನ ಮಾಡಬಾರದು. ಪ್ರೇಕ್ಷಾವಂತರು ಬರೆದಿದ್ದಾರೆಂಬುದು ಇನ್ನೂ ನಿಶ್ಚಯವಾಗಿಲ್ಲ. ಒಂದು ವೇಳೆ ವೇದವ್ಯಾಸರು ಪ್ರೇಕ್ಷಾವಂತರೆಂದು ನಿಶ್ಚಯವಾಗಿದ್ದರೂ ಕೂಡ ಕೇವಲ ಜಪಪಾರಾಯಣಾದಿಗಳಿಗೋಸ್ಕರ ಈ ಗ್ರಂಥವನ್ನು ರಚನೆ ಮಾಡಿರಬಹುದು. ಆದ್ದರಿಂದ ಆಚಾರ್ಯರು ಈ ಗ್ರಂಥವನ್ನು ಏಕೆ ವ್ಯಾಖ್ಯಾನ ಮಾಡಲು ಹೊರಟಿದ್ದಾರೆ?

ಬ್ರಹ್ಮಸೂತ್ರಗಳು ಅರ್ಥವಿವಕ್ಷಾಪೂರ್ವಕವಾಗಿ ರಚಿತವಾಗಿವೆಯೆಂದು ಒಪ್ಪೋಣ. ಅಂದಮಾತ್ರಕ್ಕೆ ಪುರುಷಾರ್ಥಹೇತು ಎಂಬ ಭಾವನೆಯಿಂದ ವ್ಯಾಖ್ಯಾನಮಾಡುವುದು ಸರಿಯಲ್ಲ. ಹಾಗಾದಲ್ಲಿ ಮೋಸಗಾರನ ಮಾತೂ ಕೂಡ ಅರ್ಥವಿವಕ್ಷಾಪೂರ್ವಕವಾಗಿಯೇ ಇರುವುದರಿಂದ ಅದನ್ನು ವ್ಯಾಖ್ಯಾನ ಮಾಡಬೇಕಾದ ಪ್ರಸಂಗ ಬರುತ್ತದೆ. ಇನ್ನು ಯಾವುದು ಯಥಾರ್ಥವಾಗಿದ್ದು ಅರ್ಥವಿವಕ್ಷಾಪೂರ್ವಕವಾಗಿದೆಯೋ ಅದನ್ನು ಮಾತ್ರ ವ್ಯಾಖ್ಯಾನಮಾಡಬೇಕೆಂದು ಅಂಗೀಕರಿಸಿದರೆ ವಿಪ್ರಲಂಭಕವಾಕ್ಯವು ಯಥಾರ್ಥವಾಗಿಲ್ಲದ ಕಾರಣ ವ್ಯಾಖ್ಯಾನಕ್ಕೆ ಯೋಗ್ಯವಾಗುವುದಿಲ್ಲ ಎಂಬ ವಾದವೂ ಕೂಡ ತಪ್ಪು. ಬ್ರಹ್ಮಸೂತ್ರಗಳು ಯಥಾರ್ಥವಾಗಿವೆ ಎನ್ನುವುದರಲ್ಲಿ ಯಾವುದೇ ಪ್ರಮಾಣವಿಲ್ಲ. ಒಂದು ವೇಳೆ ಯಥಾರ್ಥವೆಂದು ಒಪ್ಪಿದರೂ ಕೂಡ ಅನೇಕ ಯಥಾರ್ಥವಾಕ್ಯಗಳಿರುವಾಗ ಅವುಗಳನ್ನೆಲ್ಲಾ ಬಿಟ್ಟು ಬ್ರಹ್ಮಸೂತ್ರಗಳನ್ನೇ ವ್ಯಾಖ್ಯಾನ ಮಾಡಲು ಏನು ಕಾರಣ? ಈ ಪ್ರಶ್ನೆಗೆ ಉತ್ತರವನ್ನು ನೀಡುವುದಕ್ಕಾಗಿ 'ಪರಮಾಖ್ಯವಿದ್ಯಾ' ಎಂಬ ಪ್ರಯೋಗವನ್ನು ಮಾಡಿರುತ್ತಾರೆ.

ಆಥರ್ವಣ ಮೊದಲಾದ ಉಪನಿಷತ್ತುಗಳಲ್ಲಿ ಬ್ರಹ್ಮಸೂತ್ರವನ್ನು ಪರವಿದ್ಯಾ ಎಂದು ಕರೆದಿದ್ದಾರೆ. ಬ್ರಹ್ಮಸೂತ್ರಗಳನ್ನು ಪರವಿದ್ಯೆಯೆಂದು ಮುಂದೆ ಪ್ರತಿಪಾದಿಸುತ್ತಾರೆ.

ಈ ಉಪನಿಷತ್ತಿನಲ್ಲಿರುವ ವಿದ್ಯಾಶಬ್ದಕ್ಕೆ ಯೋಗರೂಢಿಗಳಿಂದ ಜ್ಞಾನ ಹಾಗೂ ಜ್ಞಾನಸಾಧನ ಎಂಬ ಅರ್ಥಗಳು ಸಿದ್ಧಿಸುತ್ತವೆ ಎಂದು ಸುಧಾದಲ್ಲಿ ಹೇಳಲಾಗಿದೆ. ಆದರೆ ಯಥಾರ್ಥಜ್ಞಾನಸಾಧನೇ ವಿದ್ಯಾಶಬ್ದಸ್ಯ ಎಂದಷ್ಟೇ (ವಿದ್ಯಾಶಬ್ದವು ಯೋಗರೂಢಿಗಳಿಂದ ಜ್ಞಾನಸಾಧನವೆಂಬ ಅರ್ಥವುಳ್ಳದ್ದಾಗಿದೆ.) ಹೇಳಿದರೆ ಸಾಕಾಗುತ್ತಿತ್ತು. ಆದರೆ ಇಷ್ಟೇ ಪ್ರಯೋಗಿಸಿದ್ದರೆ ವಿದ್ಯಾಶಬ್ದಕ್ಕೆ ಯಥಾರ್ಥಜ್ಞಾನ ಎಂಬ ಅರ್ಥದಲ್ಲಿ ಯೋಗರೂಢಿ–ಗಳು ಇಲ್ಲವೆಂಬ ಸಂಶಯ ಬರುತ್ತಿತ್ತು. ಅದನ್ನು ನಿವಾರಣೆ ಮಾಡುವುದಕ್ಕೋಸ್ಕರ ವಿದ್ಯಾಶಬ್ದಕ್ಕೆ 'ಜ್ಞಾನ' ಎಂಬ ಅರ್ಥದಲ್ಲಿ ಯೋಗ ಹಾಗೂ ರೂಢಿಗಳಿವೆ ಮತ್ತು 'ಜ್ಞಾನಸಾಧನ' ಎಂಬ ಅರ್ಥದಲ್ಲಿಯೂ ಯೋಗ ಮತ್ತು ರೂಢಿಗಳಿವೆ ಎಂದು ಹೇಳಿರುತ್ತಾರೆ.

ವಿದ್ಯಾಶಬ್ದವು ಯೋಗ–ರೂಢಿಗಳಿಂದ ಜ್ಞಾನವಾಚಕವಾದ ಹಾಗೆ ಜ್ಞಾನಸಾಧನವಾಚಕವಾಗಲಾರದು. ಏಕೆಂದರೆ 'ಸಂಜ್ಞಾಯಾಂ ಸಮಜ–ನಿಷದ–ನಿಪತ–ಮನ–ವಿದ–ಷುಞ್–ಶೀಙ್–ಭೃಞಿಣಃ' ಎಂಬ ಸೂತ್ರದಿಂದ







ವಿದಧಾತುವಿಗೆ ಕ್ಯಪ್ಎಂಬ ಪ್ರತ್ಯಯ ಬಂದು ವಿದ್ಯಾ ಎಂದು ರೂಪವಾಗುತ್ತದೆ. ಆದರೆ ಈ ಸೂತ್ರದಲ್ಲಿ ಕ್ಯಪ್ ಎಂಬುದನ್ನು 'ವ್ರಜಯಜೋಃ ಭಾವೇ ಕ್ಯಪ್'' ಎಂಬುದರಿಂದ ಅನುವೃತ್ತಿ ಮಾಡಬೇಕು. 'ವ್ರಜಯಜೋರ್ಭಾವೇ ಕ್ಯಪ್'' ಎಂಬ ಸೂತ್ರವು 'ಭಾವ'' ಎಂಬ ಅರ್ಥದಲ್ಲಿ ಕ್ಯಪ್ಪ್ರತ್ಯಯವನ್ನು ವಿಧಿಸುತ್ತದೆ. ಹಿಂದಿನ ಸೂತ್ರದಿಂದ 'ಭಾವೇ' ಎಂದು ಅನುವೃತ್ತಿ ಮಾಡಲು ಬರುತ್ತಿದ್ದರೂ ಈ ಸೂತ್ರದಲ್ಲಿ ಪುನಃ 'ಭಾವೇ' ಎಂದು ಹೇಳಿದ್ದರಿಂದ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯ ಬರುತ್ತದೆ. ಹೊರತು ಕರ್ತೃಭಿನ್ನಕಾರಕಾರ್ಥದಲ್ಲಿ ಬರುವುದಿಲ್ಲವೆಂದು ತಿಳಿಯುತ್ತದೆ. ಈ ರೀತಿಯಾದ 'ವ್ರಜಯಜೋಃ' ಎಂಬ ಸೂತ್ರದ 'ಕ್ಯಪ್' ಪ್ರತ್ಯಯವನ್ನೇ 'ಸಂಜ್ಞಾಯಾಂ...''ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಿದ್ದರಿಂದ ಇಲ್ಲಿ ಹೇಳಲ್ಪಟ್ಟ ಧಾತುಗಳಿಗೂ ಭಾವಾರ್ಥದಲ್ಲಿ ಮಾತ್ರ ಕ್ಯಪ್ಪ್ರತ್ಯಯ ಬರುತ್ತದೆಯೆಂದು ಸಿದ್ಧವಾಯಿತು. ಆದ್ದರಿಂದ ಜ್ಞಾನಸಾಧನ ಎಂಬ ಅರ್ಥವು ವಿದ್ಯಾಶಬ್ದ-ದಿಂದ ತಿಳಿಯಲು ಹೇಗೆ ಸಾಧ್ಯ?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು—'ಸಂಜ್ಞಾಯಾಂ ಸಮಜ...' ಎಂಬ ಸೂತ್ರದಲ್ಲಿ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಿಂದ 'ಭಾವೇ' ಎಂಬುದನ್ನು ಅನುವೃತ್ತಿ ಮಾಡಬಾರದು. ಕೇವಲ 'ಕ್ಯಪ್' ಎಂಬುದನ್ನಷ್ಟೇ ಅನುವೃತ್ತಿ ಮಾಡಬೇಕು. ಈ ರೀತಿಯಾಗಿ ವೃತ್ತಿ ಮೊದಲಾದ ಗ್ರಂಥಗಳಲ್ಲಿ ಹೇಳಿದ್ದಾರೆ. ಈಗ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರಕ್ಕಿಂತಲೂ ಮೊದಲಿನ ಸೂತ್ರಗಳಲ್ಲಿ ಅಧಿಕೃತವಾದ 'ಭಾವೇ' ಎಂಬುದನ್ನು ಮತ್ತು 'ಅಕರ್ತರಿ ಚ ಕಾರಕೇ' ಎಂಬುದನ್ನು 'ಕೃತ್ಯಲ್ಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಅನುವೃತ್ತಿ ಮಾಡಬೇಕಾದ್ದರಿಂದ 'ಸಂಜ್ಞಾಯಾಂ ಸಮಜ...' ಸೂತ್ರಕ್ಕೂ ಅದು ಅನುವೃತ್ತಿಯಾಗುವುದರಿಂದ ಸಂಜ್ಞಾಯಾಂ... ಎಂಬ ಸೂತ್ರದಿಂದ ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನಕಾರಕದಲ್ಲಿ ಕ್ಯಪ್ ಬರುತ್ತದೆ ಎಂದು ಸಿದ್ಧವಾಯಿತು.

ಈ ರೀತಿಯಾಗಿ ವಿದ್‌ಧಾತುವಿಗೆ ಭಾವಾರ್ಥದಲ್ಲಿಯೂ ಕರಣಾರ್ಥದಲ್ಲಿಯೂ ಕ್ಯಪ್ಪ್ರತ್ಯಯ ಬಂದು ವಿದ್ಯಾ ಎಂಬುದಾಗಿ ನಿಷ್ಪನ್ನವಾಗುತ್ತದೆ. ಆದ್ದರಿಂದ ವಿದ್ಯಾಶಬ್ದಕ್ಕೆ ಯೋಗವೂ ಸಂಜ್ಞಾಯಾಂ ಎಂದು ಹೇಳಿದ್ದರಿಂದ ರೂಢಿಯೂ ಸಿದ್ಧವಾಯಿತು.

ಈ ರೀತಿಯಾದ ಸಮಾಧಾನವು ಟೀಕಾಕಾರರಿಗೆ ಸಮ್ಮತವಾದದ್ದೆಂದು ಹೇಗೆ ತಿಳಿಯುತ್ತದೆ? ಎಂದರೆ ಸುಧಾದಲ್ಲಿ 'ಸಂಜ್ಞಾಯಾಂ ಸಮಜನಿಷದೇತ್ಯತ್ರ ಸಂಜ್ಞಾಯಾಮಿತ್ಯನುವೃತ್ತೇಃ' ಎಂದು ಹೇಳಿದ್ದಾರೆ. ಸೂತ್ರದಲ್ಲಿಯೇ ಸಂಜ್ಞಾಯಾಂ ಎಂದು ಇರುವಾಗ ಪುನಃ ಅನುವೃತ್ತಿಯನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಆದ್ದರಿಂದ ಸಂಜ್ಞಾಯಾಂ ಎಂಬುದನ್ನು ಅನುವೃತ್ತಿ ಮಾಡಬೇಕೆಂದು ಅರ್ಥೈಸದೇ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸಮಗ್ರಸೂತ್ರವನ್ನೇ ಅನುವೃತ್ತಿಮಾಡಬೇಕು ಎಂದು ಟೀಕಾವಾಕ್ಯಕ್ಕೆ ಅರ್ಥೈಸಬೇಕು. ಅಕರ್ತರಿ ಚ—ಎಂಬ ಸೂತ್ರವನ್ನು ಅನುವೃತ್ತಿ ಮಾಡುವಾಗ ಅದರ ಜೊತೆಗೆ ಇರುವ 'ಭಾವೇ' ಎಂಬುದೂ ಅನುವೃತ್ತವಾಗಿ ಬರುತ್ತದೆ ಎಂದು ಅಭಿಪ್ರಾಯ.



  



ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸಮಗ್ರ ಸೂತ್ರವೇ ಸಂಜ್ಞಾಯಾಂ ಸಮಜ.. ಎಂಬ ಸೂತ್ರದಲ್ಲಿ ಅನುವೃತ್ತವಾಗುವುದಾದರೆ ಈ ಸೂತ್ರದಲ್ಲಿ ಪುನಃ ಸಂಜ್ಞಾಯಾಂ ಎಂದು ಏಕೆ ಹೇಳಿದ್ದು? ಎಂದರೆ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬಲ್ಲಿರುವ ಸಂಜ್ಞಾಯಾಂ ಎಂಬ ಪದವು ವ್ಯಾವರ್ತಕವಲ್ಲ. ಚಶಬ್ದವನ್ನು ಸಂಜ್ಞಾಯಾಂ ಚ ಎಂದು ಅನ್ವಯ ಮಾಡಿ ಸಂಜ್ಞಾಯಾಂಚ ಅಸಂಜ್ಞಾಯಾಂ ಚ ಎಂದು ವ್ಯಾಖ್ಯಾನಿಸಿದ್ದಾರೆ. ಆದ್ದರಿಂದ ಅಲ್ಲಿರುವ ಸಂಜ್ಞಾಯಾಂ ಎಂಬುದನ್ನು ಅನುವೃತ್ತಿ ಮಾಡುವುದೆಂದರೆ ಆ ಸೂತ್ರವನ್ನು ಅನುವೃತ್ತಿ ಮಾಡಬೇಕೆಂದಷ್ಟೇ ಅರ್ಥ. ಹಾಗಾದರೆ 'ಅಕರ್ತರಿ ಚ' ಎಂಬ ಸೂತ್ರದಲ್ಲಿರುವ ಸಂಜ್ಞಾಪದವು ಅವ್ಯಾವರ್ತಕವಾದ್ದರಿಂದ ವಿದ್ಯಾಶಬ್ದಕ್ಕೆ ಯಥಾರ್ಥಜ್ಞಾನಸಾಧನವೆಂಬ ಅರ್ಥದಲ್ಲಿ ರೂಢಿಯನ್ನು ತಿಳಿಸುವುದಿಲ್ಲ.

ಹೀಗೆ ಶಂಕಿಸಬಾರದು. ಏಕೆಂದರೆ 'ಸಮಜನಿಷದ' ಎಂಬ ಸೂತ್ರದಲ್ಲಿರುವ ಸಂಜ್ಞಾಪದವೇ ಅದರ ರೂಢಿಯನ್ನು ತಿಳಿಸುತ್ತದೆ. ಆದ್ದರಿಂದಲೇ 'ಸಮಜನಿಷದ' ಈ ಸೂತ್ರದಲ್ಲಿ ಪ್ರತಿಪದಕ್ಕೂ ಸಂಜ್ಞಾಯಾಂ ಎಂದು ಅನುಷಂಗ ಮಾಡಬೇಕು ಎಂದೂ ಅರ್ಥವನ್ನು ಹೇಳಿದ್ದಾರೆ.

ಕೆಲವು ಪುಸ್ತಕಗಳಲ್ಲಿ 'ಸಂಜ್ಞಾಯಾಂ ಸಮಜನಿಷದೇತ್ಯುಕ್ತೇಃ' ಎಂದೇ ಪಾಠವಿದೆ. ಈ ಪಕ್ಷದಲ್ಲಿ ಯಾವುದೇ ರೀತಿಯ ಕ್ಲೇಶವಿಲ್ಲ.

ಬ್ರಹ್ಮಸೂತ್ರಗಳಿಗೆ ಅನೇಕ ಆಚಾರ್ಯರು ಈಗಾಗಲೇ ವ್ಯಾಖ್ಯಾನ ಮಾಡಿದ್ದಾರೆ. ಅದೇ ಬ್ರಹ್ಮಸೂತ್ರಗಳಿಗೆ ಆನಂದತೀರ್ಥರು ಪುನಃ ಏಕೆ ವ್ಯಾಖ್ಯಾನ ಮಾಡಲು ಹೊರಟಿದ್ದಾರೆ? ಈ ಪ್ರಶ್ನೆಗೆ ಉತ್ತರವನ್ನು 'ವ್ಯಾಖ್ಯಾಂ' ಎಂದು ನೀಡಿದ್ದಾರೆ. ವಿಶಿಷ್ಟವಾದ ಆಖ್ಯಾನವೇ ವ್ಯಾಖ್ಯಾನ. ಸೂತ್ರಕಾರರ ಭಾವಕ್ಕೆ ಅನುಗುಣವಾಗಿ ಉತ್ಕೃಷ್ಟವಾದ ವಿವರಣೆಯನ್ನು ಬ್ರಹ್ಮಸೂತ್ರಗಳಿಗೆ ಆನಂದತೀರ್ಥರು ನೀಡಿದರೆ, ಉಳಿದ ಆಚಾರ್ಯರು ಸೂತ್ರಕಾರರ ಭಾವಕ್ಕೆ ವಿರುದ್ಧವಾದದ್ದನ್ನೇ ವ್ಯಾಖ್ಯಾನದ ಮೂಲಕ ಪ್ರಕಟಪಡಿಸಿದ್ದಾರೆ. ಆದ್ದರಿಂದಲೇ ಅವು ವ್ಯಾಖ್ಯಾನಗಳಲ್ಲ, ಅಪ-ವ್ಯಾಖ್ಯಾನಗಳು. ಬೇರೆ ಆಚಾರ್ಯರ ಅಪವ್ಯಾಖ್ಯಾನವನ್ನು ಆನಂದತೀರ್ಥರು ಅಲ್ಲಲ್ಲಿ ಮುಂದೆ ತೋರಿಸುತ್ತಾರೆ.

ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದು ಆನಂದತೀರ್ಥರು ಈಗಾಗಲೇ ವ್ಯಾಖ್ಯಾನ ಮಾಡಿದ್ದಾರೆ. ಪುನಃ ವ್ಯಾಖ್ಯಾನ ಮಾಡಲು ಕಾರಣವೇನೆಂಬ ಪ್ರಶ್ನೆಗೆ ಉತ್ತರವನ್ನು 'ಅನ್ವಪಿ ಚ' ಎಂದು ನೀಡಿದ್ದಾರೆ. 'ಚ'ಶಬ್ದವು ಈ ಅನುವ್ಯಾಖ್ಯಾನಕ್ಕೂ ಪ್ರಯೋಜನವಿದೆ ಎಂಬುದಕ್ಕೆ ಸಮುಚ್ಚಾಯಕವಾಗಿದೆ. ಆ ಪ್ರಯೋಜನವನ್ನು 'ಸ್ವಯಂ-ಕೃತಾऽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟಾರ್ಥತಃ' ಎಂದು ಮುಂದೆ ಆನಂದತೀರ್ಥರೇ ತಿಳಿಸುತ್ತಾರೆ.

ಅನುವ್ಯಾಖ್ಯಾನಕ್ಕೆ ಪ್ರಯೋಜನವಿದ್ದರೂ ಆನಂದತೀರ್ಥರೇ ಏಕೆ ಅದನ್ನು ರಚಿಸಬೇಕು? ಆನಂದತೀರ್ಥರ ಭಾಷ್ಯವನ್ನು ಗಮನವಿಟ್ಟುಕೊಂಡು ಶಿಷ್ಯರೂ ರಚಿಸಬಹುದಲ್ಲವೇ? ಈ ಪ್ರಶ್ನೆಗೆ ಉತ್ತರವಾಗಿ 'ಅಹಂ ಏವ' ಎಂದು ಹೇಳಿದ್ದಾರೆ. 'ಏವ'ಶಬ್ದವು ವ್ಯಾಖ್ಯಾನದಲ್ಲಿ ಬೇರೆಯವರ ಅಸಾಮರ್ಥ್ಯವನ್ನು ತಿಳಿಸುತ್ತದೆ. ಅನುವ್ಯಾಖ್ಯಾನವನ್ನು

ರಚಿಸುವ ಸಾಮರ್ಥ್ಯವಿರುವುದು ಆನಂದತೀರ್ಥರಿಗೆ ಮಾತ್ರ ಬೇರೆಯವರಿಗಿಲ್ಲ. ಆದ್ದರಿಂದ ಅದರ ರಚನೆಗೆ ಆನಂದತೀರ್ಥರೇ ತೊಡಗಿದ್ದಾರೆ.

ಸಾಕ್ಷಾತ್ ನಾರಾಯಣನೇ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾನೆಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದರು. ಆದರೆ ಲೋಕದಲ್ಲಿ ವೇದವ್ಯಾಸದೇವರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾರೆಂದು ಪ್ರಸಿದ್ಧಿ ಇದೆ. ಈ ಪ್ರಸಿದ್ಧಿಗೆ ವಿರೋಧ ಬರುತ್ತದಲ್ಲವೇ? ನಾರಾಯಣನೇ ವೇದವ್ಯಾಸದೇವರೆಂದು ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ವೇದವ್ಯಾಸದೇವರಿಗೆ ಜನನವಿದೆ. ನಾರಾಯಣನಿಗೆ ಜನನವಿಲ್ಲ. ನಾರಾಯಣನೇ ವೇದವ್ಯಾಸದೇವರಾಗಿದ್ದಲ್ಲಿ ಈ ಗ್ರಂಥವನ್ನು ರಚನೆ ಮಾಡುತ್ತಲೇ ಇರಲಿಲ್ಲ. ಯಾರು ಕೃತಕೃತ್ಯರೋ ಅವರಿಗೆ ಆಗಬೇಕಾದದ್ದು ಯಾವುದೂ ಇರುವುದಿಲ್ಲ. ನಾರಾಯಣನು ಪಡೆಯಬೇಕಾದದ್ದನ್ನೆಲ್ಲ ಪಡೆದಿರುವುದರಿಂದ ಬ್ರಹ್ಮಸೂತ್ರಗಳ ರಚನೆಯಿಂದ ಅವನಿಗೆ ಏನೂ ಆಗಬೇಕಾಗಿಲ್ಲ. ಮತ್ತು ಬ್ರಹ್ಮಮೀಮಾಂಸಾಶಾಸ್ತ್ರವು ದ್ವೇ ವಿದ್ಯೇ ವೇದಿತವ್ಯೇ ಎಂದು ಶ್ರುತಿ ಹೇಳುವಂತೆ ಶ್ರೇಷ್ಠಪ್ರಮಾಣವೆಂದು ಸಿದ್ಧವಾಗಿದೆ ಎಂಬುದಾಗಿ ಈ ಹಿಂದೆ ಉಪಪಾದನೆ ಮಾಡಲಾಯಿತು. ಇದೂ ಕೂಡ ಸರಿಯಲ್ಲ. ಪರಶಬ್ದಕ್ಕೆ ಅನೇಕಾರ್ಥಗಳಿರುವಾಗ ಶ್ರೇಷ್ಠ ಎಂಬ ಅರ್ಥವು ಸಿದ್ಧವಾಗುವುದಿಲ್ಲ. ಆದ್ದರಿಂದ ಸರ್ವೋತ್ಕೃಷ್ಟಪ್ರಾಮಾಣ್ಯವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಹೇಗೆ ಬರುತ್ತದೆ? ಈ ಎರಡು ಪ್ರಶ್ನೆಗಳಿಗೆ ಉತ್ತರವನ್ನು ನೀಡುವುದಕ್ಕಾಗಿ 'ಪ್ರಾದುರ್ಭೂತೋ ಹರಿರ್ವ್ಯಾಸಃ' ಎಂಬ ಮೂರನೆಯ ಅನುವ್ಯಾಖ್ಯಾನಶ್ಲೋಕವು ಹೊರಟಿದೆ.

ಬ್ರಹ್ಮರುದ್ರಾದಿದೇವತೆಗಳು ಲೋಕದಲ್ಲಿ ತತ್ವಜ್ಞಾನವನ್ನು ಸ್ಥಾಪನೆ ಮಾಡುವುದಕ್ಕಾಗಿ ನಾರಾಯಣನನ್ನು ಕುರಿತು ಪ್ರಾರ್ಥನೆ ಮಾಡಿದರು. ಅವರ ಪ್ರಾರ್ಥನೆಯಂತೆ ತತ್ವಜ್ಞಾನಸ್ಥಾಪನೆಗಾಗಿ ಶ್ರೀಮನ್ನಾರಾಯಣನು ವೇದವ್ಯಾಸರೂಪದಿಂದ ಭೂಲೋಕದಲ್ಲಿ ಅವತರಿಸಿದನು. ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದನು. ಈ ಶಾಸ್ತ್ರರಚನೆಯಿಂದ ತನಗೆ ಆಗಬೇಕಾದ ಪ್ರಯೋಜನ ಏನೂ ಇಲ್ಲ. ಕೇವಲ ಸಜ್ಜನರ ಮೇಲಿನ ಕರುಣೆಯಿಂದಷ್ಟೇ ರಚನೆ ಮಾಡಿರುವನು. ಸಜ್ಜನರ ಪ್ರಯೋಜನವೇ ತನ್ನ ಪ್ರಯೋಜನವೆಂದು ಭಾವಿಸಿದನು. ಆದ್ದರಿಂದ ಈ ಶಾಸ್ತ್ರವು ಸರ್ವೋತ್ಕೃಷ್ಟವಾಗಿದೆ. ಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ.

'ಚಕ್ರೇ ಶಾಸ್ತ್ರಮನುತ್ತಮಮ್' ಎಂಬುದಾಗಿ ಅನುವ್ಯಾಖ್ಯಾನಶ್ಲೋಕದಲ್ಲಿ ಪರಮಶ್ರೇಷ್ಠವಾದ ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಾರಾಯಣನು ರಚನೆ ಮಾಡಿದನು ಎಂಬುದಾಗಿ ಹೇಳಿದರು. ಇದನ್ನು ನೋಡಿದಾಗ ಬ್ರಹ್ಮಮೀಮಾಂಸಾಶಾಸ್ತ್ರವೊಂದೇ ಸರ್ವೋತ್ತಮಪ್ರಮಾಣವಾಗಿದೆ ಉಳಿದವುಗಳಲ್ಲ ಎಂದು ತಿಳಿಯುತ್ತದೆ. ಇದು ಹೇಗೆ ಎಂಬುದನ್ನು ಈಗ ಸಮರ್ಥನೆ ಮಾಡುತ್ತಿದ್ದಾರೆ. ಒಟ್ಟು ವಿದ್ಯೆಗಳು ಎರಡು. (1) ಪರವಿದ್ಯೆ (2) ಅಪರ ವಿದ್ಯೆ . ಹೀಗೆ ಆಥರ್ವಣೋಪನಿಷತ್ತು ವಿಭಾಗ ಮಾಡಿದೆ. ಇಷ್ಟನ್ನೇ ಹೇಳಿ ಸುಮ್ಮನಾಗದೇ ಯಾವುದು ಅಪರವಿದ್ಯೆ ಎಂಬುದರ ವಿವರಣೆಯನ್ನು ಕೂಡ ತಾನೇ ಮಾಡಿದೆ. ಆರು ಅಂಗಗಳಿಂದ ಕೂಡಿದ ಋಗಾದಿವೇದಗಳು

  



ಅಪರವಿದ್ಯೆ ಎನಿಸಿವೆ. ಪರಮಾತ್ಮನ ಸರ್ವೋತ್ತಮತ್ವವನ್ನು ಪ್ರತಿಪಾದನ ಮಾಡುವ ಬ್ರಹ್ಮಮೀಮಾಂಸಾಶಾಸ್ತ್ರವು ಪರವಿದ್ಯೆ ಎನಿಸಿದೆ ಎಂದು. ಇಲ್ಲಿರುವ ಪರ ಎಂಬ ಶಬ್ದಕ್ಕೆ ಲೋಕದಲ್ಲಿ ಬಳಕೆಯಿರುವ 'ಬೇರೆ' ಇತ್ಯಾದ್ಯರ್ಥಗಳನ್ನು ವಿವಕ್ಷಿಸಬಾರದು. ಸರ್ವೋತ್ತಮ ಎಂಬರ್ಥವನ್ನೇ ವಿವಕ್ಷಿಸಬೇಕು. ಏಕೆಂದರೆ ಇದಕ್ಕೆ ವಿರುದ್ಧವಾದ ಅಪರ ಎಂಬ ಶಬ್ದವು ಅಧಮ ಎಂಬರ್ಥದಲ್ಲಿ ಪ್ರಯುಕ್ತವಾಗಿರುವಾಗ ಪರ ಎಂಬ ಶಬ್ದಕ್ಕೆ ಉತ್ತಮ ಎಂಬರ್ಥವನ್ನೇ ಹೇಳಬೇಕು.

ಕೆಲವರು ಅಪರೋಕ್ಷಜ್ಞಾನವನ್ನು ಪರವಿದ್ಯೆ ಎನ್ನುವರು; ಉಪನಿಷತ್ತನ್ನು ಪರವಿದ್ಯೆ ಎನ್ನುವರು; ಋಗಾದಿ-ವೇದಗಳನ್ನು ಪರವಿದ್ಯೆ ಎನ್ನುವರು; ಕರ್ಮಮೀಮಾಂಸಾ ದೈವಮೀಮಾಂಸಾ ಇವುಗಳನ್ನು ಪರವಿದ್ಯೆ ಎನ್ನುವರು; ಬೌದ್ಧಾದಿಶಾಸ್ತ್ರಗಳನ್ನೂ ಕೂಡ ಪರವಿದ್ಯೆ ಎನ್ನುವರು. ಆದರೆ ಇವು ಯಾವುದೂ ಕೂಡ ಪರವಿದ್ಯೆ ಎನ್ನಿಸುವುದಿಲ್ಲ. ಬ್ರಹ್ಮಸೂತ್ರಗಳಷ್ಟೇ ಪರವಿದ್ಯೆ ಎನಿಸುತ್ತವೆ. ಏಕೆಂದರೆ ಪರವಿದ್ಯೆಯನ್ನು ಹೇಳುವ ಉಪನಿಷತ್ತಿನ ಪ್ರಕರಣದಲ್ಲಿ ಬೌದ್ಧಾದಿಶಾಸ್ತ್ರಗಳು ಪ್ರಸ್ತುತವೇ ಆಗಿರುವುದಿಲ್ಲ. ವೇದಾದಿಶಾಸ್ತ್ರಗಳನ್ನು ಸ್ವತಃ ತಾನೇ ಅಪರವಿದ್ಯೆಯೆಂದು ಗುರುತಿಸಿದೆ. ಪರಿಶೇಷಾತ್ ಬ್ರಹ್ಮಸೂತ್ರವನ್ನೇ ಪರವಿದ್ಯೆ ಎನ್ನಬೇಕು. ಬ್ರಹ್ಮಮೀಮಾಂಸಾಶಾಸ್ತ್ರವು ಪರಮಾತ್ಮನ ಜ್ಞಾನವನ್ನು ತಂದುಕೊಡುವ ವೇದಗಳಿಗೆ ಅನುಗ್ರಾಹಕವಾಗಿರುವ ಕಾರಣ ಶ್ರೇಷ್ಠವಾಗಿದೆ ಎಂಬುದು ಒಟ್ಟು ಅಭಿಪ್ರಾಯ.

ಋಗಾದಿವೇದಗಳು ಅಪರವಿದ್ಯೆಯಾಗಿರುವುದರಿಂದ ಉಪನಿಷತ್ತುಗಳೂ ಕೂಡ ಅಪರವಿದ್ಯೆ ಎನಿಸುತ್ತವೆ. ಆದರೆ ಅದ್ವೈತಿಗಳು ಉಪನಿಷತ್ತುಗಳನ್ನು ಪರವಿದ್ಯೆ ಎಂದು ವ್ಯಾಖ್ಯಾನ ಮಾಡುತ್ತಾರೆ. ಬ್ರಾಹ್ಮಣರು ಬಂದರು, ಸನ್ಯಾಸಿಗಳು ಕೂಡ ಬಂದರು ಎಂದು ಹೇಳಿದಾಗ ಸನ್ಯಾಸಿಗಳು ಕೂಡ ಬ್ರಾಹ್ಮಣರೇ ಆಗಿದ್ದಾರೆ. ಆದರೂ ಅವರನ್ನು ಪ್ರತ್ಯೇಕವಾಗಿ ಪರಿಗಣಿಸುವತೆ ಉಪನಿಷತ್ತುಗಳು ಋಗಾದಿವೇದಗಳಲ್ಲಿ ಸೇರಿದ್ದರೂ ಕೂಡ ಪ್ರತ್ಯೇಕವಾಗಿ ಪರಿಗಣಿಸಬಹುದು. ಆದ್ದರಿಂದ ಋಗಾದಿವೇದಗಳಿಗೆ ಮಾತ್ರ ಅಪರವಿದ್ಯಾತ್ವವನ್ನು 'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಾಕ್ಯವು ಹೇಳುತ್ತಿದೆ. ಉಪನಿಷತ್ತುಗಳು ಹೇಳುತ್ತಿಲ್ಲ. ಅದ್ವೈತಿಗಳ ಈ ವಾದ ಅಯುಕ್ತವಾಗಿದೆ. ಏಕೆಂದರೆ ಬೇರೆ ಗತಿಯಿಲ್ಲದಾಗ ಮಾತ್ರ ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಬೇಕು. ಆದರೆ ಉಪನಿಷತ್ತನ್ನೂ ಕೂಡ ಋಗಾದಿ ಪದದಿಂದಲೇ ವಿವಕ್ಷಿಸಲು ಬರುವಾಗ ಅಗತಿಕಾಗತಿಯನ್ನು ಹೇಳಬಾರದು.

ಉಪನಿಷತ್ತಿನಿಂದ ಹುಟ್ಟುವ ಜ್ಞಾನವು ಪರವಿದ್ಯೆಯೆಂದು ರಾಮಾನುಜರು ವ್ಯಾಖ್ಯಾನ ಮಾಡುತ್ತಾರೆ. ಇದೂ ಕೂಡ ತಪ್ಪು. 'ದ್ವೇ ವಿದ್ಯೇ ವೇದಿತವ್ಯೇ' ಎಂಬಲ್ಲಿರುವ ವಿದ್ಯಾಶಬ್ದಕ್ಕೆ ಅಪರವಿದ್ಯಾಸಂದರ್ಭದಲ್ಲಿ ಶಾಸ್ತ್ರವೆಂದೂ ಪರವಿದ್ಯಾಸಂದರ್ಭದಲ್ಲಿ ಉಪನಿಷತ್ತಿನಿಂದ ಹುಟ್ಟುವ ಜ್ಞಾನವೆಂದು ಅನೇಕಾರ್ಥವನ್ನು ಕಲ್ಪನೆ ಮಾಡ-ಬೇಕಾಗುತ್ತದೆ. ಆದ್ದರಿಂದ ಉಪನಿಷತ್ತಿನಿಂದ ಕೂಡಿದ ಸಮಸ್ತವೇದವು ಅಪರವಿದ್ಯೆ ಎನಿಸುತ್ತದೆ. ಬ್ರಹ್ಮ-ಮೀಮಾಂಸಾಶಾಸ್ತ್ರವು ಪರವಿದ್ಯೆ ಎನಿಸುತ್ತದೆ. ಆದ್ದರಿಂದ ಈ ಶಾಸ್ತ್ರಕ್ಕೆ ಸರ್ವೋತ್ತಮಪ್ರಾಮಾಣ್ಯವು ಸಿದ್ಧವಾಗುತ್ತದೆ.

'ಪರವಿದ್ಯಾಖ್ಯಂ ಶಾಸ್ತ್ರಂ ಚಕ್ರೇ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಪರವಿದ್ಯಾಖ್ಯಂ ಎಂಬುದಾಗಿ ಅನುವಾದ ಮಾಡಿ ಶಾಸ್ತ್ರಂ ಎಂಬುದಾಗಿ ಅದನ್ನು ವ್ಯಾಖ್ಯಾನ ಮಾಡಿದ್ದು ಹೇಗೆ ಸರಿ? ಎಂಬ ವಿಮರ್ಶೆಯನ್ನು ಪ್ರಕೃತ ಮಾಡುತ್ತಿದ್ದಾರೆ. ವಿದ್ಯಾ ಎಂಬ ಶಬ್ದದ ಅರ್ಥವೇ ಬೇರೆ ಶಾಸ್ತ್ರ ಎಂಬ ಶಬ್ದದ ಅರ್ಥವೇ ಬೇರೆ. ಶಿಷ್ಯಪ್ರಯತ್ನದಿಂದ ಹುಟ್ಟುವ ಜ್ಞಾನಕ್ಕೆ ಸಾಧನವಾದದ್ದು ವಿದ್ಯೆ ಎನಿಸುತ್ತದೆ. ಗುರುಪ್ರಯತ್ನದಿಂದ ಹುಟ್ಟುವ ಉಪದೇಶಕ್ಕೆ ಸಾಧನವಾದದ್ದು ಶಾಸ್ತ್ರ ಎನಿಸುತ್ತದೆ. ಹೀಗೆ ಎರಡೂ ಶಬ್ದಗಳು ವಿಭಿನ್ನವಾದ ಅರ್ಥಗಳನ್ನು ಹೇಳುತ್ತಿವೆ. ಆದ್ದರಿಂದ ವಿದ್ಯೆಯನ್ನೇ ಶಾಸ್ತ್ರವೆಂದು ವ್ಯಾಖ್ಯಾನ ಮಾಡುವುದು ಹೇಗೆ ಸರಿ? ಈ ಪ್ರಶ್ನೆಗೆ ಉತ್ತರ ಹೀಗೆ ತಿಳಿಯಬೇಕು. ಶಿಷ್ಯಪ್ರಯತ್ನ ಹಾಗೂ ಆಚಾರ್ಯಪ್ರಯತ್ನಗಳೆಂಬ ಎರಡು ಅಂಶಗಳನ್ನು ಬಿಟ್ಟು ವೇದನ, ಹಾಗೂ ಶಾಸನಗಳೆರಡರಲ್ಲಿ ಸಮಾನವಾಗಿರುವ ತತ್ವಜ್ಞಾನತ್ವ ಎಂಬ ಧರ್ಮವನ್ನಷ್ಟೇ ಸ್ವೀಕರಿಸಬೇಕು. ಅಂಥ ತತ್ವಜ್ಞಾನಜನಕತ್ವವು ವಿದ್ಯಾಶಬ್ದ ಹಾಗೂ ಶಾಸ್ತ್ರಶಬ್ದಗಳೆರಡರಲ್ಲಿಯೂ ಸಮಾನವಾಗಿದೆ. ಹಾಗಾಗಿ ಪರವಿದ್ಯಾಖ್ಯಂ ಎಂಬುದಾಗಿ ಅನುವಾದ ಮಾಡಿ ಶಾಸ್ತ್ರಂ ಎಂದು ವ್ಯಾಖ್ಯಾನ ಮಾಡಿರುವುದು ಅಸಾಧುವಲ್ಲ.

ಋಗಾದಿವೇದಗಳು ವಿಷ್ಣುವಾಚಕಗಳಾಗದೇ ಇರುವಾಗ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ಅದೇ ಋಗಾದಿವೇದಗಳು ವಿಷ್ಣುವಾಚಕಗಳಾದಾಗ ಪರವಿದ್ಯೆ ಎನಿಸುತ್ತವೆ. ಹೀಗೆ ಸಾಕ್ಷಾತ್ ಭಗವತ್ಪಾದರೇ ಆಥರ್ವಣೋ-ಪನಿಷದ್ಭಾಷ್ಯದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಬ್ರಹ್ಮಮೀಮಾಂಸಾಶಾಸ್ತ್ರಗಳಲ್ಲಿ ಹೇಳಿದ ನ್ಯಾಯಗಳ ಬೆಂಬಲ ಪಡೆದಾಗ ಮಾತ್ರ ವೇದಗಳು ವಿಷ್ಣುವಾಚಕಗಳಾಗಿ ಪರವಿದ್ಯೆ ಎನಿಸುತ್ತವೆ. ನ್ಯಾಯಗಳ ಸಹಕಾರವನ್ನು ಪಡೆಯದೇ ಇದ್ದಾಗ ಅದೇ ವೇದಗಳು ಅಪರವಿದ್ಯೆ ಎನಿಸುತ್ತವೆ. ಹಾಗಾಗಿ ಬ್ರಹ್ಮಸೂತ್ರದ ಬೆಂಬಲವಿಲ್ಲದ ವೇದಾದಿಗಳನ್ನು ಅಪರವಿದ್ಯೆ ಎಂದು ಹೇಳಿದ್ದರಿಂದ ಬ್ರಹ್ಮಸೂತ್ರಗಳೇ ಮುಖ್ಯ ಎಂದು ಹೇಳಿದಂತಾಯಿತು. ಉಪಕಾರಕಪ್ರಾಧಾನ್ಯವಿವಕ್ಷೆಯಿಂದ ಬ್ರಹ್ಮಸೂತ್ರಗಳನ್ನು ಪರವಿದ್ಯೆ ಎಂದು ಕರೆಯಲಾಗಿದೆ. ಹಾಗಾದರೆ ಕೇವಲ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವ ಬರುವುದಿಲ್ಲವೇ ಎಂದರೆ ಇತಿಕರ್ತವ್ಯತಾರೂಪವಾಗಿದ್ದಾಗ ಮಾತ್ರ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವನ್ನು ತಿಳಿಯಬೇಕು. ಪ್ರತ್ಯೇಕವಾದ ಪರವಿದ್ಯಾತ್ವವು ಬ್ರಹ್ಮಸೂತ್ರಗಳಿಗೆ ಇರುವುದಿಲ್ಲ. ಇದರಿಂದ ವೇದಗಳಿಗೆ ಮುಖ್ಯಪರವಿದ್ಯಾತ್ವವಿದೆ. ಬ್ರಹ್ಮಸೂತ್ರಗಳಿಗೆ ಅಮುಖ್ಯವಾದ ಪರವಿದ್ಯಾತ್ವವಿದೆ ಎಂಬುದು ಅರ್ಥಾತ್ ಸಿದ್ಧವಾಗುತ್ತದೆ.

* * * * *



॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

## ಮಂತ್ರಾಲಯಪ್ರಭುಗಳಾದ
## ಶ್ರೀಮದ್‌ರಾಘವೇಂದ್ರತೀರ್ಥಗುರುಸಾರ್ವಭೌಮರಿಂದ
## ವಿರಚಿತವಾದ

# ಪರಿಮಳಗ್ರಂಥ ಪ್ರಾರಂಭ

## ಮಂಗಳಾಚರಣೆ – ಶ್ರೀಪತಿಗೆ ಆನಮಿಪೆ

**ಪೂರ್ಣಾಗಣ್ಯಗುಣೋದಾರಮೂರ್ತಯೇ ಪುಣ್ಯಕೀರ್ತಯೇ।**
**ನಮಃ ಶ್ರೀಪತಯೇ ಭಕ್ತದತ್ತಸ್ವಾನಂದಮೂರ್ತಯೇ ॥೧॥**

ಓ ಲಕ್ಷ್ಮಿಯ ಒಡೆಯನಾದ ನಾರಾಯಣನೇ ! ನೀನು ಪೂರ್ಣವಾದ ಎಣಿಸಲು ಅಶಕ್ಯವಾದ ಉತ್ಕೃಷ್ಟವಾದ ಗುಣಗಳೇ ಶರೀರವಾಗಿ ಉಳ್ಳವನು. ಮಂಗಳಮಯವಾದ ಕೀರ್ತಿಯುಳ್ಳವನು. ಜ್ಞಾನಾನಂದಾತ್ಮಕವಾದ ಶರೀರವನ್ನು ಭಕ್ತರಿಗೆ ನೀಡುವವನು ಆಗಿರುವಿ.

ಅನ್ವಯಾರ್ಥ – ಪೂರ್ಣಾಗಣ್ಯಗುಣೋದಾರಮೂರ್ತಯೇ – ಪೂರ್ಣ= ಪರಿಪೂರ್ಣವಾದ, ಅಗಣ್ಯ= ಎಣಿಸಲು ಅಶಕ್ಯವಾದ, ಗುಣಃ ಗುಣಗಳ, ಉದಾರಃ ಉತ್ಕೃಷ್ಟವಾದ, ಮೂರ್ತಯೇ = ಶರೀರವುಳ್ಳವನಾದ, ಪುಣ್ಯಕೀರ್ತಯೇ = ಮಂಗಳಮಯವಾದ ಕೀರ್ತಿಯುಳ್ಳ, ಭಕ್ತದತ್ತಸ್ವಾನಂದಮೂರ್ತಯೇ - ಭಕ್ತ = ಭಕ್ತರಿಗಾಗಿ, ದತ್ತ = ಪ್ರಕಟಿತವಾದ, ಸ್ವಾನಂದಮೂರ್ತಯೇ = ಜ್ಞಾನಾನಂದಾತ್ಮಕವಾದ ಶರೀರವುಳ್ಳ, ಶ್ರೀಪತಯೇ = ಲಕ್ಷ್ಮೀಪತಿಯಾದ ನಾರಾಯಣನಿಗೆ, ನಮಃ = ನಮಸ್ಕಾರವು.

ವಿಗ್ರಹ – ೧.ಪೂರ್ಣಾಗಣ್ಯಗುಣೋದಾರಮೂರ್ತಯೇ – ಗಣಯಿತುಂ ಯೋಗ್ಯಾಃ ಗಣ್ಯಾಃ ನ ಗಣ್ಯಾಃ ಅಗಣ್ಯಾಃ ಅಗಣ್ಯಾಶ್ಚ ತೇ ಗುಣಾಶ್ಚ ಅಗಣ್ಯಗುಣಾಃ ಪೂರ್ಣಾಶ್ಚಾಸೌ ಅಗಣ್ಯಗುಣಾಶ್ಚ = ಪೂರ್ಣಾಗಣ್ಯಗುಣಾಃ, ಉದಾರಾಚ್ಚ ಸಾ ಮೂರ್ತಿಶ್ಚ ಉದಾರ-







'ಪರವಿದ್ಯಾಖ್ಯಂ ಶಾಸ್ತ್ರಂ ಚಕ್ರೇ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಪರವಿದ್ಯಾಖ್ಯಂ ಎಂಬುದಾಗಿ ಅನುವಾದ ಮಾಡಿ ಶಾಸ್ತ್ರಂ ಎಂಬುದಾಗಿ ಅದನ್ನು ವ್ಯಾಖ್ಯಾನ ಮಾಡಿದ್ದು ಹೇಗೆ ಸರಿ? ಎಂಬ ವಿಮರ್ಶೆಯನ್ನು ಪ್ರಕೃತ ಮಾಡುತ್ತಿದ್ದಾರೆ. ವಿದ್ಯಾ ಎಂಬ ಶಬ್ದದ ಅರ್ಥವೇ ಬೇರೆ ಶಾಸ್ತ್ರ ಎಂಬ ಶಬ್ದದ ಅರ್ಥವೇ ಬೇರೆ. ಶಿಷ್ಯಪ್ರಯತ್ನದಿಂದ ಹುಟ್ಟುವ ಜ್ಞಾನಕ್ಕೆ ಸಾಧನವಾದದ್ದು ವಿದ್ಯೆ ಎನಿಸುತ್ತದೆ. ಗುರುಪ್ರಯತ್ನದಿಂದ ಹುಟ್ಟುವ ಉಪದೇಶಕ್ಕೆ ಸಾಧನವಾದದ್ದು ಶಾಸ್ತ್ರ ಎನಿಸುತ್ತದೆ. ಹೀಗೆ ಎರಡೂ ಶಬ್ದಗಳು ವಿಭಿನ್ನವಾದ ಅರ್ಥಗಳನ್ನು ಹೇಳುತ್ತಿವೆ. ಆದ್ದರಿಂದ ವಿದ್ಯೆಯನ್ನೇ ಶಾಸ್ತ್ರವೆಂದು ವ್ಯಾಖ್ಯಾನ ಮಾಡುವುದು ಹೇಗೆ ಸರಿ? ಈ ಪ್ರಶ್ನೆಗೆ ಉತ್ತರ ಹೀಗೆ ತಿಳಿಯಬೇಕು. ಶಿಷ್ಯಪ್ರಯತ್ನ ಹಾಗೂ ಆಚಾರ್ಯಪ್ರಯತ್ನಗಳೆಂಬ ಎರಡು ಅಂಶಗಳನ್ನು ಬಿಟ್ಟು ವೇದನ, ಹಾಗೂ ಶಾಸನಗಳೆರಡರಲ್ಲಿ ಸಮಾನವಾಗಿರುವ ತತ್ವಜ್ಞಾನತ್ವ ಎಂಬ ಧರ್ಮವನ್ನಷ್ಟೇ ಸ್ವೀಕರಿಸಬೇಕು. ಅಂಥ ತತ್ವಜ್ಞಾನಜನಕತ್ವವು ವಿದ್ಯಾಶಬ್ದ ಹಾಗೂ ಶಾಸ್ತ್ರಶಬ್ದಗಳೆರಡರಲ್ಲಿಯೂ ಸಮಾನವಾಗಿದೆ. ಹಾಗಾಗಿ ಪರವಿದ್ಯಾಖ್ಯಂ ಎಂಬುದಾಗಿ ಅನುವಾದ ಮಾಡಿ ಶಾಸ್ತ್ರಂ ಎಂದು ವ್ಯಾಖ್ಯಾನ ಮಾಡಿರುವುದು ಅಸಾಧುವಲ್ಲ.

ಋಗಾದಿವೇದಗಳು ವಿಷ್ಣುವಾಚಕಗಳಾಗದೇ ಇರುವಾಗ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ಅದೇ ಋಗಾದಿವೇದಗಳು ವಿಷ್ಣುವಾಚಕಗಳಾದಾಗ ಪರವಿದ್ಯೆ ಎನಿಸುತ್ತವೆ. ಹೀಗೆ ಸಾಕ್ಷಾತ್ ಭಗವತ್ಪಾದರೇ ಆಥರ್ವಣೋ -ಪನಿಷದ್ಭಾಷ್ಯದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಬ್ರಹ್ಮಮೀಮಾಂಸಾಶಾಸ್ತ್ರಗಳಲ್ಲಿ ಹೇಳಿದ ನ್ಯಾಯಗಳ ಬೆಂಬಲ ಪಡೆದಾಗ ಮಾತ್ರ ವೇದಗಳು ವಿಷ್ಣುವಾಚಕಗಳಾಗಿ ಪರವಿದ್ಯೆ ಎನಿಸುತ್ತವೆ. ನ್ಯಾಯಗಳ ಸಹಕಾರವನ್ನು ಪಡೆಯದೇ ಇದ್ದಾಗ ಅದೇ ವೇದಗಳು ಅಪರವಿದ್ಯೆ ಎನಿಸುತ್ತವೆ. ಹಾಗಾಗಿ ಬ್ರಹ್ಮಸೂತ್ರದ ಬೆಂಬಲವಿಲ್ಲದ ವೇದಾದಿಗಳನ್ನು ಅಪರವಿದ್ಯೆ ಎಂದು ಹೇಳಿದ್ದರಿಂದ ಬ್ರಹ್ಮಸೂತ್ರಗಳೇ ಮುಖ್ಯ ಎಂದು ಹೇಳಿದಂತಾಯಿತು. ಉಪಕಾರಕಪ್ರಾಧಾನ್ಯವಿವಕ್ಷೆಯಿಂದ ಬ್ರಹ್ಮಸೂತ್ರಗಳನ್ನು ಪರವಿದ್ಯೆ ಎಂದು ಕರೆಯಲಾಗಿದೆ. ಹಾಗಾದರೆ ಕೇವಲ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವ ಬರುವುದಿಲ್ಲವೇ ಎಂದರೆ ಇತಿಕರ್ತವ್ಯತಾರೂಪವಾಗಿದ್ದಾಗ ಮಾತ್ರ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವನ್ನು ತಿಳಿಯಬೇಕು. ಪ್ರತ್ಯೇಕವಾದ ಪರವಿದ್ಯಾತ್ವವು ಬ್ರಹ್ಮಸೂತ್ರಗಳಿಗೆ ಇರುವುದಿಲ್ಲ. ಇದರಿಂದ ವೇದಗಳಿಗೆ ಮುಖ್ಯಪರವಿದ್ಯಾತ್ವವಿದೆ. ಬ್ರಹ್ಮಸೂತ್ರಗಳಿಗೆ ಅಮುಖ್ಯವಾದ ಪರವಿದ್ಯಾತ್ವವಿದೆ ಎಂಬುದು ಅರ್ಥಾತ್ ಸಿದ್ಧವಾಗುತ್ತದೆ.

* * * * *



॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

## ಮಂತ್ರಾಲಯಪ್ರಭುಗಳಾದ
## ಶ್ರೀಮದ್‌ರಾಘವೇಂದ್ರತೀರ್ಥಗುರುಸಾರ್ವಭೌಮರಿಂದ
## ವಿರಚಿತವಾದ

# ಪರಿಮಳಗ್ರಂಥ ಪ್ರಾರಂಭ

## ಮಂಗಳಾಚರಣೆ – ಶ್ರೀಪತಿಗೆ ಆನಮಿಪೆ

ಪೂರ್ಣಾಗಣ್ಯಗುಣೋದಾರಮೂರ್ತಯೇ ಪುಣ್ಯಕೀರ್ತಯೇ ।
ನಮಃ ಶ್ರೀಪತಯೇ ಭಕ್ತದತ್ತಸ್ವಾನಂದಮೂರ್ತಯೇ ॥೧॥

ಓ ಲಕ್ಷ್ಮಿಯ ಒಡೆಯನಾದ ನಾರಾಯಣನೇ ! ನೀನು ಪೂರ್ಣವಾದ ಎಣಿಸಲು ಅಶಕ್ಯವಾದ ಉತ್ಕೃಷ್ಟವಾದ ಗುಣಗಳೇ ಶರೀರವಾಗಿ ಉಳ್ಳವನು. ಮಂಗಳಮಯವಾದ ಕೀರ್ತಿಯುಳ್ಳವನು. ಜ್ಞಾನಾನಂದಾತ್ಮಕವಾದ ಶರೀರವನ್ನು ಭಕ್ತರಿಗೆ ನೀಡುವವನು ಆಗಿರುವಿ.

ಅನ್ವಯಾರ್ಥ – ಪೂರ್ಣಾಗಣ್ಯಗುಣೋದಾರಮೂರ್ತಯೇ – ಪೂರ್ಣ= ಪರಿಪೂರ್ಣವಾದ, ಅಗಣ್ಯ= ಎಣಿಸಲು ಅಶಕ್ಯವಾದ, ಗುಣ= ಗುಣಗಳ, ಉದಾರ= ಉತ್ಕೃಷ್ಟವಾದ, ಮೂರ್ತಯೇ = ಶರೀರವುಳ್ಳವನಾದ, ಪುಣ್ಯಕೀರ್ತಯೇ = ಮಂಗಳಮಯವಾದ ಕೀರ್ತಿಯುಳ್ಳ, ಭಕ್ತದತ್ತಸ್ವಾನಂದಮೂರ್ತಯೇ - ಭಕ್ತ = ಭಕ್ತರಿಗಾಗಿ, ದತ್ತ = ಪ್ರಕಟಿತವಾದ, ಸ್ವಾನಂದಮೂರ್ತಯೇ = ಜ್ಞಾನಾನಂದಾತ್ಮಕವಾದ ಶರೀರವುಳ್ಳ, ಶ್ರೀಪತಯೇ = ಲಕ್ಷ್ಮೀಪತಿಯಾದ ನಾರಾಯಣನಿಗೆ, ನಮಃ = ನಮಸ್ಕಾರವು.

ವಿಗ್ರಹ – ೧.ಪೂರ್ಣಾಗಣ್ಯಗುಣೋದಾರಮೂರ್ತಯೇ – ಗಣಯಿತುಂ ಯೋಗ್ಯಾಃ ಗಣ್ಯಾಃ ನ ಗಣ್ಯಾಃ ಅಗಣ್ಯಾಃ ಅಗಣ್ಯಾಶ್ಚ ತೇ ಗುಣಾಶ್ಚ ಅಗಣ್ಯಗುಣಾಃ ಪೂರ್ಣಶ್ಚಾಸೌ ಅಗಣ್ಯಗುಣಾಶ್ಚ = ಪೂರ್ಣಾಗಣ್ಯಗುಣಾಃ, ಉದಾರಾಚ್ಚ ಸಾ ಮೂರ್ತಿಶ್ಚ ಉದಾರ–





ಮೂರ್ತಿಃ, ಪೂರ್ಣಾಗಣ್ಯಗುಣೈಃ ಉದಾರಮೂರ್ತಿಃ ಯಸ್ಯ ಸಃ = ಪೂರ್ಣಾಗಣ್ಯ-ಗುಣೋದಾರಮೂರ್ತಿಃ, ತಸ್ಮೈ = ಪೂಣಾಗಣ್ಯಗುಣೋದಾರಮೂರ್ತಯೇ ॥

೨.ಪುಣ್ಯಕೀರ್ತಯೇ – ಪುಣ್ಯಾ ಕೀರ್ತಿಃ ಯಸ್ಯ ಸಃ ಪುಣ್ಯಕೀರ್ತಿಃ ತಸ್ಮೈ ಪುಣ್ಯಕೀರ್ತಯೇ ।

೩.ನಮಃ - ಅವ್ಯಯ. ಈ ಅವ್ಯಯದ ಯೋಗವಿದ್ದಾಗ ಚತುರ್ಥೀವಿಭಕ್ತಿಯನ್ನು ಹೇಳ-ಬೇಕೆಂದು 'ನಮಃ ಸ್ವಸ್ತಿಸ್ವಾಹಾಸ್ವಧಾಲಂ ವಷಡ್ಯೋಗಾಚ್ಚ' ಎಂಬ ಸೂತ್ರವು ವಿಧಾನ ಮಾಡಿದೆ.

೪.ಶ್ರೀಪತಯೇ = ಶ್ರಯಂತೇ ಯೋಗಿನಃ ಅಸ್ಯಾಂ ಇತಿ ಶ್ರೀಃ ಶ್ರಿಯಃ ಪತಿಃ ಶ್ರೀಪತಿಃ ತಸ್ಮೈ ಶ್ರೀಪತಯೇ ।

೫.ಭಕ್ತದತ್ತಸ್ವಾನಂದಮೂರ್ತಯೇ – ಭಕ್ತೇಭ್ಯಃ ದತ್ತಾ ಸ್ವಾನಂದಮೂರ್ತಿಃ ಯೇನ ಸಃ ಭಕ್ತದತ್ತಸ್ವಾನಂದಮೂರ್ತಿಃ, ತಸ್ಮೈ ಭಕ್ತದತ್ತಸ್ವಾನಂದಮೂರ್ತಯೇ ॥

ವಿಶೇಷವಿಚಾರ - ಶ್ರೀವೇದವ್ಯಾಸದೇವರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿರುವರು. ಅದಕ್ಕೆ ಜಗದ್ಗುರು ಮಧ್ವಾಚಾರ್ಯರು ಅನುವ್ಯಾಖ್ಯಾನ ಎಂಬ ಭಾಷ್ಯವನ್ನು ಬರೆದಿರುವರು. ಅದಕ್ಕೆ ಶ್ರೀಜಯತೀರ್ಥರು ಶ್ರೀಮನ್ನ್ಯಾಯಸುಧಾ ಎಂಬ ಟೀಕೆಯನ್ನು ಬರೆದಿರುವರು. ಅದಕ್ಕೆ ಶ್ರೀರಾಘವೇಂದ್ರ-ತೀರ್ಥರು ಪರಿಮಳ ಎಂಬ ವ್ಯಾಖ್ಯಾನವನ್ನು ರಚನೆ ಮಾಡಲು ಪ್ರಾರಂಭಿಸಿರುವರು. ಶ್ರೀಮನ್ನ್ಯಾಯ-ಸುಧಾ ಗ್ರಂಥವು ಶ್ರೀಕರಗ್ರಂಥ ಎಂದೇ ಪ್ರಸಿದ್ಧಿ ಪಡೆದಿದೆ. ಮಂಗಳಾಚರಣೆಯು ಶ್ರೀಪತಿಯಾದ ನಾರಾ-ಯಣನ ನಮಸ್ಕಾರ ರೂಪವಾಗಿರುವುದರಿಂದ ಇದನ್ನು ಅಧ್ಯಯನ ಮಾಡುವವನು ಎಲ್ಲ ಬಗೆಯ ಸಂಪತ್ತನ್ನು ಹೊಂದುತ್ತಾನೆಂಬುದರಲ್ಲಿ ಸಂಶಯವಿಲ್ಲ. ಹೀಗೆ ಶ್ರೀಜಯತೀರ್ಥಮುನಿಗಳು ಯಾವ ಶ್ರೀಪತಿಗೆ ನಮಸ್ಕಾರವನ್ನು ಮಾಡುವ ಮೂಲಕ ನ್ಯಾಯಸುಧೆಯನ್ನು ಬರೆಯಲು ಪ್ರಾರಂಭಿಸಿದ್ದಾರೋ ಅದೇ ಶ್ರೀಪತಿಯಾದ ನಾರಾಯಣನಿಗೆ ನಮಸ್ಕಾರ ಮಾಡುವ ಮೂಲಕ ನ್ಯಾಯಸುಧೆಗೆ ವ್ಯಾಖ್ಯಾನ-ವನ್ನು ಮಾಡಲು ರಾಯರು ಪ್ರಾರಂಭಿಸಿದ್ದಾರೆ.

ಗ್ರಂಥಾರಂಭದಲ್ಲಿ ವಾಙ್ಮನಸ್ಸುಗಳಿಗೆ ಅಭಿಮಾನಿದೇವತೆಯಾದ ಲಕ್ಷ್ಮೀದೇವಿಯನ್ನು ಅವಶ್ಯವಾಗಿ ನಮಸ್ಕಾರ ಮಾಡಲೇಬೇಕು. ಅದಕ್ಕಾಗಿ ಪರಿಮಳಾಚಾರ್ಯರು 'ಶ್ರೀಪತಯೇ' ಎಂಬುದಾಗಿ ಲಕ್ಷ್ಮೀ-ಸಹಿತನಾದ ನಾರಾಯಣನನ್ನು ನಮಸ್ಕಾರ ಮಾಡುತ್ತಿದ್ದಾರೆ. ಅಂತಹ ಲಕ್ಷ್ಮೀಪತಿಯಾದ ನಾರಾಯಣ-ನಲ್ಲಿ ಅನಂತಗುಣಗಳಿವೆ. ಮುಖ್ಯವಾದ ಮೂರು ಗುಣಗಳನ್ನು ಪ್ರಕೃತ ಗ್ರಂಥಕಾರರು ಉಲ್ಲೇಖ ಮಾಡುತ್ತಿದ್ದಾರೆ.

೧) **ಪೂರ್ಣಾಗಣ್ಯಗುಣೋದಾರಮೂರ್ತಯೇ** – ನಾರಾಯಣನು ಪೂರ್ಣವಾದ ಗುಣ-ಶರೀರವುಳ್ಳವನು ಎಂದಷ್ಟೇ ಹೇಳಿದರೆ ಸಾಕು ಅಗಣ್ಯವಾದ ಗುಣಗಳುಳ್ಳವನು ಎಂದು ಏಕೆ ಹೇಳ-ಬೇಕು? ಎಂದರೆ ಲಕ್ಷ್ಮೀ, ಬ್ರಹ್ಮ ಮೊದಲಾದ ದೇವತೆಗಳೂ ಕೂಡ ಅವರವರ ಯೋಗ್ಯತೆಗೆ ಅನುಗುಣವಾಗಿ ಪೂರ್ಣವಾದ ಗುಣವುಳ್ಳವರೇ ಆಗಿದ್ದಾರೆ. ಅದಕ್ಕಾಗಿ ಅಗಣ್ಯ ಎಂಬ ವಿಶೇಷಣವನ್ನು ನೀಡಿದ್ದಾರೆ. ಲಕ್ಷ್ಮೀ ಬ್ರಹ್ಮ ಮೊದಲಾದವರ ಗುಣಗಳು ಅಗಣ್ಯವಾಗಿರದ ಕಾರಣ ದೋಷಕ್ಕೆ ಅವಕಾಶ-ವಿಲ್ಲ. ಲಕ್ಷ್ಮ್ಯಾದಿಗಳ ಗುಣವನ್ನು ಎಣಿಸಲು ಸಾಧ್ಯವಿರುವುದರಿಂದ ಅಗಣ್ಯತ್ವವೆಂಬ ವಿಶೇಷಣವು ಅಲ್ಲಿ ಬರುವುದಿಲ್ಲ. ಅಥವಾ ಪರಮಾತ್ಮನ ಒಂದೊಂದು ಗುಣಗಳೂ ಕೂಡ ಎಣಿಸಲು ಅಶಕ್ಯವಾಗಿವೆ. ಲಕ್ಷ್ಮ್ಯಾದಿಗಳ ಪ್ರತಿಯೊಂದು ಗುಣಗಳು ಎಣಿಸಲು ಅಶಕ್ಯವಲ್ಲದ ಕಾರಣ ಅತಿವ್ಯಾಪ್ತಿದೋಷಕ್ಕೆ ಅವ-ಕಾಶವಿಲ್ಲ.

ಲಕ್ಷ್ಮ್ಯಾದಿಗಳಲ್ಲಿರುವ ಗುಣಗಳು ಕೂಡ ಅವರಿಗಿಂತ ಹೀನರಾದವರು ಎಣಿಸಲಾರರು. ಆದ್ದರಿಂದ ಪೂರ್ಣಾಗಣ್ಯಗುಣತ್ವವು ಲಕ್ಷ್ಮೀದೇವಿಯಲ್ಲಿಯೂ ಕೂಡ ಇದೆಯಲ್ಲವೇ? ಎಂಬುದಾಗಿ ಅತಿ-ಪ್ರಸಂಗವು ಪ್ರಾಪ್ತವಾದರೆ 'ಉದಾರಮೂರ್ತಯೇ' ಎಂಬ ವಿಶೇಷ್ಯವಾಚಕ ಪದವನ್ನು ಹೇಳಿದ್ದಾರೆ. ಲಕ್ಷ್ಮ್ಯಾದಿಗಳ ಶರೀರವು ಸರ್ವೋತ್ಕೃಷ್ಟವಾಗಿಲ್ಲ. ಯಾರ ಶರೀರವು ಸರ್ವೋತ್ಕೃಷ್ಟವಾಗಿದ್ದು ಪೂರ್ಣ–ವಾದ ಅಗಣ್ಯಗುಣಗಳಿಗೆ ಆಶ್ರಯವಾಗಿದೆಯೋ ಆ ಶರೀರವುಳ್ಳವನು ನಾರಾಯಣನೇ ಹೊರತು ಲಕ್ಷ್ಮ್ಯಾದಿಗಳಲ್ಲ. ಆದ್ದರಿಂದ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

೨) **ಪೂರ್ಣಕೀರ್ತಯೇ** – ನಾರಾಯಣನ ಚರಿತ್ರೆಯನ್ನು ಕೇಳುವುದರಿಂದ ಎಂಥವರೂ ಕೂಡ ಪುಣ್ಯಸಂಪಾದನೆಯನ್ನು ಮಾಡುತ್ತಾರೆ. ಆದ್ದರಿಂದ ನಾರಾಯಣನಿಗೆ 'ಪುಣ್ಯಕೀರ್ತಿ' ಎಂದು ಹೆಸರು. ಪುಣ್ಯಶಬ್ದಕ್ಕೆ ಮಂಗಳ ಎಂದರ್ಥ. ಮಂಗಳದಾಯಕವಾದ ಕೀರ್ತಿಶಾಲಿಯಾದವನು ಎಂಬುದು ಇದರ ಅಭಿಪ್ರಾಯ. ಇತಿಹಾಸ ಪುರಾಣಗಳಿಂದ ಆಮೂಲಾಗ್ರವಾಗಿ ಮಂಗಳಮಯವಾದ ಕೀರ್ತಿಯನ್ನು ಹೊಂದಿದವನಾಗಿದ್ದಾನೆ.

ಶ್ರೀಪತಯೇ – ಗ್ರಂಥಾರಂಭದಲ್ಲಿ ಲಕ್ಷ್ಮೀದೇವಿಯ ನಮಸ್ಕಾರವು ಆತ್ಯವಶ್ಯವಾಗಿರುವುದರಿಂದ ಶ್ರೀಪತಯೇ ಎಂಬುದಾಗಿ ಹೇಳಿದ್ದಾರೆ. 'ತಂ ಯಥಾ ಯಥಾ ಉಪಾಸತೇ ತದೇವ ಭವತಿ' ಎಂಬ ನ್ಯಾಯದಂತೆ ಭಗವಂತನು ಲಕ್ಷ್ಮಿಯ ಒಡೆಯನೆಂದು ಉಪಾಸನೆಗೈದರೆ ಎಲ್ಲಾ ಬಗೆಯ ಸಂಪತ್ತುಗಳು ಪ್ರಾಪ್ತವಾಗುತ್ತವೆ. ಆದ್ದರಿಂದ ಗ್ರಂಥಾರಂಭದಲ್ಲಿ ಶ್ರೀಪತಿಯಾದ ನಾರಾಯಣನನ್ನು ನಮಿಸಿರುವುದರಿಂದ ಐಹಿಕಾಮುಷ್ಮಿಕಸಂಪತ್ತುಗಳು ಪ್ರಾಪ್ತವಾಗುತ್ತವೆ.





ಭಕ್ತದತ್ತಸ್ವಾನಂದಮೂರ್ತಯೇ – ತನ್ನ ಆನಂದಮಯರೂಪವನ್ನು ಭಕ್ತರೆದುರು ಪ್ರಕಟ-ಪಡಿಸುತ್ತಾನೆ. ಆದ್ದರಿಂದ ಇವನು 'ಭಕ್ತದತ್ತಸ್ವಾನಂದಮೂರ್ತಿ' ಎಂದು ಕರೆಸಿಕೊಳ್ಳುತ್ತಾನೆ. ಅಥವಾ ಯಾವ ಭಕ್ತರು ತನ್ನನ್ನು ಅಖಂಡವಾಗಿ ಉಪಾಸನೆಗೈಯ್ಯುತ್ತಾರೋ ಅಥ ಭಕ್ತರಿಗೆ ಆನಂದಮಯವಾದ ಶರೀರವನ್ನು ನೀಡುತ್ತಾನೆ.

## ನಾಲ್ಮೊಗನಿಗೆ ನಮನ

ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ ।
ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿನೇ ಬ್ರಹ್ಮಣೇ ನಮಃ ॥೨॥

ಓ ಸರ್ವೋತ್ತಮನಾದ ಬ್ರಹ್ಮನೇ! ನಿನ್ನ ಆ ಸ್ವರೂಪ ಪರಿಪೂರ್ಣವಾಗಿದೆ. ಎಣಿಸಲು ಅಶಕ್ಯವಾದ ಗುಣಗಳ ಗಣಿಯಾಗಿದೆ. ಉತ್ಕೃಷ್ಟವಾಗಿದೆ. ನಿತ್ಯನೂತನವಾಗಿದೆ. ಅತಿಸುಂದರ-ವಾಗಿದೆ. ಆ ನಿನ್ನ ಕೀರ್ತಿ ಲಕ್ಷ್ಮೀ, ಚತುರ್ಮುಖಬ್ರಹ್ಮ, ಗರುಡ, ಇಂದ್ರ ಮೊದಲಾದವರಿಂದ ಸ್ತುತ್ಯವಾಗಿದೆ. ಇದೋ ನಿನಗೆ ನನ್ನ ಭಕ್ತಿಯ ನಮಸ್ಕಾರ.

ಅನ್ವಯಾರ್ಥ – ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ – ಪೂರ್ಣ = ಪರಿಪೂರ್ಣವಾದ, ಅಗಣ್ಯ = ಎಣಿಸಲು ಅಶಕ್ಯವಾದ, ಗುಣ = ಗುಣಗಳುಳ್ಳ, ಉದಾರ = ಉತ್ಕೃಷ್ಟ-ವಾದ, ನಿತ್ಯ = ಹುಟ್ಟುಸಾವುಗಳಿಲ್ಲದ, ಸುಂದರ = ಮನೋಹರವಾದ, ಮೂರ್ತಿನೇ = ಶರೀರವುಳ್ಳ, ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿನೇ – ಶ್ರೀ = ಲಕ್ಷ್ಮೀ, ಬ್ರಹ್ಮ = ಚತುರ್ಮುಖಬ್ರಹ್ಮ, ವಿ = ಗರುಡ, ಇಂದ್ರ = ದೇವೇಂದ್ರ, ಪೂರ್ವ = ಇವರೇ ಮೊದಲಾದ ದೇವತೆಗಳಿಂದ, ಈಡ್ಯ = ಸ್ತುತಿಸಲ್ಪಟ್ಟ, ಕೀರ್ತಿನೇ = ಕೀರ್ತಿಶಾಲಿಯಾದ, ಬ್ರಹ್ಮಣೇ = ಪರಬ್ರಹ್ಮನಿಗೆ, ನಮಃ = ನಮಸ್ಕಾರವು.

ವಿಗ್ರಹವಾಕ್ಯ – ೧.ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ – ಗಣಯಿತುಂ ಯೋಗ್ಯಾಃ ಗಣ್ಯಾಃ ನ ಗಣ್ಯಾಃ ಅಗಣ್ಯಾಃ ಅಗಣ್ಯಾಶ್ಚ ತೇ ಗುಣಾಶ್ಚ ಅಗಣ್ಯಗುಣಾಃ ಪೂರ್ಣಾಶ್ಚ ತೇ ಅಗಣ್ಯಗುಣಾಶ್ಚ ಪೂರ್ಣಾಗಣ್ಯಗುಣಾಃ, ಸುಂದರಾ ಚ ಸಾ ಮೂರ್ತಿಶ್ಚ ಸುಂದರಮೂರ್ತಿಃ ನಿತ್ಯಂ ಸುಂದರಮೂರ್ತಿಃ ನಿತ್ಯಸುಂದರಮೂರ್ತಿಃ, ಉದಾರಾ ಚ ಸಾ ನಿತ್ಯಸುಂದರಮೂರ್ತಿಶ್ಚ ಉದಾರನಿತ್ಯಸುಂದರಮೂರ್ತಿಃ, ಪೂರ್ಣಾಗಣ್ಯಗುಣೈಃ ಉದಾರ-ನಿತ್ಯಸುಂದರಮೂರ್ತಿಃ ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿಃ, ಪೂರ್ಣಾ-

ಗಣ್ಯಗುಣೋದಾರನಿತ್ಯಸುಂದರಮೂರ್ತಿಃ ಅಸ್ಯ ಅಸ್ತೀತಿ ಪೂರ್ಣಾಗಣ್ಯಗುಣೋದಾರನಿತ್ಯ-ಸುಂದರಮೂರ್ತಿ, ತಸ್ಮಿನ್ ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ.

೨.ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿನೇ - ಶ್ರೀಶ್ಚ ಬ್ರಹ್ಮ ಚ ವೀಂದ್ರಶ್ಚ ಶ್ರೀಬ್ರಹ್ಮವೀಂದ್ರಾಃ ಶ್ರೀಬ್ರಹ್ಮವೀಂದ್ರಾಃ ಪೂರ್ವೇ ಯೇಷಾಂ ತೇ ಶ್ರೀಬ್ರಹ್ಮವೀಂದ್ರಪೂರ್ವಾಃ, ಶ್ರೀಬ್ರಹ್ಮವೀಂದ್ರ-ಪೂರ್ವೈಃ ಈಡ್ಯಾ ಕೀರ್ತಿಃ ಅಸ್ಯ ಅಸ್ತೀತಿ ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿ, ತಸ್ಮೈ ಶ್ರೀಬ್ರಹ್ಮ-ವೀಂದ್ರಪೂರ್ವೇಡ್ಯಕೀರ್ತಿನೇ.

ವಿಶೇಷವಿಚಾರ – ಹಿಂದಿನ ಮಂಗಳಶ್ಲೋಕದಲ್ಲಿ ನ್ಯಾಯಸುಧೆಗೆ ಅನುಗುಣವಾಗಿ ಶ್ರೀಪತಿಗೆ ನಮಸ್ಕಾರವನ್ನು ಮಾಡಿದರು. ಈ ಶ್ಲೋಕದಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಮುಖ್ಯವಾಗಿ ಪ್ರತಿ-ಪಾದ್ಯನಾದ ಬ್ರಹ್ಮನನ್ನು ನಮಿಸುತ್ತಿದ್ದಾರೆ. ಒಬ್ಬನೇ ಭಗವಂತನನ್ನು ಲಕ್ಷ್ಮೀಪತಿತ್ವೇನ ನಮಿಸುವ ಮೂಲಕ ಎಲ್ಲಾ ಬಗೆಯ ಸಂಪತ್ತುಗಳು ಗ್ರಂಥವನ್ನು ಪಠಿಸುವವರಿಗೆ ಒದಗಲಿ ಎಂಬ ದೃಷ್ಟಿಯಿಂದ ನಾರಾಯಣ-ರೂಪವನ್ನು ನಮಿಸಿದರು. ಈಗ ಅದೇ ಭಗವಂತನನ್ನು ಗ್ರಂಥಪ್ರತಿಪಾದ್ಯನಾಗಿ ನಮಿಸುತ್ತಿದ್ದಾರೆ. ಅದ್ವೈತಿಗಳು ಪರಬ್ರಹ್ಮನೇ ಬೇರೆ ಲಕ್ಷ್ಮೀಪತಿಯೇ ಬೇರೆ ಎನ್ನುವರು. ಹಾಗೆ ಸರ್ವಥಾ ಹೇಳಬಾರದು. ಲಕ್ಷ್ಮೀಪತಿಯೇ ಪರಬ್ರಹ್ಮನಾಗಿದ್ದಾನೆ ಎಂಬುದನ್ನು ತಿಳಿಸುವುದಕ್ಕಾಗಿ ಪ್ರಥಮಶ್ಲೋಕದಲ್ಲಿ ಲಕ್ಷ್ಮೀಪತಿ-ಯನ್ನು ಯಾವ ವಿಶೇಷಣಗಳಿಂದ ಸ್ತುತಿಸಿದ್ದಾರೋ ಅಂತಹ ವಿಶೇಷಣಗಳಿಂದಲೇ ಪರಬ್ರಹ್ಮನನ್ನೂ ಕೂಡ ಸ್ತುತಿಸುತ್ತಿದ್ದಾರೆ.

ಈ ಶ್ಲೋಕದಲ್ಲಿ 'ಬ್ರಹ್ಮಣೇ' ಎಂಬ ಪದವು ವಿಶೇಷ್ಯವಾಚಕವಾದ ಪದವಾಗಿದೆ. ಅದಕ್ಕೆ 'ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ' ಎಂಬುದು ಹಾಗೂ ಶ್ರೀಬ್ರಹ್ಮವೀಂದ್ರ-ಪೂರ್ವೇಡ್ಯಕೀರ್ತಿನೇ ಎಂಬುದೂ ವಿಶೇಷಣವಾಗಿವೆ. ವಿಶೇಷ್ಯವಾಚಕವಾದ ಪದವು ನಪುಂಸಕಲಿಂಗದ ಚತುರ್ಥೀವಿಭಕ್ತಿಯಲ್ಲಿರುವುದರಿಂದ ಈ ವಿಶೇಷಣಪದಗಳೂ ನಪುಂಸಕಲಿಂಗದ ಚತುರ್ಥೀ-ವಿಭಕ್ತಿಯಲ್ಲಿಯೇ ಪ್ರಯೋಗಿಸಲ್ಪಟ್ಟಿವೆ. ಆದ್ದರಿಂದ ಮೂರ್ತಿನೇ ಹಾಗೂ ಕೀರ್ತಿನೇ ಎಂಬ ಪ್ರಯೋಗ-ವನ್ನು ಮಾಡಿರುತ್ತಾರೆ.

ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ – ಅದ್ವೈತಿಗಳು ಬ್ರಹ್ಮನಿಗೆ ಶರೀರ-ವಿಲ್ಲ; ಇಂದ್ರಿಯವಿಲ್ಲ; ಸೌಂದರ್ಯ ಮೊದಲಾದ ಗುಣಗಳೂ ಕೂಡ ಇಲ್ಲ; ಇತ್ಯಾದಿಯಾಗಿ ಹೇಳು-ತ್ತಾರೆ. ಅವರ ಮತವು ಅಯುಕ್ತವಾಗಿದೆ ಎಂಬುದನ್ನು ಪೂರ್ಣಾಗಣ್ಯ ಇತ್ಯಾದಿ ವಿಶೇಷಣದಿಂದ ಸೂಚನೆ





ಮಾಡಿದ್ದಾರೆ. ಬ್ರಹ್ಮನ ಯಾವ ಸ್ವರೂಪವಿದೆಯೋ ಅದು ಪರಿಪೂರ್ಣವಾದ ಎಣಿಸಲು ಅಶಕ್ಯವಾದ ಗುಣಗಳುಳ್ಳದ್ದಾಗಿದೆ. ಸರ್ವೋತ್ತಮವಾಗಿದೆ. ಹುಟ್ಟು ಸಾವುಗಳಿಲ್ಲದ್ದಾಗಿದೆ. ಮನೋಹರವಾಗಿದೆ ಎಂಬುದಾಗಿ ವರ್ಣಿಸಿದ್ದಾರೆ. ಬ್ರಹ್ಮನಿಗೂ ಅವನ ಶರೀರಕ್ಕೂ ಅಭೇದವಿದೆ ಎಂಬುದನ್ನು ಕೂಡ ಈ ವಿಶೇಷಣದಿಂದ ತಿಳಿಸಿದ್ದಾರೆ. ಆ ಬ್ರಹ್ಮನ ಶರೀರದಲ್ಲಿ ಪೂರ್ಣತ್ವ, ಅಗಣ್ಯಗುಣತ್ವ, ಉದಾರತ್ವ, ನಿತ್ಯತ್ವ, ಸುಂದರತ್ವ ಎಂಬ ಅಸಾಧಾರಣವಾದ ಗುಣಗಳಿವೆ ಎಂಬುದಾಗಿ ವರ್ಣಿಸಿದ್ದಾರೆ.

ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿನೇ - ಬ್ರಹ್ಮನ ಯಾವ ಚರಿತ್ರೆಯಿದೆಯೋ ಅದನ್ನು ನಿರಂತರವಾಗಿ ಸಕಲ ತತ್ತ್ವಾಭಿಮಾನಿ ದೇವತೆಗಳು ವರ್ಣಿಸುತ್ತಲೇ ಇರುತ್ತಾರೆ. ದೇವಲೋಕದಲ್ಲಿ ಇಂದ್ರದೇವರು, ಅದರ ಮೇಲಿನ ಲೋಕಗಳಲ್ಲಿ ಗರುಡದೇವರು, ಸತ್ಯಲೋಕದಲ್ಲಿ ಚತುರ್ಮುಖ–ಬ್ರಹ್ಮದೇವರು, ಬ್ರಹ್ಮನ ಕೀರ್ತಿಯನ್ನು ನಿರಂತರ ಸ್ತುತಿಸುತ್ತಲೇ ಇರುತ್ತಾರೆ. ಅನಾದ್ಯನಂತಕಾಲದಲ್ಲಿ ಲಕ್ಷ್ಮೀದೇವಿಯು ಕೂಡ ಇದೇ ಬ್ರಹ್ಮನ ಕೀರ್ತಿಯನ್ನು ಸ್ತುತಿಸುತ್ತಾಳೆ. ಇಂಥ ಮಹಾಮಹಿಮೋ–ಪೇತನಾದ ಬ್ರಹ್ಮನ ಕೀರ್ತಿಯನ್ನು ಹೊಗಳುವುದಕ್ಕಾಗಿಯೇ ಈ ಬ್ರಹ್ಮಮೀಮಾಂಸಾಶಾಸ್ತ್ರವೂ ಕೂಡ ಹೊರಟಿದೆ.

ಬ್ರಹ್ಮಣೇ - ಬ್ರಹ್ಮಶಬ್ದಕ್ಕೆ ಗುಣಪರಿಪೂರ್ಣನಾದವನು ಎಂದರ್ಥ. 'ಬೃಹ ಋದ್ಧೌ' ಎಂಬ ಧಾತು–ವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳುವಾಗಲೇ ಅವನು ಗುಣಪರಿಪೂರ್ಣನಾಗಿದ್ದಾನೆಂದು ಸೂತ್ರ–ಕಾರರು ಹೇಳಿದ್ದಾರೆ. ಇದರಿಂದಲೇ ಬ್ರಹ್ಮನನ್ನು ಸೂತ್ರಕಾರರು ಸ್ತುತಿಸಿದಂತಾಯಿತು. ಆ ಕ್ರಮದಲ್ಲೇ ಪ್ರಕೃತ ಬ್ರಹ್ಮಶಬ್ದವನ್ನು ಪ್ರಯೋಗ ಮಾಡುವ ಮೂಲಕ ಈ ಮಂಗಳಪದ್ಯದಲ್ಲಿ ಬ್ರಹ್ಮನನ್ನು ಸ್ತುತಿಸಿದ್ದಾರೆ.

## ಮಧ್ವರಿಗೆ ಶರಣೆಂಬೆ

ವಿಶ್ವಂ ಯಸ್ಯ ವಶೇ ಸರ್ವಮನಿಶಂ ಶಂಕರಾದಿಕಮ್ ।
ತಸ್ಯ ವಾಯೋಸ್ತೃತೀಯಾಂಶಮ್ ಆಶ್ರಯೇ ಶಮವಾಪ್ತಯೇ ॥೩॥

ರುದ್ರಾದಿಗಳಿಂದ ಕೂಡಿದ ಯಾವ ಜಗತ್ತು ನಿರಂತರ ಯಾರ ಅಧೀನವೋ ಅಂಥ ವಾಯುದೇವರ ಮೂರನೆಯ ಅವತಾರ ಪುರುಷರಾದ ಜಗದ್ಗುರು ಶ್ರೀಮಧ್ವಾಚಾರ್ಯರನ್ನೇ ಅನನ್ಯವಾಗಿ ಆಶ್ರಯಿಸುತ್ತೇನೆ. ಇದರಿಂದ ಶಾಶ್ವತವಾದ ಸುಖವು ಎನಗೆ ದೊರಕಲಿ.





ಅನ್ವಯಾರ್ಥ – ಶಂಕರಾದಿಕಂ = ರುದ್ರಾದಿಗಳಿಂದ ಕೂಡಿದ, ಸರ್ವಂ ವಿಶ್ವಂ = ಸಮಸ್ತ ಜಗತ್ತು, ಅನಿಶಂ = ನಿರಂತರವಾಗಿ, ಯಸ್ಯ = ಯಾರ, ವಶೇ = ಅಧೀನವಾಗಿದೆಯೋ, ತಸ್ಯ = ಅಂಥ, ವಾಯೋಃ = ವಾಯುದೇವರ, ತೃತೀಯಾಂಶಂ = ಮೂರನೆಯ ಅವತಾರರೆನಿಸಿದ ಶ್ರೀಮಧ್ವಾಚಾರ್ಯ-ರನ್ನು, ಶಂ = ಸುಖದ, ಪ್ರಾಪ್ತಯೇ = ಪ್ರಾಪ್ತಿಗೋಸ್ಕರ, ಆಶ್ರಯೇ = ಆಶ್ರಯಿಸುತ್ತೇನೆ.

ವಿಗ್ರಹ – ೧.ಶಂಕರಾದಿಕಂ ಶಂಕರಃ ಆದಿಃ ಯಸ್ಯ ತತ್ ಶಂಕರಾದಿಕಂ.

೨.ತೃತೀಯಾಂಶಂ - ತೃತೀಯಃ ಅಂಶಃ ಯಸ್ಯ ಸಃ ತೃತೀಯಾಂಶಃ, ತಂ ತೃತೀಯಾಂಶಂ.

೩.ಆಶ್ರಯೇ – ಆಜ್ ಇತ್ಯುಪಸರ್ಗಪೂರ್ವಕಾತ್ 'ಶ್ರಿಞ್ ಸೇವಾಯಾಂ' ಇತಿ ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇ ಪದಿನಃ ಲಟಿ ಉತ್ತಮಪುರುಷೇ ಏಕವಚನೇ ಆಶ್ರಯೇ ಇತಿ ರೂಪಮ್ ।

೪.ಅವಾಪ್ತಯೇ – 'ಅವ' ಇತ್ಯುಪಸರ್ಗಪೂರ್ವಕಾತ್ 'ಅಪ್ಲೃ ವ್ಯಾಪ್ತೌ' ಇತಿ ಧಾತೋಃ ಕ್ತಿನ್ ಪ್ರತ್ಯಯಾಂತಃ ಶಬ್ದಃ. ಚತುರ್ಥೀ ಏಕವಚನ.

ವಿಶೇಷವಿಚಾರ – ಈ ಶ್ಲೋಕದಲ್ಲಿ ಶ್ರೀಮಧ್ವಾಚಾರ್ಯರನ್ನು ಸ್ತುತಿಸುತ್ತಿದ್ದಾರೆ. ಇವರು ಕೇವಲ ಭೂಲೋಕಕ್ಕೆ ಗುರುಗಳಲ್ಲ. ರುದ್ರಾದಿ ದೇವತೆಗಳಿಂದ ಕೂಡಿದ ಸಮಸ್ತಜಗತ್ತಿಗೆ ಗುರುಗಳಾಗಿದ್ದಾರೆ. ಚತುರ್ದಶಲೋಕಗಳಿಗೂ ಗುರುಗಳಾಗಿದ್ದಾರೆ. ಈ ಗುರುಪದವಿ ಕಲ್ಪ ಮುಗಿಯುವ ತನಕ ಶಾಶ್ವತ-ವಾಗಿದೆ. ಪ್ರತಿಯೊಬ್ಬ ಮೋಕ್ಷಸಾಧಕರಿಗೂ ಇವರೊಬ್ಬರೇ ಗುರುಗಳಾಗಿದ್ದಾರೆ. ಇಂಥ ಮಧ್ವಾ-ಚಾರ್ಯರು ಬೇರಾರೂ ಅಲ್ಲ. ಸತ್ಯಲೋಕಾಧಿಪತಿಗಳಾದ ಸಾಕ್ಷಾತ್ ಶ್ರೀವಾಯುದೇವರ ಮೂರನೆಯ ಅವತಾರರೇ ಆಗಿದ್ದಾರೆ. ಇವರನ್ನು ಆಶ್ರಯಿಸಿರುವುದರಿಂದ ತತ್ವಜ್ಞಾನ ಪ್ರಾಪ್ತವಾಗುತ್ತದೆ. ಅಷ್ಟೇ ಅಲ್ಲ ಮೋಕ್ಷದಲ್ಲಿ ಶಾಶ್ವತವಾದ ಸುಖ ದೊರಕುವುದೂ ಕೂಡ ಇವರಿಂದಲೇ. ಪ್ರತಿಯೊಬ್ಬ ಸಾಧಕರಿಗೆ ಮೋಕ್ಷವನ್ನು ದಯಪಾಲಿಸುವವರು ಇವರೇ ಆಗಿದ್ದಾರೆ. ಆದ್ದರಿಂದ ಯಾವ ಕ್ಷಣದಲ್ಲೂ ಬಿಡದೇ ಇವರನ್ನೇ ಶರಣಾಗುತ್ತೇನೆ.

## ಶ್ರೀಜಯತೀರ್ಥರೇ ಸುಧೆಯ ಜ್ಞಾನ ನೀಡಿರಿ

ಸತ್ತದ್ಧಬಂಧವೋ ಯಸ್ಯ ಗಾವೋ ವಿಶ್ವತಮೋನುದಃ ।
ಸ ಸ್ಯಾತ್ ತತ್ವಪ್ರಕಾಶಾಯ ಜಯತೀರ್ಥರವಿರ್ಮಮ ॥೪॥



ಓ ಶ್ರೀಜಯತೀರ್ಥರೆಂಬ ಸೂರ್ಯರೇ! ತಮ್ಮ ಮಾತುಗಳೆಂಬ ಕಿರಣಗಳೇ ಸಜ್ಜನರೆಂಬ ಕಮಲಗಳ ಬಂಧುಗಳು. ಸಮಸ್ತ ವಿಶ್ವದಲ್ಲಿ ತುಂಬಿದ ಅಜ್ಞಾನವೆಂಬ ಕತ್ತಲೆಯನ್ನು ಕತ್ತರಿಸುವವು. ಇಂಥ ಸೂರ್ಯರಾದ ತಾವು ನನ್ನ ಹೃದಯದಲ್ಲಿ ತತ್ವಜ್ಞಾನವನ್ನು ಬೆಳಗಿ ಉದ್ಧರಿಸಿರಿ.

ಅನ್ವಯಾರ್ಥ – ಯಸ್ಯ = ಯಾವ ಜಯತೀರ್ಥರೆಂಬ ಸೂರ್ಯರ, ಗಾವಃ = ಮಾತುಗಳೆಂಬ ಕಿರಣಗಳು, ಸತ್ಪದ್ಮಬಂಧವಃ = ಸಜ್ಜನರೆಂಬ ಕಮಲಗಳ ಬಂಧುಗಳೋ, ವಿಶ್ವತಮೋನುದಃ = ಸಮಸ್ತ ವಿಶ್ವದಲ್ಲಿ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುವವೋ, ಸಃ = ಅಂಥ, ಜಯತೀರ್ಥರವಿಃ = ಜಯತೀರ್ಥರೆಂಬ ಸೂರ್ಯರು, ಮಮ = ನನಗೆ, ತತ್ವಪ್ರಕಾಶಾಯ = ತತ್ವವನ್ನು ಬೆಳಗಿಸುವುದಕ್ಕಾಗಿ, ಸ್ಯಾತ್ = ಅನುಗ್ರಹಿಸಲಿ.

ವಿಗ್ರಹವಾಕ್ಯ – ೧. ಸತ್ಪದ್ಮಬಂಧವಃ – ಸಂತಃ ಏವ ಪದ್ಮಾನಿ ಸತ್ಪದ್ಮಾನಿ, ಸತ್ಪದ್ಮಾನಾಂ ಬಂಧವಃ ಸತ್ಪದ್ಮಬಂಧವಃ

೨.ವಿಶ್ವತಮೋನುದಃ – ವಿಶ್ವಂ ಚ ತತ್ ತಮಶ್ಚ ವಿಶ್ವತಮಃ, ವಿಶ್ವತಮಃ ನುದತೀತಿ ವಿಶ್ವತಮೋನುತ್. ತಸ್ಯ ವಿಶ್ವತಮೋನುದಃ.

೩.ತತ್ವಪ್ರಕಾಶಾಯ – ತತ್ವಾನಾಂ ಪ್ರಕಾಶಯತೀತಿ ತತ್ವಪ್ರಕಾಶಃ, ತಸ್ಮೈ ತತ್ವಪ್ರಕಾಶಾಯ.

೪.ಜಯತೀರ್ಥರವಿಃ – ಜಯತೀರ್ಥ ಏವ ರವಿಃ ಜಯತೀರ್ಥರವಿಃ.

ವಿಶೇಷವಿಚಾರ - ಹಿಂದಿನ ಶ್ಲೋಕದಲ್ಲಿ ಅನುವ್ಯಾಖ್ಯಾನಕಾರರಾದ ಶ್ರೀಮಧ್ವಾಚಾರ್ಯರನ್ನು ನಮಸ್ಕರಿಸಿದರು. ಈ ಶ್ಲೋಕದಲ್ಲಿ ನ್ಯಾಯಸುಧಾಕಾರರಾದ ಶ್ರೀಜಯತೀರ್ಥರನ್ನು ನಮಸ್ಕರಿಸುತ್ತಿದ್ದಾರೆ.

ಸಮಸ್ತಸಜ್ಜನಪ್ರಪಂಚದಲ್ಲಿ ಅಜ್ಞಾನವೇ ತುಂಬಿತ್ತು . ಇದರಿಂದ ಸಜ್ಜನರ ಮನಸ್ಸುಗಳು ಬಾಡಿದ್ದವು. ಈ ಸಂದರ್ಭದಲ್ಲಿ ಜಯತೀರ್ಥರೆಂಬ ಸೂರ್ಯೋದಯವಾಯಿತು. ವಾಙ್ಮಯಪ್ರಪಂಚದಲ್ಲೆಲ್ಲೆಡೆಯೂ ಇವರ ಮಾತುಗಳೆಂಬ ಕಿರಣಗಳು ಹರಡಿದವು. ಸಜ್ಜನರೆಂಬ ಕಮಲಗಳು ಅರಳಿದವು. ವಾಙ್ಮಯಪ್ರಪಂಚದಲ್ಲಿರುವ ಅಜ್ಞಾನವೆಂಬ ಕತ್ತಲು ಪೂರ್ಣವಾಗಿ ನಾಶವಾಯಿತು. ಯಾರಿಂದಲೂ ಮಾಡಲು ಸಾಧ್ಯವಾಗದ ಅಜ್ಞಾನಪರಿಹಾರವನ್ನು ಮಾಡಿದ ಜಯತೀರ್ಥರೆಂಬ ಸೂರ್ಯರು ಎನಗೂ ಕೂಡ ತತ್ವಜ್ಞಾನವೆಂಬ ಬೆಳಕನ್ನು ನೀಡಿ ಹರಸಲಿ.







ಹೀಗೆ ಜಯತೀರ್ಥರನ್ನು ಸೂರ್ಯನಿಗೆ ಹೋಲಿಸಿ, ಭಗವಂತನನ್ನು ಕಾಣಲು ನನಗೆ ತತ್ವಜ್ಞಾನದ ಬೆಳಕು ನೀಡಿರಿ ಎಂದು ಹೃದಯಂಗಮವಾಗಿ ವರ್ಣಿಸಿದ್ದಾರೆ.

## ಶ್ರೀವ್ಯಾಸತೀರ್ಥರೇ ಎನ್ನ ಜ್ಞಾನ ಸಮೃದ್ಧವಾಗಲಿ

**ಪದವಾಕ್ಯಪ್ರಮಾಣಜ್ಞೋ ದುರ್ಮತಧ್ವಾಂತಭಾಸ್ಕರಃ।**
**ವ್ಯಾಸತೀರ್ಥಮುನೀಂದ್ರೋ ಮೇ ಭೂಯಾತ್ ಜ್ಞಾನಸಮೃದ್ಧಯೇ ॥೫॥**

ವ್ಯಾಕರಣ, ಮೀಮಾಂಸಾ, ತರ್ಕಶಾಸ್ತ್ರದಲ್ಲಿ ನಿಪುಣರಾದವರು ಶ್ರೀವ್ಯಾಸತೀರ್ಥರು. ಅದ್ವೈತವೇ ಮೊದಲಾದ ದುರ್ಮತಗಳ ಕತ್ತಲೆಯನ್ನು ಪರಿಹರಿಸುವುದರಲ್ಲಿ ಸೂರ್ಯರಿವರು. ಎಲ್ಲ ಮುನಿಗಳಲ್ಲೇ ಶ್ರೇಷ್ಠರು. ಇಂಥ ಶ್ರೀವ್ಯಾಸತೀರ್ಥರು ಎನಗೆ ಸಮೃದ್ಧವಾದ ಜ್ಞಾನವನ್ನು ಕರುಣಿಸಲಿ.

ಅನ್ವಯಾರ್ಥ - ಪದವಾಕ್ಯಪ್ರಮಾಣಜ್ಞಃ - ಪದ = ವ್ಯಾಕರಣ, ವಾಕ್ಯ = ಮೀಮಾಂಸಾ, ಪ್ರಮಾಣ = ತರ್ಕಶಾಸ್ತ್ರ ಇವುಗಳನ್ನು ಬಲ್ಲವರಾದ, ದುರ್ಮತಧ್ವಾಂತಭಾಸ್ಕರಃ = ಕೆಟ್ಟ ಮತಗಳೆಂಬ ಕತ್ತಲೆಗೆ ಸೂರ್ಯರಂತಿರುವ, ವ್ಯಾಸತೀರ್ಥಮುನೀಂದ್ರಃ = ಮುನಿಗಳಲ್ಲೇ ಶ್ರೇಷ್ಠರಾದ ಶ್ರೀವ್ಯಾಸತೀರ್ಥರು, ಮೇ = ನನಗೆ, ಜ್ಞಾನಸಮೃದ್ಧಯೇ = ಸಮೃದ್ಧವಾದ ಜ್ಞಾನವನ್ನು, ಭೂಯಾತ್ = ಅನುಗ್ರಹಿಸಲಿ.

ವಿಗ್ರಹ – ೧. ಪದವಾಕ್ಯಪ್ರಮಾಣಜ್ಞಃ – ಪದಂ ಚ ವಾಕ್ಯಂ ಚ ಪ್ರಮಾಣಂ ಚ ಪದವಾಕ್ಯಪ್ರಮಾಣಾನಿ ಪದವಾಕ್ಯಪ್ರಮಾಣಾನಿ ಜಾನಾತೀತಿ ಪದವಾಕ್ಯಪ್ರಮಾಣಜ್ಞಃ.

೨.ದುರ್ಮತಧ್ವಾಂತಭಾಸ್ಕರಃ – ದುರ್ಮತಃ ಏವ ಧ್ವಾಂತಃ ದುರ್ಮತಧ್ವಾಂತಃ, ದುರ್ಮತಧ್ವಾಂತಸ್ಯ ಭಾಸ್ಕರಃ ದುರ್ಮತಧ್ವಾಂತಭಾಸ್ಕರಃ.

೩.ವ್ಯಾಸತೀರ್ಥಮುನೀಂದ್ರಃ – ಮುನೀನಾಂ ಇಂದ್ರಃ ಮುನೀಂದ್ರಃ; ವ್ಯಾಸತೀರ್ಥಃ ಏವ ಮುನೀಂದ್ರಃ ವ್ಯಾಸತೀರ್ಥಮುನೀಂದ್ರಃ

೪.ಭೂಯಾತ್ – ಭೂ ಸತ್ತಾಯಾತ್ ಇತಿ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಆಶೀರ್ಲಿಙ್ ಪ್ರ.ಪು.ಏಕವಚನೇ ಭೂಯಾತ್ ಇತಿ ರೂಪಮ್.





ವಿಶೇಷವಿಚಾರ – ಶ್ರೀವ್ಯಾಸತೀರ್ಥರು ನ್ಯಾಯಾಮೃತ, ತರ್ಕತಾಂಡವ, ತಾತ್ಪರ್ಯಚಂದ್ರಿಕಾ ಎಂಬ ಗ್ರಂಥಗಳನ್ನು ರಚನೆ ಮಾಡುವ ಮೂಲಕ ಮುಂದೆಂದೂ ದುರ್ಮತಗಳು ತಲೆ ಎತ್ತದಂತೆ ಮಾಡಿರುವರು. ಮತ್ತು ತಮ್ಮ ಸಮಕಾಲದಲ್ಲಿದ್ದ ಎಲ್ಲ ಕುವಾದಿಗಳನ್ನೂ ನಿರಾಕರಿಸಿ ಸನ್ಮತವನ್ನು ಸ್ಥಾಪನೆ ಮಾಡಿರುವರು. ಇವರು ಕೇವಲ ವೇದವೇದಾಂತಗಳಲ್ಲಷ್ಟೇ ಪಾರಂಗತರಲ್ಲ; ವ್ಯಾಕರಣ, ಮೀಮಾಂಸಾ, ತರ್ಕಶಾಸ್ತ್ರಗಳಲ್ಲೂ ಕೂಡ ಪ್ರವೀಣರಾಗಿರುವರು. ತತ್ವಜ್ಞಾನವನ್ನು ಸ್ಥಾಪನೆ ಮಾಡಿ ಎಲ್ಲ ಮುನಿಗಳಲ್ಲೇ ತಿಲಕಪ್ರಾಯರಾಗಿ ಶೋಭಾಯಮಾನರಾಗಿರುವರು. ಇವರನ್ನು ಭಕ್ತಿಯಿಂದ ನಮಸ್ಕರಿಸಿದಾಗ ತತ್ತ್ವಜ್ಞಾನವು ಸಮೃದ್ಧವಾಗಿ ದೊರಕುವುದು.

## ಗುರುಸುಧೀಂದ್ರರೇ! ಎನ್ನ ಹರಸಿರಿ

ಅಸ್ಮದ್ದೇಶಿಕಪಾದಾನಾಂ ಪ್ರಣಮ್ಯ ಚರಣಾಂಬುಜಮ್ ।
ಶ್ರೀಮನ್ನ್ಯಾಯಸುಧಾವಾಕ್ಯವ್ಯಾಖ್ಯಾಂ ಕುರ್ಯಾಂ ಯಥಾಮತಿ ॥೭॥

ನನಗೆ ವಿದ್ಯೋಪದೇಶವನ್ನು ಮಾಡಿದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ಪಾದಕಮಲಗಳಲ್ಲಿ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ. ನನ್ನ ಬುದ್ಧಿಗೆ ನಿಲುಕಿದಷ್ಟು ಶ್ರೀಮನ್ನ್ಯಾಯ-ಸುಧಾಗ್ರಂಥಕ್ಕೆ ವ್ಯಾಖ್ಯಾನವನ್ನು ಮಾಡಲು ಪ್ರಾರಂಭಿಸುವೆ.

ಅನ್ವಯಾರ್ಥ – ಅಸ್ಮದ್ದೇಶಿಕಪಾದಾನಾಂ ಅಸ್ಮತ್ = ನಮ್ಮ, ದೇಶಿಕಪಾದಾನಾಂ = ವಿದ್ಯೋಪದೇಶಕರಾದ ಶ್ರೀಸುಧೀಂದ್ರತೀರ್ಥರ, ಚರಣಾಂಬುಜಂ = ಚರಣಕಮಲಗಳಲ್ಲಿ, ಪ್ರಣಮ್ಯ = ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿ, ಯಥಾಮತಿ = ಬುದ್ಧಿಗೆ ತೋಚಿದಷ್ಟು, ಶ್ರೀಮನ್ನ್ಯಾಯಸುಧಾವ್ಯಾಖ್ಯಾಂ = ಶ್ರೀಮನ್ನ್ಯಾಯಸುಧಾಗ್ರಂಥದ ವಾಕ್ಯಗಳಿಗೆ ವ್ಯಾಖ್ಯಾನವನ್ನು, ಕುರ್ಯಾಮ್ = ಮಾಡುವೆನು.

ವಿಗ್ರಹ – ೧.ಜ್ಞಾನಸಮೃದ್ಧಯೇ – ಜ್ಞಾನಸ್ಯ ಸಮೃದ್ಧಿಃ ಜ್ಞಾನಸಮೃದ್ಧಿಃ, ತಸ್ಮೈ ಜ್ಞಾನಸಮೃದ್ಧಯೇ ।

೨.ದೇಶಿಕಪಾದಾನಾಂ – ದಿಶತೀತಿ ದೇಶಿಕಃ, ದೇಶಿಕಾನಾಂ ಪಾದಃ ದೇಶಿಕಪಾದಃ, ತೇಷಾಂ ದೇಶಿಕಪಾದಾನಾಮ್.





೩.ಪ್ರಣಮ್ಯ – ಪ್ರ ಇತ್ಯುಪಸರ್ಗಪೂರ್ವಕಾತ್ 'ಣಮು ಪ್ರಹ್ವತ್ವೇ ಶಬ್ದೇ ಚ' ಇತಿಧಾತೋಃ ಲ್ಯಬಂತಮ್ ಅವ್ಯಯಮ್।

೪.ಚರಣಾಂಬುಜಂ – ಅಂಬುನಿ ಜಾಯತೇತಿ ಅಂಬುಜಃ, ಚರಣಃ ಏವ ಅಂಬುಜಃ.

೫.ಕುರ್ಯಾಮ್ – ಡುಕೃಞ್ ಕರಣೇ ಇತಿ ಧಾತೋಃ ಆಶೀರ್ಲಿಙಿ ಉತ್ತಮಪುರುಷೇ ಏಕವಚನೇ ಕುರ್ಯಾಮ್ ಇತಿ ರೂಪಮ್।

೬.ಯಥಾಮತಿ – ಮತಿಂ ಅನತಿಕ್ರಮ್ಯ ಯಥಾಮತಿ.

ವಿಶೇಷವಿಚಾರ – ಯಾರು ಉಪದೇಶವನ್ನು ಮಾಡುತ್ತಾರೋ ಅವರನ್ನು ದೇಶಿಕರು ಎಂಬುದಾಗಿ ಕರೆಯುತ್ತಾರೆ. ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರಿಗೆ ವಿದ್ಯೋಪದೇಶವನ್ನು ಮಾಡುವ ಮೂಲಕ ವಿದ್ಯಾಗುರುಗಳಾಗಿರುವ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರನ್ನು ದೇಶಿಕಪಾದರೆಂದು ಕರೆದಿದ್ದಾರೆ. ಶ್ರೀಸುಧೀಂದ್ರತೀರ್ಥ ಶ್ರೀಪಾದರು ವಿದ್ಯಾಗುರುಗಳಷ್ಟೇ ಅಲ್ಲ ಆಶ್ರಮಗುರುಗಳು ಕೂಡ ಆಗಿದ್ದಾರೆ. ಆದ್ದರಿಂದ ಇವರ ಚರಣಕಮಲಗಳಲ್ಲಿ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತಿದ್ದಾರೆ. ಪ್ರಣಮ್ಯ ಎಂಬಲ್ಲಿರುವ ಪ್ರ ಎಂಬ ಉಪಸರ್ಗವು ನಮಸ್ಕಾರದಲ್ಲಿ ಭಕ್ತ್ಯತಿಶಯವನ್ನು ಸೂಚನೆ ಮಾಡುತ್ತಿದೆ.

ಯಾವುದೇ ಗ್ರಂಥದ ಪ್ರಾರಂಭದಲ್ಲಿ ಗ್ರಂಥಕಾರರು ಅಹಂಕಾರಖಂಡನೆಯನ್ನು ಮಾಡಿಕೊಳ್ಳು-ವುದು ಸಂಪ್ರದಾಯ. ಆದ್ದರಿಂದ ಪ್ರಕೃತ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಯಥಾಮತಿ ಎಂಬ ಪದವನ್ನು ಪ್ರಯೋಗ ಮಾಡಿಕೊಳ್ಳುವುದರ ಮೂಲಕ ತಮ್ಮ ಅಹಂಕಾರವನ್ನು ಖಂಡನೆ ಮಾಡಿಕೊಳ್ಳುತ್ತಿದ್ದಾರೆ. ವಾಸ್ತವಿಕವಾಗಿ ನ್ಯಾಯಸುಧಾಗ್ರಂಥವನ್ನು ಆಮೂಲಾಗ್ರವಾಗಿ ತಿಳಿದುಕೊಳ್ಳುವ ಸಾಮರ್ಥ್ಯವಿರುವುದು ರಾಯರಿಗೆ ಮಾತ್ರ .

ಪ್ರಾರಂಭದಲ್ಲಿ ಗ್ರಂಥಪ್ರತಿಜ್ಞೆಯನ್ನೂ ಕೂಡ ಮಾಡಬೇಕು. ಅದನ್ನು 'ಶ್ರೀಮನ್ನ್ಯಾಸುಧಾವಾಕ್ಯ-ವ್ಯಾಖ್ಯಾಂ ಕುರ್ಯಾಂ' ಎಂಬುದಾಗಿ ಮಾಡಿದ್ದಾರೆ.

* * * * *

# ಶ್ರೀಮಟ್ಟೀಕಾಕೃತ್ಪಾದರೆಂದು ಪ್ರಸಿದ್ಧರಾದ ಶ್ರೀಜಯತೀರ್ಥಮುನಿಗಳಿಂದ ವಿರಚಿತವಾದ ಶ್ರೀಮನ್ನ್ಯಾಯಸುಧಾಗ್ರಂಥ ಪ್ರಾರಂಭ

## ಮಂಗಳಾಚರಣೆ

### ಶ್ರೀಪತಿಗೆ ಭಕ್ತಿಪೂರ್ವಕಪ್ರಣಾಮಗಳು

**ಶ್ರಿಯಃಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ-**
**ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ।**
**ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ**
**ನಮೋಽಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ ॥೧॥**

ಓ ಲಕುಮಿಯ ಅರಸನೇ! ನಿನ್ನಂತೆ ನಿನ್ನಲ್ಲಿರುವ ಗುಣಗಳಿಗೂ ಹುಟ್ಟುಸಾವಿಲ್ಲ. ಅವುಗಳನ್ನು ಎಣಿಸಿ ಮುಗಿಸಲೂ ಸಾಧ್ಯವಿಲ್ಲ. ಪ್ರತಿಯೊಂದು ಗುಣಗಳೂ ಮಾಣಿಕ್ಯದಂತೆ ಕಂಗೊಳಿಸುತ್ತಿವೆ. ಇವುಗಳ ಸ್ವಚ್ಛವಾದ ಪ್ರಭೆಯ ಸಮೂಹದ ನಡುವೆ ನೀನು ನಲಿಯುತ್ತಿರುವಿ. ಇಂಥ ನಿನ್ನಲ್ಲಿ ಕೆಟ್ಟ ಕತ್ತಲಿನಂತಿರುವ ಆ ದೋಷಗಳಿಗೆ ಎಲ್ಲಿಹುದು ಅವಕಾಶ. ಆ ನಿನ್ನ ಶರೀರ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನಗಳನ್ನು ನಿರಂತರ ಮಾಡುವ ಸ್ವಭಾವವುಳ್ಳದ್ದು. ಎಲ್ಲಾ ಅಪೌರುಷೇಯ ವೇದರಾಶಿಗಳ ವೇದಾನುಸಾರಿಯಾದ ಎಲ್ಲಾ ಪೌರುಷೇಯಗ್ರಂಥಗಳ ಮುಖ್ಯಹೃದಯ ನೀನೇ ಆಗಿರುವಿ. ದೋಷವಿದೂರನು ಗುಣಪೂರ್ಣನೂ ಆದ ಶ್ರೀಹರಿಯೇ ನಿನಗಿದೋ ಎನ್ನಯ ಭಕ್ತಿಪೂರ್ವಕ ಸಾಷ್ಟಾಂಗನಮನಗಳು.




ಅನ್ವಯಾರ್ಥ – ಶ್ರಿಯಃ = ಲಕ್ಷ್ಮೀದೇವಿಗೆ, ಪತ್ಯೇ = ಪತಿಯಾದ, ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ – ನಿತ್ಯ = ಅನಾದ್ಯನಂತಕಾಲದಲ್ಲಿಯೂ, ಅಗಣಿತ = ಎಣಿಸಲು ಸಾಧ್ಯವಿಲ್ಲದ, ಗುಣ - ಗುಣಗಳೆಂಬ ಮಾಣಿಕ್ಯ = ಮಾಣಿಕ್ಯಗಳ, ವಿಶದ = ಹರಡಿದ, ಪ್ರಭಾ = ಪ್ರಭೆಯ, ಜಾಲ = ಸಮೂಹದ, ಉಲ್ಲಾಸ = ಅಭಿವ್ಯಕ್ತಿಯಿಂದ, ಉಪಹತ = ದೂರೀಕೃತವಾದ, ಸಕಲ = ಎಲ್ಲಾ ಬಗೆಯ, ಅವದ್ಯ = ದೋಷಗಳೆಂಬ, ತಮಸೇ = ಕತ್ತಲುಗಳುಳ್ಳ, ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ ಜಗತ್ = ಲಕ್ಷ್ಮೀದೇವಿಯಿಂದಾರಂಭಿಸಿ ತೃಣಪರ್ಯಂತ ಸಮಸ್ತ ಜಗತ್ತಿನ, ಜನ್ಮ = ಸೃಷ್ಟಿ, ಸ್ಥೇಮ = ರಕ್ಷಣೆ, ಪ್ರಳಯ = ನಾಶ ಇವುಗಳ, ರಚನಾ = ಮಾಡುವಿಕೆಯೇ, ಶೀಲ = ಸ್ವಭಾವವುಳ್ಳ, ವಪುಷೇ = ಶರೀರವುಳ್ಳ, ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಅಶೇಷ = ಎಲ್ಲ, ಆಮ್ನಾಯ = ವೇದಗಳ, ಸ್ಮೃತಿ = ಪೌರುಷೇಯವಾದ ಸ್ಮೃತಿ ಮೊದಲಾದ ಗ್ರಂಥಗಳ, ಹೃದಯ = ಮುಖ್ಯತಾತ್ಪರ್ಯದಿಂದ, ದೀಪ್ತಾಯ = ಪ್ರಕಾಶಿತನಾದ, ಹರಯೇ = ಶ್ರೀಹರಿಗೆ ನಮಃ = ಭಕ್ತಿಯ ಪ್ರಣಾಮಗಳು.

ವಿಗ್ರಹ – ೧.ಶ್ರಿಯಃ ಶ್ರಯತಿ ಇತಿ ಶ್ರೀಃ ತಸ್ಯಾಃ ಶ್ರಿಯಃ.

೨.ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ – ಅಗಣಿತಾಶ್ಚ ತೇ ಗುಣಾಶ್ಚ ಅಗಣಿತಗುಣಾಃ, ನಿತ್ಯಾಶ್ಚ ತೇ ಅಗಣಿತಗುಣಾಶ್ಚ ನಿತ್ಯಾಗಣಿತಗುಣಾಃ ನಿತ್ಯಾಗಣಿತಗುಣಾ ಏವ ಮಾಣಿಕ್ಯಾನಿ ನಿತ್ಯಾಗಣಿತಗುಣಮಾಣಿಕ್ಯಾನಿ, ವಿಶದಾ ಚ ಸಾ ಪ್ರಭಾ ಚ ವಿಶದಪ್ರಭಾ, ನಿತ್ಯಾಗಣಿತಗುಣಮಾಣಿಕ್ಯಾನಾಂ ವಿಶದಪ್ರಭಾ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾ, ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾನಾಂ ಜಾಲಂ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲಂ, ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲಸ್ಯ ಉಲ್ಲಾಸಃ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸಃ, ಅವದ್ಯಂ ಚ ತತ್ ತಮಃ ಚ ಅವದ್ಯತಮಃ, ಸಕಲಂ ಚ ತತ್ ಅವದ್ಯತಮಃ ಚ ಸಕಲಾವದ್ಯತಮಃ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೈಃ ಉಪಹತಂ ಸಕಲಾವದ್ಯತಮಃ ಯಸ್ಯ ಸಃ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತತಮಾಃ ತಸ್ಮೈ ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸಪಹತಸಕಲಾವದ್ಯತಮಸೇ.

೩.ಜಗಜ್ಜನ್ಮಸ್ಥೇಮಪ್ರಳಯರಚನಾಶೀಲವಪುಷೇ – ಜನ್ಮ ಚ ಸ್ಥೇಮಾ ಚ ಪ್ರಳಯಶ್ಚ ಜನ್ಮಸ್ಥೇಮಪ್ರಳಯಾಃ ಜಗತಃ ಜನ್ಮಸ್ಥೇಮಪ್ರಳಯಾಃ ಜಗಜ್ಜನ್ಮಸ್ಥೇಮಪ್ರಳಯಾಃ, ಜಗಜ್ಜನ್ಮ–



ಸ್ಥೇಮಪ್ರಳಯಾನಾಂ ರಚನಾ ಜಗಜ್ಜನ್ಮಸ್ಥೇಮಪ್ರಳಯರಚನಾ ಜಗಜ್ಜನ್ಮಸ್ಥೇಮಪ್ರಳಯ-ರಚನಾ ಏವ ಶೀಲಂ ಯಸ್ಯ ತತ್ ಜಗಜ್ಜನ್ಮಸ್ಥೇಮಪ್ರಳಯರಚನಾಶೀಲಂ, ಜಗಜ್ಜನ್ಮಸ್ಥೇಮ-ಪ್ರಳಯರಚನಾಶೀಲಂ ವಪುಃ ಯಸ್ಯ ಸಃ ಜಗಜ್ಜನ್ಮಸ್ಥೇಮಪ್ರಳಯರಚನಾಶೀಲವಪುಃ ತಸ್ಮೈ ಜಗಜ್ಜನ್ಮಸ್ಥೇಮಪ್ರಳಯರಚನಾಶೀಲವಪುಷೇ.

೪.ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ – ಆಮ್ನಾಯಾಶ್ಚ ಸ್ಮೃತಯಶ್ಚ ಆಮ್ನಾಯ -ಸ್ಮೃತಯಃ ಅಶೇಷಾಶ್ಚ ತಾಃ ಆಮ್ನಾಯಸ್ಮೃತಯಃ ಅಶೇಷಾಮ್ನಾಯಸ್ಮೃತಯಶ್ಚ ಅಶೇಷಾಮ್ನಾಯಸ್ಮೃತೀನಾಂ ಹೃದಯಂ ಅಶೇಷಾಮ್ನಾಯಸ್ಮೃತಿಹೃದಯಂ, ಅಶೇಷಾ-ಮ್ನಾಯಸ್ಮೃತಿಹೃದಯೇ ದೀಪ್ತಃ ಅಶೇಷಾಮ್ನಾಯಸ್ಮೃತಿಹೃದಯದೀಪ್ತಃ, ತಸ್ಮೈ = ಅಶೇಷಾ -ಮ್ನಾಯಸ್ಮೃತಿಹೃದಯದೀಪ್ತಾಯ.

೫.ಹರಯೇ – ಹರತೀತಿ ಹರಿಃ ತಸ್ಮಿನ್ ಹರಯೇ.

## ನ್ಯಾಯಸುಧೆಯ ಮಂಗಳಶ್ಲೋಕದ ವ್ಯಾಖ್ಯಾನ

**ಪರಿಮಳ– ಆದ್ಯಪದ್ಯಂ ವಿವೃಣ್ವಾನೋ ಗ್ರಂಥಾದೌ ನಮ್ಯತ್ವಪ್ರಯೋಜಕವಿಶಿಷ್ಟತ್ವ-ಇಷ್ಟತ್ವ-ಅಧಿಕೃತತ್ವಯುಕ್ತದೇವತಾನತಿರೂಪಂ ಮಂಗಳಮಾಚರತಿ – ಶ್ರಿಯ ಇತಿ ॥**

ಶ್ರೀಅನುವ್ಯಾಖ್ಯಾನಗ್ರಂಥದ ಮೊದಲನೆಯ ಮಂಗಳಶ್ಲೋಕವನ್ನು ವಿವರಿಸುವ ಮೂಲಕ ಮಂಗಳಾಚರಣೆಯನ್ನು 'ಶ್ರಿಯಃ' ಇತ್ಯಾದಿಯಾಗಿ ಮಾಡುತ್ತಿದ್ದಾರೆ. ಈ ಮಂಗಳವು ದೇವತಾ-ನಮಸ್ಕಾರರೂಪವಾಗಿದೆ. ನಮಸ್ಕಾರಕ್ಕೆ ವಿಷಯನಾದ ಆ ದೇವತೆಯಲ್ಲಿ ನಮ್ಯತ್ವಕ್ಕೆ ಪ್ರಯೋ-ಜಕವಾದ ನಮ್ಯತ್ವ, ಇಷ್ಟತ್ವ, ಅಧಿಕೃತತ್ವ ಎಂಬ ಮೂರೂ ಬಗೆಯ ಧರ್ಮಗಳಿವೆ.

ವಿವರಣೆ – ಅನುವ್ಯಾಖ್ಯಾನಗ್ರಂಥಕ್ಕೆ ನ್ಯಾಯಸುಧಾಗ್ರಂಥವು ವ್ಯಾಖ್ಯಾನರೂಪವಾಗಿದೆ. ಶ್ರೀಮ-ಟ್ಟೀಕಾಕೃತ್ಪಾದರು ಮೊದಲು 'ಶ್ರಿಯಃಪತ್ಯೇ' ಇತ್ಯಾದಿಯಾಗಿ ಮಂಗಳಾಚರಣೆಯನ್ನು ಮಾಡುತ್ತಿದ್ದಾರೆ. ಇದು ಕೇವಲ ಮಂಗಳರೂಪವಾಗಿರದೇ ಅನುವ್ಯಾಖ್ಯಾನದ ಮಂಗಳಪದ್ಯಕ್ಕೆ ವ್ಯಾಖ್ಯಾನರೂಪ-ವಾಗಿಯೂ ಆಗಿದೆ. ಯಾವುದೇ ಗ್ರಂಥದ ಪ್ರಾರಂಭದಲ್ಲಿ ಮಂಗಳವನ್ನು ಆಚರಣೆ ಮಾಡಲೇಬೇಕು. ಆದ್ದರಿಂದ ನ್ಯಾಯಸುಧಾಗ್ರಂಥದ ಪ್ರಾರಂಭದಲ್ಲಿ ಜಯತೀರ್ಥರು ಮಂಗಳವನ್ನು ಆಚರಣೆ ಮಾಡು-

  



ತ್ತಿದ್ದಾರೆ. ಮಂಗಳವು ವಸ್ತುಸಂಕೀರ್ತನೆ, ಆಶೀರ್ವಾದ ಹಾಗೂ ನಮಸ್ಕಾರ ಎಂಬುದಾಗಿ ಮೂರು ಬಗೆಯಲ್ಲಿದೆ. ಪ್ರಕೃತ ನಮಸ್ಕಾರರೂಪವಾದ ಮಂಗಳವನ್ನು ಆಚರಿಸಿದ್ದಾರೆ.

ಎಂಥ ದೇವತೆಗೆ ನಮಸ್ಕಾರ ಮಾಡಬೇಕೆಂದರೆ, ನಮ್ಯತ್ವಪ್ರಯೋಜಕವಾದ ಧರ್ಮಗಳು ಅವನಲ್ಲಿರಬೇಕು. ನಮ್ಯತ್ವಪ್ರಯೋಜಕವಾದ ಧರ್ಮಗಳು ಒಟ್ಟು ಮೂರು ಬಗೆಯಲ್ಲಿ ವಿಂಗಡನೆ ಮಾಡಬಹುದು. (೧) ವಿಶಿಷ್ಟತ್ವ, (೨) ಇಷ್ಟತ್ವ, (೩) ಅಧಿಕೃತತ್ವ ಎಂದು. ಯಾರು ಸರ್ವೋತ್ತಮನಾಗಿದ್ದಾನೋ ಅವನೇ ವಿಶಿಷ್ಟನೆನಿಸುತ್ತಾನೆ. ಗ್ರಂಥಕಾರರಿಗೆ ಇಷ್ಟನಾದ ದೇವತೆಯಲ್ಲಿ ಇಷ್ಟತ್ವವೆಂಬ ಧರ್ಮವಿರುತ್ತದೆ. ಗ್ರಂಥಪ್ರತಿಪಾದ್ಯನಾದ ದೇವತೆಯಲ್ಲಿ ಅಧಿಕೃತತ್ವವೆಂಬ ಧರ್ಮವಿರುತ್ತದೆ. ಪ್ರಕೃತ ಶ್ರೀಪತಿಯಾದ ನಾರಾಯಣನಲ್ಲಿ ಈ ಮೂರೂ ಬಗೆಯ ಧರ್ಮಗಳಿವೆ. ಸಕಲದೇವತೆಗಳಿಗಿಂತಲೂ ಸರ್ವೋತ್ತಮನಾಗಿರುವುದರಿಂದ ವಿಶಿಷ್ಟತ್ವವಿದೆ. ಗ್ರಂಥಕಾರರಾದ ಶ್ರೀಮಟ್ಟೀಕಾಕೃತ್ಪಾದರಿಗೆ ಇಷ್ಟನೂ ಕೂಡ ಆಗಿದ್ದಾನೆ. ಇದೇ ನಾರಾಯಣನು ಗ್ರಂಥದಿಂದ ಪ್ರತಿಪಾದ್ಯನೂ ಆಗಿದ್ದಾನೆ. ಆದ್ದರಿಂದ ನಾರಾಯಣನಿಗೆ ನಮಸ್ಕಾರ ಮಾಡಿರುವುದು ಅತ್ಯಂತ ಸಂಗತವಾಗಿದೆ.

## ಶ್ರಿಯಃಪತ್ಯೇ ಎಂಬುದರ ವ್ಯಾಖ್ಯಾನ

ಪರಿಮಳ- ಮೂಲೇ 'ಅಶೇಷವಿಶೇಷತೋಽಪಿ' ಇತ್ಯನೇನ ಸಂಕಲಯ್ಯ ಶ್ರೀಬ್ರಹ್ಮಾದ್ಯುತ್ತಮತ್ವಮ್ ಉಕ್ತಮ್ । ತತ್ರ ಸಕಲವಾಙ್ಮನಸದೇವತಾಯಾಃ ದೇವ್ಯಾಃ ಗ್ರಂಥಾರಂಭೇಽವಶ್ಯಂ ವಂದ್ಯತ್ವದ್ಯೋತನಾಯ 'ಶ್ರಿಯಃ ಪತ್ಯೇ' ಇತಿ ವಿಶಿಷ್ಯೋಕ್ತಿಃ । ತದಪಿ ಈಶ್ವರೋಪಸರ್ಜನತಯಾ ಇತಿ ಜ್ಞಾಪನಾಯ 'ಶ್ರಿಯಃ' ಇತಿ ಪೃಥಗುಕ್ತಿಃ ।

ಅನುವ್ಯಾಖ್ಯಾನದಲ್ಲಿ 'ಅಶೇಷವಿಶೇಷತೋಽಪಿ' ಎಂಬ ವಿಶೇಷಣದಿಂದ ಲಕ್ಷ್ಮೀದೇವಿ ಚತುರ್ಮುಖಬ್ರಹ್ಮ ಇವರೆಲ್ಲರಿಗಿಂತಲೂ ಪರಮಾತ್ಮನು ಉತ್ತಮನಾಗಿದ್ದಾನೆಂದು ಲಕ್ಷ್ಮೀದೇವಿಯನ್ನು ಕೂಡ ಸೇರಿಸಿ ಒಟ್ಟಿಗೆ ಹೇಳಿದ್ದಾರೆ. ಆ ದೇವತೆಗಳ ನಡುವೆ ಲಕ್ಷ್ಮೀದೇವಿಗೆ ಗ್ರಂಥಾರಂಭದಲ್ಲಿ ಅವಶ್ಯವಾಗಿ ನಮಸ್ಕಾರವನ್ನು ಮಾಡಲೇಬೇಕು. ಏಕೆಂದರೆ ಅವಳು ಸಕಲ ವಾಙ್ಮನಸ್ಸುಗಳಿಗೆ ಅಭಿಮಾನಿ ದೇವತೆಯಾಗಿದ್ದಾಳೆ. ಇದನ್ನು ತಿಳಿಸುವುದಕ್ಕಾಗಿ 'ಶ್ರಿಯಃಪತ್ಯೇ' ಎಂಬುದಾಗಿ ವಿಶೇಷ್ಯವಾಚಕಪದವನ್ನು ಹೇಳಿರುತ್ತಾರೆ. ಆ ಲಕ್ಷ್ಮೀದೇವಿಯನ್ನು ಪ್ರತ್ಯೇಕವಾಗಿ

ನಮಸ್ಕರಿಸಬಾರದು. ಭಗವಂತನ ಜೊತೆಯೇ ನಮಸ್ಕಾರವನ್ನು ಮಾಡಬೇಕು. ಅದನ್ನು ತಿಳಿಸುವುದಕ್ಕಾಗಿಯೇ 'ಶ್ರಿಯಃ' ಎಂಬುದಾಗಿ ಪದಪ್ರಯೋಗ ಮಾಡಿದ್ದಾರೆ.

ವಿವರಣೆ – 'ಅಶೇಷವಿಶೇಷತೋಽಪಿ ವಂದ್ಯಂ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಸಕಲ ದೇವತೆಗಳಿಂದ ನಾರಾಯಣನು ನಮಸ್ಕೃತನಾಗಿದ್ದಾನೆಂದು ಹೇಳಿದ್ದಾರೆ. ಆ ದೇವತೆಗಳಲ್ಲಿ ಚತುರ್ಮುಖ ರುದ್ರ ಮೊದಲಾದ ದೇವತೆಗಳು ಸೇರುವಂತೆ ಲಕ್ಷ್ಮೀದೇವಿಯು ಕೂಡ ಸೇರಿದ್ದಾಳೆ. ಹೀಗೆ ಹೇಳುವುದರಿಂದ ಗ್ರಂಥಾರಂಭದಲ್ಲಿ ಎಲ್ಲಾ ದೇವತೆಗಳ ಸ್ಮರಣೆಯನ್ನು ಶಿಷ್ಯಂದಿರಿಗೆ ತಂದು ಕೊಟ್ಟಿದ್ದಾರೆ. ಈ ದೇವತೆಗಳ ನಡುವೆ ಲಕ್ಷ್ಮಿಯನ್ನು ಎಲ್ಲರಂತೆ ನಮಿಸುವಂತಿಲ್ಲ. ಬ್ರಹ್ಮಾದಿದೇವತೆಗಳಿಗಿಂತಲೂ ಕೂಡ ಉತ್ತಮಳಾದ್ದರಿಂದ ಅವಳನ್ನು ಗ್ರಂಥಾರಂಭದಲ್ಲಿ ಅವಶ್ಯವಾಗಿ ನಮಸ್ಕಾರ ಮಾಡಲೇಬೇಕು. ಏಕೆಂದರೆ, ಯಾವುದೇ ಗ್ರಂಥವನ್ನು ಅಧ್ಯಯನ ಮಾಡಬೇಕೆಂದರೆ ವಾಕ್ ಹಾಗೂ ಮನಸ್ಸುಗಳ ಸಿದ್ಧಿ ಇರಬೇಕು. ಇವುಗಳಿಗೆ ಲಕ್ಷ್ಮೀದೇವಿಯೇ ಮುಖ್ಯಾಭಿಮಾನಿನಿಯಾಗಿದ್ದಾಳೆ. ಇವಳ ಅನುಗ್ರಹವು ಪ್ರಾಪ್ತವಾದರೆ ಮನಸ್ಸು ಗ್ರಂಥದಲ್ಲಿ ಏಕಾಗ್ರವಾಗುತ್ತದೆ. ಸ್ಪಷ್ಟವಾದ ನುಡಿಗಳಿಂದ ಗ್ರಂಥದ ಅಧ್ಯಯನ, ಅಧ್ಯಾಪನಗಳನ್ನು ಮಾಡಲು ವಾಗಿಂದ್ರಿಯಕ್ಕೆ ಶಕ್ತಿಯು ಪ್ರಾಪ್ತವಾಗುತ್ತದೆ. ಒಂದು ವೇಳೆ ಲಕ್ಷ್ಮೀದೇವಿಯನ್ನು ಮರೆತರೆ ವಾಗಿಂದ್ರಿಯ ಹಾಗೂ ಮನೋ ಇಂದ್ರಿಯಗಳು ಗ್ರಂಥಾಧ್ಯಯನ ಹಾಗೂ ಅಧ್ಯಾಪನದಲ್ಲಿ ತೊಡಗಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅವಳ ಅನುಗ್ರಹವನ್ನು ಸಂಪಾದನೆ ಮಾಡಲೇಬೇಕು. ಆದರೆ 'ಕ್ಲೇಶೋಽಧಿಕತರಸ್ತೇಷಾಂ ಅವ್ಯಕ್ತಾಸಕ್ತಚೇತಸಾಂ' ಎಂದು ಶ್ರೀಕೃಷ್ಣನು ಹೇಳಿದಂತೆ ಲಕ್ಷ್ಮೀದೇವಿಯನ್ನು ಪ್ರತ್ಯೇಕವಾಗಿ ನಮಸ್ಕರಿಸುವಂತಿಲ್ಲ. ವಿಷ್ಣುವಿನ ಜೊತೆ ನಮಿಸಿದಾಗಲೇ ಅವಳಿಗೆ ಪರಮ ಸಂತೋಷವಾಗುತ್ತದೆ. ಆಗಲೇ ಅವಳು ಗ್ರಂಥಾಧ್ಯಯನ ಮಾಡುವವರಿಗೆ ಪೂರ್ಣವಾಗಿ ಅನುಗ್ರಹಿಸುತ್ತಾಳೆ. ಆದ್ದರಿಂದ ನ್ಯಾಯಸುಧಾಕಾರರು 'ಶ್ರಿಯಃಪತ್ಯೇ' ಎಂಬುದಾಗಿ ವಿಶೇಷ್ಯವಾಚಕಪದವನ್ನು ಪ್ರಯೋಗಿಸಿದ್ದಾರೆ. ಹೀಗೆ ಪರಮಾತ್ಮನನ್ನು ಲಕ್ಷ್ಮಿಯ ಜೊತೆ ನಮಿಸಿದಾಗ ಪರಮಾತ್ಮನ ಅನುಗ್ರಹದ ಜೊತೆಗೆ ಲಕ್ಷ್ಮೀದೇವಿಯ ಅನುಗ್ರಹವು ಕೂಡ ಪ್ರಾಪ್ತವಾಗುತ್ತದೆ.

ಸುಧಾಗ್ರಂಥದಲ್ಲಿ ಹೀಗೆ ಲಕ್ಷ್ಮಿಯನ್ನು ಗೌಣವಾಗಿ ನಮಿಸಿರುವುದು ಕೂಡ 'ಅಶೇಷವಿಶೇಷತೋಽಪಿ' ಎಂಬುದರ ವ್ಯಾಖ್ಯಾನರೂಪವಾಗಿದೆ.

'ಶ್ರೀಪತಯೇ' ಎಂದೇ ಹೇಳಬಹುದಿತ್ತು. ಶ್ರಿಯಃ ಪತ್ಯೇ ಎಂದು ಹೇಳಲು ಏನು ಕಾರಣ? ಎಂದರೆ ಲಕ್ಷ್ಮಿಯನ್ನು ಈಶ್ವರೋಪಸರ್ಜನತಯಾ ನಮಿಸಬೇಕೇ ಹೊರತು ಪ್ರಧಾನವಾಗಿ ನಮಿಸುವಂತಿಲ್ಲ. ಈ ವಿಶೇಷವಿಚಾರವನ್ನು ತಿಳಿಸುವುದಕ್ಕಾಗಿ 'ಶ್ರಿಯಃ' ಎಂಬುದಾಗಿ ಪ್ರತ್ಯೇಕವಾಗಿ ಹೇಳಿದ್ದಾರೆ.







ಒಂದು ವೇಳೆ 'ಶ್ರೀಪತಯೇ' ಎಂಬುದಾಗಿ ಒಂದೇ ಪದದಲ್ಲಿ ನಾರಾಯಣನ ಜೊತೆಗೆ ಲಕ್ಷ್ಮಿಯನ್ನು ನಮಿಸಿದ್ದರೆ ನಾರಾಯಣನಂತೆ ಲಕ್ಷ್ಮಿಯು ಕೂಡ ಮುಖ್ಯವಾಗಿ ನಮ್ಯಳಾಗಿದ್ದಾಳೆಂದು ಭ್ರಾಂತಿ ಬರುತ್ತಿತ್ತು. ನಾರಾಯಣವಾಚಕಪದವನ್ನು ಬಿಟ್ಟು ಪ್ರತ್ಯೇಕಪದದಿಂದ ಲಕ್ಷ್ಮಿಯನ್ನು ಗುರುತಿಸಿದ್ದರಿಂದ ನಾರಾಯಣನಷ್ಟು ಮುಖ್ಯವಾಗಿ ಇವಳು ನಮ್ಯಳಲ್ಲ. ನಾರಾಯಣನ ಜೊತೆ ಗೌಣವಾಗಿ ನಮ್ಯಳು ಎಂಬ ಪ್ರಮೇಯವು ಇದರಿಂದ ಸಿದ್ಧವಾಗುತ್ತದೆ.

'ದಂಡವಿಶಿಷ್ಟದೇವದತ್ತನನ್ನು ಕರೆದುಕೊಂಡು ಬಾ' ಎಂದು ಹೇಳಿದಾಗ ಕರೆದು ತರಲು ದಂಡವು ಹೇಗೆ ಅಪ್ರಧಾನವಾಗಿ ವಿಷಯವಾಗುತ್ತದೋ ಅದರಂತೆ ಶ್ರೀದೇವಿಯಿಂದ ವಿಶಿಷ್ಟನಾದ ಶ್ರೀಹರಿಗೆ ನಮಸ್ಕಾರಗಳು ಎಂದು ಹೇಳಿದರೆ ಶ್ರೀದೇವಿಗೆ ಗೌಣವಾಗಿ ನಮಸ್ಕಾರ ಮಾಡಿದಂತಾಗುತ್ತದೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು –

'ಶ್ರೀಪತಯೇ' ಎಂದು ಸಮಸ್ತವಾಗಿ ಹೇಳಿದರೆ 'ಶ್ರೀಃ ಪತಿಃ ಯಸ್ಯ ಸಃ' ಎಂಬ ಬಹುವ್ರೀಹಿ-ಸಮಾಸದಿಂದ ಲಕ್ಷ್ಮೀದೇವಿಯೇ ನಾಯಕಳಾಗಿ ಉಳ್ಳವನು ಎಂಬ ಅಪಾರ್ಥವಾಗುವ ಸಂಭವವಿದೆ. ಆದರೆ ಇದು ಸಿದ್ಧಾಂತಕ್ಕೆ ವಿರುದ್ಧವಾದದ್ದು. ಮತ್ತು ಶಾಕ್ತಮತವನ್ನು ಅನುಸರಿಸಿದಂತಾಗುತ್ತದೆ. ಈ ಕಾರಣಕ್ಕಾಗಿಯೂ ಕೂಡ ಶ್ರೀಪತಯೇ ಎಂಬುದಾಗಿ ಪ್ರಯೋಗವನ್ನು ಮಾಡಿರುವುದಿಲ್ಲ. ಅಥವಾ 'ಶ್ರಿಯಾ ಸಹಿತಃ ಪತಿಃ ಶ್ರೀಪತಿಃ' ಎಂಬುದಾಗಿ ವಿಗ್ರಹ ಮಾಡಿದಾಗಲೂ ನಮನಕರ್ಮತ್ವದಲ್ಲಿ ಲಕ್ಷ್ಮೀ-ದೇವಿಗೆ ಅಪ್ರಾಧಾನ್ಯವು ತಿಳಿಯುವುದಿಲ್ಲ. ಶ್ರೀಶ್ಚ ಪತಿಶ್ಚ ಎಂಬುದಾಗಿ ದ್ವಂದ್ವಸಮಾಸವನ್ನು ಆಶ್ರಯಿಸಬಹುದು. ಆದರೆ 'ಸರ್ವೋಽಪಿ ದ್ವಂದ್ವಃ ವಿಭಾಷಯಾ ಏಕವದ್ಭವತಿ' ಎಂಬ ನಿಯಮದಂತೆ ಏಕವಚನವೇ ಪ್ರಾಪ್ತವಾಗಿ ಶ್ರೀಪತಿಃ ಎಂದಾಗುತ್ತದೆ. ಸಮಾಹಾರವನ್ನು ಮಾಡದ ಕಾರಣ ನಪುಂಸಕ-ಲಿಂಗವು ಕೂಡ ಬಂದಿರುವುದಿಲ್ಲ. ಆದ್ದರಿಂದ ಶ್ರೀಹರಿಗೆ ಹೇಗೆ ಪ್ರಾಧಾನ್ಯವಿರುತ್ತದೋ ಅಷ್ಟೇ ಪ್ರಾಧಾನ್ಯವು ಲಕ್ಷ್ಮೀದೇವಿಗೂ ಕೂಡ ಪ್ರಾಪ್ತವಾಗುತ್ತದೆ. ಆದ್ದರಿಂದ ದ್ವಂದ್ವಸಮಾಸವನ್ನೂ ಕೂಡ ಇಲ್ಲಿ ಆಶ್ರಯಿಸುವಂತಿಲ್ಲ. ಇನ್ನು ಕರ್ಮಧಾರಯ ಸಮಾಸವನ್ನು ಮಾಡಬೇಕು – 'ಶ್ರಯಂತಿ ಏನಮಿತಿ ಶ್ರೀಃ ಶ್ರೀಶ್ಚಾಸೌ ಪತಿಶ್ಚ ಶ್ರೀಪತಿಃ' ಎಂದು. ಹೀಗೆ ವ್ಯಾಖ್ಯಾನ ಮಾಡಿದಾಗ ಶ್ರೀಹರಿಯು ಎಲ್ಲರಿಗೂ ಕೂಡ ಸ್ವಾಮಿಯಾಗಿದ್ದಾನೆಂದಷ್ಟೇ ಅರ್ಥವು ತಿಳಿಯುತ್ತದೆ. ಸಕಲವಾಙ್ಮನೋಭಿಮಾನಿನಿಯಾದ ಲಕ್ಷ್ಮೀದೇವಿ-ಯನ್ನು ನಮಿಸಿದಂತೆ ಆಗುವುದೇ ಇಲ್ಲ. ಆದ್ದರಿಂದ ಕರ್ಮಧಾರಯಸಮಾಸವನ್ನು ಕೂಡ ವಿವಕ್ಷಿಸಲು ಸಾಧ್ಯವಾಗುವುದಿಲ್ಲ. ಈ ಎಲ್ಲ ಸಮಸ್ಯೆಗಳ ಪರಿಹಾರಕ್ಕಾಗಿ 'ಶ್ರಿಯಃ ಪತ್ಯೇ' ಎಂದು ಬಿಡಿಸಿ ಹೇಳಿದ್ದಾರೆ.

## ನಿತ್ಯಾಗಣಿತ ಇತ್ಯಾದಿ ವಿಶೇಷಣದ ವ್ಯಾಖ್ಯಾನ

**ಪರಿಮಳ– 'ನಿಖಿಲ' ಇತಿ 'ನಿರ್ದೋಷ' ಇತಿ ಚ ವಿಶೇಷಣದ್ವಯಸ್ಯ ಹೇತುಹೇತುಮದ್ಭಾವೇನ ಯೋಜನಾದ್ಯೋತನಾಯ 'ನಿತ್ಯ' ಇತ್ಯಾದ್ಯುಕ್ತಮ್ । 'ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ' ಇತ್ಯುಕ್ತೇಃ ಸರ್ವಸ್ವಾತಂತ್ರ್ಯಸರ್ವಜ್ಞಾನಸರ್ವಶಕ್ತಿಸರ್ವೈಶ್ವರ್ಯಾದಿಗುಣಸತ್ತ್ವೇ ಪಾರತಂತ್ರ್ಯಾದಿದೋಷಾಣಾಮ್ ಅಯೋಗಾತ್ ।**

ಅನುವ್ಯಾಖ್ಯಾನದಲ್ಲಿ ನಾರಾಯಣನಿಗೆ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂಬೆರಡು ವಿಶೇಷಣಗಳನ್ನು ಹೇಳಿದ್ದಾರೆ. ಇವುಗಳು ಪ್ರತ್ಯೇಕವಾಗಿ ವಿಶೇಷಣವಾಗದೇ ಪರಸ್ಪರ ಹೇತುಹೇತುಮದ್ಭಾವವನ್ನು ಹೊಂದಿ ವಿಶೇಷಣವಾಗಿವೆ. ಇದನ್ನು ನ್ಯಾಯಸುಧಾಗ್ರಂಥದ ಮಂಗಳಶ್ಲೋಕದಲ್ಲಿರುವ 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. 'ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ' 'ಗುಣಪೂರ್ಣನಾಗಿರುವುದರಿಂದಲೇ ಎಲ್ಲಾ ದೋಷಗಳಿಂದಲೂ ರಹಿತನಾಗಿದ್ದಾನೆ' ಎಂಬುದಾಗಿ ಶ್ರೀಮದಾಚಾರ್ಯರು ಹೇಳಿದ್ದಾರೆ. ಸರ್ವಸ್ವಾತಂತ್ರ್ಯ, ಸರ್ವಜ್ಞಾನ, ಸರ್ವಶಕ್ತಿ, ಸರ್ವೈಶ್ವರ್ಯ ಮೊದಲಾದ ಗುಣಗಳಿದ್ದರೆ ಪಾರತಂತ್ರ್ಯಾದಿ ದೋಷಗಳು ಸರ್ವಥಾ ಬರಲು ಸಾಧ್ಯವಿಲ್ಲ.

ವಿಶೇಷವಿಚಾರ – 'ಶ್ರಿಯಃ ಪತ್ಯೇ' ಎಂಬ ವಿಶೇಷ್ಯವಾಚಕಪದದ ಬಗ್ಗೆ ವ್ಯಾಖ್ಯಾನ ಮಾಡಿದ್ದಾಯಿತು. ಈಗ 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣವಾಚಕಪದದ ಬಗ್ಗೆ ವಿಚಾರ ಮಾಡುತ್ತಿದ್ದಾರೆ. ಈ ವಿಶೇಷಣವು ಶ್ರೀಹರಿಯು ಗುಣಪರಿಪೂರ್ಣನಾಗಿದ್ದಾನೆ. ದೋಷವಿದೂರನಾಗಿದ್ದಾನೆಂದು ಹೇಳುತ್ತಿದೆ. ಇಷ್ಟೇ ಈ ವಿಶೇಷಣದ ಉದ್ದೇಶವಲ್ಲ. ಅನುವ್ಯಾಖ್ಯಾನಪದ್ಯದ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂಬೆರಡು ಪದಗಳ ವ್ಯಾಖ್ಯಾನರೂಪವೂ ಆಗಿದೆ. ಜೊತೆಯಲ್ಲಿ ಪರಮಾತ್ಮನಲ್ಲಿರುವ ನಿರ್ದೋಷಕ್ಕೆ ನಿಖಿಲಪೂರ್ಣಗುಣೈಕದೇಹತ್ವವು ಹೇತುವಾಗಿದೆ ಎಂಬ ಅಪೂರ್ವವಿಷಯವನ್ನೂ ಕೂಡ ತಿಳಿಸುತ್ತಿದೆ.

ಅನುಮಾನವನ್ನು ಹೀಗೆ ತಿಳಿಯಬೇಕು– 'ನಾರಾಯಣಃ ನಿರ್ದೋಷಃ ನಿಖಿಲಪೂರ್ಣಗುಣೈಕದೇಹಾತ್' ಎಂದು.





ನಾರಾಯಣನು ನಿರ್ದೋಷನಾಗಿದ್ದಾನೆನ್ನಲು ನಿಖಿಲಪೂರ್ಣಗುಣೈಕದೇಹತ್ವವು ಹೇತುವಾಗಿದೆ ಎಂಬ ವಿಷಯವನ್ನು ಸ್ವತಃ ಶ್ರೀಮದಾಚಾರ್ಯರೇ ದ್ವಾದಶಸ್ತೋತ್ರದಲ್ಲಿ ಹೇಳಿರುತ್ತಾರೆ. 'ಪ್ರಚ್ಯುತೋಽ-ಶೇಷದೋಷೈಃ ಸದಾ ಪೂರ್ತಿತಃ' ಎಂಬುದರಿಂದ 'ಗುಣಪೂರ್ಣನಾಗಿರುವುದರಿಂದಲೇ ಎಲ್ಲಾ ದೋಷಗಳಿಂದಲೂ ರಹಿತನಾಗಿದ್ದಾನೆ' ಎಂದಿದ್ದಾರೆ.

## ನಾರಾಯಣನೇ ಬ್ರಹ್ಮನೆಂದು ಸಾಧಿಸಿದಂತಾಯಿತು.

**ಪರಿಮಳ– ಏತಚ್ಚ ಬ್ರಹ್ಮಪದೇನ ಗುಣಪೂರ್ತಿವತ್ ನಿರ್ದೋಷತ್ವಸ್ಯಾಪಿ ಲಾಭಾಯ । ತೇನ ನಾರಾಯಣಶಬ್ದಸ್ಯ ಬ್ರಹ್ಮಶಬ್ದಸಮಾನಾರ್ಥತ್ವಸೂಚನೇನ 'ಬ್ರಹ್ಮತಂತ್ರೇ ನಾರಾಯಣನತಿಃ ಮೂಲೇ ನ ಯುಕ್ತಾ' ಇತಿ ಶಂಕಾ ಪರಾಸ್ತಾ ॥**

ಹೀಗೆ ಹೇಳಲು ಕಾರಣವೇನೆಂದರೆ ಬ್ರಹ್ಮಪದದಿಂದ ಗುಣಪೂರ್ಣತ್ವವು ತಿಳಿಯುವಂತೆ ನಿರ್ದೋಷತ್ವವೂ ತಿಳಿಯುತ್ತದೆ ಎಂಬುದು. ಆದ್ದರಿಂದ ನಾರಾಯಣಶಬ್ದವು ಬ್ರಹ್ಮಶಬ್ದ-ಸಮಾನಾರ್ಥಕವಾಗಿದೆ ಎಂದು ಸೂಚನೆ ಮಾಡಿದಂತಾಯಿತು. ಹಾಗಾಗಿ ಬ್ರಹ್ಮಮೀಮಾಂಸಾ-ಶಾಸ್ತ್ರದಲ್ಲಿ ನಾರಾಯಣನಿಗೆ ಅನುವ್ಯಾಖ್ಯಾನಕಾರರು ನಮಸ್ಕಾರ ಮಾಡಿದ್ದು ಅಯುಕ್ತವಾಗಿದೆ ಎಂಬ ಆಶಂಕೆಯನ್ನು ಪರಿಹರಿಸಿದಂತಾಯಿತು.

ವಿಶೇಷವಿಚಾರ – ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿರುವ ವಿಶೇಷಣಗಳು ಬ್ರಹ್ಮಶಬ್ದದ ವ್ಯಾಖ್ಯಾನವೇ ಆಗಿವೆ. ಆದ್ದರಿಂದ ಬ್ರಹ್ಮಶಬ್ದಕ್ಕೆ ಗುಣಪೂರ್ಣತ್ವವು ಹೇಗೆ ಅರ್ಥವೋ ಅದರಂತೆ ನಿರ್ದೋಷತ್ವವೂ ಆಗಿದೆ. ಆದ್ದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅನುವ್ಯಾಖ್ಯಾನಕಾರರು ಬ್ರಹ್ಮನನ್ನೇ ನಮಸ್ಕಾರ ಮಾಡಬೇಕಾಗಿತ್ತು. ನಾರಾಯಣನನ್ನು ಏಕೆ ನಮಸ್ಕಾರ ಮಾಡಿದರು? ಎಂಬ ಆಕ್ಷೇಪ-ವನ್ನು ಪರಿಹರಿಸಿದಂತಾಯಿತು. ನಾರಾಯಣ ಎಂಬ ಪದಕ್ಕೆ ಗುಣಪರಿಪೂರ್ಣನಾದವನು ಎಂಬ ಅರ್ಥವಿರುವಂತೆ ದೋಷರಹಿತನಾಗಿರುವನು ಎಂಬರ್ಥವು ಇರುತ್ತದೆ. ಅದರಂತೆ ಬ್ರಹ್ಮಶಬ್ದಕ್ಕೆ ಗುಣಪರಿಪೂರ್ಣತ್ವ ಎಂಬ ಅರ್ಥವಿರುವಂತೆ ದೋಷರಹಿತತ್ವ ಎಂಬ ಅರ್ಥವೂ ಇರುತ್ತದೆ ಎಂದು ತಿಳಿಯಬೇಕು. ಹೀಗೆ ಬ್ರಹ್ಮಶಬ್ದ ಹಾಗೂ ನಾರಾಯಣಶಬ್ದಗಳು ಎರಡೂ ಸಮಾನಾರ್ಥಕಗಳಾಗುತ್ತವೆ. ಆದ್ದರಿಂದ ನಾರಾಯಣನಿಗೆ ನಮಸ್ಕಾರ ಮಾಡಿದಾಗ ಬ್ರಹ್ಮನನ್ನೇ ನಮಸ್ಕಾರ ಮಾಡಿದಂತಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ನಾರಾಯಣನ ನಮಸ್ಕಾರವು ಅತ್ಯಂತಯುಕ್ತವೇ ಆಗುತ್ತದೆ. ಸೂತ್ರಕಾರರು





ಪ್ರಥಮಸೂತ್ರದಲ್ಲಿ ಬ್ರಹ್ಮನನ್ನು ಕುರಿತು ಮಂಗಲಾಚರಣೆ ಮಾಡಿರುವರು. ಆದಕ್ಕನುಗುಣವಾಗಿ ಅನುವ್ಯಾಖ್ಯಾನಕಾರರು ನಾರಾಯಣನೇ ಬ್ರಹ್ಮನಾಗಿದ್ದಾನೆಂಬುದಾಗಿ ಮಂಗಳಾಚರಣೆ ಮಾಡಿರುವರು. ಆದಕ್ಕನುಗುಣವಾಗಿ ನ್ಯಾಯಸುಧಾಕಾರರು ಶ್ರೀಹರಿಯೇ ಬ್ರಹ್ಮರೂಪನಾಗಿದ್ದಾನೆಂದು ನಮಸ್ಕಾರ ಮಾಡಿರುವರು.

## ನಿತ್ಯಾಗಣಿತ ಇತ್ಯಾದಿ ವಿಶೇಷಣಕ್ಕೆ ಮತ್ತೊಂದು ಪ್ರಯೋಜನ.

ಪರಿಮಳ– ಯದ್ವಾ ಲೋಕೇ ಗುಣದೋಷಯೋರವಿನಾಭಾವದೃಷ್ಟೇಃ ಇಹಾಪಿ ಗುಣಿತ್ವೇ ದೋಷಿತ್ವಾಪತ್ತಿಃ - ಇತ್ಯತಃ ಮಿತಗುಣಿತ್ವೇ ದೋಷಿತ್ವಮ್, ಅತ್ರ ಅಮಿತಗುಣತ್ವಾತ್ ನ ದೋಷಿತಾ ಇತಿ ಸೂಚನಾಯ ಏವಮುಕ್ತಿಃ ।

ಅಥವಾ ಲೋಕದಲ್ಲಿ ಗುಣದೋಷಗಳು ಅವಿನಾಭೂತವಾಗಿ ಇರುವುದು ಕಂಡಿದೆ. ಆದರಂತೆ ಪರಮಾತ್ಮನೂ ಕೂಡ ಗುಣವುಳ್ಳವನಾದರೆ ದೋಷವುಳ್ಳವನು ಕೂಡ ಆಗಬೇಕಲ್ಲವೇ? ಎಂಬ ಶಂಕೆ ಬರುತ್ತದೆ. ಆದರೆ ಸ್ವಲ್ಪಗುಣಗಳಿದ್ದರೆ ದೋಷಗಳು ಬರಲು ಅವಕಾಶವಿರುತ್ತದೆ. ಅಪರಿಮಿತಗುಣಗಳಿದ್ದಾಗ ದೋಷಗಳು ಬರಲು ಅವಕಾಶವೇ ಇರುವುದಿಲ್ಲ. ಇದನ್ನು ಸೂಚನೆ ಮಾಡುವುದಕ್ಕಾಗಿ 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬುದಾಗಿ ಹೇಳಿರುತ್ತಾರೆ.

ವಿಶೇಷವಿಚಾರ – 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣವು ಅನುವ್ಯಾಖ್ಯಾನ ಪದ್ಯದ 'ನಿಖಿಲಪೂರ್ಣಗುಣೈಕದೇಹಂ' ಹಾಗೂ 'ನಿರ್ದೋಷಂ' ಎಂಬೆರಡು ವಿಶೇಷಣಗಳನ್ನು ವ್ಯಾಖ್ಯಾನ ಮಾಡುತ್ತಿದೆ ಎಂಬುದಾಗಿ ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಈಗ ಇದೇ ವಿಶೇಷಣಕ್ಕೆ ಮತ್ತೊಂದು ಪ್ರಯೋಜನವನ್ನು ಹೀಗೆ ತಿಳಿಯಬೇಕು. 'ಎಲ್ಲಿ ಗುಣವಿರುತ್ತದೋ ಅಲ್ಲಿ ದೋಷವಿರುತ್ತದೆ' ಎಂಬುದು ಲೋಕದಲ್ಲಿ ಕಂಡ ನಿಯಮ. ನಾರಾಯಣನು ಗುಣವುಳ್ಳವನಾದರೆ ದೋಷವುಳ್ಳವನು ಕೂಡ ಆಗಬೇಕಾಗುತ್ತದೆ ಎಂಬ ಶಂಕೆಯು ಬಂದರೆ ಈ ವಿಶೇಷಣವು ಅದನ್ನು ಪರಿಹರಿಸುತ್ತಿದೆ. ನಾರಾಯಣನಲ್ಲಿ ನಿತ್ಯವಾದ ಅಗಣಿತವಾದ ಗುಣಗಳಿವೆ. ಎಲ್ಲಿ ನಿತ್ಯವಾದ ಅಗಣಿತವಾದ ಗುಣಗಳಿರುತ್ತವೆಯೋ ಅಲ್ಲಿ ದೋಷಗಳು ಬರಲು ಸಾಧ್ಯವೇ ಇಲ್ಲ. ಆದ್ದರಿಂದ ಲೋಕನಿಯಮದಂತೆ ಬ್ರಹ್ಮನಲ್ಲಿ ದೋಷಗಳನ್ನು ಶಂಕಿಸಲಾಗದು.





## ನಿತ್ಯ ಎಂಬ ಗುಣವಿಶೇಷಣದ ಸ್ವಾರಸ್ಯ

**ಪರಿಮಳ– ದೇಹಸ್ಯ ಜ್ಞಾನಾದಿಗುಣಾತ್ಮಕತ್ವೇ ಲೋಕೇ ಜ್ಞಾನಾದೇರನಿತ್ಯತ್ವಾತ್ ದೇಹೋಽಪಿ ತಥಾ ಸ್ಯಾತ್ - ಇತಿ ಶಂಕಾನಿರಾಸಾಯ 'ನಿತ್ಯ'ಇತಿ ಗುಣವಿಶೇಷಣಮ್ । ತೇನ ಮೂಲೇ 'ಸದಾ'ಪದಸ್ಯ 'ನಿಖಿಲ' ಇತ್ಯತ್ರಾಪಿ ಅನ್ವಯಃ ಸೂಚಿತಃ ।**

ಶ್ರೀಹರಿಯ ದೇಹವು ಜ್ಞಾನಾದಿಗುಣಾತ್ಮಕವೆಂದಿದ್ದೀರಿ. ಜ್ಞಾನಾದಿಗಳು ಅನಿತ್ಯವಾಗಿರುವುದರಿಂದ ದೇಹವೂ ಕೂಡ ಅನಿತ್ಯವಾಗಬೇಕಲ್ಲವೇ ಎಂಬ ಸಂಶಯಪರಿಹಾರಕ್ಕಾಗಿ ಗುಣದಲ್ಲಿ ನಿತ್ಯತ್ವವನ್ನು ವಿಶೇಷಣವನ್ನಾಗಿ ನೀಡಲಾಗಿದೆ. ಇದರಿಂದ ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ಸದಾ' ಎಂಬ ಪದಕ್ಕೆ 'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲೂ ಕೂಡ ಅನ್ವಯವಿದೆ ಎಂದು ಸೂಚನೆ ಮಾಡಿದಂತಾಯಿತು.

ವಿಶೇಷವಿಚಾರ – ಪ್ರಶ್ನೆ – ಪರಮಾತ್ಮನ ದೇಹವು ಸತ್, ಚಿತ್, ಜ್ಞಾನ ಆನಂದ ಇತ್ಯಾದಿ ಸ್ವರೂಪವಾಗಿದೆ ಎಂದು ಹೇಳಬೇಕು. ಜ್ಞಾನಾನಂದಾದಿಗಳು ಕ್ಷಣಿಕವಾಗಿವೆ ಎಂಬುದು ಲೋಕದಲ್ಲಿ ಕಂಡಿರುವ ನಿಯಮ. ಈ ಗುಣಗಳು ಶ್ರೀಹರಿಯ ದೇಹವಾದರೆ ಅವನ ದೇಹವೂ ಕೂಡ ಕ್ಷಣಿಕ ಆಗಬೇಕಲ್ಲವೇ?

ಉತ್ತರ – ಲೋಕದಲ್ಲಿರುವ ಪ್ರತಿಯೊಬ್ಬರ ಜ್ಞಾನಾನಂದಾದಿಗಳು ಅನಿತ್ಯವಾಗಿವೆ. ಆದರೆ ಶ್ರೀಹರಿಯಲ್ಲಿರುವ ಜ್ಞಾನಾನಂದಾದಿಗಳು ನಿತ್ಯವಾಗಿವೆ. ಈ ಗುಣಗಳಿಗೆ ಉತ್ಪತ್ತಿಯೂ ಇಲ್ಲ, ನಾಶವೂ ಇರುವುದಿಲ್ಲ. ಆದ್ದರಿಂದ ಪರಮಾತ್ಮನ ದೇಹವು ಅನಿತ್ಯವಾಗಲು ಸಾಧ್ಯವಿಲ್ಲ. ಈ ಪ್ರಮೇಯವನ್ನು ನ್ಯಾಯಸುಧೆಯ ಮಂಗಳಶ್ಲೋಕದಲ್ಲಿ 'ನಿತ್ಯ' ಎಂಬ ವಿಶೇಷಣದಿಂದ ತಿಳಿಸಿರುತ್ತಾರೆ.

'ನಿತ್ಯ' ಎಂಬ ವಿಶೇಷಣಕ್ಕೆ ಇದೊಂದೇ ಪ್ರಯೋಜನವಲ್ಲ ಅನುವ್ಯಾಖ್ಯಾನದ 'ಸದಾ' ಎಂಬ ಪದದ ವ್ಯಾಖ್ಯಾನವೂ ಇದಾಗಿದೆ. 'ಸದಾ' ಎಂಬ ಪದಕ್ಕೆ ನಿತ್ಯ ಎಂದರ್ಥ. ಈ ಸದಾ ಎಂಬ ಪದವು ನಿಖಿಲಪೂರ್ಣಗುಣೈಕದೇಹಂ ಎಂಬಲ್ಲೂ ಕೂಡ ಅನ್ವಯವನ್ನು ಹೊಂದುತ್ತದೆ. ಆದ್ದರಿಂದ ಪರಮಾತ್ಮನು ನಿತ್ಯದಲ್ಲೂ ನಿಖಿಲಪೂರ್ಣಗುಣೈಕದೇಹನಾಗಿದ್ದಾನೆ ಎಂದು ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡಿದಂತಾಯಿತು.

## ಸಕಲಾವದ್ಯತಮಸೇ ಎಂಬುದರ ವ್ಯಾಖ್ಯಾನ

**ಪರಿಮಳ– 'ನಿರ್ದೋಷಮ್' ಇತ್ಯತ್ರ ದೋಷಪದಂ ಅಶೇಷದೋಷಪರಮ್ ಇತಿ ಜ್ಞಾಪನಾಯ 'ಸಕಲಾವದ್ಯ' ಇತ್ಯುಕ್ತಿಃ।**

'ನಿರ್ದೋಷಂ' ಎಂಬಲ್ಲಿರುವ ದೋಷಪದವು ಸಕಲದೋಷಗಳನ್ನು ಹೇಳುತ್ತಿದೆ. ಇದನ್ನು ತಿಳಿಸುವುದಕ್ಕಾಗಿ 'ಸಕಲಾವದ್ಯ' ಎಂಬ ವಿಶೇಷಣವನ್ನು ನೀಡಿದ್ದಾರೆ.

ವಿಶೇಷವಿಚಾರ – ಅನುವ್ಯಾಖ್ಯಾನಪದ್ಯದಲ್ಲಿ ನಾರಾಯಣನು ನಿರ್ದೋಷನಾಗಿದ್ದಾನೆ ಎಂದಿದ್ದಾರೆ. ಇಲ್ಲಿರುವ ದೋಷಪದದಿಂದ ಎಲ್ಲಾ ದೋಷಗಳನ್ನು ವಿವಕ್ಷಿಸಬೇಕು. ಆಗ ಎಷ್ಟು ದೋಷಗಳಿವೆಯೋ ಅವುಗಳಲ್ಲಿ ಯಾವುದೂ ಕೂಡ ನಾರಾಯಣನಿಗೆ ಇರುವುದಿಲ್ಲ ಎಂದು ಹೇಳಿದಂತಾಗುತ್ತದೆ. ಇಲ್ಲದಿದ್ದರೆ ಕೆಲವು ದೋಷಗಳಿಲ್ಲದ ಕಾರಣದಿಂದಲೂ ನಿರ್ದೋಷತ್ವವನ್ನು ಹೇಳಬಹುದೆಂಬ ಶಂಕೆಗೆ ಅವಕಾಶವಿರುತ್ತಿತ್ತು. ಅದಕ್ಕಾಗಿ ನ್ಯಾಯಸುಧೆಯಲ್ಲಿ 'ಅಪಹತಸಕಲಾವದ್ಯತಮಸೇ' ಎಂಬುದಾಗಿ ಹೇಳಿದ್ದಾರೆ. ಅವದ್ಯ ಪದಕ್ಕೆ ದೋಷ ಎಂದರ್ಥ. ಎಲ್ಲಾ ಬಗೆಯ ದೋಷಗಳೆಂಬ ತಮಸ್ಸಿನಿಂದ ರಹಿತನಾಗಿದ್ದಾನೆ ಎಂಬುದು ಇದರ ಅರ್ಥ. ಹೀಗೆ 'ಅಪಹತಸಕಲಾವದ್ಯತಮಸೇ' ಎಂಬುದು ಅನುವ್ಯಾಖ್ಯಾನದ ನಿರ್ದೋಷಂ ಎಂಬ ಪದದ ವ್ಯಾಖ್ಯಾನರೂಪವಾಗಿದೆ.

## ಅಸ್ಯೋದ್ಭವಾದಿದಂ ಎಂಬುದರ ವ್ಯಾಖ್ಯಾನ

**ಪರಿಮಳ– 'ಅಸ್ಯೋದ್ಭವಾದಿದಮ್' ಇತ್ಯತ್ರ 'ಅಸ್ಯ' ಇತಿ ಪದಂ 'ಪ್ರಮಿತಸರ್ವಪರಂ ಸದಪಿ ನೇಶ್ವರಪರಮ್' ಇತಿ ಜ್ಞಾಪನಾಯ 'ಜಗಜ್ಜನ್ಮ' ಇತ್ಯುಕ್ತಮ್ । ಅನೇನ ಅಸ್ಯ ಸಮಸ್ತಸ್ಯ 'ಅಸ್ಯೋದ್ಭವಾದಿದಮ್' ಇತ್ಯನ್ವಯಃ ಸೂಚಿತಃ।**

'ಅಸ್ಯೋದ್ಭವಾದಿದಂ' ಎಂಬಲ್ಲಿ ಅಸ್ಯ ಎಂಬ ಪದದಿಂದ ಪ್ರಮಿತವಾದದ್ದೆಲ್ಲವನ್ನೂ ಕೂಡ ವಿವಕ್ಷಿಸಬೇಕು. ಆದರೆ ಈಶ್ವರನನ್ನು ವಿವಕ್ಷಿಸುವಂತಿಲ್ಲ. ಇದನ್ನು ತಿಳಿಸುವುದಕ್ಕಾಗಿ 'ಜಗಜ್ಜನ್ಮ' ಎಂದು ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಇಲ್ಲಿ ಹೇಳಲ್ಪಟ್ಟ ಪ್ರತಿಯೊಂದು ವಿಶೇಷಣಗಳಿಗೂ 'ಅಸ್ಯೋದ್ಭವಾದಿದಮ್' ಎಂಬುದರ ಜೊತೆ ಅನ್ವಯವನ್ನು ಸೂಚನೆ ಮಾಡಿದಂತಾಯಿತು.



ವಿಶೇಷವಿಚಾರ – 'ಅಸ್ಯೋದ್ಭವಾದಿದಂ' ಎಂಬ ಅನುವ್ಯಾಖ್ಯಾನದ ಮಾತನ್ನು ವ್ಯಾಖ್ಯಾನಮಾಡಲು ಜಗಜ್ಜನ್ಮ ಇತ್ಯಾದಿ ವಿಶೇಷಣವು ಪ್ರಯುಕ್ತವಾಗಿದೆ. ಅಸ್ಯ ಎಂಬ ಪದದಿಂದ ಪ್ರಮಿತವಾದದ್ದೆಲ್ಲವನ್ನೂ ಕೂಡ ವಿವಕ್ಷಿಸಬೇಕು. ಈಶ್ವರನು ಪ್ರಮಿತನಾದ್ದರಿಂದ ಅವನನ್ನೂ ಕೂಡ ವಿವಕ್ಷಿಸಬೇಕೆಂದು ಭಾಸವಾಗುತ್ತದೆ. ಈಶ್ವರನಿಗೆ ಹುಟ್ಟು, ಸಾವು ಮೊದಲಾದವುಗಳಿಲ್ಲ ಕಾರಣ ಈಶ್ವರನನ್ನು ಇದರಿಂದ ವಿವಕ್ಷಿಸುವುದು ತಪ್ಪಾಗುತ್ತದೆ. ಆದ್ದರಿಂದ ಈಶ್ವರನನ್ನು ಬಿಟ್ಟು ಉಳಿದ ಜಗತ್ತನ್ನು 'ಅಸ್ಯ' ಎಂಬ ಪದದಿಂದ ವಿವಕ್ಷಿಸಬೇಕೆಂದು ತಿಳಿಸಲು ನ್ಯಾಯಸುಧೆಯಲ್ಲಿ 'ಜಗತ್' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

'ಅಸ್ಯೋದ್ಭವಾದಿದಮ್' ಎಂಬುದರಿಂದ ಜಗತ್ತಿಗೆ ಉತ್ಪತ್ತಿ ಮೊದಲಾದವುಗಳನ್ನು ಉಂಟುಮಾಡುತ್ತಾನೆ ಎಂಬುದು ತಿಳಿಯುತ್ತದೆ. ಆದಿ ಪದದಿಂದ ಯಾವುದನ್ನು ವಿವಕ್ಷಿಸಬೇಕೆಂಬುದನ್ನು ಕೂಡ ಇದೇ ಜಗಜ್ಜನ್ಮಸ್ಥೇಮ ಇತ್ಯಾದಿವಿಶೇಷಣದಿಂದ ಟೀಕೆಯಲ್ಲಿ ತಿಳಿಸಿದ್ದಾರೆ. ಸ್ಥಿತಿ ಲಯ ಇತ್ಯಾದಿಗಳನ್ನು ವಿವಕ್ಷಿಸಬೇಕು.

## ಸ್ಥೇಮ ಎಂದರೆ ರಕ್ಷಣೆ

ಪರಿಮಳ– 'ಸ್ಥೇಮಾ' = ಸ್ಥೈರ್ಯಂ ರಕ್ಷಾ ಇತ್ಯರ್ಥಃ। ಉಕ್ತಂ ಹಿ ಶ್ರುತಪ್ರಕಾಶೇಽಪಿ – 'ಅಖಿಲಭುವನಜನ್ಮಸ್ಥೇಮಭಂಗಾದಿಲೀಲ-' ಇತಿ ಭಾಷ್ಯವ್ಯಾಖ್ಯಾನಾವಸರೇ 'ಸ್ಥೇಮಾ ಸ್ಥಿತಿಃ' ಇತಿ।

'ಸ್ಥೇಮ' ಎಂಬ ಪದಕ್ಕೆ ಸ್ಥೈರ್ಯ ಎಂದರ್ಥ. ರಕ್ಷಣೆಯನ್ನು ಈ ಶಬ್ದವು ಹೇಳುತ್ತದೆ. ರಕ್ಷಣೆ ಎಂಬ ಅರ್ಥದಲ್ಲಿ ಸ್ಥೇಮ ಎಂಬ ಶಬ್ದವನ್ನು ರಾಮಾನುಜಭಾಷ್ಯದಲ್ಲಿ ಕೂಡ ಮಾಡಿದ್ದಾರೆ. ''ಅಖಿಲಭುವನಜನ್ಮಸ್ಥೇಮಭಂಗಾದಿಲೀಲ-' ಎಂದು. ಇಲ್ಲಿ 'ಸ್ಥೇಮ' ಎಂಬ ಪದಕ್ಕೆ ವ್ಯಾಖ್ಯಾನ ಮಾಡುವಾಗ ಶ್ರುತಪ್ರಕಾಶದಲ್ಲಿ 'ಸ್ಥೇಮಾ = ಸ್ಥಿತಿಃ' ಎಂಬುದಾಗಿ ಹೇಳಲಾಗಿದೆ.

## ಸ್ಥೇಮ ಎಂಬ ರೂಪನಿಷ್ಪತ್ತಿ

ಪರಿಮಳ– ಸ್ಥಿರಶಬ್ದಾದಿಮನಿಚ್‌ಪ್ರತ್ಯಯೇ 'ಪ್ರಿಯಸ್ಥಿರೇ'ತ್ಯಾದಿ ಸೂತ್ರೇಣ ಸ್ಥಿರಶಬ್ದಸ್ಯ ಸ್ಥಾದೇಶೇ 'ಆದ್ಗುಣಃ' ಇತಿ ಗುಣೇ ಚ ಸ್ಥೇಮೇತಿ ರೂಪಮ್।





ಸ್ಥಿರಶಬ್ದದ ಮೇಲೆ ಇಮನಿಚ್ ಪ್ರತ್ಯಯವು ಪ್ರಾಪ್ತವಾದರೆ ಪ್ರಿಯಸ್ಥಿರ ಎಂಬ ಸೂತ್ರದಿಂದ ಸ್ಥಿರಶಬ್ದಕ್ಕೆ ಸ್ಥಾ ಎಂಬ ಆದೇಶವು ಪ್ರಾಪ್ತವಾಗುತ್ತದೆ. ಆಗ 'ಆದ್‌ಗುಣಃ' ಎಂಬ ಸೂತ್ರದಿಂದ ಗುಣವು ಬಂದರೆ 'ಸ್ಥೇಮ' ಎಂಬುದಾಗಿ ರೂಪವು ನಿಷ್ಪನ್ನವಾಗುತ್ತದೆ.

ವಿಶೇಷವಿಚಾರ – 'ಪ್ರಿಯಸ್ಥಿರಸ್ಫಿರೋರುಬಹುಲಗುರುವೃದ್ಧತೃಪ್ರದೀರ್ಘವೃಂದಾರಕಾಣಾಂ ಪ್ರಸ್ಥಸ್ಫ ವರ್ಬಹಿಗರ್ವರ್ಷಿತ್ರಪ್‌ದ್ರಾಘಿವೃಂದಾಃ' (೬-೪-೧೫೭) ಎಂಬ ಸೂತ್ರದಿಂದ ಪ್ರಿಯಾದಿ ಸ್ಥಾನಿಗಳಿಗೆ ಕ್ರಮವಾಗಿ ಪ್ರಾದಿಗಳು ಆದೇಶವಾಗಿ ಬರುತ್ತವೆ. ಪ್ರಿಯಶಬ್ದಕ್ಕೆ ಪ್ರ ಎಂಬ ಆದೇಶವು ಬಂದರೆ ಪ್ರೇಷ್ಠಃ ಎಂಬ ರೂಪವು ಸಿದ್ಧವಾಗುತ್ತದೆ. ಇದರಿಂದ ಸ್ಥೇಷ್ಠಃ ವರಿಷ್ಠಃ ಬಂಹಿಷ್ಠಃ ಗರಿಷ್ಠಃ ವರ್ಷಿಷ್ಠಃ ತ್ರಪಿಷ್ಠಃ ದ್ರಾಘಿಷ್ಠಃ ವೃಂದಿಷ್ಠಃ ಇತ್ಯಾದಿ ರೂಪಗಳು ನಿಷ್ಪನ್ನವಾಗುತ್ತವೆ.

ಪ್ರಕೃತ ಸ್ಥಿರಶಬ್ದಕ್ಕೆ ಸ್ಥ ಎಂಬ ಆದೇಶವು ಬಂದರೆ ಇದರ ಮೇಲೆ ಇಮನಿಚ್ ಪ್ರತ್ಯಯವು ಬರುತ್ತದೆ. ಇಮನಿಚ್ ಪ್ರತ್ಯಯದಲ್ಲಿ ಕೊನೆಯ ಇಕಾರವು ಉಚ್ಚಾರಣೆಗೋಸ್ಕರ ಪ್ರಯುಕ್ತವಾಗಿದೆ. ಚ್ ಎಂಬುದು ಇತ್ ಸಂಜ್ಞೆಯನ್ನು ಹೊಂದುತ್ತದೆ. ಆಗ ಇಮನ್ ಎಂದಷ್ಟೇ ಉಳಿಯುತ್ತದೆ. 'ಸ್ಥ +ಇಮನ್' ಎಂದಿರುವಾಗ 'ಆದ್‌ಗುಣಃ' ಎಂಬ ಸೂತ್ರದಿಂದ ಗುಣವು ಬಂದರೆ 'ಸ್ಥೇಮನ್' ಎಂಬ ಮೂಲರೂಪವು ನಿಷ್ಪನ್ನವಾಯಿತು. ಇದು ನಕಾರಾಂತವಾದ ಪುಂಲಿಂಗಶಬ್ದವಾಗಿದೆ. ಸ್ಥೇಮಾ, ಸ್ಥೇಮಾನೌ, ಸ್ಥೇಮಾನಃ ಎಂಬುದು ಇದರ ಪ್ರಥಮಾವಿಭಕ್ತಿಯ ರೂಪಗಳು.

## ಸ್ಥೇಮ ಎಂಬ ಶಬ್ದವು ಅಸಾಧುವಲ್ಲವೇ?

**ಪರಿಮಳ– ಯದ್ಯಪಿ ವಾಮನವೃತ್ತ್ಯಾದೌ 'ಮುಗ್ಧಪ್ರೌಢಸ್ಥಿರಶಬ್ದಾನಾಂ ಪೃಥ್ವಾದಿಷ್ವಪಾಠಾತ್ ಪೃಥ್ವಾದಿಭ್ಯ ಇಮನಿಜ್ವೇತ್ಯುಕ್ತೇಮನಿಜಪ್ರಾಪ್ತೇರಿಮನಿಜಂತಪ್ರಯೋಗೋಽಸಾಧುಃ' ಇತಿ ಉಕ್ತಮ್ ।**

ವಾಸ್ತವಿಕವಾಗಿ ವಾಮನವೃತ್ತಿಯಲ್ಲಿ 'ಮುಗ್ಧಪ್ರೌಢಸ್ಥಿರಶಬ್ದಾನಾಂ ಪೃಥ್ವಾದಿಷ್ವಪಾಠಾತ್ ಪೃಥ್ವಾದಿಭ್ಯ ಇಮನಿಜ್ವೇತ್ಯುಕ್ತೇಮನಿಜಪ್ರಾಪ್ತೇರಿಮನಿಜಂತಪ್ರಯೋಗೋಽಸಾಧುಃ' 'ಮುಗ್ಧ, ಪ್ರೌಢ, ಸ್ಥಿರ ಶಬ್ದಗಳು ಪೃಥ್ವಾದಿಗಣದಲ್ಲಿ ಪಠಿತವಾಗಿಲ್ಲವಾದ್ದರಿಂದ 'ಪೃಥ್ವಾದಿಭ್ಯಃ ಇಮನಿಜ್ವಾ' ಎಂಬ ಸೂತ್ರದಿಂದ ಇಮನಿಜ್‌ಪ್ರತ್ಯಯವು ಪ್ರಾಪ್ತವಾಗುವುದಿಲ್ಲ; ಆದ್ದರಿಂದ ಇಮನಿಜಂತಪ್ರಯೋಗ ಮಾಡಿರುವುದು ಅಸಾಧುವಾಗಿದೆ.





ವಿಶೇಷವಿಚಾರ – 'ಪೃಥ್ವಾದಿಭ್ಯ ಇಮನಿಜ್ವಾ' ಎಂಬ ಸೂತ್ರದಿಂದ ಪೃಥ್ವಾದಿಗಣದಲ್ಲಿ ಪಠಿತ-ವಾದದ್ದಕ್ಕೆ ಇಮನಿಚ್ ಪ್ರತ್ಯಯವನ್ನು ವಿಧಿಸಲಾಗಿದೆ. ಅನಂತರ 'ಪ್ರಿಯಸ್ಥಿರಸ್ಫಿರೋರುಬಹುಲಗುರು-ವೃದ್ಧತೃಪ್ರದೀರ್ಘವೃಂದಾರಕಾಣಾಂ ಪ್ರಸ್ಥಸ್ಫವರ್ಬಹಿಗರ್ವರ್ಷಿತ್ರಪ್‌ದ್ರಾಘಿವೃಂದಾಃ ' ಎಂಬ ಸೂತ್ರದಿಂದ ಇಷ್ಠನ್, ಇಯಸುನ್, ಇಮನಿಚ್ ಈ ಮೂರು ಪ್ರತ್ಯಯಗಳು ಪರದಲ್ಲಿದ್ದಾಗ ಪ್ರಿಯಾದಿಶಬ್ದಗಳಿಗೆ ಪ್ರಾದಿ ಆದೇಶಗಳು ಬರುತ್ತವೆ. ಆದರೆ ಇಯಸುನ್‌ಪ್ರತ್ಯಯ ಪರದಲ್ಲಿದ್ದಾಗ ಕೆಲವು ಶಬ್ದಗಳಿಗೆ ಈ ಆದೇಶವು ಪ್ರಾಪ್ತವಾಗುವುದಿಲ್ಲ. ಪೃಥ್ವಾದಿಗಣದಲ್ಲಿ ಪಠಿತವಾದ ಶಬ್ದಗಳಿಗೆ ಮಾತ್ರ ಪ್ರಾದಿ ಆದೇಶಗಳು ಪ್ರಾಪ್ತವಾಗುತ್ತವೆ ಎಂಬುದು ಸೂತ್ರದ ಅಭಿಪ್ರಾಯ.

ಈ ಸಂದರ್ಭದಲ್ಲಿ ವೃತ್ತಿಕಾರನಾದ ವಾಮನನು ಹೀಗೆ ಹೇಳುತ್ತಾನೆ(*). ಮುಗ್ಧ, ಪ್ರೌಢ, ಹಾಗೂ ಸ್ಥಿರಶಬ್ದಗಳು ಪೃಥ್ವಾದಿಗಣದಲ್ಲಿ ಪಠಿತವಾಗಿಲ್ಲ. ಆದ್ದರಿಂದ ಪೃಥ್ವಾದಿಭ್ಯಃ ಇಮನಿಜ್ವಾ ಎಂಬ ಸೂತ್ರ-ದಿಂದ ಸ್ಥಿರಶಬ್ದದ ಮೇಲೆ ಇಮನಿಚ್‌ಪ್ರತ್ಯಯವು ಪ್ರಾಪ್ತವಾಗುವುದಿಲ್ಲ ಎಂದು ಹೇಳಿದ್ದಾನೆ. ಹೀಗಿರು-ವಾಗ ಇಮನಿಜಂತವಾದ ಸ್ಥೇಮ ಎಂಬ ಪ್ರಯೋಗವು ವಾಮನನ ಪ್ರಕಾರ ಅಸಾಧುವಾಗುತ್ತದೆ. ಆದ್ದರಿಂದ ನ್ಯಾಯಸುಧೆಯಲ್ಲಿ ಸ್ಥೇಮ ಎಂಬ ಶಬ್ದವನ್ನು ಹೇಗೆ ಪ್ರಯೋಗ ಮಾಡಿದರು.

## ಸ್ಥೇಮ ಎಂಬ ಶಬ್ದವು ಸಾಧುವೇ ಆಗಿದೆ.

**ಪರಿಮಳ– ತಥಾಪಿ ನೈಷಧದ್ವಾದಶಸರ್ಗಸ್ಥಸ್ಯ 'ಯತ್ ಕಸ್ಯಾಮಪಿ ಭಾನುಮಾನ್ನ ಕಕುಭಿ ಸ್ಥೇಮಾನಮಾಲಂಬತೇ' ಇತ್ಯಸ್ಯ ವ್ಯಾಖ್ಯಾನೇ 'ವರ್ಣದೃಢಾದಿಭ್ಯಃ ಷ್ಯಞ್ ಚ' ಇತಿ ಸೂತ್ರೇ ಚಕಾರೇಣೇಮನಿಚಃ ಸಮುಚ್ಚಿತತ್ವಾತ್ ಸ್ಥಿರಶಬ್ದಸ್ಯ ದೃಢಾದಿಷು ಪಾಠಾದಮನಿಜಿತ್ಯು-ಕ್ತತ್ವಾತ್ ಸಾಧುರೇವಾಯಂ ಧ್ಯೇಯಃ।**

ಹೌದು. ಆದರೆ ನೈಷಧಕಾವ್ಯದ ಹನ್ನೆರಡನೆಯ ಸರ್ಗದಲ್ಲಿ 'ಯತ್ ಕಸ್ಯಾಮಪಿ ಭಾನು-ಮಾನ್ನ ಕಕುಭಿ ಸ್ಥೇಮಾನಮಾಲಂಬತೇ' ಎಂಬುದಾಗಿ ಸ್ಥೇಮ ಎಂಬ ಶಬ್ದವನ್ನು ಪ್ರಯೋಗಿಸ-ಲಾಗಿದೆ. ಇದಕ್ಕೆ ವ್ಯಾಖ್ಯಾನಮಾಡುವಾಗ 'ವರ್ಣದೃಢಾದಿಭ್ಯಃ ಷ್ಯಞ್ ಚ' ಎಂಬ ಸೂತ್ರದಿಂದ

(*) ಕಾಶಿಕಾವೃತ್ತಿಯನ್ನು ಮೊದಲು ಜಯಾದಿತ್ಯನು ಬರೆದಿದ್ದಾನೆ. ಆಮೇಲೆ ವಾಮನನು ಬರೆದಿದ್ದಾನೆ. ಆದ್ದರಿಂದ ಜಯಾದಿತ್ಯ ಹೇಗೆ ಕಾಶಿಕಾವೃತ್ತಿಕಾರನೋ ಅದೇ ರೀತಿಯಾಗಿ ವಾಮನನೂ ಕೂಡ ಆಗಿದ್ದಾನೆ. ಇಬ್ಬರೂ ಸೇರಿ ಬರೆದ ಗ್ರಂಥವೇ ''ಕಾಶಿಕಾವೃತ್ತಿ''ಯಾಗಿದೆ.





ಚಕಾರದಿಂದ ಇಮನಿಚ್ ಪ್ರತ್ಯಯವನ್ನು ಸಮುಚ್ಚಯ ಮಾಡಬೇಕೆಂದು ಹೇಳಿದ್ದಾರೆ. ಸ್ಥಿರಶಬ್ದವು ದೃಢಾದಿಗಣದಲ್ಲಿ ಪಠಿತವಾಗಿರುವುದರಿಂದ ಇಮನಿಚ್‌ಪ್ರತ್ಯಯವು ವ್ಯಾಕರಣಸೂತ್ರದ ಪ್ರಕಾರ-ವೇ ಪ್ರಾಪ್ತವಾಗುತ್ತದೆ. ಆದ್ದರಿಂದ ಸ್ಥೇಮ ಎಂಬ ಶಬ್ದವು ವ್ಯಾಕರಣಕ್ಕೆ ವಿರುದ್ಧವಾದ ಪ್ರಯೋಗ-ವಲ್ಲ. ವ್ಯಾಕರಣಕ್ಕೆ ಅನುಗುಣವಾದ ಸಾಧುಪ್ರಯೋಗವೇ ಆಗಿದೆ.

ವಿಶೇಷವಿಚಾರ – ಶ್ರೀಹರ್ಷನು ತನ್ನ ನೈಷಧಕಾವ್ಯದಲ್ಲಿ(*) ಸ್ಥೇಮಾನಂ ಎಂಬುದಾಗಿ ಇಮ-ನಿಜಂತವಾದ ಪ್ರಯೋಗವನ್ನು ಮಾಡಿದ್ದಾನೆ. ಆ ನೈಷಧಕಾವ್ಯದ ವ್ಯಾಖ್ಯಾನದಲ್ಲಿ ಸ್ಥೇಮಾನಂ ಎಂಬ ಶಬ್ದವು ವಾಮನವೃತ್ತಿಗೆ ವಿರುದ್ಧವಲ್ಲವೇ ಎಂದು ಆಕ್ಷೇಪ ಮಾಡಿಕೊಂಡು 'ವರ್ಣದೃಢಾದಿಭ್ಯಃ ಷ್ಯಞ್ ಚ' (೫-೧-೧೨೩)ಎಂಬ ಸೂತ್ರದಿಂದಲೇ ಈ ರೂಪವು ನಿಷ್ಪನ್ನವಾಗುತ್ತದೆಂದು ಸಮರ್ಥಿಸಲಾಗಿದೆ.

ವರ್ಣವಾಚಕವಾದ ಶಬ್ದಗಳಿಗೆ ಮತ್ತು ದೃಢಾದಿಗಣದಲ್ಲಿ ಪಠಿತವಾದವುಗಳಿಗೆ ಷ್ಯಞ್‌ಪ್ರತ್ಯಯವು ಬರುತ್ತದೆ. ಚಕಾರದಿಂದ ಇಮನಿಚ್ ಪ್ರತ್ಯಯವನ್ನು ಸಮುಚ್ಚಯ ಮಾಡಬೇಕು. ಆದ್ದರಿಂದ ಪ್ರಕೃತ ಸ್ಥಿರ-ಶಬ್ದವು ದೃಢಾದಿಗಣದಲ್ಲಿ ಪಠಿತವಾಗಿದೆ. ಆದ್ದರಿಂದ ಪಾಣಿನೀ ಸೂತ್ರದಿಂದಲೇ ಇಮನಿಚ್‌ಪ್ರತ್ಯಯವು ಬಂದು ಸ್ಥೇಮ ಎಂಬ ರೂಪವು ಸಾಧುವಾಗುತ್ತದೆ.

ನೈಷಧವ್ಯಾಖ್ಯಾನದಲ್ಲಿ ಹೇಳಿದ ಈ ವಿಷಯವು ವೃತ್ತಿಕಾರನಾದ ವಾಮನನಿಗೆ ಸಮ್ಮತವಲ್ಲ. ಆದರೆ ನೈಷಧನಿಗೆ ಸಮ್ಮತವಾಗಿರುವುದರಿಂದ ಇದು ಅಭಿಯುಕ್ತಪ್ರಯೋಗವಾಗಿದೆ. ಅಭಿಯುಕ್ತಪ್ರಯೋಗದಿಂದ ಸಾಧುತ್ವವನ್ನು ತಿಳಿಯಬೇಕೆಂದು ವ್ಯಾಖ್ಯಾನ ಮಾಡಲಾಗಿದೆ. ಆದ್ದರಿಂದ ಪ್ರಕೃತ ನ್ಯಾಯಸುಧೆಯಲ್ಲೂ ಕೂಡ ಅಭಿಯುಕ್ತಪ್ರಯೋಗ ಎಂದು ವಿವಕ್ಷಿಸಿಯೇ ಸ್ಥೇಮ ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ.

**ಪರಿಮಳ– ಯದ್ವಾ ತಿಷ್ಠತೇರೌಣಾದಿಕೇಮನಿಚಿ ಗುಣೇ ರೂಪಂ 'ಸ್ಥೇಮ' ಇತಿ । 'ಸ್ಥಿತಿಃ' ಇತ್ಯರ್ಥಃ ।**

ಅಥವಾ 'ಷ್ಠಾ'ಧಾತುವಿಗೆ ಔಣಾದಿಕ ಇಮನಿಚ್‌ಪ್ರತ್ಯಯವನ್ನು ಮಾಡಿದಾಗ ಗುಣವು ಬಂದು ಸ್ಥೇಮ ಎಂಬ ರೂಪವು ನಿಷ್ಪನ್ನವಾಗುತ್ತದೆ. ಸ್ಥಿತಿ ಎಂಬುದು ಇದರ ಅರ್ಥ.

* ಪಂಚಮಹಾಕಾವ್ಯಗಳಲ್ಲಿ ನೈಷಧವೂ ಒಂದು. ಖಂಡನಖಂಡನಖಾದ್ಯವನ್ನು ರಚನೆ ಮಾಡಿರುವ ಶ್ರೀಹರ್ಷನು ಈ ಕಾವ್ಯವನ್ನು ಬರೆದಿರುವನು. ನಳದಮಯಂತಿಯ ಕಥೆಯುಳ್ಳ ಈ ಕಾವ್ಯವು ಅತ್ಯಂತ-ಪ್ರಸಿದ್ಧವಾಗಿದೆ. ಮತ್ತು ಬೃಹತ್ತಾಗಿದೆ.

  



ವಿಶೇಷವಿಚಾರ – ನೈಷಧದ ವ್ಯಾಖ್ಯಾನದಲ್ಲಿ 'ವರ್ಣದೃಢಾದಿಭ್ಯಃ ಷ್ಯಞ್ ಚ' ಎಂಬ ಸೂತ್ರದ ಪ್ರಕಾರ ದೃಢಾದಿಗಣದಲ್ಲಿ ಪಠಿತವಾಗಿರುವ ಕಾರಣ ಸ್ಥಿರಶಬ್ದಕ್ಕೆ ಇಮನಿಚ್‌ಪ್ರತ್ಯಯವನ್ನು ಹೇಳಬಹುದೆಂದು ವ್ಯಾಖ್ಯಾನ ಮಾಡಲಾಗಿದೆ. ಆದರೆ ಗಣಪಾಠವನ್ನು ನೋಡಿದಾಗ ದೃಢಾದಿಗಣದಲ್ಲಿ ಸ್ಥಿರಶಬ್ದವು ಕಾಣಸುತ್ತಿಲ್ಲ. ಆದ್ದರಿಂದ ರಾಯರು 'ಯದ್ವಾ' ಎಂಬ ಮತ್ತೊಂದು ಪಕ್ಷವನ್ನು ಸ್ವೀಕರಿಸಿದ್ದಾರೆ. ಅಥವಾ ದೃಢಾದಿಗಣದಲ್ಲಿ ಪಠಿತವಾಗದಿದ್ದರೂ ಕೂಡ ಆಕೃತಿಗಣವೆಂದು ವಿವಕ್ಷಿಸಬಹುದು. ಇದೂ ಕೂಡ ಅಸ್ವರಸವೇ ಆಗುತ್ತದೆ. ಆದ್ದರಿಂದ ಯದ್ವಾ ಎಂಬ ಪಕ್ಷವನ್ನು ರಾಯರು ಅರ್ಥಪೂರ್ಣವಾಗಿ ಸಮರ್ಥಿಸಿದ್ದಾರೆ.

'ಷ್ಠಾ ಗತಿನಿವೃತ್ತ್ಯೋಃ' ಎಂಬುದು ಧಾತು. ಇದಕ್ಕೆ ಔಣಾದಿಕ ಇಮನಿಚ್ ಪ್ರತ್ಯಯವನ್ನು ಮಾಡಿದಾಗ ಗುಣವು ಬಂದು ಸ್ಥೇಮ ಎಂಬ ರೂಪವು ಸಾಧುವಾಗುತ್ತದೆ.

ಪಾಣಿನಿಯು ಎಲ್ಲಾ ಶಬ್ದಗಳನ್ನೂ ಧಾತುಜ ಎಂದು ಹೇಳುವುದಿಲ್ಲ. ಎಷ್ಟೋ ಶಬ್ದಗಳನ್ನು ರೂಢಜ ಎನ್ನುತ್ತಾನೆ. ಆದರೆ ಉಣಾದಿಕೋಶಕಾರರು ಪ್ರತಿಯೊಂದು ಶಬ್ದಗಳನ್ನು ಕೂಡ ಧಾತುಜ ಎನ್ನುತ್ತಾರೆ. ಪಂಚಪಾದಿ ಉಣಾದಿ ಸೂತ್ರಗಳು ದಶಪಾದಿ ಉಣಾದಿ ಸೂತ್ರಗಳು ಎಂಬುದಾಗಿ ಎರಡು ಬಗೆಯ ಉಣಾದಿ ಸೂತ್ರಗಳು ಈಗ ಲಭ್ಯವಿವೆ. ಇದನ್ನು ಶಾಕಟಾಯನರೇ ಮೊದಲಾದ ವೈಯ್ಯಾಕರಣರು ರಚನೆ ಮಾಡಿರುವರು. ಪ್ರತಿಯೊಂದು ಶಬ್ದಗಳೂ ಧಾತುವಿನಿಂದಲೇ ನಿಷ್ಪನ್ನವಾಗುವುದರಿಂದ ಪ್ರಕೃತ ಸ್ಥೇಮ ಎಂಬ ಶಬ್ದವೂ ಕೂಡ ಷ್ಠಾ ಎಂಬ ಧಾತುವಿನಿಂದ ನಿಷ್ಪನ್ನವಾಗುತ್ತದೆ. ಆದ್ದರಿಂದ ಇದರ ಮೇಲೆ ಇಮನಿಚ್ ಪ್ರತ್ಯಯವನ್ನು ಮಾಡಿ ಸ್ಥೇಮ ಎಂಬ ರೂಪವನ್ನು ನಿಷ್ಪನ್ನ ಮಾಡಬಹುದು. ಆದ್ದರಿಂದ ವ್ಯಾಕರಣಕ್ಕೆ ವಿರುದ್ಧವಾದ ಪ್ರಯೋಗವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

## ಜನ್ಮಸ್ಥೇಮಪ್ರಳಯ ಎಂಬುದರ ವ್ಯಾಖ್ಯಾನ

ಪರಿಮಳ– 'ಉದ್ಭವಾದಿದಮ್' ಇತ್ಯನೇನ ಸೃಷ್ಟ್ಯಾದ್ಯಷ್ಟಕಗ್ರಹಣೇಽಪಿ ವಿಯದಧಿಕರಣನ್ಯಾಯೇನ (೨-೩-೧) ಈಶಾದನ್ಯಸರ್ವಸಂಬಂಧಿತ್ವಾತ್ ಜನ್ಮಾದಿತ್ರಯಸ್ಯೈವ ಅತ್ರೋಕ್ತಿಃ। 'ನಿಯತಿಃ' ಅಪ್ಯುಪಲಕ್ಷ್ಯಾ।

'ಉದ್ಭವಾದಿದಮ್' ಎಂಬಲ್ಲಿ 'ಆದಿ'ಪದದಿಂದ ಸೃಷ್ಟ್ಯಾದ್ಯಷ್ಟಕಗಳನ್ನು ವಿವಕ್ಷಿಸಬೇಕು. ಆದರೆ ವಿಯದಧಿಕರಣನ್ಯಾಯದ ಪ್ರಕಾರ ಭಗವಂತನನ್ನು ಬಿಟ್ಟು ಉಳಿದೆಲ್ಲ ಪದಾರ್ಥಗಳಲ್ಲಿ





ಸಾಧಾರಣವಾಗಿರುವ ಉತ್ಪತ್ತಿ, ಸ್ಥಿತಿ, ಸಂಹಾರಗಳನ್ನಷ್ಟೇ ನ್ಯಾಯಸುಧೆಯಲ್ಲಿ ವಿವಕ್ಷಿಸಿದ್ದಾರೆ. ನಿಯತಿಯನ್ನು ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು.

ವಿಶೇಷವಿಚಾರ – ಪ್ರಶ್ನೆ -'ಉದ್ಭವಾದಿದಮ್' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಸೃಷ್ಟ್ಯಾದ್ಯ-ಷ್ಟಕಗಳನ್ನು ವಿವಕ್ಷಿಸಬೇಕೆಂದು ತಿಳಿಯುತ್ತದೆ. ಆದರೆ ಅದಕ್ಕೆ ವ್ಯಾಖ್ಯಾನ ಮಾಡುವ ನ್ಯಾಯಸುಧೆಯಲ್ಲಿ ಜನ್ಮ, ಕ್ಷೇಮ, ಪ್ರಲಯಗಳನ್ನು ಮಾತ್ರ ಹೇಳಿರುತ್ತಾರೆ. ಉಳಿದವುಗಳನ್ನು ಏಕೆ ಹೇಳಿಲ್ಲ?

ಉತ್ತರ - ಹೌದು. ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳು ಜಡಪದಾರ್ಥಗಳಲ್ಲಿ ಇರುವುದಿಲ್ಲ. ಆದರೆ ಉತ್ಪತ್ತಿ, ಸ್ಥಿತಿ, ಸಂಹಾರಗಳು ಜಡಪದಾರ್ಥಗಳಲ್ಲೂ ಇವೆ. ಪರಮಾತ್ಮನನ್ನು ಬಿಟ್ಟು ಉಳಿದೆಲ್ಲ ಪದಾರ್ಥಗಳಲ್ಲಿ ಈ ಉತ್ಪತ್ತಿ, ಸ್ಥಿತಿ, ಸಂಹಾರಗಳು ಸರ್ವಸಾಧಾರಣವಾಗಿವೆ. ನಿತ್ಯವಾದ ಕಾಲ ಆಕಾಶಾದಿಗಳಲ್ಲಿರುವ ಉತ್ಪತ್ತ್ಯಾದಿಗಳ ಬಗ್ಗೆ ವಿಯದಧಿಕರಣದಲ್ಲಿ ಉತ್ತರವನ್ನು ನೀಡಿದ್ದಾರೆ. ಭೂತ-ಪದಾರ್ಥಗಳ ಸಂಪರ್ಕವಾಗುವಿಕೆಯೇ ಅವ್ಯಾಕೃತಾಕಾಶದ ಉತ್ಪತ್ತಿ, ಸೃಷ್ಟ್ಯಾದಿಕ್ರಿಯೆಗಳಲ್ಲಿ ತೊಡಗು-ವಿಕೆಯೇ ಲಕ್ಷ್ಮ್ಯಾದಿಗಳ ಉತ್ಪತ್ತಿ ಇತ್ಯಾದಿಯಾಗಿ. ಆದ್ದರಿಂದ ಉತ್ಪತ್ತಿ, ಸ್ಥಿತಿ ಸಂಹಾರಗಳು ಸಕಲ ತತ್ವಗಳಲ್ಲಿ ಸಾಧಾರಣವಾಗಿವೆ. ನಿಯತಿಯು ಕೂಡ ಸರ್ವಸಾಧಾರಣವಾಗಿರುವುದರಿಂದ ಉಪ-ಲಕ್ಷಣಯಾ ಇದನ್ನೂ ಕೂಡ ವಿವಕ್ಷಿಸಬೇಕು. ಈ ದೃಷ್ಟಿಯಿಂದ ನ್ಯಾಯಸುಧೆಯಲ್ಲಿ ಜಗಜ್ಜನ್ಮಕ್ಷೇಮ ಎಂಬುದಾಗಿ ಹೇಳಿದ್ದು ಅರ್ಥಪೂರ್ಣವಾಗಿದೆ.

## ಶೀಲಪದದ ವ್ಯಾಖ್ಯಾನ

**ಪರಿಮಳ– ಈಶ್ವರಸ್ಯ ಜಗಜ್ಜನ್ಮಾದಿನಾ ಫಲಂ ನಾಸ್ತಿ ಚೇತ್ 'ಅಸ್ಯೋದ್ಭವಾದಿದಮ್' ಇತ್ಯಯುಕ್ತಮ್ । ಪ್ರೇಕ್ಷಾವತೋ ನಿಷ್ಫಲೇ ಪ್ರವೃತ್ತ್ಯಯೋಗಾತ್ । ಅಸ್ತಿ ಚೇತ್ 'ನಿಖಿಲ-ಪೂರ್ಣಗುಣಃ'ಇತ್ಯಯುಕ್ತಮ್ ಇತ್ಯತಃ– ಶೀಲೇತಿ ॥ 'ಜನ್ಮಾದಿರಚನಾಸ್ವಭಾವ' ಇತ್ಯರ್ಥಃ।**

ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಯಾವುದೇ ಪ್ರಯೋಜನವಿಲ್ಲ ಎಂದು ಹೇಳಿದರೆ 'ಅಸ್ಯೋದ್ಭವಾದಿದಂ' ಎಂಬುದು ತಪ್ಪಾಗುತ್ತದೆ. ಏಕೆಂದರೆ ಪ್ರೇಕ್ಷಾವಂತನಿಗೆ ನಿಷ್ಫಲದಲ್ಲಿ ಪ್ರವೃತ್ತಿಯು ಯುಕ್ತವಾಗುವುದಿಲ್ಲ. ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಫಲವಿದೆ ಎಂದು ಹೇಳಿದರೆ 'ನಿಖಿಲಪೂರ್ಣಗುಣಃ' ಎಂಬುದು ಅಯುಕ್ತವಾಗುತ್ತದೆ. ಈ ಪ್ರಶ್ನೆಗೆ 'ಶೀಲ' ಎಂಬ







ಪದದಿಂದ ಉತ್ತರಿಸಿದ್ದಾರೆ. ಜನ್ಮಾದಿಗಳ ರಚನೆಯೇ ಅವನ ಸ್ವಭಾವವಾಗಿದೆ ಎಂಬುದು ಇದರ ಅರ್ಥ.

ವಿಶೇಷವಿಚಾರ – ಈಶ್ವರನಿಗೆ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಪ್ರಯೋಜನ-ವಿದೆಯೋ ಇಲ್ಲವೋ? ಪ್ರಯೋಜನವಿದೆಯೆಂದು ಹೇಳಿದರೆ ಅನುವ್ಯಾಖ್ಯಾನಶ್ಲೋಕದಲ್ಲಿ ಉತ್ಪತ್ತ್ಯಾದಿ-ಗಳನ್ನು ಮಾಡುತ್ತಾನೆಂದು ಹೇಳಿದ್ದೇ ತಪ್ಪಾಗುತ್ತದೆ. ಏಕೆಂದರೆ ಯಾರೇ ಒಬ್ಬ ವ್ಯಕ್ತಿಯು ಯಾವುದೇ ಕೆಲಸದಲ್ಲಿ ಪ್ರವೃತ್ತಿಯನ್ನು ಮಾಡಬೇಕೆಂದರೆ ಅದರಲ್ಲಿ ಪ್ರಯೋಜನವಿರಬೇಕು. ಪ್ರೇಕ್ಷಾವಂತನಾದ ಪರಮಾತ್ಮನು ಯಾವುದೇ ಪ್ರಯೋಜನವಿಲ್ಲದೇ ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ಪ್ರವೃತ್ತಿಯನ್ನು ಮಾಡಲು ಸಾಧ್ಯವಿಲ್ಲ. ಪ್ರಯೋಜನವಿದೆಯೆಂದು ಹೇಳಿದರೆ 'ನಿಖಿಲಪೂರ್ಣಗುಣಃ' ಎಂದು ಹೇಳಿದ್ದೇ ತಪ್ಪಾಗು-ತ್ತದೆ. ಯಾವುದೇ ಪ್ರಯೋಜನ ದೊರಕಬೇಕೆಂದರೆ ಆ ಗುಣವು ಅವನಲ್ಲಿ ಇಲ್ಲವೆಂದರ್ಥ. ಆಗ ಪರಿಪೂರ್ಣಗುಣವುಳ್ಳವನಲ್ಲ ಎಂದು ಅರ್ಥಾತ್ ಹೇಳಿದಂತಾಗುತ್ತದೆ. ಹೀಗೆ 'ಅಸ್ಯೋದ್ಭವಾದಿದಂ' ಎಂಬುದಕ್ಕೂ 'ನಿಖಿಲಪೂರ್ಣಗುಣಃ' ಎಂಬುದಕ್ಕೂ ಬರುವ ಪರಸ್ಪರವಿರೋಧವನ್ನು 'ಶೀಲ' ಎಂಬ ಪದದಿಂದ ನ್ಯಾಯಸುಧೆಯಲ್ಲಿ ಪರಿಹರಿಸಿದ್ದಾರೆ.

ಸೃಷ್ಟ್ಯಾದಿಗಳನ್ನು ಮಾಡುವುದು ಪರಮಾತ್ಮನ ಸ್ವಭಾವವಾಗಿದೆ. ಆದ್ದರಿಂದ ಪ್ರಯೋಜನ ಇದೆಯೋ ಇಲ್ಲವೋ? ಎಂಬ ಪ್ರಶ್ನೆಯೇ ಕೂಡುವುದಿಲ್ಲ. ಪ್ರವಚನಾದಿಗಳನ್ನು ಮಾಡುವಾಗ ಹಸ್ತ ಅಂಗುಲಿಗಳ ಚೇಷ್ಟೆಯನ್ನು ಮಾಡುತ್ತಾರೆ. ಇದು ಅವರವರ ಸ್ವಭಾವ. ಇದರಿಂದೇನು ಪ್ರಯೋಜನ? ಎಂದು ಯಾರೂ ಪ್ರಶ್ನಿಸುವುದಿಲ್ಲ. ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವುದು ಶ್ರೀಹರಿಯ ಸ್ವಭಾವ. ಇದರಿಂದೇನು ಪ್ರಯೋಜನ ಎಂದು ಪ್ರಶ್ನಿಸುವಂತೆಯೇ ಇಲ್ಲ. ಫಲವಿಲ್ಲದಿದ್ದರೂ ಕೂಡ ಯಾವ ಕ್ರಿಯೆಯಲ್ಲಿ ತೊಡಗುತ್ತಾನೋ ಅದೇ ಸ್ವಭಾವ ಎಂದು ಕರೆಸಿಕೊಳ್ಳುತ್ತದೆ.

## ಸೃಷ್ಟ್ಯಾದಿವ್ಯಾಪಾರಗಳು ಶ್ರೀಹರಿಯ ಸ್ವಭಾವ

ಪರಿಮಳ– ಫಲಾಭಾವೇಽಪಿ ಸ್ವಭಾವೋಽಯಂ ಸೃಷ್ಟ್ಯಾದಿವ್ಯಾಪಾರಃ । ಯಥಾ ಚೈತತ್ ತಥಾ ನಪ್ರಯೋಜನಾಧಿಕರಣೇ(೨-೧-೯) ವಕ್ಷ್ಯಾಮ ಇತಿ ಭಾವಃ । ಅನೇನ ಸದಾಽಸ್ಯೋದ್ಭವಾದಿದಮ್ ಇತ್ಯಪ್ಯನ್ವಯಃ ಸೂಚಿತಃ ।

ಫಲವಿಲ್ಲದಿದ್ದರೂ ಕೂಡ ಸೃಷ್ಟ್ಯಾದಿವ್ಯಾಪಾರಗಳಲ್ಲಿ ತೊಡಗುವುದು ಶ್ರೀಹರಿಯ ಸ್ವಭಾವವಾಗಿದೆ. ಇದನ್ನು ಮುಂದೆ ನಪ್ರಯೋಜನಾಧಿಕರಣದಲ್ಲಿ ಸಮರ್ಥಿಸುವವರಿದ್ದಾರೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ 'ಅಸ್ಯೋದ್ಭವಾದಿದಂ' ಎಂಬಲ್ಲಿ 'ಸದಾ' ಎಂಬ ಪದದ ಅನ್ವಯವನ್ನು ವಿವಕ್ಷಿಸಬೇಕೆಂದು ಸೂಚಿಸಿದಂತಾಯಿತು.

ವಿಶೇಷವಿಚಾರ – ಮೂಲ ಶ್ಲೋಕದಲ್ಲಿ 'ಸದಾ' ಎಂಬ ಪದಕ್ಕೆ ನಮಾಮಿ ಎಂಬಲ್ಲಿ ಅನ್ವಯವಿದೆ. ಅದರಂತೆ 'ಅಸ್ಯೋದ್ಭವಾದಿದಂ' ಎಂಬಲ್ಲಿಯೂ ಕೂಡ ಅನ್ವಯವನ್ನು ತಿಳಿಯಬೇಕು. ಇದನ್ನು 'ಶೀಲ' ಎಂಬ ಪದದಿಂದಲೇ ಟೀಕೆಯಲ್ಲಿ ತಿಳಿಸಿದ್ದಾರೆ. ಸೃಷ್ಟ್ಯಾದಿಗಳು ಪರಮಾತ್ಮನ ಸ್ವಭಾವವಾಗಿವೆ. ಆದ್ದರಿಂದಲೇ ನಿರಂತರವಾಗಿ ಉತ್ಪತ್ತಿ ಸ್ಥಿತಿಸಂಹಾರಾದಿ ವ್ಯಾಪಾರಗಳಲ್ಲಿ ಪರಮಾತ್ಮನು ತೊಡಗಿದ್ದಾನೆ ಎಂದು.

## 'ವಪುಷೇ' ಎಂಬ ಪದದ ವ್ಯಾಖ್ಯಾನ

**ಪರಿಮಳ– ಮೂಲೇ 'ದೇಹಮ್' ಇತ್ಯುಕ್ತಿಃ ನ ಕೇವಲಂ ಜ್ಞಾನಾದಿಗುಣಸತ್ತ್ವಾದ್ಯುಪಪತ್ತ್ಯರ್ಥಂ ಕಿಂತು 'ಅಸ್ಯೋದ್ಭವಾದಿದಮ್' ಇತ್ಯುಕ್ತಸ್ರಷ್ಟೃತ್ವಾದ್ಯುಪಪತ್ತ್ಯರ್ಥಂ ಚ ಇತಿ ಸೂಚನಾಯ 'ವಪುಷೇ' ಇತ್ಯುಕ್ತಿಃ । ಅನ್ಯಥಾ 'ಪತ್ಯುರಸಾಮಂಜಸ್ಯಾತ್' ಇತ್ಯಧಿಕರಣೇ 'ಸಂಬಂಧಾನುಪಪತ್ತಿಶ್ಚ' ಇತಿ ಸೂತ್ರೇ 'ಅಶರೀರಸ್ಯ ಜಗತಾ ಕರ್ತೃಕಾರ್ಯಭಾವರೂಪಸಂಬಂಧಾನುಪಪತ್ತೇಃ' ಇತಿ ವಕ್ಷ್ಯಮಾಣದೋಷಾಪತ್ತೇಃ ಇತಿ ಭಾವಃ।**

ಅನುವ್ಯಾಖ್ಯಾನದಲ್ಲಿ 'ದೇಹಂ' ಎಂದು ಹೇಳಿರುವುದು ಕೇವಲ ಜ್ಞಾನಾದಿಗುಣಗಳಿರುವುದರಿಂದ ಜ್ಞಾನಾದಿಗುಣಗಳ ಉಪಪಾದನೆಗೋಸ್ಕರ ಮಾತ್ರವಲ್ಲ 'ಅಸ್ಯೋದ್ಭವಾದಿದಂ' ಎಂಬುದಾಗಿ ಹೇಳಲ್ಪಟ್ಟ ಸೃಷ್ಟೃತ್ವಾದಿಗಳ ಉಪಪಾದನೆಗೂ ಕೂಡ ಎಂಬುದನ್ನು ಸೂಚನೆ ಮಾಡಲು 'ವಪುಷೇ' ಎಂಬುದಾಗಿ ಹೇಳಿದ್ದಾರೆ. ಹೀಗೆ ಹೇಳದಿದ್ದರೆ 'ಪತ್ಯುರಸಾಮಂಜಸ್ಯಾತ್' ಎಂಬಧಿಕರಣದಲ್ಲಿರುವ 'ಸಂಬಂಧಾನುಪಪತ್ತಿಶ್ಚ' ಎಂಬ ಸೂತ್ರದಲ್ಲಿ ಶರೀರವಿಲ್ಲದವನಿಗೆ ಜಗತ್ತಿನ ಜೊತೆಗೆ ಕರ್ತೃಕಾರ್ಯಭಾವರೂಪವಾದ ಸಂಬಂಧವೇ ಅನುಪಪನ್ನವಾಗುತ್ತದೆ ಎಂಬುದಾಗಿ ಹೇಳಲ್ಪಡುವ ದೋಷವು ಪ್ರಾಪ್ತವಾಗುತ್ತದೆ ಎಂಬುದು 'ವಪುಷೇ' ಎಂಬ ಪದದ ಅಭಿಪ್ರಾಯವಾಗಿದೆ.





ವಿಶೇಷವಿಚಾರ – ಮಂಗಳಶ್ಲೋಕದಲ್ಲಿ 'ವಪುಷೇ' ಎಂಬ ಪದಪ್ರಯೋಗದ ಸ್ವಾರಸ್ಯ ಹೀಗಿದೆ – ಅನುವ್ಯಾಖ್ಯಾನಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬುದಾಗಿ ಹೇಳಿದ್ದಾರೆ. ದೇಹವೇ ಇಲ್ಲದ ಪರಮಾತ್ಮನಲ್ಲಿ ಜ್ಞಾನಾದಿಸಮಸ್ತಗುಣಗಳು ಬರಲು ಹೇಗೆ ಸಾಧ್ಯ? ಎಂಬ ಪ್ರಶ್ನೆ ಬಂದರೆ 'ದೇಹಂ' ಎಂಬ ಪದದಿಂದ ಉತ್ತರಿಸಿದ್ದಾರೆ. ಜ್ಞಾನಾನಂದಾದಿಸಮಸ್ತಗುಣಗಳೇ ಪರಮಾತ್ಮನ ದೇಹವಾಗಿದೆ. ಆದ್ದರಿಂದ ನಿಖಿಲಪೂರ್ಣಗುಣಗಳು ಪರಮಾತ್ಮನಲ್ಲಿವೆ ಎಂಬುದಾಗಿ ಹೇಳಬಹುದು. ಇದು 'ದೇಹಂ' ಎಂಬ ಪದದ ಸಾರ್ಥಕ್ಯ .

'ದೇಹಂ' ಎಂಬ ಪದಕ್ಕೆ ಮತ್ತೊಂದು ಸಾರ್ಥಕ್ಯ ಹೀಗಿದೆ – 'ಅಸ್ಯೋದ್ಭವಾದಿದಂ' ಎಂಬ ವಿಶೇಷಣದಿಂದ ಹೇಳಲ್ಪಟ್ಟ ಉತ್ಪತ್ತಿ, ಸ್ಥಿತಿ ಮೊದಲಾದವುಗಳನ್ನು ಪರಮಾತ್ಮನು ಮಾಡಲು ಸಾಧ್ಯವಿಲ್ಲ. ಏಕೆಂದರೆ ಇವನಿಗೆ ದೇಹವೇ ಇಲ್ಲ. ಯಾವುದೇ ವಸ್ತುವನ್ನು ಸೃಷ್ಟಿ ಮಾಡಬೇಕಾದರೆ ಕರ್ತೃವಿಗೆ ದೇಹವಿರಬೇಕು. ಕುಲಾಲಾದಿಗಳಿಗೆ ದೇಹವಿರುವುದು ಕಂಡಿದೆ. ನಿರಾಕಾರನಾದ ಬ್ರಹ್ಮನಿಗೆ ದೇಹವಿಲ್ಲದ ಕಾರಣ ಸೃಷ್ಟ್ಯಾದಿವ್ಯಾಪಾರಗಳನ್ನು ಮಾಡಲು ಕೂಡ ಸಾಧ್ಯವಾಗುವುದಿಲ್ಲ?

ಈ ಪ್ರಶ್ನೆಗೆ 'ದೇಹಂ' ಎಂಬ ಪದವೇ ಉತ್ತರಿಸುತ್ತಿದೆ. ಪರಮಾತ್ಮನು ನಿರಾಕಾರನಲ್ಲ. ದೇಹೇಂದ್ರಿಯಾದಿಗಳು ಉಳ್ಳವನೇ ಆಗಿದ್ದಾನೆ. ಆದ್ದರಿಂದ ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ತೊಡಗಲು ಕೂಡ ಸಮರ್ಥನಾಗುತ್ತಾನೆ.

ಈ ಎರಡು ಪ್ರಯೋಜನಕ್ಕಾಗಿ 'ದೇಹಂ' ಎಂಬ ಪದವನ್ನು ಅನುವ್ಯಾಖ್ಯಾನದಲ್ಲಿ ಪ್ರಯೋಗಿಸಿದ್ದಾರೆ ಎಂಬುದನ್ನು ನ್ಯಾಯಸುಧೆಯಲ್ಲಿನ 'ವಪುಷೇ' ಎಂಬ ಪದವು ವ್ಯಾಖ್ಯಾನ ಮಾಡುತ್ತಿದೆ. ಪರಮಾತ್ಮನಿಗೆ ದೇಹವಿರುವ ಕಾರಣ ಜಗತ್ತಿನ ಜೊತೆ ಕರ್ತೃಕಾರ್ಯಭಾವರೂಪ ಸಂಬಂಧವನ್ನು ಹೊಂದಿದ್ದಾನೆ. ಆದ್ದರಿಂದ ಪತ್ಯುರಧಿಕರಣದಲ್ಲಿ ಹೇಳಲ್ಪಟ್ಟ ಸಂಬಂಧಾನುಪಪತ್ತಿ ದೋಷವು ಬರುವುದಿಲ್ಲ.

## ಅಶೇಷಾಮ್ನಾಯಸ್ಮೃತಿ ಇತ್ಯಾದಿ ಪದಗಳ ವ್ಯಾಖ್ಯಾನ

ಪರಿಮಳ– 'ಸುವಾಕ್ಯೈಃ' ಇತ್ಯೇತದ್ 'ವೇದವೇದಾನುಸಾರಿಸರ್ವಪೌರುಷೇಯಾಪೌರುಷೇಯಪರಮ್' ಇತಿ ಭಾವೇನೋಕ್ತಮ್ – ಅಶೇಷಾಮ್ನಾಯಸ್ಮೃತೀತಿ ॥ ಆಪಾತತೋ ನೋಕ್ತಗುಣವಿಶಿಷ್ಟೋ ಹರಿಃ ಪ್ರತೀಯತೇ, ಇತ್ಯತ ಉಕ್ತಮ್ – ಹೃದಯೇತಿ ॥

'ತಾತ್ಪರ್ಯಪ್ರಕಾಶಿತಾಯ' ಇತ್ಯರ್ಥಃ । 'ಸದಾ ಪ್ರಿಯತಮಮ್' ಇತ್ಯಸ್ಯಾರ್ಥಃ – ಹರಯೇ ಇತಿ ॥

ಮೂಲದಲ್ಲಿರುವ ಸುವಾಕ್ಯೈಃ ಎಂಬುದು ವೇದವೇದಾನುಸಾರಿಯಾದ ಸಕಲಪೌರುಷೇಯ ಹಾಗೂ ಅಪೌರುಷೇಯ ಗ್ರಂಥಗಳನ್ನು ಹೇಳುತ್ತಿದೆ. ಈ ಅಭಿಪ್ರಾಯದಿಂದ 'ಅಶೇಷಾಮ್ನಾಯಸ್ಮೃತಿ' ಎಂಬ ಪದವನ್ನು ಸುಧೆಯಲ್ಲಿ ಪ್ರಯೋಗಿಸಿದ್ದಾರೆ. ವೇದ ಪುರಾಣಾದಿಗಳನ್ನು ಆಪಾತತಃ ನೋಡಿದಾಗ ಪರಮಾತ್ಮನ ಅನಂತಗುಣಗಳು ಕಾಣುವುದೇ ಇಲ್ಲವಲ್ಲ? ಎಂಬ ಪ್ರಶ್ನೆಗೆ ಉತ್ತರಿಸಲು 'ಹೃದಯ' ಎಂಬ ಪದ ಪ್ರಯೋಗವನ್ನು ನ್ಯಾಯಸುಧೆಯಲ್ಲಿ ಮಾಡಿದ್ದಾರೆ. ಸಮಸ್ತವೇದಗಳ ತಾತ್ಪರ್ಯ ಶ್ರೀಹರಿಯೇ ಆಗಿದ್ದಾನೆ ಎಂಬುದು ಇದರ ಅರ್ಥ. 'ಸದಾ ಪ್ರಿಯತಮಂ' ಎಂಬುದರ ಅರ್ಥವನ್ನು 'ಹರಯೇ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

ವಿಶೇಷವಿಚಾರ – ಅನುವ್ಯಾಖ್ಯಾನ ಶ್ಲೋಕದಲ್ಲಿ 'ಸುವಾಕ್ಯೈಃ' ಎಂದಷ್ಟೇ ಹೇಳಿದ್ದಾರೆ. ಇದರಿಂದ ಸಮಸ್ತವೇದಗಳನ್ನು ಹಾಗೂ ವೇದಕ್ಕೆ ಅನುಸಾರಿಯಾದ ಸಕಲಪೌರುಷೇಯಗ್ರಂಥಗಳನ್ನು ವಿವಕ್ಷಿಸಬೇಕು. ಎಲ್ಲಾ ವೇದಗಳಿಂದ ಹಾಗೂ ವೇದಾನುಸಾರಿಯಾದ ಎಲ್ಲಾ ಪೌರುಷೇಯಗ್ರಂಥಗಳಿಂದ ಪರಮಾತ್ಮನು ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ ಎಂಬುದಾಗಿ 'ಅಶೇಷಾಮ್ನಾಯಸ್ಮೃತಿ' ಎಂಬ ಪದದಿಂದ ವ್ಯಾಖ್ಯಾನ ಮಾಡಿದ್ದಾರೆ. 'ಹೃದಯ' ಎಂಬ ಪದದಿಂದ ಪೌರುಷೇಯ ಹಾಗೂ ಅಪೌರುಷೇಯಗ್ರಂಥದಿಂದ ಪರಮಾತ್ಮನು ಆಪಾತತಃ ಗುಣಪರಿಪೂರ್ಣನೆಂದು ತಿಳಿಯದಿದ್ದರೂ ಕೂಡ ಮುಖ್ಯತಾತ್ಪರ್ಯಕ್ಕೆ ಅವನೇ ವಿಷಯನಾಗಿದ್ದಾನೆ. ಸಮಸ್ತ ವೇದವೇದಾಂತಗಳ ಹೃದಯ ಶ್ರೀಹರಿಯೇ ಆಗಿದ್ದಾನೆ ಎಂದು ತಿಳಿಸಿದ್ದಾರೆ.

ಶ್ರೀಮದಾಚಾರ್ಯರು ತಮಗೆ ಅತ್ಯಂತ ಪ್ರಿಯನಾದ ನಾರಾಯಣನನ್ನು ನಮಿಸುತ್ತಿದ್ದೇನೆ ಎಂದು ಹೇಳಿದ್ದಾರೆ. ಅದನ್ನೇ ನ್ಯಾಯಸುಧೆಯಲ್ಲಿ 'ಹರಯೇ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಎಲ್ಲಾ ಬಗೆಯ ದುಃಖಗಳನ್ನೂ ಹಾಗೂ ವಿಘ್ನಗಳನ್ನು ಪರಿಹರಿಸುವುದರಿಂದ ಶ್ರೀಹರಿ ಎಂದು ಕರೆಸಿಕೊಳ್ಳುತ್ತಾನೆ. 'ಹರತೀತಿ ಹರಿಃ' ಎಂಬ ನಿಷ್ಪತ್ತಿಯಿಂದ ಈ ಅರ್ಥವು ತಿಳಿಯುತ್ತದೆ.

ಆದ್ದರಿಂದ ಪರಮಾತ್ಮನು ಏಕೆ ಪ್ರಿಯತಮನಾಗಿದ್ದಾನೆ ಎಂಬ ಪ್ರಶ್ನೆಗೆ ಹರಯೇ ಎಂಬ ಪದದಿಂದ ಉತ್ತರಿಸಿದಂತಾಗುತ್ತದೆ.

## ನಮ್ಯತ್ವಪ್ರಯೋಜಕಧರ್ಮಗಳು

ಪರಿಮಳ– 'ನಿತ್ಯ' ಇತ್ಯಾದಿವಿಶೇಷಣದ್ವಯೇನ ವಿಶಿಷ್ಟತ್ವಮ್, 'ಅಶೇಷ' ಇತ್ಯಧಿ-ಕೃತತ್ವಮ್, ಹರತಿ ಅಶೇಷಕ್ಲೇಶಾನ್ ಇತಿ ಹರಯೇ ಇತ್ಯನೇನ ಇಷ್ಟತ್ವಮ್ ಉಕ್ತಂ ಧ್ಯೇಯಮ್ । 'ಹರಿಂ ಹರಂತಮ್ ಅನುಯಂತಿ ದೇವಾಃ' ಇತ್ಯಾದೇಃ ।

'ನಿತ್ಯ' ಇತ್ಯಾದಿ ಎರಡು ವಿಶೇಷಣಗಳಿಂದ ವಿಶಿಷ್ಟತ್ವವನ್ನು, 'ಅಶೇಷ' ಇತ್ಯಾದಿ ವಿಶೇಷಣದಿಂದ ಅಧಿಕೃತತ್ವವನ್ನು, 'ಹರಯೇ' ಎಂಬುದರಿಂದ ಇಷ್ಟತ್ವವನ್ನು ಹೇಳಿದ್ದಾರೆಂದು ತಿಳಿಯಬೇಕು. 'ಹರಿಂ ಹರಂತಂ ಅನುಯಂತಿ ದೇವಾಃ' – 'ಎಲ್ಲಾ ದುಃಖಗಳನ್ನು ಪರಿಹರಿಸುವ ಶ್ರೀಹರಿಯನ್ನು ದೇವತೆಗಳು ಅನುಸರಿಸುತ್ತಾರೆ' ಎಂಬುದು ಇದಕ್ಕೆ ಆಧಾರವಾಗಿದೆ.

ವಿಶೇಷವಿಚಾರ – ಗ್ರಂಥಾರಂಭದಲ್ಲಿ ಯಾವ ದೇವತೆಯನ್ನು ನಮಿಸಬೇಕೆಂದರೆ ವಿಶಿಷ್ಟನಾದ, ಅಧಿಕೃತನಾದ, ಇಷ್ಟನಾದ ದೇವತೆಯನ್ನೇ ನಮಿಸಬೇಕು. ಶ್ರೀಹರಿಯು ಈ ಮೂರು ಗುಣಗಳಿಂದಲೂ ಕೂಡ ಯುಕ್ತನಾಗಿದ್ದಾನೆ. ಇದನ್ನೂ ಈ ಮಂಗಳಶ್ಲೋಕದಿಂದಲೇ ಸುಧಾಕಾರರು ತಿಳಿಸಿದ್ದಾರೆ. 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣ -ದಿಂದ ಹಾಗೂ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂಬ ವಿಶೇಷಣದಿಂದ ಪರಮಾತ್ಮನು ಸರ್ವೋತ್ತಮನಾಗಿದ್ದಾನೆಂದು ತಿಳಿಯುತ್ತದೆ. ಇದರಿಂದ ವಿಶಿಷ್ಟತ್ವವೆಂಬ ಗುಣವನ್ನು ಹೇಳಿದಂತಾಯಿತು. 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬುದಾಗಿ ಸಮಸ್ತವೇದ ಹಾಗೂ ವೇದಾನುಸಾರಿಯಾದ ಗ್ರಂಥಗಳಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದ್ದಾರೆ. ಇದರಿಂದ ಇವನೇ ಗ್ರಂಥಪ್ರತಿಪಾದ್ಯನೆಂಬುದಾಗಿ ಅಧಿಕೃತತ್ವವನ್ನು ಹೇಳಿದ್ದಾರೆ. 'ಹರಯೇ' ಎಂಬ ಪದದಿಂದ ಇಷ್ಟತ್ವವೆಂಬ ಗುಣವನ್ನು ತಿಳಿಸಿದ್ದಾರೆ. ಏಕೆಂದರೆ ಸಮಸ್ತಕ್ಲೇಶಗಳನ್ನು ಪರಿಹರಿಸುವುದರಿಂದ ಇವನು ಇಷ್ಟನಾಗಿದ್ದಾನೆ. ಹೀಗೆ ಮೂರು ಗುಣಗಳೂ ಪರಮಾತ್ಮನಲ್ಲಿವೆ ಎಂದು ತಿಳಿಯುತ್ತದೆ.

## ಹರಯೇ ಎಂಬ ಪದಪ್ರಯೋಗಕ್ಕೆ ಮತ್ತೊಂದು ಕಾರಣ

ಪರಿಮಳ– ಯದ್ವಾ ಮೂಲೇ 'ತಮೇವ' ಇತಿ ಶ್ಲೋಕೇ ವ್ಯಾಸಗುರೋಃ ನಾರಾ-ಯಣೈಕ್ಯಮುಚ್ಯತೇ । 'ಪ್ರಾದುರ್ಭೂತೋ ಹರಿರ್ವ್ಯಾಸಃ' ಇತಿ ಶ್ಲೋಕೇ ಹರ್ಯೈಕ್ಯಮ್ ।

ತತ್ ಕಥಮ್? ಇತ್ಯತಃ 'ತಾವೇಕ ಏವ' ಇತಿ ಜ್ಞಾಪನಾಯ ಮೂಲೋಕ್ತನಾರಾಯಣ-ವಿಶೇಷಣಾನ್ಯೇವ ಉಕ್ತ್ವಾ 'ಹರಯೇ' ಇತಿ ವಿಶೇಷ್ಯಮುಕ್ತಮ್ ।

ಅಥವಾ ಅನುವ್ಯಾಖ್ಯಾನದಲ್ಲಿ 'ತಮೇವ' ಎಂಬ ಶ್ಲೋಕದಲ್ಲಿ ಗುರುಗಳಾದ ವೇದವ್ಯಾಸ-ದೇವರಿಗೂ ನಾರಾಯಣನಿಗೂ ಐಕ್ಯವನ್ನು ಹೇಳಿರುತ್ತಾರೆ. 'ಪ್ರಾದುರ್ಭೂತೋ ಹರಿರ್ವ್ಯಾಸಃ' ಎಂಬ ಶ್ಲೋಕದಲ್ಲಿ ಶ್ರೀಹರಿಗೂ ಐಕ್ಯವನ್ನು ಹೇಳಿದ್ದಾರೆ. ಇದು ಹೇಗೆ? ಎಂಬ ಪ್ರಶ್ನೆಯು ಬಂದರೆ ನಾರಾಯಣ ಹಾಗೂ ಹರಿ ಇವರಿಬ್ಬರೂ ಒಂದೇ ಆಗಿದ್ದಾರೆ ಎಂಬುದನ್ನು ಮೂಲದಲ್ಲಿ ನಾರಾಯಣನಿಗೆ ಹೇಗೆ ಯಾವ ವಿಶೇಷಣಗಳನ್ನು ಹೇಳಿದ್ದಾರೋ ಅದೇ ವಿಶೇಷಣಗಳನ್ನು ಸುಧೆಯ ಮಂಗಳಶ್ಲೋಕದಲ್ಲಿ ಶ್ರೀಹರಿಗೆ ಹೇಳಿದ್ದಾರೆ.

ವಿಶೇಷವಿಚಾರ – ಅನುವ್ಯಾಖ್ಯಾನದಲ್ಲಿ 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ' ಎಂಬ ಶ್ಲೋಕದಿಂದ ವೇದವ್ಯಾಸದೇವರು ಸಾಕ್ಷಾತ್ ನಾರಾಯಣನೇ ಆಗಿದ್ದಾನೆ ಎಂದಿದ್ದಾರೆ. ಆದರೆ ಬ್ರಹ್ಮಸೂತ್ರಭಾಷ್ಯದಲ್ಲಿ 'ಪ್ರಾದುರ್ಭೂತೋ ಹರಿರ್ವ್ಯಾಸಃ ವಿರಿಂಚಭವಪೂರ್ವಕೈಃ' ಎಂಬ ಶ್ಲೋಕದಿಂದ ವೇದವ್ಯಾಸದೇವರು ಸಾಕ್ಷಾತ್ ಶ್ರೀಹರಿಯೇ ಆಗಿದ್ದಾರೆ ಎಂದಿದ್ದಾರೆ. ಈ ಎರಡು ಶ್ಲೋಕಗಳನ್ನು ನೋಡಿದಾಗ ವೇದವ್ಯಾಸ-ದೇವರು ನಾರಾಯಣನೋ ಅಥವಾ ಶ್ರೀಹರಿಯೋ? ಎಂಬ ಸಂಶಯವು ಬರುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ನೀಡಲು 'ಹರಯೇ' ಎಂಬ ವಿಶೇಷ್ಯವಾಚಕಪದವನ್ನು ನ್ಯಾಯಸುಧೆಯ ಮಂಗಳಶ್ಲೋಕ-ದಲ್ಲಿ ಹೇಳಿದ್ದಾರೆ. ನಾರಾಯಣ ಬೇರೆಯಲ್ಲ; ಶ್ರೀಹರಿ ಬೇರೆಯಲ್ಲ. ಅನುವ್ಯಾಖ್ಯಾನದಲ್ಲಿ ಯಾವ ವಿಶೇಷಣಗಳನ್ನು ನಾರಾಯಣನಲ್ಲಿ ಹೇಳಿದ್ದಾರೋ ಆ ಎಲ್ಲ ವಿಶೇಷಣಗಳೂ ಶ್ರೀಹರಿಯಲ್ಲಿಯೂ ಇವೆ. ಆದ್ದರಿಂದ 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ' ಎಂಬ ಶ್ಲೋಕದಲ್ಲಿ ವೇದವ್ಯಾಸದೇವರಿಗೆ ನಾರಾಯಣನ ಜೊತೆ ಐಕ್ಯವನ್ನು ಹೇಳಿದಾಗ ಶ್ರೀಹರಿಯ ಜೊತೆ ಐಕ್ಯವನ್ನು ಕೂಡ ಹೇಳಿದಂತೇ ಆಗುತ್ತದೆ. ಆದ್ದರಿಂದ ಅನುವ್ಯಾಖ್ಯಾನಶ್ಲೋಕಕ್ಕೂ ಭಾಷ್ಯಶ್ಲೋಕಕ್ಕೂ ವಿರೋಧವು ಬರುವುದಿಲ್ಲ.

## ಹರಿ ಎಂಬ ಪದಪ್ರಯೋಗಕ್ಕೆ ಇನ್ನೂ ಹಲವು ಕಾರಣ

ಪರಿಮಳ– 'ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ'







ಇತಿ ಸ್ಮೃತಿಸೂಚನಾಯ 'ಹರಿ'ಪದಪ್ರಯೋಗ ಇತ್ಯೇಕೇ । ಅನೇನ ಹರೇರ್ನಾರಾಯಣಾನನ್ಯತ್ವಪ್ರತೀತ್ಯಾ 'ಪ್ರಾದುರ್ಭೂತೋ ಹರಿರ್ವ್ಯಾಸಃ' ಇತಿ ವ್ಯಾಸಸ್ಯ ಹರ್ಯವತಾರತ್ವೋಕ್ತೇಃ ನಾರಾಯಣಾನವತಾರತ್ವಾತ್ 'ತಮೇವ' ಇತಿ ತದಭೇದೋಕ್ತಿರಯುಕ್ತಾ ಇತಿ ಶಂಕಾನವಕಾಶ ಇತಿ ।

'ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ । ತಾವಂತಿ ಹರಿನಾಮಾನಿ' 'ದ್ವಿಜಾತಿಗಳು ಎಷ್ಟು ವೇದಾಕ್ಷರಗಳನ್ನು ಪಠಿಸುತ್ತಾರೋ ಅವೆಲ್ಲವೂ ಶ್ರೀಹರಿಯ ನಾಮಗಳೇ ಆಗಿವೆ' ಎಂಬ ಸ್ಮೃತಿಯನ್ನು ಸೂಚನೆ ಮಾಡುವುದಕ್ಕಾಗಿ ಹರಿಪದವನ್ನು ಪ್ರಯೋಗ ಮಾಡಿದ್ದಾರೆಂಬುದಾಗಿ ಕೆಲವರು ಹೇಳುತ್ತಾರೆ.

ಹೀಗೆ ಹೇಳಿದ್ದರಿಂದ ಶ್ರೀಹರಿಯು ನಾರಾಯಣನಿಂದ ಅಭಿನ್ನನಾಗಿದ್ದಾನೆಂದು ಪ್ರತೀತವಾಗುತ್ತದೆ. ಆದ್ದರಿಂದ 'ಪ್ರಾದುರ್ಭೂತೋ ಹರಿರ್ವ್ಯಾಸಃ' ಎಂಬಲ್ಲಿ ವೇದವ್ಯಾಸದೇವರು ಶ್ರೀಹರಿಯ ಅವತಾರರೇ ಆಗಿದ್ದಾರೆ. ನಾರಾಯಣನ ಅವತಾರರಾಗಿರುವುದಿಲ್ಲ. ಆದ್ದರಿಂದ 'ತಮೇವ ಶಾಸ್ತ್ರಂ ಪ್ರಭವಂ' ಎಂಬಲ್ಲಿ ನಾರಾಯಣನ ಜೊತೆಗೆ ಐಕ್ಯವನ್ನು ಹೇಳಿದ್ದು ಅಯುಕ್ತವಾಗುತ್ತದೆಂಬ ಆಕ್ಷೇಪವನ್ನು ಪರಿಹರಿಸಿದಂತಾಯಿತು.

ವಿಶೇಷವಿಚಾರ – ವೇದವ್ಯಾಸದೇವರು ಶ್ರೀಹರಿಯ ಅವತಾರರೇ ಆಗಿದ್ದಾರೆ ಹೊರತು ನಾರಾಯಣನ ಅವತಾರರಲ್ಲ. ಹೀಗಿರುವಾಗ ಅನುವ್ಯಾಖ್ಯಾನಶ್ಲೋಕದಲ್ಲಿ 'ತಮೇವ ಶಾಸ್ತ್ರಪ್ರಭವಂ' ಇತ್ಯಾದಿಯಾಗಿ ನಾರಾಯಣನ ಅವತಾರರೆಂದು ಹೇಗೆ ಹೇಳಿದರು? ಎಂಬ ಆಕ್ಷೇಪವನ್ನು ಈಗ ಪರಿಹರಿಸಿದಂತಾಯಿತು. ಏಕೆಂದರೆ ಶ್ರೀಹರಿಯೇ ನಾರಾಯಣನೆಂದು ನ್ಯಾಯಸುಧೆಯ ಮಂಗಳಶ್ಲೋಕದಲ್ಲಿ ಮಾಡಿರುತ್ತಾರೆ.

## ಹರಿವಿಶೇಷಣಗಳಿಗೆ ಸಾರ್ಥಕ್ಯಚಿಂತನೆ

ಪರಿಮಳ– 'ತಮೇವ ಶಾಸ್ತ್ರಪ್ರಭವಮ್' ಇತ್ಯುಪಪತ್ತ್ಯರ್ಥಮ್ ಇತ್ಯನ್ಯೇ । ಹರೇರ್ನಾರಾಯಣವಿಶೇಷಣವಿಶಿಷ್ಟತ್ವೋಕ್ತ್ಯಾ ಹರಿವಿಶೇಷಣಾನಾಂ ಕೃತ್ಯಂ ಮೂಲವಿಶೇಷಣಕೃತ್ಯವತ್ ಬೋಧ್ಯಮ್ ।

'ತಮೇವ ಶಾಸ್ತ್ರಪ್ರಭವಂ' ಎಂಬುದರ ಉಪಪಾದನೆಗೋಸ್ಕರ ಹರಿಪದಪ್ರಯೋಗ ಮಾಡಿದ್ದಾರೆಂದು ಇನ್ನು ಕೆಲವರು ವ್ಯಾಖ್ಯಾನ ಮಾಡಿದ್ದಾರೆ. ಶ್ರೀಹರಿಯಲ್ಲಿ ಅನೇಕ ವಿಶೇಷಣಗಳನ್ನು ಮಂಗಳಶ್ಲೋಕದಲ್ಲಿ ಹೇಳಲಾಗಿದೆ. ಅನುವ್ಯಾಖ್ಯಾನ ಮಂಗಳಪದ್ಯದಲ್ಲಿ ನಾರಾಯಣನಿಗೆ ಯಾವ ವಿಶೇಷಣಗಳನ್ನು ಹೇಳಿದ್ದಾರೋ ಆ ವಿಶೇಷಣಗಳಿಗೆ ಸಾರ್ಥಕ್ಯವನ್ನು ಚಿಂತನೆ ಮಾಡುವಂತೆ ಶ್ರೀಹರಿಯ ಈ ವಿಶೇಷಣಗಳಿಗೂ ಕೂಡ ಸಾರ್ಥಕ್ಯವನ್ನು ತಿಳಿಯಬೇಕು.

## ಮಂಗಳಶ್ಲೋಕದಲ್ಲಿ ಸಮಸ್ತಶಾಸ್ತ್ರಾರ್ಥ

ಪರಿಮಳ– 'ನಿಖಿಲ' ಇತ್ಯಾದಿವಿಶೇಷಣತ್ರಯೇ ವೇದಾದಿರೇವ ಮಾನಮ್ ಇತಿ ಜ್ಞಾಪನಾಯ ಮೂಲಕ್ರಮೋಲ್ಲಂಘನೇನ 'ಅಶೇಷಾಮ್ನಾಯಃ' ಇತ್ಯಸ್ಯ ಅಂತೇ ನಿವೇಶಃ । 'ನಿತ್ಯ' ಇತಿ ವಿಶೇಷಣೇನ ಪೂರ್ವಾಧ್ಯಾಯದ್ವಯಸ್ಯ 'ಅಶೇಷ' ಇತ್ಯಾದಿವಿಶೇಷಣವಿಶೇಷ್ಯಾಭ್ಯಾಮ್ ಉತ್ತರದ್ವಯಸ್ಯಾರ್ಥೋಕ್ತಿಃ।

ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' 'ಅಖಿಲೈಃ ಸುವಾಕ್ಯೈಃ ಆಪ್ಯತಮಮ್' ಎಂಬ ಮೂರು ವಿಶೇಷಣಗಳು ನಾರಾಯಣನಲ್ಲಿವೆ ಎನ್ನಲು ವೇದಾದಿಗಳೇ ಪ್ರಮಾಣವಾಗಿವೆ ಎಂಬುದನ್ನು ತಿಳಿಸುವುದಕ್ಕಾಗಿ ಮೂಲಕ್ರಮವನ್ನು ಉಲ್ಲಂಘನೆ ಮಾಡಿ 'ಅಶೇಷಾಮ್ನಾಯ' ಎಂದು ಕೊನೆಯಲ್ಲಿ ಹೇಳಿರುತ್ತಾರೆ. 'ನಿತ್ಯ' ಇತ್ಯಾದಿ ಎರಡು ವಿಶೇಷಣಗಳಿಂದ ಮೀಮಾಂಸಾಶಾಸ್ತ್ರದ ಮೊದಲೆರಡು ಅಧ್ಯಾಯಗಳ ಅರ್ಥವನ್ನು, 'ಅಶೇಷ' ಇತ್ಯಾದಿ ಎರಡು ವಿಶೇಷಣಗಳಿಂದ ಮುಂದಿನ ಎರಡು ಅಧ್ಯಾಯಗಳ ಅರ್ಥವನ್ನು ಹೇಳಿದ್ದಾರೆ.

ವಿಶೇಷವಿಚಾರ - ಮೂಲಶ್ಲೋಕದಲ್ಲಿ ಗುಣಪರಿಪೂರ್ಣತ್ವ, ನಿರ್ದೋಷತ್ವ, ವೇದಾದಿಪ್ರತಿಪಾದ್ಯತ್ವ ಈ ಕ್ರಮದಲ್ಲಿ ವಿಶೇಷಣಗಳನ್ನು ಹೇಳಿದ್ದಾರೆ. ಅದಕ್ಕನುಗುಣವಾಗಿ ನ್ಯಾಯಸುಧೆಯಲ್ಲೂ ಕೂಡ 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣವನ್ನು ಹೇಳಿದ ಮೇಲೆ 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂದೇ ಹೇಳಬೇಕಿತ್ತು. ಮಧ್ಯದಲ್ಲಿ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂದು ಹೇಳಬಾರದಿತ್ತು. ಈ ಪ್ರಶ್ನೆಗೆ ಉತ್ತರ-ವನ್ನು ಹೀಗೆ ತಿಳಿಯಬೇಕು. ಅನುವ್ಯಾಖ್ಯಾನ ಶ್ಲೋಕದಲ್ಲಿ ಹೇಳಲ್ಪಟ್ಟ ಆ ಮೂರು ವಿಶೇಷಣಗಳಲ್ಲಿ





ಸಕಲ ವೇದಾದಿಗಳೇ ಪ್ರಮಾಣವಾಗಿವೆ ಎಂದು ಸಮರ್ಥನೆ ಮಾಡಬೇಕಾಗಿದೆ. ಅದಕ್ಕಾಗಿ 'ಅಶೇಷಾಮ್ನಾಯಸ್ಮೃತಿಹೃದಯ' ಎಂಬುದಾಗಿ ಕೊನೆಯಲ್ಲಿ ಹೇಳಿದ್ದಾರೆ.

'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ಒಂದೇ ವಿಶೇಷಣದಿಂದ ಎರಡು ಅಧ್ಯಾಯಗಳ ಅರ್ಥವನ್ನು ಸಂಗ್ರಹಿಸಿದ್ದಾರೆ. 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬುದರಿಂದ ಮೂರನೆಯ ಅಧ್ಯಾಯದ ಅರ್ಥವನ್ನು, 'ಹರಯೇ' ಎಂಬ ವಿಶೇಷಣವಾಚಕಪದದಿಂದ ಫಲಾಧ್ಯಾಯದ ಅರ್ಥವನ್ನು ಸಂಗ್ರಹಿಸಿದ್ದಾರೆ. ಹೀಗೆ ಮಂಗಳಶ್ಲೋಕದಲ್ಲಿ ಅನುವ್ಯಾಖ್ಯಾನದ ಶ್ಲೋಕದ ಆದರ್ಶದಂತೆ ಸಮಸ್ತಬ್ರಹ್ಮಮೀಮಾಂಸಾಶಾಸ್ತ್ರದ ಪ್ರಮೇಯವನ್ನು ಸಂಗ್ರಹಿಸಿದ್ದಾರೆ.

## ಸ್ಮೃತ್ಯಾಮ್ನಾಯ ಎಂದೇಕೆ ಹೇಳಿಲ್ಲ?

**ಪರಿಮಳ– 'ನಾಸಿಕಾಸ್ತನಯೋರ್ಧ್ಮಾಧೇಟೋಃ' ಇತಿ ನಿದೇಶಾತ್ 'ಅಲ್ಪಾಚ್ಕ್ತರಮ್' ಇತ್ಯಸ್ಯ ಪ್ರಾಯಿಕತ್ವಾತ್ ವಾ ಅಭ್ಯರ್ಹಿತತ್ವಾತ್ ವಾ ಆಮ್ನಾಯಶಬ್ದಸ್ಯ ಪೂರ್ವನಿಪಾತಃ ॥೧॥**

'ನಾಸಿಕಾಸ್ತನಯೋರ್ಧ್ಮಾಧೇಟೋಃ' ಎಂಬ ಸೂತ್ರದಂತೆ ಅಲ್ಪಾಚ್ತರಂ ಪೂರ್ವಂ ಎಂಬ ನಿಯಮವು ಪ್ರಾಯಿಕವಾಗಿದೆ ಎಂದು ತಿಳಿಯುತ್ತದೆ. ಅಥವಾ ಅಭ್ಯರ್ಹಿತವಾದ್ದರಿಂದ ಆಮ್ನಾಯಶಬ್ದವು ಪೂರ್ವನಿಪಾತವನ್ನು ಹೊಂದಿದೆ.

ವಿಶೇಷವಿಚಾರ – 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬ ಪದದಲ್ಲಿ ಆಮ್ನಾಯ ಎಂಬ ಪದದಿಂದ ಸ್ಮೃತಿ ಎಂಬ ಪದದಲ್ಲಿ ಕಮ್ಮಿ ಅಚಕ್ಷರಗಳು ಇವೆ. ಯಾವ ಎರಡು ಪದಗಳ ನಡುವೆ ಅಚಕ್ಷರಗಳು ಕಮ್ಮಿ ಇರುತ್ತವೆಯೋ ಆ ಪದವನ್ನು ಮೊದಲು ಪ್ರಯೋಗ ಮಾಡಬೇಕೆಂಬುದಾಗಿ 'ಅಲ್ಪಾಚ್ತರಂ ಪೂರ್ವಂ' ಎಂಬ ಸೂತ್ರವು ಹೇಳುತ್ತದೆ. ಹೀಗಿರುವಾಗ ಸ್ಮೃತಿಪದವನ್ನೇ ಮೊದಲು ಪ್ರಯೋಗ ಮಾಡಬೇಕಿತ್ತು. ಅನಂತರ ಆಮ್ನಾಯಪದವನ್ನು ಪ್ರಯೋಗ ಮಾಡಬೇಕಿತ್ತು. ಆದ್ದರಿಂದ ಆಮ್ನಾಯಸ್ಮೃತಿ ಎಂದು ಹೇಗೆ ಹೇಳಿದರು?





ಉತ್ತರ – 'ನಾಸಿಕಾಸ್ತನಯೋರ್ಧ್ಮಾಧೇಟೋಃ' ಎಂಬಲ್ಲೂ ಕೂಡ ಈ ಪ್ರಶ್ನೆ ಸಮಾನವಾಗಿದೆ. ಸ್ತನ ಎಂಬ ಪದಕ್ಕಿಂತ 'ನಾಸಿಕಾ' ಎಂಬ ಪದದಲ್ಲಿ ಕಮ್ಮಿ ಅಚಕ್ಷರಗಳಿವೆ. ಕಮ್ಮಿ ಅಚಕ್ಷರವುಳ್ಳ ಸ್ತನ ಎಂಬ ಪದವನ್ನೇ ಮೊದಲು ಪ್ರಯೋಗ ಮಾಡಬೇಕಿತ್ತು. ಆದರೆ ಸೂತ್ರಕಾರನೇ ಹೀಗೆ ತನ್ನ ನಿಯಮವನ್ನು ಸಡಿಲಗೊಳಿಸಿದ್ದರಿಂದ 'ಅಲ್ಪಾಚ್‌ತರಂ ಪೂರ್ವಂ' ಎಂಬ ನ್ಯಾಯವು ಪ್ರಾಯಿಕವಾಗಿದೆ. ಎಲ್ಲೆಡೆಯೂ ಅನ್ವಯವನ್ನು ಹೊಂದುವುದಿಲ್ಲ ಎಂದು ತಿಳಿಯುತ್ತದೆ.

ಅಥವಾ ಸ್ಮೃತಿ ಹಾಗೂ ವೇದ ಇವೆರಡರ ನಡುವೆ ವೇದವು ಶ್ರೇಷ್ಠವಾಗಿದೆ. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿ ಸ್ಮೃತಿಪದವನ್ನು ಮೊದಲು ಪ್ರಯೋಗ ಮಾಡಬೇಕಿದ್ದರೂ ಕೂಡ ವೇದಪ್ರತಿಪಾದಕವಾದ ಆಮ್ನಾಯಪದವನ್ನೇ ಮೊದಲು ಪ್ರಯೋಗಿಸಿದ್ದಾರೆ.

* * * * *





ಭಾವಿಸಮೀರರೆಂದು ಪ್ರಖ್ಯಾತರಾದ

ಶ್ರೀಮದ್ವಾದಿರಾಜಪೂಜ್ಯಚರಣರಿಂದ ವಿರಚಿತವಾದ

# ಗುರ್ವರ್ಥದೀಪಿಕಾ

ನಾರಾಯಣಂ ಹಯಗ್ರೀವಂ ವ್ಯಾಸಂ ವಾಯುಂ ಸರಸ್ವತೀಮ್ ।
ನತ್ವಾ ತತ್ಕಾರುಣ್ಯಸತ್ತ್ವಾತ್ ರಮೇ ನ್ಯಾಯಸುಧಾಂಬುಧೌ ॥

ನಾರಾಯಣನನ್ನು ಹಯಗ್ರೀವನನ್ನು ವೇದವ್ಯಾಸದೇವರನ್ನು ವಾಯುದೇವರನ್ನು ಹಾಗೂ ಸರಸ್ವತೀದೇವಿಯನ್ನು ಪ್ರಾರಂಭದಲ್ಲಿ ನಮಸ್ಕಾರ ಮಾಡುತ್ತೇನೆ. ಇವರ ಕರುಣೆಯಿಂದ ನ್ಯಾಯಸುಧಾ ಎಂಬ ಸಮುದ್ರದಲ್ಲಿ ವಿಹರಿಸುತ್ತೇನೆ.

## ಶ್ರೀಕರಗ್ರಂಥವೆನ್ನಲು ನಾವೇ ಸಾಕ್ಷಿ

ಗುರ್ವರ್ಥದೀಪಿಕಾ– 'ಶ್ರಿಯಃ' ಇತಿ 'ಭೂತಿರ್ಮಹಾಲಕ್ಷ್ಮೀಃ' ಇತಿ ಚ ಶ್ರೀವಾಚಕ-ಪದಾಭ್ಯಾಮ್ ಆದ್ಯಂತಯೋಃ ಸಂಪುಟೀಕರಣಾತ್ ಶ್ರೀಕರೋऽಯಂ ಗ್ರಂಥಃ । ತತ್ರ ವಯಮೇವ ಸಾಕ್ಷಿಣಃ ॥

ಗ್ರಂಥವು 'ಶ್ರಿಯಃ' ಎಂದು ಪ್ರಾರಂಭವಾಗಿದೆ. 'ಭೂತಿರ್ಮಹಾಲಕ್ಷ್ಮೀಃ' ಎಂದು ಕೊನೆ-ಗೊಂಡಿದೆ. ಲಕ್ಷ್ಮೀವಾಚಕವಾದ ಈ ಎರಡೂ ಶಬ್ದಗಳು ಸಂಪುಟಾಕಾರರೂಪದಲ್ಲಿ ಗ್ರಂಥದ ಆದ್ಯಂತ-ಗಳಲ್ಲಿ ಸೇರಿದೆ. ಆದ್ದರಿಂದ ಇದು ಶ್ರೀಕರಗ್ರಂಥವಾಗಿದೆ. ಈ ವಿಷಯದಲ್ಲಿ ಸ್ವತಃ ನಾವೇ ಸಾಕ್ಷಿಗಳಾಗಿ-ದ್ದೇವೆ.

## ಪ್ರಥಮಾಧ್ಯಾಯ ಹಾಗೂ ದ್ವಿತೀಯಾಧ್ಯಾಯಗಳಿಗೆ ಹೇತುಹೇತುಮದ್ಭಾವರೂಪಸಂಗತಿ ಇದೆ

ಗುರ್ವರ್ಥದೀಪಿಕಾ – ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತ-ಸಕಲಾವದ್ಯತಮಸೇ ಇತಿ ವದತಾ ಜ್ಞಾನಾನಂದಾದಿಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೇನ ದೇಶತಃ ಕಾಲತಃ ಪೂರ್ಣತ್ವಾಖ್ಯಮಹಿಮ್ನಾ ಅಜ್ಞಾನದುಃಖಾದಿದೋಷಾಣಾಮ್ ಅನವಸರ-

ದುಃಸ್ಥತಯಾ ಉಪಹತತ್ವಸ್ಯಾಪಿ ಸೂಚಿತತ್ವಾತ್ ಪ್ರಥಮದ್ವಿತೀಯಾರ್ಥಯೋಃ ಹೇತುಹೇತುಮದ್ಭಾವರೂಪಾಽಪಿ ಸಂಗತಿರುಕ್ತಾ ವೇದಿತವ್ಯಾ ।

'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬು-ದಾಗಿ ಹೇಳುವುದರಿಂದ ಜ್ಞಾನಾನಂದಾದಿಗುಣಗಳೆಂಬ ಮಾಣಿಕ್ಯಗಳಿಂದ ಹರಡಿದ ಪ್ರಭೆಗಳ ಸಮೂಹದ ಉಲ್ಲಾಸದಿಂದ ಮತ್ತು ದೇಶತಃ ಕಾಲತಃ ಪೂರ್ಣನಾಗಿರುವಿಕೆ ಎಂಬ ಮಹಿಮೆಯಿಂದ ಅಜ್ಞಾನ-ದುಃಖಮೊದಲಾದ ದೋಷಗಳಿಗೆ ಅವಕಾಶವಿಲ್ಲ ಎಂದು ಸೂಚಿಸಿದಂತಾಯಿತು. ಇದರಿಂದ ಪ್ರಥಮಾಧ್ಯಾಯದ ಅರ್ಥವು ದ್ವಿತೀಯಾಧ್ಯಾಯಾರ್ಥಕ್ಕೆ ಹೇತು ರೂಪವಾಗಿದೆ ಎಂದು ಹೇತು ಹೇತುಮದ್ಭಾವವನ್ನು ತಿಳಿಸಿದಂತಾಯಿತು.

## ಸೃಷ್ಟಿಕರಣವು ಭಗವಂತನ ಸ್ವಭಾವ

**ಗುರ್ವರ್ಥದೀಪಿಕಾ–** ಭಗವತಿ ಪೂರ್ಣಗುಣತ್ವಸ್ಯ ಅಸ್ಮದಾದೌ ಅಭಾವೇನ ಅಸಂಭಾವನಾಶಂಕಾನಿರಾಸಾಯ ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ ಇತ್ಯುಕ್ತಮ್ । ಶೀಲೇತಿ ವದತಾ ಪ್ರಯೋಜನಾಪೇಕ್ಷಣೇನ ಸೃಷ್ಟ್ಯಾದಿಕರಣೇ ಅಪೂರ್ಣತಾ, ತದಭಾವೇ ಪ್ರಯೋಜನಾಭಾವೇನ ಸೃಷ್ಟ್ಯಾದಿಕರಣಮೇವ ಅನುಪಪನ್ನಮ್ ಇತಿ ಶಂಕಾಽಪಿ ಪರಿಹೃತಾ । 'ದೇವಸ್ಯೈಷ ಸ್ವಭಾವೋಽಯಮ್ ಆಪ್ತಕಾಮಸ್ಯ ಕಾ ಸ್ಪೃಹಾ' ಇತಿ ಹಿ ಶ್ರುತಿಃ ।

ಪರಮಾತ್ಮನಲ್ಲಿರುವ ಪೂರ್ಣಗುಣತ್ವವು ನಮ್ಮಲ್ಲಿ ಅಸಂಭಾವಿತವಾಗಿದೆ. ಇಂಥ ಅಸಂಭಾವಿತವಾದ ಪೂರ್ಣಗುಣತ್ವವನ್ನು ಪರಮಾತ್ಮನಲ್ಲಿ ಹೇಗೆ ಅಂಗೀಕಾರ ಮಾಡುವುದು? ಎಂಬ ಆಶಂಕೆಯ ನಿರಾಕರಣೆಗಾಗಿ 'ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ' ಎಂಬ ವಿಶೇಷಣವನ್ನು ಹೇಳಿದ್ದಾರೆ.

'ಶೀಲ' ಎಂಬುದಾಗಿ ಹೇಳುವುದರಿಂದ ಪ್ರಯೋಜನವನ್ನು ಅಪೇಕ್ಷಿಪಟ್ಟು ಸೃಷ್ಟ್ಯಾದಿಗಳನ್ನು ಮಾಡುವುದಾದರೆ ಅಪೂರ್ಣತ್ವ ಬರುತ್ತದೆ. ಪ್ರಯೋಜನದ ಅಪೇಕ್ಷೆಯಿಲ್ಲದೆ ಸೃಷ್ಟ್ಯಾದಿಗಳನ್ನು ಮಾಡುವುದೇ ಅನುಪಪನ್ನವಾಗುತ್ತದೆ ಎಂಬ ಆಶಂಕೆಯನ್ನು ಪರಿಹರಿಸಿದ್ದಾರೆ.

ಏಕೆಂದರೆ 'ದೇವಸ್ಯೈಷ ಸ್ವಭಾವೋಯಂ ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ಶ್ರುತಿ ಹೇಳುವಂತೆ ಸೃಷ್ಟ್ಯಾದಿಗಳನ್ನು ಮಾಡುವಿಕೆಯು ಶ್ರೀಹರಿಯ ಸ್ವಭಾವವಾಗಿದೆ.





## ಮೂರು ಮತ್ತು ನಾಕನೆಯ ಅಧ್ಯಾಯದ ಪ್ರಮೇಯ

ಗುರ್ವರ್ಥದೀಪಿಕಾ– ಉಕ್ತಾರ್ಥೇ ಪ್ರಮಾಣಾಭಾವಶಂಕಾಪರಿಹಾರಾಯ ಉಕ್ತಮ್ – ಅಶೇಷಾಮ್ನಾಯಸ್ಮೃತಿದೀಪ್ತಾಯಹರಯೇ ಇತಿ। ಅನೇನ ತೃತೀಯಾಧ್ಯಾಯಾರ್ಥೋಽಪಿ ಸೂಚಿತಃ। ಹರಯೇ = ಸಾಂಸಾರಿಕವಿವಿಧದುಃಖಾಪಹರ್ತ್ರೇ ಇತ್ಯನೇನ ಚತುರ್ಥಾಧ್ಯಾಯಾರ್ಥೋಽಪಿ ಸೂಚಿತಃ।

ಈ ವಿಷಯದಲ್ಲಿ ಪ್ರಮಾಣವೇ ಇಲ್ಲವೆಂಬ ಆಶಂಕೆಯ ಪರಿಹಾರಕ್ಕೋಸ್ಕರ 'ಅಶೇಷಾಮ್ನಾಯ ಸ್ಮೃತಿದೀಪ್ತಾಯ ಹರಯೇ' ಎಂಬುದಾಗಿ ಹೇಳಿದ್ದಾರೆ. ಇದರಿಂದ ಮೂರನೆಯ ಅಧ್ಯಾಯದ ಅರ್ಥವನ್ನು ಕೂಡ ಸೂಚನೆ ಮಾಡಿದ್ದಾರೆ. 'ಹರಯೇ' ಎಂಬ ಪದಕ್ಕೆ ಸಾಂಸಾರಿಕವಾದ ಬಗೆ ಬಗೆಯ ದುಃಖಗಳನ್ನು ಅಪಹಾರ ಮಾಡುವವನು ಎಂಬರ್ಥವು ಇರುವುದರಿಂದ ನಾಕನೆಯ ಅಧ್ಯಾಯದ ಅರ್ಥವನ್ನು ಇದರಿಂದ ಸೂಚನೆ ಮಾಡಿದ್ದಾರೆ. ಹೀಗೆ ಮಂಗಳಶ್ಲೋಕದಿಂದ ನಾಕು ಅಧ್ಯಾಯಗಳ ಪ್ರಮೇಯವನ್ನು ತಿಳಿಸಿದ್ದಾರೆ.

* * * * *

## ಉತ್ತರಾದಿಮಠದ ಪರಂಪರೆಯಲ್ಲಿ ಬಂದ
## ಶ್ರೀವೇದವ್ಯಾಸತೀರ್ಥರ ಶಿಷ್ಯರಾದ ಶ್ರೀವಿದ್ಯಾಧೀಶತೀರ್ಥರಿಂದ
## ವಿರಚಿತವಾದ

# ವಾಕ್ಯಾರ್ಥಚಂದ್ರಿಕಾ

## ಇಂದಿರೇಶನಿಗೆ ನಮನ

ವಾಕ್ಯಾರ್ಥಚಂದ್ರಿಕಾ –
ನಿತ್ಯಾಗಣ್ಯಬಲದ್ಯುತಿಪ್ರಮಿತಿಸತ್ಸೌಖ್ಯಾಗ್ರ್ಯವೀರ್ಯಾತುಲೌ –
ದಾರ್ಯಪ್ರಾಭವಧೀರತಾಮುಖಗುಣವ್ರಾತಾತ್ಮದಿವ್ಯಾಕೃತಿಮ್ ।
ಸಂತಾಪಾದಿಸಮಸ್ತದೋಷವಿಧುರಂ ವೇದೈಕವೇದ್ಯಂ ಜಗ-
ಜ್ಜನ್ಮಾದಿಪ್ರದಮಿಂದಿರೇಶ(ಮಮಲಂ)ಮನಿಶಂ ನಾರಾಯಣಂ ನೌಮ್ಯಹಮ್ ॥೧॥

ಓ ನಾರಾಯಣನೇ! ನಿನ್ನ ಆ ದಿವ್ಯಾಕೃತಿಯು ನಿರಂತರ ಎಣಿಸಲಶಕ್ಯವಾದ ಗುಣಗಳಿಂದ ತುಂಬಿದೆ. ಬಲ, ಕಾಂತಿ, ಯಥಾರ್ಥಜ್ಞಾನ, ದುಃಖಸಂಪರ್ಕವಿಲ್ಲದ ಸೌಖ್ಯ , ಶ್ರೇಷ್ಠವಾದ ವೀರ್ಯ, ಅಸದೃಶವಾದ ಔದಾರ್ಯ, ಸಾಮರ್ಥ್ಯ , ಧೈರ್ಯ ಇವೇ ಮೊದಲಾದ ಗುಣಗಳ ಗಣಿಯಾಗಿರುವಿ. ಸಂತಾಪ ಮೊದಲಾದ ಸಕಲದೋಷಗಳಿಂದ ರಹಿತನಾಗಿರುವಿ. ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯ-ನಾಗಿರುವಿ. ಜಗತ್ತಿಗೆ ಜನ್ಮಾದಿಪ್ರದನಾಗಿರುವಿ. ಇಂದಿರೆಗೆ ಪತಿಯಾಗಿರುವಿ. ಇಂಥ ನಿನಗೆ ನಾನು ನಿರಂತರ -ವಾಗಿ ಭಕ್ತಿಯಿಂದ ನಮಿಸುವೆ.

## ವೇದವ್ಯಾಸರನ್ನು ಆಶ್ರಯಿಸುವೆ

ವಾಕ್ಯಾರ್ಥಚಂದ್ರಿಕಾ –
ವೇದಾಂಭೋಧಿಸಮುದ್ಧೃತಾತಿವಿಲಸತ್ಸೂತ್ರಾಮೃತಾಂಭೋಲಸದ್-
ಧಾರಾವರ್ಷಣತುಷ್ಟಸದ್ಹೃದವನಿಜ್ಞಾನಾಂಕುರಾಧಾಯಕಮ್ ।
ಸಂಸಾರಾತಪನಾಶನಂ ಸುರಮನಃಸಜ್ಜಾತಕಾನಂದದಂ
ವೇದವ್ಯಾಸವಿಚಿತ್ರಮೇಘಮನಿಶಂ ಮಚ್ಛ್ರೇಯಸೇ ಸಂಶ್ರಯೇ ॥







ಓ ವೇದವ್ಯಾಸರೇ! ತಾವು ಅನೇಕ ವರ್ಣಗಳಿಂದ ಕೂಡಿದ ಮೇಘದಂತಿರುವಿರಿ. ವೇದಗಳೇ ಸಮುದ್ರಗಳು. ಆ ಸಮುದ್ರದಿಂದ ಬ್ರಹ್ಮಸೂತ್ರವೆಂಬ ಅಮೃತವನ್ನು ತಾವು ಹೀರಿರುವಿರಿ. ಈ ಬ್ರಹ್ಮ-ಸೂತ್ರಗಳು ಅತ್ಯಂತವಾಗಿ ಶೋಭಾಯಮಾನವಾಗಿವೆ. ಇಂಥ ಬ್ರಹ್ಮಸೂತ್ರಗಳೆಂಬ ಅಮೃತದ ಸಮೀ-ಚೀನವಾದ ಧಾರಾಕಾರವಾದ ಮಳೆಯನ್ನು ತಾವು ಸುರಿಸುತ್ತಿರುವಿರಿ. ಸಜ್ಜನರ ಹೃದಯವೇ ಅದಕ್ಕೆ ತಾಣವಾದ ಭೂಮಿಯಾಗಿದೆ. ಅಲ್ಲಿ ಜ್ಞಾನವೆಂಬ ಅಂಕುರವನ್ನು ಸೂತ್ರಾಮೃತಗಳಿಂದ ಹುಟ್ಟಿಸಿರುವಿರಿ. ಇದರಿಂದ ಸಂಸಾರವೆಂಬ ಬೇಗೆಯು ಪರಿಹಾರವಾಗಿದೆ. ದೇವತೆಗಳ ಮನಸ್ಸೆಂಬ ಒಳ್ಳೆಯ ಚಾತಕಪಕ್ಷಿ-ಗಳಿಗೆ ಆನಂದವುಂಟಾಗಿದೆ. ಇಂಥ ಅಸದೃಶವಾದ ಮೇಘದಂತಿರುವ ತಮ್ಮನ್ನು ನಾನು ಶ್ರೇಯಸ್ಸಿಗಾಗಿ ಆಶ್ರಯಿಸುವೆ.

## ಮಧ್ವಸೂರ್ಯರು ಜ್ಞಾನಪ್ರಕಾಶ ನೀಡಲಿ

ವಾಕ್ಯಾರ್ಥಚಂದ್ರಿಕಾ–
ಯದ್ವಾಗ್ವಿಸ್ತರರಶ್ಮಿಭಿರ್ಜಗದಿದಂ ಸನ್ಮಾರ್ಗಮಾಲಂಬಿತಂ
ಸತ್ಸಿದ್ಧಾಂತವರಾರವಿಂದನಿವಹಾ ವಿಸ್ತಾರಮಾಸಾದಿತಾಃ।
ದುಃಸಿದ್ಧಾಂತಮಹಾಂಧಕಾರನಿಕರಾ ದೇಶಾಂತಮುಲ್ಲಂಘಿತಾಃ
ಸೋಽಯಂ ಮಧ್ವದಿವಾಕರೋ ಭವತು ಸಜ್ಜ್ಞಾನಪ್ರಕಾಶಾಯ ಮೇ॥

ಓ ಜಗದ್ಗುರು ಶ್ರೀಮಧ್ವಾಚಾರ್ಯರೇ! ತಾವು ಸೂರ್ಯರಂತೆ ಪ್ರಕಾಶಿಸುತ್ತಿದ್ದೀರಿ. ತಮ್ಮ ಮಾತುಗಳೆಂಬ ವಿಸ್ತಾರವಾದ ಕಿರಣಗಳಿಂದ ಈ ಜಗತ್ತು ತುಂಬಿದೆ. ಸಮಸ್ತಜಗತ್ತೇ ಈ ಕಿರಣಗಳಿಂದ ಸನ್ಮಾರ್ಗದಲ್ಲಿ ನಡೆಯುತ್ತಿದೆ. ಸತ್ಸಿದ್ಧಾಂತಗಳೆಂಬ ಶ್ರೇಷ್ಠವಾದ ಕಮಲಗಳ ಸಮೂಹಗಳು ಅರಳಿವೆ. ದುಷ್ಟಸಿದ್ಧಾಂತಗಳೆಂಬ ಘೋರಾಂಧಕಾರದ ಸಮೂಹವು ಮೂಲೆ ಗುಂಪಾಗಿದೆ. ಇಂಥ ತಾವು ಎನಗೆ ಸಜ್ಜ್ಞಾನದ ಪ್ರಕಾಶವನ್ನುಂಟು ಮಾಡಿ ಅನುಗ್ರಹಿಸಿರಿ.

## ಅರ್ಜುನರಾದ ಟೀಕಾರಾಯರು ಸಂತೋಷ ನೀಡಲಿ

ವಾಕ್ಯಾರ್ಥಚಂದ್ರಿಕಾ–
ಸತ್ಸೂತ್ರಾನ್ವಿತಮಧ್ವಭಾಷ್ಯವಿಲಸದ್ಗಾಂಡೀವಸಂಯೋಜಿತೈಃ
ಸನ್ಮಾನೇಷುಭಿರರ್ದಯನ್ ಕುಸಮಯಪ್ರತ್ಯರ್ಥಿದುಃಸ್ಕಂದನಾನ್।





ಶ್ರೀಕೃಷ್ಣೇರಿತವೇದವಾಜಿನಿಯತಶ್ರೀಮಧ್ವಶಾಸ್ತ್ರೋಲ್ಲಸದ್-
ದಿವ್ಯಸ್ಯಂದನಸಂಸ್ಥಿತೋ ಜಯಮುನೀಶಾಖ್ಯಾರ್ಜುನಃ ಸ್ಯಾನ್ಮುದೇ ॥

ಓ ಶ್ರೀಜಯತೀರ್ಥರೇ! ತಾವು ಅರ್ಜುನನಂತೆ ಕಂಗೊಳಿಸುತ್ತಿದ್ದೀರಿ. ಅರ್ಜುನನು ಕೃಷ್ಣನಿಂದ ಪ್ರೇರಿತವಾದ ಕುದುರೆಗಳಿಂದ ಕಟ್ಟಲ್ಪಟ್ಟ ರಥದಲ್ಲಿ ಕುಳಿತು ಹಗ್ಗಕಟ್ಟಿದ ಗಾಂಡೀವ ಧನುಸ್ಸಿನಿಂದ ಶತ್ರುಗಳ ಸೈನ್ಯವನ್ನು ಶತ್ರುಗಳ ರಥವನ್ನು ನಾಶ ಮಾಡಿದನು. ಪ್ರಕೃತ ಬ್ರಹ್ಮಸೂತ್ರಗಳೇ ಹಗ್ಗ. ಮಧ್ವಭಾಷ್ಯವೇ ಗಾಂಡೀವಧನುಸ್ಸು. ಬ್ರಹ್ಮಸೂತ್ರಗಳೆಂಬ ಹಗ್ಗದಿಂದ ಈ ಮಧ್ವಭಾಷ್ಯವೆಂಬ ಗಾಂಡೀವ ಧನುಸ್ಸು ಸಂಯೋಜಿತವಾಗಿದೆ. ಇಂಥ ಗಾಂಡೀವ ಧನುಸ್ಸಿನಿಂದ ಸಮೀಚೀನವಾದ ಬಾಣಗಳಿಂದ ಪ್ರತಿವಾದಿಗಳ ಕೆಟ್ಟ ಮತಗಳೆಂಬ ಶತ್ರುಗಳನ್ನು ಅಥವಾ ಅವರ ರಥವನ್ನು ನಾಶ ಮಾಡಿರುವಿರಿ. ಶ್ರೀವೇದವ್ಯಾಸ-ದೇವರಿಂದ ಉಪದೇಶಿಸಲ್ಪಟ್ಟ ವೇದಗಳೆಂಬ ಕುದುರೆಗಳು ಶ್ರೀಮಧ್ವಶಾಸ್ತ್ರವೆಂಬ ದಿವ್ಯವಾದ ಉಲ್ಲಸಿತ-ವಾದ ರಥಕ್ಕೆ ಕಟ್ಟಲ್ಪಟ್ಟಿವೆ. ಇಂಥ ರಥದಲ್ಲಿ ಜಯಶೀಲರಾಗಿ ಕಂಗೊಳಿಸುತ್ತಿರುವ ತಾವು ನನಗೆ ಸಂತೋಷವನ್ನುಂಟುಮಾಡಿರಿ.

## ಇಂದ್ರದೇವರೆನ್ನಲು ಮತ್ತೊಂದು ಆಧಾರ

ಶ್ರೀಜಯತೀರ್ಥರು ಅರ್ಜುನರ ಅವತಾರವೆನ್ನಲು ಈ ಶ್ಲೋಕದಲ್ಲಿ ನೀಡಿದ ಉದಾಹರಣೆಯು ಆಧಾರ-ವಾಗುತ್ತದೆಂದು ಹಿರಿಯರು ಹೇಳುತ್ತಾರೆ. ಮತ್ತು ಅರ್ಜುನನು ಪರಮಾತ್ಮನನ್ನು ಕುರಿತು ವಿಶ್ವಸ್ಯೋದಯ-ಮಾತನೋಷಿ ಇತ್ಯಾದಿಯಾಗಿ ಮಧ್ಯಮಪುರುಷದಲ್ಲಿ ಯಾವಶ್ಲೋಕವನ್ನು ಹೇಳುವ ಮೂಲಕ ಪ್ರಶಂಸೆ ಮಾಡಿದ್ದಾನೋ, ಆ ಶ್ಲೋಕದಿಂದಲೇ ವಿಷ್ಣುತತ್ವನಿರ್ಣಯದ ಮಂಗಳಶ್ಲೋಕವನ್ನು ಪ್ರಥಮಪುರುಷಾಂತ-ವಾಗಿ ಶ್ರೀಜಯತೀರ್ಥರು ಪ್ರಯೋಗ ಮಾಡಿದ್ದಾರೆ. ಹೀಗೆ 'ವಿಶ್ವಸ್ಯೋದಯಮಾತನೋಷಿ' ಇತ್ಯಾದಿ-ಯಾಗಿ ಹೇಳಿದ್ದರಿಂದಲೂ ಅರ್ಜುನರ ಅವತಾರವೇ ಶ್ರೀಜಯತೀರ್ಥರೆಂಬುದಕ್ಕೆ ಗಮಕವಾಗಿದೆಯೆಂದು ಬಲ್ಲವರು ಹೇಳುತ್ತಾರೆ.

## ಗುರು ರಘೂತ್ತಮರಿಗೆ ನಿರಂತರ ನಮನ

ವಾಕ್ಯಾರ್ಥಚಂದ್ರಿಕಾ–

ಸಚ್ಛಾಸ್ತ್ರಾಮಲಭಾವಬೋಧಕಿರಣೈಃ ಸಂವರ್ಧಯನ್ ಮಧ್ವ-
ಸತ್ಸಿದ್ಧಾಂತಾಬ್ಧಿಮನಂತಶಿಷ್ಯಕುಮುದವ್ರಾತಂ ವಿಕಾಸಂ ನಯನ್ ।





ಉದ್ಭೂತೋ ರಘುವರ್ಯತೀರ್ಥಜಲಧೇಸ್ತಾಪತ್ರಯಂ ತ್ರಾಸಯನ್
ಯಸ್ತಂ ನೌಮಿ ರಘೂತ್ತಮಾಖ್ಯಶಶಿನಂ ಶ್ರೀವಿಷ್ಣುಪಾದಾಶ್ರಯಮ್ ॥

ಪರಮಗುರುಗಳಾದ ಶ್ರೀರಘೂತ್ತಮತೀರ್ಥರೇ ತಾವು ಚಂದ್ರನಂತೆ ಕಂಗೊಳಿಸುತ್ತಿದ್ದೀರಿ. ಚಂದ್ರನು ವಿಷ್ಣುಪದವೆನಿಸಿದ ಆಕಾಶವನ್ನು ಆಶ್ರಯಿಸಿದ್ದಾನೆ. ತಾವು ಕೂಡ ವಿಷ್ಣುವಿನ ಪದವನ್ನೇ ಆಶ್ರಯಿಸಿದ್ದೀರಿ. ಚಂದ್ರನು ಸಮುದ್ರದಿಂದ ಉದಯಿಸುತ್ತಾನೆ. ತಾವು ಶ್ರೀರಘುವರ್ಯತೀರ್ಥರೆಂಬ ಸಮುದ್ರದಿಂದ ಉದಯಿಸಿದ್ದೀರಿ. ಸೂರ್ಯನ ಕಿರಣದಿಂದ ಉಂಟಾದ ತಾಪಗಳನ್ನು ಚಂದ್ರನು ಪರಿಹರಿಸುತ್ತಾನೆ. ತಾವು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬ ತಾಪತ್ರಯಗಳನ್ನೇ ಪರಿಹರಿಸುವಿರಿ. ಚಂದ್ರನು ಕುಮುದವನ್ನು ವಿಕಾಸ ಪಡಿಸುತ್ತಾನೆ. ತಾವು ಅನಂತಶಿಷ್ಯರೆಂಬ ಕುಮುದಗಳ ಸಮೂಹವನ್ನು ವಿಕಾಸ ಪಡಿಸುವಿರಿ. ಚಂದ್ರನು ತನ್ನ ಕಿರಣಗಳಿಂದ ಸಮುದ್ರವನ್ನು ವೃದ್ಧಿಪಡಿಸುತ್ತಾನೆ. ಅದರಂತೆ ತಾವು ಸಚ್ಛಾಸ್ತ್ರಗಳ ನಿರ್ಮಲವಾದ ಅಭಿಪ್ರಾಯವನ್ನು ತಿಳಿಸುವ ಭಾವಬೋಧ ಎಂಬ ಗ್ರಂಥಗಳೆಂಬ ಕಿರಣಗಳಿಂದ ಮಧ್ವಸಿದ್ಧಾಂತವೆಂಬ ಸಮುದ್ರವನ್ನು ಅಭಿವೃದ್ಧಿ ಪಡಿಸಿರುವಿರಿ. ಇಂಥ ಚಂದ್ರನಂತಿರುವ ತಮಗೆ ಭಕ್ತಿಯಿಂದ ನಮಸ್ಕಾರ ಮಾಡುವೆ.

## ಸಿಂಹದಂತಿರುವ ಶ್ರೀವೇದವ್ಯಾಸತೀರ್ಥರಿಗೆ ನಮನ

ವಾಕ್ಯಾರ್ಥಚಂದ್ರಿಕಾ–
ಶ್ರೀಮದ್ರಾಮಗಿರೀಂದ್ರಪಾದನಿರತಂ ವಿದ್ರಾವಯಂತಂ ದಿಶೋ
ದುರ್ವಾದೀಂದ್ರಮಹಾಮೃತಾನ್ ನಿಗಮಸದ್ವ್ಯಾಖ್ಯಾಲಸನ್ನಾದತಃ।
ದು:ಶಾಸ್ತ್ರೇಭಕುತರ್ಕಕುಂಭದಲನಪ್ರೌಢಾತ್ಮವಿದ್ಯಾನಖಂ
ವೇ.ವ್ಯಾಸಮೃಗೇಂದ್ರರಾಜಮಧಿಕಂ ವಂದೇಽನಿಶಂ ಮದ್ಗುರುಮ್ ॥

ವೇದವ್ಯಾಸತೀರ್ಥರೇ ತಾವು ಸಿಂಹದಂತೆ ರಾರಾಜಿಸುತ್ತಿರುವಿರಿ. ಸಿಂಹವು ಪರ್ವತಗಳ ಕೆಳಗಿರುವ ಗುಹೆಯನ್ನು ಆಶ್ರಯಿಸಿರುತ್ತದೆ. ತಾವು ರಾಮದೇವರೆಂಬ ಪರ್ವತದ ಪಾದವನ್ನೇ ಆಶ್ರಯಿಸಿರುವಿರಿ. ಸಿಂಹವು ಉಚ್ಚಕಂಠದಲ್ಲಿ ಗರ್ಜನೆ ಮಾಡಿದಾಗ ದಿಕ್ಕುವಿದಿಕ್ಕುಗಳಲ್ಲಿ ಜಿಂಕೆ ನರಿ ಮೊದಲಾದ ಮೃಗಗಳು ಓಡುತ್ತವೆ. ಅದರಂತೆ ತಾವು ಸಮೀಚೀನವಾದ ವ್ಯಾಖ್ಯಾನವೆಂಬ ಶೋಭಿಸುವ ನಾದವನ್ನು ಗೈದಾಗ ಮಹಾಮೃಗಗಳಂತಿರುವ ದುರ್ವಾದಿಗಳು ಪಲಾಯನ ಮಾಡಿದರು. ಮತ್ತು ಸಿಂಹವು ಆನೆಯ ಕುಂಭಸ್ಥಳವನ್ನು ಸೀಳುತ್ತದೆ. ಅದರಂತೆ ತಾವು ದುಃಶಾಸ್ತ್ರಗಳೆಂಬ ಆನೆಗಳೆಂಬ ಅವರು ಪ್ರಯೋಗಿಸುವ





ಕುತರ್ಕಗಳೆಂಬ ಕುಂಭಗಳನ್ನು ಸೀಳುವುದರಲ್ಲಿ ಪ್ರೌಢವಾದ ಬ್ರಹ್ಮವಿದ್ಯೆಯೆಂಬ ಉಗುರುಗಳುಳ್ಳವರು. ಇಂಥ ಸಿಂಹಶ್ರೇಷ್ಠರಾದ ನನ್ನ ಗುರುಗಳಾದ ತಮಗೆ ನಿರಂತರವಾಗಿ ನಮಿಸುವೆ.

* ಶ್ರೀರಘೂತ್ತಮತೀರ್ಥರ ಶಿಷ್ಯಂದಿರು ಶ್ರೀವೇದವ್ಯಾಸತೀರ್ಥರು. ಇವರ ಶಿಷ್ಯಂದಿರು ಶ್ರೀವಿದ್ಯಾಧೀಶ-ತೀರ್ಥರು. ಇಲ್ಲಿ ಪರಮಗುರುಗಳಿಗೆ ಮೊದಲು ನಮಿಸಿ, ಅನಂತರ ತಮ್ಮ ಗುರುಗಳಿಗೆ ನಮಿಸಿದ್ದಾರೆ.

## ಶ್ರೀವ್ಯಾಸತೀರ್ಥರು ಎನಗೆ ಅನುಗ್ರಹಿಸಲಿ

ವಾಕ್ಯಾರ್ಥಚಂದ್ರಿಕಾ–

ವೇದಾಂತಾಬ್ಧಿಮಮಂದಬೋಧಗಿರಿಣಾ ಸದ್ಬ್ರಹ್ಮಸೂತ್ರಾಹಿನಾ
ದುಸ್ತರ್ಕೇತರದಾನವಾಮರಗಣೈಃ ಸಮ್ಮಥ್ಯ ಯೋ ಲಬ್ಧವಾನ್ ।
ಸನ್ನ್ಯಾಯಾಮೃತಚಂದ್ರಿಕೇ ಯುಧಿ ತಥಾ ತರ್ಕೇಽಕರೋತ್ತಾಂಡವಂ
ಸೋಽಯಂ ವ್ಯಾಸಮುನೀಂದ್ರಪೂಜ್ಯಚರಣೋ ನಿತ್ಯಂ ಭವೇನ್ನೇ ಮುದೇ ॥

ಶ್ರೀವ್ಯಾಸತೀರ್ಥರೇ! ತಾವು ದೇವತೆಗಳಂತೆ ಅಮೃತಮಥನ ಮಾಡಿರುವಿರಿ. ದೇವತೆಗಳು ಮಂದರಪರ್ವತವನ್ನು ಕಡೆಗೋಲನ್ನಾಗಿ ಮಾಡಿದರು. ತಾವು ವೇದಾಂತವೆಂಬ ಕ್ಷೀರಸಮುದ್ರದಲ್ಲಿ ಶ್ರೀಮಧ್ವಾಚಾರ್ಯರನ್ನೇ ಕಡೆಗೋಲನ್ನಾಗಿ ಮಾಡಿದಿರಿ. ದೇವತೆಗಳು ವಾಸುಕಿಯನ್ನು ಹಗ್ಗವನ್ನಾಗಿ ಮಾಡಿದರು. ಅದರಂತೆ ತಾವು ಸಮೀಚೀನವಾದ ಬ್ರಹ್ಮಸೂತ್ರಗಳನ್ನೇ ಹಗ್ಗವನ್ನಾಗಿ ಮಾಡಿದಿರಿ. ಅಲ್ಲಿ ದೇವತೆಗಳು ಹಾಗೂ ದಾನವರು ಸೇರಿ ಮಥನ ಮಾಡಿದರು. ತಮ್ಮ ವಿಷಯದಲ್ಲಿ ದುಸ್ತರ್ಕಗಳೇ ದಾನವರು ಸತ್ತರ್ಕಗಳೇ ದೇವತೆಗಳು. ದುಸ್ತರ್ಕ ಹಾಗೂ ಸತ್ತರ್ಕಗಳಿಂದ ವಿಚಾರಮಥನವನ್ನು ಮಾಡಿದಿರಿ.

ಸಮುದ್ರಮಥನ ಮಾಡಿದಾಗ ಅಮೃತ ಚಂದ್ರ ಮೊದಲಾದವುಗಳು ಉತ್ಪನ್ನವಾದವು. ಅದರಂತೆ ತಮ್ಮ ಮಥನದಿಂದ ನ್ಯಾಯಾಮೃತ, ತಾತ್ಪರ್ಯಚಂದ್ರಿಕೆಗಳು ಉತ್ಪನ್ನವಾದವು.

ಕೊನೆಯಲ್ಲಿ ದೈತ್ಯರ ಮೇಲೆ ದೇವತೆಗಳು ತಾಂಡವವಾಡಿದರು. ಅದರಂತೆ ಕೆಟ್ಟ ತರ್ಕಗಳೆಂಬ ಶಿರಗಳ ಮೇಲೆ ತಾವು ತಾಂಡವವನ್ನು ಮಾಡುವ ಮೂಲಕ ತರ್ಕತಾಂಡವವನ್ನು ರಚನೆ ಮಾಡಿದಿರಿ.

ಇಂಥ ಮುನಿಗಳಲ್ಲೇ ಶ್ರೇಷ್ಠರಾದ ತಮ್ಮ ಪಾದಕಮಲಗಳು ನನಗೆ ನಿರಂತರ ಸಂತೋಷವನ್ನುಂಟುಮಾಡಲಿ.





## ನ್ಯಾಯಸುಧೆಯೆಂಬ ಗಂಗಾಪಾನ ಮಾಡುವೆ

ವಾಕ್ಯಾರ್ಥಚಂದ್ರಿಕಾ–

ಅನುವ್ಯಾಖ್ಯಾಬ್ಧಿಯುಙ್ನ್ಯಾಯಸುಧಾಽಗಾಧಸುರಾಪಗಾಮ್ ।
ಗುರೂಣಾಂ ದಯಯಾ ಶುದ್ಧ್ಯೈ ಧಿಯಃ ಸೇವಿತುಮುತ್ಸಹೇ ॥

ನ್ಯಾಯಸುಧೆಯು ಗಂಗೆಯಂತಿದೆ. ಗಂಗೆಯು ಸಮುದ್ರವನ್ನು ಸೇರುತ್ತದೆ. ನ್ಯಾಯಸುಧೆಯೆಂಬ ಗಂಗೆಯು ಅನುವ್ಯಾಖ್ಯಾನವೆಂಬ ಸಮುದ್ರವನ್ನು ಸೇರುತ್ತಿದೆ. ಇಂಥ ಸಮುದ್ರಸೇರಿದ ಅಮೃತಗಂಗೆಯನ್ನು ಗುರುಗಳ ದಯೆಯಿಂದ ಮನಸ್ಸಿನ ಶುದ್ಧಿಗಾಗಿ ಪಾನಮಾಡಲು ಅತ್ಯಂತ ಉತ್ಸುಕನಾಗಿರುವೆ.

ಗಮನಿಸಬೇಕಾದ ಅಂಶ – ಶ್ರೀವಿದ್ಯಾಧೀಶತೀರ್ಥಶ್ರೀಪಾದಂಗಳವರು ನ್ಯಾಯಸುಧಾ ಗ್ರಂಥಕ್ಕೆ ವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ. ಇದು ಅಪಾರವಾದ ವಿಷಯಗಳಿಂದ ಕೂಡಿದೆ. ಪ್ರಾರಂಭದಲ್ಲಿ ತಾವು ಮಾಡುತ್ತಿರುವ ಮಂಗಳಾಚರಣೆ ಶ್ಲೋಕಗಳೇ ಅದ್ಭುತವಾಗಿವೆ. ನಾರಾಯಣನು ಸಮಸ್ತಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬುದಾಗಿ ಪ್ರಥಮಶ್ಲೋಕದಲ್ಲಿ ಪ್ರಶಂಸೆ ಮಾಡಿದರು. ಅನಂತರ ಆ ನಾರಾಯಣನು ಸೃಷ್ಟಿಮಾಡಿದ ಈ ಜಗತ್ತು ಹೇಗಿದೆಯೋ ಅದಕ್ಕನುಗುಣವಾಗಿ ಮುಂದಿನ ಶ್ಲೋಕಗಳಿಂದ ಸ್ತೋತ್ತಮರನ್ನು ನಮಿಸಿದರು. ನಾರಾಯಣನು ಲೌಕಿಕಜಗತ್ತನ್ನಷ್ಟೇ ಸೃಷ್ಟಿಮಾಡಿರುವುದಲ್ಲ. ಆಧ್ಯಾತ್ಮಿಕಜಗತ್ತನ್ನೂ ಸೃಷ್ಟಿಮಾಡಿದ್ದಾರೆ. ಆಧ್ಯಾತ್ಮಿಕಜಗತ್ತು ಹೀಗಿದೆ – ವೇದವ್ಯಾಸದೇವರೇ ಮೋಡ, ಮಧ್ವಾಚಾರ್ಯರು ಸೂರ್ಯ, ಜಯತೀರ್ಥರು ಅರ್ಜುನ, ಶ್ರೀರಘೂತ್ತಮತೀರ್ಥರು ಚಂದ್ರ, ಶ್ರೀವೇದ-ವ್ಯಾಸತೀರ್ಥರು ಸಿಂಹ, ಶ್ರೀವ್ಯಾಸತೀರ್ಥರು ಅಮೃತಮಥನ ನಡೆಸಿದ ಮಹಾದೇವತೆ. ಇಂಥ ಆಧ್ಯಾತ್ಮಿಕಪ್ರಪಂಚವನ್ನು ಸೃಷ್ಟಿಮಾಡಿದ ಭಗವಂತನಿಗೆ ನಮನವೆನ್ನುತ್ತಾರೆ.

## ಆಚಾರ್ಯರು ಲಕ್ಷ್ಮೀದೇವಿಗೆ ನಮಿಸಿದ್ದಾರೆಯೇ?

ವಾಕ್ಯಾರ್ಥಚಂದ್ರಿಕಾ– ಟೀಕಾಕಾರಾ ಗ್ರಂಥಾದೌ ಮಂಗಲಮಾಚರತಿ – ಶ್ರಿಯಃ ಪತ್ಯ ಇತಿ ॥ ನಾರಾಯಣಮಿತಿ ಪ್ರಥಮಪದ್ಯವ್ಯಾಖ್ಯಾನರೂಪೇಽತ್ರ ಪದ್ಯೇ ನಾರಾಯಣಪದಸ್ಥಾನೇ ಹರಿಪದಪ್ರಕ್ಷೇಪೇಣ ಪ್ರಾದುರ್ಭೂತಃ' ಇತಿ ಶ್ಲೋಕೋಕ್ತಹರೇರೇವ ನಾರಾಯಣತ್ವಾತ್ ಉತ್ತರಶ್ಲೋಕೋಕ್ತಂ 'ತಮೇವ' ಇತಿ ಸಮರ್ಥಿತಂ ಭವತಿ ।

ಅತ್ರ 'ಶ್ರಿಯಃ ಪತ್ಯೇ' ಇತ್ಯುಕ್ತ್ಯಾ ನಾರಾಃ ಲಕ್ಷ್ಮೀಃ ತತ್ಪತಿತ್ವೇನ ತದಯನಮ್ ಇತ್ಯಭಿಪ್ರಾಯವ್ಯಂಜನೇನ ಆವಶ್ಯಕಸಕಲವಾಙ್ಮನದೇವತಾನಮನಾಭಾವಪ್ರಯುಕ್ತನ್ಯೂನತಾಶಂಕಾಽಪಹಸ್ತಿತಾ ಭವತಿ ।





ಟೀಕಾರಾಯರು ಗ್ರಂಥದ ಪ್ರಾರಂಭದಲ್ಲಿ ಮಂಗಳಾಚರಣೆಯನ್ನು 'ಶ್ರಿಯಃ ಪತ್ಯೇ' ಇತ್ಯಾದಿ-ಯಾಗಿ ಮಾಡುತ್ತಿದ್ದಾರೆ. ಈ ಮಂಗಳ ಶ್ಲೋಕವು ನಾರಾಯಣಂ ಇತ್ಯಾದಿ ಅನುವ್ಯಾಖ್ಯಾನದ ಮಂಗಳ-ಶ್ಲೋಕದ ವ್ಯಾಖ್ಯಾನರೂಪವಾಗಿದೆ. ಈ ಶ್ಲೋಕದಲ್ಲಿ ನಾರಾಯಣ ಪದವನ್ನು ಪ್ರಯೋಗ ಮಾಡದೇ ಹರಿಪದವನ್ನು ಪ್ರಯೋಗ ಮಾಡಿದ್ದಾರೆ. ಇದರಿಂದ ಒಂದು ಪ್ರಮೇಯವು ತಿಳಿಯುತ್ತಿದೆ. ಅದೇನೆಂದರೆ 'ಪ್ರಾದುರ್ಭೂತಃ ಹರಿರ್ವ್ಯಾಸಃ' ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಶ್ರೀಹರಿಯೇ ನಾರಾಯಣನಾಗಿದ್ದಾನೆ. ಆದ್ದರಿಂದ ವೇದವ್ಯಾಸದೇವರೇ ಬೇರೆ ನಾರಾಯಣನೇ ಬೇರೆ ಎಂಬ ಶಂಕೆಗೆ ಅವಕಾಶವಿಲ್ಲ. ಹೀಗೆ ಮುಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ 'ತಮೇವ' ಇತ್ಯಾದಿ ವಿಷಯವನ್ನು ಹರಿಪದಪ್ರಕ್ಷೇಪದಿಂದ ಸಮರ್ಥನೆ ಮಾಡಿದಂತಾಯಿತು.

'ಶ್ರಿಯಃ ಪತ್ಯೇ' ಇತ್ಯಾದಿ ಮಂಗಳಶ್ಲೋಕದಲ್ಲಿ ಲಕ್ಷ್ಮೀಪತಿತ್ವೇನ ಶ್ರೀಹರಿಯನ್ನು ನಮಸ್ಕಾರ ಮಾಡಿದ್ದಾರೆ. ಇದರಿಂದ ಗೌಣವಾಗಿ ಲಕ್ಷ್ಮೀದೇವಿಯನ್ನು ಕೂಡ ನಮಸ್ಕಾರ ಮಾಡಿದಂತಾಯಿತು. ಆದರೆ ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ ನಾರಾಯಣನನ್ನಷ್ಟೇ ಆಚಾರ್ಯರು ನಮಸ್ಕಾರ ಮಾಡಿದ್ದಾರೆ. ಗೌಣವಾಗಿ ಲಕ್ಷ್ಮೀದೇವಿಯನ್ನು ನಮಸ್ಕಾರ ಮಾಡಿಲ್ಲ. ಆದ್ದರಿಂದ ನ್ಯೂನತಾಶಂಕೆಯು ಬರುತ್ತದಲ್ಲವೇ?

ಇದು ತಪ್ಪೆಂದು ತಿಳಿಸಲು 'ಶ್ರಿಯಃ ಪತ್ಯೇ' ಎಂಬ ವಿಶೇಷಣವನ್ನು ನೀಡಿದ್ದಾರೆ. ಇದು ನಾರಾಯಣ ಪದದ ವ್ಯಾಖ್ಯಾನರೂಪವಾಗಿದೆ. ನಾರಾಯಣಪದಕ್ಕೆ ಲಕ್ಷ್ಮಿಗೆ ಪತಿಯಾದವನು ಎಂದರ್ಥ. ಅದು ಹೀಗೆ ಅರ ಶಬ್ದಕ್ಕೆ ಮಿಥ್ಯಾಜ್ಞಾನ, ಸಂಸಾರ ಮೊದಲಾದ ದೋಷಗಳೆಂದರ್ಥ. ನ ವಿದ್ಯಂತೇ ಅರಾಃ ಯಸ್ಯಾಂ ಸಾ = ನಾರಾ ಎಂಬ ನಿಷ್ಪತ್ತಿಯಂತೆ ಲಕ್ಷ್ಮೀದೇವಿ ಎಂದರ್ಥ. ಇವಳಿಗೆ ಪತಿಯಾಗಿ ಆಶ್ರಯ-ನಾಗಿರುವವನು ನಾರಾಯಣನಾಗಿದ್ದಾನೆ.

## ಪ್ರಭಾಜಾಲೋಲ್ಲಾಸ ಇತ್ಯಾದಿ ವಿಶೇಷಣದ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ– ಪೂರ್ವವಿಶೇಷಣಾಂತರ್ಗತನಿಖಿಲಪೂರ್ಣಗುಣತ್ವಸ್ಯ ತದುತ್ತರ-ನಿರ್ದೋಷತ್ವಸ್ಯ ಚ ಪ್ರಯೋಜ್ಯಪ್ರಯೋಜಕಭಾವೋಽಪಿ ಅಸ್ತಿ, ಇತ್ಯಭಿಪ್ರೇತ್ಯ ಗುಣಾವದ್ಯಯೋಃ ಮಾಣಿಕ್ಯತಮೋಭ್ಯಾಮುಪಮಾನಮ್ । ತದುಪಾಪದನಾಯೈವ – ಪ್ರಭಾಜಾಲೋಲ್ಲಾಸೇತಿ ॥

ಗುಣನಿಖಿಲತ್ವೋಕ್ತಿಲಬ್ಧೋಪಹನ್ಯಮಾನದೋಷಸಾಕಲ್ಯಕಥನಮ್– ಸಕಲೇತಿ ॥





ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣವಿದೆ. ಇದರಲ್ಲಿ ಸೇರಿರುವ ನಿಖಿಲಪೂರ್ಣಗುಣತ್ವಕ್ಕೂ ಮುಂದಿನ ವಿಶೇಷಣದಿಂದ ತಿಳಿಯುವ ನಿರ್ದೋಷತ್ವಕ್ಕೂ ಪ್ರಯೋಜ್ಯಪ್ರಯೋಜಕತ್ವಭಾವವಿದೆ. ಈ ವಿಷಯವನ್ನು ತಿಳಿಸಲು ನ್ಯಾಯಸುಧೆಯ ಮಂಗಳಶ್ಲೋಕದಲ್ಲಿ ಗುಣಗಳನ್ನು ಮಾಣಿಕ್ಯಕ್ಕೆ ದೋಷಗಳನ್ನು ತಮಸ್ಸಿಗೆ ಹೋಲಿಸಿದ್ದಾರೆ. ಅದರ ಉಪಪಾದನೆಯನ್ನೇ ಪ್ರಭಾಜಾಲೋಲ್ಲಾಸ ಇತ್ಯಾದಿಯಾಗಿ ಮಾಡಿದ್ದಾರೆ. ಎಲ್ಲಿ ಮಾಣಿಕ್ಯವಿರುತ್ತದೋ ಅಲ್ಲಿ ಪ್ರಭೆಯ ಸಮೂಹದ ಉತ್ಕರ್ಷವಿರುತ್ತದೆ. ತಮಸ್ಸಿರಲು ಸಾಧ್ಯವೇ ಇಲ್ಲ. ಅದರಂತೆ ಪರಮಾತ್ಮನಲ್ಲಿ ಗುಣಗಳೆಂಬ ಮಾಣಿಕ್ಯದ ಪ್ರಭೆಯ ಸಮೂಹದ ಉತ್ಕರ್ಷವಿದ್ದಾಗ ದೋಷಗಳು ಇರಲು ಸಾಧ್ಯವೇ ಇಲ್ಲ ಎಂದಭಿಪ್ರಾಯ.

ಅನುವ್ಯಾಖ್ಯಾನಶ್ಲೋಕದಲ್ಲಿ 'ನಿರ್ದೋಷಂ' ಎಂಬ ವಿಶೇಷಣದಿಂದ ದೋಷಗಳಿಲ್ಲ ಎಂದಷ್ಟೇ ಹೇಳಿದ್ದಾರೆ. ಸಕಲದೋಷಗಳಿಲ್ಲ ಎಂದು ಹೇಳಿರುವುದಿಲ್ಲ. ಆದರೆ 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಿಂದ ನಿಖಿಲವಾದ ಗುಣಗಳಿವೆ ಎಂದು ಹೇಳಿದ್ದಾರೆ. ಗುಣಗಳಲ್ಲಿ ನಿಖಿಲತ್ವವನ್ನು ಹೇಳಿ-ದ್ದರಿಂದ ಇದರಿಂದ ನಾಶವಾಗುವ ದೋಷಗಳು ಕೂಡ ನಿಖಿಲವೇ ಆಗಿರಬೇಕು. ನೂರು ಗುಣಗಳಿದ್ದರೆ ನೂರು ದೋಷಗಳಿಲ್ಲವೆಂದರ್ಥ. ಸಾವಿರ ಗುಣಗಳಿದ್ದರೆ ಸಾವಿರ ದೋಷಗಳಿಲ್ಲ ಎಂದೇ ಅರ್ಥ. ಅನಂತಗುಣಗಳಿದ್ದರೆ ಅನಂತದೋಷಗಳಿಲ್ಲ ಎಂದೇ ಅರ್ಥ. ಹೀಗೆ ಈ ವಿಷಯವು ಅರ್ಥಾತ್ ಸಿದ್ಧವಾಗುವುದರಿಂದ 'ನಿರ್ದೋಷಂ' ಎಂಬಲ್ಲಿ ನಿಖಿಲತ್ವವನ್ನು ಹೇಳಿರುವುದಿಲ್ಲ. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿ 'ಸಕಲಾವದ್ಯತಮಸೇ' ಎಂದು ಸುಧೆಯ ಮಂಗಳಶ್ಲೋಕದಲ್ಲಿ ಹೇಳಿದ್ದಾರೆ.

## 'ಜಗಜ್ಜನ್ಮಸ್ಥೇಮ' ಇತ್ಯಾದಿ ವಿಶೇಷಣಕ್ಕೆ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ– ಗುಣೋಪಹತತ್ವಯೋಃ ನಿತ್ಯತ್ವವಿಶೇಷಣೇನ ತಯೋಃ ಕಾದಾಚಿತ್ಕತ್ವಶಂಕಾಂ ವ್ಯವಚ್ಛಿನತ್ತಿ । ಅಸ್യೇತಿ ಪರಾಮರ್ಶವಿಷಯಮ್ ಆದಿಪದಸಂಗ್ರಾಹ್ಯಂ ಚ ದರ್ಶಯನ್ನೇವ ಪ್ರಯೋಜನಾಭಾವಾನ್ನೋದ್ಧವಾದಿದಾನಂ ಯುಕ್ತಮ್ ಇತ್ಯಾಶಂಕಾಂ ಚ ಪರಿಹರತಿ – ಜಗದಿತಿ ॥

'ನಿತ್ಯಾಗಣಿತಗುಣಮಾಣಿಕ್ಯ' ಇತ್ಯಾದಿ ವಿಶೇಷಣದಲ್ಲಿರುವ ನಿತ್ಯತ್ವವು ಗುಣ ಹಾಗೂ ಉಪಹತತ್ವ ಎರಡರಲ್ಲಿಯೂ ವಿಶೇಷಣವಾಗಿದೆ. ಇದರಿಂದ ಗುಣ ಮತ್ತು ಉಪಹತತ್ವಗಳು ಕಾದಾಚಿತ್ಕವಾಗಿವೆ ಎಂಬ ಆಶಂಕೆಯನ್ನು ಪರಿಹರಿಸಿದಂತಾಯಿತು.





'ಅಸ್ಯೋದ್ಭವಾದಿದಂ' ಎಂಬುದಾಗಿ ಅನುವ್ಯಾಖ್ಯಾನಶ್ಲೋಕದಲ್ಲಿ ಹೇಳಿದ್ದಾರೆ. 'ಅಸ್ಯ' ಎಂಬ ಪದದಿಂದ ಯಾವುದನ್ನು ಪರಾಮರ್ಶೆ ಮಾಡಬೇಕು? ಉದ್ಭವಾದಿದಂ ಎಂಬಲ್ಲಿ ಆದಿಪದದಿಂದ ಯಾವುದನ್ನು ಸಂಗ್ರಹ ಮಾಡಬೇಕು? ದೇವರು ಉದ್ಭವಾದಿಗಳನ್ನು ಏಕೆ ಕೊಡುತ್ತಾನೆ? ಇದಕ್ಕೇನು ಪ್ರಯೋಜನ? ಈ ನಾಕೂ ಬಗೆಯ ಪ್ರಶ್ನೆಗಳಿಗೂ ಸುಧೆಯ ಮಂಗಳಶ್ಲೋಕದಲ್ಲಿರುವ 'ಜಗಜ್ಜನ್ಮಸ್ಥೇಮ' ಇತ್ಯಾದಿ ವಿಶೇಷಣವೇ ಉತ್ತರಿಸುತ್ತಿದೆ. 'ಅಸ್ಯ' ಎಂಬ ಪದದಿಂದ ಜಗತ್ತನ್ನು ಪರಾಮರ್ಶ ಮಾಡಬೇಕು. 'ಆದಿ' ಪದದಿಂದ ಸ್ಥಿತಿ ಮತ್ತು ಲಯಗಳನ್ನು ಸಂಗ್ರಹ ಮಾಡಬೇಕು. ಇದಕ್ಕೇನು ಪ್ರಯೋಜನ? ಎಂಬುದಕ್ಕೆ ಸೃಷ್ಟ್ಯಾದಿಗಳನ್ನು ಮಾಡುವುದು ಅವನ ಸ್ವಭಾವವಾಗಿದೆ ಎಂಬುದನ್ನು ಈ ವಿಶೇಷಣದಲ್ಲಿ ತಿಳಿಸಿದ್ದಾರೆ. ಹಿಂದಿನ ಪ್ರಶ್ನೆಗಳಿಗೆ ಉತ್ತರಿಸಿದ್ದಾರೆ.

ವಾಕ್ಯಾರ್ಥಚಂದ್ರಿಕಾ– ಅತ್ರ 'ಸ್ಥೇಮ'ಶಬ್ದೇನ ಅನ್ನದಾನಾದಿನೇವ ಜ್ಞಾನದಾನೇನಾಪಿ ಪಾಲನಸ್ಯ ಅಭಿಪ್ರೇತತ್ವಾತ್ ಪ್ರಲಯಶಬ್ದೇನ ಚ ಅಜ್ಞಾನಬಂಧಮೋಕ್ಷಾಣಾಂ ರಚನಾಶಬ್ದೇನ ತಂತ್ರೇಣ ನಿಯಮನಸ್ಯಾಪಿ ಗ್ರಹಣಸಂಭವಾತ್ ಉತ್ತರಾಷ್ಟಕಸಂಗ್ರಾಹಕತ್ವೇನ ವ್ಯಾಖ್ಯಾಸ್ಯಮಾನ-'ಆದಿ'ಪದಸಂಗ್ರಾಹ್ಯಕಥನಪರತ್ವಂ ನಾಸ್ಯ ಯುಕ್ತಮಿತಿ ನ ಶಂಕನೀಯಮ್ ।

ಪ್ರಶ್ನೆ – ಸೃಷ್ಟಿ,ಸ್ಥಿತಿ,ಪ್ರಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಎಂಬ ಅಷ್ಟಕಕ್ಕೂ ಭಗವಂತನೇ ಕಾರಣ ಎಂದು ಭಾಷ್ಯದಲ್ಲಿ ಹೇಳಿರುವಾಗ ನ್ಯಾಯಸುಧೆಯಲ್ಲಿ ಕೇವಲ ಸೃಷ್ಟಿ,ಸ್ಥಿತಿ, ಪ್ರಲಯಗಳನ್ನು ವಿವಕ್ಷಿಸಿ ಉಳಿದವುಗಳನ್ನು ಹೇಳದಿರಲು ಏನು ಕಾರಣ?

ಉತ್ತರ – ಸ್ಥಿತಿ ಎನ್ನುವುದಕ್ಕೆ ಅನ್ನವಸ್ತ್ರಾದಿಗಳನ್ನು ಕೊಟ್ಟು ರಕ್ಷಣೆ ಮಾಡುವುದು ಎನ್ನುವದರ ಜೊತೆಗೆ ಜ್ಞಾನವನ್ನು ಕೊಟ್ಟು ಆತ್ಮರಕ್ಷಣೆಯನ್ನು ಮಾಡುವನು ಎಂಬ ಅರ್ಥವೂ ಲಭಿಸುತ್ತದೆ. ಆದ್ದರಿಂದ ಸ್ಥಿತಿಶಬ್ದದಿಂದಲೇ ಜ್ಞಾನವನ್ನೂ ಹೇಳಿದಂತಾಯಿತು. ಅಜ್ಞಾನವಿರುವವರಿಗೆ ಮತ್ತು ಬಂಧವಿರುವವರಿಗೆ ಪ್ರಳಯ ತಪ್ಪಿದ್ದಲ್ಲ. ಹೀಗೆ ಪ್ರಳಯ ಎಂಬ ಶಬ್ದದಿಂದ ಅಜ್ಞಾನ ಮತ್ತು ಬಂಧಗಳನ್ನು ಹೇಳಿದಂತಾ-ಯಿತು. ಮತ್ತು ಬಂಧದ ಪ್ರಳಯವೇ ಮೋಕ್ಷವಾಗಿರುವ ಕಾರಣ ಮೋಕ್ಷವೂ ಕೂಡ ಪ್ರಳಯಶಬ್ದದಿಂದ ಅರ್ಥಾತ್ ಲಬ್ಧವಾಯಿತು. ರಚನಾ ಎಂಬ ಶಬ್ದವು ಒಮ್ಮೆ ಹೇಳಲ್ಪಟ್ಟಿದ್ದರೂ ಕೂಡ 'ಸಕೃದುಚ್ಚರಿತಂ ಅನೇಕೋಪಕಾರಕಮ್' ಎಂಬ ನಿಯಮದಂತೆ ನಿಯಮನ ಎಂಬರ್ಥವನ್ನು ತಿಳಿಸುತ್ತದೆ. ಆದ್ದರಿಂದ 'ಜಗಜ್ಜನ್ಮಸ್ಥೇಮಪ್ರಳಯರಚನಾ' ಎಂಬುದರಿಂದಲೇ ಸೃಷ್ಟ್ಯಾದ್ಯಷ್ಟಕಗಳನ್ನು ಟೀಕಾರಾಯರು ಸಂಗ್ರಹಿಸಿ-ದ್ದಾರೆ.

## ಸ್ಥೇಮಶಬ್ದಕ್ಕೆ ಸ್ಥಿತಿ ಎಂಬರ್ಥವು ಹೇಗೆ?

ವಾಕ್ಯಾರ್ಥಚಂದ್ರಿಕಾ– (ಅಜಿರಶಿಶಿರಶಿಥಿಲಸ್ಥಿರಸ್ಫಿರಸ್ಥವಿರಖದಿರಾಃ । ಸ್ಥಾಸ್ಥಾಯ್ಯೋಃಕ್ಷಿ-ಲೋಪಃ । ಸ್ಥಿರಂ ನಿಶ್ಚಲಮ್ । ಸ್ಫಿರಂ ಪ್ರಭೂತಮ್ । ತಿಷ್ಠತೇರ್ಬುಕ್ ಹ್ರಸ್ವತ್ವಂ ಚ । ಸ್ಥವಿರಃ । ಖದ ಸ್ಥೈರ್ಯೇ ಹಿಂಸಾಯಾಂ ಚ । ಖದಿರಃ । 'ಖದಿರೀ ಶಾಖಿಭೇದೇ ಸ್ತ್ರೀ ನಾ ಚಂದ್ರೇ ದಂತಧಾವನೇ' ಇತಿ ಮೇದಿನೀ । ಬಾಹುಲಕಾಚ್ಛೀಙೋ ಬುಕ್‌ಹ್ರಸ್ವಶ್ಚ । ಶಿಬಿರಮ್ । ಶೇರತೇಽಸ್ಮಿನ್ ರಾಜಬಲಾನಿ । 'ನಿವೇಶಃ ಶಿಬಿರಂ ಶಂಡಮ್' ಇತ್ಯಮರಃ । ಅಜಗತಿಕ್ಷೇಪಣಯೋಃ ಅಜೇರ್ವೀಭಾವಾಭಾವಃ । ಅಜಿರಮ್ ಅಂಗಣಮ್ ಅಂಗೇರ್ಲ್ಯುಟಿ ಅನಾದೇಶಸ್ಯ ಬಾಹುಲಕಾಣ್ಣತ್ವಮ್ ಇತ್ಯೇಕೇ । ಅನ್ಯೇ ತು ವಿಶ್ವಕೋಶಾದ್ಯುಪಷ್ಟಂಭೇನ ದಂತ್ಯಮೇವೇಚ್ಛಂತಿ । ಇಹ ದಶಪಾದೀವೃತ್ತೌ ನಞ್‌ಪೂರ್ವಸ್ಯ ಜೀರ್ಯತೇಃ ಋವರ್ಣಲೋಪೋ ನಿಪಾತ್ಯತ ಇತ್ಯುಕ್ತಮ್; ತದಪಿ ಗ್ರಾಹ್ಯಮ್ । ಆಶು ದ್ರುತಮಜಿರಂ ಪ್ರತ್ನಮೀಢ್ಯಮ್ ಇತ್ಯಾದೌ ನ ಜೀರ್ಯತೀತ್ಯಜಿರಃ ಇತ್ಯರ್ಥಸ್ಯ ಅನುಗುಣತ್ವಾತ್ । ಅಜಿರಂ ಪ್ರಾಂಗಣೇ ಕಾಯೇ ವಿಷಯೇ ದರ್ದುರೇಽನಿಲೇ । ಶಶಪ್ಲುತಗತೌ । ಉಪಾಧ್ಯಾಯಾ ಇತ್ವಮ್ ।

ಶಿಶಿರಂ ಸ್ಯಾದೃತೋರ್ಭೇದೇ ತುಷಾರೇ ಶೀತಲೇಽನ್ಯವತ್ ।
ಶಿಶಿರೋ ನಾ ಹಿಮೇ ನ ಸ್ತ್ರೀ ಋತುಭೇದೇ ಜಡೇ ತ್ರಿಷು ॥

ಶ್ರಥ ಮೋಚನೇ । ಉಪಧಾಯಾ ಇತ್ವಂ ರೇಫಲೋಪಃ ಪ್ರತ್ಯಯರೇಫಸ್ಯ ಲತ್ವಮ್ । ಶಿಥಿಲಮ್)

ಅತ್ರ ಅಜಿರಶಿಶಿರಶಿಥಿಲಸ್ಥಿರೇತ್ಯುಣಾದಿಸೂತ್ರೇಣ (ಉಣಾದೀತ್ಯಾದಿಪದೇನ ಷ್ಯಞ್‌ಅಞ್ ತ್ವತಲಾಂ ಸಮಾವೇಶೋ ಬೋಧ್ಯಃ) ಸ್ಥಾಧಾತೋಃ ಕಿರಚ್‌ಪ್ರತ್ಯಯೇ 'ಆತೋ ಲೋಪ ಇಟಿ ಚ' ಇತಿ ಧಾತ್ವಾಕಾರಲೋಪೇ ಚ ನಿಷ್ಪನ್ನಸ್ಯ ದೃಢಾರ್ಥಸ್ಥಿರಶಬ್ದಸ್ಯ ದೃಢಾದಿತ್ವೇನ ವರ್ಣದೃಢಾದಿಭ್ಯ (ವರ್ಣದೃಢಾದಿಭ್ಯಃ ಷ್ಯಞ್‌ಚ । ಚಾದಿಮನಿಚ್ । ಶೌಕ್ಲ್ಯಂ ಶುಕ್ಲಿಮಾ । ದಾರ್ಢ್ಯಮ್ । ಪೃಥು-ಮೃದುಭೃಶಕೃಶದೃಢಪರಿವೃಢಾನಾಮೇವ ರತ್ವಮ್ । ದ್ರಢಿಮಾ ಷೋ ಜ್ಞಾರ್ಥಃ । ಔಚಿತೀ । ಯಥಾಕಾಮೀ । ಬ್ರಾಹ್ಮಣಾದೇರಾಕೃತಿಗಣತ್ವಾತ್ ಗುಣವಚನಬ್ರಾಹ್ಮಣಾದಿಭ್ಯಃ ಷ್ಯಞ್ ಕರ್ಮಣಿ ಚ ಇತಿ ಸೂತ್ರೇಣ ಷ್ಯಞ್ । ಹಲಸ್ತದ್ಧಿತಸ್ಯೇತಿ ಯಲೋಪಃ । ಚಾದ್ಭಾವೇ । ಜಡಸ್ಯ ಕರ್ಮ ಭಾವೋ ವಾ ಜಾಡ್ಯಮ್ । ಮೌಢ್ಯಮ್ । ಬ್ರಾಹ್ಮಣ್ಯಮ್ । ಅರ್ಹತೋ ನುಮ್ ಚೇತಿ ನುಮರ್ಥಃ ಪಾಠಃ ।





ಆರ್ಹಂತ್ಯಮ್ । ಆರ್ಹಂತೀ । ಏಕಭಾವ । ಅನ್ಯಭಾವ । ತ್ರಿಭಾವ । ಏಷಾಂ ಪಾಠಃ ಸ್ವಾರ್ಥೇ ವಿಧಾನಾರ್ಥಃ । ಅನ್ಯಭಾವಾತ್ ।) ಇತೀಮನಿಚ (ಪೃಥ್ವಾದಿಭ್ಯ ಇಮನಿಜ್ವಾ । ವಾವಚನಮ್ ಅಣಾದಿಸಮಾವೇಶಾರ್ಥಮ್ । ರಋತೋ ಹಲಾದೇರ್ಲಘೋಃ । ಇಷ್ಠೇಮೇಯಸ್ಸು । ಟೇಃ । ಟೇ-ರ್ಲೋಪಃ ಸ್ಯಾದಿಷ್ಠೇ ಮೇಯಸ್ಸು । ಪೃಥೋರ್ಭಾವಃ ಪ್ರಥಿಮಾ । ಪಾರ್ಥವಮ್ । ಮ್ರದಿಮಾ । ಮಾರ್ದವಮ್ ।) ಪ್ರಿಯಸ್ಥಿರೇತ್ಯಾದಿನಾ । (ಪ್ರಿಯಸ್ಥಿರಸ್ಫಿರೋರುಬಹುಲಗುರುವೃದ್ಧತೃಪ್ರದೀರ್ಘ ವೃಂದಾರಕಾಣಾಂ ಪ್ರಸ್ಥಸ್ಫವರ್ಬಂಹಿಗರ್ವರ್ಷಿತ್ರಪ್‌ದ್ರಾಘಿವೃಂದಾಃ । ಪ್ರಿಯಾದೀನಾಂ ಕ್ರಮಾತ್ ಪ್ರಾದಯಃ ಸ್ಯುರಿಷ್ಠಾದಿಷು । ಪ್ರೇಷ್ಠಃ ಸ್ಥೇಷ್ಠಃ ಸ್ಫೇಷ್ಠಃ ವರಿಷ್ಠಃ ಬಂಹಿಷ್ಠಃ ಗರಿಷ್ಠಃ ವರ್ಷಿಷ್ಠಃ ತ್ರಪಿಷ್ಠಃ ದ್ರಾಘಿಷ್ಠಃ । ವೃಂದಿಷ್ಠಃ । ಏವಮೀಯಸ್ । ಪ್ರಿಯೋರುಬಹುಲಗುರುದೀರ್ಘಾಣಾಂ ಪೃಥ್ವಾದಿತ್ವಾತ್ ಪ್ರೇಮೇತ್ಯಾದಿ ।) ಸ್ಥಾದೇಶೇ ನಿಷ್ಪನ್ನಸ್ಥೇಮಶಬ್ದಸ್ಯ ದಾರ್ಢ್ಯೇ ಪ್ರಸಿದ್ಧಾವಪಿ 'ಅಖಿಲಭುವನಜನ್ಮ-ಸ್ಥೇಮಭಂಗಾದಿಲೀಲೇ' ಇತಿ ರಾಮಾನುಜಭಾಷ್ಯನಾಂದೀಶ್ಲೋಕೇ ಸ್ಥಿತ್ಯರ್ಥತ್ವೇನ ತದ್‌ವ್ಯಾಖ್ಯಾನ-ರೂಪಶ್ರುತಪ್ರಕಾಶಿಕಾಯಾಮ್ ಅನ್ಯತ್ರ ಚ 'ಅಭಿಯುಕ್ತಪ್ರಯೋಗಾಣಾಂ ಬಹುಲಮುಪಲಂಭಾತ್ ತಿಷ್ಠತೀತಿ ಸ್ಥಿರಮ್' ಇತಿ ವ್ಯುತ್ಪತ್ತೇಃ ಸ್ಥಿತಿಮತ್ಪರತ್ವೇಽಪ್ಯುಪಪತ್ತೇಶ್ಚ ಸ್ಥೇಮಶಬ್ದಸ್ಯ ಸ್ಥಿತಾವತ್ರ ಪ್ರಯೋಗ ಇತಿ ದ್ರಷ್ಟವ್ಯಮ್ ।

(ಬ್ರಾಕೆಟ್ಟನಲ್ಲಿರುವ ವಾಕ್ಯಗಳು ಕಾಶಿಕಾವೃತ್ತಿಯ ವಾಕ್ಯಗಳೇ ಆಗಿವೆ. ಆದ್ದರಿಂದ ಇದರ ಅನುವಾದವನ್ನು ಇಲ್ಲಿ ಮಾಡಿರುವುದಿಲ್ಲ; ಮುಂದೆಯೂ ಕೂಡ ಮಾಡುವುದಿಲ್ಲ.)

'ಅಜಿರಶಿಶಿರಶಿಥಿಲಸ್ಥಿರ' ಇತ್ಯಾದಿ ಉಣಾದಿಸೂತ್ರದಿಂದ ಸ್ಥಾಧಾತುವಿಗೆ ಕಿರಚ್‌ಪ್ರತ್ಯಯವು ಬರುತ್ತದೆ. 'ಆತೋ ಲೋಪ ಇಟಿ ಚ' ಎಂಬ ಸೂತ್ರದಿಂದ ಇಟ್‌ಪ್ರತ್ಯಯವು ಮುಂದೆ ಇರುವಾಗ ಚಶಬ್ದದಿಂದ ಕಿತ್ತಾದ ಪ್ರತ್ಯಯವು ಮುಂದೆ ಇರುವಾಗ ಆಕಾರಕ್ಕೆ ಲೋಪವು ಬರುತ್ತದೆಂದು ಹೇಳಿದ್ದಾರೆ. ಪ್ರಕೃತ ಸ್ಥಾಧಾತುವಿದೆ. ಇದರ ಮುಂದೆ ಕಿರಚ್‌ಪ್ರತ್ಯಯವಿದೆ. ಇದು ಕಿತ್ತಾದ ಪ್ರತ್ಯಯವಾಗಿದೆ. ಆದ್ದರಿಂದ ಸ್ಥಾ ಎಂಬಲ್ಲಿ ಆಕಾರಕ್ಕೆ ಲೋಪವು ಬರುತ್ತದೆ. ಈ ಸ್ಥಿರಶಬ್ದವು ದೃಢಾರ್ಥಕವಾಗಿದೆ. ಇದು ದೃಢಾದಿ-ಗಣದಲ್ಲೇ ಪಠಿತವಾಗಿದೆ. ಆದ್ದರಿಂದ 'ವರ್ಣದೃಢಾದಿಭ್ಯಃ ಷ್ಯಞ್ ಚ' ಎಂಬ ಸೂತ್ರದಿಂದ ಷ್ಯಞ್ ಪ್ರತ್ಯಯವು ಚಕಾರದಿಂದ ಇಮನಿಚ್ ಪ್ರತ್ಯಯವು ಬರುತ್ತದೆ. ಈ ಸೂತ್ರದಿಂದ ಸ್ಥಾಧಾತುವಿಗೆ ಇಮನಿಚ್ ಪ್ರತ್ಯಯವು ಬರುತ್ತದೆ. ಈಗ ಪ್ರಿಯಸ್ಥಿರ ಇತ್ಯಾದಿ ಸೂತ್ರದಿಂದ ಸ್ಥಿರಶಬ್ದಕ್ಕೆ ಸ್ಥಾ ಎಂಬ ಆದೇಶವು ಬರುತ್ತದೆ. ಇದಕ್ಕೆ ಇಮನಿಚ್ ಪ್ರತ್ಯಯವು ಸೇರಿದಾಗ ಸ್ಥೇಮನ್ ಎಂಬ ಪ್ರಾತಿಪದಿಕವು ನಿಷ್ಪನ್ನವಾಗುತ್ತದೆ.

ಸ್ಥಿರ ಎಂಬ ಶಬ್ದವು ದೃಢ ಎಂಬರ್ಥದಲ್ಲೇ ರೂಢವಾಗಿದೆ. ಆಗ ಸ್ಥಿರಸ್ಯ ಭಾವಃ ಸ್ಥೇಮ ಎಂಬುದಾಗಿ ಭಾವಾರ್ಥದಲ್ಲಿ ಇಮನಿಚ್ ಪ್ರತ್ಯಯವನ್ನು ತಿಳಿದಾಗ ಸ್ಥೇಮ ಎಂಬ ಶಬ್ದಕ್ಕೆ ದಾರ್ಢ್ಯ ಎಂಬರ್ಥವು ತಿಳಿಯುತ್ತದೆ. ಆದರೂ ಕೂಡ 'ಅಖಿಲಭುವನಜನ್ಮಸ್ಥೇಮಭಂಗಾದಿಲೀಲಃ' ಎಂಬ ರಾಮಾನುಜಭಾಷ್ಯದ ಮಂಗಳಾಚರಣೆಯ ಶ್ಲೋಕದ ವ್ಯಾಖ್ಯಾನದಲ್ಲಿ ಸ್ಥೇಮಶಬ್ದಕ್ಕೆ ಸ್ಥಿತಿ ಎಂಬರ್ಥ-ವನ್ನು ಅಂಗೀಕರಿಸಲಾಗಿದೆ. ಬೇರೆ ಗ್ರಂಥಗಳಲ್ಲೂ ಕೂಡ ನೈಷಧಕಾವ್ಯ ಮೊದಲಾದೆಡೆ ಅಭಿಯುಕ್ತ-ಪ್ರಯೋಗಗಳು ಕಾಣಸುತ್ತಿವೆ. ಮತ್ತು ತಿಷ್ಠತೀತಿ ಸ್ಥಿರಮ್ ಎಂಬ ವ್ಯುತ್ಪತ್ತಿಗೆ ಅನುಗುಣವಾಗಿ. ಕರ್ತ್ರರ್ಥ-ದಲ್ಲಿ ಕಿರಚ್‌ಪ್ರತ್ಯಯವನ್ನು ವಿವಕ್ಷಿಸಿದಾಗ ಸ್ಥಿತಿಮತ್ ಎಂಬರ್ಥವನ್ನು ಹೇಳಬಹುದು. ಈ ಅರ್ಥವನ್ನು ವಿವಕ್ಷಿಸಿದಾಗ ಸ್ಥೇಮ ಎಂಬ ಶಬ್ದಕ್ಕೆ ಸ್ಥಿತಿ ಎಂಬರ್ಥವು ತಿಳಿಯುತ್ತದೆ. ಜ್ಞಾನವತಃ ಭಾವಃ ಜ್ಞಾನವತ್ತ್ವಂ ಎಂದು ಹೇಳಿದಾಗ ಜ್ಞಾನ ಎಂಬರ್ಥವೇ ಹೇಗೆ ತಿಳಿಯುತ್ತದೋ ಅದರಂತೆ ಸ್ಥಿತಿಮತಃ ಭಾವಃ ಸ್ಥಿತಿಮತ್ತ್ವಂ ಎಂದು ಹೇಳಿದಾಗ ಸ್ಥಿತಿ ಎಂಬರ್ಥವೇ ಅರ್ಥಾತ್ ಲಭ್ಯವಾಗುತ್ತದೆ. ಹೀಗೆ ಅಭಿಯುಕ್ತಪ್ರಯೋಗದ ಜೊತೆ ಯೋಗದ ಆಧಾರವೂ ಇರುವುದರಿಂದ ಸ್ಥೇಮ ಎಂಬ ಶಬ್ದಕ್ಕೆ ಸ್ಥಿತಿ ಎಂಬರ್ಥವನ್ನು ವಿವಕ್ಷಿಸು-ವುದು ಯುಕ್ತವಾಗಿದೆ.

## ಸುವಾಕ್ಯೈಃ ಎಂಬಲ್ಲಿ ಹೇಳಲ್ಪಟ್ಟ ಶೋಭನತ್ವವು ಎಂಥದ್ದು?

ವಾಕ್ಯಾರ್ಥಚಂದ್ರಿಕಾ– 'ಸುವಾಕ್ಯೈಃ' ಇತ್ಯತ್ರ ವಾಕ್ಯಾನಾಂ ಶೋಭನತ್ವಮಾತ್ರರೂಪಸುಷ್ಠು-ತ್ವಸ್ಯ ಪ್ರಕೃತಾನುಪಯೋಗಾತ್ ಅಪೌರುಷೇಯತ್ವೇನ ತನ್ಮೂಲಕಾಪ್ತವಾಕ್ಯತ್ವೇನ ವಾ ಶೋಭನ-ತ್ವಮುಚ್ಯತ ಇತ್ಯಭಿಪ್ರೇತ್ಯ , 'ಆಪ್ಯತಮಮ್' ಇತ್ಯತ್ರ ತಮಬರ್ಥಂ ಚಾಹ – ಅಶೇಷೇತಿ ॥

ಅನುವ್ಯಾಖ್ಯಾನಮಂಗಳಶ್ಲೋಕದಲ್ಲಿ 'ಸುವಾಕ್ಯೈಃ' ಎಂದು ಹೇಳಿದ್ದಾರೆ. ವಾಕ್ಯಗಳಲ್ಲಿ ಶೋಭ-ನತ್ವವಿದೆ ಎಂಬುದು ಇದರಿಂದ ತಿಳಿಯುತ್ತದೆ. ವೇದಗಳಲ್ಲಿ ಅಪೌರುಷೇಯತ್ವೇನ ಶೋಭನತ್ವವನ್ನು ತಿಳಿಯಬೇಕು. ಪೌರುಷೇಯಗ್ರಂಥಗಳಲ್ಲಿ ವೇದಮೂಲಕವಾದ ಆಪ್ತವಾಕ್ಯತ್ವವೇ ಶೋಭನವಾಗಿದೆ ಎಂದು ತಿಳಿಯಬೇಕು. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿ ಆಮ್ನಾಯ ಮತ್ತು ಸ್ಮೃತಿಪದಗಳನ್ನು ಸುಧೆಯ ಮಂಗಳಶ್ಲೋಕದಲ್ಲಿ ಪ್ರಯೋಗಿಸಿದ್ದಾರೆ. ಮತ್ತು ಅನುವ್ಯಾಖ್ಯಾನ ಶ್ಲೋಕದಲ್ಲಿ ಆಪ್ಯತಮಮ್ ಎಂಬುದಾಗಿ ತಮಪ್‌ಪ್ರತ್ಯಯದ ಪ್ರಯೋಗವಿದೆ. ಇದರಿಂದ ಸಕಲ ಶ್ರುತಿ-ಸ್ಮೃತಿಗಳ ಮಹಾತಾತ್ಪರ್ಯ ನಾರಾಯಣನೇ ಆಗಿದ್ದಾನೆ ಎಂದು ತಿಳಿಸಲಾಗಿದೆ. ಆದಕ್ಕಾಗಿ ಸುಧೆಯ ಮಂಗಳಶ್ಲೋಕದಲ್ಲಿ 'ಹೃದಯ-ದೀಪ್ತಾಯ' ಎಂದು ಹೇಳಿದ್ದಾರೆ. ಶ್ರುತಿಸ್ಮೃತಿಗಳು ಆಪಾತತಃ ಅನ್ಯವಿಷಯಕವೆಂದು ಕಂಡರೂ ಕೂಡ

ಪರಮಮುಖ್ಯವೃತ್ತಿಯಿಂದ ಮಹಾತಾತ್ಪರ್ಯವಿರುವುದು ನಾರಾಯಣನಲ್ಲಿ ಮಾತ್ರ ಎಂಬುದಾಗಿ ಸುಧಾಕಾರರು ತಿಳಿಸಿದ್ದಾರೆ.

## ಅಲ್ಪಾಚ್‌ತರಮ್ ಪೂರ್ವಂ ಎಂಬ ನಿಯಮಕ್ಕೆ ವ್ಯಭಿಚಾರವಿದೆ

ವಾಕ್ಯಾರ್ಥಚಂದ್ರಿಕಾ– (ದ್ವಂದ್ವೇ ಘಿಃ । ದ್ವಂದ್ವೇ ಘಿಸಂಜ್ಞಂ ಪೂರ್ವಂ ಸ್ಯಾತ್ । ಹರಿಶ್ಚ ಹರಶ್ಚ ಹರಿಹರೌ । ಅನೇಕಪ್ರಾಪ್ತಾವೇಕತ್ರ ನಿಯಮೋಽನಿಯಮಃ ಶೇಷೇ । ಹರಿಗುರುಹರಾಃ ಹರಿಹರ-ಗುರವಃ ।) ನ ಚ ದ್ವಂದ್ವೇ ಘೀತ್ಯಸ್ಯ ಪಟುಗುಪ್ತೌ ಇತ್ಯತ್ರ ಅಜಾದ್ಯಂತಮ್ ಇತ್ಯಸ್ಯ ಚ (ಅಜಾ-ದ್ಯಂತಮ್ । ಇದಂ ದ್ವಂದ್ವೇ ಪೂರ್ವಂ ಸ್ಯಾತ್ । ಈಶಕೃಷ್ಣೌ । ಬಹುಷು ಅನಿಯಮಃ । ಅಶ್ವ-ರಥೇಂದ್ರಾಃ । ಇಂದ್ರಾಶ್ವರಥಾಃ । ಘ್ಯಂತಾದಜಾದ್ಯಂತಂ ವಿಪ್ರತಿಷೇಧೇನ । ಇಂದ್ರಾಗ್ನೀ ।) ಈಶಕೃಷ್ಣೌ ಇತ್ಯತ್ರ ಸಾವಕಾಶತ್ವೇನ ಇಂದ್ರಾಗ್ನೀ ಇತ್ಯತ್ರೇವ ಆಮ್ನಾಯಸ್ಮೃತೀ ಇತ್ಯತ್ರಾಪ್ಯುಭಯಪ್ರಸಂಗೇ ವಿಪ್ರತಿಷೇಧೇ ಪರಂ ಕಾರ್ಯಮ್ ಇತಿ ಅಜಾದ್ಯಂತತ್ವಾತ್ ಆಮ್ನಾಯಶಬ್ದಸ್ಯ ಪೂರ್ವನಿಪಾತ-ಸಂಭವೇಽಪಿ ಅಜಾದ್ಯಂತಮ್ ಇತ್ಯಸ್ಯ ಪೂರ್ವೋಕ್ತೇ 'ಅಲ್ಪಾಚ್‌ತರಮ್' ಇತ್ಯಸ್ಯ (ಅಲ್ಪಾಚ್‌ತರಮ್ । ಶಿವಕೇಶವೌ) ಪ್ಲಕ್ಷನ್ಯಗ್ರೋಧೌ ಇತ್ಯತ್ರ ಸಾವಕಾಶತ್ವೇನ ವಾಗೀಶೌ ಇತ್ಯತ್ರೇವ ಅತ್ರಾಪ್ಯು-ಭಯಪ್ರಸಂಗೇ ಪೂರ್ವನ್ಯಾಯೇನ 'ಅಲ್ಪಾಚ್‌ತರತ್ವಾತ್' ಸ್ಮೃತಿಶಬ್ದಸ್ಯೈವ ಪೂರ್ವನಿಪಾತಃ ಸ್ಯಾದಿತಿ ವಾಚ್ಯಮ್, 'ಲಕ್ಷಣಹೇತ್ವೋಃ ಕ್ರಿಯಾಯಾಃ' 'ಸಮುದ್ರಾಭ್ರಾದ್ಘಃ' ಇತ್ಯಾದಿಷು ಯಥಾಯಥಂ ವ್ಯಭಿಚಾರಂ ಕುರ್ವತಾ ಸೂತ್ರಕೃತಾ ಏತತ್ಪ್ರಕರಣಸ್ಯ ಅನಿತ್ಯತ್ವಜ್ಞಾಪನಾತ್ ಅಲ್ಪಾಚ್‌ತರಮ್ ಇತ್ಯಸ್ಯ ಅನಿತ್ಯತ್ವಾತ್ ಶಕುನಿಸೂತ್ರಯೋರಿತಿ ಸಾಧ್ವಿತಿ ವದತಾ ಟೀಕಾಕೃತಾ ತದನಿತ್ಯತ್ವಸ್ಯೋಕ್ತತ್ವಾಚ್ಚ । 'ಅಲ್ಪಾಚ್‌ತರಮ್' ಇತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನ - ಇತಿ ಯುಕ್ತಿಪಾದೀಯಟೀಕಾ-ಕಾರೀಯೋಕ್ತಿಶ್ಚ ತನ್ನಿತ್ಯತ್ವಾಭ್ಯುಪಗಮವಾದೇನ ಪ್ರವೃತ್ತಾ ಇತಿ ನ ವಿರೋಧಃ ಇತಿ ದ್ರಷ್ಟವ್ಯಮ್ ॥

ಆಕ್ಷೇಪ – 'ಅಶೇಷಾಮ್ನಾಯಸ್ಮೃತಿದೀಪ್ತಾಯ ಹರಯೇ' ಎಂಬ ವಿಶೇಷಣದಲ್ಲಿ ಆಮ್ನಾಯ ಮತ್ತು ಸ್ಮೃತಿಗಳಲ್ಲಿ ದ್ವಂದ್ವಸಮಾಸವನ್ನು ಮಾಡಬೇಕು. ಆಗ ಕಡಿಮೆ ಅಚಕ್ಷರಗಳುಳ್ಳ ಸ್ಮೃತಿಪದ-ವನ್ನು ಮೊದಲು ಪ್ರಯೋಗ ಮಾಡಬೇಕು. ಆದರೆ ಟೀಕೆಯಲ್ಲಿ ಹಾಗೆ ಮಾಡದಿರಲು ಕಾರಣವೇನು?

'ಅಲ್ಪಾಚ್‌ತರಮ್ ಪೂರ್ವಮ್' ಎಂಬ ಸೂತ್ರವು ಅಲ್ಪವಾದ ಅಚಕ್ಷರವುಳ್ಳ ಪದವು ಮೊದಲು ಬರಬೇಕೆಂದು ಹೇಳುತ್ತದೆ. 'ದ್ವಂದ್ವೇ ಘಿಃ' ಎಂಬ ಮತ್ತೊಂದು ಸೂತ್ರವು ಘಿಸಂಜ್ಞೆಯುಳ್ಳ ಪದವು ಮೊದಲು ಬರಬೇಕೆಂದು ಹೇಳುತ್ತಿದೆ. ಉದಾಹರಣೆ – ಪಟುಗುಪ್ತೌ. ಪಟುಶ್ಚ ಗುಪ್ತಶ್ಚ ಪಟುಗುಪ್ತೌ





ಎಂಬುದಾಗಿಯೇ ದ್ವಂದ್ವಸಮಾಸಮಾಡಬೇಕು. ಗುಪ್ತಪಟೌ ಎಂಬುದಾಗಿ ದ್ವಂದ್ವಸಮಾಸ ಮಾಡಬಾರದು. ಏಕೆಂದರೆ ಇಕಾರಾಂತ ಉಕಾರಾಂತವಾದ ಪದಗಳು ಘಿ ಎಂಬ ಸಂಜ್ಞೆಯನ್ನು ಹೊಂದುತ್ತವೆ. ಪ್ರಕೃತ ಉಕಾರಾಂತವಾದ ಪಟುಶಬ್ದಕ್ಕೆ ಘಿಸಂಜ್ಞೆಯಿರುವ ಪ್ರಯುಕ್ತ 'ದ್ವಂದ್ವೇ ಘಿಃ' ಎಂಬ ಸೂತ್ರದ ಪ್ರಕಾರ ಪೂರ್ವನಿಪಾತವನ್ನು ಪಟುಶಬ್ದವು ಹೊಂದುತ್ತದೆ. ಆದ್ದರಿಂದ ಪಟುಗುಪ್ತೌ ಎಂಬಲ್ಲಿ ವಿಧ್ಯಂತರ ನಿಯಮದಿಂದ ಪ್ರಾಪ್ತವಾಗದೇ 'ದ್ವಂದ್ವೇ ಘಿಃ' ಎಂಬ ಸೂತ್ರದಿಂದಷ್ಟೇ ಪ್ರಾಪ್ತವಾಗುವ ನಿಯಮದಂತೆ ಪಟುಶಬ್ದವು ಪೂರ್ವನಿಪಾತವನ್ನು ಹೊಂದಿದೆ. ಮತ್ತು 'ದ್ವಂದ್ವೇ ಘಿಃ' ಎಂಬ ಸೂತ್ರವು ಪಟುಗುಪ್ತೌ ಎಂಬಲ್ಲಿ ಸಾವಕಾಶವಾಗಿದೆ. ಇದರಂತೆ ಅಜಾದ್ಯಂತಮ್ ಎಂಬುದು ಮತ್ತೊಂದು ಸೂತ್ರ. ಯಾವ ಎರಡು ಪದಗಳಲ್ಲಿ ದ್ವಂದ್ವಸಮಾಸ ಮಾಡುತ್ತೇವೋ ಆ ಎರಡು ಪದಗಳ ನಡುವೆ ಅಚಕ್ಷರವೇ ಆದಿಯಾಗಿವುಳ್ಳ ಅಚಕ್ಷರವೇ ಅಂತ್ಯವಾಗಿ ಉಳ್ಳ ಯಾವ ಪದವಿದೆಯೋ ಅದು ಪೂರ್ವನಿಪಾತವನ್ನು ಹೊಂದುತ್ತದೆಂದು ಈ ಸೂತ್ರವು ಹೇಳುತ್ತಿದೆ. ಉದಾ – ಈಶಕೃಷ್ಣೌ. ಈಶಶ್ಚ ಕೃಷ್ಣಶ್ಚ ಈಶಕೃಷ್ಣೌ ಎಂಬುದಾಗಿಯೇ ದ್ವಂದ್ವಸಮಾಸವನ್ನು ಮಾಡಬೇಕು. ಕೃಷ್ಣೇಶೌ ಎಂಬುದಾಗಿ ದ್ವಂದ್ವಸಮಾಸ ಮಾಡಬಾರದು. ಏಕೆಂದರೆ, ಈಶ ಎಂಬ ಪದವು ಅಜಾದಿಯಾಗಿದೆ ಮತ್ತು ಅಜಂತವಾಗಿದೆ. ಆದ್ದರಿಂದ ಪೂರ್ವನಿಪಾತವನ್ನು ಹೊಂದುವ ಕಾರಣ ಅಜಾದ್ಯಂತಮ್ ಎಂಬ ಸೂತ್ರದ ಪ್ರಕಾರ ಈಶಕೃಷ್ಣೌ ಎಂದಾಗುತ್ತದೆ. ಈ ಸೂತ್ರವು ಇಲ್ಲಿ ಸಾವಕಾಶವಾಗಿದೆ.

ಈಗ ಇಂದ್ರಾಗ್ನೀ ಎಂಬಲ್ಲಿ ಯಾವ ಪದ ಮೊದಲು ಬರಬೇಕು ಎಂಬುದು ಸಮಸ್ಯೆ. ಏಕೆಂದರೆ ಇಂದ್ರ ಎಂಬ ಪದವು ಅಜಾದ್ಯಂತಂ ಎಂಬ ಸೂತ್ರದ ಪ್ರಕಾರ ಅಜಾದಿಯಾಗಿದೆ ಮತ್ತು ಅಜಂತವಾಗಿರುವ ಕಾರಣ ಪೂರ್ವನಿಪಾತವನ್ನು ಹೊಂದಬೇಕು ಅಥವಾ 'ದ್ವಂದ್ವೇ ಘಿಃ' ಎಂಬ ಸೂತ್ರವು ಹೇಳುವಂತೆ ಇಕಾರಾಂತವಾದ್ದರಿಂದ ಘಿಸಂಜ್ಞೆ ಹೊಂದಿರುವ ಅಗ್ನಿಶಬ್ದವು ಪೂರ್ವನಿಪಾತವನ್ನು ಹೊಂದಬೇಕು ಎಂಬ ಗೊಂದಲವುಂಟಾಗುತ್ತದೆ. ಏಕೆಂದರೆ ಎರಡು ಸೂತ್ರಗಳಿಗೂ ಕೂಡ ಇಲ್ಲಿ ಅವಕಾಶವಿದೆ. ಪ್ರಕೃತ ಆಮ್ನಾಯಸ್ಮೃತಿ ಎಂಬಲ್ಲೂ ಕೂಡ ಆಮ್ನಾಯಪದವು ಅಜಾದಿ ಮತ್ತು ಅಜಂತವಾಗಿರುವುದರಿಂದ ಅಜಾದ್ಯಂತಮ್ ಎಂಬ ಸೂತ್ರದ ಪ್ರಕಾರ ಪೂರ್ವನಿಪಾತವನ್ನು ಹೊಂದಬೇಕೋ? 'ದ್ವಂದ್ವೇ ಘಿಃ' ಎಂಬ ಸೂತ್ರವು ಹೇಳುವಂತೆ ಘಿಸಂಜ್ಞೆ ಹೊಂದಿರುವ ಸ್ಮೃತಿಪದವು ಪೂರ್ವನಿಪಾತವನ್ನು ಹೊಂದಬೇಕೋ? ಎಂಬ ಸಂಶಯ ಬರುತ್ತದೆ.

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ಹೇಳಬಹುದು – 'ವಿಪ್ರತಿಷೇಧೇ ಪರಂ ಕಾರ್ಯಮ್' ಎಂಬ ನಿಯಮಕ್ಕೆ ಅನುಗುಣವಾಗಿ 'ಅಜಾದ್ಯಂತಂ' ಎಂಬ ಸೂತ್ರವು ಅನಂತರವಿರುವುದರಿಂದ ಪೂರ್ವಸೂತ್ರ-





ವೆನಿಸಿದ 'ದ್ವಂದ್ವೇ ಘಿಃ' ಎಂಬ ಸೂತ್ರಕ್ಕೆ ಅವಕಾಶವಿಲ್ಲ. ಆದ್ದರಿಂದ ಇಂದ್ರಾಗ್ನೀ ಎಂಬಲ್ಲಿ 'ಅಜಾದ್ಯಂತಂ' ಎಂಬ ಸೂತ್ರದ ಪ್ರಕಾರ ಇಂದ್ರಶಬ್ದವೇ ಪೂರ್ವನಿಪಾತವನ್ನು ಹೊಂದುತ್ತದೆ. ಈ ಉದಾಹರಣೆಯಂತೆ 'ಆಮ್ನಾಯಸ್ಮೃತೀ' ಎಂಬಲ್ಲೂ ಕೂಡ ಅಜಾದ್ಯಂತಂ ಎಂಬ ಸೂತ್ರವೇ ಪೂರ್ವನಿಪಾತವನ್ನು ವಿಧಾನ ಮಾಡುತ್ತದೆ.

ಆದರೆ 'ದ್ವಂದ್ವೇ ಘಿಃ' ಮತ್ತು 'ಅಜಾದ್ಯಂತಂ' ಎಂಬೆರಡು ಸೂತ್ರಗಳಿಗೆ ಪ್ರಸಕ್ತಿ ಇದ್ದಾಗ 'ವಿಪ್ರತಿಷೇಧೇ ಪರಂ ಕಾರ್ಯಮ್' ಎಂಬ ನಿಯಮದಂತೆ 'ಅಜಾದ್ಯಂತಂ' ಎಂಬ ಸೂತ್ರವೇ ಹೇಗೆ ಪ್ರಾಪ್ತವಾಗುತ್ತದೋ ಅದರಂತೆ 'ಅಜಾದ್ಯಂತಂ' ಎಂಬ ಸೂತ್ರ ಮತ್ತು 'ಅಲ್ಪಾಚ್‌ತರಮ್' ಎಂಬ ಸೂತ್ರ ಇವೆರಡು ಸೂತ್ರಗಳಿಗೆ ಒಂದೇ ಸ್ಥಳದಲ್ಲಿ ಅವಕಾಶವಿದ್ದಾಗ 'ಅಲ್ಪಾಚ್‌ತರಮ್ ಪೂರ್ವಂ' ಎಂಬ ಸೂತ್ರವೇ ಪ್ರಸಕ್ತವಾಗುತ್ತದೆ. ಏಕೆಂದರೆ ಇಂದ್ರಾಗ್ನೀ ಎಂಬಲ್ಲಿ 'ಅಜಾದ್ಯಂತಂ' ಎಂಬ ಸೂತ್ರವು ಸಾವಕಾಶವಾಗಿದೆ. 'ಪ್ಲಕ್ಷನ್ಯಗ್ರೋಧೌ' ಎಂಬಲ್ಲಿ ಅಲ್ಪಾಚ್‌ತರಂ ಎಂಬ ಸೂತ್ರವು ಸಾವಕಾಶವಾಗಿದೆ. ಹೀಗೆ ಎರಡೂ ಸೂತ್ರಗಳು ಒಂದೊಂದು ಸ್ಥಳದಲ್ಲಿ ಸಾವಕಾಶವಾಗಿರುವುದರಿಂದ ವಾಗೀಶೌ ಎಂಬಲ್ಲಿ ಎರಡಕ್ಕೂ ಕೂಡ ಒಟ್ಟಿಗೇ ಪ್ರಸಕ್ತಿ ಇದೆ. ಏಕೆಂದರೆ ಈಶಶಬ್ದವು ಅಜಾದ್ಯಂತವಾಗಿದೆ. ವಾಕ್ ಎಂಬ ಶಬ್ದವು ಅಲ್ಪಾಚ್ ಆಗಿದೆ. ಆದ್ದರಿಂದ ಯಾವ ಸೂತ್ರವನ್ನು ಇಲ್ಲಿ ಅನುಸರಿಸಬೇಕು ಎಂಬ ಸಂಶಯವು ಪ್ರಾಪ್ತವಾದರೆ 'ವಿಪ್ರತಿಷೇಧೇ ಪರಂ ಕಾರ್ಯಂ' ಎಂಬ ನಿಯಮವನ್ನೇ ಅನುಸರಿಸಿ ಅನಂತರ ಸೂತ್ರವೆನಿಸಿದ 'ಅಲ್ಪಾಚ್‌ತರಂ ಪೂರ್ವಂ' ಎಂಬುದನ್ನೇ ಅನುಸರಿಸಬೇಕು. ಈಶಶಬ್ದಕ್ಕಿಂತಲೂ ವಾಕ್ ಶಬ್ದದಲ್ಲಿ ಅಲ್ಪವಾದ ಅಚಕ್ಷರಗಳು ಇರುವುದರಿಂದ ವಾಗೀಶೌ ಎಂಬುದಾಗಿ ದ್ವಂದ್ವಸಮಾಸವಾಗುತ್ತದೆ. ಅದರಂತೆ ಪ್ರಕೃತ ಆಮ್ನಾಯ ಮತ್ತು ಸ್ಮೃತಿಪದಗಳ ನಡುವೆ ಅಜಾದ್ಯಂತಂ ಎಂಬ ಸೂತ್ರಕ್ಕೂ ಅವಕಾಶವಿದೆ. ಅಲ್ಪಾಚ್‌ತರಮ್ ಎಂಬ ಸೂತ್ರಕ್ಕೂ ಅವಕಾಶವಿದೆ. ಈ ಸಂದರ್ಭದಲ್ಲಿ 'ವಿಪ್ರತಿಷೇಧೇ ಪರಂ ಕಾರ್ಯಂ' ಎಂಬ ಸೂತ್ರ ಹೇಳುವಂತೆ ಅಲ್ಪವಾದ ಅಚಕ್ಷರವುಳ್ಳ ಸ್ಮೃತಿಶಬ್ದವೇ ಪೂರ್ವನಿಪಾತವನ್ನು ಹೊಂದುತ್ತದಲ್ಲವೇ?

ಸಮಾಧಾನ – ದ್ವಂದ್ವಸಮಾಸಪ್ರಕರಣದಲ್ಲಿ ಪ್ರಾಪ್ತವಾದ 'ದ್ವಂದ್ವೇ ಘಿಃ' 'ಅಜಾದ್ಯಂತಂ' 'ವಿಪ್ರತಿಷೇಧೇ ಪರಂ ಕಾರ್ಯಂ' ಈ ಎಲ್ಲ ನಿಯಮಗಳಿಗೂ ವ್ಯಭಿಚಾರವಿದೆ. ಏಕೆಂದರೆ 'ಲಕ್ಷಣಹೇತ್ವೋಃ ಕ್ರಿಯಾಯಾಃ' ಎಂಬಲ್ಲಿ ಅಲ್ಪವಾದ ಅಚಕ್ಷರವುಳ್ಳ ಹೇತುಶಬ್ದವನ್ನು ಪರನಿಪಾತ ಮಾಡಿದ್ದಾರೆ. 'ಸಮುದ್ರಾಭ್ರಾದ್ಘಃ' ಎಂಬ ಸೂತ್ರದಲ್ಲಿ ಅಭ್ರಶಬ್ದವು ಅಜಂತವಾಗಿದೆ. ಮತ್ತು ಅಲ್ಪಾಚ್ ಉಳ್ಳದ್ದಾಗಿದೆ. ಆದರೂ ಕೂಡ ಪರನಿಪಾತ ಮಾಡಿದ್ದಾರೆ. ಹೀಗೆ ಸೂತ್ರಕಾರರೇ ತಮ್ಮ ನಿಯಮಕ್ಕೆ ವ್ಯಭಿಚಾರ







ಬರುವಂತೆ ನಡೆದುಕೊಂಡಿರುವುದರಿಂದ ಈ ಪ್ರಕರಣದಲ್ಲಿ ಪ್ರಾಪ್ತವಾದ ಸೂತ್ರಗಳೆಲ್ಲವೂ ಅನಿತ್ಯವೆಂದು ತಿಳಿಯುತ್ತದೆ. ಮತ್ತು ತತ್ವನಿರ್ಣಯಗ್ರಂಥದ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ – 'ಅಲ್ಪಾಚ್‌ತರಮಿತ್ಯಸ್ಯ ಅನಿತ್ಯತ್ವಾತ್ ಶಕುನಿಸೂತ್ರಯೋರಿತಿ ಸಾಧು' 'ಅಲ್ಪಾಚ್‌ತರಂ ಎಂಬುದು ಅನಿತ್ಯವಾಗಿರುವುದರಿಂದ ಶಕುನಿಸೂತ್ರಯೋಃ ಎಂಬ ಪದವು ಸಾಧುವಾಗಿದೆ'. ಆದ್ದರಿಂದ ಅಲ್ಪವಾದ ಅಚಕ್ಷರವುಳ್ಳ ಸ್ಮೃತಿಪದವು ಪೂರ್ವನಿಪಾತವನ್ನು ಹೊಂದಿರುವುದಿಲ್ಲ. ಆಮ್ನಾಯಸ್ಮೃತಿ ಎಂದು ಹೇಳಿರುವುದು ವ್ಯಾಕರಣಕ್ಕೆ ವಿರುದ್ಧ -ವಾಗುವುದಿಲ್ಲ.

ಹಾಗಾದರೆ ಯುಕ್ತಿಪಾದದಲ್ಲಿ ಟೀಕಾರಾಯರು 'ಅಲ್ಪಾಚ್‌ತರಂ ಇತಿ ಲಕ್ಷಣಸ್ಯ ವ್ಯಭಿಚಾರಂ ಕುರ್ವಾಣೇನ' ಎಂಬ ವಾಕ್ಯದಿಂದ ಈ ನಿಯಮವನ್ನು ನಿತ್ಯವೆಂದು ಸೂಚನೆ ಮಾಡಿದ್ದಾರಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಆ ವಾಕ್ಯವು ಅಭ್ಯುಪಗಮವಾದದಿಂದ ಪ್ರವೃತ್ತವಾಗಿದೆ. ಆದ್ದರಿಂದ ವಿರೋಧ -ವಿಲ್ಲ.

## ರಸಘಟ್ಟ
## ಹರಯೇ ಎಂದಷ್ಟೇ ಹೇಳಿದರೆ ಅತಿವ್ಯಾಪ್ತಿ

ಗಲಗಲಿನರಸಿಂಹಾಚಾರ್ಯಕೃತಆನಂದಟಿಪ್ಪಣೆ – ಹರಿಶಬ್ದಸ್ಯ ಇಂದ್ರೇಽಪಿ ಪ್ರಸಿದ್ಧತ್ವಾತ್ ಇಂದ್ರಾದಿಃ ಅತ್ರ ನಮ್ಯತ ಇತಿ ಪ್ರತೀತಿನಿರಾಸಾಯ – ಶ್ರಿಯಃ ಪತ್ಯ ಇತಿ ॥ ಅನೇನ ಚ ನ ವಿದ್ಯಂತೇ ಅರಾ ದೋಷಾಃ ಯಸ್ಯಾಃ ಸಾ ನಾರಾ ಲಕ್ಷ್ಮೀಃ ತಸ್ಯಾ ಅಯನಂ ನಾರಾಯಣ ಇತಿ ನಾರಾಯಣ-ಪದಾರ್ಥ ಉಕ್ತೋ ಭವತಿ । ತೇನ ಚ ಆಚಾರ್ಯೈಃ ಗ್ರಂಥಾರಂಭೇ 'ಭಗವತೀ ನ ವಂದಿತಾ' ಇತಿ ದೂಷಣಮಪಾಸ್ತಂ ಭವತಿ ॥

ಇಂದ್ರನೂ ಕೂಡ ಹರಿ ಎಂದು ಪ್ರಸಿದ್ಧನಾಗಿದ್ದಾನೆ. ಗ್ರಂಥಾರಂಭದಲ್ಲಿ ಇಂದ್ರನಿಗೆ ನಮಿಸು-ತ್ತಿದ್ದಾರೇನು? ಎಂಬ ಭ್ರಾಂತಿಯು ಬಂದರೆ ಶ್ರೀಹರಿಗೆ 'ಶ್ರಿಯಃ ಪತ್ಯೇ' ಎಂಬುದಾಗಿ ವಿಶೇಷಣ ನೀಡಿ-ದ್ದಾರೆ. ಶ್ರೀಪತಿತ್ವಲಿಂಗವು ಬೇರೆ ಯಾರಲ್ಲಿಯೂ ಕೂಡ ಬರಲು ಸಾಧ್ಯವಿಲ್ಲ. ಹೀಗೆ 'ಶ್ರಿಯಃ ಪತ್ಯೇ' ಎಂಬ ವಿಶೇಷಣವನ್ನು ನೀಡಿದ್ದರಿಂದ ಮತ್ತೊಂದು ಪ್ರಯೋಜನವು ಲಭ್ಯವಾಗಿದೆ. ಅನುವ್ಯಾಖ್ಯಾನ ಶ್ಲೋಕದಲ್ಲಿ 'ನಾರಾಯಣ'ಶಬ್ದಕ್ಕೆ ಮತ್ತೊಂದು ನಿಷ್ಪತ್ತಿಯನ್ನು ತಿಳಿಸಿದಂತಾಯಿತು. 'ನ ವಿದ್ಯಂತೇ ಅರಾಃ ಯಸ್ಯಾಃ ಸಾ ನಾರಾಃ' - ದೋಷಗಳು ಇಲ್ಲದ ಲಕ್ಷ್ಮೀದೇವಿಗೆ ಅಯನಂ - ಆಶ್ರಯವಾಗಿ ಉಳ್ಳ-ವನು ಎಂಬರ್ಥವನ್ನು ವಿವಕ್ಷಿಸಿದಾಗ ಶ್ರೀಮಧ್ವಾಚಾರ್ಯರು ಗ್ರಂಥದ ಪ್ರಾರಂಭದಲ್ಲಿ 'ಸಕಲವಾಙ್ಮನಸ್ಸು-





ಗಳಿಗೆ ನಿಯಾಮಕಳಾದ ಲಕ್ಷ್ಮೀದೇವಿಯನ್ನು ನಮಸ್ಕಾರ ಮಾಡಿಲ್ಲ' ಎಂಬ ದೋಷವನ್ನು ಪರಿಹರಿಸಿದಂತಾಯಿತು. 'ಶ್ರಿಯಃ ಪತ್ಯೇ' ಎಂಬುದರಿಂದ ನಾರಾಯಣಶಬ್ದದ ವ್ಯಾಖ್ಯಾನವನ್ನು ಮಾಡಿರುತ್ತಾರೆ.

## ಶ್ರೀಪತಯೇ ಎಂದಿದ್ದರೆ...?

ಆನಂದ – ನ ಚ ಶ್ರೀಪತಯೇ ಇತಿ ಸಮಾಸಾಂತಂ ಪದಂ ಪರಿತ್ಯಜ್ಯ ಭಿನ್ನಪದತ್ವಕರಣೇ ಹೇತುಃ ಕಃ? ಇತಿ ವಾಚ್ಯಮ್ । ತಸ್ಯ 'ಶ್ರಯಂತಿ ಏನಮ್ ಇತಿ ಶ್ರೀಃ, ಸ ಚಾಸೌ ಪತಿಶ್ಚೇತಿ ಕರ್ಮಧಾರಯಪ್ರತೀತಿನಿರಾಸಾರ್ಥತ್ವಾತ್ । ಪದಭೇದಕರಣೇ ಷಷ್ಠ್ಯಾ ಶ್ರಿಯೋಽಪ್ರಧಾನ್ಯಸ್ಯ ಸ್ಪಷ್ಟಂ ಪ್ರತೀತೇಶ್ಚ। ಅನ್ಯಥಾ ಭವತೀವಂದನಸ್ಯ ತಸ್ಯಾಃ ಅಪ್ರಾಧಾನ್ಯಪ್ರತೀತೇಶ್ಚಾಸಂಭವಾದಿತಿ ಭಾವಃ ॥

ಶ್ರೀಪತಿ ಎಂದು ಸಮಾಸಾಂತಪದವನ್ನು ಪರಿತ್ಯಾಗ ಮಾಡಿ 'ಶ್ರಿಯಃ ಪತ್ಯೇ' ಎಂದು ಭಿನ್ನಪದವನ್ನು ಮಾಡಲು ಏನು ಕಾರಣ? ಎಂದರೆ 'ಶ್ರಯಂತೇ ಏನಮಿತಿ ಶ್ರೀಃ, ಶ್ರೀಶ್ಚಾಸೌ ಪತಿಶ್ಚ' ಎಂದು ಕರ್ಮಧಾರಯಸಮಾಸವನ್ನು ಮಾಡಬೇಕೆಂದು ಪ್ರತೀತವಾಗುತ್ತಿತ್ತು. ಅದಕ್ಕಾಗಿ 'ಶ್ರಿಯಃ ಪತ್ಯೇ' ಎಂದು ಬಿಡಿಸಿ ಹೇಳಿದ್ದಾರೆ. 'ಶ್ರಿಯಃ' ಎಂಬ ಷಷ್ಠಿಯು ಅಪ್ರಧಾನದಲ್ಲಿಯೇ ಪ್ರಯುಕ್ತವಾಗುವುದರಿಂದ ಲಕ್ಷ್ಮೀದೇವಿಯು ಗೌಣವಾಗಿ ನಮ್ಯಳಾಗಿದ್ದಾಳೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಇಲ್ಲದಿದ್ದರೆ ಲಕ್ಷ್ಮೀದೇವಿಯ ನಮಸ್ಕಾರವಾಗಲೀ ಅವಳು ಭಗವಂತನಿಗಿಂತ ಅಪ್ರಧಾನವಾಗಿದ್ದಾಳೆಂದಾಗಲೀ ತಿಳಿಯುತ್ತಿರಲಿಲ್ಲ.

## ಪತಯೇ ಎಂದಾಗಬೇಕಲ್ಲವೇ?

ಶ್ರೀನಿಧಿತೀರ್ಥೀಯ – ನನು 'ಶೇಷೋ ಘ್ಯಸಖಿ' ಇತ್ಯನೇನ ಇವರ್ಣಾಂತತ್ವೇನ ಘಿಸಂಜ್ಞಾಯಾಂ ಘೇರ್ಙಿತಿ ಇತಿ ಗುಣೇ ಕೃತೇ 'ಪತಯೇ' ಇತಿ ಸ್ಯಾತ್ । ನ ತು ಪತ್ಯ ಇತಿ ಚೇನ್ನ, ಪತಿಃ ಸಮಾಸ ಏವೇತಿ ವ್ಯಸ್ತಸ್ಯ ಘಿಸಂಜ್ಞಾನಿಷೇಧಾತ್ । ಷಷ್ಠೀತ್ಯುಕ್ತೇ ಘಿಸಂಜ್ಞಾಸ್ತೀತಿ ಚೇನ್ನ । ಛಂದಸೀತ್ಯುಕ್ತೇಃ ತತ್ರಾಪಿ ವಿಕಲ್ಪೇನೈವ ಪ್ರಾಪ್ತೇ 'ಲೋಕೇಽಪಿ' ಇತಿ ಕೇನಚಿತ್ ಉಕ್ತಮಿತಿ ಚೇತ್ ತಥಾಪಿ ವಿಕಲ್ಪೇನ ತದಭಾವಪಕ್ಷೇ ಸಾಧುತ್ವೋಕ್ತೇಃ ॥

'ಶೇಷೋ ಘ್ಯಸಖಿ' ಎಂಬ ಸೂತ್ರವು ಹೇಳುವಂತೆ ಇವರ್ಣಾಂತವಾದ ಪತಿ ಎಂಬ ಶಬ್ದಕ್ಕೆ ಘಿಸಂಜ್ಞೆಯು ಬಂದರೆ ಘೇರ್ಙಿತಿ ಎಂಬ ಸೂತ್ರದಿಂದ ಗುಣವು ಬರುತ್ತದೆ. ಆದ್ದರಿಂದ ಪತಯೇ ಎಂದಾಗಬೇಕು. ಹೀಗಿರುವಾಗ ಪತ್ಯೇ ಎಂಬ ಪ್ರಯೋಗವನ್ನು ಹೇಗೆ ಮಾಡಿದರು?





ಉತ್ತರ – 'ಪತಿಃ ಸಮಾಸ ಏವ' ಎಂಬ ಅನುಶಾಸನಕ್ಕೆ ಅನುಗುಣವಾಗಿ ವ್ಯಸ್ತವಾದ ಪದದಲ್ಲಿ ಘಿಸಂಜ್ಞೆಯನ್ನು ನಿಷೇಧಮಾಡಲಾಗಿದೆ. ಷಷ್ಠೀ ಸಮಾಸವಿದ್ದಾಗ ಘಿಸಂಜ್ಞೆಯನ್ನು ಮಾಡಲೇ ಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಛಾಂದಸಪ್ರಯೋಗದಲ್ಲಿ ಈ ನಿಯಮವು ಅನ್ವಯವಾಗುವುದಿಲ್ಲ. ಅಥವಾ 'ಸಂಜ್ಞಾಪೂರ್ವಕೋ ವಿಧಿರನಿತ್ಯಃ' ಎಂಬ ವಚನಕ್ಕೆ ಅನುಗುಣವಾಗಿ 'ಘೇರ್ಙಿತಿ' ಸಂಜ್ಞಾಪೂರ್ವಕ-ವಾದ ಗುಣವಿಧಿಯು ವಿಕಲ್ಪವಾಗಿ ಪ್ರಾಪ್ತವಾಗುತ್ತದೆ. ಆದ್ದರಿಂದ ಪತ್ಯೇ ಎಂಬ ಪ್ರಯೋಗವು ವ್ಯಾಕರಣಕ್ಕೆ ವಿರುದ್ಧವಾಗುವುದಿಲ್ಲ ಎಂದು ಕೂಡ ತಿಳಿಯಬಹುದು.

ಅಥವಾ 'ಶ್ರಿಯಃ ಪತ್ಯೇ' ಎಂಬುದು ಸಮಸ್ತಪದವೂ ಕೂಡ ಆಗುತ್ತದೆ. ಲಕ್ಷ್ಮೀದೇವಿಯಿಂದ ನಾರಾಯಣನಿಗೆ ಆಗಬೇಕಾದದ್ದು ಏನೂ ಇಲ್ಲ ಎಂಬ ಆಕ್ರೋಶವನ್ನಿಟ್ಟುಕೊಂಡಾಗ 'ಷಷ್ಠ್ಯಾಃ ಆಕ್ರೋಶೇ' ಎಂಬ ಸೂತ್ರವು ತಿಳಿಸಿದಂತೆ ಷಷ್ಠೀವಿಭಕ್ತಿಯು ಲೋಪವಾಗುವುದಿಲ್ಲ.

## ಉಪಹತ ಶಬ್ದದ ಅರ್ಥ

ಆನಂದ/ಚಷಕ – ಅತ್ರ 'ನಿತ್ಯಮ್' ಇತ್ಯೇತತ್ ಗುಣಾನಾಮ್ ಉಪಹತಶಬ್ದಸ್ಯಾಪಿ ವಿಶೇಷಣಮ್ ।

'ನಿತ್ಯವೂ ಎಣಿಸಲು ಅಶಕ್ಯವಾದ ಗುಣಗಳುಳ್ಳವನು; ನಿತ್ಯವೂ ನಷ್ಟವಾದ ದೋಷಗಳುಳ್ಳವನು' ಎಂದು ತಿಳಿಯಬೇಕು. ಇಲ್ಲಿರುವ ಉಪಹತಶಬ್ದಕ್ಕೆ ಧ್ವಂಸಪ್ರತಿಯೋಗೀ ಎಂಬ ಅರ್ಥವನ್ನು ಮಾಡಿದರೆ ನಷ್ಟವಾಗಿವೆ ಎಂದರ್ಥವು ತಿಳಿಯುತ್ತದೆ. ಆದರೆ ಭಗವಂತನಲ್ಲಿ ದೋಷಗಳು ನಾಶವಾಗಿವೆ ಎಂದು ಹೇಳಿದರೆ ಮೊದಲು ದೋಷಗಳು ಇದ್ದವು ಎಂದು ಅಪಾರ್ಥವಾಗುತ್ತದೆ. ಇದು ಬಾಧಿತವಾಗಿದೆ. ಆದ್ದರಿಂದ 'ಉಪಹತ'ಶಬ್ದಕ್ಕೆ ಅತ್ಯಂತಾಭಾವಪ್ರತಿಯೋಗೀ ಎಂಬರ್ಥವನ್ನು ವಿವಕ್ಷಿಸಬೇಕು.

## ಆಚಾರ್ಯರ ಹೃದಯಪ್ರಿಯ

ಏರೀಬಾಳಾಚಾರ್ಯಕೃತಾ – ಅಶೇಷಾಣಾಮ್ ಆಮ್ನಾಯಾನಾಂ ಸ್ಮೃತಿಃ ಪ್ರತಿಭಾ ಯಸ್ಯ ಸ ತಥೋಕ್ತಃ ಶ್ರೀಮಧ್ವಾಚಾರ್ಯಃ ।

'ಅತ್ರ ಜನ್ಮನಿ ನ ಯತ್ಪಠಿತಂ ತೇ ಜೈತ್ರ ಭಾತಿ ಕಥಮಿತ್ಯಮುನೋಕ್ತೇ ।
ಪೂರ್ವಜನ್ಮಸು ಹಿ ವೇದ ಪುರೇದಂ ಸರ್ವಮಿತ್ಯಮಿತಬುದ್ಧಿರುವಾಚ'

ಇತಿ ಸುಮಧ್ವವಿಜಯೋಕ್ತೇಃ । ತಸ್ಯ ಹೃದಯಂ ಪ್ರಿಯಃ । ಸ ಚಾಸೌ ದೀಪ್ತಶ್ಚ ತಸ್ಮಾ ಇತ್ಯರ್ಥಃ ।





'ಪ್ರಿಯಂ ಹೃದಯಮುದ್ರಿಕ್ತಂ ಕಾಂತಮಿತ್ಯಭಿಧೀಯತೇ' ಇತಿ ದ್ವಿತೀಯತಾತ್ಪರ್ಯೋಕ್ತೇಃ । ಅನೇನ ಮಮ ಸದಾ ಪ್ರಿಯತಮಮ್ ಇತ್ಯೇತದ್ ವಿವೃತಂ ಭವತಿ । ಶ್ರೀಮಧ್ವಾಚಾರ್ಯಸ್ಯ ಹೃದಯೇ ಸ್ವಸ್ಯ ಅನ್ಯೇಷಾಂ ವಾ ದೀಪ್ತಾಯ ಅವಭಾತಾಯ ಇತ್ಯರ್ಥೋ ವಾ । ಅನೇನ ಏಷಾಂ ಬಹಿರುಪಾಸನೇನ ಮೋಕ್ಷಸ್ತೇಷಾಮಪಿ ಹೃದ್ಯುಪಾಸನಂ ಕರ್ತವ್ಯಮೇವೇತಿ ಬೃಹದ್ಭಾಷ್ಯೋಕ್ತಮರ್ಥಂ ಸೂಚಯಂತಿ ।

ಅಥವಾ 'ಅಶೇಷಾಶ್ಚ ತೇ ಆಮ್ನಾಯಾಶ್ಚ ಅಶೇಷಾಮ್ನಾಯಾಃ' - ಸಮಗ್ರವೇದಗಳು, ತೇಷಾಂ ಸ್ಮೃತಿಃ ಯಸ್ಯ ಅವುಗಳ ಸ್ಮರಣೆಯನ್ನು ಯಾವಾಗಲೂ ಇಟ್ಟುಕೊಂಡ ಶ್ರೀಮದಾಚಾರ್ಯರು, ತಸ್ಯ ಹೃದಯಂ- ಅವರಿಗೆ ಪ್ರಿಯನಾದ (ಪ್ರಿಯಂ ಹೃದಯಮುದ್ರಿಕ್ತಂ ಕಾಂತಮಿತ್ಯಭಿಧೀಯತೇ, ಇತಿ ದ್ವಿತೀಯ -ತಾತ್ಪರ್ಯೋಕ್ತೇಃ) ಮತ್ತು ದೀಪ್ತಾಯ - ಪ್ರಕಾಶಮಾನನಾದ ಎಂಬುದಾಗಿಯೂ ಅರ್ಥೈಸಬಹುದು.

ಅತ್ರ ಜನ್ಮನಿ ನ ಯತ್ ಪಠಿತಂ ತೇ ಜೈತ್ರ ಭಾತಿ ಕಥಮಿತ್ಯಮುನೋಕ್ತೇಃ ।
ಪೂರ್ವಜನ್ಮಸು ಹಿ ವೇದ ಪುರೇದಂ ಸರ್ವಮಿತ್ಯಮಿತಬುದ್ಧಿರುವಾಚ ॥

ಎಂಬ ಸುಮಧ್ವವಿಜಯದ ಉಕ್ತಿಯಂತೆ ಅನಾದಿಕಾಲದಿಂದಲೂ ಎಲ್ಲ ವೇದಾದಿಗಳ ಜ್ಞಾನವನ್ನೂ ತಲೆಯಲ್ಲಿ ತುಂಬಿಕೊಂಡ ಶ್ರೀಮದಾಚಾರ್ಯರು ಅಶೇಷಾಮ್ನಾಯಸ್ಮೃತಿಗಳು. ಅಂತಹ ಆಚಾರ್ಯರಿಗೆ ಹೃದಯನಾಗಿ - ಅತ್ಯಂತ ಪ್ರಿಯನಾಗಿ ಬೆಳಗುವ ಭಗವಂತನಿಗೆ ನಮನಗಳು. ಸೂತ್ರಗಳಿಗೆ ವ್ಯಾಖ್ಯಾನಮಾಡುವ ಶ್ರೀಮದಾಚಾರ್ಯರು ಸರ್ವಶಾಸ್ತ್ರಗಳ ಜ್ಞಾನವನ್ನು ಪೂರ್ಣವಾಗಿ ಪಡೆದವರು ಎಂದು ಸೂಚಿಸುವುದರ ಮೂಲಕ ಅವರ ವ್ಯಾಖ್ಯಾನಗಳು ಪರಮಪ್ರಮಾಣವೆಂದು ತಿಳಿಸಿದರು.

## ಹರಯೇ ನಮಃ

ಅಡವಿಕೃಷ್ಣಾಚಾರ್ಯಕೃತಲಘುರಸರಂಜನೀ – ಅತ್ರ ಹರಯೇ ನಮಃ ಇತ್ಯನ್ವಯಃ । ಪ್ರಕರಣಾತ್ ಕರೋಮೀತಿ ವಾ । ಅಸ್ತಿಭವತ್ಯೋಃ ಸರ್ವತ್ರಾನುಷಂಗಾತ್ ಅಸ್ತೀತಿ ಉಪಲಭ್ಯತೇ । ಬುದ್ಧ್ಯಾ ವಿವಿಕ್ತಂ 'ನಿತ್ಯ'ಪದಂ ನಮಃ ಇತ್ಯತ್ರಾಪಿ ಅನ್ವೇತಿ । ತೇನ ಸದಾತನತ್ವರೂಪಂ ನಿತ್ಯತ್ವಂ ಸಿದ್ಧ್ಯದನ್ಯಥಾನುಪಪತ್ತ್ಯಾ ನಮತೇರ್ಭಕ್ತ್ಯಾದ್ಯತಿಶಯಸಾಹಿತ್ಯಂ ದ್ಯೋತಯತಿ । ಯದ್ವಾ, ನಿರುಪಪದಂ ನಮಃ ಪದಮೇವ ಮುಖ್ಯನಮನಾಭಿಧಾಯಕಮ್ । ನಿರುಪಪದಶಬ್ದಸ್ಯ ಮುಖ್ಯಾರ್ಥಾಭಿಧಾಯಕತ್ವಸ್ಯ ಸೂತ್ರಶಬ್ದಾರ್ಥಕಥನಾವಸರೇ ಸಮರ್ಥಿತತ್ವಾತ್ । ನಮನಸ್ಯ ಮುಖ್ಯತ್ವಂ ಚ ಭಕ್ತ್ಯಾದ್ಯತಿಶಯಸಾಹಿತ್ಯಮೇವ । ತಥಾವಿಧಮೇವ ಹಿ ಹರಿನಮನಂ ಭವತ್ಯಭಿಮತಸಿದ್ಧೇರಂಗಮ್ ॥





ಹರಯೇ ನಮಃ ಎಂಬುದಾಗಿ ಅನ್ವಯವನ್ನು ತಿಳಿಯಬೇಕು. 'ಕರೋಮಿ' ಎಂಬ ಕ್ರಿಯಾಪದವು ಪ್ರಕರಣದ ಬಲದಿಂದಲೇ ಸಿದ್ಧವಾಗುತ್ತದೆ. 'ನಿತ್ಯಾಗಣಿತಗುಣಮಾಣಿಕ್ಯ' ಎಂಬಲ್ಲಿರುವ ನಿತ್ಯಶಬ್ದವನ್ನು ಬುದ್ಧಿಯಿಂದ ಬೇರ್ಪಡಿಸಿಕೊಳ್ಳಬೇಕು. ಆಗ 'ನಮಃ' ಎಂಬಲ್ಲಿಯೂ ಇದು ಅನ್ವಯವನ್ನು ಹೊಂದುತ್ತದೆ. ಆಗ ನಿತ್ಯವಾಗಿಯೂ ಕೂಡ ನಮಸ್ಕಾರ ಮಾಡುತ್ತೇನೆ ಎಂದು ಹೇಳಿದ್ದರಿಂದ ಭಕ್ತ್ಯತಿಶಯವನ್ನು ತಿಳಿಸಿದಂತಾಗುತ್ತದೆ. ಅಥವಾ ನಿರುಪಪದವಾದ ನಮಃ ಪದದಿಂದಲೇ ಭಕ್ತ್ಯತಿಶಯವು ತಿಳಿಯುತ್ತದೆ. ಏಕೆಂದರೆ 'ನಿರುಪಪದವಾದ ಶಬ್ದವು ಮುಖ್ಯಾರ್ಥವಾಚಕ' ಎಂಬುದನ್ನು ಸೂತ್ರಶಬ್ದದ ಅರ್ಥವನ್ನು ಹೇಳುವ ಸಂದರ್ಭದಲ್ಲಿ ಸಮರ್ಥನೆ ಮಾಡುತ್ತಾರೆ. ಪ್ರಣಾಮವು ಮುಖ್ಯವೆಂದರೆ ಭಕ್ತ್ಯತಿಶಯದಿಂದ ಕೂಡಿದೆ ಎಂದೇ ಅರ್ಥ. ಇಂಥ ನಮಸ್ಕಾರವೇ ಭಗವಂತನಿಗೆ ಮಾಡಲು ಉಚಿತವಾಗಿದೆ.

## ಹರಿಶಬ್ದಕ್ಕೆ ಏಳು ಮಜಲಿನ ಅರ್ಥ

ಏರೀಬಾಳಾಚಾರ್ಯ - ಹರತಿ ಸ್ವೀಕರೋತಿ ಶ್ರಿಯಂ ಕಲತ್ರತಯಾ ಇತಿ ವಾ; ಗುಣಾನ್ ಹರತಿ ಸ್ವೀಕರೋತೀತಿ ವಾ; ಹರತಿ ಪರಿಹರತಿ ದೋಷಾನ್ ಇತಿ ವಾ; ಸ್ವೇತರಸ್ಯ ಜಗತಃ ಉದ್ಭವಾದಿ ಪ್ರಾಪಯತೀತಿ ವಾ; ಹರತ್ಯಾಹರತ್ಯಾಮ್ನಾಯಾದೀನ್ ಸ್ವವಿಷಯ ಇತಿ ವಾ; ಹರತಿ ಸ್ವೀಕರೋತಿ ಮಧ್ವಾಚಾರ್ಯಮ್ ಆಪ್ತತಯಾ ಇತಿ ವಾ; ಹರತ್ಯುಪಾಹರತಿ ಮುಕ್ತಿಂ ಭಕ್ತಾನ್ ಇತಿ ವಾ ಹರಿಶಬ್ದೋ ಜ್ಞಾತವ್ಯಃ ॥

1. ''ಆಹರತಿ ಸ್ವೀಕರೋತಿ ಶ್ರಿಯಂ ಕಲತ್ರತಯಾ ಇತಿ ಶ್ರೀಹರಿಃ ।'' ಲಕ್ಷ್ಮೀದೇವಿಯನ್ನು ಮಡದಿಯನ್ನಾಗಿ ಸ್ವೀಕರಿಸುತ್ತಾನೆ. ''ಶ್ರಿಯಃ ಪತ್ಯೇ''

2. 'ಆಹರತಿ ಸ್ವೀಕರೋತಿ ಗುಣಾನ್ ಇತಿ ಹರಿಃ।'' ಗುಣಗಳನ್ನು ತನ್ನವನನ್ನಾಗಿ ಮಾಡಿಕೊಳ್ಳುತ್ತಾನೆ.

3. 'ಪರಿಹರತಿ ದೋಷಾನಿತಿ ಹರಿಃ' ದೋಷಗಳನ್ನು ದೂರ ಇಟ್ಟಿದ್ದಾನೆ. ''ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ''

4. 'ಉಪಾಹರತಿ ಉದ್ಭವಾದಿಕಂ ಜಗತ್ಯತಿ ಇತಿ ಹರಿಃ' ಜಗತ್ತಿಗೆ ಉದ್ಭವಾದಿಗಳನ್ನು ಒದಗಿಸುವವನು ''ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ'





5. 'ಆಹರತಿ ಆಮ್ನಾಯಾದೀನ್ ಸ್ವವಿಷಯೇ ಇತಿ ಹರಿಃ ।' ಎಲ್ಲ ವೇದಾದಿಗಳನ್ನು ತನ್ನನ್ನೇ ಕೊಂಡಾಡುವುದಕ್ಕೆ ಸ್ವೀಕರಿಸುತ್ತಾನೆ. "ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ"

6. 'ಆಹರತಿ ಸ್ವೀಕರೋತಿ ಮಧ್ವಾಚಾರ್ಯಂ ಆಪ್ತತಯಾ ಇತಿ ಹರಿಃ ।' ಮಧ್ವಾಚಾರ್ಯರನ್ನು ತನಗೆ ಅತಿ ಪ್ರಿಯರನ್ನಾಗಿ ಸ್ವೀಕರಿಸಿದ್ದಾನೆ. ಅಂದ ಮೇಲೆ ಅವರಿಗೆ ತಾನು ಅತಿಪ್ರಿಯನಾಗಿದ್ದಾನೆ. (ಮಮ ಸದಾ ಪ್ರಿಯತಮಂ) "ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ"

7. ಹರತಿ ಉಪಾಹರತಿ ಮುಕ್ತಿಂ ಭಕ್ತಾನ್ ಇತಿ ಹರಿಃ । ಭಕ್ತರಿಗೆ ಮುಕ್ತಿಯನ್ನು ದಯಪಾಲಿಸುವವನು. ಈ ಪದದಿಂದ ನಾಲ್ಕನೆಯ ಅಧ್ಯಾಯದ ಅರ್ಥವನ್ನು ಸೂಚಿಸಿದಂತಾಯಿತು.

## ಸುಧಾಪರಿಮಳಸಾರ

ಶ್ರೀಜಯತೀರ್ಥಮುನಿಗಳು ಶ್ರೀಮನ್ನ್ಯಾಯಸುಧಾಗ್ರಂಥವನ್ನು ರಚಿಸಲು ಪ್ರಾರಂಭ ಮಾಡುತ್ತಿದ್ದಾರೆ. ಗ್ರಂಥಾರಂಭದಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುವ ಮೂಲಕ ಮಂಗಲಾಚರಣೆ ಮಾಡುತ್ತಿದ್ದಾರೆ. ಶ್ರೀಹರಿಯು ಗ್ರಂಥಕಾರರಾದ ಶ್ರೀಜಯತೀರ್ಥರಿಗೆ ಅತ್ಯಂತ ಇಷ್ಟನಾಗಿದ್ದಾನೆ. ಸಕಲ ದೇವತೆಗಳಿಗಿಂತ ಸರ್ವೋತ್ತಮನಾಗಿದ್ದಾನೆ. ಗ್ರಂಥಪ್ರತಿಪಾದ್ಯನೂ ಆಗಿದ್ದಾನೆ. ಇಂಥ ಶ್ರೀಹರಿಗೆ ಗ್ರಂಥಾರಂಭದಲ್ಲಿ ನಮಸ್ಕಾರ ಮಾಡುವುದು ಅತ್ಯಂತ ಉಚಿತವಾಗಿದೆ. ಮತ್ತು ಅನೇಕ ಗುಣಗಳಿಂದ ಶ್ರೀಹರಿಯನ್ನು ಈ ಶ್ಲೋಕದಲ್ಲಿ ಸ್ತುತಿಸಿದ್ದಾರೆ –

ಶ್ರಿಯಃಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ-
ಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ ।
ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ
ನಮೋಽಶೇಷಾಮ್ನಾಯಸ್ಮೃತಿಹೃದಯದೀಪ್ತಾಯ ಹರಯೇ ॥

ಈ ಮಂಗಳಶ್ಲೋಕದಲ್ಲಿ ಒಂದೊಂದು ವಿಶೇಷಣಗಳೂ ಕೂಡ ಬಹಳ ಅರ್ಥಪೂರ್ಣವಾಗಿವೆ. ಅಷ್ಟೇ ಅಲ್ಲದೇ ಶ್ರೀಮದಾಚಾರ್ಯರ ಅನುವ್ಯಾಖ್ಯಾನದ ಮಂಗಳಶ್ಲೋಕಕ್ಕೆ ವ್ಯಾಖ್ಯಾನರೂಪವೂ ಆಗಿದೆ.

ಅನುವ್ಯಾಖ್ಯಾನದಲ್ಲಿ ಶ್ರೀಮಧ್ವಾಚಾರ್ಯರು ಮಾಡಿದ ಮಂಗಳಶ್ಲೋಕ ಹೀಗಿದೆ.





ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ಈ ಮಂಗಳಶ್ಲೋಕದಲ್ಲಿ 'ಅಶೇಷವಿಶೇಷತೋಽಪಿ ವಂದ್ಯಂ ಎಂಬುದರಿಂದ ನಾರಾಯಣನು ಸಕಲದೇವತೆಗಳಿಂದ ನಮ್ಯನಾಗಿದ್ದಾನೆಂದು ಹೇಳಿದ್ದಾರೆ. ಇದರಿಂದ ಗ್ರಂಥಾರಂಭದಲ್ಲಿ ಸಕಲದೇವತೆಗಳ ಸ್ಮರಣೆಯನ್ನು ಮಾಡಿದಂತಾಗುತ್ತದೆ. ಆ ಸಕಲ ದೇವತೆಗಳಿಗೆ ತಾಯಿಯಾದ ಮಹಾಲಕ್ಷ್ಮಿಯನ್ನು ಕೂಡ ಸ್ಮರಣೆ ಮಾಡಿದಂತಾಗುತ್ತದೆ. ಈ ವೈಶಿಷ್ಟ್ಯ ಅಶೇಷವಿಶೇಷತಃ ಎಂಬಲ್ಲಿ ಅಡಗಿದೆ. ಇದನ್ನು ನ್ಯಾಯಸುಧಾಕಾರರು 'ಶ್ರಿಯಃ ಪತ್ಯೇ' ಎಂಬುದರಿಂದ ತೋರಿಸಿದ್ದಾರೆ. ಗ್ರಂಥಾರಂಭದಲ್ಲಿ ಸಕಲವಾಙ್ಮನೋಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಸ್ಮರಣೆ ಮಾಡಲೇಬೇಕು. ಆದರೆ ಅವಳೊಬ್ಬಳನ್ನೇ ಮುಖ್ಯವಾಗಿ ಸ್ಮರಣೆ ಮಾಡುವಂತಿಲ್ಲ. ಪರಮಾತ್ಮನ ಜೊತೆ ಲಕ್ಷ್ಮಿಯನ್ನು ನಮಿಸಬೇಕು. ಇದನ್ನು ಅನುವ್ಯಾಖ್ಯಾನದಲ್ಲಿ 'ಅಶೇಷವಿಶೇಷತೋಽಪಿ ಎಂದು ಸೂಚ್ಯವಾಗಿ ಹೇಳಿದ್ದಾರೆ. ಅದನ್ನೇ ನ್ಯಾಯಸುಧೆಯಲ್ಲಿ ಸ್ಪಷ್ಟವಾಗಿ 'ಶ್ರಿಯಃ ಪತ್ಯೇ' ಎಂಬುದರಿಂದ ಸ್ಪಷ್ಟಪಡಿಸಿದ್ದಾರೆ. 'ಶ್ರೀಪತಯೇ' ಎಂದು ಒಟ್ಟಿಗೆ ಹೇಳದೇ 'ಶ್ರಿಯಃ ಪತ್ಯೇ' ಎಂದು ಬಿಡಿಸಿ ಹೇಳಿದ್ದರಿಂದ ಪರಮಾತ್ಮನಂತೆ ಲಕ್ಷ್ಮಿಯನ್ನು ಮುಖ್ಯವಾಗಿ ನಮಿಸುವಂತಿಲ್ಲ. ಗೌಣವಾಗಿ ನಮಸ್ಕರಿಸಬೇಕು ಎಂಬ ಅಪೂರ್ವಸಂಗತಿಯನ್ನು ತಿಳಿಸಿರುತ್ತಾರೆ.

ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಥಮಾಧ್ಯಾಯವು ನಾರಾಯಣನಲ್ಲಿ ಸಕಲಗುಣಪರಿಪೂರ್ಣತ್ವವನ್ನು ಪ್ರತಿಪಾದನೆ ಮಾಡುತ್ತದೆ. ಎರಡನೇ ಅಧ್ಯಾಯವು ಸಕಲದೋಷವಿದೂರತ್ವವನ್ನು ಪ್ರತಿಪಾದನೆ ಮಾಡುತ್ತದೆ. ಎರಡನೆಯ ಅಧ್ಯಾಯದಲ್ಲಿ ಪ್ರತಿಪಾದನೆ ಮಾಡುವ ಸಕಲದೋಷವಿದೂರತ್ವಕ್ಕೆ ಪ್ರಥಮಾಧ್ಯಾಯ ಪ್ರತಿಪಾದ್ಯವಾದ ಸಕಲಗುಣಪರಿಪೂರ್ಣತ್ವವು ಹೇತುವಾಗಿದೆ. ಈ ಎರಡು ಅಧ್ಯಾಯಗಳ ಸಾರವನ್ನು ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಮತ್ತು 'ನಿರ್ದೋಷಂ' ಎಂಬ ಎರಡು ವಿಶೇಷಣಗಳಿಂದ ಸಂಗ್ರಹ ಮಾಡಿದ್ದಾರೆ. ನಿರ್ದೋಷತ್ವಕ್ಕೆ ನಿಖಿಲಪೂರ್ಣಗುಣೈಕದೇಹತ್ವವು ಹೇತುವಾಗಿದೆ ಎಂಬುದನ್ನು ಇಲ್ಲಿ ಗಮನಿಸಬೇಕು. ಈ ಅಪೂರ್ವವಿಷಯವನ್ನು ನ್ಯಾಯಸುಧೆಯಲ್ಲಿ 'ನಿತ್ಯಾನಿತ್ಯಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣದಿಂದ ಸ್ಪಷ್ಟವಾಗಿ ತಿಳಿಸಿದ್ದಾರೆ.



ಮೂಲದಲ್ಲಿ ಹೇಳಲ್ಪಟ್ಟ ಸಕಲಗುಣಪರಿಪೂರ್ಣತ್ವ ಸಕಲದೋಷವಿದೂರತ್ವವು ನಾರಾಯಣಶಬ್ದದ ಅರ್ಥವಾಗಿದೆ. ಬ್ರಹ್ಮಶಬ್ದಕ್ಕೂ ಕೂಡ ಇದೇ ಅರ್ಥ. ಆದ್ದರಿಂದ ಬ್ರಹ್ಮನೇ ನಾರಾಯಣನಾಗಿದ್ದಾನೆ. ಶುದ್ಧಬ್ರಹ್ಮ ಬೇರೆ ವಿಶಿಷ್ಟಬ್ರಹ್ಮನೆನಿಸಿದ ನಾರಾಯಣನೇ ಬೇರೆ ಎಂಬ ಅದ್ವೈತಿಮತವು ಅಯುಕ್ತ ಎಂದು ಇದರಿಂದಲೇ ತಿಳಿಸಿದಂತಾಯಿತು. 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣಕ್ಕೆ ಮತ್ತೊಂದು ಪ್ರಯೋಜನ ಹೀಗಿದೆ – ಜಗತ್ತಿನಲ್ಲಿ ಮಿತವಾದ ಗುಣವಿದ್ದರೆ ದೋಷವಿದ್ದೇ ಇರುತ್ತದೆ. ನಾರಾಯಣನಲ್ಲಿ ಮಿತವಾದ ಗುಣಗಳಿದ್ದರೆ ದೋಷಿಯಾಗಬೇಕಲ್ಲವೇ? ಎಂದು ಆಕ್ಷೇಪ ಮಾಡಿದರೆ ಅಗಣಿತವಾದ ಗುಣಗಳುಳ್ಳವನಾದ್ದರಿಂದ ದೋಷಗಳಿಗೆ ಅವಕಾಶವಿಲ್ಲ.

ಅಥವಾ ದೇಹವು ಜ್ಞಾನಾನಂದಾತ್ಮಕವಾದರೆ ಈ ಗುಣಗಳು ಅನಿತ್ಯವಾದ್ದರಿಂದ ದೇಹವೂ ಕೂಡ ಅನಿತ್ಯವಾಗಲಿ? ಎಂಬ ಪ್ರಶ್ನೆ ಬಂದರೆ ಪರಮಾತ್ಮನಲ್ಲಿರುವ ಗುಣಗಳು ನಿತ್ಯವಾಗಿವೆ ಎಂಬುದಾಗಿ ನಿತ್ಯತ್ವವಿಶೇಷಣದಿಂದ ತಿಳಿಸಿದ್ದಾರೆ.

ಅನುವ್ಯಾಖ್ಯಾನಶ್ಲೋಕದಲ್ಲಿ 'ಸದಾ' ಎಂಬ ಪದಕ್ಕೆ ನಿಖಿಲಪೂರ್ಣಗುಣೈಕದೇಹಂ ಎಂಬುದಕ್ಕೂ ಅನ್ವಯ ತಿಳಿಯಬೇಕೆಂಬುದನ್ನು 'ನಿತ್ಯ' ಎಂಬ ವಿಶೇಷಣದಿಂದ ತಿಳಿಸಿದ್ದಾರೆ. 'ನಿರ್ದೋಷಂ' ಎಂಬಲ್ಲಿರುವ ದೋಷಪದವು ಸಕಲದೋಷಗಳಿಗೂ ವಾಚಕವಾಗಿದೆ ಎಂಬುದನ್ನು 'ಸಕಲಾವದ್ಯ' ಎಂಬುದರಿಂದ ತಿಳಿಸಿದ್ದಾರೆ.

'ಅಸ್ಯೋದ್ಭವಾದಿದಂ' ಎಂಬುದಾಗಿ ಮೂಲಶ್ಲೋಕದಲ್ಲಿ ಸಮಸ್ತಜಗತ್ತಿನ ಉತ್ಪತ್ತ್ಯಾದಿಗಳಿಗೆ ನಾರಾಯಣನು ಮುಖ್ಯಕಾರಣನಾಗಿದ್ದಾನೆಂದು ಹೇಳಲಾಗಿದೆ. ಸಮಸ್ತಜಗತ್ತಿನಲ್ಲಿ ನಾರಾಯಣನೂ ಕೂಡ ಸೇರಿರುವುದರಿಂದ ಇವನಿಗೂ ಕೂಡ ಉತ್ಪತ್ತ್ಯಾದಿಗಳಿವೆ ಎಂಬ ಅಪಾರ್ಥಗಳಾಗುವ ಸಂಭವವಿದೆ. ಆದಕ್ಕಾಗಿ 'ಜಗಜ್ಜನ್ಮ' ಇತ್ಯಾದಿಯಾದ ವಿಶೇಷಣದಿಂದ ನಾರಾಯಣನನ್ನು ಬಿಟ್ಟು ಉಳಿದ ಜಗತ್ತನ್ನು ವಿವಕ್ಷಿಸಬೇಕೆಂದು ನ್ಯಾಯಸುಧೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಮತ್ತು 'ಉದ್ಭವಾದಿದಂ' ಎಂಬಲ್ಲಿ ಸೃಷ್ಟ್ಯಾದ್ಯಷ್ಟಕಗಳನ್ನು ವಿವಕ್ಷಿಸಬೇಕಾಗಿಲ್ಲ. ಉತ್ಪತ್ತಿಸ್ಥಿತಿಸಂಹಾರಗಳನ್ನು ವಿವಕ್ಷಿಸಿದರೆ ಸಾಕು. ಏಕೆಂದರೆ, ಚೇತನಾಚೇತನಸಾಧಾರಣವಾದ ಧರ್ಮಗಳು ಈ ಮೂರು ಮಾತ್ರ, ಜ್ಞಾನಾಜ್ಞಾನಬಂಧಮೋಕ್ಷಗಳು ಜಡಪದಾರ್ಥದಲ್ಲಿ ಹೇಳಲಾಗದು. ನಿಯತಿ ಎಂಬುದನ್ನು ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು.

'ಶೀಲ' ಎಂಬ ವಿಶೇಷಣದಿಂದ ಸೃಷ್ಟ್ಯಾದಿವ್ಯಾಪಾರಗಳಲ್ಲಿ ತೊಡಗುವಿಕೆಯು ನಾರಾಯಣನ ಸ್ವಭಾವವಾಗಿದೆ. ಆದ್ದರಿಂದ ಪ್ರಯೋಜನದ ಅವಶ್ಯಕತೆ ಇರುವುದಿಲ್ಲ ಎಂದು ವ್ಯಾಖ್ಯಾನ




ಮಾಡಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿರುವ 'ದೇಹಂ' ಎಂಬ ಪದವನ್ನು 'ವಪುಷೇ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಜ್ಞಾನಾದಿಗುಣಗಳು ಇರುವುದಿಲ್ಲ ಎಂಬ ಪಕ್ಷಕ್ಕೆ 'ದೇಹಂ' ಎಂಬ ಪದವು ಉತ್ತರಿಸುತ್ತಿದೆ. ಮತ್ತು ದೇಹವೇ ಇಲ್ಲದ ಬ್ರಹ್ಮನು ಹೇಗೆ ಸೃಷ್ಟ್ಯಾದಿಗಳನ್ನು ಮಾಡು-ತ್ತಾನೆ? ಎಂಬ ಆಕ್ಷೇಪವನ್ನೂ ಕೂಡ ಈ 'ದೇಹಂ' ಎಂಬ ಪದವು ಉತ್ತರಿಸುತ್ತಿದೆ. ಈ ವಿಶೇಷವಿಷಯವನ್ನು ತಿಳಿಸಲು ನ್ಯಾಯಸುಧೆಯಲ್ಲಿ 'ವಪುಷೇ' ಎಂದಿದ್ದಾರೆ.

ನ್ಯಾಯಸುಧೆಯಲ್ಲಿ 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬ ವಿಶೇಷಣದಿಂದ 'ಸುವಾಕ್ಯೈಃ' ಎಂಬ ಪದವನ್ನು ವ್ಯಾಖ್ಯಾನ ಮಾಡಿದ್ದಾರೆ. ವೇದ ಹಾಗೂ ವೇದಾನುಸಾರಿಯಾದ ಸಕಲಪೌರುಷೇಯಗ್ರಂಥಗಳಿಂದ ನಾರಾಯಣನು ಪ್ರತಿಪಾದ್ಯನಾಗಿದ್ದಾನೆಂಬುದು ಇದರ ಅಭಿಪ್ರಾಯ. ವೇದಗಳನ್ನು ನೋಡಿದಾಗ ಆಪಾತತಃ ಗುಣಪರಿಪೂರ್ಣತ್ವವು ತಿಳಿಯುವುದೇ ಇಲ್ಲವಲ್ಲ ಎಂಬುದನ್ನು ತಿಳಿಸಲು 'ಹೃದಯ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ವೇದಗಳ ಮುಖ್ಯತಾತ್ಪರ್ಯಕ್ಕೆ ಇವನೇ ವಿಷಯ ಹೊರತು ಬೇರೆ ಪದಾರ್ಥವಲ್ಲ.

'ತಮೇವ ಶಾಸ್ತ್ರಪ್ರಭವಂ' ಎಂಬ ಶ್ಲೋಕದಲ್ಲಿ ನಾರಾಯಣನೇ ವೇದವ್ಯಾಸದೇವರೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದರೆ ಬ್ರಹ್ಮಸೂತ್ರಭಾಷ್ಯದಲ್ಲಿ 'ಪ್ರಾದುರ್ಭೂತೋ ಹರಿಃ ವ್ಯಾಸಃ' ಎಂಬುದಾಗಿ ಹರಿಯೇ ವೇದವ್ಯಾಸದೇವರಾಗಿ ಅವತರಿಸಿದನೆಂದು ಹೇಳಿದ್ದಾರೆ. ಹಾಗಾದರೆ ವೇದವ್ಯಾಸದೇವರು ನಾರಾಯಣನೋ ಅಥವಾ ಶ್ರೀಹರಿಯೋ? ಎಂಬ ಗೊಂದಲವುಂಟಾದರೆ ನ್ಯಾಯಸುಧಾಕಾರರು 'ಹರಯೇ' ಎಂಬ ಪದಪ್ರಯೋಗ ಮಾಡುವ ಮೂಲಕ ಉತ್ತರಿಸಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿ ನಾರಾಯಣನಿಗೆ ಯಾವ ವಿಶೇಷಣ-ಗಳನ್ನು ಹೇಳಿದ್ದಾರೋ ಅವೇ ವಿಶೇಷಣಗಳು ಶ್ರೀಹರಿಗೂ ಅನ್ವಯವಾಗುವುದರಿಂದ ನಾರಾಯಣನೇ ಶ್ರೀಹರಿಯಾಗಿದ್ದಾನೆ ಎಂದು ವ್ಯಾಖ್ಯಾನ ಮಾಡುವ ಮೂಲಕ ವೇದವ್ಯಾಸ-ದೇವರು ನಾರಾಯಣನ ಸ್ವರೂಪ ಎಂದು ಹೇಳಿದರೆ ಶ್ರೀಹರಿಯ ಸ್ವರೂಪರು ಕೂಡ ಆಗಿದ್ದಾರೆಂದು ಸ್ಪಷ್ಟವಾಗುತ್ತದೆ.

ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂದು ಹೇಳಿದ ಮೇಲೆ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬುದರಿಂದ ಸಮಸ್ತವೇದ-ಪ್ರತಿಪಾದ್ಯನೆಂದು ತಿಳಿಸಿದ್ದಾರೆ. ಅದಕ್ಕೆ ವ್ಯಾಖ್ಯಾನರೂಪದಲ್ಲಿರುವ ನ್ಯಾಯಸುಧೆಯ ಮಂಗಳ-ಶ್ಲೋಕದಲ್ಲಿ ಕೂಡ ಹಾಗೆಯೇ ಹೇಳಬೇಕಿತ್ತು. ಆದರೆ ಮಧ್ಯದಲ್ಲಿ 'ಜಗಜ್ಜನ್ಮಸ್ಥೇಮಪ್ರಲಯ-ರಚನಾಶೀಲವಪುಷೇ' ಎಂದು ಹೇಳಿದ್ದಾರೆ. ಇದು ಏಕೆ? ಎಂಬ ಪ್ರಶ್ನೆಯು ಬಂದರೆ ಅನು-

ಮೂಲದಲ್ಲಿ ಹೇಳಲ್ಪಟ್ಟ ಸಕಲಗುಣಪರಿಪೂರ್ಣತ್ವ ಸಕಲದೋಷವಿದೂರತ್ವವು ನಾರಾಯಣಶಬ್ದದ ಅರ್ಥವಾಗಿದೆ. ಬ್ರಹ್ಮಶಬ್ದಕ್ಕೂ ಕೂಡ ಇದೇ ಅರ್ಥ. ಆದ್ದರಿಂದ ಬ್ರಹ್ಮನೇ ನಾರಾಯಣನಾಗಿದ್ದಾನೆ. ಶುದ್ಧಬ್ರಹ್ಮ ಬೇರೆ ವಿಶಿಷ್ಟಬ್ರಹ್ಮನೆನಿಸಿದ ನಾರಾಯಣನೇ ಬೇರೆ ಎಂಬ ಅದ್ವೈತಿಮತವು ಅಯುಕ್ತ ಎಂದು ಇದರಿಂದಲೇ ತಿಳಿಸಿದಂತಾಯಿತು. 'ನಿತ್ಯಾಗಣಿತಗುಣಮಾಣಿಕ್ಯವಿಶದಪ್ರಭಾಜಾಲೋಲ್ಲಾಸೋಪಹತಸಕಲಾವದ್ಯತಮಸೇ' ಎಂಬ ವಿಶೇಷಣಕ್ಕೆ ಮತ್ತೊಂದು ಪ್ರಯೋಜನ ಹೀಗಿದೆ – ಜಗತ್ತಿನಲ್ಲಿ ಮಿತವಾದ ಗುಣವಿದ್ದರೆ ದೋಷವಿದ್ದೇ ಇರುತ್ತದೆ. ನಾರಾಯಣನಲ್ಲಿ ಮಿತವಾದ ಗುಣಗಳಿದ್ದರೆ ದೋಷಿಯಾಗಬೇಕಲ್ಲವೇ? ಎಂದು ಆಕ್ಷೇಪ ಮಾಡಿದರೆ ಅಗಣಿತವಾದ ಗುಣಗಳುಳ್ಳವನಾದ್ದರಿಂದ ದೋಷಗಳಿಗೆ ಅವಕಾಶವಿಲ್ಲ.

ಅಥವಾ ದೇಹವು ಜ್ಞಾನಾನಂದಾತ್ಮಕವಾದರೆ ಈ ಗುಣಗಳು ಅನಿತ್ಯವಾದ್ದರಿಂದ ದೇಹವೂ ಕೂಡ ಅನಿತ್ಯವಾಗಲಿ? ಎಂಬ ಪ್ರಶ್ನೆ ಬಂದರೆ ಪರಮಾತ್ಮನಲ್ಲಿರುವ ಗುಣಗಳು ನಿತ್ಯವಾಗಿವೆ ಎಂಬುದಾಗಿ ನಿತ್ಯತ್ವವಿಶೇಷಣದಿಂದ ತಿಳಿಸಿದ್ದಾರೆ.

ಅನುವ್ಯಾಖ್ಯಾನಶ್ಲೋಕದಲ್ಲಿ 'ಸದಾ' ಎಂಬ ಪದಕ್ಕೆ ನಿಖಿಲಪೂರ್ಣಗುಣೈಕದೇಹಂ ಎಂಬುದಕ್ಕೂ ಅನ್ವಯ ತಿಳಿಯಬೇಕೆಂಬುದನ್ನು 'ನಿತ್ಯ' ಎಂಬ ವಿಶೇಷಣದಿಂದ ತಿಳಿಸಿದ್ದಾರೆ. 'ನಿರ್ದೋಷಂ' ಎಂಬಲ್ಲಿರುವ ದೋಷಪದವು ಸಕಲದೋಷಗಳಿಗೂ ವಾಚಕವಾಗಿದೆ ಎಂಬುದನ್ನು 'ಸಕಲಾವದ್ಯ' ಎಂಬುದರಿಂದ ತಿಳಿಸಿದ್ದಾರೆ.

'ಅಸ್ಯೋದ್ಭವಾದಿದಂ' ಎಂಬುದಾಗಿ ಮೂಲಶ್ಲೋಕದಲ್ಲಿ ಸಮಸ್ತಜಗತ್ತಿನ ಉತ್ಪತ್ತ್ಯಾದಿಗಳಿಗೆ ನಾರಾಯಣನು ಮುಖ್ಯಕಾರಣನಾಗಿದ್ದಾನೆಂದು ಹೇಳಲಾಗಿದೆ. ಸಮಸ್ತಜಗತ್ತಿನಲ್ಲಿ ನಾರಾಯಣನೂ ಕೂಡ ಸೇರಿರುವುದರಿಂದ ಇವನಿಗೂ ಕೂಡ ಉತ್ಪತ್ತ್ಯಾದಿಗಳಿವೆ ಎಂಬ ಅಪಾರ್ಥಗಳಾಗುವ ಸಂಭವವಿದೆ. ಅದಕ್ಕಾಗಿ 'ಜಗಜ್ಜನ್ಮ' ಇತ್ಯಾದಿಯಾದ ವಿಶೇಷಣದಿಂದ ನಾರಾಯಣನನ್ನು ಬಿಟ್ಟು ಉಳಿದ ಜಗತ್ತನ್ನು ವಿವಕ್ಷಿಸಬೇಕೆಂದು ನ್ಯಾಯಸುಧೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಮತ್ತು 'ಉದ್ಭವಾದಿದಂ' ಎಂಬಲ್ಲಿ ಸೃಷ್ಟ್ಯಾದ್ಯಷ್ಟಕಗಳನ್ನು ವಿವಕ್ಷಿಸಬೇಕಾಗಿಲ್ಲ. ಉತ್ಪತ್ತಿಸ್ಥಿತಿಸಂಹಾರಗಳನ್ನು ವಿವಕ್ಷಿಸಿದರೆ ಸಾಕು. ಏಕೆಂದರೆ, ಚೇತನಾಚೇತನಸಾಧಾರಣವಾದ ಧರ್ಮಗಳು ಈ ಮೂರು ಮಾತ್ರ, ಜ್ಞಾನಾಜ್ಞಾನಬಂಧಮೋಕ್ಷಗಳು ಜಡಪದಾರ್ಥದಲ್ಲಿ ಹೇಳಲಾಗದು. ನಿಯತಿ ಎಂಬುದನ್ನು ಕೂಡ ಉಪಲಕ್ಷಣಯಾ ವಿವಕ್ಷಿಸಬೇಕು.

'ಶೀಲ' ಎಂಬ ವಿಶೇಷಣದಿಂದ ಸೃಷ್ಟ್ಯಾದಿವ್ಯಾಪಾರಗಳಲ್ಲಿ ತೊಡಗುವಿಕೆಯು ನಾರಾಯಣನ ಸ್ವಭಾವವಾಗಿದೆ. ಆದ್ದರಿಂದ ಪ್ರಯೋಜನದ ಅವಶ್ಯಕತೆ ಇರುವುದಿಲ್ಲ ಎಂದು ವ್ಯಾಖ್ಯಾನ





ಮಾಡಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿರುವ 'ದೇಹಂ' ಎಂಬ ಪದವನ್ನು 'ವಪುಷೇ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಜ್ಞಾನಾದಿಗುಣಗಳು ಇರುವುದಿಲ್ಲ ಎಂಬ ಪಕ್ಷಕ್ಕೆ 'ದೇಹಂ' ಎಂಬ ಪದವು ಉತ್ತರಿಸುತ್ತಿದೆ. ಮತ್ತು ದೇಹವೇ ಇಲ್ಲದ ಬ್ರಹ್ಮನು ಹೇಗೆ ಸೃಷ್ಟ್ಯಾದಿಗಳನ್ನು ಮಾಡು-ತ್ತಾನೆ? ಎಂಬ ಆಕ್ಷೇಪವನ್ನೂ ಕೂಡ ಈ 'ದೇಹಂ' ಎಂಬ ಪದವು ಉತ್ತರಿಸುತ್ತಿದೆ. ಈ ವಿಶೇಷವಿಷಯವನ್ನು ತಿಳಿಸಲು ನ್ಯಾಯಸುಧೆಯಲ್ಲಿ 'ವಪುಷೇ' ಎಂದಿದ್ದಾರೆ.

ನ್ಯಾಯಸುಧೆಯಲ್ಲಿ 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬ ವಿಶೇಷಣದಿಂದ 'ಸುವಾಕ್ಯೈಃ' ಎಂಬ ಪದವನ್ನು ವ್ಯಾಖ್ಯಾನ ಮಾಡಿದ್ದಾರೆ. ವೇದ ಹಾಗೂ ವೇದಾನುಸಾರಿಯಾದ ಸಕಲಪೌರುಷೇಯಗ್ರಂಥಗಳಿಂದ ನಾರಾಯಣನು ಪ್ರತಿಪಾದ್ಯನಾಗಿದ್ದಾನೆಂಬುದು ಇದರ ಅಭಿಪ್ರಾಯ. ವೇದಗಳನ್ನು ನೋಡಿದಾಗ ಆಪಾತತಃ ಗುಣಪರಿಪೂರ್ಣತ್ವವು ತಿಳಿಯುವುದೇ ಇಲ್ಲವಲ್ಲ ಎಂಬುದನ್ನು ತಿಳಿಸಲು 'ಹೃದಯ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ವೇದಗಳ ಮುಖ್ಯತಾತ್ಪರ್ಯಕ್ಕೆ ಇವನೇ ವಿಷಯ ಹೊರತು ಬೇರೆ ಪದಾರ್ಥವಲ್ಲ.

'ತಮೇವ ಶಾಸ್ತ್ರಪ್ರಭವಂ' ಎಂಬ ಶ್ಲೋಕದಲ್ಲಿ ನಾರಾಯಣನೇ ವೇದವ್ಯಾಸದೇವರೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಆದರೆ ಬ್ರಹ್ಮಸೂತ್ರಭಾಷ್ಯದಲ್ಲಿ 'ಪ್ರಾದುರ್ಭೂತೋ ಹರಿಃ ವ್ಯಾಸಃ' ಎಂಬುದಾಗಿ ಹರಿಯೇ ವೇದವ್ಯಾಸದೇವರಾಗಿ ಅವತರಿಸಿದನೆಂದು ಹೇಳಿದ್ದಾರೆ. ಹಾಗಾದರೆ ವೇದವ್ಯಾಸದೇವರು ನಾರಾಯಣನೋ ಅಥವಾ ಶ್ರೀಹರಿಯೋ? ಎಂಬ ಗೊಂದಲವುಂಟಾದರೆ ನ್ಯಾಯಸುಧಾಕಾರರು 'ಹರಯೇ' ಎಂಬ ಪದಪ್ರಯೋಗ ಮಾಡುವ ಮೂಲಕ ಉತ್ತರಿಸಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿ ನಾರಾಯಣನಿಗೆ ಯಾವ ವಿಶೇಷಣ-ಗಳನ್ನು ಹೇಳಿದ್ದಾರೋ ಅವೇ ವಿಶೇಷಣಗಳು ಶ್ರೀಹರಿಗೂ ಅನ್ವಯವಾಗುವುದರಿಂದ ನಾರಾಯಣನೇ ಶ್ರೀಹರಿಯಾಗಿದ್ದಾನೆ ಎಂದು ವ್ಯಾಖ್ಯಾನ ಮಾಡುವ ಮೂಲಕ ವೇದವ್ಯಾಸ-ದೇವರು ನಾರಾಯಣನ ಸ್ವರೂಪ ಎಂದು ಹೇಳಿದರೆ ಶ್ರೀಹರಿಯ ಸ್ವರೂಪರು ಕೂಡ ಆಗಿದ್ದಾರೆಂದು ಸ್ಪಷ್ಟವಾಗುತ್ತದೆ.

ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂದು ಹೇಳಿದ ಮೇಲೆ 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬುದರಿಂದ ಸಮಸ್ತವೇದ-ಪ್ರತಿಪಾದ್ಯನೆಂದು ತಿಳಿಸಿದ್ದಾರೆ. ಅದಕ್ಕೆ ವ್ಯಾಖ್ಯಾನರೂಪದಲ್ಲಿರುವ ನ್ಯಾಯಸುಧೆಯ ಮಂಗಳ-ಶ್ಲೋಕದಲ್ಲಿ ಕೂಡ ಹಾಗೆಯೇ ಹೇಳಬೇಕಿತ್ತು. ಆದರೆ ಮಧ್ಯದಲ್ಲಿ 'ಜಗಜ್ಜನ್ಮಸ್ಥೇಮಪ್ರಲಯ-ರಚನಾಶೀಲವಪುಷೇ' ಎಂದು ಹೇಳಿದ್ದಾರೆ. ಇದು ಏಕೆ? ಎಂಬ ಪ್ರಶ್ನೆಯು ಬಂದರೆ ಅನು-

ವ್ಯಾಖ್ಯಾನಶ್ಲೋಕದಲ್ಲಿ ಹೇಳಲ್ಪಟ್ಟ ಮೂರು ವಿಶೇಷಣಗಳಿಗೆ ವೇದವೇ ಪ್ರಮಾಣವಾಗಿದೆ. ಆದ್ದರಿಂದ ನಿರಾಧಾರವಲ್ಲ ಎಂಬ ಪ್ರಮೇಯವನ್ನು ತಿಳಿಸುವುದು ಇದರ ಮುಖ್ಯಉದ್ದೇಶ-ವಾಗಿದೆ.

## ಪರಿಮಳಗ್ರಂಥದ ವೈಶಿಷ್ಟ್ಯ

* ನ್ಯಾಯಸುಧೆಯ ಮಂಗಳಶ್ಲೋಕವು ಕೇವಲಮಂಗಳಾಚರಣೆಯಾಗದೇ ಅನುವ್ಯಾ-ಖ್ಯಾನ ಮಂಗಳಶ್ಲೋಕಕ್ಕೆ ವ್ಯಾಖ್ಯಾನರೂಪವಾಗಿದೆ ಎಂಬುದನ್ನು ಪದಶಃ ಪರಿಮಳಗ್ರಂಥದಲ್ಲಿ ತೋರಿಸಲಾಗಿದೆ.

* ಶ್ರೀಪತಯೇ ಎಂದು ಹೇಳದೇ ಶ್ರಿಯಃ ಪತ್ಯೇ ಎಂದು ಬಿಡಿಸಿ ಹೇಳಿದ್ದರಿಂದ ಮಹಾ-ಲಕ್ಷ್ಮಿಯನ್ನು ಈಶ್ವರೋಪಸರ್ಜನತಯಾ ನಮಿಸಬೇಕು ಮುಖ್ಯವಾಗಿ ನಮಿಸಬೇಕಿಲ್ಲ ಎಂಬ ಅಪೂರ್ವ-ಪ್ರಮೇಯವನ್ನು ಎತ್ತಿ ತೋರಿಸಿದ್ದಾರೆ.

* ನಿತ್ಯಾಗಣಿತಗುಣಮಾಣಿಕ್ಯ ಇತ್ಯಾದಿ ವಿಶೇಷಣಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭ-ದಲ್ಲಿ 'ಪ್ರಚ್ಯುತೋಶೇಷದೋಷೈಃ ಸದಾ ಪೂರ್ತಿತಃ' ಎಂಬ ದ್ವಾದಶಸ್ತೋತ್ರದ ಮಾತನ್ನು ವ್ಯಾಖ್ಯಾನ ಮಾಡಿದ್ದಾರೆ.

* ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿರ್ದೋಷಂ' ಎಂಬುದು ಸಾಧ್ಯ. ನಿಖಿಲಪೂರ್ಣಗುಣೈಕದೇಹತ್ವವು ಹೇತು ಎಂಬುದನ್ನು 'ನಿತ್ಯಾಗಣಿತಗುಣಮಾಣಿಕ್ಯವಿಶದ' ಇತ್ಯಾದಿ ವಿಶೇಷಣಕ್ಕೆ ವ್ಯಾಖ್ಯಾನ ಮಾಡುವ ಮೂಲಕ ಸಮರ್ಥಿಸಿದ್ದಾರೆ.

* 'ನಿತ್ಯಾಗಣಿತಗುಣಮಾಣಿಕ್ಯ' ಇತ್ಯಾದಿ ವಿಶೇಷಣಕ್ಕೆ ಎರಡು ವ್ಯಾಖ್ಯಾನಗಳು ಕೂಡ ಅಪೂರ್ವವಾಗಿವೆ.

* ಗುಣದಲ್ಲಿ 'ನಿತ್ಯ' ಎಂಬ ವಿಶೇಷಣದಿಂದ ಅನುವ್ಯಾಖ್ಯಾನಶ್ಲೋಕದಲ್ಲಿ 'ಸದಾ' ಎಂಬ ಪದಕ್ಕೆ ನಿಖಿಲಪೂರ್ಣಗುಣೈಕದೇಹಂ ಎಂಬಲ್ಲಿ ಅನ್ವಯವನ್ನು ತಿಳಿಯಬೇಕೆಂದು ವ್ಯಾಖ್ಯಾನ ಮಾಡಿದ್ದಾರೆ.

* 'ಅಸ್ಯೋದ್ಭವಾದಿದಂ' ಎಂಬುದಕ್ಕೆ ಜಗಜ್ಜನ್ಮಸ್ಥೇಮ ಇತ್ಯಾದಿ ವಿಶೇಷಣವು

ವ್ಯಾಖ್ಯಾನರೂಪವಾಗಿದೆ. ಪರಮಾತ್ಮನನ್ನು ಬಿಟ್ಟು ಉಳಿದ ಜಗತ್ತನ್ನೇಕೆ ಸ್ವೀಕರಿಸಬೇಕೆಂದು ಕಾರಣವನ್ನು ನೀಡಿದ್ದಾರೆ.

* ಸ್ಥೇಮ ಎಂಬ ಶಬ್ದಕ್ಕೆ ಸ್ಥಿತಿ ಎಂಬರ್ಥವನ್ನು ಸಮರ್ಥಿಸಲು ರಾಮಾನುಜಭಾಷ್ಯದ ವ್ಯಾಖ್ಯಾನವಾದ ಶ್ರುತಪ್ರಕಾಶದ ಉದಾಹರಣೆ ನೀಡಿದ್ದಾರೆ.

* ಸ್ಥೇಮ ಎಂಬ ಶಬ್ದದ ನಿಷ್ಪತ್ತಿಯು ವ್ಯಾಕರಣಸಮ್ಮತವಾಗಿದೆ ಎಂಬುದನ್ನು ಉಪಪಾದನೆ ಮಾಡಿದ್ದಾರೆ. ವೃತ್ತಿಕಾರನಾದ ವಾಮನನ ಪ್ರಕಾರ ಸ್ಥೇಮ ಎಂಬ ಶಬ್ದವು ಅಭಿಯುಕ್ತ-ಪ್ರಯೋಗದಿಂದ ಸಾಧುತ್ವವನ್ನು ಸಮರ್ಥಿಸಲಾಗಿದೆ. ಅಥವಾ ಉಣಾದಿಸೂತ್ರದ ಪ್ರಕಾರ ಸ್ಥೇಮ ಎಂಬ ಶಬ್ದವು ಸಾಧುವಾಗುತ್ತದೆ ಇತ್ಯಾದಿ ವಿಚಾರವು ಅತ್ಯಪೂರ್ವವಾಗಿದೆ.

* 'ಉದ್ಭವಾದಿದಮ್' ಎಂಬಲ್ಲಿ ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನಗಳನ್ನು ಮಾತ್ರ ವಿವಕ್ಷಿಸಬೇಕು. ಜ್ಞಾನಾಜ್ಞಾನಬಂಧಮೋಕ್ಷಗಳನ್ನು ವಿವಕ್ಷಿಸುವ ಅವಶ್ಯಕತೆ ಇಲ್ಲ ಎಂಬುದನ್ನು ಸಮರ್ಥಿ-ಸಲಾಗಿದೆ.

* 'ಶೀಲ' ಎಂಬ ಪದಕ್ಕೆ ವ್ಯಾಖ್ಯಾನ ಮಾಡುವಾಗ ಪರಮಾತ್ಮನ ಸೃಷ್ಟ್ಯಾದಿ-ವ್ಯಾಪಾರಗಳು ಅವನ ಸ್ವಭಾವವಾಗಿರುವಾಗ ನಿಷ್ಫಲಪ್ರವೃತ್ತಿಯು ಹೇಗೆ ಉಂಟಾಗುತ್ತದೆ ಇತ್ಯಾದಿ ಶಂಕೆಗಳನ್ನು ಪರಿಹರಿಸಲಾಗಿದೆ.

* ದೇಹವೇ ಇಲ್ಲದ ಬ್ರಹ್ಮನು ಹೇಗೆ ಸೃಷ್ಟ್ಯಾದಿಕಾರಣನಾಗುತ್ತಾನೆ. ಅಥವಾ ದೇಹವೇ ಇಲ್ಲದ ಬ್ರಹ್ಮನಲ್ಲಿ ಅನಂತ ಗುಣಗಳು ಹೇಗೆ ತಾನೇ ಬರುತ್ತವೆ? ಈ ಎಲ್ಲ ದೋಷಗಳನ್ನು ಪರಿಹರಿಸಲು ವಪುಷೇ ಎಂಬ ಪ್ರಯೋಗವು ಸಾರ್ಥಕವಾಗಿದೆ ಎಂದಿದ್ದಾರೆ.

* 'ಸುವಾಕ್ಯೈಃ' ಎಂಬುದರ ವ್ಯಾಖ್ಯಾನವೇ 'ಅಶೇಷಾಮ್ನಾಯಸ್ಮೃತಿಹೃದಯ-ದೀಪ್ತಾಯ' ಎಂಬುದಾಗಿದೆ. ಪರಮಾತ್ಮನು ಕೇವಲ ವೇದಗಳಿಂದಷ್ಟೇ ಪ್ರತಿಪಾದ್ಯನಲ್ಲ; ವೇದಾನುಸಾರಿ-ಯಾದ ಪೌರುಷೇಯಗ್ರಂಥಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ.

* 'ಹರಯೇ' ಎಂಬ ಪದಪ್ರಯೋಗಕ್ಕೆ ಅನೇಕಬಗೆಯಲ್ಲಿ ವ್ಯಾಖ್ಯಾನ ಮಾಡಿದ್ದು ಅತ್ಯಂತ ರಮಣೀಯವಾಗಿದೆ. ಈ ಪದಪ್ರಯೋಗದಿಂದ ಪರಿಹಾರವಾಗುವ ಆಕ್ಷೇಪಗಳನ್ನು ಕೂಡ ಉಲ್ಲೇಖ ಮಾಡಿದ್ದಾರೆ.





* 'ಅಶೇಷಾಮ್ನಾಯಸ್ಮೃತಿಹೃದಯದೀಪ್ತಾಯ' ಎಂಬ ವಿಶೇಷಣವನ್ನು ಕೊನೆ- ಯಲ್ಲೇ ಏಕೆ ಹೇಳಿದ್ದಾರೆ? ಎಂಬುದಕ್ಕೆ ಸ್ವರಸವಾದ ಕಾರಣವಿದೆ.

* 'ಆಮ್ನಾಯ, ಸ್ಮೃತಿ' ಈ ಎರಡು ಪದಗಳ ನಡುವೆ ಆಮ್ನಾಯಪದವನ್ನು ಅನಂತರ ಹೇಳಬೇಕಾಗಿದ್ದರೂ ಮೊದಲೇ ಹೇಳಬೇಕಾಗಿತ್ತು ಎಂಬುದರ ಬಗ್ಗೆ ಎರಡುಬಗೆಯ ಕಾರಣಗಳು ಅಪೂರ್ವವಾಗಿವೆ.

## ವ್ಯಾಸಸೂರ್ಯರೇ ಎಂದೂ ಎನ್ನ ಬಿಡದಿರಿ

**ಶ್ರೀಮನ್ನ್ಯಾಯಸುಧಾ –**

**ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ**
**ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ವಂ ಪರಮ್ ।**
**ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಚಾಕಾರಿ ಸನ್ಮಾರ್ಗತಃ**
**ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್ ॥೨॥**

ಸೂರ್ಯರಂತೆ ಕಂಗೊಳಿಸುತ್ತಿರುವ ವೇದವ್ಯಾಸದೇವರೇ! ತಾವು ಭೂಮಂಡಲ- ದಲ್ಲಿ ಅವತರಿಸಿ ಮಹಾಭಾರತ, ಭಾಗವತ ಮೊದಲಾದ ಗ್ರಂಥಗಳೆಂಬ ಉಜ್ಜ್ವಲಕಿರಣ- ಗಳ ಜಾಲವನ್ನು ಹಬ್ಬಿಸಿರುವಿರಿ. ಶ್ರುತಿ ಎಂಬ ಕಮಲವನ್ನು ಅರಳಿಸಿದಿರಿ. ಪರತತ್ವವನ್ನು ಬೆಳಕಿಗೆ ತಂದಿರಿ. ಅಜ್ಞಾನವಿಪರೀತಜ್ಞಾನಗಳೆಂಬ ಘನೀಭೂತವಾದ ಕತ್ತಲೆಯ ಸಮೂಹ- ವನ್ನೇ ಕತ್ತರಿಸಿದಿರಿ. ಸಜ್ಜನರು ಸನ್ಮಾರ್ಗದಲ್ಲಿ ಮುನ್ನಡೆಯುವಂತೆ ದಾರಿ ತೋರಿದಿರಿ. ಹೀಗೆ ಸೂರ್ಯನನ್ನು ಮೀರಿದ ಕಾಂತಿ ತಮ್ಮದು. ಎಂದೆಂದೂ ಎನ್ನ ಮನದಿಂದ ದೂರ ಸರಿಯದಿರಿ.

ಅನ್ವಯಾರ್ಥ – ಯೇನ = ಯಾವ ಸೂರ್ಯನಿಂದ, ವೇದವ್ಯಾಸದೇವರಿಂದ, ಪ್ರಾದುರಭಾವಿ = ಪ್ರಾದುರ್ಭವಿಸಲ್ಪಟ್ಟಿತು, ಗೋಸಂತತಿಃ = ಕಿರಣಗಳ ಸಮೂಹವು, ಗ್ರಂಥಗಳ ಸಮೂಹವು, ಭೂಮಿವಲಯೇ = ಭೂಮಂಡಲದಲ್ಲಿ, ವ್ಯಸ್ತಾರಿ = ವಿಸ್ತರಿಸಲ್ಪಟ್ಟಿತು, ಶ್ರುತಿಪಂಕಜಂ = ಶ್ರುತಿ ಎಂಬ





ಕಮಲವು, ಪ್ರಾಬೋಧಿ = ಅರಳಿಸಲ್ಪಟ್ಟಿತು, ಪರಂ = ಶ್ರೇಷ್ಠವಾದ, ತತ್ವಂ = ತತ್ವವನ್ನು, ಕರುಣಯಾ = ಕಾರುಣ್ಯದಿಂದ, ಪ್ರಾಕಾಶಿ = ಪ್ರಕಾಶಿಸಲ್ಪಟಿತು. ಧ್ವಾಂತಂ = ಕತ್ತಲೆಯನ್ನು, ಧ್ವಂಸಂ = ನಾಶವುಳ್ಳದ್ದನ್ನಾಗಿ, ಅನಾಯಿ = ಮಾಡಲ್ಪಟ್ಟಿತು. ಚ = ಮತ್ತು, ಸಾಧುನಿಕರಃ = ಸಜ್ಜನರ ಸಮೂಹವು, ಸನ್ಮಾರ್ಗಗಃ = ಸನ್ಮಾರ್ಗದಲ್ಲಿ ಹೋಗುವಂತೆ, ಅಕಾರಿ = ಮಾಡಲ್ಪಟ್ಟಿತು. ತೇನ = ಈ ಕಾರಣದಿಂದ, ವ್ಯಾಸದಿವಾಕರೇಣ = ವೇದವ್ಯಾಸದೇವರೆಂಬ ಸೂರ್ಯರಿಂದ, ಮೇ = ನನ್ನ, ಮಾನಸಂ = ಮನಸ್ಸನ್ನು, ಸತತಂ = ಯಾವಾಗಲೂ, ಮಾ ತ್ಯಾಜಿ = ಬಿಡಲ್ಪಡದೇ ಇರಲಿ.

ವಿಗ್ರಹವಾಕ್ಯ – ೧. ಪ್ರಾದುರಭಾವಿ – ಪ್ರಾದುರಭಾವಿ ಪ್ರಾದುರಭಾವಿಷಾತಂ ಪ್ರಾದುರಭಾವಿಷತ; ಪ್ರಾದುರಭಾವಿಷ್ಠಾಃ ಪ್ರಾದುರಭಾವಿಷಾಥಾಂ ಪ್ರಾದುರಭಾವಿಷಧ್ವಂ ; ಪ್ರಾದುರಭಾವಿಷಿ ಪ್ರಾದುರಭಾವಿಷ್ವಹಿ ಪ್ರಾದುರಭಾವಿಷ್ಮಹಿ. ಪ್ರಾದುರ್ ಇತ್ಯುಪಪದ ಪೂರ್ವಕಾತ್ ಕರ್ಮಣಿ ಲುಙ್. (ಈ ಶ್ಲೋಕದಲ್ಲಿರುವ ಮುಂದಿನ ಲುಙ್‌ಲಕಾರದ ರೂಪಗಳನ್ನು ಇದರಂತೆ ತಿಳಿಯಬೇಕು).

೨.ಭೂಮಿವಲಯೇ ಭೂಮ್ಯಾಃ ವಲಯಾಃ ಭೂಮಿವಲಯಾಃ ತಸ್ಮಿನ್ ಭೂಮಿವಲಯೇ.

೩. ವ್ಯಸ್ತಾರಿ – ವಿ ಇತ್ಯುಪಸರ್ಗಪೂರ್ವಕಾತ್ 'ಸ್ತೃ ಆಚ್ಛಾದನೇ' ಇತಿ ಧಾತೋಃ ಕರ್ಮಣಿ ಲುಙ್.

೪. ಗೋಸಂತತಿಃ - ಗವಾಂ ಸಂತತಿಃ – ಗೋಸಂತತಿಃ

೫. ಪ್ರಾಬೋಧಿ - ಪ್ರ ಇತ್ಯುಪಸರ್ಗಪೂರ್ವಕಾತ್ 'ಬುಧ ಅವಗಮನೇ' ಇತಿ ಧಾತೋಃ ಕರ್ಮಣಿ ಲುಙ್.

೬. ಶ್ರುತಿಪಂಕಜಂ – ಶ್ರುತಿರೇವ ಪಂಕಜಂ ಶ್ರುತಿಪಂಕಜಂ

೭. ಪ್ರಾಕಾಶಿ - ಪ್ರ ಇತ್ಯುಪಸರ್ಗಪೂರ್ವಕಾತ್ 'ಕಾಶೃ ದೀಪ್ತೌ' ಇತಿ ಧಾತೋಃ ಕರ್ಮಣಿ ಲುಙ್.

೮. ಅನಾಯಿ - 'ಣೀಞ್ ಪ್ರಾಪಣೇ' ಇತಿ ಧಾತೋಃ ಕರ್ಮಣಿ ಲುಙ್.

೯. ಸಾಧುನಿಕರಃ = ಸಾಧೂನಾಂ ನಿಕರಃ ಸಾಧುನಿಕರಃ

೧೦. ಅಕಾರಿ - 'ಡುಕೃಞ್ ಕರಣೇ' ಇತಿ ಧಾತೋಃ ಕರ್ಮಣಿ ಲುಙ್





೧೧. ಸನ್ಮಾರ್ಗಗಃ - ಸಂಶ್ಚಾಸೌ ಮಾರ್ಗಶ್ಚ ಸನ್ಮಾರ್ಗಃ ಸನ್ಮಾರ್ಗೇ ಗಚ್ಛತಿ ಇತಿ ಸನ್ಮಾರ್ಗಗಃ

೧೨. ವ್ಯಾಸದಿವಾಕರೇಣ - ವ್ಯಾಸ ಏವ ದಿವಾಕರಃ ವ್ಯಾಸದಿವಾಕರಃ ತೇನ ವ್ಯಾಸದಿವಾಕರೇಣ

೧೩. ತ್ಯಾಜಿ - 'ತ್ಯಜ ಹಾನೌ' ಇತಿ ಧಾತೋಃ ಕರ್ಮಣಿ ಲುಙ್

ವಿಶೇಷವಿವರಣೆ – ಸೂತ್ರಕಾರರಾದ ವೇದವ್ಯಾಸರನ್ನು ಸೂರ್ಯನ ರೂಪಕದೊಂದಿಗೆ ವರ್ಣಿಸುತ್ತಾ ಸ್ವಾಭೀಷ್ಟವನ್ನು ಈ ಪದ್ಯದ ಮೂಲಕ ಪ್ರಾರ್ಥಿಸುತ್ತಾರೆ. ಸೂರ್ಯನು ಗೋಸಂತತಿ ಎಂದರೆ ಕಿರಣಸಮೂಹವನ್ನು ವಿಸ್ತಾರಗೊಳಿಸಿದರೆ ವೇದವ್ಯಾಸರು ಗೋಸಂತತಿ ಎಂದರೆ ವಾಕ್ಸಮೂಹವನ್ನು (ಮಹಾಭಾರತಾದಿಗ್ರಂಥಗಳನ್ನು) ನಿರ್ಮಿಸಿದರು. ಸೂರ್ಯ ಕಮಲವನ್ನು ಅರಳಿಸಿದರೆ ವೇದವ್ಯಾಸರು ವೇದವೆಂಬ ಕಮಲವನ್ನು ಅರಳಿಸಿದರು. ವೇದವಿಭಾಗ ಮಾಡುವುದರ ಮೂಲಕ, ವೇದಾರ್ಥೋಪಷ್ಟಂಭಕಗಳಾದ ಭಾರತ, ಪುರಾಣಾದಿಗಳನ್ನು ನಿರ್ಮಿಸುವುದರ ಮೂಲಕ, ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳನ್ನು ರಚಿಸುವುದರ ಮೂಲಕ ಅಜ್ಞರಿಗೂ ವೇದಾರ್ಥ ತಿಳಿಯುವಂತೆ ಮಾಡಿದರು. ಸೂರ್ಯ ತನ್ನ ಪ್ರಕಾಶದಿಂದ ಎಲ್ಲಾ ಪದಾರ್ಥಗಳೂ ಸ್ಪಷ್ಟವಾಗಿ ಕಾಣುವಂತೆ ಮಾಡಿದರೆ, ವೇದವ್ಯಾಸರು ವೇದಾರ್ಥವನ್ನು ತಿಳಿಸುವುದರ ಮೂಲಕ ಪರತತ್ವವನ್ನು ಪ್ರಕಾಶಗೊಳಿಸಿದರು. ಸೂರ್ಯ ತನ್ನ ಕಿರಣಗಳಿಂದ ಬಹು ಹಗುರವಾದ ಕತ್ತಲೆಯನ್ನು ನಾಶಪಡಿಸಿದರೆ, ವೇದವ್ಯಾಸರು ತಮ್ಮ ಗ್ರಂಥವಾಕ್ಯಗಳೆಂಬ ಪ್ರಖರಕಿರಣಗಳಿಂದ ಪಾರಮಾರ್ಥಿಕಪ್ರಕೃಷ್ಟಪ್ರಮೇಯಗಳನ್ನು ಪ್ರಕಾಶಪಡಿಸುವುದರ ಮೂಲಕ ಅಜ್ಞಾನವಿಪರೀತಜ್ಞಾನಗಳೆಂಬ ಕಲ್ಲುಬಂಡೆಗಳಂತೆ ಘನೀಭೂತವಾದ ಕತ್ತಲೆಯನ್ನು ಉದ್ಧ್ವಸ್ತಗೊಳಿಸುವರು. ಹೇಮಂತಋತುವಿನಲ್ಲಿ ಎಲ್ಲೆಡೆ ವ್ಯಾಪ್ತವಾದ ಲಘುವಾದ ಹಿಮದಂತಿರುವ ಕತ್ತಲೆಯನ್ನು ಸೂರ್ಯ ನಾಶಗೊಳಿಸಲು ಸಮರ್ಥನಾದರೂ ಹಿಮಾಲಯಗಿರಿಯಲ್ಲಿರುವ ಹಿಮದ ಬಂಡೆಗಳನ್ನು ಅಂತೆಯೇ ಕತ್ತಲೆಯ ಬಂಡೆಗಳನ್ನು ನಿಶ್ಶೇಷವಾಗಿ ಧ್ವಂಸಗೊಳಿಸಲು ಶಕ್ತನಾಗಲಾರ. ಆದರೆ ವೇದವ್ಯಾಸರೆಂಬ ಸೂರ್ಯ, ಕಲ್ಲುಬಂಡೆಗಳಂತೆ ಸುದೃಢವಾದ ಎಲ್ಲ ವಿಧದ ಕತ್ತಲೆಯನ್ನು ಸುಲಭವಾಗಿ ಪರಿಹರಿಸುವರು. ಶ್ರೀಮಜ್ಜಯತೀರ್ಥರು ಅಜ್ಞಾನವನ್ನು ಶಿಲಾತ್ಮಕವಾದ ಕತ್ತಲೆಗೆ ಸದೃಶವೆಂದು ಖಚಿತಪಡಿಸುವುದಕ್ಕಾಗಿಯೇ 'ಧ್ವಾಂತಂ' ಎಂಬ ವಿಶೇಷಪದವನ್ನು ಪ್ರಯೋಗಿಸಿದ್ದಾರೆ. 'ಅಂಧತಮಸಂ ಸಂತಮಸಂ ಧ್ವಾಂತಂ' ಎಂಬ ಹಲಾಯುಧಕೋಶದಂತೆ ಧ್ವಾಂತಶಬ್ದಕ್ಕೆ ಘನೀಭೂತಕತ್ತಲೆಯೆಂಬ ಅರ್ಥವನ್ನು ತಿಳಿಯಬೇಕು. ಇಂಥ ಕತ್ತಲೆಬಂಡೆಗಳ ಪ್ರಹಾರಗಳಿಂದ ಕಲಿ, ವಿಪ್ರಚಿತ್ತಿ ಮುಂತಾದ ದೈತ್ಯರು





ಅಂಧಂತಮಸ್ಸಿನಲ್ಲಿ ನಿರಂತರ ತತ್ತರಿಸುತ್ತಾರೆಂದು ಶ್ರೀಮದ್ವಾದಿರಾಜತೀರ್ಥರು ಭೂಗೋಳವರ್ಣನ-ಗ್ರಂಥದಲ್ಲಿ "ಶಿಲೀಭೂತತಮೋರೂಪಂ ಹಿಮಾನೀವ ಶಿಲಾತ್ಮಿಕಾ" ಮುಂತಾದ ಮಾತುಗಳಿಂದ ವಿವರಿಸಿದ್ದಾರೆ.

ಸೂರ್ಯ ಕತ್ತಲೆಯನ್ನು ದೂರ ಮಾಡಿ ಎಲ್ಲರೂ ಒಳ್ಳೆಯ ದಾರಿಯಲ್ಲಿ ಹೋಗುವಂತೆ ಮಾಡಿದರೆ ವೇದವ್ಯಾಸರು ಪರತತ್ವಪ್ರಕಾಶನದ ಮೂಲಕ ಸಜ್ಜನರು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದರು. ಇಂಥ ವೇದವ್ಯಾಸರೆಂಬ ಅದ್ವಿತೀಯಸೂರ್ಯ ತನ್ನ ಮನಸ್ಸಿನಿಂದೆಂದೂ ದೂರ ಸರಿಯದೇ ಅಲ್ಲಿ ಸ್ಥಿರವಾಗಿ ನೆಲಸಲೆಂದು ಶ್ರೀಜಯತೀರ್ಥರು ಪ್ರಾರ್ಥಿಸುತ್ತಾರೆ.

## 'ತಮೇವ ಶಾಸ್ತ್ರಪ್ರಭವಂ' ಎಂಬುದಕ್ಕೆ ಇದು ವ್ಯಾಖ್ಯಾನ.

**ಪರಿಮಳ– ಪ್ರತಿಪಾದ್ಯಂ ನತ್ವಾ ದ್ವಿತೀಯಪದ್ಯಸ್ಥಶಾಸ್ತ್ರಪ್ರಭವತ್ವಾದಿ ವಿವೃಣ್ವನ್ ಸೂತ್ರಕೃತಮ್ ಅಭೀಷ್ಟಂ ಯಾಚತೇ – ಯೇನೇತಿ ॥ 'ಗೋಸಂತತಿಃ' ಇತ್ಯನೇನ ಭಾರತ-ಪುರಾಣಬ್ರಹ್ಮಸೂತ್ರಾದಿಗ್ರಂಥಸಮೂಹಃ ಕಿರಣಸಂತತಿಶ್ಚ ಉಚ್ಯತೇ । 'ಪ್ರಾಬೋಧಿ' ಇತ್ಯನೇನ ವೇದಪ್ರಭವತ್ವಂ ವೇದವ್ಯಂಜಕತ್ವಮೇವ ಇತಿ ದರ್ಶಿತಮ್ । ಗೋಪದ-ಶ್ರುತಿಪದಯೋರುಕ್ತ್ಯಾ ಶಾಸ್ತ್ರಪದೇನ ಪೌರುಷೇಯಾಪೌರುಷೇಯಗ್ರಂಥಸಂಗ್ರಹಃ ಇತಿ ಸೂಚಿತಮ್ । ಯದ್ವಾ ಗೋಸಂತತೀಃ ಜ್ಞಾನಸಂತತೀಃ ಇತ್ಯಾದಿ ಧ್ಯೇಯಮ್ ॥**

ಮೊದಲನೆಯ ಮಂಗಳಶ್ಲೋಕದಲ್ಲಿ ಗ್ರಂಥಪ್ರತಿಪಾದ್ಯನನ್ನು ನಮಿಸಿದ್ದಾಯಿತು. ಈಗ ಎರಡನೆಯ ಶ್ಲೋಕದಲ್ಲಿ 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ' ಎಂಬ ಅನುವ್ಯಾಖ್ಯಾನದ ಎರಡನೆಯ ಶ್ಲೋಕವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಮತ್ತು ಸೂತ್ರಕಾರರ ಬಳಿ ಅಭೀಷ್ಟವನ್ನು ಪ್ರಾರ್ಥಿಸುತ್ತಿದ್ದಾರೆ 'ಯೇನ' ಇತ್ಯಾದಿಯಾಗಿ.

'ಗೋಸಂತತಿಃ' ಎಂಬುದರಿಂದ ಮಹಾಭಾರತ, ಪುರಾಣ, ಬ್ರಹ್ಮಸೂತ್ರ ಈ ಎಲ್ಲಾ ಗ್ರಂಥ-ಗಳ ಸಮೂಹವು ಮತ್ತು ಕಿರಣಗಳ ಸಮೂಹವು ಹೇಳಲ್ಪಟ್ಟಿದೆ. 'ಪ್ರಾಬೋಧಿ' ಎಂಬುದರಿಂದ ವೇದವನ್ನು ಅಭಿವ್ಯಕ್ತಿಗೊಳಿಸಿದರು ಎಂದು ತಿಳಿಸಿದ್ದಾರೆ. ಗೋಸಂತತಿಃ ಎಂಬಲ್ಲಿ ಗೋಪದವನ್ನು

ಶ್ರುತಿಪಂಕಜಂ ಎಂಬುದರಲ್ಲಿ ಶ್ರುತಿಪದವನ್ನು ಹೇಳಿದ್ದರಿಂದ ಅನುವ್ಯಾಖ್ಯಾನಶ್ಲೋಕದಲ್ಲಿರುವ ಶಾಸ್ತ್ರಪದಕ್ಕೆ ಪೌರುಷೇಯಗ್ರಂಥ ಹಾಗೂ ಅಪೌರುಷೇಯಗ್ರಂಥಗಳೆರಡನ್ನೂ ವಿವಕ್ಷಿಸಬೇಕೆಂದು ಸೂಚಿಸಿದ್ದಾರೆ. ಅಥವಾ ಗೋಸಂತತಿ ಎಂಬುದಕ್ಕೆ ಜ್ಞಾನಸಂತತಿ ಇತ್ಯಾದಿ ಅರ್ಥವನ್ನು ತಿಳಿಯಬೇಕು.

ವಿಶೇಷವಿಚಾರ – 'ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ' ಇತ್ಯಾದಿಯಾಗಿ ಅನುವ್ಯಾಖ್ಯಾನದ ಎರಡನೆಯ ಶ್ಲೋಕದಲ್ಲಿ ತಮ್ಮ ಗುರುಗಳಾದ ವೇದವ್ಯಾಸದೇವರಿಗೆ ಶ್ರೀಮಧ್ವಾಚಾರ್ಯರು ನಮಸ್ಕಾರ ಮಾಡಿದ್ದಾರೆ. ಈ ಶ್ಲೋಕಕ್ಕೆ ಪ್ರಕೃತ ಸುಧಾಕಾರರು ವ್ಯಾಖ್ಯಾನ ಮಾಡುವುದರ ಜೊತೆಗೆ ವೇದವ್ಯಾಸದೇವರನ್ನು ವಂದಿಸಿದ್ದಾರೆ.

'ಗೋಸಂತತಿಃ ವ್ಯಸ್ತಾರಿ' ಎಂದು ಹೇಳಿದ್ದರಿಂದ ಮಹಾಭಾರತ, ಭಾಗವತಾದಿ ಪುರಾಣ ಮತ್ತು ಬ್ರಹ್ಮಸೂತ್ರ ಇವೇ ಮೊದಲಾದ ಗ್ರಂಥಗಳನ್ನು ರಚಿಸಿದರು ಎಂದು ತಿಳಿಯಬೇಕು. 'ಶ್ರುತಿಪಂಕಜಂ ಪ್ರಾಬೋಧಿ' ಎಂದು ಹೇಳಿದ್ದರಿಂದ ವೇದವಿಭಾಗವನ್ನು ಮಾಡುವ ಮೂಲಕ ವೇದೋಪದೇಶಪರಂಪರೆಯನ್ನು ಪ್ರಾರಂಭಿಸಿದರು ಎಂಬರ್ಥವನ್ನು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಅನುವ್ಯಾಖ್ಯಾನ ಶ್ಲೋಕದಲ್ಲಿ ಶಾಸ್ತ್ರಪ್ರಭವಂ ಎಂಬುದಕ್ಕೆ ಪೌರುಷೇಯಗ್ರಂಥ, ಹಾಗೂ ಅಪೌರುಷೇಯಗ್ರಂಥಗಳಿಗೆ ಕಾರಣರಾಗಿರುವರು ಎಂಬರ್ಥವನ್ನು ಹೇಳಿದಂತಾಯಿತು.

## ವ್ಯಸ್ತಾರಿಗೋಸಂತತಿಃ ಎಂಬುದು ಮುಂದಿನ ಮೂರಕ್ಕೆ ಹೇತು

ವಾಕ್ಯಾರ್ಥಚಂದ್ರಿಕಾ– ಗುರುತ್ವೋಪಪಾದಕಶಾಸ್ತ್ರಪ್ರಭವತ್ವೋಪ(ಪಾದಕ ತಮೇವೇತಿ ದ್ವಿತೀಯಪದ್ಯ ವ್ಯಾಖ್ಯಾನಾರೂಪೇ)ಪಾದನೇನ ಕಿಂಚಿತ್ ದ್ವಿತೀಯಸ್ಯ ಪದ್ಯಸ್ಯ ವ್ಯಾಖ್ಯಾನರೂಪೇ 'ಯೇನ' ಇತಿ ಪದ್ಯೇ ವೇದವಿಭಾಗೋ ವೇದಾರ್ಥೋಪಬೃಂಹಕೇತಿಹಾಸಪುರಾಣಾದಿನಿರ್ಮಾಣಂ ತನ್ನಿರ್ಣಾಯಕಬ್ರಹ್ಮಸೂತ್ರನಿರ್ಮಾಣಂ ಚೇತಿ ತ್ರಿವಿಧೋಽಪಿ ಗೋಸಂತತಿವಿಸ್ತಾರೋಽಭಿಮತಃ । ತತ್ರ ಆದ್ಯಸ್ಯ ಪ್ರಾಬೋಧಿ ಇತ್ಯುಕ್ತೇ ಮಂದೈರಧ್ಯೇಯತ್ವರೂಪೇ ಪ್ರಾಬೋಧೇ ಹೇತುತ್ವಮ್ । ದ್ವಿತೀಯತೃತೀಯಯೋಸ್ತು 'ಪ್ರಾಕಾಶಿ' ಇತ್ಯಾದ್ಯುಕ್ತಪ್ರಕಾಶಾದಿ ಹೇತುತ್ವಮ್ ಇತಿ ದ್ರಷ್ಟವ್ಯಮ್ । 'ಕರುಣಯಾ' ಇತ್ಯೇತತ್ 'ಪ್ರಾದುರಭಾವಿ' ಇತ್ಯಾದೌ ಸರ್ವತ್ರ ಸಂಬಧ್ಯತೇ । ಅನೇನ 'ಪ್ರಾದುರ್ಭೂತಃ' ಇತಿ ಪದ್ಯತಾತ್ಪರ್ಯಮಪಿ ಉಕ್ತಂ ಭವತಿ । ಲುಙ್‌ಪ್ರಾಯಪಾಠಭಂಗಪರಿಜಿಹೀರ್ಷ–





ಯಾऽऽಹ – ಮೇತಿ ॥ ಮಾಙ್ ಯೋಗೇ ಲುಙಃ ಸರ್ವಲಕಾರಾಪವಾದಕತ್ವಾತ್ ನ ತ್ಯಜ್ಯತಾಮ್ ಇತ್ಯರ್ಥಃ।

ಭಾಷ್ಯದ ಮಂಗಳಶ್ಲೋಕದಲ್ಲಿ 'ಗುರೂಂಶ್ಚಾಪಿ' ಎಂಬುದರಿಂದ ವೇದವ್ಯಾಸದೇವರು ತಮಗೆ ಗುರುಗಳಾಗಿದ್ದಾರೆಂದು ಆಚಾರ್ಯರು ತಿಳಿಸಿದ್ದಾರೆ. ಇದನ್ನೇ ಉಪಪಾದನೆ ಮಾಡಲು ಅನುವ್ಯಾಖ್ಯಾನದ ಎರಡನೆಯ ಶ್ಲೋಕದಲ್ಲಿ ಶಾಸ್ತ್ರಪ್ರಭವತ್ವಾದಿಗಳನ್ನು ವೇದವ್ಯಾಸದೇವರಲ್ಲಿ ಸಮರ್ಥನೆ ಮಾಡಿದ್ದಾರೆ. ಈ ಶಾಸ್ತ್ರಪ್ರಭವತ್ವದ ಉಪಪಾದನೆಗೋಸ್ಕರ ಪ್ರಕೃತ 'ಯೇನ ಪ್ರಾದುರಭಾವಿ' ಎಂಬ ಎರಡನೆಯ ಮಂಗಳಶ್ಲೋಕವು ಹೊರಟಿದೆ. 'ತಮೇವ ಶಾಸ್ತ್ರಪ್ರಭವಂ' ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟ ಎಲ್ಲ ಗುಣಗಳನ್ನು ಈ ಶ್ಲೋಕದಲ್ಲಿ ಉಪಪಾದನೆ ಮಾಡುತ್ತಿಲ್ಲ. ಶಾಸ್ತ್ರಪ್ರಭವತ್ವವನ್ನಷ್ಟೇ ಉಪಪಾದನೆ ಮಾಡಿದ್ದಾರೆ.

'ವ್ಯಸ್ತಾರಿ ಗೋಸಂತತಿಃ' ಎಂಬುದಕ್ಕೆ ಒಟ್ಟು ಮೂರು ಅರ್ಥ (1) ವೇದವ್ಯಾಸದೇವರು ವೇದವಿಭಾಗ ಮಾಡಿದರು. (2) ವೇದಾರ್ಥೋಪಬೃಂಹಕವಾದ ಇತಿಹಾಸ ಪುರಾಣಾದಿಗಳನ್ನು ನಿರ್ಮಾಣ ಮಾಡಿದರು. (3) ತನ್ನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ನಿರ್ಮಾಣ ಮಾಡಿದರು. ಈ ಮೂರರಲ್ಲಿ ಮೊದಲನೆಯದ್ದನ್ನು ಸ್ಪಷ್ಟಪಡಿಸಲು 'ಶ್ರುತಿಪಂಕಜಂ ಪ್ರಾಬೋಧಿ' ಎಂಬುದಾಗಿ ಹೇಳಿದ್ದಾರೆ. ಅಜ್ಞಜನರು ವೇದವನ್ನು ಅಧ್ಯಯನ ಮಾಡುವಂತೆ ಅನುಕೂಲ ಮಾಡಿದರು ಎಂಬುದು ಇದರ ಅರ್ಥ. ಆದ್ದರಿಂದ ಅಧ್ಯೇಯತ್ವವೆಂಬ ಪ್ರಾಬೋಧದಲ್ಲಿ ಈ ವೇದವಿಭಾಗವು ಹೇತುವಾಗಿದೆ.

ಎರಡನೆಯ ಮತ್ತು ಮೂರನೆಯ ಗೋಸಂತತಿಯ ವಿಸ್ತಾರದ ವಿವರಣೆಗಾಗಿ 'ಕರುಣಯಾ ಪ್ರಾಕಾಶಿ ತತ್ವಂ ಪರಮ್' ಎಂಬುದಾಗಿ ಹೇಳಿದ್ದಾರೆ. ಇತಿಹಾಸಪುರಾಣಗಳ ನಿರ್ಮಾಣದಿಂದ ಮತ್ತು ಬ್ರಹ್ಮಸೂತ್ರಗಳ ನಿರ್ಮಾಣದಿಂದ ನಿಜವಾದ ವೇದಾರ್ಥತತ್ವವನ್ನು ತಿಳಿಸಿದ್ದಾರೆ. ಆದ್ದರಿಂದ ತತ್ವದ ಜ್ಞಾನಕ್ಕೆ ಇತಿಹಾಸಪುರಾಣಾದಿಗಳ ನಿರ್ಮಾಣ ಹಾಗೂ ಬ್ರಹ್ಮಸೂತ್ರಗಳ ನಿರ್ಮಾಣವು ಹೇತುವಾಗಿದೆ ಎಂದು ತಿಳಿಸಿದಂತಾಯಿತು.

'ಕರುಣಯಾ' ಎಂಬುದು 'ಪ್ರಾದುರಭಾವಿ' ಇತ್ಯಾದಿ ಎಲ್ಲೆಡೆಯೂ ಸಂಬಂಧವನ್ನು ಹೊಂದುತ್ತದೆ. ಹೀಗೆ ಹೇಳಿದ್ದರಿಂದ 'ಪ್ರಾದುರ್ಭೂತಃ' ಎಂಬ ಪದ್ಯದ ತಾತ್ಪರ್ಯವನ್ನು ಕೂಡ ಹೇಳಿದಂತಾಯಿತು.

'ತ್ಯಜ್ಯತಾಂ' ಎಂದು ಲೋಟ್‌ಲಕಾರ ಪ್ರಯೋಗವನ್ನು ಮಾಡಬೇಕಿತ್ತು. 'ತ್ಯಾಜಿ' ಎಂಬುದಾಗಿ ಲುಙ್‌ಲಕಾರದ ಪ್ರಯೋಗವನ್ನು ಏಕೆ ಮಾಡಿದರು? ಎಂದರೆ ಅಭಾವಿ, ಪ್ರಾಬೋಧಿ, ಪ್ರಾಕಾಶಿ ಇತ್ಯಾದಿ-





ಯಾಗಿ ಲುಙ್‌ಲಕಾರವೇ ಎಲ್ಲೆಡೆಯೂ ಪ್ರಸಕ್ತವಾಗಿದೆ. ಅದರ ಪ್ರಾಯಪಾಠಕ್ಕೆ ಭಂಗಬರಬಾರದೆಂಬ ಅಪೇಕ್ಷೆಯಿಂದ ಇಲ್ಲೂ ಕೂಡ ತ್ಯಾಜಿ ಎಂದು ಲುಙ್‌ಲಕಾರವನ್ನೇ ಪ್ರಯೋಗ ಮಾಡಿದ್ದಾರೆ. ಅತ್ಯಾಜಿ ಎಂದಾಗಬೇಕು. ಆದರೆ ಮಾಙ್‌ಯೋಗವಿದ್ದಾಗ 'ನ ಮಾಙ್ ಯೋಗೇ' ಎಂಬ ಸೂತ್ರದಂತೆ ಅಟಾ-ಗಮವು ಬರುವುದಿಲ್ಲ. ಆದ್ದರಿಂದ ತ್ಯಾಜಿ ಎಂಬ ರೂಪವು ನಿಷ್ಪನ್ನವಾಗಿದೆ. ಮಾಙ್‌ಯೋಗವಿದ್ದಾಗ ಬೇರೆ ಲಕಾರಗಳು ಬರುವುದಿಲ್ಲ. ಲುಙ್‌ಲಕಾರವೇ ಬರುತ್ತದೆ ಎಂಬುದನ್ನು ಕೂಡ ಇಲ್ಲಿ ತಿಳಿಯಬೇಕು.

## ರಸಘಟ್ಟ
## ಮೂರು ಆಕ್ಷೇಪಗಳಿಗೆ ಪರಿಹಾರ

ಆನಂದ – 'ತಮೇವ' ಇತಿ ಶ್ಲೋಕೇ ಗುರುತ್ವೇನ ವೇದವ್ಯಾಸವಂದನಂ ಕ್ರಿಯತೇ । ತತ್ರ 'ತಮೇವ' ಇತ್ಯನೇನ ವ್ಯಾಸಸ್ಯ ಪರದೈವತೈಕ್ಯಮುಕ್ತಂ ತದಯುಕ್ತಮ್, ವೇದವ್ಯಾಸಸ್ಯ ಜನ್ಮಾದಿ-ಮತ್ತ್ವೇನ ಮೂಲರೂಪಸ್ಯ ಚ ಜನ್ಮಾದಿಶೂನ್ಯತ್ವೇನ ವಿರುದ್ಧಧರ್ಮಾಧಿಕರಣಯೋರೈಕ್ಯಾ-ಯೋಗಾತ್ । 'ಶಾಸ್ತ್ರಪ್ರಭವಂ' ಇತ್ಯೇತದ್ ಗುರುತ್ವೋಪಪಾದನಾರ್ಥಮುಕ್ತಮ್ । ತತ್ರ ಶ್ರುತ್ಯಾದಿ-ಶಾಸ್ತ್ರಸ್ಯ ಪ್ರಭವತ್ವಮ್ ಉತ್ಪಾದಕಮ್ ಇತಿ ಪ್ರತೀಯತೇ, ತದಯುಕ್ತಮ್ । ಶ್ರುತ್ಯಾದೇಃ ಅಪೌರು-ಷೇಯತ್ವೇನ ತದುತ್ಪಾದಕತ್ವಾಯೋಗಾತ್ । 'ಜಗದ್ಗುರೂಣಾಂ ಗುರುಃ' ಇತ್ಯತ್ರ ಬ್ರಹ್ಮಾದೀನಾಮೇವ ಉಪದೇಷ್ಟೃತ್ವೇನ ಗುರುರ್ನಾನ್ಯೇಷಾಮ್ ಇತಿ ಪ್ರತೀಯತೇ ಅತಃ 'ತಮೇವ' ಇತಿ ಶ್ಲೋಕಂ ಕಿಂಚಿದ್ ವ್ಯಾಚಷ್ಟೇ – ಯೇನೇತಿ ॥

1. 'ತಮೇವ ಶಾಸ್ತ್ರಪ್ರಭವಂ' ಎಂಬ ಶ್ಲೋಕದಲ್ಲಿ ವೇದವ್ಯಾಸದೇವರನ್ನು ಗುರುತ್ವೇನ ನಮಿಸಿ-ದ್ದಾರೆ. ಈ ಶ್ಲೋಕದಲ್ಲಿ ವೇದವ್ಯಾಸದೇವರೇ ಪರದೇವತೆ ಎಂದಿದ್ದಾರೆ. ಇದು ತಪ್ಪು. ಏಕೆಂದರೆ ವೇದ-ವ್ಯಾಸದೇವರಿಗೆ ಜನ್ಮಾದಿಗಳು ಇವೆ. ಪರದೇವತೆಯಾದ ನಾರಾಯಣನಿಗೆ ಜನ್ಮಾದಿಗಳು ಇಲ್ಲ. ವಿರುದ್ಧ-ಧರ್ಮಗಳಿಗೆ ಐಕ್ಯವು ಯುಕ್ತವಾಗದ ಕಾರಣ ವೇದವ್ಯಾಸರಿಗೆ ಪರದೇವತೆಯಿಂದ ಐಕ್ಯ ಹೇಳಲಾಗದು.

2. 'ಶಾಸ್ತ್ರಪ್ರಭವಂ' ಎಂಬುದನ್ನು ಗುರುತ್ವದ ಉಪಪಾದನೆಗೋಸ್ಕರ ಹೇಳಿದ್ದಾರೆ. ಇದರಿಂದ ಶ್ರುತ್ಯಾದಿಶಾಸ್ತ್ರವೂ ಕೂಡ ಇವರಿಂದ ರಚಿತವಾಗಿದೆ ಎಂದು ಪ್ರತೀತವಾಗುತ್ತದೆ. ಆದರೆ ಶ್ರುತ್ಯಾದಿಗಳು ಅಪೌರುಷೇಯವಾದ್ದರಿಂದ ರಚನೆ ಮಾಡಲು ಸಾಧ್ಯವಿಲ್ಲ.

3. 'ಜಗದ್ಗುರೂಣಾಂ ಗುರುಃ' ಎಂಬಲ್ಲಿ ಬ್ರಹ್ಮಾದಿಗಳಿಗಷ್ಟೇ ಉಪದೇಶಕರಾಗಿದ್ದಾರೆ. ಉಳಿದವ-ರಿಗೆ ಉಪದೇಶಕರಾಗಿಲ್ಲ ಎಂದು ಪ್ರತೀತವಾಗುತ್ತೆ.









ಈ ಮೂರು ಆಕ್ಷೇಪಗಳನ್ನು 'ಯೇನ ಪ್ರಾದುರಭಾವಿ' ಎಂಬ ಮಂಗಳಶ್ಲೋಕದಿಂದ ಪರಿಹರಿಸುತ್ತಿದ್ದಾರೆ.

'ಪ್ರಾದುರಭಾವಿ' ಎಂಬುದರಿಂದ ಪ್ರಾದುರ್ಭೂತರುಗಿದ್ದಾರೆ ಹೊರತು, ಉಳಿದವರಂತೆ ಜನ್ಮವನ್ನು ತಾಳಿಲ್ಲ ಎಂದು ತಿಳಿಯುತ್ತದೆ. 'ಪ್ರಾಬೋಧಿ' ಎಂಬುದರಿಂದ ಇರುವ ಶ್ರುತಿಯನ್ನು ಪ್ರಕಟಪಡಿಸಿದ್ದಾರೆಂದು ತಿಳಿಯುತ್ತದೆಯಾದ್ದರಿಂದ ರಚಿಸಿದ್ದಾರೆಂಬುದು ತಪ್ಪು ಎಂದು ಹೇಳಿದಂತಾಯಿತು. 'ಸಾಧುನಿಕರಃ' ಎಂಬುದರಿಂದ ಸಮಸ್ತಸಜ್ಜನರಿಗೂ ಗುರುಗಳಾಗಿದ್ದಾರೆಂದು ಉತ್ತರಿಸಲಾಗಿದೆ.

## 'ಮಾ ತ್ಯಾಜಿ' ಎಂಬ ಪ್ರಯೋಗ ತಪ್ಪಲ್ಲ

ಕುಂಡಲಗಿರಿ – ನ ತ್ಯಜತಾಮ್ ಇತಿ ಲೋಟಿ ಪ್ರಯೋಕ್ತವ್ಯೇ ಲುಙ್‌ಪ್ರಯೋಗಸ್ತು 'ಮಾಙಿಲುಙ್' ಇತಿ ಸೂತ್ರೇಣ ಮಾಙ್‌ಯೋಗೇ ಸರ್ವಲಕಾರಾಪವಾದೇನ ಲುಙ್‌ಮಾತ್ರವಿಧಾನಾತ್ ಸಾಧು । ನ ಮಾಙ್ ಯೋಗೇ' ಇತ್ಯನೇನ ನಿಷಿದ್ಧತಯಾ ಲಙ್‌ಲುಙ್‌ಲೃಙ್‌ಕ್ಷ್ವಿತಿ-ಸೂತ್ರಶಿಷ್ಟಾಡಾಗಮಾಪ್ರಸಕ್ತೇಃ 'ಮಾ ತ್ಯಾಜಿ' ಇತಿ ಸಿದ್ಧ್ಯತಿ ॥

'ನ ತ್ಯಜತಾಮ್' ಎಂದು ಲೋಟ್ ಲಕಾರದಲ್ಲಿ ಪ್ರಯೋಗ ಮಾಡಬೇಕಿತ್ತು. ಆದರೆ 'ಮಾಙಿ-ಲುಙ್' ಎನ್ನುವ ಸೂತ್ರದಿಂದ ಮಾಙ್‌ಯೋಗವಿದ್ದಾಗ ಎಲ್ಲಾ ಲಕಾರಗಳಿಗೂ ಅಪವಾದವಾಗಿ ಲುಙ್ ಲಕಾರವಷ್ಟೇ ಬರುತ್ತದೆಂದು ವಿಧಾನಮಾಡಿದ್ದಾರೆ. ಆದ್ದರಿಂದ ಇಲ್ಲಿ ಲುಙ್‌ಲಕಾರವಷ್ಟೇ ವಿಧಾನ ಮಾಡಿದ್ದಾರೆ. 'ನ ಮಾಙ್‌ಯೋಗೇ' ಎಂದು ನಿಷೇಧವಿರುವುದರಿಂದ 'ಲುಙ್‌ಲಙ್‌ಲೃಙ್‌ಕ್ಷು' ಎಂಬ ಸೂತ್ರದಿಂದ ಅಡಾಗಮವು ಪ್ರಾಪ್ತವಾಗುವುದಿಲ್ಲ. ಆದ್ದರಿಂದ 'ಮಾ ತ್ಯಾಜಿ' ಎಂಬ ರೂಪವು ಸಿದ್ಧವಾಗುತ್ತದೆ.

## ವೇದವ್ಯಾಸರು ದಯಾಲುಗಳು

ಕಾಶೀಟಿಪ್ಪಣಿ – ನನು ಪರಪ್ರಯೋಜನಾರ್ಥೈವ ಕಥಂ ಪ್ರವೃತ್ತಿಃ? ಇತ್ಯತ ಉಕ್ತಮ್ – ಕರುಣಯಾ ಇತಿ ॥ ದಯಾಲೂನಾಂ ಸ್ವಭಾವೋಽಯಮ್ ಇತಿ ಭಾವಃ । ನನು ಪರೇಷಾಮಪಿ ತತ್ತ್ವಬೋಧೇನ ಕಿಂ ಪ್ರಯೋಜನಮ್? ಅತ ಆಹ – ಧ್ವಾಂತಮಿತಿ ॥ ತಮಃಸಮಾಜ್ಞಾನನಿವೃತ್ತಿಃ ತತ್ಪ್ರಯೋಜನಮ್ ಇತಿ ಭಾವಃ । ತಸ್ಯಾಪಿ ಕಿಂ ಪ್ರಯೋಜನಮ್? ಇತ್ಯತ ಆಹ – ಸಾಧುನಿಕರ ಇತಿ ॥ ಸನ್ ಮೋಕ್ಷಪ್ರಾಪಕತ್ವೇನ ಸಮೀಚೀನಃ ಸತೋ ವಾ ನಿತ್ಯಸುಖಲಕ್ಷಣಮೋಕ್ಷಸ್ಯ ಯೋ

ಮಾರ್ಗ ಉಪಾಸ್ತ್ಯಾದಿರೂಪಃ ತದ್ಗ ಇತ್ಯರ್ಥಃ । ತಥಾ ಚ ಮೋಕ್ಷಸಾಧನೋಪಾಸ್ತ್ಯಾದಿಪ್ರಯೋಜಕ-ಪರತ್ವಾವಬೋಧಸಂಪಾದಕತ್ವೇನ ಶಾಸ್ತ್ರಪ್ರಭವತ್ವಮರ್ಥವತ್ ಇತಿ ಹೃದಯಮ್ ॥

ಪರಪ್ರಯೋಜನಕ್ಕೋಸ್ಕರವೇ ಪ್ರವೃತ್ತಿಯು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ – ಕರುಣಯಾ ಎಂದು ಉತ್ತರಿಸಿದ್ದಾರೆ. 'ದಯಾಲುಗಳ ಸ್ವಭಾವವೇ ಇದು' ಎಂದು ತಿಳಿಯಬೇಕು. ಬೇರೆಯವರಿಗೂ ತತ್ವವನ್ನು ತಿಳಿಸಿದರೆ ಏನು ಪ್ರಯೋಜನ ಎಂಬ ಪ್ರಶ್ನೆಗೆ 'ಧ್ವಾಂತಂ' ಎಂಬ ಪದವು ಉತ್ತರಿಸುತ್ತಿದೆ. ತಮಸ್ಸಿಗೆ ಸಮಾನವಾದ ಅಜ್ಞಾನನಿವೃತ್ತಿಯೇ ಪ್ರಯೋಜನವಾಗಿದೆ. ಅಜ್ಞಾನವನ್ನು ನಿವೃತ್ತಿ ಮಾಡಿದರೆ ಏನು ಪ್ರಯೋಜನ? ಎಂಬ ಪ್ರಶ್ನೆಗೆ 'ಸಾಧುನಿಕರಃ' ಎಂಬ ಪದವು ಉತ್ತರಿಸಿದೆ. ಮೋಕ್ಷಪ್ರಾಪಕವಾದ ಸಮೀಚೀನವಾದ ಯಾವ ಉಪಾಸನೆ ಮೊದಲಾದ ಮಾರ್ಗವಿದೆಯೋ ಅಂತಹ ಉಪಾಸನೆಗೆ ಉಪ-ಯೋಗಿಯಾದ ತತ್ವಜ್ಞಾನವನ್ನು ನೀಡುವವರಾಗಿದ್ದಾರೆ ಎಂಬುದು ಇದರ ಹೃದಯ.

## ಸುಧಾಪರಿಮಳಸಾರ

ಗ್ರಂಥಪ್ರತಿಪಾದ್ಯನನ್ನು ನಮಸ್ಕಾರ ಮಾಡುವುದು ಎಷ್ಟು ಮುಖ್ಯವೋ ಗ್ರಂಥಕರ್ತೃವನ್ನೂ ನಮಸ್ಕಾರ ಮಾಡುವುದೂ ಕೂಡ ಅಷ್ಟೇ ಮುಖ್ಯ ಮೊದಲನೆಯ ಶ್ಲೋಕದಲ್ಲಿ ಗ್ರಂಥಪ್ರತಿ-ಪಾದ್ಯನಾದ ನಾರಾಯಣನನ್ನು ನಮಸ್ಕಾರ ಮಾಡಿದ್ದಾಯಿತು. ಎರಡನೆಯ ಶ್ಲೋಕದಲ್ಲಿ ಗ್ರಂಥಕರ್ತೃಗಳಾದ ಶ್ರೀವೇದವ್ಯಾಸದೇವರನ್ನು ನಮಸ್ಕಾರ ಮಾಡುತ್ತಿದ್ದಾರೆ –

ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ
ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ವಂ ಪರಮ್ ।
ಧ್ವಾಂತಂ ಧ್ವಂಸಮನಾಯಿ ಸಾಧುನಿಕರಶ್ಚಾಕಾರಿ ಸನ್ಮಾರ್ಗತಃ
ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಮ್ ॥2॥

ವೇದವ್ಯಾಸದೇವರು ಭೂಮಿಯಲ್ಲಿ ಅವತರಿಸಿ ಮಹಾಭಾರತ, ಪುರಾಣ, ಬ್ರಹ್ಮಸೂತ್ರ ಮೊದ-ಲಾದ ಗ್ರಂಥಗಳನ್ನುನಿರ್ಮಾಣ ಮಾಡಿದರು. ಇದನ್ನು ವ್ಯಸ್ತಾರಿ ಗೋಸಂತತಿಃ ಎಂಬ ವಿಶೇಷಣವು ಸ್ಪಷ್ಟ ಪಡಿಸುತ್ತಿದೆ. ಗೋಶಬ್ದಕ್ಕೆ ಮೇಲೆ ಹೇಳಿದ ಪೌರುಷೇಯಗ್ರಂಥಗಳು ಹಾಗೂ ಕಿರಣಗಳ ಸಮೂಹ ಎಂಬುದಾಗಿ ಎರಡರ್ಥ. 'ಪ್ರಾಬೋಧಿ ಶ್ರುತಿಪಂಕಜಂ' ಎಂಬಲ್ಲಿ ಪ್ರಾಬೋಧಿ ಎಂಬ ಪದವನ್ನು ಪ್ರಯೋಗಮಾಡಿದ್ದರಿಂದ ಅನುವ್ಯಾಖ್ಯಾನದ 'ತಮೇವ ಶಾಸ್ತ್ರ-ಪ್ರಭವಂ' ಎಂಬುದನ್ನು ವ್ಯಾಖ್ಯಾನ ಮಾಡಿದಂತಾಯಿತು. ಶಾಸ್ತ್ರಪ್ರಭವತ್ವ ಎಂದರೆ, ವೇದ-



ವ್ಯಂಜಕತ್ವ ಎಂದರ್ಥ. ಗೋಸಂತತಿಃ ಎಂಬಲ್ಲಿ ಗೋಪದವನ್ನು ಶ್ರುತಿಪಂಕಜಂ ಎಂಬಲ್ಲಿ ಶ್ರುತಿಪದವನ್ನು ಪ್ರಯೋಗ ಮಾಡಿದ್ದರಿಂದ 'ಶಾಸ್ತ್ರಪ್ರಭವಂ' ಎಂಬ ಅನುವ್ಯಾಖ್ಯಾನದ ಶ್ಲೋಕದಲ್ಲಿ ಶಾಸ್ತ್ರಪದದಿಂದ ಪೌರುಷೇಯಗ್ರಂಥ ಹಾಗೂ ಅಪೌರುಷೇಯಗ್ರಂಥಗಳೆರಡನ್ನೂ ವಿವಕ್ಷಿಸಬೇಕೆಂದು ಸೂಚಿಸಿದ್ದಾರೆ. ಹೀಗೆ ಈ ಎರಡನೆಯ ಪದ್ಯವು ಕೇವಲ ಗ್ರಂಥಕರ್ತೃಗಳಾದ ವೇದವ್ಯಾಸದೇವರನ್ನು ನಮಸ್ಕರಿಸುವುದೆಂಬ ಪ್ರಯೋಜನವನ್ನು ಹೊಂದಿರುವುದಷ್ಟೇ ಅಲ್ಲ 'ತಮೇವ ಶಾಸ್ತ್ರಪ್ರಭವಂ' ಎಂಬುದನ್ನೂ ವ್ಯಾಖ್ಯಾನ ಮಾಡುತ್ತಿದೆ.

## ಪರಿಮಳವೈಶಿಷ್ಟ್ಯ

* ಪ್ರಾಬೋಧಿ ಎಂಬ ಪದಪ್ರಯೋಗದಿಂದ ಶಾಸ್ತ್ರಪ್ರಭವತ್ವದ ವ್ಯಾಖ್ಯಾನ ಮಾಡಿದ್ದಾರೆ.

* ಗೋ ಹಾಗೂ ಶ್ರುತಿ ಎಂಬೆರಡು ಪದಗಳನ್ನು ವ್ಯತ್ಯಾಸಮಾಡಿ ಉಲ್ಲೇಖ ಮಾಡಿದ್ದರಿಂದ ಶಾಸ್ತ್ರಪದದಿಂದ ಯಾವ ಗ್ರಂಥಗಳನ್ನು ವಿವಕ್ಷಿಸಬೇಕೆಂಬುದನ್ನು ಸೂಚಿಸಿದ್ದಾರೆ.

## ಶ್ರೀಮಧ್ವಾಚಾರ್ಯರೇ ತತ್ವನಿಶ್ಚಯ ನೀಡಿರಿ

**ಶ್ರೀಮನ್ನ್ಯಾಯಸುಧಾ–**

**ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ**
**ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೇ ಸಕ್ತಿರ್ನ ವೈ ಬಾಧಿತೇ ।**
**ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸ ಮೇ ।**
**ಭೂಯಾತ್ ತತ್ವವಿನಿರ್ಣಯಾಯ ಭಗವಾನ್ ಆನಂದತೀರ್ಥೋ ಮುನಿಃ ॥೩॥**

ಓ ಆನಂದತೀರ್ಥರೇ! ತಾವು ತತ್ವಸಿದ್ಧಾಂತವನ್ನು ಸಂಪೂರ್ಣವಾಗಿ ತಿಳಿದಿರುವಿರಿ. ತಮಗೆ ತತ್ವವಾದದಲ್ಲಿ ಪರಿಪೂರ್ಣವಾದ ದಾರ್ಢ್ಯವಿದೆ. ವಿರುದ್ಧವಾದ ಮತಗಳಲ್ಲಿ ಪರಿಪೂರ್ಣವಾದ ಅಸಮ್ಮತಿಯೂ ಇದೆ. ನಿಷಿದ್ಧವಿಷಯಗಳಲ್ಲಿ ತಮಗೆ ಲವಲೇಶವೂ ಆಸಕ್ತಿಯಿಲ್ಲ. ದುಷ್ಟರ ಸಂಪರ್ಕವಂತೂ ಇಲ್ಲವೇ ಇಲ್ಲ. ಒಟ್ಟಾರೆ ತಾವು ನಿರ್ದುಷ್ಟವಾದ ಪ್ರಮಾಣಸ್ವರೂಪರು. ಷಡ್ಗುಣೈಶ್ವರ್ಯಸಂಪನ್ನರು. ಕಾಮಕ್ರೋಧಾದಿಗಳನ್ನು ಗೆದ್ದವರು.







ತಾವು ನನಗೆ ಪರಾಪರತತ್ವವಿಷಯದಲ್ಲಿ ನಿರ್ಣಯಾತ್ಮಕವಾದ ಜ್ಞಾನವನ್ನು ನೀಡಿ ಉದ್ಧರಿಸಿರಿ.

ಅನ್ವಯಾರ್ಥ – ಯಸ್ಯ = ಯಾವ, ಆನಂದತೀರ್ಥರಿಗೆ, ನಿಜೇ ಪಕ್ಷೇ = ಯಥಾರ್ಥ-ಸಿದ್ಧಾಂತದಲ್ಲಿ, ನಿಜೇನ ಮಹಸಾ = ತಮ್ಮ ಸ್ವಸಾಮರ್ಥ್ಯದಿಂದ ವ್ಯಾಪ್ತಿಃ ಏವ = ಪರಿಪೂರ್ಣವಾದ ಜ್ಞಾನವೇ ಇರುತ್ತದೆ, ಸಪಕ್ಷೇ = ತತ್ವವಾದದಲ್ಲಿ, ಸ್ಥಿತಿಃ ಏವ = ದಾರ್ಢ್ಯವೇ ಇರುತ್ತದೆ. ವಿಪಕ್ಷತಃ = ವಿರುದ್ಧಮತಗಳ ವಿಷಯದಲ್ಲಿ, ವ್ಯಾವೃತ್ತಿಃ ಏವ = ಸಮ್ಮತಿಯು ಇರುವುದೇ ಇಲ್ಲ. ಬಾಧಿತೇ = ನಿಷಿದ್ಧ-ವಿಷಯಗಳಲ್ಲಿ, ನೈವ ಸಕ್ತಿಃ = ಸ್ವಲ್ಪವೂ ಆಸಕ್ತಿ ಇರುವುದಿಲ್ಲ. ಪ್ರತಿಪಕ್ಷಯುಕ್ತಿಃ = ವಿರುದ್ಧಮತದ ಸಂಬಂಧವು, ನೈವಾಸ್ತಿ = ಇರುವುದೇ ಇಲ್ಲ, ಸಃ = ಅಂಥ, ಅತುಲಂ = ಅಸದೃಶರಾದ, ಶುದ್ಧಂ ಪ್ರಮಾಣಂ = ನಿರ್ದುಷ್ಟಪ್ರಮಾಣಸ್ವರೂಪರಾದ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನರಾದ, ಮುನಿಃ = ಮನನಶೀಲರಾದ, ಆನಂದತೀರ್ಥಮುನಿಃ = ಶ್ರೀಮದಾನಂದತೀರ್ಥರು, ಮೇ = ನನಗೆ, ತತ್ವವಿನಿರ್ಣಯಾಯ = ಪರಾಪರತತ್ವವಿಷಯದಲ್ಲಿ ನಿರ್ಣಯಾತ್ಮಕವಾದ ಜ್ಞಾನವನ್ನು, ಭೂಯಾತ್ = ನೀಡಲಿ.

ವಿಗ್ರಹ – ೧. ಪ್ರತಿಪಕ್ಷೇ ಯುಕ್ತಿಃ – ಪ್ರತಿಪಕ್ಷಯುಕ್ತಿಃ

೨. ತತ್ವವಿನಿರ್ಣಯಾಯ – ವಿಶೇಷೇಣ ವಿನಿರ್ಣಯಃ ವಿನಿರ್ಣಯಃ, ತತ್ವಸ್ಯ ವಿನಿರ್ಣಯಃ ತತ್ವವಿನಿರ್ಣಯಃ ತಸ್ಮೈ.

೩. ಭಗವಾನ್ – ಭಗಃ ಅಸ್ಯಾಸ್ತೀತಿ ಭಗವಾನ್

೪. ಆನಂದತೀರ್ಥಃ – ಆನಂದಕರಂ ತೀರ್ಥಂ ಯಸ್ಮಾತ್ ಸಃ ಆನಂದತೀರ್ಥಃ

## ತತ್ವವಿನಿರ್ಣಯಾಯ ಎಂಬುದರ ವ್ಯಾಖ್ಯಾನ

ಪರಿಮಳ– ಭಾಷ್ಯಕರ್ತಾರಮ್ ಅಭೀಷ್ಟಂ ಪ್ರಾರ್ಥಯತೇ – ವ್ಯಾಪ್ತಿರಿತಿ ॥ ತತ್ವನಿರ್ಣಯಾಯ ॥ 'ಇದಮ್ ಅದೋ ವಾ, ಅನ್ಯದೇವ ವಾ, ತತ್ವಜ್ಞಾನಮ್ ಅದ್ವೈತಾದಿಜ್ಞಾನಂ ವಾ ತತ್ವಜ್ಞಾನಮ್ ಇತಿ ಸಂಶಯವಿಪರ್ಯಯಾನಾಸ್ಕಂದಿತನಿರ್ಣೀತಪ್ರಾಮಾಣ್ಯಕನಿಶ್ಚಯರೂಪತತ್ವಜ್ಞಾನಾಯ ಇತಿ ಸಾಧ್ವ್ಯೋಕ್ತಿಃ।





ಅನುವ್ಯಾಖ್ಯಾನಕಾರರಾದ ಶ್ರೀಮಧ್ವಾಚಾರ್ಯರ ಬಳಿ ಅಭೀಷ್ಟವನ್ನು ಪ್ರಾರ್ಥನೆ ಮಾಡಲು 'ವ್ಯಾಪ್ತಿರ್ಯಸ್ಯ' ಇತ್ಯಾದಿಯಾಗಿ ಸ್ತುತಿಸುತ್ತಿದ್ದಾರೆ. ತತ್ವವಿನಿರ್ಣಯವಾಗುವುದೇ ಪ್ರಯೋಜನವೆಂದು ಹೇಳಿದ್ದಾರೆ. ಇದರಿಂದ ಅನುಮಾನದಲ್ಲಿ ಸಾಧ್ಯನಿರ್ದೇಶವನ್ನು ಮಾಡಿದಂತಾಯಿತು. ಇದೋ, ಅದೋ? ಎಂಬ ಸಂಶಯದಿಂದ ಅಥವಾ ಅನ್ಯದೇವ (ಬೇರೆಯದ್ದೇ ಆಗಿದೆ) ಎಂಬ ವಿಪರೀತಜ್ಞಾನದಿಂದ ರಹಿತವಾದ ನಿರ್ಧಾರಿತವಾದ ಪ್ರಾಮಾಣ್ಯವುಳ್ಳ ನಿಶ್ಚಯರೂಪತತ್ವಜ್ಞಾನವೇ ತತ್ವವಿನಿರ್ಣಯ ಎಂದು ಕರೆಸಿಕೊಳ್ಳುತ್ತದೆ. ಇದು ಪ್ರಕೃತ ಅನುಮಾನದಲ್ಲಿ ಸಾಧ್ಯವಾಗಿದೆ.

ಗಮನಿಸಿ – 'ಸಂಶಯವಿಪರ್ಯಯಾನಾಸ್ಕಂದಿತನಿರ್ಣೀತಪ್ರಾಮಾಣ್ಯಕನಿಶ್ಚಯವತ್ವಂ ತತ್ವಜ್ಞಾನಸ್ಯ ಲಕ್ಷಣಮ್' ಎಂದು ತಿಳಿಯಬೇಕು.

## ಪ್ರಮಾಣಂ ಎಂಬುದರ ವ್ಯಾಖ್ಯಾನ

ಪರಿಮಳ– 'ಪ್ರಮಾಣಮ್' ಇತಿ ಕರಣೇ ಲ್ಯುಟ್ । ಇತರಕರಣವದಸ್ಯ ಪ್ರಮಾತೃಪ್ರಯೋಜ್ಯತ್ವಾಭಾವೇಽಪಿ ಸರ್ವಪ್ರಮಿತಿಕರಣಮನಆದಿಶಕ್ತಿಪ್ರಬೋಧಕತಯಾ ಪ್ರಾಧಾನ್ಯೇನ ಪ್ರಮಾಹೇತುತ್ವಾತ್ 'ಬೃಹತ್ತುಲ್ಯೆರಪ್ಯತುಲ್ಯೈಃ' ಇತ್ಯಾದಾವಿವ ಅತುಲಮನುಪಮಮ್ ಇತ್ಯರ್ಥಃ। ಶುದ್ಧಂ = ನಿರ್ದೋಷಮ್ ।

'ಪ್ರಮಾಣಂ' ಎಂಬಲ್ಲಿ ಕರಣಾರ್ಥದಲ್ಲಿ ಲ್ಯುಟ್‌ಪ್ರತ್ಯಯವನ್ನು ತಿಳಿಯಬೇಕು. ಯಾವುದು ಪ್ರಮಿತಿಕರಣವೋ ಅದು ಪ್ರಮಾಣ ಎಂದು ಕರೆಸಿಕೊಳ್ಳುತ್ತದೆ. ಶ್ರೀಮಧ್ವಾಚಾರ್ಯರು ಇಂದ್ರಿಯಗಳಂತೆ ಪ್ರಮಿತಿಕರಣರಾಗಿಲ್ಲ. ಮತ್ತು ಪ್ರಮಿತಿಕರಣವು ಪ್ರಮಾತೃಪ್ರಯೋಜ್ಯವಾಗಿರುತ್ತದೆ. ಶ್ರೀಮಧ್ವಾಚಾರ್ಯರು ಪ್ರಮಾತೃಪ್ರಯೋಜ್ಯವೂ ಆಗಿರುವುದಿಲ್ಲ. ಎಲ್ಲಾ ಬಗೆಯ ಪ್ರಮಿತಿಗೆ ಕರಣವಾದ ಮನಸ್ಸು ಮೊದಲಾದ ಇಂದ್ರಿಯಗಳಿಗೆ ಶಕ್ತಿಪ್ರಬೋಧಕರಾಗಿದ್ದಾರೆ. ಆದ್ದರಿಂದ ಪ್ರಧಾನವಾದ ಪ್ರಮಾಹೇತುತ್ವವೇ ಇವರಲ್ಲಿದೆ. ಆದ್ದರಿಂದ ಇವರಲ್ಲಿರುವ ಪ್ರಾಮಾಣ್ಯವು ಅನುಪಮವಾಗಿದೆ. 'ಅತುಲಂ' ಎಂಬ ಶಬ್ದಕ್ಕೆ 'ಬೃಹತ್ತುಲ್ಯೆರಪ್ಯತುಲ್ಯೈಃ' ಇತ್ಯಾದಿಯಾಗಿ ಹೇಳಿದಂತೆ ಉಪಮಾನರಹಿತವಾದದ್ದು ಎಂದರ್ಥ. 'ಶುದ್ಧಂ' ಎಂಬ ಪದಕ್ಕೆ ನಿರ್ದುಷ್ಟವಾದದ್ದು ಎಂದರ್ಥ.





ವಿಶೇಷವಿಚಾರ – ಶ್ರೀಮಧ್ವಾಚಾರ್ಯರನ್ನು ಶುದ್ಧವಾದ ಪ್ರಮಾಣಸ್ವರೂಪರೆಂದು ಹೇಳಲಾಗಿದೆ. ಇಲ್ಲಿರುವ ಪ್ರಮಾಣಂ ಎಂಬ ಪದವು ಕರಣಾರ್ಥದಲ್ಲಿ ಬಂದ ಲ್ಯುಡಂತಪದವಾಗಿದೆ. ಆದ್ದರಿಂದ ಕಣ್ಣು, ಕಿವಿ, ಮನಸ್ಸು ಮೊದಲಾದ ಇಂದ್ರಿಯಗಳು ಪ್ರಮಿತಿಕರಣವಾದ್ದರಿಂದ ಹೇಗೆ ಪ್ರಮಾಣವೆಂದು ಕರೆಸಿಕೊಳ್ಳುತ್ತವೋ ಅದರಂತೆ ಮಧ್ವಾಚಾರ್ಯರು ಕೂಡ ಪ್ರಮಿತಿಕರಣರಾದ್ದರಿಂದ ಪ್ರಮಾಣರಾಗಿದ್ದಾರೆ ಎಂದು ತಿಳಿಯುತ್ತದೆ. ಯಾವುದು ನಿಯತಪೂರ್ವಭಾವಿವೃತ್ತಿಯಾಗಿದ್ದು ಅಸಾಧಾರಣಕಾರಣವಾಗಿರುತ್ತದೋ ಅದೇ ಕರಣ ಎನಿಸಲು ಸಾಧ್ಯ. ಪ್ರತ್ಯಕ್ಷಾದಿಗಳಿಂದ ಜ್ಞಾನವು ಬರುವಾಗ ಇಂದ್ರಿಯಾದಿಗಳಂತೆ ಆಚಾರ್ಯರು ಹಿಂದಿನ ಕ್ಷಣದಲ್ಲೇ ಇದ್ದು ಜ್ಞಾನವನ್ನು ಹುಟ್ಟಿಸುತ್ತಿರುವುದು ಕಾಣಿಸುತ್ತಿಲ್ಲವಲ್ಲ?

ಉತ್ತರ – ಪ್ರಮಿತಿಕರಣತ್ವವು ಇಂದ್ರಿಯಾದಿಗಳಲ್ಲಿ ಮಾತ್ರ ಇದೆ. ಶ್ರೀಮಧ್ವಾಚಾರ್ಯರಲ್ಲಿ ಇರುವುದಿಲ್ಲ. ಆದರೆ ಇದಕ್ಕಿಂತಲೂ ಮುಖ್ಯವಾದ ಪ್ರಮಾಹೇತುತ್ವವು ಶ್ರೀಮಧ್ವಾಚಾರ್ಯರಲ್ಲಿದೆ. ಏಕೆಂದರೆ ಪ್ರತಿಯೊಂದು ಇಂದ್ರಿಯಗಳ ಒಳಗೆ ನಿಂತು ಶಕ್ತಿಪ್ರಬೋಧಕರಾಗಿದ್ದಾರೆ. ಆದ್ದರಿಂದ ಇವರಲ್ಲಿರುವ ಪ್ರಾಮಾಣ್ಯವು ಉಪಮಾನರಹಿತವಾದದ್ದು. ಇಂಥ ಒಂದು ಪ್ರಾಮಾಣ್ಯವು ಜಗತ್ತಿನಲ್ಲಿ ಇರಲು ಸಾಧ್ಯವೇ ಇಲ್ಲ.

## ಪಂಚರೂಪೀ ಅನುಮಾನಸ್ವರೂಪರು

**ಪರಿಮಳ– ಪಕ್ಷವೃತ್ತಿತ್ವಂ, ಸಪಕ್ಷೇ ಸತ್ತ್ವಂ, ವಿಪಕ್ಷಾದ್ ವ್ಯಾವೃತ್ತಿಃ, ಅಬಾಧಿತವಿಷಯತ್ವಮ್, ಅಸತ್ಪ್ರತಿಪಕ್ಷತ್ವಂ ಚೇತಿ ಅನ್ವಯವ್ಯತಿರೇಕಿಣಃ ಪಂಚರೂಪಾಣೀತಿ ತಾನಿ ಕ್ರಮೇಣಾಹ– ವ್ಯಾಪ್ತಿರಿತ್ಯಾದಿನಾ ॥**

1.ಪಕ್ಷದಲ್ಲಿರುವಿಕೆ, 2.ಸಪಕ್ಷದಲ್ಲಿರುವಿಕೆ, 3.ವಿಪಕ್ಷದಲ್ಲಿ ಇಲ್ಲದಿರುವಿಕೆ, 4.ಬಾಧ ಇಲ್ಲದಿರುವಿಕೆ, 5.ಸತ್ಪ್ರತಿಪಕ್ಷ ಇಲ್ಲದಿರುವಿಕೆ. ಈ ಐದು ಅನ್ವಯವ್ಯತಿರೇಕಿ ಅನುಮಾನದ ಸ್ವರೂಪವಾಗಿದೆ. ಈ ಐದೂ ಕೂಡ ಪ್ರಮಾಣಸ್ವರೂಪರಾದ ಶ್ರೀಮಧ್ವಾಚಾರ್ಯರಲ್ಲಿ ಇದೆ. ಇದನ್ನು 'ವ್ಯಾಪ್ತಿಃ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ವಿಶೇಷವಿಚಾರ – 'ಪರ್ವತೋ ವಹ್ನಿಮಾನ್ ಧೂಮಾತ್ ಮಹಾನಸವತ್' ಎಂಬ ಅನುಮಾನದಲ್ಲಿ ಧೂಮವು ಹೇತುವಾಗಿದೆ. ಇದರಲ್ಲಿ ಪಕ್ಷವೃತ್ತಿತ್ವವಿದೆ. ಸಪಕ್ಷೇ ಸತ್ತ್ವವಿದೆ. ವಿಪಕ್ಷಾದ್ ವ್ಯಾವೃತ್ತಿತ್ವ





ಇದೆ. ಅಬಾಧಿತವಿಷಯತ್ವವಿದೆ. ಅಸತ್ಪ್ರತಿಪಕ್ಷತ್ವವೂ ಇದೆ. ಆದ್ದರಿಂದ ಅನ್ವಯವ್ಯತಿರೇಕೀ ಅನುಮಾನವೆಂದು ಇದು ಕರೆಸಿಕೊಳ್ಳುತ್ತದೆ. 'ಯತ್ ಧೂಮವತ್ ತತ್ ವಹ್ನಿಮತ್' ಎಂಬ ಅನ್ವಯವ್ಯಾಪ್ತಿಯನ್ನು ಹೇಳಬಹುದು. ಯತ್ ವಹ್ನಿಮತ್ ನ ಭವತಿ, ತತ್ ಧೂಮವತ್ ನ ಭವತಿ ಎಂಬುದಾಗಿ ವ್ಯತಿರೇಕವ್ಯಾಪ್ತಿಯನ್ನೂ ಹೇಳಬಹುದು. ಆದ್ದರಿಂದ ಅನ್ವಯವ್ಯತಿರೇಕಿಯಾದ ಪಂಚರೂಪೀ ಅನುಮಾನ ಎಂದು ಇದು ಕರೆಸಿಕೊಳ್ಳುತ್ತದೆ. ಇದರಂತೆ ಶ್ರೀಮದಾಚಾರ್ಯರೂ ಕೂಡ ಪಂಚಾಂಗಗಳಿಂದ ಕೂಡಿದ ಅನ್ವಯವ್ಯತಿರೇಕೀ ಅನುಮಾನದಂತೆ ಇದ್ದಾರೆಂದು ಈ ಶ್ಲೋಕದಲ್ಲಿ ವರ್ಣಿಸಿದ್ದಾರೆ.

ವಿಚಾರ ಮಾಡಿದರೆ ಪಂಚಾಂಗಗಳಿಂದ ಕೂಡಿದ ಶುದ್ಧವಾದ ಯಾವುದೇ ದೋಷಗಳಿಲ್ಲದ ಅನುಮಾನವೊಂದನ್ನು ಹೇಳಲು ಸಾಧ್ಯವೇ ಇಲ್ಲ. ಅಂತಹ ಅನುಮಾನರೂಪದ ಪ್ರಮಾಣವನ್ನು ಹೇಳಬೇಕೆಂದರೆ ಅದು ಶ್ರೀಮದಾಚಾರ್ಯರು ಮಾತ್ರ . ಏಕೆಂದರೆ ಪರ್ವತೋ ವಹ್ನಿಮಾನ್ ಧೂಮಾತ್ ಎಂಬ ಅನುಮಾನದ ಸಾದೃಶ್ಯವನ್ನು ಶ್ರೀಮಧ್ವಾಚಾರ್ಯರಿಗೆ ಹೇಳಲಾಗದು. ಏಕೆಂದರೆ, ಪ್ರಸಿದ್ಧ ಧೂಮ -ರೂಪವಾದ ಅನುಮಾನವು ಪರ್ವತದಲ್ಲಿ ವಹ್ನಿಯನ್ನು ಸಾಧನ ಮಾಡುವಾಗ ನಿರ್ದುಷ್ಟವಾಗಿರುವುದು. ಆದರೆ ಹ್ರದ ಹಾಗೂ ಪರ್ವತ ಎರಡನ್ನೂ ಪಕ್ಷಮಾಡಿ ವಹ್ನಿಯನ್ನು ಸಾಧನೆ ಮಾಡುವಾಗ ಧೂಮರೂಪ ಅನುಮಾನಕ್ಕೆ ಪಕ್ಷದಲ್ಲಿ ವ್ಯಾಪ್ಯಾಸ್ಥಿತಿಯು ಇರುವುದಿಲ್ಲ. ಕೇವಲ ಹ್ರದವನ್ನು ಪಕ್ಷಮಾಡಿದಾಗ ಧೂಮಕ್ಕೆ ಪಕ್ಷದಲ್ಲಿ ಸ್ಥಿತಿಯೇ ಇರುವುದಿಲ್ಲ. ಹ್ರದವನ್ನು ಮಹಾನಸದ ಬದಲಾಗಿ ದೃಷ್ಟಾಂತ ಮಾಡಿದಾಗ ಧೂಮಕ್ಕೆ ಸಪಕ್ಷದಲ್ಲಿ ಸ್ಥಿತಿಯು ಇರುವುದಿಲ್ಲ. ಹ್ರದದಲ್ಲಿ ವಹ್ನ್ಯಭಾವಸಾಧನ ಮಾಡುವುದಕ್ಕಾಗಿ ಧೂಮರೂಪವಾದ ಹೇತುವನ್ನು ಉಪಯೋಗಿಸಿದರೆ ಧೂಮಕ್ಕೆ ಬಾಧಿತವಿಷಯದಲ್ಲಿ ಸತ್ತ್ವಯು (ಸಂಬಂಧವು) ಬರುವುದು. ಪರ್ವತದಲ್ಲಿ ಸ್ಥಾಲ್ಯಾದಿಗಳನ್ನು ಸಾಧನೆ ಮಾಡುವುದಕ್ಕಾಗಿ ಧೂಮರೂಪವಾದ ಹೇತುವನ್ನು ಹೇಳಿದರೆ ಪಾಷಾಣತ್ವಾದಿ ರೂಪವಾದ ಪ್ರತಿಪಕ್ಷಾನುಮಾನದ ಸಂಬಂಧವು ಬರುವುದು. ಹೀಗೆ ಸಮೀಚೀನವೆಂದು ಪ್ರಸಿದ್ಧವಾದ ಧೂಮರೂಪವಾದ ಯುಕ್ತಿಗೂ ಕೂಡ ಸಂದರ್ಭ -ವಿಶೇಷಗಳಲ್ಲಿ ಅಸಮೀಚೀನತ್ವವು ಬರುವುದು. ಆದರೆ ಶ್ರೀಮದಾಚಾರ್ಯರಿಗೆ ಎಂದಿಗೂ ಮೇಲೆ ಹೇಳಿದ ಸ್ವಸಿದ್ಧಾಂತದ ಸಾಮಗ್ರ್ಯೇಣ ಜ್ಞಾನರೂಪವಾದ ವ್ಯಾಪ್ತಿಯು ಸ್ವಸಮಾನಸಿದ್ಧಾಂತದಲ್ಲಿ ದಾರ್ಢ್ಯವು ವಿರುದ್ಧಸಿದ್ಧಾಂತದ ಬಗ್ಗೆ ಅಸಮ್ಮತಿಯೂ ನಿಷಿದ್ಧವಿಷಯಗಳಲ್ಲಿ ಅಸ್ನೇಹವು ವಿರೋಧಿಮತ ಸಂಬಂಧಾಭಾವವು ಇಲ್ಲದಿರುವ ಪ್ರಸಂಗವೇ ಇಲ್ಲ. ಏವಕಾರವನ್ನು ಸರ್ವತ್ರ ಅನ್ವಯಮಾಡುವುದರಿಂದ ಇದನ್ನು ಸೂಚಿಸಿದ್ದಾರೆ. ಆದ್ದರಿಂದಲೇ ಶ್ರೀಮದಾಚಾರ್ಯರಿಗೆ ಅತುಲತ್ವವನ್ನು ಅಸದೃಶಪ್ರಮಾಣತ್ವವನ್ನು ಹೇಳಿದ್ದಾರೆ.





## ಪಕ್ಷವೃತ್ತಿತ್ವಸಮರ್ಥನೆ

ಪರಿಮಳ– ನಿಜೇ = ಭಕ್ತವರ್ಗಾಖ್ಯೇ ಪಕ್ಷೇ । ಭಕ್ತವರ್ಗಸ್ಯ ವಿಷ್ಣೂತ್ಕರ್ಷಾದಿಜ್ಞಾನಂ ವಾ ತತ್ವಜ್ಞಾನಮಿತಿ ತತ್ವಜ್ಞಾನಗೋಚರಸಂದೇಹವತ್ವೇನ ವಿಷ್ಣೂತ್ಕರ್ಷಾದಿಜ್ಞಾನಮೇವ ತತ್ವಜ್ಞಾನಂ ನಾನ್ಯತ್ ಇತ್ಯೇವಂ ತತ್ವನಿರ್ಣಯರೂಪಪ್ರಮಾಣಫಲಸ್ಯ ತಸ್ಮಿನ್ ಸಿಷಾಧಯಿಷಿತತ್ವೇನ ತಸ್ಯ ಪಕ್ಷತ್ವಾತ್ । ಸ್ವಮಾಹಾತ್ಮ್ಯಸ್ಯ ತತ್ರ ಪ್ರಕಟಿತತ್ವೇನ ತೈರವಗತಮಾಹಾತ್ಮ್ಯತ್ವಾತ್ ತತ್ರ ಸಾನ್ನಿಧ್ಯವಿಶೇಷಾದ್ ವಾ ನಿಜೇನ ಮಹಸಾಂ ತಂ ವ್ಯಾಪ್ನೋತೀತಿ ವ್ಯಾಪ್ತಿಪದೇನ ಪಕ್ಷೇ ಸರ್ವತ್ರ ವೃತ್ತಿರುಕ್ತಾ ।

'ನಿಜೇ ಪಕ್ಷೇ' ಎಂದರೆ ಭಕ್ತವರ್ಗವೆಂಬ ಪಕ್ಷದಲ್ಲಿ ಎಂದರ್ಥ. ವಿಷ್ಣುಸರ್ವೋತ್ತಮತ್ವಜ್ಞಾನವು ತತ್ವಜ್ಞಾನವೋ ಜೀವಬ್ರಹ್ಮೈಕ್ಯವು ತತ್ವಜ್ಞಾನವೋ? ಎಂದು ಸಂದೇಹವನ್ನು ಪರಿಹರಿಸಿ ವಿಷ್ಣುಸರ್ವೋತ್ತಮತ್ವಜ್ಞಾನವೇ ತತ್ವಜ್ಞಾನವಾಗಿದೆ. ಬೇರೆಯದ್ದು ತತ್ವಜ್ಞಾನವಲ್ಲ ಎಂಬ ತತ್ವನಿರ್ಣಯರೂಪವಾದ ಪ್ರಮಾಣದ ಫಲವನ್ನು ಭಕ್ತವರ್ಗದಲ್ಲಿ ಸಾಧಿಸಬೇಕಾಗಿದೆ. ಆದ್ದರಿಂದ ಭಕ್ತವರ್ಗವು ಪಕ್ಷ ಎನಿಸುತ್ತದೆ. ಶ್ರೀಮದಾನಂದತೀರ್ಥರು ಭಕ್ತರನ್ನು ಅನುಗ್ರಹಿಸುವ ಇಚ್ಛೆಯಿಂದ ತಮ್ಮ ಮಾಹಾತ್ಮ್ಯೆಯನ್ನು ಪ್ರಕಟಗೊಳಿಸಿದ್ದಾರೆ. ಅಥವಾ ಭಕ್ತವರ್ಗದಲ್ಲಿ ವಿಶೇಷವಾಗಿ ಸನ್ನಿಹಿತರಾಗಿದ್ದಾರೆ. ಆದ್ದರಿಂದ ತಮ್ಮ ಪ್ರಭಾವದಿಂದ ಎಲ್ಲಾ ಭಕ್ತವರ್ಗವೆಂಬ ಪಕ್ಷಗಳಲ್ಲಿ ಇರುತ್ತಾರೆ. ಹೀಗೆ ಸರ್ವಪಕ್ಷವೃತ್ತಿತ್ವವು ಪ್ರಾಪ್ತವಾಗುತ್ತದೆ.

ವಿಶೇಷವಿಚಾರ – ಪ್ರತ್ಯಕ್ಷ, ಯುಕ್ತಿ ಅಥವಾ ಅನುಮಾನ ಹಾಗೂ ಆಗಮ ಎಂದು ಪ್ರಮಾಣವು ಮೂರುವಿಧವಾಗಿದೆ. ಅನುಮಾನವು ಅನ್ವಯವ್ಯಾಪ್ತಿಯುಳ್ಳದ್ದು, ವ್ಯತಿರೇಕವ್ಯಾಪ್ತಿಯುಳ್ಳದ್ದು, ಅನ್ವಯ -ವ್ಯತಿರೇಕವ್ಯಾಪ್ತಿಯುಳ್ಳದ್ದು ಎಂದು ಮೂರು ವಿಧವಾಗಿದೆ. ಪ್ರಕೃತದಲ್ಲಿ ಅನ್ವಯವ್ಯತಿರೇಕವ್ಯಾಪ್ತಿಯುಳ್ಳ ಅನುಮಾನಪ್ರಮಾಣರಾಗಿದ್ದಾರೆ ಶ್ರೀಮದಾನಂದತೀರ್ಥರು ಎಂದು ವರ್ಣಿಸುತ್ತಾರೆ.

ಈ ಶ್ಲೋಕದಿಂದ ತಿಳಿದುಬರುವ ಅನುಮಾನವು ಹೀಗಿದೆ – 'ಭಕ್ತವರ್ಗಃ ವಿಷ್ಣುಸರ್ವೋತ್ತಮತ್ವಜ್ಞಾನರೂಪತತ್ವನಿರ್ಣಯವಾನ್, ಅನುಗ್ರಾಹ್ಯತ್ವ-ಅನುಗ್ರಾಹಕತ್ವ ಏತದನ್ಯತರಸಂಬಂಧೇನ ಶ್ರೀಮದಾನಂದತೀರ್ಥವತ್ವಾತ್, ಶ್ರೀಹರಿವತ್'





ಭಕ್ತವರ್ಗ ಎಂಬುದು ಪಕ್ಷ. 'ವಿಷ್ಣುಸರ್ವೋತ್ತಮತ್ವರೂಪತತ್ವನಿರ್ಣಯವುಳ್ಳದ್ದು' ಎಂಬುದು ಸಾಧ್ಯ. 'ಅನುಗ್ರಾಹ್ಯತ್ವ ಅನುಗ್ರಾಹಕತ್ವ ಈ ಎರಡರಲ್ಲಿ ಯಾವುದಾದರೂ ಒಂದು ಸಂಬಂಧದಿಂದ ಶ್ರೀಮದಾನಂದತೀರ್ಥರನ್ನು ಹೊಂದಿರುವುದರಿಂದ' ಎಂಬುದು ಹೇತು. 'ಶ್ರೀಹರಿಯಂತೆ' ಎಂಬುದು ದೃಷ್ಟಾಂತ.

೧. ಎಲ್ಲಾ ಪಕ್ಷಗಳಲ್ಲಿ ಇರುವುದು, ೨. ಸಪಕ್ಷದಲ್ಲಿ ಇರುವುದು, ೩. ವಿಪಕ್ಷದಲ್ಲಿ ಇಲ್ಲದಿರುವುದು, ೪. ಪ್ರಮಾಣದಿಂದ ಅಬಾಧಿತವಾದುದನ್ನು ವಿಷಯೀಕರಿಸುವುದು, ೫. ಪ್ರತಿಪಕ್ಷಯುಕ್ತಿಯಿಂದ ರಹಿತವಾಗಿರುವುದು, ಈ ಐದು ಧರ್ಮಗಳು ಅನ್ವಯವ್ಯತಿರೇಕಿಅನುಮಾನದ ಲಕ್ಷಣಗಳು. ಶ್ರೀಮದಾನಂದತೀರ್ಥರಲ್ಲಿ ಈ ಐದೂ ಅಂಗಗಳಿವೆ.

೧. 'ಎಲ್ಲಾ ಪಕ್ಷಗಳಲ್ಲಿ ಇರುವುದು' ಎಂಬುದನ್ನು 'ನಿಜೇ ಪಕ್ಷೇ ನಿಜೇನ ಮಹಸಾ ವ್ಯಾಪ್ತಿಃ' ಎಂಬುದಾಗಿ ಸ್ಪಷ್ಟಪಡಿಸುತ್ತಾರೆ. ಪಕ್ಷವೆಂದರೆ 'ಯಾವ ಧರ್ಮವನ್ನು ಸಾಧಿಸಬೇಕಾಗಿದೆಯೋ ಅಂತಹ ಧರ್ಮವುಳ್ಳ ಧರ್ಮಿ'. ಹಿಂದೆ ತಿಳಿಸಿದಂತೆ ಭಕ್ತವರ್ಗವು ಈ ಅನುಮಾನದ ಪಕ್ಷವಾಗಿದೆ. ವಿಷ್ಣುಸರ್ವೋತ್ತಮತ್ವಜ್ಞಾನವು ತತ್ವಜ್ಞಾನವೋ? ಅಥವಾ ಜೀವಬ್ರಹ್ಮೈಕ್ಯ ಮುಂತಾದವು ತತ್ವಜ್ಞಾನವೋ? ಎಂಬ ಸಂದೇಹವನ್ನು ನಿವಾರಿಸಿ ವಿಷ್ಣುಸರ್ವೋತ್ತಮತ್ವಜ್ಞಾನವೇ ತತ್ವಜ್ಞಾನ ಬೇರೆಯದಲ್ಲ ಎಂದು ತತ್ವನಿರ್ಣಯರೂಪ ಸಾಧ್ಯವನ್ನು ಭಕ್ತವರ್ಗದಲ್ಲಿ ಇದೆ ಎಂದು ಸಾಧಿಸಬೇಕಾಗಿದೆ. ಆದ್ದರಿಂದ ಅದು ಪಕ್ಷವಾಗಿದೆ. ಆ ಭಕ್ತವರ್ಗವೆಂಬ ಪಕ್ಷದಲ್ಲಿ 'ಶ್ರೀಮದಾನಂದತೀರ್ಥವತ್ತ್ವ' ಎಂಬ ಹೇತು ಅನುಗ್ರಾಹಕತ್ವಸಂಬಂಧದಿಂದ ಇದೆ. ಅಂದರೆ ಶ್ರೀಮದಾನಂದತೀರ್ಥರು ಭಕ್ತವರ್ಗವನ್ನು ಅನುಗ್ರಹಿಸುವ ಇಚ್ಛೆಯಿಂದ ತಮ್ಮ ಮಾಹಾತ್ಮ್ಯವನ್ನು ಪ್ರಕಟಗೊಳಿಸಿದ್ದಾರೆ. ಅಥವಾ ಭಕ್ತವರ್ಗದಲ್ಲಿ ಶ್ರೀಮದಾನಂದತೀರ್ಥರು ಸನ್ನಿಹಿತರಾಗಿರುವರು. ಆದ್ದರಿಂದ ಶ್ರೀಮದಾನಂದತೀರ್ಥರಲ್ಲಿ 'ಸರ್ವಪಕ್ಷವೃತ್ತಿತ್ವವು' ಇದೆ. ಅಂದರೆ ಎಲ್ಲಾ ಸದ್ಭಕ್ತರೆಂಬ ಪಕ್ಷಗಳಲ್ಲಿ ಇರುವಿಕೆಯೆಂಬ ಅಂಗ ಸಿದ್ಧವಾಯಿತು.

## ಸಪಕ್ಷೇ ಸ್ಥಿತತ್ವದ ಸಮರ್ಥನೆ

ಪರಿಮಳ– ವ್ಯಾವೃತ್ತಂ ಯದ್ವಿಪಕ್ಷೇಭ್ಯಃ ಸಪಕ್ಷೇ ಚ ಕೃತಾನ್ವಯಿ ।
ವ್ಯಾಪ್ತ್ಯಾ ಪಕ್ಷೇ ವರ್ತಮಾನಮನ್ವಯವ್ಯತಿರೇಕಿ ತತ್ ॥

ಇತ್ಯುಕ್ತೇಃ । ಸಪಕ್ಷೇ ಹರೌ 'ಇದಮದೋ ವಾ' ಇತಿ ಸಂದೇಹಾನ್ ಆಸ್ಕಂದಿತಾ-

ನುಪಚರಿತತತ್ವನಿರ್ಣಯವತಿ । ಸ್ಥಿತಿಃ ನಿಷ್ಠಾ ನ ತು ತತ್ರ ವ್ಯಾಪ್ತಿಃ । ಹರಿವಿಷಯೇ ಕೃತ್ಸ್ನ-ವಿಷಯತ್ವಾತ್ । ಈಶಾದನ್ಯತ್ರೈವ ಆಲೋಚನೇ ಸರ್ವವಿಷಯಕತ್ವಾತ್ ಇತಿ ಭಾವಃ ।

ವ್ಯಾವೃತ್ತಂ ಯದ್ವಿಪಕ್ಷೇಭ್ಯಃ ಸಪಕ್ಷೇ ಚ ಕೃತಾನ್ವಯಿ ।
ವ್ಯಾಪ್ಯಾ ಪಕ್ಷೇ ವರ್ತಮಾನಮನ್ವಯವ್ಯತಿರೇಕಿ ತತ್ ॥

ವಿಪಕ್ಷದಿಂದ ವ್ಯಾವೃತ್ತವಾಗಿರಬೇಕು ಸಪಕ್ಷದಲ್ಲಿ ಅನ್ವಯವ್ಯಾಪ್ತಿ ಉಳ್ಳದ್ದಾಗಿರಬೇಕು; ಸರ್ವಪಕ್ಷದಲ್ಲಿ ವೃತ್ತಿಯಾಗಿರಬೇಕು. ಇದು ಅನ್ವಯವ್ಯತಿರೇಕಿ ಅನುಮಾನ ಎಂದು ಕರೆಸಿ-ಕೊಳ್ಳುತ್ತದೆ. ಈ ಪ್ರಮಾಣದಂತೆ ಪ್ರಕೃತ ಅನ್ವಯವ್ಯತಿರೇಕಅನುಮಾನದ ಪಂಚಾಂಗಗಳನ್ನು ತೋರಿಸಲಾಗಿದೆ. ಶ್ರೀಮದಾಚಾರ್ಯರಲ್ಲಿ ಹೇಗೆ ಪಕ್ಷವೃತ್ತಿತ್ವವಿದೆಯೋ ಅದರಂತೆ 'ಸಪಕ್ಷೇ ಸ್ಥಿತತ್ವ'ವೆಂಬ ಮತ್ತೊಂದು ಅನುಮಾನದ ಅಂಗವೂ ಇರುತ್ತದೆ. ಸಪಕ್ಷನಾದ ಶ್ರೀಹರಿಯಲ್ಲಿ ಇದೋ, ಅದೋ ಇತ್ಯಾದಿ ಸಂದೇಹದ ಲೇಶವೂ ಇಲ್ಲದ ಅನುಪಚರಿತವಾದ ತತ್ವನಿರ್ಣಯ-ವನ್ನು ಹೊಂದಿದ್ದಾರೆ. 'ಸ್ಥಿತಿ' ಶಬ್ದಕ್ಕೆ ಇರುವುದು ಎಂದರ್ಥ; ವ್ಯಾಪ್ತವಾಗಿರುವುದು ಎಂದಲ್ಲ. ಏಕೆಂದರೆ ಶ್ರೀಹರಿಯ ವಿಷಯದಲ್ಲಿ ಸಂಪೂರ್ಣವಾದ ಅರಿವು ಮಧ್ವಾಚಾರ್ಯರಿಗೆ ಇರುವು-ದಿಲ್ಲ. ಏಕೆಂದರೆ ಈಶಾದನ್ಯತ್ರೈವ ಆಲೋಚನೆ ಮಾಡಿದಾಗ ಸರ್ವವಿಷಯಕಜ್ಞಾನ ಇವರಿಗೆ ಇರುತ್ತದೆ.

ವಿಶೇಷವಿಚಾರ – 'ಸಪಕ್ಷದಲ್ಲಿ ಇರುವುದು' ಎಂಬುದನ್ನು 'ಸಪಕ್ಷೇ ಸ್ಥಿತಿಃ' ಎಂದು ತಿಳಿಸಿದ್ದಾರೆ. 'ಸಪಕ್ಷ' ಎಂದರೆ ಪಕ್ಷದಲ್ಲಿರುವ ಸಾಧ್ಯಕ್ಕೆ ಸಮಾನವಾದ ಧರ್ಮವು ಎಲ್ಲಿ ನಿಶ್ಚಯಿಸಲ್ಪಟ್ಟಿದೆಯೋ ಅದು. ದೃಷ್ಟಾಂತವೂ ಒಂದು ಸಪಕ್ಷ. ಹಿಂದೆ ತಿಳಿಸಿದಂತೆ ಈ ಅನುಮಾನದ ದೃಷ್ಟಾಂತ ಶ್ರೀಹರಿ. ಸರ್ವಜ್ಞನಾದ ಶ್ರೀಹರಿಗೆ ತತ್ವನಿರ್ಣಯವಿದೆ ಎಂದು ಸಿದ್ಧವಾಗಿರುವುದರಿಂದ; 'ವಿಷ್ಣುಸರ್ವೋತ್ತಮತ್ವಜ್ಞಾನರೂಪತತ್ವ-ನಿರ್ಣಯವತ್ತ್ವ' ಎಂಬ ಸಾಧ್ಯವು ಶ್ರೀಹರಿಯಲ್ಲಿ ನಿಶ್ಚಿತವಾಗಿದೆ. ಆ ಶ್ರೀಹರಿಯಲ್ಲಿ ಅನುಗ್ರಾಹ್ಯತ್ವ-ಸಂಬಂಧದಿಂದ ಶ್ರೀಮದಾನಂದತೀರ್ಥವತ್ತ್ವವೆಂಬ ಹೇತುವಿದೆ. ಅಂದರೆ ಶ್ರೀಮದಾನಂದತೀರ್ಥರು ಶ್ರೀಹರಿಯ ಅನುಗ್ರಹದಿಂದಲೇ ಶ್ರೀಹರಿಯ ಬಗ್ಗೆ ಯಥಾಶಕ್ತಿ ತಿಳಿದು ಅವನಲ್ಲೇ ಅನನ್ಯಭಾವದಿಂದ ನಿರಂತರ ಆಸಕ್ತರಾಗಿರುವರು. ಹೀಗೆ ಸಪಕ್ಷನಾದ ಶ್ರೀಹರಿಯಲ್ಲಿ ಶ್ರೀಮದಾನಂದತೀರ್ಥರಿಗೆ ನಿರಂತರ ನಿಷ್ಠೆಯಿರುವುದರಿಂದ 'ಸಪಕ್ಷೇ ಸ್ಥಿತತ್ವ' ಎಂಬ ಅಂಗವೂ ಸಿದ್ಧವಾಯಿತು.

'ಈಶ್ವರಾದನ್ಯತ್ರ ಆಲೋಚನೇ ಸರ್ವವಿಷಯಕಂ ಜ್ಞಾನಂ ಋಜುಯೋಗಿಜ್ಞಾನಂ' – ಋಜು-ಯೋಗಿಗಳಾದ ಶ್ರೀಮಧ್ವಾಚಾರ್ಯರಿಗೆ ಭಗವಂತನ ವಿಷಯದಲ್ಲಿ ಪರಿಪೂರ್ಣವಾದ ಜ್ಞಾನವಿರು-ವುದಿಲ್ಲ. ಲೋಕದ ವಿಷಯದಲ್ಲಿ ಆಲೋಚನೆ ಮಾಡಿದಾಗ ಮಾತ್ರ ಸರ್ವವಿಷಯಕಜ್ಞಾನವು ಇರುತ್ತದೆ. ಆದ್ದರಿಂದ ಸಪಕ್ಷನಾಗಿರುವಂತಹ ಶ್ರೀಹರಿಯಲ್ಲಿ ಇವರು ಸ್ಥಿತರಾಗಿದ್ದಾರೆಂದರೆ ದೃಢವಾಗಿ ಅವನನ್ನೇ ನಂಬಿದ್ದಾರೆ ಎಂದಷ್ಟೇ ಅರ್ಥ. ಪರಿಪೂರ್ಣವಾಗಿ ತಿಳಿದಿದ್ದಾರೆ ಎಂಬರ್ಥವನ್ನು ವಿವಕ್ಷಿಸಬಾರದು. ಹೀಗೆ ಸಪಕ್ಷೇ ಸ್ಥಿತತ್ವ ಎಂಬ ಅನುಮಾನದ ಅಂಗವು ಶ್ರೀಮಧ್ವಾಚಾರ್ಯರಲ್ಲಿ ಪ್ರಾಪ್ತವಾಯಿತು.

## ವಿಪಕ್ಷಾತ್ ವ್ಯಾವೃತ್ತಿತ್ವ ಸಮರ್ಥನೆ

ಪರಿಮಳ– ವಿಪಕ್ಷತಃ ಉಕ್ತರೂಪತತ್ವನಿರ್ಣಯಹೀನಾಯೋಗ್ಯಜನೇಭ್ಯಃ ವ್ಯಾವೃತ್ತಿಃ ಉಪದೇಶಾದೌ ಅಪ್ರವೃತ್ತಿಃ । ಬಾಧಿತೇ ನಿಷಿದ್ಧೇ ವಿಷಯೇ ಸಕ್ತಿಃ ಸಂಗೋ ನೈವಾಸ್ತಿ ಇತಿ ಅವಧಾರಣೇ ಪ್ರಸಿದ್ಧಿದ್ಯೋತಕೋ ವಾ ವೈಶಬ್ದಃ ಭ್ರಾಂತಿಶೂನ್ಯ ಇತಿ ವಾರ್ಥಃ । ಋಜು-ಜ್ಞಾನಸ್ಯ ಯಥಾರ್ಥೈಕಸ್ವಭಾವತ್ವಾತ್ ।

ವಿಪಕ್ಷರೆನಿಸಿದ ತತ್ವನಿರ್ಣಯರಹಿತರಾದ ಅಯೋಗ್ಯಜನರಿಗೆ ಉಪದೇಶಾದಿಗಳನ್ನು ಮಾಡುವುದರಲ್ಲಿ ಶ್ರೀಮಧ್ವಾಚಾರ್ಯರು ಪ್ರವೃತ್ತಿ ಮಾಡುವುದಿಲ್ಲ. ಮತ್ತು ಬಾಧಿತವಾದ ನಿಷಿದ್ಧವಿಷಯಗಳಲ್ಲಿ ಆಸಕ್ತಿಯನ್ನು ತೋರುವುದಿಲ್ಲ. 'ನೈವ' ಇತ್ಯಾದಿ ಸ್ಥಳಗಳಲ್ಲಿರುವ ಅವ-ಧಾರಣವು ಪ್ರಸಿದ್ಧಿಗೆ ದ್ಯೋತಕವಾಗಿದೆ. ಅಥವಾ ಭ್ರಾಂತಿಶೂನ್ಯರಾಗಿದ್ದಾರೆ ಎಂಬರ್ಥವನ್ನೂ ಹೇಳಬಹುದು. ಏಕೆಂದರೆ ಋಜುಜ್ಞಾನವು ಯಥಾರ್ಥೈಕಸ್ವಭಾವವಾಗಿದೆ.

ವಿಶೇಷವಿಚಾರ – ತತ್ವನಿರ್ಣಯಕ್ಕೆ ಅಯೋಗ್ಯರಾದ ಜನರು ವಿಪಕ್ಷರೆನಿಸಿದ್ದಾರೆ. ವಿಪಕ್ಷದಲ್ಲಿ ಶ್ರೀಮದಾಚಾರ್ಯರು ಸರ್ವಥಾ ಇರುವುದಿಲ್ಲ. ಅವರಿಗೆ ಯಾವುದೇ ರೀತಿಯಲ್ಲಿ ಉಪದೇಶಾದಿಗಳನ್ನು ಮಾಡುವುದಿಲ್ಲ. ಮತ್ತು ಅವರ ಸಂಪರ್ಕವನ್ನು ಕೂಡ ಮಾಡಲು ಬಯಸುವುದಿಲ್ಲ. ಶ್ರೀಮಧ್ವಾ-ಚಾರ್ಯರ ಇಂದ್ರಿಯಗಳು ನಿಷಿದ್ಧವಿಷಯದಲ್ಲಿ ಆಸಕ್ತವೂ ಆಗುವುದಿಲ್ಲ. ಆದ್ದರಿಂದ ವಿಪಕ್ಷಾದ್ ವ್ಯಾವೃತತ್ವ ಎಂಬ ಅಂಗವೂ ಇದೆ. ಅಬಾಧಿತತ್ವ ಎಂಬ ಮತ್ತೊಂದು ಅಂಗವೂ ಕೂಡ ಶ್ರೀಮದಾ-ಚಾರ್ಯರಲ್ಲಿದೆ.

## ಅಸತ್ಪ್ರತಿಪಕ್ಷಿತತ್ವದ ಸಮರ್ಥನೆ

ಪರಿಮಳ– ಪ್ರತಿಪಕ್ಷಯುಕ್ತಿಃ = ಪ್ರತಿವಾದಿಯೋಗಃ । ಸ ನೈವ ಪ್ರತಿಭಟಶೂನ್ಯಃ - ಇತ್ಯರ್ಥಃ। 'ವೇದಭಾರತಬೌದ್ಧಾದಿಗ್ರಂಥಾಃ ಪಕ್ಷಸಪಕ್ಷವಿಪಕ್ಷಾಃ' ಇತ್ಯೇಕೇ ॥

ಪ್ರತಿಪಕ್ಷಯುಕ್ತಿಃ ನೈವ = ಪ್ರತಿಭಟರ ಸಂಬಂಧವು ಕೂಡ ಸರ್ವಥಾ ಇರುವುದಿಲ್ಲ. ಕೆಲವರು ವೇದವನ್ನು ಪಕ್ಷವೆನ್ನುತ್ತಾರೆ. ಮಹಾಭಾರತವನ್ನು ಸಪಕ್ಷವೆನ್ನುತ್ತಾರೆ. ಬೌದ್ಧಾದಿಗ್ರಂಥಗಳನ್ನು ವಿಪಕ್ಷವೆನ್ನುತ್ತಾರೆ.

ವಿಶೇಷವಿಚಾರ – 'ವೇದಾದಿಶಾಸ್ತ್ರಂ ಸ್ವನಿಷ್ಠಪ್ರತಿಪಾದ್ಯತಾನಿರೂಪಕತ್ವಸಂಬಂಧೇನ ಹರಿಮತ್ ಸ್ವನಿಷ್ಠಸಮರ್ಥಕತಾನಿರೂಪಕತ್ವ ಸಂಬಂಧೇನ ಆನಂದತೀರ್ಥವತ್ವಾತ್ ಪಂಚರಾತ್ರಾದಿಸದಾಗಮವತ್' ಶ್ರೀಮದಾಚಾರ್ಯರು ಯಾವ ಗ್ರಂಥವನ್ನು ಸಮರ್ಥನೆ ಮಾಡುವವರೋ ಆ ಗ್ರಂಥವು ವಿಷ್ಣುಪ್ರತಿಪಾದಕವಾಗಿರುತ್ತದೆ ಎಂದು ಈ ಅನುಮಾನದ ಭಾವವು. ಇಲ್ಲಿ ದುರಾಗಮಗಳೇ ವಿಪಕ್ಷಗಳು. ಅವುಗಳನ್ನು ಆನಂದತೀರ್ಥರು ಸಮರ್ಥನೆ ಮಾಡದೇ ಇರುವುದರಿಂದ ಸ್ವನಿಷ್ಠ ಸಮರ್ಥಕತಾ ನಿರೂಪಕತ್ವಸಂಬಂಧೇನ ಆನಂದತೀರ್ಥವತ್ವವು ಅವುಗಳಲ್ಲಿ ಬರುವುದಿಲ್ಲ. ಆದ್ದರಿಂದ ವ್ಯಭಿಚಾರಾದಿ ದೋಷಗಳು ಇಲ್ಲ.

'ವಿಪಕ್ಷದಲ್ಲಿ ಇಲ್ಲದಿರುವುದು' ಎಂಬುದನ್ನು 'ವಿಪಕ್ಷತಃ ವ್ಯಾವೃತ್ತಿಃ' ಎಂದು ತಿಳಿಸುತ್ತಾರೆ. 'ವಿಪಕ್ಷ' ಅಂದರೆ ಸಾಧ್ಯಕ್ಕೆ ವಿರುದ್ಧವಾದ ಧರ್ಮ ಅಂದರೆ ಸಾಧ್ಯಾಭಾವ ಎಲ್ಲಿ ನಿಶ್ಚಯವಾಗಿರುತ್ತದೋ ಅದು. ತತ್ವನಿರ್ಣಯಹೀನರಾದ ಅಯೋಗ್ಯಜನರೇ ಈ ಅನುಮಾನದ ವಿಪಕ್ಷ. ಆ ಅಸಜ್ಜನರಲ್ಲಿ ವಿಷ್ಣುಸರ್ವೋತ್ತಮತ್ವಜ್ಞಾನವೇ ತತ್ವಜ್ಞಾನ. ಬೇರೆಯದಲ್ಲ ಎಂಬ ತತ್ವನಿರ್ಣಯರೂಪಸಾಧ್ಯವು ಇಲ್ಲ. ಅಲ್ಲಿ 'ಶ್ರೀಮದಾನಂದತೀರ್ಥವತ್ವ' ಎಂಬ ಹೇತುವೂ ಇಲ್ಲ. ತತ್ವಜ್ಞಾನಕ್ಕೆ ಅನರ್ಹರಾದವರಿಗೆ ಶ್ರೀಮದಾಚಾರ್ಯರು ಎಂದೂ ಉಪದೇಶಿಸುವುದಿಲ್ಲ ಎಂದು ಅಭಿಪ್ರಾಯ. ಹೀಗೆ 'ವಿಪಕ್ಷಗಳಲ್ಲಿ ಇಲ್ಲದಿರುವುದು' ಎಂಬ ಅಂಗವೂ ಸಿದ್ಧವಾಯಿತು.

'ಪ್ರಮಾಣಬಾಧಿತವಾದುದನ್ನು ವಿಷಯೀಕರಿಸುವುದು' ಎಂಬುದನ್ನು 'ಸಕ್ತಿರ್ನ ವೈ ಬಾಧಿತೇ' ಎಂದು ತಿಳಿಸಿದ್ದಾರೆ. ಪ್ರಮಾಣದಿಂದ ಬಾಧಿತವಾದ (ನಿಷಿದ್ಧವಾದ) ವಿಷಯದಲ್ಲಿ ಶ್ರೀಮದಾನಂದತೀರ್ಥರೆಂದೂ ಪ್ರವೃತ್ತಿಯನ್ನೇ ಮಾಡುವುದಿಲ್ಲ. ಮೋಕ್ಷದ ಅಪೇಕ್ಷೆಯೂ ಇಲ್ಲದೇ ಶ್ರೀಹರಿಯನ್ನೇ





ಪರಮಪುರುಷಾರ್ಥವನ್ನಾಗಿ ನಿರಂತರ ಸಂಬಿದ್ದರಿಂದ ಏಕಾಂತಭಕ್ತರಲ್ಲಿ ಅಗ್ರಗಣ್ಯರೆಂದು ಪ್ರಖ್ಯಾತರಾದ ಶ್ರೀಮದಾನಂದತೀರ್ಥರು ನಿಷಿದ್ಧ ವಿಷಯದಲ್ಲೆಂದೂ ಪ್ರವೃತ್ತಿಯನ್ನೇ ಮಾಡುವುದಿಲ್ಲ. ಅಥವಾ ಪ್ರಮಾಣದಿಂದ ಬಾಧಿತವಾದದ್ದು ಭ್ರಾಂತಿ ಎನಿಸುತ್ತದೆ. ಅಂತಹ ಭ್ರಾಂತಿ ಶ್ರೀಮದಾನಂದತೀರ್ಥರಿಗೆ ಎಂದೂ ಇಲ್ಲ. ಏಕೆಂದರೆ ಅವರು ಋಜುಗಣದಲ್ಲಿ ಸೇರಿದ ಜೀವೋತ್ತಮರಾದ್ದರಿಂದ ಅವರ ಜ್ಞಾನ ನಿರಂತರ ಯಥಾರ್ಥವೇ ಆದ ಸ್ವಭಾವವುಳ್ಳದ್ದು. ಈ ವಿಷಯದಲ್ಲಿ ದಾರ್ಢ್ಯವನ್ನು ಸ್ಪಷ್ಟಪಡಿಸಲು ಶ್ರೀಜಯತೀರ್ಥರು ವೈಶಬ್ದವನ್ನು ಪ್ರಯೋಗಿಸಿದ್ದಾರೆ. ಹೀಗೆ 'ಅಬಾಧಿತವಿಷಯತ್ವ' ಎಂಬ ಅಂಗವೂ ಸಿದ್ಧವಾಯಿತು.

'ಪ್ರತಿಪಕ್ಷಯುಕ್ತಿಯಿಂದ ರಹಿತವಾದುದು' ಎಂಬ ಅಂಗವನ್ನು 'ನೈವಾಸ್ತಿ ಪ್ರತಿಪಕ್ಷಯುಕ್ತಿಃ' ಎಂದು ಸ್ಪಷ್ಟ ಪಡಿಸುತ್ತಾರೆ. ಶ್ರೀಮದಾನಂದತೀರ್ಥರಲ್ಲೂ 'ಪ್ರತಿಪಕ್ಷಯುಕ್ತಿ' ಅಂದರೆ ಪ್ರತಿವಾದಿಗಳ ಯೋಗ ಇಲ್ಲವೇ ಇಲ್ಲ. ಪ್ರತಿಭಾಂಬುಧಿಗಳಾದ ಅವರಿಗೆ ಎದುರಾಗಿ ನಿಂತು ಅವರ ವಿಷ್ಣುಸರ್ವೋತ್ತಮತ್ವ-ಸಿದ್ಧಾಂತವನ್ನು ನಿರಾಕರಿಸಬಲ್ಲಂತಹ ಪ್ರತಿಭಟರೇ ಇಲ್ಲವೆಂದು ಅಭಿಪ್ರಾಯ. ಹೀಗೆ ಪಂಚಾಂಗಯುಕ್ತ-ರಾದ ಶ್ರೀಮದಾನಂದತೀರ್ಥರೇ ನಿರ್ದುಷ್ಟಪ್ರಮಾಣಭೂತರಾಗಿದ್ದಾರೆಂದು ಸ್ಪಷ್ಟವಾಗುತ್ತದೆ.

ಲೋಕಪ್ರಸಿದ್ಧವಾದ ಧೂಮಾದಿ ಅನುಮಾನದಲ್ಲಿಯೂ ದೋಷವನ್ನು ಹೇಳಬಹುದು. ಆದರೆ ಶ್ರೀಮದಾನಂದತೀರ್ಥರಲ್ಲಿ ದೋಷವನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಅವರು ಇತರ ಅನು-ಮಾನಗಳಿಗಿಂತ ಭಿನ್ನರಾಗಿ ಅಸದೃಶರಾಗಿದ್ದಾರೆ. ಹೀಗೆ ಯುಕ್ತಿರೂಪಕದಿಂದ ಆನಂದತೀರ್ಥರನ್ನು ವರ್ಣಿಸುತ್ತಾ, ಅಂತಹ ವಿಶ್ವಗುರುಗಳಾದ ಶ್ರೀಮದಾನಂದತೀರ್ಥರು ನನಗೆ ತತ್ವನಿರ್ಣಯವನ್ನು ಕರು-ಣಿಸಲಿ ಎಂದು ಶ್ರೀಜಯತೀರ್ಥರು ಪ್ರಾರ್ಥಿಸುತ್ತಾರೆ.

## ಆಚಾರ್ಯರಲ್ಲಿ ಅನುಮಾನದ ಐದು ಮುಖಗಳ ಸಮನ್ವಯ

ಗುರ್ವರ್ಥದೀಪಿಕಾ – ಯಸ್ಯ = ಅನ್ವಯವ್ಯತಿರೇಕ್ಯನುಮಾನೋಪಮಯಾ ಪ್ರಮಾಣತ್ವೇನ ನಿರೂಪಿತಸ್ಯ ಆನಂದತೀರ್ಥಮುನೇಃ । ನಿಜೇ ಪಕ್ಷೇ = ವಿಷ್ಣುಸರ್ವೋತ್ತಮತ್ವಸಗುಣತ್ವಸಾಕಾರತ್ವ-ಜಗತ್ಸತ್ಯತ್ವಾದಿರೂಪಪ್ರಮೇಯೇ । ನಿಜೇನ = ಸ್ವಾಭಾವಿಕೇನ । ಮಹಸಾ ಶ್ರುತಿಸ್ಮೃತ್ಯಾದಿಪ್ರಮಾಣೈಃ ಉಪಪಾದನಸಾಮರ್ಥ್ಯೇನ ಸಹ ವ್ಯಾಪ್ತಿರಸ್ತಿ । ಯಥಾ ಧೂಮಾನುಮಾನಸ್ಯ ನಿಜೇ ಪಕ್ಷೇ ಅಂಶತೋ ಬಾಧಭಾಗಾಸಿದ್ಧ್ಯೋಃ ಪರಿಹಾರಾಯ ನಿಜೇನ ಮಹಸಾ ಸಹ ವ್ಯಾಪ್ತಿರಿತಿ ತಥೇತಿ ಪಕ್ಷ-ಧರ್ಮತ್ವಾಖ್ಯಂ ಪ್ರಥಮಂ ರೂಪಮ್ ಉಪಪಾದಿತಮ್ । ಸಪಕ್ಷೇ ಪ್ರಾಮಾಣಿಕತ್ವೇನ ಸ್ವಪಕ್ಷ-





ಸಮಾನೇ ನಿರ್ಣೀತತ್ವಾತ್ ಸಪಕ್ಷಸ್ಥಾನೀಯೇ ಜ್ಯೋತಿಷ್ಟೋಮಾದೇಃ ಸ್ವರ್ಗಸಾಧನತ್ವಾದೌ ಪ್ರಮೇಯೇ ನಿಜೇನ ಮಹಸಾ ಸಹ ಸ್ಥಿತಿರಸ್ತಿ । ನ ತು ವ್ಯಾಪ್ತಿಃ । ಕದಾಚಿತ್ ಪ್ರಸಂಗವಶಾದ್ ತಮಪ್ಯರ್ಥಂ ಸಾಧಯತಿ ನ ತು ನಿಯಮೇನ । ಅತಃ ಸಪಕ್ಷೇ ಸತ್ತ್ವಾಖ್ಯಂ ದ್ವಿತೀಯಂ ರೂಪಮಪಿ ನಿಷ್ಪನ್ನಮ್ । ವಿಪಕ್ಷತಃ ವಿರುದ್ಧಪಕ್ಷಾತ್ ಅದ್ವೈತಾದೇಃ ನಿಜೇನ ಮಹಸಾ ಸಹ ವ್ಯಾವೃತ್ತಿರಸ್ತಿ । ನ ತು ತತ್ಸಾಧನೇಽಪಿ ಕದಾಚಿತ್ ಸ್ವಸಾಮರ್ಥ್ಯಂ ಘಟಯತಿ । ಅನೇನ ವಿಪಕ್ಷಾದ್ ವ್ಯಾವೃತ್ತ್ಯಾಖ್ಯಂ ರೂಪಂ ಸಂಪಾದಿತಮ್ । ಬಾಧಿತೇ ಶಶಶೃಂಗಸತ್ತ್ವಾದೌ ಸಕ್ತಿರೇವ ನ । ಅನೇನ ಅಬಾಧಿತವಿಷಯತ್ವಾಖ್ಯಂ ರೂಪಮುಪಪಾದಿತಮ್ । ಪ್ರತಿಪಕ್ಷಯುಕ್ತಿರ್ನೈವಾಸ್ತಿ ಇತ್ಯನೇನ ಅಸತ್ಪ್ರತಿಪಕ್ಷತ್ವಂ ಸ್ಪಷ್ಟೀಕೃತಮ್ । ಅತುಲಮ್ = ಅಲೌಕಿಕವಿಷಯಕತ್ವಾತ್ ಅಸದೃಶಮ್ । ಅತ ಏವ ಶುದ್ಧಂ ಪ್ರಮಾಣಂ ಪ್ರಮಾಣಸ್ಥಾನೀಯಃ ಸ ಭಗವಾನ್ ಆನಂದತೀರ್ಥೋ ಮುನಿಃ ತತ್ತ್ವನಿರ್ಣಯಾಯ ಭೂಯಾತ್ ಇತಿ ಸಮಗ್ರೋಪಮಾಗರ್ಭಂ ರೂಪಕಮ್ ।

ಯಸ್ಯ – ಅನ್ವಯವ್ಯತಿರೇಕಿ ಅನುಮಾನದಂತೆ ಎಂಬುದಾಗಿ ದೃಷ್ಟಾಂತವನ್ನಾಗಿ ಹೇಳಿದ ಪ್ರಮಾಣತ್ವೇನ ನಿರೂಪಿತರಾದ ಆನಂದತೀರ್ಥಮುನಿಗಳಿಗೆ.

ನಿಜೇ ಪಕ್ಷೇ – ವಿಷ್ಣುಸರ್ವೋತ್ತಮತ್ವ, ಸಗುಣತ್ವ, ಸಾಕಾರತ್ವ, ಜಗತ್ಸತ್ಯತ್ವ ಮೊದಲಾದ ಪ್ರಮೇಯಗಳಲ್ಲಿ.

ನಿಜೇನ – ಸ್ವಾಭಾವಿಕವಾದ.

ಮಹಸಾ – ಶ್ರುತಿಸ್ಮೃತಿಮೊದಲಾದ ಪ್ರಮಾಣಗಳಿಂದ ಉಪಪಾದನೆ ಮಾಡುವ ಸಾಮರ್ಥ್ಯದ ಜೊತೆ ವ್ಯಾಪ್ತಿ ಇರುತ್ತದೆ. ಉದಾಹರಣೆ – ಧೂಮಾನುಮಾನದಲ್ಲಿ ಪಕ್ಷದಲ್ಲಿ ಅಂಶತಃ ಬಾಧವಿದೆ. ಅಂಶತಃ ಭಾಗಾಸಿದ್ಧಿಯಿದೆ. ಇದನ್ನು ಪರಿಹರಿಸುವುದಕ್ಕಾಗಿ ನಿಜೇನ ಮಹಸಾ ಸಹ ವ್ಯಾಪ್ತಿಃ ಎಂದು ಹೇಳಿದ್ದಾರೆ. ಪಕ್ಷಧರ್ಮತ್ವವನ್ನು ಉಪಪಾದನೆ ಮಾಡಿದ್ದಾರೆ.

ಸಪಕ್ಷೇ – ಪಕ್ಷಕ್ಕೆ ಸಮಾನವಾದ ಸಪಕ್ಷದಲ್ಲೂ ಯಥಾರ್ಥವಾದ ವಿಷಯವನ್ನು ಸಮರ್ಥನೆ ಮಾಡುತ್ತಾರೆ. ಜ್ಯೋತಿಷ್ಟೋಮಾದಿ ಯಾಗಗಳು ಸಪಕ್ಷವೆನಿಸಿವೆ. ಇವುಗಳು ಸ್ವರ್ಗಸಾಧನವಾಗಿವೆ ಎಂಬ ಪ್ರಮೇಯವನ್ನು ಕೆಲವೊಮ್ಮೆ ಸಮರ್ಥನೆ ಮಾಡುತ್ತಾರೆ. ನಿಯಮೇನ ಸಮರ್ಥನೆ ಮಾಡುತ್ತಾರೆಂದು ವಿವಕ್ಷಿಸಬಾರದು. ಆದ್ದರಿಂದ ಸಪಕ್ಷೇ ಸ್ಥಿತಿಃ ಎಂಬ ಅನುಮಾನದ ಎರಡನೆಯ ರೂಪವನ್ನು ತೋರಿಸಿದಂತಾಯಿತು.

ವಿಪಕ್ಷತಃ ವ್ಯಾವೃತ್ತಿಃ – ಅದ್ವೈತಪಕ್ಷವೇ ವಿಪಕ್ಷ. ಅದರ ಸಾಧನೆಯಲ್ಲಿ ಎಂದೂ ಕೂಡ ತಮ್ಮ ಸಾಮರ್ಥ್ಯವನ್ನು ತೋರಿಸುವುದಿಲ್ಲ. ಬಾಧಿತವಾದ ಶಶಶೃಂಗಾದಿಗಳ ಸತ್ವದ ವಿಷಯದಲ್ಲಿ ಸಂಬಂಧವನ್ನೇ ಹೊಂದಿರುವುದಿಲ್ಲ. ಇದರಿಂದ ವಿಪಕ್ಷಾದ್ ವ್ಯಾವೃತ್ತಿಯನ್ನು ಅಬಾಧಿತವಿಷಯತ್ವವನ್ನು ಹೇಳಿದಂತಾಯಿತು. 'ಪ್ರತಿಪಕ್ಷಯುಕ್ತಿರ್ನೈವಾಸ್ತಿ' ಎಂಬುದರಿಂದ ತಮಗೆ ಸತ್ಪ್ರತಿಪಕ್ಷವೇ ಇಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಅತುಲಂ – ಅಲೌಕಿಕವಿಷಯವಾಗಿರುವುದರಿಂದ ಅಸದೃಶರಾಗಿದ್ದಾರೆ. ಆದ್ದರಿಂದಲೇ ಶುದ್ಧಪ್ರಮಾಣರೆನಿಸಿದ್ದಾರೆ. ಇಂಥ ಆನಂದತೀರ್ಥಮುನಿಗಳು ನನಗೆ ತತ್ವನಿರ್ಣಯವನ್ನು ಕರುಣಿಸಲಿ. ಹೀಗೆ ಸಮೀಚೀನವಾದ ಅನುಮಾನದಂತೆ ಆಚಾರ್ಯರು ಕಾಣಿಸುತ್ತಿದ್ದಾರೆ.

## ಯುಕ್ತಿಶ್ಲೇಷದಿಂದ ಆಚಾರ್ಯರ ಪ್ರಾರ್ಥನೆ

ವಾಕ್ಯಾರ್ಥಚಂದ್ರಿಕಾ – ಯುಕ್ತಿಪ್ರಧಾನತ್ವಾತ್ ಅನುವ್ಯಾಖ್ಯಾನಸ್ಯ ತದುದ್ಬೋಧಾರ್ಥಂ ಯುಕ್ತಿಶ್ಲೇಷೇಣ ತತ್ವಜ್ಞೇತ್ಯನ್ ಪ್ರಾರ್ಥಯತೇ – ವ್ಯಾಪ್ತಿರಿತಿ ॥

ಅನುವ್ಯಾಖ್ಯಾನವು ಯುಕ್ತಿಪ್ರಧಾನವಾಗಿದೆ. ಇದನ್ನು ತಿಳಿಸುವುದಕ್ಕಾಗಿ ಯುಕ್ತಿಶ್ಲೇಷದಿಂದ ತತ್ವಜ್ಞೇತೃಗಳನ್ನು ಪ್ರಾರ್ಥನೆ ಮಾಡಲು 'ವ್ಯಾಪ್ತಿಃ' ಇತ್ಯಾದಿಯಾಗಿ ಮಂಗಳಾಚರಣೆ ಮಾಡುತ್ತಿದ್ದಾರೆ.

ವಿವರಣೆ – ಯುಕ್ತಿಪ್ರಧಾನವಾದ ಅನುವ್ಯಾಖ್ಯಾನವನ್ನು ರಚನೆ ಮಾಡಿದ ಶ್ರೀಮಧ್ವಾಚಾರ್ಯರೇ ಯುಕ್ತಿಸ್ವರೂಪವಾಗಿದ್ದಾರೆಂಬುದನ್ನು ಹೃದಯಂಗಮವಾಗಿ ಈ ಶ್ಲೋಕದಲ್ಲಿ ವರ್ಣಿಸುತ್ತಿದ್ದಾರೆ. ಯುಕ್ತಿಯ ಉಪಮೆಯನ್ನು ಈ ಶ್ಲೋಕದಲ್ಲಿ ನೀಡುತ್ತಿದ್ದಾರೆಂದು ಹೇಳುವುದಕ್ಕಿಂತ ಯುಕ್ತಿಶ್ಲೇಷದಿಂದ ಆಚಾರ್ಯರನ್ನು ಪ್ರಾರ್ಥಿಸುತ್ತಿದ್ದಾರೆ ಎಂದು ಹೇಳುವುದೇ ಯುಕ್ತವಾದದ್ದು. ಏಕೆಂದರೆ ಉಪಮಾಲಂಕಾರದಲ್ಲಿ ಸಾದೃಶ್ಯವಷ್ಟೇ ಇರುತ್ತದೆ. ಶ್ಲೇಷಾಲಂಕಾರದಲ್ಲಿ ಒಂದೇ ಶಬ್ದವು ಅರ್ಥದ್ವಯವಾಚಕವಾಗಿರುತ್ತದೆ. ಪ್ರಕೃತ ಯುಕ್ತಿಶಬ್ದವು ಆಚಾರ್ಯರನ್ನು ಹೇಳುತ್ತಿದೆ ಎಂದು ತಿಳಿಯಬೇಕು.

## ವ್ಯಾಪನಾದಿಗಳಿಗೆ ಅಪೂರ್ವಾರ್ಥ

ವಾಕ್ಯಾರ್ಥಚಂದ್ರಿಕಾ– ಅತ್ರ ಆಚಾರ್ಯಪಕ್ಷೇ ವ್ಯಾಪನಂ, ಸ್ವಭಾವಸಾಮರ್ಥ್ಯೇನ ಸ್ವಸಿದ್ಧಾಂತೇ ಸ್ವಸಮಾನಸಿದ್ಧಾಂತೇ ದಾರ್ಢ್ಯಮ್, ಅನಭಿಮತಿಃ, ವಿರುದ್ಧಸಿದ್ಧಾಂತತಃ ನಿಷಿದ್ಧವಿಷಯಾಸ್ನೇಹೋ ವಿರೋಧಿಮತಯೋಗಶ್ಚ ಯಥಾಕ್ರಮಂ ಶಬ್ದಾರ್ಥಾ ದ್ರಷ್ಟವ್ಯಾಃ।





ಸಮಾನೇ ನಿರ್ಣೀತತ್ವಾತ್ ಸಪಕ್ಷಸ್ಥಾನೀಯೇ ಜ್ಯೋತಿಷ್ಟೋಮಾದೇಃ ಸ್ವರ್ಗಸಾಧನತ್ವಾದೌ ಪ್ರಮೇಯೇ ನಿಜೇನ ಮಹಸಾ ಸಹ ಸ್ಥಿತಿರಸ್ತಿ । ನ ತು ವ್ಯಾಪ್ತಿಃ । ಕದಾಚಿತ್ ಪ್ರಸಂಗವಶಾದ್ ತಮಪ್ಯರ್ಥಂ ಸಾಧಯತಿ ನ ತು ನಿಯಮೇನ । ಅತಃ ಸಪಕ್ಷೇ ಸತ್ತ್ವಾಖ್ಯಂ ದ್ವಿತೀಯಂ ರೂಪಮಪಿ ನಿಷ್ಪನ್ನಮ್ । ವಿಪಕ್ಷತಃ ವಿರುದ್ಧಪಕ್ಷಾತ್ ಅದ್ವೈತಾದೇಃ ನಿಜೇನ ಮಹಸಾ ಸಹ ವ್ಯಾವೃತ್ತಿರಸ್ತಿ । ನ ತು ತತ್ಸಾಧನೇಽಪಿ ಕದಾಚಿತ್ ಸ್ವಸಾಮರ್ಥ್ಯಂ ಘಟಯತಿ । ಅನೇನ ವಿಪಕ್ಷಾದ್ ವ್ಯಾವೃತ್ತ್ಯಾಖ್ಯಂ ರೂಪಂ ಸಂಪಾದಿತಮ್ । ಬಾಧಿತೇ ಶಶಶೃಂಗಸತ್ತ್ವಾದೌ ಸಕ್ತಿರೇವ ನ । ಅನೇನ ಅಬಾಧಿತವಿಷಯತ್ವಾಖ್ಯಂ ರೂಪಮುಪಪಾದಿತಮ್ । ಪ್ರತಿಪಕ್ಷಯುಕ್ತಿರ್ನೈವಾಸ್ತಿ ಇತ್ಯನೇನ ಅಸತ್ಪ್ರತಿಪಕ್ಷತ್ವಂ ಸ್ಪಷ್ಟೀಕೃತಮ್ । ಅತುಲಮ್ = ಅಲೌಕಿಕವಿಷಯಕತ್ವಾತ್ ಅಸದೃಶಮ್ । ಅತ ಏವ ಶುದ್ಧಂ ಪ್ರಮಾಣಂ ಪ್ರಮಾಣಸ್ಥಾನೀಯಃ ಸ ಭಗವಾನ್ ಆನಂದತೀರ್ಥೋ ಮುನಿಃ ತತ್ತ್ವನಿರ್ಣಯಾಯ ಭೂಯಾತ್ ಇತಿ ಸಮಗ್ರೋಪಮಾಗರ್ಭಂ ರೂಪಕಮ್ ।

ಯಸ್ಯ – ಅನ್ವಯವ್ಯತಿರೇಕಿ ಅನುಮಾನದಂತೆ ಎಂಬುದಾಗಿ ದೃಷ್ಟಾಂತವನ್ನಾಗಿ ಹೇಳಿದ ಪ್ರಮಾಣತ್ವೇನ ನಿರೂಪಿತರಾದ ಆನಂದತೀರ್ಥಮುನಿಗಳಿಗೆ.

ನಿಜೇ ಪಕ್ಷೇ – ವಿಷ್ಣುಸರ್ವೋತ್ತಮತ್ವ, ಸಗುಣತ್ವ, ಸಾಕಾರತ್ವ, ಜಗತ್ಸತ್ಯತ್ವ ಮೊದಲಾದ ಪ್ರಮೇಯಗಳಲ್ಲಿ.

ನಿಜೇನ – ಸ್ವಾಭಾವಿಕವಾದ.

ಮಹಸಾ – ಶ್ರುತಿಸ್ಮೃತಿಮೊದಲಾದ ಪ್ರಮಾಣಗಳಿಂದ ಉಪಪಾದನೆ ಮಾಡುವ ಸಾಮರ್ಥ್ಯದ ಜೊತೆ ವ್ಯಾಪ್ತಿ ಇರುತ್ತದೆ. ಉದಾಹರಣೆ – ಧೂಮಾನುಮಾನದಲ್ಲಿ ಪಕ್ಷದಲ್ಲಿ ಅಂಶತಃ ಬಾಧವಿದೆ. ಅಂಶತಃ ಭಾಗಾಸಿದ್ಧಿಯಿದೆ. ಇದನ್ನು ಪರಿಹರಿಸುವುದಕ್ಕಾಗಿ ನಿಜೇನ ಮಹಸಾ ಸಹ ವ್ಯಾಪ್ತಿಃ ಎಂದು ಹೇಳಿದ್ದಾರೆ. ಪಕ್ಷಧರ್ಮತ್ವವನ್ನು ಉಪಪಾದನೆ ಮಾಡಿದ್ದಾರೆ.

ಸಪಕ್ಷೇ – ಪಕ್ಷಕ್ಕೆ ಸಮಾನವಾದ ಸಪಕ್ಷದಲ್ಲೂ ಯಥಾರ್ಥವಾದ ವಿಷಯವನ್ನು ಸಮರ್ಥನೆ ಮಾಡುತ್ತಾರೆ. ಜ್ಯೋತಿಷ್ಟೋಮಾದಿ ಯಾಗಗಳು ಸಪಕ್ಷವೆನಿಸಿವೆ. ಇವುಗಳು ಸ್ವರ್ಗಸಾಧನವಾಗಿವೆ ಎಂಬ ಪ್ರಮೇಯವನ್ನು ಕೆಲವೊಮ್ಮೆ ಸಮರ್ಥನೆ ಮಾಡುತ್ತಾರೆ. ನಿಯಮೇನ ಸಮರ್ಥನೆ ಮಾಡುತ್ತಾರೆಂದು ವಿವಕ್ಷಿಸಬಾರದು. ಆದ್ದರಿಂದ ಸಪಕ್ಷೇ ಸ್ಥಿತಿಃ ಎಂಬ ಅನುಮಾನದ ಎರಡನೆಯ ರೂಪವನ್ನು ತೋರಿಸಿದಂತಾಯಿತು.





ವಿಪಕ್ಷತಃ ವ್ಯಾವೃತ್ತಿಃ – ಅದ್ವೈತಪಕ್ಷವೇ ವಿಪಕ್ಷ. ಅದರ ಸಾಧನೆಯಲ್ಲಿ ಎಂದೂ ಕೂಡ ತಮ್ಮ ಸಾಮರ್ಥ್ಯವನ್ನು ತೋರಿಸುವುದಿಲ್ಲ. ಬಾಧಿತವಾದ ಶಶಶೃಂಗಾದಿಗಳ ಸತ್ವದ ವಿಷಯದಲ್ಲಿ ಸಂಬಂಧವನ್ನೇ ಹೊಂದಿರುವುದಿಲ್ಲ. ಇದರಿಂದ ವಿಪಕ್ಷಾದ್ ವ್ಯಾವೃತ್ತಿಯನ್ನು ಅಬಾಧಿತವಿಷಯತ್ವವನ್ನು ಹೇಳಿದಂತಾಯಿತು. 'ಪ್ರತಿಪಕ್ಷಯುಕ್ತಿರ್ನೈವಾಸ್ತಿ' ಎಂಬುದರಿಂದ ತಮಗೆ ಸತ್ಪ್ರತಿಪಕ್ಷವೇ ಇಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಅತುಲಂ – ಅಲೌಕಿಕವಿಷಯವಾಗಿರುವುದರಿಂದ ಅಸದೃಶರಾಗಿದ್ದಾರೆ. ಆದ್ದರಿಂದಲೇ ಶುದ್ಧಪ್ರಮಾಣರೆನಿಸಿದ್ದಾರೆ. ಇಂಥ ಆನಂದತೀರ್ಥಮುನಿಗಳು ನನಗೆ ತತ್ವನಿರ್ಣಯವನ್ನು ಕರುಣಿಸಲಿ. ಹೀಗೆ ಸಮೀಚೀನವಾದ ಅನುಮಾನದಂತೆ ಆಚಾರ್ಯರು ಕಾಣಿಸುತ್ತಿದ್ದಾರೆ.

## ಯುಕ್ತಿಶ್ಲೇಷದಿಂದ ಆಚಾರ್ಯರ ಪ್ರಾರ್ಥನೆ

ವಾಕ್ಯಾರ್ಥಚಂದ್ರಿಕಾ – ಯುಕ್ತಿಪ್ರಧಾನತ್ವಾತ್ ಅನುವ್ಯಾಖ್ಯಾನಸ್ಯ ತದುದ್ಬೋಧಾರ್ಥಂ ಯುಕ್ತಿಶ್ಲೇಷೇಣ ತತ್ಪ್ರಣೇತೃನ್ ಪ್ರಾರ್ಥಯತೇ – ವ್ಯಾಪ್ತಿರಿತಿ ॥

ಅನುವ್ಯಾಖ್ಯಾನವು ಯುಕ್ತಿಪ್ರಧಾನವಾಗಿದೆ. ಇದನ್ನು ತಿಳಿಸುವುದಕ್ಕಾಗಿ ಯುಕ್ತಿಶ್ಲೇಷದಿಂದ ತತ್ಪ್ರಣೇತೃಗಳನ್ನು ಪ್ರಾರ್ಥನೆ ಮಾಡಲು 'ವ್ಯಾಪ್ತಿಃ' ಇತ್ಯಾದಿಯಾಗಿ ಮಂಗಳಾಚರಣೆ ಮಾಡುತ್ತಿದ್ದಾರೆ.

ವಿವರಣೆ – ಯುಕ್ತಿಪ್ರಧಾನವಾದ ಅನುವ್ಯಾಖ್ಯಾನವನ್ನು ರಚನೆ ಮಾಡಿದ ಶ್ರೀಮಧ್ವಾಚಾರ್ಯರೇ ಯುಕ್ತಿಸ್ವರೂಪವಾಗಿದ್ದಾರೆಂಬುದನ್ನು ಹೃದಯಂಗಮವಾಗಿ ಈ ಶ್ಲೋಕದಲ್ಲಿ ವರ್ಣಿಸುತ್ತಿದ್ದಾರೆ. ಯುಕ್ತಿಯ ಉಪಮೆಯನ್ನು ಈ ಶ್ಲೋಕದಲ್ಲಿ ನೀಡುತ್ತಿದ್ದಾರೆಂದು ಹೇಳುವುದಕ್ಕಿಂತ ಯುಕ್ತಿಶ್ಲೇಷದಿಂದ ಆಚಾರ್ಯರನ್ನು ಪ್ರಾರ್ಥಿಸುತ್ತಿದ್ದಾರೆ ಎಂದು ಹೇಳುವುದೇ ಯುಕ್ತವಾದದ್ದು. ಏಕೆಂದರೆ ಉಪಮಾಲಂಕಾರದಲ್ಲಿ ಸಾದೃಶ್ಯವಷ್ಟೇ ಇರುತ್ತದೆ. ಶ್ಲೇಷಾಲಂಕಾರದಲ್ಲಿ ಒಂದೇ ಶಬ್ದವು ಅರ್ಥದ್ವಯವಾಚಕವಾಗಿರುತ್ತದೆ. ಪ್ರಕೃತ ಯುಕ್ತಿಶಬ್ದವು ಆಚಾರ್ಯರನ್ನು ಹೇಳುತ್ತಿದೆ ಎಂದು ತಿಳಿಯಬೇಕು.

## ವ್ಯಾಪನಾದಿಗಳಿಗೆ ಅಪೂರ್ವಾರ್ಥ

ವಾಕ್ಯಾರ್ಥಚಂದ್ರಿಕಾ– ಅತ್ರ, ಆಚಾರ್ಯಪಕ್ಷೇ ವ್ಯಾಪನಂ, ಸ್ವಭಾವಸಾಮರ್ಥ್ಯೇನ ಸ್ವಸಿದ್ಧಾಂತೇ ಸ್ವಸಮಾನಸಿದ್ಧಾಂತೇ ದಾರ್ಢ್ಯಮ್, ಅನಭಿಮತಿಃ, ವಿರುದ್ಧಸಿದ್ಧಾಂತತಃ ನಿಷಿದ್ಧವಿಷಯಾಶ್ಲೇಷೋ ವಿರೋಧಿಮತಯೋಗಶ್ಚ ಯಥಾಕ್ರಮಂ ಶಬ್ದಾರ್ಥಾ ದ್ರಷ್ಟವ್ಯಾಃ।

ಆಚಾರ್ಯರ ಪಕ್ಷದಲ್ಲಿ ವ್ಯಾಪನವು ಸ್ವಭಾವಸಾಮರ್ಥ್ಯದಿಂದ ತಮ್ಮ ಸಿದ್ಧಾಂತದಲ್ಲಿ ಇರುತ್ತದೆ. ತಮಗೆ ಸಮಾನವಾದ ಸಿದ್ಧಾಂತದಲ್ಲಿ ದಾರ್ಢ್ಯವಿದೆ. ವಿರುದ್ಧಸಿದ್ಧಾಂತಗಳಲ್ಲಿ ಅನಭಿಮತಿ ಇದೆ. ನಿಷಿದ್ಧ-ವಿಷಯಗಳಲ್ಲಿ ಸ್ನೇಹವು ಇರುವುದಿಲ್ಲ. ವಿರೋಧಿ ಮತಗಳು ಇವರಲ್ಲಿ ಅಯುಕ್ತವಾಗಿವೆ. ಹೀಗೆ ಯಥಾ-ಕ್ರಮವಾಗಿ ಶಬ್ದಾರ್ಥಗಳನ್ನು ತಿಳಿಯಬೇಕು.

## ಎಲ್ಲೆಡೆಯೂ ಏವಕಾರದ ಅನ್ವಯದಿಂದ ನಿರ್ದುಷ್ಟತ್ವದ ಸಮರ್ಥನೆ

ವಾಕ್ಯಾರ್ಥಚಂದ್ರಿಕಾ– ಅತ್ರ ನ ವೈ ನೈವ ಇತ್ಯುಭಯಾವಧಾರಣಪ್ರಯೋಗೇಣ ವ್ಯಾಪ್ತಿರೇವ ಇತ್ಯಾದಿಃ ಸರ್ವತ್ರ ಸಂಬಂಧಸ್ತಸ್ಯ ಸೂಚ್ಯತೇ । ತೇನ ಧೂಮಸ್ಯ ಹ್ರದಪರ್ವತಪಕ್ಷಕಾ-ನುಮಾನೇ ಪಕ್ಷೇ ವ್ಯಾಪ್ತ್ಯಾ ಸ್ಥಿತಿರೇವಾಭಾವಾತ್, ಹ್ರದೇ ವಹ್ನಿಸಾಧನಾರ್ಥಂ ಪ್ರಯುಕ್ತಸ್ಯ ಪಕ್ಷೇ ಸ್ಥಿತ್ಯಭಾವಾತ್ ಹ್ರದದೃಷ್ಟಾಂತೇನ ಪ್ರಯುಕ್ತಸ್ಯ ಸಪಕ್ಷೇ ಸ್ಥಿತ್ಯಭಾವಾತ್, ವಹ್ನ್ಯಭಾವಸಾಧನಾಯ ಪ್ರಯುಕ್ತಸ್ಯ ವಿಪಕ್ಷತೋ ವ್ಯಾವೃತ್ತ್ಯಭಾವಾತ್, ವಹ್ನಿಮತಿ ವಹ್ನ್ಯಭಾವಸಾಧನಾಯ ಪ್ರಯುಕ್ತಸ್ಯ (ಪ್ರತ್ಯಕ್ಷಾದಿ)ಬಾಧಿತೇ ವಿಷಯೇ ಸಕ್ತೇಶ್ಚ, ಸ್ಥಾಲ್ಯಾದಿಮತ್ತ್ವಸಾಧನಾಯ ಪ್ರಯುಕ್ತಸ್ಯ ಪಾಷಾಣ-ವತ್ತ್ವಾದಿಪ್ರತಿಪಕ್ಷಯೋಗಾಚ್ಚ, ಕ್ವಚಿತ್ತಸ್ಯಾ ಏವ ಯುಕ್ತೇಃ ಕ್ವಚಿದಸತ್ತ್ವನ್ನ ಆಚಾರ್ಯಸ್ಯ ಕ್ವಚಿದಪಿ ಸ್ವಸಿದ್ಧಾಂತಸ್ಥಿತ್ಯಭಾವಾದಿ ಇತ್ಯರ್ಥಸಿದ್ಧ್ಯಾ ಅತುಲ್ಯತ್ವಂ ಸಿದ್ಧಂ ಭವತೀತಿ ದ್ರಷ್ಟವ್ಯಮ್ । ಅತ್ರ ನಿಜೇ ಪಕ್ಷೇ ವ್ಯಾಪ್ತಿಃ ಸರ್ವಸ್ಮಿನ್ ಸ್ವೀಯೇ ಪಕ್ಷೇ ಸ್ಥಿತಿರಿತ್ಯನ್ವಯೋ ದ್ರಷ್ಟವ್ಯಃ ॥

ಟೀಕೆಯಲ್ಲಿ 'ಸಕ್ತಿರ್ನ ವೈ' ಎಂಬಲ್ಲಿ 'ನೈವಾಸ್ತಿ' ಎಂಬಲ್ಲಿ ಎರಡು ಕಡೆ ಅವಧಾರಣವನ್ನು ಪ್ರಯೋಗ ಮಾಡಿದ್ದಾರೆ. ಇದರಿಂದ ವ್ಯಾಪ್ತಿರೇವ ಇತ್ಯಾದಿ ಎಲ್ಲೆಡೆಯೂ ಏವಕಾರಕ್ಕೆ ಸಂಬಂಧವನ್ನು ಸೂಚನೆ ಮಾಡಿದ್ದಾರೆ. ಏವಕಾರದ ಸ್ವಾರಸ್ಯ ಹೀಗಿದೆ – 'ಪರ್ವತೋ ವಹ್ನಿಮಾನ್ ಧೂಮಾತ್' ಎಂದು ಪ್ರಯೋಗ ಮಾಡಿದಾಗ ಧೂಮಾನುಮಾನವು ಸಮೀಚೀನವಾಗಿದೆ. ಆದರೆ 'ಹ್ರದಪರ್ವತೌ ಅಗ್ನಿಮಂತೌ ವಹ್ನಿಮತ್ತ್ವಾತ್' ಎಂದು ಅನುಮಾನ ಮಾಡಿದಾಗ ಪಕ್ಷದಲ್ಲಿ ಧೂಮಾನುಮಾನವು ವ್ಯಾಪ್ತ್ಯಾ ಸ್ಥಿತವಾಗಿಲ್ಲ. ಏಕೆಂದರೆ ಪಕ್ಷದ ಏಕದೇಶವೆನಿಸಿದ ಹ್ರದದಲ್ಲಿ ಧೂಮವು ಇರುವುದಿಲ್ಲ. ಇದರಂತೆ 'ಹ್ರದಃ ವಹ್ನಿಮಾನ್ ಧೂಮಾತ್' ಎಂದು ಪ್ರಯೋಗ ಮಾಡಿದಾಗ ಧೂಮಾನುಮಾನವು ಪಕ್ಷದಲ್ಲಿ ಸ್ಥಿತವೇ ಆಗಿಲ್ಲ. ಸಂಪೂರ್ಣವಾದ ಸ್ವರೂಪಾಸಿದ್ಧಿದೋಷವು ಬರುತ್ತದೆ. ಇನ್ನು 'ಪರ್ವತಃ ವಹ್ನಿಮಾನ್ ಧೂಮವತ್ತ್ವಾತ್ ಹ್ರದವತ್' ಎಂಬುದಾಗಿ ಹ್ರದವನ್ನು ದೃಷ್ಟಾಂತವನ್ನಾಗಿ ಮಾಡಿದರೆ ಧೂಮಾನುಮಾನವು ಸಪಕ್ಷವೆನಿಸಿದ ಹ್ರದದಲ್ಲಿ ಸ್ಥಿತವಾಗಿಲ್ಲ. ಇನ್ನು 'ಪರ್ವತಃ ನ ವಹ್ನಿಮಾನ್ ಧೂಮವತ್ತ್ವಾತ್ ಮಹಾನಸವತ್' ಎಂಬು-

ದಾಗಿ ಅನುಮಾನ ಮಾಡಿದರೆ ಮಹಾನಸವು ವಿಪಕ್ಷವಾಯಿತು. ಇದರಲ್ಲಿ ಧೂಮಾನುಮಾನವು ವ್ಯಾವೃತ್ತವಾಗಿಲ್ಲ. ಇನ್ನು 'ಮಹಾನಸಃ ವಹ್ನಿಮಾನ್ ಧೂಮವತ್ತ್ವಾತ್' ಎಂಬುದಾಗಿ ಪ್ರತ್ಯಕ್ಷದಿಂದ ವಹ್ನಿಯು ಸಿದ್ಧವಾಗಿರುವ ಮಹಾನಸದಲ್ಲಿ ವಹ್ನ್ಯಭಾವವನ್ನು ಸಾಧನೆ ಮಾಡಿದರೆ ಪ್ರತ್ಯಕ್ಷಬಾಧವು ಬರುತ್ತದೆ.

'ಪರ್ವತಃ ಸ್ಥಾಲ್ಯಾದಿಮಾನ್ ಧೂಮವತ್ತ್ವಾತ್' ಎಂಬುದಾಗಿ ಅನುಮಾನವನ್ನು ಪ್ರಯೋಗ ಮಾಡಿದರೆ 'ಪರ್ವತಃ ನ ಸ್ಥಾಲ್ಯಾದಿಮಾನ್ ಪಾಷಾಣವತ್ತ್ವಾತ್' ಎಂಬುದಾಗಿ ಪ್ರತಿಪಕ್ಷಾನುಮಾನವನ್ನು ಪ್ರಯೋಗ ಮಾಡಬಹುದು.

ಹೀಗೆ ಧೂಮರೂಪವಾದ ಯುಕ್ತಿಯು ಸರ್ವದಾ ಸರ್ವತ್ರ ಸಮೀಚೀನವಾಗಿಲ್ಲ. ಇದರಂತೆ ಶ್ರೀಮಧ್ವಾಚಾರ್ಯರು ಕೆಲವೊಮ್ಮೆ ಮಾತ್ರ ಪಕ್ಷದಲ್ಲಿದ್ದಾರೆ. ಕೆಲವೊಮ್ಮೆ ಸಪಕ್ಷದಲ್ಲಿ ಸ್ಥಿತರಾಗಿಲ್ಲ. ಕೆಲವೊಮ್ಮೆ ವಿಪಕ್ಷದಲ್ಲೂ ಇದ್ದಾರೆ ಇತ್ಯಾದಿಯಾಗಿ ಸರ್ವಥಾ ತಿಳಿಯಬಾರದು. ಆಚಾರ್ಯರು ಎಲ್ಲಾ ರೀತಿಯಿಂದಲೂ ನಿರ್ದುಷ್ಟರಾಗಿದ್ದಾರೆ ಎಂಬುದನ್ನು ತಿಳಿಸಲು 'ವ್ಯಾಪ್ತಿರೇವ, ವ್ಯಾವೃತ್ತಿರೇವ, ಸ್ಥಿತಃ ಏವ' ಇತ್ಯಾದಿಯಾಗಿ ಎಲ್ಲೆಡೆಯೂ ಏವಕಾರವನ್ನು ಅನ್ವಯ ಮಾಡಿಕೊಳ್ಳಬೇಕು. ಹೀಗೆ ಆಚಾರ್ಯರಲ್ಲಿ ಅತುಲತ್ವವನ್ನು ತಿಳಿಯಬೇಕು.

## ರಸಘಟ್ಟ
## ನಮಗೆ ಭಾಷ್ಯಕಾರರೇ ಪ್ರಮಾಣ

ಆನಂದ – 'ಧ್ಯಾನಂ ಚ ನ ಜ್ಞಾನಂ ವಿನಾ, ತಚ್ಚ ಪ್ರಮಾಣೇನ ವಿನಾ ನ ಸಂಭವತಿ' ಇತ್ಯತಃ ತತ್ ಜ್ಞಾನಜನಕಂ ಕಿಂ ಪ್ರಮಾಣಮ್? ಇತ್ಯತಃ ಪ್ರಮಾಣತ್ವೇನ ಭಾಷ್ಯಕರ್ತ್ರ್ಯನ್ ಅಭಿಪ್ರೈತಿ – ವ್ಯಾಪ್ತಿರಿತಿ ॥ 'ಸ ಆನಂದತೀರ್ಥಮುನಿಃ ತತ್ತ್ವನಿರ್ಣಯಾಯ ಮೇ ಪ್ರಮಾಣಂ ಭೂಯಾತ್' ಇತ್ಯನ್ವಯಃ । ನನು ಆನಂದತೀರ್ಥಃ ಪ್ರತ್ಯಕ್ಷಪ್ರಮಾಣಂ ವಾಽನುಮಾನಂ ವಾಽಗಮೋ ವಾ । ನಾದ್ಯಃ ತಸ್ಯ ಇಂದ್ರಿಯರೂಪತ್ವಾಭಾವಾತ್ । ನ ದ್ವಿತೀಯಃ ವ್ಯಾಪ್ತ್ಯಾದೇರಭಾವಾತ್ । ನ ತೃತೀಯಃ ತಸ್ಯ ಶಬ್ದರೂಪತ್ವಾಭಾವಾತ್ ಇತಿ ಚೇತ್, ಮೈವಮ್ । ತಸ್ಯ ಅನುಮಾನರೂಪಪ್ರಮಾಣತ್ವಾಭ್ಯುಪಗಮಾತ್ । ನನು ಅನುಮಾನಶಬ್ದಸ್ಯ ಅನುಮಾನಾಭಾಸೇಽಪಿ ಪ್ರಯೋಗಾತ್ ಕಿಮಯಮ್ ಅನುಮಾನಾಭಾಸೋ ನೇತ್ಯಾಹ – ಶುದ್ಧಮಿತಿ ॥ 'ವ್ಯಭಿಚಾರಾದಿಹೇತುದೋಷಶೂನ್ಯಮ್' ಇತ್ಯರ್ಥಃ । ತರ್ಹಿ ಧೂಮಾನುಮಾನವತ್ ಇದಮನುಮಾನಮ್ ಇತಿ, ನೇತ್ಯಾಹ – ಅತುಲಮ್ ಇತಿ ॥ ಪ್ರಸಿ-

ದ್ಧಾನುಮಾನವಿಲಕ್ಷಣಮ್ ಇತ್ಯರ್ಥಃ । ತಥಾಪಿ ವ್ಯಾಪ್ತ್ಯಾದ್ಯಭಾವಾತ್ ಕಥಮನುಮಾನತ್ವಮಿತ್ಯತ ಉಕ್ತಮ್ – ವ್ಯಾಪ್ತಿರ್ಯಸ್ಯೇತಿ ॥

ಧ್ಯಾನವು ಜ್ಞಾನವಿಲ್ಲದೇ ಸಾಧ್ಯವಿಲ್ಲ; ಜ್ಞಾನವು ಪ್ರಮಾಣವಿಲ್ಲದೇ ದೊರೆಯುವುದಿಲ್ಲ. ಆ ಪ್ರಮಾಣ ಯಾವುದು? ಎಂದರೆ ಭಾಷ್ಯಕಾರರಾದ ಶ್ರೀಮದಾಚಾರ್ಯರೇ ಪ್ರಮಾಣರಾಗಿದ್ದಾರೆ. ತತ್ತ್ವಜ್ಞಾನದ ನಿರ್ಣಯದಲ್ಲಿ ನಮಗೆ ಶ್ರೀಮದಾಚಾರ್ಯರೇ ಪ್ರಮಾಣವಾಗಲಿ ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸುತ್ತಿದ್ದಾರೆ. ಶ್ರೀಮದಾನಂದತೀರ್ಥರು ಪ್ರಮಾಣವೆಂದರೆ ಯಾವ ಪ್ರಮಾಣ? ಪ್ರತ್ಯಕ್ಷವೋ? ಅನುಮಾನವೋ? ಆಗಮವೋ? ಪ್ರತ್ಯಕ್ಷರೂಪಪ್ರಮಾಣರೆಂದು ಹೇಳಲಾಗದು. ಶ್ರೀಮಧ್ವಾಚಾರ್ಯರು ಇಂದ್ರಿಯ ಸ್ವರೂಪರಲ್ಲ. ಅನುಮಾನಪ್ರಮಾಣವೆಂದು ಹೇಳಲಾಗದು. ವ್ಯಾಪ್ತ್ಯಾದಿಗಳು ಇರುವುದಿಲ್ಲ. ಶಬ್ದಪ್ರಮಾಣವೆಂದು ಹೇಳಲಾಗದು. ಶ್ರೀಮಧ್ವಾಚಾರ್ಯರು ಶಬ್ದರೂಪರಾಗಿಲ್ಲ. ಈ ಪ್ರಶ್ನೆಗೆ ಅನುಮಾನಪ್ರಮಾಣರೇ ಆಗಿದ್ದಾರೆಂದು ಉತ್ತರಿಸಿದ್ದಾರೆ. ಅನುಮಾನಾಭಾಸದಲ್ಲೂ ಕೂಡ ಅನುಮಾನ ಎಂಬ ಪ್ರಯೋಗವನ್ನು ಮಾಡುತ್ತಾರಲ್ಲವೇ? ಎಂಬ ಪ್ರಶ್ನೆಗೆ "ಶುದ್ಧಂ" ಎಂದು ಉತ್ತರಿಸಿದ್ದಾರೆ. ವ್ಯಭಿಚಾರಾದಿದೋಷಗಳಿಂದ ಶೂನ್ಯರಾದ ಅನುಮಾನಪ್ರಮಾಣರಾಗಿದ್ದಾರೆ. ಹಾಗಾದರೆ ಧೂಮಾನುಮಾನದಂತೆ ಇವರೂ ಅನುಮಾನರಾಗಿದ್ದಾರೆಯೇ ಎಂದರೆ 'ಅತುಲಂ' ಎಂದುತ್ತರಿಸಿದ್ದಾರೆ. ಧೂಮಾನುಮಾನಕ್ಕಿಂತ ವಿಲಕ್ಷಣರಾಗಿದ್ದಾರೆ ಎಂದರ್ಥ. ವ್ಯಾಪ್ತ್ಯಾದಿಗಳನ್ನು ಇವರಲ್ಲಿ ಹೇಗೆ ಹೇಳುವುದು ಎಂಬ ಪ್ರಶ್ನೆಗೆ – 'ವ್ಯಾಪ್ತಿರ್ಯಸ್ಯ' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

## ವ್ಯಭಿಚಾರಾದಿಗಳ ಪರಿಹಾರಕ್ಕಾಗಿ ಹೇತುವಿನ ಪರಿಷ್ಕಾರ

ಆನಂದ – ಹರಿಃ ಸರ್ವೋತ್ತಮಃ ಆನಂದತೀರ್ಥವತ್ತ್ವಾತ್ ಇತಿ ಸರ್ವೋತ್ತಮತ್ವಸ್ಯೈವ ಸಾಧ್ಯತ್ವಾತ್ । ನ ಚೈವಂ ಸರ್ವೋತ್ತಮತ್ವಸ್ಯ ಅನ್ಯತ್ರಾಸಂಭವೇನ ಸ್ವಪಕ್ಷಾಭಾವಾತ್ ವ್ಯಾಪ್ತಿಗ್ರಹಣಾಯೋಗ ಇತಿ ವಾಚ್ಯಮ್ । ರಾಮಕೃಷ್ಣಾದ್ಯವತಾರಾಣಾಮೇವ ಸಪಕ್ಷತ್ವಾತ್ ತತ್ರ ಚ ಆನಂದತೀರ್ಥವತ್ತ್ವಸ್ಯ ಸರ್ವೋತ್ತಮತ್ವಸ್ಯ ಚ ಸತ್ತ್ವಾನ್ನ ಕಶ್ಚಿದ್ದೋಷಃ । ನ ಚ ಪ್ರೇರಕತ್ವೇನಾನಂದತೀರ್ಥವತ್ತ್ವಸ್ಯ ಸಜ್ಜನಾದಿಷ್ವಪಿ ಸತ್ತ್ವೇನ ತತ್ರ ಸಾಧ್ಯಾಭಾವಾದ್ ವ್ಯಭಿಚಾರ ಇತಿ ವಾಚ್ಯಮ್ । ತದಧೀನತ್ವೇನ ಆನಂದತೀರ್ಥವತ್ತ್ವಸ್ಯ ವಿವಕ್ಷಿತತ್ವಾತ್ ಸಜ್ಜನಾದಿಷು ತದಭಾವಾನ್ನ ವ್ಯಭಿಚಾರಃ । ನ ಚ ಲಕ್ಷ್ಮ್ಯಾಃ ತದಧೀನತ್ವೇನ ಆನಂದತೀರ್ಥವತ್ತ್ವೇऽಪಿ ಸರ್ವೋತ್ತಮತ್ವಾಭಾವಾದ್ ವ್ಯಭಿಚಾರೋ ದುಷ್ಪರಿಹರ ಏವ ಇತಿ ವಾಚ್ಯಮ್ । ತತ್ ಸ್ವತಂತ್ರತ್ವೇನ ಆನಂದತೀರ್ಥವತ್ತ್ವಸ್ಯ ವಿವಕ್ಷಿತತ್ವಾತ್ ಲಕ್ಷ್ಮ್ಯಾಶ್ಚ ಸ್ವಾತಂತ್ರ್ಯಾಭಾವಾನ್ನ ವ್ಯಭಿಚಾರಃ । ಹೇತುಸಿದ್ಧಿಸ್ತು ಆಗಮಾದೇವ ದ್ರಷ್ಟವ್ಯಾ । ಯದ್ವಾ

ಸಜ್ಜನಾ ಹರಿಮಂತಃ ಆನಂದತೀರ್ಥವತ್ತ್ವಾತ್ ನ ಚ ಸಪಕ್ಷಾಭಾವಃ । ಸಜ್ಜನೈಕದೇಶಸ್ಯೈವ ಪಕ್ಷತ್ವೇ-ನೈಕದೇಶಾಂತರಸ್ಯ ಸಪಕ್ಷತ್ವೋಪಪತ್ತೇಃ ನ ಚ ವಿನಿಗಮಕಾಭಾವಾತ್ ಕಸ್ಯೈಕದೇಶಸ್ಯ ಪಕ್ಷತ್ವಮಿತಿ ವಾಚ್ಯಮ್ । ಅನವರತಂ ಪೂರ್ಣಗುಣತ್ವಪ್ರಕಾರಕಹರಿಸ್ಮೃತಿಮದಭಿನ್ನಭಕ್ತಶ್ರೀಚತುರ್ಮುಖೇತರ-ರುದ್ರಾದಿಸಜ್ಜನೈಕದೇಶಸ್ಯ ಪಕ್ಷತ್ವೇನ ತಸ್ಯ ಸಪಕ್ಷತ್ವೋಪಪತ್ತೇಃ । ನ ಚ ನಿಶ್ಚಿತಸಾಧ್ಯಾಭಾವವತ ಏವ ವಿಪಕ್ಷತ್ವೇನ ಪ್ರಕೃತೇ ಚ ಹರೇರ್ವ್ಯಾಪಕತ್ವೇನ ಹರಿಮತ್ತ್ವಸ್ಯ ಸರ್ವತ್ರ ವಿಪಕ್ಷೀಭೂತದೈತ್ಯಾದಿಷು ಸತ್ತ್ವೇನ ಕಥಂ ತೇಷಾಂ ವಿಪಕ್ಷತ್ವಮಿತಿ ವಾಚ್ಯಮ್ । 'ದೂರಾದ್‌ದೂರತರಂ ಯತ್ತು ತದೇವಾಂತಿಕ-ಮಂತಿಕಾತ್' ಇತ್ಯಾದೌ ತಜ್ಜ್ಞಾನವತ್ವೇನ ತದಂತಿಕತ್ವಸ್ಯ ತದಜ್ಞಾನವತ್ತ್ವೇನ ತದ್ದೂರತ್ವಸ್ಯೈವ ಪರಿ-ಪೂರ್ಣಗುಣತ್ವೇನ ಹರಿಸ್ಮೃತಿಮತ್ತ್ವಸ್ಯೈವ ಹರಿಮತ್ತ್ವಸ್ಯೈವ ಹರಿಮತ್ತ್ವಸ್ಯ ವಿವಕ್ಷಿತತ್ವಾತ್ ತಸ್ಯ ಚ ತೇಷ್ವಸತ್ತ್ವೇನ ವಿಪಕ್ಷತ್ವೋಪಪತ್ತೇಃ । ನ ಚ ಪ್ರೇರಕತ್ವೇನ ಆನಂದತೀರ್ಥವತ್ತ್ವಸ್ಯ ದೈತ್ಯೇಷ್ವಪಿ ಸತ್ತ್ವೇನ ವ್ಯಭಿಚಾರ ಇತಿ ವಾಚ್ಯಮ್ । ಆನಂದತೀರ್ಥವತ್ತ್ವೇನ ತಜ್ಜ್ಞಾನವತ್ತ್ವಸ್ಯಾನಂದತೀರ್ಥವತ್ತ್ವಸ್ಯ ವಿವಕ್ಷಿತತ್ವಾತ್ ತಸ್ಯ ಚ ತತ್ರ ಅಭಾವಾನ್ನ ವ್ಯಭಿಚಾರಃ । ವ್ಯಾಪ್ತಿಸ್ತು ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ ಇತ್ಯುಕ್ತಾ ದ್ರಷ್ಟವ್ಯಾ ॥

'ಹರಿಃ ಸರ್ವೋತ್ತಮಃ ಆನಂದತೀರ್ಥವತ್ತ್ವಾತ್ ರಾಮಕೃಷ್ಣಾದ್ಯವತಾರವತ್' ಯದ್ಯಪಿ ಸ್ವ-ನಿರೂಪಿತಪ್ರೇರ್ಯತಾಸಂಬಂಧೇನ ಆನಂದತೀರ್ಥವತ್ತ್ವವು ರುದ್ರಾದಿ ಸಜ್ಜನರಲ್ಲಿ ಇದೆ. ಆದರೆ ಅವ-ರಲ್ಲಿ ಸರ್ವೋತ್ತಮತ್ವ ಇಲ್ಲ. ಆದ್ದರಿಂದ ಈ ಹೇತುವು ವ್ಯಭಿಚರಿತವಾಗುತ್ತದೆ ಎಂದು ತೋರುತ್ತದೆ. ಆದರೆ ಸ್ವನಿರೂಪಿತಪ್ರೇರಕತ್ವಸಂಬಂಧೇನ ಆನಂದತೀರ್ಥವತ್ತ್ವವನ್ನು ಹೇತುತ್ವೇನ ವಿವಕ್ಷಾಮಾಡಿದ್ದರಿಂದ ರುದ್ರಾದಿಗಳಲ್ಲಿ ವ್ಯಭಿಚಾರವು ಬರುವುದಿಲ್ಲ. ಅವರು ಆನಂದತೀರ್ಥರಿಂದ ಪ್ರೇರ್ಯರೇ ಹೊರತು ಪ್ರೇರಕರಲ್ಲ. ಆದ್ದರಿಂದ ಸ್ವನಿರೂಪಿತಪ್ರೇರಕತ್ವಸಂಬಂಧೇನ ಆನಂದತೀರ್ಥವತ್ತ್ವವು ಅವರಲ್ಲಿ ಬರುವು-ದಿಲ್ಲ. ಹೀಗೆ ಹೇಳಿದರೂ ಮಹಾಲಕ್ಷ್ಮಿಯಲ್ಲಿ ವ್ಯಭಿಚಾರ ಬರುವುದು. ಮಹಾಲಕ್ಷ್ಮಿಯು ಸರ್ವೋ-ತ್ತಮಳಲ್ಲ. ಆದರೆ ಸ್ವನಿರೂಪಿತಪ್ರೇರಕತ್ವಸಂಬಂಧೇನ ಆನಂದತೀರ್ಥವತ್ತ್ವ ಎಂಬ ಹೇತುವು ಅವಳಲ್ಲಿ ಬರುವುದರಿಂದ ವ್ಯಭಿಚಾರವು ಬರುತ್ತದೆ. ಆದಕ್ಕಾಗಿ ಸ್ವನಿರೂಪಿತಸ್ವತಂತ್ರತ್ವಸಮಾನಾಧಿಕರಣ-ಪ್ರೇರಕತ್ವಸಂಬಂಧೇನ ಆನಂದತೀರ್ಥವತ್ತ್ವವನ್ನು ಹೇತುತ್ವೇನ ವಿವಕ್ಷಾ ಮಾಡುತ್ತೇವೆ. ಮಹಾಲಕ್ಷ್ಮಿಯು ಆನಂದತೀರ್ಥರಿಗೆ ಪ್ರೇರಕಳಾಗಿದ್ದರೂ ಕೂಡ ಸ್ವತಂತ್ರಳಾಗದಿದ್ದದ್ದರಿಂದ ಸ್ವನಿರೂಪಿತಸ್ವತಂತ್ರತ್ವ-ಸಮಾನಾಧಿಕರಣಪ್ರೇರಕತ್ವಸಂಬಂಧೇನ ಆನಂದತೀರ್ಥವತ್ತ್ವವು ಮಹಾಲಕ್ಷ್ಮೀಯಲ್ಲಿ ಬರುವುದಿಲ್ಲ. ಆದ್ದರಿಂದ ವ್ಯಭಿಚಾರದೋಷವಿಲ್ಲ.

'ರುದ್ರಾದಿಸಜ್ಜನಾಃ ಹರಿಮಂತಃ ಆನಂದತೀರ್ಥವತ್ತ್ವಾತ್ ಮಹಾಲಕ್ಷ್ಮೀವತ್' : ರುದ್ರಾದಿ ಸಜ್ಜನರಲ್ಲಿ ಆನಂದತೀರ್ಥರು ಇರುವುದರಿಂದ ಶ್ರೀಹರಿಯು ಅವರಲ್ಲಿ ಸನ್ನಿಹಿತನಾಗಿರುತ್ತಾನೆ ಎಂದು ಈ ಅನುಮಾನದ ಭಾವವು. ಇಲ್ಲಿ ಪಕ್ಷ ಸಪಕ್ಷಗಳಲ್ಲಿ ಆನಂದತೀರ್ಥರು ಇದ್ದಾರೆ ಎಂದು ಹೇಳಬಹುದು. ಆದರೆ ಹರಿಯು ಸರ್ವತ್ರ ವ್ಯಾಪಕನಾದ್ದರಿಂದ ಹರಿಯೆಂಬ ಸಾಧ್ಯದ ಅಭಾವವುಳ್ಳ ವಿಪಕ್ಷವು ಅಪ್ರಸಿದ್ಧ-ವಾದ್ದರಿಂದ ಆನಂದತೀರ್ಥರಿಗೆ ವಿಪಕ್ಷಾದ್ವ್ಯಾವೃತ್ತಿಯನ್ನು ಹೇಗೆ ಪ್ರಸಿದ್ಧಗೊಳಿಸುವುದು ಎಂಬ ಪ್ರಶ್ನೆಗೆ ಹೀಗೆ ಉತ್ತರ. 'ಸ್ವವಿಶೇಷ್ಯಕಗುಣಪೂರ್ಣತ್ವಪ್ರಕಾರಕಸ್ಮೃತಿಮತ್ತ್ವಸಂಬಂಧೇನ ಹರಿಮತ್ತ್ವ'ವನ್ನು ಸಾಧ್ಯತ್ವೇನ ವಿವಕ್ಷಾ ಮಾಡಿದ್ದರಿಂದ ರುದ್ರಾದಿಗಳಲ್ಲಿ ಹಾಗೂ ಮಹಾಲಕ್ಷ್ಮೀಯಲ್ಲಿ ಈ ಸಂಬಂಧದಿಂದ ಹರಿಮತ್ತ್ವವು ಬಂದರೂ ಕೂಡ ದೈತ್ಯಾದಿಗಳಲ್ಲಿ ಈ ಸಂಬಂಧದಿಂದ ಹರಿಮತ್ತ್ವವು ಬರುವುದಿಲ್ಲ. ದೈತ್ಯಾದಿಗಳು ಹರಿಯನ್ನು ಗುಣಪೂರ್ಣತ್ವೇನ ಸ್ಮರಿಸುವುದಿಲ್ಲ. ಆದ್ದರಿಂದ ದೈತ್ಯಾದಿಗಳು ವಿಪಕ್ಷರಾಗ-ಬಹುದು. ಆದರೆ ಆ ವಿಪಕ್ಷರಾದ ದೈತ್ಯಾದಿಗಳಲ್ಲಿ 'ಸ್ವನಿರೂಪಿತಪ್ರೇರ್ಯತ್ವಸಂಬಂಧೇನ ಆನಂದ-ತೀರ್ಥವತ್ತ್ವ'ವು ಬರುವುದರಿಂದ ಮತ್ತೆ ವ್ಯಭಿಚಾರಪ್ರಸಕ್ತಿಯು ಬರುತ್ತದೆ. ಅದಕ್ಕಾಗಿ 'ಆನಂದ-ತೀರ್ಥನಿರೂಪಿತಸ್ವನಿಷ್ಠಪ್ರೇರ್ಯತ್ವಪ್ರೇರಕತ್ವ ಏತದನ್ಯತರಪ್ರಕಾರಕಪ್ರಮಿತಿಮತ್ತ್ವಸಂಬಂಧೇನ ಆನಂದ-ತೀರ್ಥವತ್ತ್ವವನ್ನು ಹೇತುತ್ವೇನ ವಿವಕ್ಷಾ ಮಾಡುತ್ತೇವೆ. ದೈತ್ಯರು ಯದ್ಯಪಿ ಶ್ರೀಮದಾಚಾರ್ಯರಿಂದ ಪ್ರೇರ್ಯರಾಗಿದ್ದಾರೆ. ಆದರೆ ತಮ್ಮನ್ನು ಪ್ರೇರ್ಯತ್ವೇನ ತಿಳಿದುಕೊಂಡಿಲ್ಲ. ಯದ್ಯಪಿ ಪ್ರೇರಕತ್ವೇನ ತಿಳಿದು-ಕೊಂಡಿರಬಹುದು. ಆದರೂ ಅದು ಪ್ರಮಿತಿಯಲ್ಲ ಭ್ರಾಂತಿ. ಹೀಗಾಗಿ 'ಆನಂದತೀರ್ಥನಿರೂಪಿತ-ಸ್ವನಿಷ್ಠಪ್ರೇರ್ಯತ್ವಪ್ರೇರಕತ್ವ ಏತದನ್ಯತರಪ್ರಕಾರಕಪ್ರಮಿತಿಮತ್ತ್ವಸಂಬಂಧೇನ ಆನಂದತೀರ್ಥವತ್ತ್ವವು ದೈತ್ಯರಲ್ಲಿ ಬರುವುದಿಲ್ಲ. ಆದ್ದರಿಂದ ವ್ಯಭಿಚಾರವಿಲ್ಲ. ಆದರೆ ಪಕ್ಷರಾದ ರುದ್ರಾದಿಗಳಲ್ಲಿ 'ಆನಂದ-ತೀರ್ಥನಿರೂಪಿತಸ್ವನಿಷ್ಠಪ್ರೇರ್ಯತ್ವಪ್ರಕಾರಕಪ್ರಮಿತಿಮತ್ತ್ವ' ಇರುವುದರಿಂದ ಸಪಕ್ಷಳಾದ ಲಕ್ಷ್ಮೀದೇವಿ-ಯಲ್ಲಿ 'ಆನಂದತೀರ್ಥನಿರೂಪಿತಸ್ವನಿಷ್ಠಪ್ರೇರಕತ್ವಪ್ರಕಾರಕಪ್ರಮಿತಿಮತ್ತ್ವ'ವು ಇರುವುದರಿಂದ ಪಕ್ಷ-ಸಪಕ್ಷಗಳಲ್ಲಿ ನಿರುಕ್ತಸಂಬಂಧೇನ ಆನಂದತೀರ್ಥವತ್ತ್ವವು ಬರುವುದು.

## ಪ್ರಕಾರಾಂತರದಿಂದ ಅನುಮಾನಪ್ರಯೋಗ

**ಆನಂದ – ಅಥವಾ ಆನಂದತೀರ್ಥಃ ಹರಿಮಾನ್ ಆನಂದತೀರ್ಥತ್ವಾತ್ ಇತಿ ಹೇತುಃ। ನ ಚೈವಂ ಮೂಲವಿರೋಧಃ। ಆನಂದತೀರ್ಥಪದಸ್ಯ ಭಾವಪ್ರಧಾನತ್ವಾತ್ ನ ಚೈವಂ ಸತಿ ಸಪಕ್ಷೇ ತತ್ರ ಅಪ್ರವೇಶಿತತ್ವಾತ್ ಅಸಾಧಾರಣ್ಯಮಿತಿ ವಾಚಯಮ್ । ಆನಂದತೀರ್ಥಾನಾಮ್ ಅನೇಕತ್ವೇನ ತೇಷಾಮೇವ ಸಪಕ್ಷತ್ವೋಪಪತ್ತೇಃ। ಕಸ್ಯಚಿತ್ ಆನಂದತೀರ್ಥಸ್ಯ ಪಕ್ಷತ್ವಾತ್ । ಅನವರತತತ್ಸ್ಮೃತಿ-**





ಮತ್ವಸ್ಯೈವ ಹರಿಮತ್ತ್ವಸ್ಯ ವಿವಕ್ಷಿತತ್ವಾತ್ ನ ಕೋಽಪಿ ದೋಷಃ । ಯದ್ವಾ ವೇದಾದಿಶಾಸ್ತ್ರಂ ಪ್ರತಿಪಾದ್ಯತ್ವೇನ ಹರಿಮತ್, ತತ್ಪ್ರತಿಪಾದಕತ್ವೇನ ಆನಂದತೀರ್ಥವತ್ತ್ವಾತ್ । ಅತ್ರ ಸದಾಗಮಾನಾಂ ಸಪಕ್ಷತ್ವಾತ್ ದುಶಾಸ್ತ್ರಾಣಾಂ ವಿಪಕ್ಷತ್ವಮ್ । ತಥಾ ಚ ನ ಕಶ್ಚಿದ್ದೋಷಃ।

ಅಥವಾ 'ಆನಂದತೀರ್ಥಃ ಸ್ವವಿಶೇಷ್ಯಕಗುಣಪೂರ್ಣತ್ವಪ್ರಕಾರಕಾನವರತಸ್ಮೃತಿಮತ್ತ್ವಸಂಬಂಧೇನ ಹರಿಮಾನ್ ಆನಂದತೀರ್ಥತ್ವಾತ್ ಆನಂದತೀರ್ಥರೂಪಾಂತರವತ್' ಎಂದು ಹೇಳಬಹುದು. ಯದ್ಯಪಿ ಮೂಲದಲ್ಲಿ ಆನಂದತೀರ್ಥರನ್ನು ಯುಕ್ತಿತ್ವೇನ ಹೇಳಿದ್ದಾರೆ. ಆದರೂ ಅದು ಭಾವಪ್ರಧಾನನಿರ್ದೇಶವೆಂದು ಭಾವಿಸಿ ಆನಂದತೀರ್ಥವತ್ತ್ವವನ್ನು ಯುಕ್ತಿತ್ವೇನ ವಿವಕ್ಷಾ ಮಾಡಲಾಗಿದೆ. ಯದ್ಯಪಿ ಆನಂದತೀರ್ಥರು ಒಬ್ಬರೇ ಆದರೂ ಅವರಿಗೆ ಅನೇಕರೂಪಗಳು ಇರುವುದರಿಂದ ಒಂದು ರೂಪವನ್ನು ಪಕ್ಷಮಾಡಿ ಉಳಿದ ರೂಪಗಳನ್ನು ಸಪಕ್ಷ ಮಾಡಿಕೊಳ್ಳಬಹುದು. ಎಲ್ಲ ಆನಂದತೀರ್ಥರ ರೂಪಗಳು ಕೂಡ ಯಾವಾಗಲೂ ಗುಣಪೂರ್ಣತ್ವೇನ ಭಗವಂತನ ಸ್ಮರಣೆಯನ್ನು ಮಾಡುತ್ತವೆ. ಎಂದು ಈ ಅನುಮಾನದ ಅಭಿಪ್ರಾಯ. ವಿಪಕ್ಷವಾದ ಹರಿಸ್ಮರಣೆ ಇಲ್ಲದ ದೈತ್ಯರಲ್ಲಿ ಆನಂದತೀರ್ಥವತ್ತ್ವವು ಇಲ್ಲದಿರುವುದರಿಂದ ವ್ಯಭಿಚಾರದೋಷವಿಲ್ಲ. ಇದರಂತೆ ಬಾಧಪ್ರತಿಪಕ್ಷಗಳು ಇಲ್ಲವೆಂದು ತಿಳಿಯಬೇಕು.

'ವೇದಾದಿಶಾಸ್ತ್ರಂ ಸ್ವನಿಷ್ಠಪ್ರತಿಪಾದ್ಯತಾನಿರೂಪಕತ್ವಸಂಬಂಧೇನ ಹರಿಮತ್ ಸ್ವನಿಷ್ಠಸಮರ್ಥಕತಾನಿರೂಪಕತ್ವಸಂಬಂಧೇನ ಆನಂದತೀರ್ಥವತ್ತ್ವಾತ್ ಪಂಚರಾತ್ರಾದಿಸದಾಗಮವತ್ ।' ಶ್ರೀಮಧ್ವಾಚಾರ್ಯರು ಯಾವ ಗ್ರಂಥವನ್ನು ಸಮರ್ಥನೆ ಮಾಡುವವರೋ ಆ ಗ್ರಂಥವು ವಿಷ್ಣುಪ್ರತಿಪಾದಕವಾಗಿರುತ್ತದೆ ಎಂದು ಈ ಅನುಮಾನದ ಭಾವವು. ಇಲ್ಲಿ ದುರಾಗಮಗಳೇ ವಿಪಕ್ಷಗಳು. ಅವುಗಳನ್ನು ಆನಂದತೀರ್ಥರು ಸಮರ್ಥನೆ ಮಾಡದೇ ಇರುವುದರಿಂದ ಸ್ವನಿಷ್ಠಸಮರ್ಥಕತಾನಿರೂಪಕತ್ವಸಂಬಂಧೇನ ಆನಂದತೀರ್ಥವತ್ತ್ವವು ಅವುಗಳಲ್ಲಿ ಬರುವುದಿಲ್ಲ. ಆದ್ದರಿಂದ ವ್ಯಭಿಚಾರಾದಿ ದೋಷಗಳು ಇಲ್ಲ.

## ಸುಧಾಪರಿಮಳಸಾರ

ಭಾಷ್ಯಕಾರರಾದ ಶ್ರೀಮಧ್ವಾಚಾರ್ಯರನ್ನು ಮೂರನೆಯ ಪದ್ಯದಿಂದ ನಮಸ್ಕರಿಸುತ್ತಿದ್ದಾರೆ. ಹಾಗೂ ಅವರ ಆಶೀರ್ವಾದವನ್ನು ಬೇಡುತ್ತಿದ್ದಾರೆ.

ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ
ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೇ ಸಕ್ತಿರ್ನ ವೈ ಬಾಧಿತೇ।







ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸ ಮೇ ।
ಭೂಯಾತ್ ತತ್ವವಿನಿರ್ಣಯಾಯ ಭಗವಾನ್ ಆನಂದತೀರ್ಥೋ ಮುನಿಃ ॥3॥

ಶ್ರೀಮಧ್ವಾಚಾರ್ಯರು ಅನುಮಾನಪ್ರಮಾಣರಾಗಿದ್ದಾರೆ ಎಂದು ಇಲ್ಲಿ ವರ್ಣಿಸಲಾಗಿದೆ. ಅನುಮಾನಪ್ರಮಾಣದಲ್ಲಿ ಪಕ್ಷವೃತ್ತಿತ್ವ, ಸಪಕ್ಷೇ ಸತ್ವ, ವಿಪಕ್ಷಾತ್ವ್ಯಾವೃತ್ತತ್ವ, ಅಬಾಧಿತ-ವಿಷಯತ್ವ, ಅಸತ್ಪ್ರತಿಪಕ್ಷತ್ವ ಎಂಬುದಾಗಿ ಐದು ಅಂಗಗಳು ಇರುತ್ತವೆ. ಶ್ರೀಮಧ್ವಾ-ಚಾರ್ಯರಲ್ಲೂ ಕೂಡ ಈ ಐದು ಅಂಗಗಳಿವೆ.

1. ಯಾವುದು ಸಾಧ್ಯಸಂದೇಹಕ್ಕೆ ಆಶ್ರಯವಾಗಿರುತ್ತದೋ ಅದು ಪಕ್ಷ ಎಂದು ಕರೆಸಿ-ಕೊಳ್ಳುತ್ತದೆ. ಭಕ್ತವರ್ಗವು ಯಾವುದು ತತ್ವಜ್ಞಾನ ಎಂಬ ಸಂದೇಹಕ್ಕೆ ಒಳಗಾದಾಗ ವಾಯು-ದೇವರು ಮಧ್ವಾಚಾರ್ಯರಾಗಿ ಅವತರಿಸಿದರು. ಆದ್ದರಿಂದ ಇಲ್ಲಿ ಸಂದೇಹಕ್ಕೆ ಆಶ್ರಯರಾದ ಭಕ್ತವರ್ಗವೇ ಪಕ್ಷ ಎನಿಸುತ್ತದೆ. ಇಂಥ ಪಕ್ಷೀಭೂತರಾದ ಭಕ್ತರಲ್ಲಿ ಆಚಾರ್ಯರು ಸನ್ನಿಹಿತ-ರಾಗಿದ್ದಾರೆ. ಪ್ರತಿಯೊಬ್ಬ ಭಕ್ತರಲ್ಲೂ ಆಚಾರ್ಯರು ನೆಲೆಸಿದ್ದಾರೆ ಎಂದರ್ಥ. ಆದ್ದರಿಂದ ಅನುಮಾನದ ಒಂದು ಅಂಗವೆನಿಸಿದ ಪಕ್ಷವೃತ್ತಿತ್ವವು ಆಚಾರ್ಯರಲ್ಲಿ ಬಂದಿತು.

2. ಸಪಕ್ಷೇ ಸತ್ವ – ಸಾಧ್ಯನಿಶ್ಚಯ ಇರುವ ಸ್ಥಳವೇ ಸಪಕ್ಷ ಎನಿಸುತ್ತದೆ. ತತ್ವನಿರ್ಣಯ-ವುಳ್ಳ ಭಗವಂತನೊಬ್ಬನೇ ಸಪಕ್ಷ ಎನಿಸುತ್ತಾನೆ ಅವನಲ್ಲಿ ನಿರಂತರ ಆಸಕ್ತರಾಗಿರುವುದರಿಂದ ಸಪಕ್ಷೇ ಸ್ಥಿತತ್ವ ಎಂಬ ಎರಡನೆಯ ಅಂಗವು ಶ್ರೀಮಧ್ವಾಚಾರ್ಯರಲ್ಲಿ ಬಂದಿತು. ಸಪಕ್ಷದಲ್ಲಿ ಸ್ಥಿತಿಯಷ್ಟೇ ವಿವಕ್ಷಿತ. ಏಕೆಂದರೆ ಭಗವಂತನ ವಿಷಯದಲ್ಲಿ ಪರಿಪೂರ್ಣವಾದ ಅರಿವು ವಾಯುದೇವರಿಗೆ ಇರುವುದಿಲ್ಲ.

3. ವಿಪಕ್ಷಾತ್ ವ್ಯಾವೃತ್ತತ್ವ – ಸಾಧ್ಯವು ಇರುವುದಿಲ್ಲವೆಂದು ನಿಶ್ಚಯವಾದ ಸ್ಥಳವೇ ವಿಪಕ್ಷ ಎನಿಸುತ್ತದೆ. ತತ್ವನಿರ್ಣಯದ ಲೇಶವೂ ಇಲ್ಲದ ಅಯೋಗ್ಯಜನರು ವಿಪಕ್ಷ ಎನಿಸುತ್ತಾರೆ. ಅವರ ವಿಷಯದಲ್ಲಿ ಶ್ರೀಮಧ್ವಾಚಾರ್ಯರು ಎಂದೂ ಕೂಡ ಉದ್ಧಾರಕ್ಕಾಗಿ ಪ್ರವೃತ್ತಿ ಮಾಡುವುದಿಲ್ಲ. ಆದ್ದರಿಂದ ವಿಪಕ್ಷಾತ್ ವ್ಯಾವೃತ್ತತ್ವವು ಆಚಾರ್ಯರಲ್ಲಿ ಪ್ರಾಪ್ತವಾಯಿತು.

4. ಅಬಾಧಿತವಿಷಯತ್ವ – ಬಾಧಿತವಾದ ವಿಷಯದಲ್ಲಿ ಪ್ರವೃತ್ತಿ ಮಾಡಬಾರದು ಎಂದು ಇದರ ಅರ್ಥ. ನಿಷಿದ್ಧವಿಷಯದಲ್ಲಿ ಎಂದೂ ಕೂಡ ಪ್ರವೃತ್ತಿಯನ್ನು ಮಾಡುವುದಿಲ್ಲ. ಋಜುಗಳಾದ ಶ್ರೀಮಧ್ವಾಚಾರ್ಯರು ಯಾವುದೇ ರೀತಿಯಲ್ಲಿಯೂ ಭ್ರಾಂತಿರಹಿತರಾಗಿದ್ದಾರೆ ಎಂದು ಕೂಡ ತಿಳಿಯಬಹುದು.





5. ಅಸತ್ಪ್ರತಿಪಕ್ಷತ್ವ – ಪ್ರತಿಪಕ್ಷ ಇರಬಾರದು ಎಂಬುದು ಇದರ ಅರ್ಥ. ಮಧ್ವಾಚಾರ್ಯರ ವಿಷಯದಲ್ಲಿ ಪ್ರತಿಭಟರ ಸಂಬಂಧವೇ ಇರುವುದಿಲ್ಲ. ಇವರಿಗೊಬ್ಬ ಎದುರಾಳಿ ಇರಲು ಸಾಧ್ಯವೇ ಇಲ್ಲ.

ಹೀಗೆ ಐದು ಅಂಗಗಳಿಂದ ಯುಕ್ತರಾಗಿರುವ ಕಾರಣ ಶ್ರೀಮಧ್ವಾಚಾರ್ಯರು ನಿರ್ದುಷ್ಟವಾದ ಪ್ರಮಾಣಸ್ವರೂಪರಾಗಿದ್ದಾರೆ.

## ಪರಿಮಳವೈಶಿಷ್ಟ್ಯ

* ಸಂಶಯವಿಪರ್ಯಯಾನಾಸ್ಕಂದಿತನಿರ್ಣೀತಪ್ರಾಮಾಣತನಿಶ್ಚಯವತ್ತ್ವಂ ಎಂಬುದಾಗಿ ತತ್ವನಿರ್ಣಯದ ಲಕ್ಷಣವನ್ನು ಸ್ಪಷ್ಟವಾಗಿ ಹೇಳಿದ್ದಾರೆ.

* 'ಸಪಕ್ಷೇ ಸ್ಥಿತತ್ವ' ಎಂಬುದನ್ನು ಸಮರ್ಥನೆ ಮಾಡುವಾಗ ಸ್ಥಿತಿಶಬ್ದಕ್ಕೆ ವ್ಯಾಪ್ತಿ ಎಂಬ ಅರ್ಥವನ್ನು ವಿವಕ್ಷಿಸಬಾರದೆಂಬ ಅಪೂರ್ವಪ್ರಮೇಯವನ್ನು ತಿಳಿಸಿದ್ದಾರೆ.

* ವೈ ಶಬ್ದದಿಂದ ಭ್ರಾಂತಿರಹಿತರಾಗಿದ್ದಾರೆಂಬುದನ್ನು ವಿವಕ್ಷಿಸಬೇಕೆಂದು ತಿಳಿಸಿದ್ದಾರೆ.

## ಭಾರತೀದೇವಿಯ ಸನ್ನಿಧಾನ ಎನ್ನಲ್ಲಿರಲಿ

**ಶ್ರೀಮನ್ನ್ಯಾಯಸುಧಾ–**

**ಭವತಿ ಯದನುಭಾವಾತ್ ಏಡಮೂಕೋಽಪಿ ವಾಗ್ಮೀ**

**ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।**

**ಸಕಲವಚನಚೇತೋದೇವತಾ ಭಾರತೀ ಸಾ**

**ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥೪॥**

ತಾಯಿ ಭಾರತೀದೇವಿಯೇ! ಯಾವ ನಿನ್ನ ಅನುಗ್ರಹದಿಂದ ಹುಟ್ಟುಕಿವುಡನೂ ಮತ್ತು ಹುಟ್ಟು ಮೂಕನೂ ದೊಡ್ಡ ವಾಗ್ಮಿಯಾಗುವನೋ ಮಂದಮತಿಯೂ ಕೂಡ ಮಹಾ-ಪ್ರಾಜ್ಞನಾಗುವನೋ ಅಂಥ ರುದ್ರಾದಿ ಸಕಲಚೇತನರ ಮಾತು ಮತ್ತು ಮನಸ್ಸುಗಳಿಗೆ

ಅಭಿಮಾನಿನಿಯಾದ ವಾಯುಪತ್ನಿಯಾದ ಭಾರತಿಯೇ! ನನ್ನ ಮಾತು ಮತ್ತು ಮನಸ್ಸಿನಲ್ಲಿ ನಿನ್ನ ಸನ್ನಿಧಾನ ಎಂದೆಂದೂ ಇರಲಿ.

ಅನ್ವಯಾರ್ಥ – ಯದನುಭಾವಾತ್ = ಯಾವ ಭಾರತೀದೇವಿಯ ಅನುಗ್ರಹದಿಂದ, ಏಡ-ಮೂಕಃ ಅಪಿ = ಹುಟ್ಟುಕಿವುಡ ಹಾಗೂ ಹುಟ್ಟು ಮೂಕನೂ ಕೂಡ, ವಾಗ್ಮೀ = ವಾಗ್ಮಿಯಾಗುವನು. ಜಡಮತಿರಪಿ ಜಂತುಃ = ಮಂದಮತಿಯಾದ ಅಧಮವ್ಯಕ್ತಿಯೂ ಕೂಡ, ಪ್ರಾಜ್ಞಮೌಲಿಃ = ಪ್ರಾಜ್ಞಶಿಖಾಮಣಿಯು, ಜಾಯತೇ = ಆಗುವನು. ಸಕಲವಚನಚೇತೋ ದೇವತಾ = ರುದ್ರಾದಿ ಸಮಸ್ತ ಚೇತನರ ಮಾತು ಮತ್ತು ಮನಸ್ಸುಗಳಿಗೆ ಅಭಿಮಾನಿನಿಯಾದ, ಸಾ = ಅಂತಹ, ಭಾರತೀ = ಭಾರತೀ-ದೇವಿಯು, ಮಮ = ನನ್ನ, ವಚಸಿ = ಮಾತಿನಲ್ಲಿ, ಚ = ಮತ್ತು, ಮಾನಸೇ = ಮನಸ್ಸಿನಲ್ಲಿ, ಸನ್ನಿಧಿಂ = ಸನ್ನಿಧಾನವನ್ನು, ನಿಧತ್ತಾಂ = ಸ್ಥಾಪಿಸಲಿ.

ವಿಗ್ರಹವಾಕ್ಯ – ೧. ಭವತಿ – ಭೂ ಸತ್ತಾಯಾಂ ಇತಿ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲಟಿ ಪ್ರ.ಪು. ಏಕವಚನೇ.

೨. ಯದನುಭಾವತ್ – ಯಸ್ಯಾಃ ಅನುಭಾವಃ ಯದನುಭಾವಃ, ತಸ್ಮಾತ್ ಯದ-ನುಭಾವಾತ್.

೩. ಏಡಮೂಕಃ – ಏಡಶ್ಚಾಸೌ ಮೂಕಶ್ಚ ಏಡಮೂಕಃ.

೪. ಜಡಮತಿಃ – ಜಡಾ ಮತಿಃ ಯಸ್ಯ ಸಃ ಜಡಮತಿಃ

೫. ಜಾಯತೇ – ಜನಿ ಪ್ರಾದುರ್ಭಾವೇ ಇತಿ ಧಾತೋಃ ಅಕರ್ಮಕಾತ್ ಕರ್ತರಿ ಆತ್ಮನೇಪದಿನಃ ಲಟಿ ಪ್ರ.ಪು. ಏಕವಚನೇ ಜಾಯತೇ ಇತಿ ರೂಪಮ್.

೬. ಪ್ರಾಜ್ಞಮೌಲಿಃ – ಪ್ರಾಜ್ಞೇಷು ಮೌಲಿಃ ಪ್ರಾಜ್ಞಮೌಲಿಃ.

೭. ಸಕಲವಚನಚೇತೋದೇವತಾ – ವಚನಾನಿ ಚ ಚೇತಾಂಸಿ ಚ ವಚನಚೇತಾಂಸಿ, ಸಕಲಾನಾಂ ವಚನಚೇತಾಂಸಿ ಸಕಲವಚನಚೇತಾಂಸಿ, ಸಕಲವಚನಚೇತಸಾಂ ದೇವತಾ ಸಕಲವಚನಚೇತೋದೇವತಾ

೮. ಭಾರತೀ – ಭರತಸ್ಯ ಇಯಂ ಸ್ತ್ರೀ ಭಾರತೀ.

೯. ನಿಧತ್ತಾಂ – ನಿ ಇತ್ಯುಪಸರ್ಗಪೂರ್ವಕಾತ್ 'ಡು ಧಾಞ್ ಧಾರಣಪೋಷಣಯೋಃ' ಇತಿ





ಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ಲೋಟಿ ಪ್ರ.ಪು. ಏಕವಚನೇ ನಿಧತ್ತಾಂ ಇತಿ ರೂಪಮ್ ।

## 'ಜಡಮತಿರಪಿ' ಎಂಬುದರ ವ್ಯಾಖ್ಯಾ

ಪರಿಮಳ– 'ದೇವೀಂ ಸರಸ್ವತೀಂ ವ್ಯಾಸಮ್' ಇತಿ ಶಿಷ್ಟಾಚಾರಶಿಕ್ಷಾಮನುಸೃತ್ಯ ವಾಯು -ಪತ್ನೀಸನ್ನಿಧಿಮ್ ಅರ್ಥಯತೇ – ಭವತೀತಿ ॥ ಏಡಮೂಕಃ = ವಕ್ತುಂ ಶ್ರೋತುಮಶಕ್ಯಃ; 'ಜಡೋಽಜ್ಞ ಏಡಮೂಕಸ್ತು ವಕ್ತುಂ ಶ್ರೋತುಮಶಿಕ್ಷಿತಃ' ಇತ್ಯಮರೋಕ್ತೇಃ । ಕಿಮ್ ಅನೀದೃಶಃ? ಇತಿ ಕೈಮುತ್ಯಾರ್ಥೋಽಪಿ ಶಬ್ದಃ । ವಾಗ್ಮಿತ್ವಭವನೇ ಪ್ರಾಜ್ಞಮೌಲಿತ್ವಭವನೇ ಚ ಹೇತುಃ – ಸಕಲವಚನಚೇತೋದೇವತಾ ಇತಿ ॥

'ದೇವೀಂ ಸರಸ್ವತೀಂ ವ್ಯಾಸಮ್' ಎಂಬ ಶಿಷ್ಟಾಚಾರದ ಶಿಕ್ಷಣೆಯನ್ನು ಅನುಸರಿಸುವವರಾಗಿ ವಾಯುಪತ್ನಿಯ ಸನ್ನಿಧಾನವನ್ನು ಭವತಿ ಇತ್ಯಾದಿಯಾಗಿ ಪ್ರಾರ್ಥಿಸುತ್ತಿದ್ದಾರೆ. ಏಡಮೂಕಶಬ್ದಕ್ಕೆ ಮಾತನಾಡಲು ಕೇಳಲು ಅಶಕ್ತನಾದವನು ಎಂದರ್ಥ. 'ಜಡೋಽಜ್ಞ ಏಡಮೂಕಸ್ತು ವಕ್ತುಂ ಶ್ರೋತುಮಶಿಕ್ಷಿತಃ' ಕೇಳಲು ಹೇಳಲು ಅಸಮರ್ಥನಾದ ಜಡದಂತೆ ಇರುವ ಅಜ್ಞಾನಿಯು ಏಡಮೂಕ ಎನಿಸುತ್ತಾನೆ ಎಂದು ಅಮರದಲ್ಲಿ ಹೇಳಲಾಗಿದೆ. ಏಡಮೂಕರಾಗದವರು ಭಾರತಿಯ ಅನುಗ್ರಹದಿಂದ ಪ್ರಾಜ್ಞಮೌಲಿಗಳು ಆಗದೇ ಇರುತ್ತಾರೇನು? ಎಂಬ ಕೈಮುತ್ಯವು ಅಪಿಶಬ್ದದಿಂದ ತಿಳಿಯುತ್ತಿದೆ. ವಾಗ್ಮಿತ್ವಕ್ಕೆ ಹಾಗೂ ಪ್ರಾಜ್ಞಮೌಲಿತ್ವಕ್ಕೆ 'ಸಕಲವಚನಚೇತೋ' ಎಂಬುದು ಹೇತುವಾಗಿದೆ.

ವಿಶೇಷವಿಚಾರ – ಮಹಾಭಾರತ ಹಾಗೂ ಭಾಗವತಗ್ರಂಥಗಳ ಪ್ರಾರಂಭದಲ್ಲಿ ಉಪದೇಶಮಾಡುವ ಮೊದಲು –

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ ॥

ಎಂಬುದಾಗಿ ಮಂಗಳಾಚರಣೆಯನ್ನು ಮಾಡಿದ್ದಾರೆ. ಗ್ರಂಥಪ್ರತಿಪಾದ್ಯನಾದ ನಾರಾಯಣ, ಗ್ರಂಥಕಾರರಾದ ವೇದವ್ಯಾಸದೇವರು, ಬ್ರಹ್ಮದೇವರು, ವಾಯುದೇವರು, ಶೇಷದೇವರು ಸರಸ್ವತೀ ಹಾಗೂ





ಭಾರತೀಯರು ಇವರುಗಳನ್ನು ಭಕ್ತಿಯಿಂದ ನಮಿಸಿದ್ದಾರೆ. ಇದಕ್ಕನುಗುಣವಾಗಿ ದೇವಿಯಾದ ಭಾರತೀದೇವಿಯನ್ನು ಮತ್ತು ಸರಸ್ವತೀದೇವಿಯನ್ನು ಈ ಶ್ಲೋಕದಲ್ಲಿ ಸ್ತುತಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಏರೀ ಬಾಳಾಚಾರ್ಯರು ಹೀಗೆ ಅಭಿಪ್ರಾಯ ಪಡುತ್ತಾರೆ. 'ಶ್ರಿಯಃ ಪತ್ಯೇ' ಎಂಬ ಪ್ರಾರಂಭದ ಶ್ಲೋಕದಲ್ಲಿ ನಾರಾಯಣನನ್ನು, 'ಯೇನ ಪ್ರಾದುರಭಾವಿ' ಎಂಬ ಶ್ಲೋಕದಲ್ಲಿ ವೇದವ್ಯಾಸದೇವರನ್ನು, 'ವ್ಯಾಪ್ತಿರ್ಯಸ್ಯ' ಎಂಬ ಶ್ಲೋಕದಲ್ಲಿ ವಾಯುದೇವರು ಹಾಗೂ ಬ್ರಹ್ಮದೇವರನ್ನು ನಮಸ್ಕರಿಸಲಾಗಿದೆ ಎನ್ನುತ್ತಾರೆ. ಪ್ರಕೃತ ಈ ಶ್ಲೋಕದಲ್ಲಿ ಸರಸ್ವತೀ ಭಾರತೀದೇವಿಯರನ್ನು ನಮಸ್ಕರಿಸುತ್ತಿದ್ದಾರೆ. ಮುಂದಿನ ಶ್ಲೋಕದಲ್ಲಿ ಶೇಷದೇವರ ಅವತಾರರೆಂದೇ ಪ್ರಸಿದ್ಧರಾದ ಪದ್ಮನಾಭತೀರ್ಥರನ್ನು ನಮಸ್ಕರಿಸುತ್ತಾರೆ. ಆದ್ದರಿಂದ 'ನಾರಾಯಣಂ ನಮಸ್ಕೃತ್ಯ' ಎಂಬ ಶ್ಲೋಕಕ್ಕೆ ಅನುಗುಣವಾಗಿ ನ್ಯಾಯಸುಧಾಕಾರರೂ ಕೂಡ ಗ್ರಂಥಾರಂಭದಲ್ಲಿ ನಮಿಸಬೇಕಾದವರೆಲ್ಲರಿಗೂ ಭಕ್ತಿಪೂರ್ವಕವಾಗಿ ನಮಸ್ಕರಿಸಿದ್ದಾರೆ.

ಭಗವಂತನ ಅಪರೋಕ್ಷ ಹಾಗೂ ತತ್ಸಾಧನೆಗೆ ಬ್ರಹ್ಮವಾಯುಗಳ ಅನುಗ್ರಹ ಹೇಗೆ ಅತ್ಯಾವಶ್ಯಕವೋ ಅದರಂತೆ ಭಾರತೀದೇವಿಯರ ಅನುಗ್ರಹ ಕೂಡ ಅತ್ಯಾವಶ್ಯಕ. ಮತ್ತು ತತ್ವಜ್ಞಾನವನ್ನು ಪಡೆಯಬೇಕೆಂದರೆ ಮಾತು ಹಾಗೂ ಮನಸ್ಸುಗಳ ಸಿದ್ಧಿಯಾಗಬೇಕು. ಇದಕ್ಕೆ ಅಭಿಮಾನಿಯಾದ ಭಾರತೀದೇವಿಯ ಅನುಗ್ರಹವೂ ಬೇಕೇ ಬೇಕು. ಈ ಕಾರಣದಿಂದ ಪ್ರಕೃತ ಸುಧಾಕಾರರು ಭಾರತೀದೇವಿಯ ಸನ್ನಿಧಾನವನ್ನು ಪ್ರಾರ್ಥಿಸುತ್ತಿದ್ದಾರೆ. ಯಾವ ವ್ಯಕ್ತಿಯು ಹುಟ್ಟಿನಿಂದಲೇ ಮಾತನಾಡಲು ಅಥವಾ ಕೇಳಲು ಅಸಮರ್ಥನಾಗಿದ್ದಾನೋ ಅವನು ಏಡಮೂಕನೆಂದು ಕರೆಸಿಕೊಳ್ಳುತ್ತಾನೆ. ಇಂಥ ಏಡಮೂಕನು ಶ್ರದ್ಧಾವಂತನಾಗಿ ಭಾರತೀದೇವಿಯನ್ನು ಆರಾಧನೆ ಮಾಡಿದರೆ ಬಲುವಾಗ್ಮಿಯಾಗಿ ಮೆರೆಯುತ್ತಾನೆ. ಇದರಿಂದ ಭಾರತೀದೇವಿಯ ವಾಗಭಿಮಾನಿತ್ವದ ಸಾಮರ್ಥ್ಯವು ತಿಳಿಯುತ್ತದೆ. ಇದರಂತೆ ಮನೋಭಿಮಾನಿತ್ವದ ಮಹಿಮೆಯನ್ನು 'ಜಡಮತಿರಪಿ ಜಂತುಃ ಜಾಯತೇ ಪ್ರಾಜ್ಞಮೌಲಿಃ' ಎಂಬುದರಿಂದ ತಿಳಿಸಿದ್ದಾರೆ. ಜಡಪ್ರಾಯವಾದ ಮನಸ್ಸುಳ್ಳ ಅತ್ಯಂತ ದಡ್ಡನೂ ಕೂಡ ಭಾರತೀದೇವಿಯರನ್ನು ಆರಾಧಿಸಿದರೆ ಪ್ರಾಜ್ಞರಲ್ಲಿಯೇ ಶಿಖಾಮಣಿಯಾಗಿ ಮೆರೆಯುತ್ತಾನೆ. ಹೀಗೆ ಎಲ್ಲರ ಮಾತು ಮತ್ತು ಮನಸ್ಸುಗಳನ್ನು ಸಂಪೂರ್ಣನಿಯಂತ್ರಣದಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯ ಭಾರತೀದೇವಿಯದ್ದಾಗಿದೆ. ಏಡಮೂಕ ಹಾಗೂ ಜಡಮತಿಗಳೂ ಕೂಡ ಮಹಾವಾಗ್ಮೀ ಹಾಗೂ ಪ್ರಾಜ್ಞಶಿರೋಮಣಿಗಳಾಗುವರು. ಹೀಗಿರುವಾಗ ಏಡಮೂಕರಾಗದ, ಜಡಮತಿಗಳಾಗದ ಇತರ ಭಕ್ತರು ಶ್ರದ್ಧೆಯಿಂದ ಭಾರತಿಯನ್ನು ಭಜಿಸಿದರೆ ಅವಳ ಅನುಗ್ರಹದಿಂದ ವಿಶಿಷ್ಟವಾಕ್ಪಟುತ್ವ, ಶ್ರೇಷ್ಠಪಾಂಡಿತ್ಯವು ಬಾರದಿರುತ್ತದೇನು? ಎಂಬ ಕೈಮುತ್ಯವನ್ನು ಅಪಿಶಬ್ದವು ಸೂಚನೆ ಮಾಡುತ್ತಿದೆ.

## ಶ್ಲೋಕದಲ್ಲಿ ಪರಸ್ಪರಹೇತುಹೇತುಮದ್ಭಾವ ಹೀಗಿದೆ

**ವಾಕ್ಯಾರ್ಥಚಂದ್ರಿಕಾ – ವಾಙ್ಮನಸಯೋಃ ಭಾರತೀಸನ್ನಿಧಿಪ್ರಾರ್ಥನಾನಿಮಿತ್ತಂ ಸಹೇತುಕಂ ವದನ್ನೇವ ತಾಂ ಪ್ರಾರ್ಥಯತೇ – ಭವತೀತಿ ॥ 'ಸ್ಯಾದೇಡೇ ಬಧಿರಃ ಪ್ರಜ್ಞೌ ಗುಡುಲಃ ಕುಕುರೇ ಕುಣಃ' ಇತ್ಯಭಿಧಾನಾತ್ ಏಡೋ ಬಧಿರಶ್ಚಾಸೌ ಮೂಕಶ್ಚೇತಿ ವಿಗ್ರಹಃ ॥**

ಈ ಶ್ಲೋಕದಲ್ಲಿ 'ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ' ಎಂಬ ಕೊನೆಯ ಪಾದವು ಪ್ರಾರ್ಥನೆಯನ್ನು ತಿಳಿಸುತ್ತಿದೆ. ಈ ಪ್ರಾರ್ಥನೆಗೆ ನಿಮಿತ್ತವನ್ನು ಮೂರನೆಯ ಪಾದವು ಹೇಳುತ್ತಿದೆ. ಸಕಲವಚನಚೇತೋದೇವತಾತ್ವ ಇರುವುದರಿಂದ ನನ್ನ ಮಾತು ಮತ್ತು ಮನಸ್ಸುಗಳಲ್ಲಿ ಸಾನ್ನಿಧ್ಯ- ವನ್ನು ಹೊಂದು ಎಂದು. ಈ ಸಕಲವಚನಚೇತೋದೇವತಾತ್ವಕ್ಕೆ ಹಿಂದಿನ ಎರಡು ಪಾದಗಳು ಹೇತುಸಮರ್ಪಕವಾಗಿವೆ. ಯಾವ ಕಾರಣದಿಂದ ಏಡಮೂಕನು ವಾಗ್ಮಿಯಾಗುತ್ತಾನೋ ಜಡಮತಿಯು ಪ್ರಾಜ್ಞನಾಗುತ್ತಾನೋ ಆ ಕಾರಣದಿಂದ ನೀನು ಸಕಲವಚನಚೇತೋದೇವತೆಯಾಗಿರುವಿ. ಆದ್ದರಿಂದ ನನ್ನ ಮಾತು ಮತ್ತು ಮನಸ್ಸುಗಳಲ್ಲಿ ಸಾನ್ನಿಧ್ಯವನ್ನು ಹೊಂದು. ಹೀಗೆ ಪರಸ್ಪರ ಹೇತುಹೇತುಮದ್ಭಾವವನ್ನು ತಿಳಿಯಬೇಕು.

'ಸ್ಯಾದೇಡೇ ಬಧಿರಃ ಪ್ರಜ್ಞೌ ಗುಡುಲಃ ಕುಕುರೇ ಕುಣಃ' ಈ ಕೋಶದಂತೆ ಏಡಶಬ್ದಕ್ಕೆ ಬಧಿರ ಎಂದರ್ಥ. ಬಧಿರ ಮತ್ತು ಮೂಕನಾದವನು ಎಂಬುದಾಗಿ ಏಡಮೂಕಶಬ್ದಕ್ಕೆ ಅರ್ಥವನ್ನು ತಿಳಿಯಬೇಕು.

## ರಸಘಟ್ಟ
## 'ಅಪಿ'ಪದದ ಸ್ವಾರಸ್ಯ

**ಯಾದುಪತ್ಯ – ಯದನುಭಾವಾಭಾವೇ ವಾಗ್ಮ್ಯಪಿ ಮೂಕೋ ಭವತೀತಿ ವ್ಯತಿರೇಕಸಮುಚ್ಚಾಯಕೋ ಅಪಿಶಬ್ದಃ । ಏವಮಗ್ರೇऽಪಿ । ಅನೇನ ವಾಗ್ದೇವತಾತ್ವಮುಪಪಾದ್ಯ ಚೇತೋದೇವತಾತ್ವಮುಪಪಾದಯತಿ – ಜಡಮತಿ- ರಪೀತಿ ॥**

ಭಾರತೀದೇವಿಯ ಅನುಗ್ರಹವಿದ್ದರೆ ಎಂಥ ದಡ್ಡನೂ ಕೂಡ ಪಂಡಿತನಾಗುತ್ತಾನೆ. ಆದರೆ ಭಾರತೀದೇವಿಯ ಅನುಗ್ರಹವಿಲ್ಲದಿದ್ದರೆ ವಾಗ್ಮಿಯಾದವನು ಕೂಡ ಏಡಮೂಕನಾಗುತ್ತಾನೆ. ಮಂದಮತಿಯಾಗುತ್ತಾನೆ. ಹೀಗೆ ವ್ಯತಿರೇಕಸಮುಚ್ಚಾಯಕದಲ್ಲಿ ಅಪಿಶಬ್ದವಿದೆ ಎಂದು ತಿಳಿಯಬೇಕು. ಇದರಂತೆ

ಮುಂದೂ ಕೂಡ. ವಾಗ್ದೇವತಾತ್ವವನ್ನು ಉಪಪಾದನೆ ಮಾಡಿ, ಚೇತೋದೇವತಾತ್ವವನ್ನು ಉಪಪಾದನೆ ಮಾಡಲು 'ಜಡಮತಿರಪಿ' ಎಂಬುದಾಗಿ ಹೇಳುತ್ತಿದ್ದಾರೆ.

## ಭಾರತೀ ಎಂದರೇನು?

ರಸರಂಜನೀ– ಶ್ರೀಹರಿಪ್ರೇರಿತಪ್ರಾಣಪ್ರೇರಣಾನುಸಾರೇಣ ಅಸ್ಯಾ ಅಪಿ ಸಕಲವಚನಚೇತಃಪ್ರೇರಕತಯಾ ತಥೋಪಾಸನಮ್ ಆವಶ್ಯಕಮಿತಿ ಸೂಚನಾಯ ವಾಕ್ಯಾದಿಪದಪರಿತ್ಯಾಗೇನ ಭಾರತೀತ್ಯೇವಾಹ । ಶ್ರೀಹರಿಚರಣಸಂತತಾನುಚಿಂತನಯೋಗ್ಯಾನಾಂ ತದ್ದಾನೇನ ಭರಣೇ ರತೋ ಹಿ ಭರತಃ, ತಸ್ಯೇಯಂ ಮತಾನುಸಾರಿತಯಾ ಇತಿ । ಭಾರತೀಶಬ್ದಾರ್ಥಃ ಶಬ್ದಾರ್ಥತತ್ವವಿದುಷಾಂ –

ಪ್ರಾಣೋ ಹಿ ಭರತೋ ನಾಮ ಸರ್ವಸ್ಯ ಭರಣಾತ್ ಶ್ರುತಃ ।

ತದ್ಭಾರ್ಯಾ ಭಾರತೀ ನಾಮ ....

ಇತ್ಯಾದಿ ಭಗವತ್ಪಾದಪ್ರದರ್ಶಿತಪ್ರಕಾರೇಣ ಪ್ರಸಿದ್ಧ ಏವೇತಿ । ಏತದರ್ಥಮಪಿ ಸಾ ಇತ್ಯಾವೃತ್ಯ ಭಾರತೀಪದೇ ಯೋಜ್ಯಮ್ ।

'ಶ್ರೀಹರಿಯಿಂದ ಪ್ರೇರಿತರಾದವರು ಮುಖ್ಯಪ್ರಾಣದೇವರು. ಇವರಿಂದ ಭಾರತೀದೇವಿಯು ಪ್ರೇರಿತಳಾಗಿ ಎಲ್ಲರ ಮಾತು ಮನಸ್ಸುಗಳನ್ನು ಪ್ರೇರಣೆ ಮಾಡುತ್ತಾಳೆ' ಹೀಗೆಯೇ ಉಪಾಸನೆ ಮಾಡಬೇಕು. ಇದನ್ನು ಸೂಚನೆ ಮಾಡುವುದಕ್ಕಾಗಿ ಭಾರತೀದೇವಿಯ ಬೇರೆ ಹೆಸರುಗಳಾದ ವಾಣೀ ಮೊದಲಾದವುಗಳನ್ನು ಉಲ್ಲೇಖ ಮಾಡದೇ ಭಾರತೀ ಎಂಬ ಪದಪ್ರಯೋಗವನ್ನೇ ಮಾಡಿದ್ದಾರೆ. ಭಾರತೀ ಎಂಬ ಪದಪ್ರಯೋಗದಿಂದ ಪ್ರತಿಯೊಬ್ಬ ಉಪಾಸಕರು ಮೇಲೆ ಹೇಳಿದ ಕ್ರಮದಿಂದಲೇ ಉಪಾಸನೆ ಮಾಡಬೇಕೆಂದು ಸ್ಪಷ್ಟವಾಗುತ್ತದೆ. ಅದು ಹೀಗೆ – ಶ್ರೀಹರಿಯ ಪಾದಕಮಲಗಳನ್ನು ನಿರಂತರ ಧ್ಯಾನ ಮಾಡುವವರಿಗೆ ತತ್ವಜ್ಞಾನವನ್ನು ನೀಡಿ ಅವರ ರಕ್ಷಣೆಯನ್ನು ಮಾಡುವವರು ವಾಯುದೇವರಾಗಿದ್ದಾರೆ. ಆದ್ದರಿಂದಲೇ ಇವರಿಗೆ 'ಭರತ' ಎಂಬ ಹೆಸರು ಬಂದಿದೆ. ಭಗವಂತನಲ್ಲಿ ರತರಾಗಿರುವುದರಿಂದಲೂ ಇವರನ್ನು ಭರತ ಎನ್ನುತ್ತಾರೆ. ಇಂಥಾ ಭರತರೆನಿಸಿದ ವಾಯುದೇವರ ಮತವನ್ನೇ ಸಂಪೂರ್ಣವಾಗಿ ಅನುಸರಿಸುವವಳು ಭಾರತೀದೇವಿಯಾಗಿದ್ದಾಳೆ. ಇದನ್ನು ಶ್ರೀಮದಾಚಾರ್ಯರೇ ಹೀಗೆ ಹೇಳಿದ್ದಾರೆ. 'ಪ್ರಾಣೋ ಹಿ ಭರತೋ ನಾಮ ಸರ್ವಸ್ಯ ಭರಣಾತ್ ಶ್ರುತಃ । ತದ್ಭಾರ್ಯಾ ಭಾರತೀ ನಾಮ ....' ಎಂದು. ಹೀಗೆ ವಾಯುದೇವರ ಜೊತೆಗೆ ಗೌಣವಾಗಿ ಭಾರತೀದೇವಿಯರನ್ನು ಆರಾಧನೆ ಮಾಡಬೇಕು ಎಂಬ ತಿಳಿಸುವುದಕ್ಕಾಗಿ ಭಾರತೀಶಬ್ದವನ್ನು ಪ್ರಯೋಗಿಸಿದ್ದಾರೆ.

## ಸರಸ್ವತಿಯ ಮರೆಯದಿರಿ

ಏರೀಬಾಳಾಚಾರ್ಯ – ಸ್ತ್ರೀಷು ಸಾರತ್ವಾತ್ ಸರಸ್ವತೀ 'ಸಾರತ್ವಾತ್ ಸ್ತ್ರೀಷು ಸಾ ದೇವೀ' ಇತಿ ಬೃಹದ್ಭಾಷ್ಯೋಕ್ತೇಃ। ಯಚ್ಛಬ್ದಶ್ರವಣಾತ್ ತಚ್ಛಬ್ದೋಽಧ್ಯಾಹಾರ್ಯಃ। ಸಾ ಭಾರತೀ ಸರಸ್ವತೀ ಚ ಮಮ ಮಾನಸೇ ಮನಸಿ; 'ಸ್ವಾಂತಂ ಹೃನ್ಮಾನಸಂ ಮನಃ' ಇತ್ಯಮರಃ।

ಸ್ತ್ರೀಯರಲ್ಲಿ ಶ್ರೇಷ್ಠಳಾಗಿರುವುದರಿಂದ "ಸಾ" ಎನಿಸುತ್ತಾಳೆ. ಹೀಗೆ ಬೃಹದಾರಣ್ಯಕಭಾಷ್ಯದಲ್ಲಿ 'ಸಾರತ್ವಾತ್ ಸ್ತ್ರೀಷು ಸಾ ದೇವೀ' ಎಂದು ಹೇಳಿದ್ದಾರೆ. ಹೀಗೆ ಸಾ ಎಂಬ ಶಬ್ದದಿಂದ ಸರಸ್ವತೀದೇವಿ-ಯನ್ನು ವಿವಕ್ಷಿಸಬೇಕು. ಆದ್ದರಿಂದ ಈ ಶ್ಲೋಕದಲ್ಲಿ ಸರಸ್ವತೀದೇವಿ ಹಾಗೂ ಭಾರತೀದೇವಿ ಇಬ್ಬರನ್ನೂ ಕೂಡ ನಮಿಸಿದ್ದಾರೆ. ಮಾನಸೇ ಎಂಬ ಶಬ್ದಕ್ಕೆ ಮನಸ್ಸಿನಲ್ಲಿ ಎಂದರ್ಥ. ಏಕೆಂದರೆ 'ಸ್ವಾಂತಂ ಹೃನ್ಮಾನಸಂ ಮನಃ' ಎಂಬ ಅಮರಕೋಶದಂತೆ ಮಾನಸ ಹಾಗೂ ಮನಃ ಈ ಎರಡೂ ಪರ್ಯಾಯಶಬ್ದಗಳಾಗಿವೆ.

## ಸುಧಾಪರಿಮಳಸಾರ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ ॥

ಎಂಬ ಮಂಗಳಶ್ಲೋಕದಿಂದ ಮಹಾಭಾರತವು ಪ್ರಾರಂಭವಾಗುತ್ತದೆ. ಗ್ರಂಥಪ್ರಾರಂಭದಲ್ಲಿ ಇಷ್ಟು ಮಂದಿಗೆ ಅವಶ್ಯವಾಗಿ ನಮಸ್ಕಾರಮಾಡಬೇಕು. ಇದೇ ಶಿಷ್ಟಾಚಾರಪರಂಪರೆ. ಇದಕ್ಕನುಗುಣವಾಗಿಯೇ ಭಾರತೀದೇವಿಯನ್ನು ಮುಂದಿನ ಶ್ಲೋಕದಿಂದ ಪ್ರಾರ್ಥಿಸುತ್ತಿದ್ದಾರೆ.

ಭವತಿ ಯದನುಭಾವಾತ್ ಏಡಮೂಕೋಽಪಿ ವಾಗ್ಮೀ
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ।
ಸಕಲವಚನಚೇತೋದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥

ಕೇಳುವುದಕ್ಕಾಗಲೀ, ಹೇಳುವುದಕ್ಕಾಗಲೀ ಅತ್ಯಂತ ಅಸಮರ್ಥನಾದ ಜಡಪ್ರಾಯನಾದ ಅಜ್ಞಾನಿಯೂ ಕೂಡ ಭಾರತೀದೇವಿಯ ಅನುಗ್ರಹದಿಂದ ಪಂಡಿತಶ್ರೇಷ್ಠನಾಗುತ್ತಾನೆ. ಹೀಗಿರು-ವಾಗ ಏಡಮೂಕರಾಗದ ಜಡಮತಿಗಳಾದ ಭಕ್ತರು ಶ್ರದ್ಧೆಯಿಂದ ಭಾರತಿಯನ್ನು ಪ್ರಾರ್ಥಿಸಿದರೆ ವಿಶಿಷ್ಟವಾಕ್ಪಟುತ್ವ ಹಾಗೂ ಶ್ರೇಷ್ಠಪಾಂಡಿತ್ಯಗಳು ಬಾರದೇ ಇರುತ್ತವೇನು?

## ಪರಿಮಳವೈಶಿಷ್ಟ್ಯ

* ಮಹಾಭಾರತದ ಮಂಗಳಶ್ಲೋಕಕ್ಕೆ ಅನುಗುಣವಾದ ಮಂಗಳಾಚರಣೆ ನ್ಯಾಯಸುಧೆಯಲ್ಲಿದೆ.

* ಅಪಿ ಶಬ್ದವು ಕೈಮುತ್ಯದ್ಯೋತಕ ಎಂಬುದರ ಸೂಚನೆ.

* ಏಡಮೂಕ ಪದಕ್ಕೆ ಅರ್ಥವಿವರಣೆ

## ಶ್ರೀಪದ್ಮನಾಭತೀರ್ಥರೇ ಜ್ಞಾನಸಂಪತ್ತು ನೀಡಿರಿ

**ಶ್ರೀಮನ್ನ್ಯಾಯಸುಧಾ–**

**ರಮಾನಿವಾಸೋಚಿತವಾಸಭೂಮಿಃ ಸನ್ನ್ಯಾಯರತ್ನಾವಳಿಜನ್ಮಭೂಮಿಃ ।**
**ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿಃ ಭವತಾದ್ ವಿಭೂತ್ಯೈ ॥೫**

ಓ ಪದ್ಮನಾಭತೀರ್ಥರೇ! ತಾವು ಶ್ರೀನಿವಾಸನಿಗೆ ಪರಮಪ್ರೇಮಾಸ್ಪದರು. ಆದ್ದರಿಂದಲೇ ಸನ್ನ್ಯಾಯರತ್ನಾವಳಿ ಎಂಬ ಶ್ರೇಷ್ಠ ಗ್ರಂಥಕ್ಕೆ ತವರು ಮನೆಯಾಗಿರುವಿರಿ. ವೈರಾಗ್ಯವನ್ನೇ ಭಾಗ್ಯವೆಂದು ತಿಳಿದಿರುವರು ತಾವು. ಅಮೃತಸಾಗರದಂತೆ ಗುಣಗಳಿಂದಲೇ ತುಂಬಿರುವ ತಾವು ಎನಗೆ ಜ್ಞಾನ ಭಕ್ತಿ ವೈರಾಗ್ಯಗಳೆಂಬ ಉತ್ತಮಸಂಪತ್ತುಗಳನ್ನು ಕರುಣಿಸಿರಿ.

ಅನ್ವಯಾರ್ಥ – ರಮಾನಿವಾಸೋಚಿತವಾಸಭೂಮಿಃ = ಶ್ರೀನಿವಾಸನ ಸನ್ನಿಧಾನಕ್ಕೆ ಪಾತ್ರರಾದ, ಸನ್ನ್ಯಾಯರತ್ನಾವಳಿಜನ್ಮಭೂಮಿಃ = ಸನ್ನ್ಯಾಯರತ್ನಾವಳಿಯೆಂಬ ಗ್ರಂಥಕ್ಕೆ ಉಗಮಸ್ಥಾನವಾದ, ವೈರಾಗ್ಯಭಾಗ್ಯಃ = ವೈರಾಗ್ಯವನ್ನೇ ಭಾಗ್ಯವನ್ನಾಗಿ ಪಡೆದ, ಪದ್ಮನಾಭತೀರ್ಥಾಮೃತಾಬ್ಧಿಃ = ಗುಣಗಳಿಂದ ತುಂಬಿದ ಅಮೃತಸಾಗರದಂತಿರುವ ಪದ್ಮನಾಭತೀರ್ಥರು, ಮಮ = ನನಗೆ, ವಿಭೂತಿ = ಜ್ಞಾನಾದಿಸಂಪತ್ತುಗಳನ್ನು, ಭವತಾತ್ = ಕರುಣಿಸಲಿ.

ವಿಗ್ರಹ – ರಮಾನಿವಾಸೋಚಿತವಾಸಭೂಮಿಃ – ರಮಾಯಾ ನಿವಾಸಃ ರಮಾನಿವಾಸಃ ರಮಾನಿವಾಸಸ್ಯ ಉಚಿತಾ ವಾಸಭೂಮಿಃ ರಮಾನಿವಾಸೋಚಿತವಾಸಭೂಮಿಃ





ಸನ್ನ್ಯಾಯರತ್ನಾವಳಿಜನ್ಮಭೂಮಿಃ – ಸನ್ನ್ಯಾಯರತ್ನಾವಳ್ಯಾಃ ಜನ್ಮಭೂಮಿಃ ಸನ್ನ್ಯಾಯರತ್ನಾವಳಿಜನ್ಮಭೂಮಿಃ.

ವೈರಾಗ್ಯಭಾಗ್ಯಃ - ವೈರಾಗ್ಯಮೇವ ಭಾಗ್ಯಂ ಯಸ್ಯ ಸಃ -ವೈರಾಗ್ಯಭಾಗ್ಯಃ

ಪದ್ಮನಾಭತೀರ್ಥಾಮೃತಾಬ್ಧಿಃ – ಪದ್ಮನಾಭತೀರ್ಥ ಏವ ಅಮೃತಾಬ್ಧಿಃ ಪದ್ಮನಾಭತೀರ್ಥಾಮೃತಾಬ್ಧಿಃ.

ಭವತಾತ್ – 'ಭೂ ಸತ್ತಾಯಾಮ್' ಇತಿ ಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಲೋಟ ಪ್ರ.ಪು. ಏಕವಚನೇ ಭವತಾತ್ ಇತಿ ರೂಪಮ್ ।

## ಮೂರು ವಿಶೇಷಣಗಳಿಂದ ಜ್ಞಾನ,ಭಕ್ತಿ, ವೈರಾಗ್ಯಗಳ ಸಮರ್ಥನೆ

**ಪರಿಮಳ– ಪ್ರಾಚೀನಟೀಕಾಕಾರಾತ್ ಅಭೀಷ್ಟಮ್ ಆಶಾಸ್ತೇ – ರಮೇತಿ ॥ ಸನ್ನ್ಯಾಯರತ್ನಾವಳ್ಯಾಃ ಅನುವ್ಯಾಖ್ಯಾನಟೀಕಾಗ್ರಂಥಸ್ಯ ಜನ್ಮಭೂಮಿಃ ಜನಕ ಇತ್ಯರ್ಥಃ । ಅಬ್ಧಿಪಕ್ಷೇ ವೈರಾಗ್ಯಂ ಶೌಕ್ಲ್ಯಂ ಧ್ಯೇಯಮ್ ॥**

ಪ್ರಾಚೀನಟೀಕಾಕಾರರಾದ ಶ್ರೀಪದ್ಮನಾಭತೀರ್ಥರ ಬಳಿ ಅಭೀಷ್ಟವನ್ನು ಪ್ರಾರ್ಥಿಸಲು 'ರಮಾನಿವಾಸೋ' ಇತ್ಯಾದಿಯಾಗಿ ಸ್ತುತಿಸುತ್ತಿದ್ದಾರೆ. ಅನುವ್ಯಾಖ್ಯಾನಕ್ಕೆ ಶ್ರೀಪದ್ಮನಾಭತೀರ್ಥರು ಸನ್ನ್ಯಾಯರತ್ನಾವಳಿ ಎಂಬ ಟೀಕೆಯನ್ನು ಬರೆದಿದ್ದಾರೆ. ಆದ್ದರಿಂದ ಇವರು ಸನ್ನ್ಯಾಯರತ್ನಾವಳಿಗೆ ಜನ್ಮಭೂಮಿ ಅಂದರೆ ಜನಕರಾಗಿದ್ದಾರೆ ಎಂದರ್ಥ. ಶ್ರೀಪದ್ಮನಾಭತೀರ್ಥರನ್ನು ಅಮೃತಸಮುದ್ರಕ್ಕೆ ಹೋಲಿಸಿದ್ದಾರೆ. ಇವರಲ್ಲಿರುವ ವೈರಾಗ್ಯವೇ ಸಮುದ್ರದ ಶ್ವೇತವರ್ಣದಂತಿದೆ ಎಂದು ತಿಳಿಯಬೇಕು.

ವಿಶೇಷವಿಚಾರ – ಶ್ರೀಪದ್ಮನಾಭತೀರ್ಥರು ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು. ಅನುವ್ಯಾಖ್ಯಾನ ಗ್ರಂಥಕ್ಕೆ ಮೊಟ್ಟಮೊದಲು ಸನ್ನ್ಯಾಯರತ್ನಾವಲಿ ಎಂಬ ಟೀಕೆಯನ್ನು ಬರೆದಿರುವರು.

ಅಮೃತಸಮುದ್ರವು ರಮಾಪತಿಗೆ ಯೋಗ್ಯವಾದ ವಾಸಭೂಮಿ. ಶ್ರೇಷ್ಠರತ್ನಗಳ ಸಮೂಹಕ್ಕೆ ಜನ್ಮಭೂಮಿ. ವೈರಾಗ್ಯದಂತೆ ಬೆಳಗುವ ಶ್ವೇತವರ್ಣವನ್ನು ಹೊಂದಿರುತ್ತದೆ. ಅಂತೆಯೇ ಶ್ರೀಪದ್ಮನಾಭತೀರ್ಥರಿದ್ದಾರೆ. ರಮಾಪತಿಯು ತಮ್ಮ ಹೃದಯಕಮಲದಲ್ಲಿ ದೃಢವಾಗಿ ನೆಲೆಸುವಂತೆ ಉತ್ತಮಭಕ್ತಿ-





ಯುಳ್ಳವರಾಗಿದ್ದಾರೆ. ಶ್ರೇಷ್ಠರತ್ನಸಮೂಹಗಳಿಗೆ ಸದೃಶವಾದ ವಾಕ್ಯಗಳುಳ್ಳ 'ಸನ್ನ್ಯಾಯರತ್ನಾವಳಿ' ಎಂಬ ಗ್ರಂಥಕ್ಕೆ ಜನಕರಾಗಿ ಜ್ಞಾನಿಗಳಾಗಿದ್ದಾರೆ. ಅಮೃತಸಮುದ್ರದ ಶ್ವೇತವರ್ಣದಂತಿರುವ ವೈರಾಗ್ಯ-ಭಾಗ್ಯವನ್ನು ಹೊಂದಿದ್ದಾರೆ. ಹೀಗೆ ಭಕ್ತಿ, ಜ್ಞಾನ, ವೈರಾಗ್ಯಗಳ ನಿಧಿಯಾದ ಪದ್ಮನಾಭತೀರ್ಥರು ಅಮೃತಸಮುದ್ರಕ್ಕೆ ಸದೃಶರಾಗಿದ್ದಾರೆ. 'ರಮಾನಿವಾಸೋಚಿತವಾಸಭೂಮಿಃ' ಇತ್ಯಾದಿ ಮೂರು ವಿಶೇ-ಷಣಗಳು ಕ್ರಮವಾಗಿ ಶ್ರೀಪದ್ಮನಾಭತೀರ್ಥರ ಭಕ್ತಿಜ್ಞಾನವೈರಾಗ್ಯಗಳನ್ನು ಸ್ಪಷ್ಟಪಡಿಸುತ್ತವೆ. ಅಂತಹ ಶ್ರೀಪದ್ಮನಾಭತೀರ್ಥರು ತನಗೆ ಭಕ್ತಿಜ್ಞಾನವೈರಾಗ್ಯರೂಪವಾದ ಐಶ್ವರ್ಯವನ್ನು ಅನುಗ್ರಹಿಸಲೆಂದು ಶ್ರೀಜಯತೀರ್ಥರು ಪ್ರಾರ್ಥಿಸುತ್ತಾರೆ.

## ಸನ್ನ್ಯಾಯರತ್ನಾವಳಿ ಗ್ರಂಥವೇ ಇದಕ್ಕೆ ಉಪಜೀವ್ಯ

ವಾಕ್ಯಾರ್ಥಚಂದ್ರಿಕಾ – ಸನ್ನ್ಯಾಯರತ್ನಾವಳಿಗ್ರಂಥಸ್ಯ ಅತ್ರೋಪಜೀವನಂ ವ್ಯಂಜಯನ್ ಅಮೃತಾಬ್ಧಿಶ್ಲೇಷೇಣ ತತ್ಕರ್ತ್ರ್ಯನ್ ಪ್ರಾರ್ಥಯತೇ – ರಮೇತಿ ॥ ಕ್ರಮೇಣ ವಿಶೇಷಣತ್ರಯೇಣ ಭಕ್ತಿಜ್ಞಾನವೈರಾಗ್ಯಾಣಿ ವ್ಯಂಜಯಂತಿ ।

ಶ್ರೀಮನ್ನ್ಯಾಯಸುಧಾಗ್ರಂಥಕ್ಕೆ ಪದ್ಮನಾಭತೀರ್ಥರು ಬರೆದಿರುವ ಸನ್ನ್ಯಾಯರತ್ನಾವಲಿ ಗ್ರಂಥವು ಉಪಜೀವ್ಯವಾಗಿದೆ. ಸನ್ನ್ಯಾಯರತ್ನಾವಳಿಯ ಮಾರ್ಗದರ್ಶನದಲ್ಲಿಯೇ ಶ್ರೀಮನ್ನ್ಯಾಯಸುಧಾ-ಗ್ರಂಥವನ್ನು ರಚನೆ ಮಾಡಿದ್ದಾರೆ. ಈ ಕಾರಣದಿಂದ ಶ್ರೀಪದ್ಮನಾಭತೀರ್ಥರನ್ನು ಅಮೃತಸಮುದ್ರಕ್ಕೆ ಹೋಲಿಸಿ ಪ್ರಾರ್ಥನೆ ಮಾಡುತ್ತಿದ್ದಾರೆ. ಈ ಶ್ಲೋಕದಲ್ಲಿ ಇರುವ ಮೂರು ವಿಶೇಷಣಗಳೂ ಕ್ರಮವಾಗಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ತೋರಿಸುತ್ತಿವೆ. ಭಗವಂತನು ಪದ್ಮನಾಭತೀರ್ಥರಲ್ಲಿ ನೆಲೆಸಿದ್ದಾನೆ ಎಂಬುದರಿಂದ ಅವರಿಗೆ ಪರಮಾತ್ಮನ ವಿಷಯದಲ್ಲಿ ಭಕ್ತಿ ಇದೆ ಎಂದು ತಿಳಿಯುತ್ತದೆ. ಸನ್ನ್ಯಾಯ-ರತ್ನಾವಳಿಯನ್ನು ರಚನೆ ಮಾಡಿದ್ದಾರೆಂದು ಹೇಳಿದ್ದರಿಂದ ಜ್ಞಾನವಿದೆ ಎಂಬುದು ತಿಳಿಯುತ್ತದೆ. 'ವೈರಾಗ್ಯ-ಭಾಗ್ಯ' ಎಂದು ಹೇಳಿದ್ದರಿಂದ ವೈರಾಗ್ಯವಿದೆ ಎಂದು ತಿಳಿಯುತ್ತದೆ.

## 'ಮೇ' ಎಂಬ ಪ್ರಯೋಗ ಎಲ್ಲಿ?; 'ಮಮ' ಎಂಬ ಪ್ರಯೋಗ ಎಲ್ಲಿ? ಒಂದು ವಿಮರ್ಶೆ

ವಾಕ್ಯಾರ್ಥಚಂದ್ರಿಕಾ–'ಏತೇ ವಾನ್ನಾವಾದಯೋಽನನ್ವಾದೇಶೇ ವಾ ವಕ್ತವ್ಯಾ' ಇತ್ಯುಕ್ತೇಃ 'ಮಮ' ಇತಿ ಸಾಧು । (ಕಿಂಚಿತ್ಕಾರ್ಯಂ ವಿಧಾತುಮ್ ಉಪಾತ್ತಸ್ಯ ಕಾರ್ಯಾಂತರಂ ವಿಧಾತುಂ





ಪುನರುಪಾದಾನಮ್ ಅನ್ವಾದೇಶಃ । ಕಾರ್ಯಂ ವಿಧಾತುಮ್ ಅಪೂರ್ವಂ ಬೋಧಯಿತುಮ್ ಇತ್ಯರ್ಥಃ । ಯಥಾ 'ಅನೇನ ವ್ಯಾಕರಣಮ್ ಅಧೀತಮ್, ಏನಂ ಛಂದೋऽಧ್ಯಾಪಯ' ಇತಿ । ಅನ್ವಾದೇಶೇ ತು ನಿತ್ಯಂ ಸ್ಯುಃ । ) ಏವಮುತ್ತರತ್ರಾಪಿ ದ್ರಷ್ಟವ್ಯಮ್ ।

'ಏತೇ ವಾನ್ನಾವಾದಯೋ ಅನನ್ವಾದೇಶಾ ವಾ ವಕ್ತವ್ಯಾ' ಎಂಬ ವಾರ್ತಿಕದಂತೆ ಅನನ್ವಾದೇಶವಾದ್ದರಿಂದ ಮಮ ಎಂಬ ಪ್ರಯೋಗವು ಸಾಧುವಾಗಿದೆ. ಮುಂದೂ ಕೂಡ ಇಂಥ ಪ್ರಯೋಗಗಳನ್ನು ಈ ವಾರ್ತಿಕದ ಪ್ರಕಾರ ಸಾಧುವೆಂದು ಉಪಪಾದನೆ ಮಾಡಬೇಕು.

ಅಸ್ಮತ್ ಶಬ್ದ ಹಾಗೂ ಯುಷ್ಮತ್ ಶಬ್ದಗಳಲ್ಲಿ ದ್ವಿತೀಯಾವಿಭಕ್ತಿ, ಚತುರ್ಥೀವಿಭಕ್ತಿ, ಷಷ್ಠೀವಿಭಕ್ತಿಗಳ ಪ್ರತಿಯೊಂದು ಪುರುಷಗಳು ಎರಡೆರಡು ರೂಪಗಳನ್ನು ಹೊಂದುತ್ತವೆ. ಪ್ರಕೃತ ಯುಷ್ಮತ್ ಶಬ್ದದ ಷಷ್ಠೀವಿಭಕ್ತಿಯಲ್ಲಿ 'ಮಮ-ಮೇ, ಆವಯೋಃ-ನೌ, ಅಸ್ಮಾಕಂ-ನಃ' ಎಂಬುದಾಗಿ ಮೂರು ವಚನಗಳಲ್ಲಿ ಎರಡೆರಡು ರೂಪಗಳಿವೆ. ಈ ಎರಡೆರಡು ರೂಪಗಳಲ್ಲಿ ಯಾವ ರೂಪವನ್ನು ಎಲ್ಲಿ ಪ್ರಯೋಗ ಮಾಡಬೇಕು ಎಂಬುದಕ್ಕೆ ವ್ಯಾಕರಣಶಾಸ್ತ್ರದಲ್ಲಿ ನಿಯಮ ಮಾಡಿದ್ದಾರೆ. ಶ್ಲೋಕದ ಪಾದದ ಮೊದಲು ಯುಷ್ಮತ್ ಶಬ್ದದ ಹಾಗೂ ಅಸ್ಮತ್ ಶಬ್ದದ ದ್ವಿತೀಯಾ ವಿಭಕ್ತಿ ಚತುರ್ಥೀವಿಭಕ್ತಿ ಷಷ್ಠೀವಿಭಕ್ತಿಗಳನ್ನು ಪ್ರಯೋಗ ಮಾಡುವ ಸಂದರ್ಭವಿದ್ದರೆ ಮೊದಲಿರುವ ತವ, ಮಮ, ಇವುಗಳನ್ನೇ ಪ್ರಯೋಗ ಮಾಡಬೇಕು. ಪಾದದ ಮಧ್ಯದಲ್ಲಿ ಇದೇ ವಿಭಕ್ತಿಗಳ ಪ್ರಯೋಗ ಮಾಡುವ ಸಂದರ್ಭವಿದ್ದರೆ ಎರಡನೆಯ ತೇ, ಮೇ ಇತ್ಯಾದಿ ರೂಪಗಳನ್ನು ಪ್ರಯೋಗ ಮಾಡಬೇಕು. ಪ್ರಕೃತ 'ವೈರಾಗ್ಯಭಾಗ್ಯೋ ಮಮ' ಎಂಬಲ್ಲಿ ಪಾದದ ಮಧ್ಯದಲ್ಲಿ ಅಸ್ಮತ್ ಶಬ್ದದ ಷಷ್ಠೀವಿಭಕ್ತಿಯ ಏಕವಚನಪ್ರಯೋಗವನ್ನು ಮಾಡಿದ್ದಾರೆ. ಪಾದದ ಮಧ್ಯದಲ್ಲಿರುವ ಕಾರಣ ಏಕವಚನದ ಎರಡನೆಯ ರೂಪವೆನಿಸಿದ ಮೇ ಎಂಬ ಪ್ರಯೋಗವನ್ನೇ ಮಾಡಬೇಕು. ಮಮ ಎಂಬ ರೂಪದ ಪ್ರಯೋಗವನ್ನು ಮಾಡಬಾರದು. ಹೀಗಿರುವಾಗ ಸುಧಾಕಾರರು 'ವೈರಾಗ್ಯಭಾಗ್ಯೋ ಮೇ' ಎಂದು ಹೇಳದೇ 'ವೈರಾಗ್ಯಭಾಗ್ಯೋ ಮಮ' ಎಂಬುದಾಗಿ ವ್ಯಾಕರಣಕ್ಕೆ ವಿರುದ್ಧವಾದ ಪ್ರಯೋಗವನ್ನೇಕೆ ಮಾಡಿದರು?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು – ಪಾದಮಧ್ಯ, ಪಾದಾರಂಭಗಳು ಪ್ರಯೋಗಕ್ಕೆ ಹೇಗೆ ನಿಮಿತ್ತವಾಗಿವೆಯೋ ಅದರಂತೆ ಅನ್ವಾದೇಶ ಹಾಗೂ ಅನನ್ವಾದೇಶ ಕೂಡ ನಿಮಿತ್ತವಾಗಿವೆ ಎಂಬುದಾಗಿ 'ಏತೇ ವಾನ್ನಾವಾದಯೋ ಅನನ್ವಾದೇಶೇ ವಾ ವಕ್ತವ್ಯಾ' ಎಂಬ ವಾರ್ತಿಕವು ಸ್ಪಷ್ಟತೆಯನ್ನು ನೀಡಿದೆ. ಅನ್ವಾದೇಶ ಎಂಬುದಕ್ಕೆ ಹೀಗರ್ಥ – ಕಿಂಚಿತ್ಕಾರ್ಯಂ ವಿಧಾತುಮ್ ಉಪಾತ್ತಸ್ಯ ಕಾರ್ಯಾಂತರಂ ವಿಧಾತುಂ ಪುನರುಪಾದಾನಮ್ ಅನ್ವಾದೇಶಃ । ಒಂದು ಕಾರ್ಯವನ್ನು ವಿಧಾನಮಾಡಲು ಯಾವುದನ್ನು ವಿಧೇಯವನ್ನಾಗಿ ಅಂಗೀಕರಿಸಲಾಗುತ್ತದೋ ಅದೇ ವಿಧೇಯವನ್ನೇ ಪುನಃ ಕಾರ್ಯಾಂತರದ ವಿಧಾನಕ್ಕೆ





ಸ್ವೀಕರಿಸುವುದನ್ನು ಅನ್ವಾದೇಶ ಎಂಬುದಾಗಿ ಕರೆಯುತ್ತಾರೆ. ಮತ್ತೊಂದು ಕಾರ್ಯದ ವಿಧಾನವೆಂದರೆ ಅಪೂರ್ವಾರ್ಥವನ್ನು ತಿಳಿಸುವ ಉದ್ದೇಶವಿದ್ದಾಗ ಎಂದರ್ಥ. ಉದಾ- 'ಅನೇನ ವ್ಯಾಕರಣಮಧೀತಮ್, ಏನಂ ಛಂದೋಽಧ್ಯಾಪಯ' 'ಇವನು ವ್ಯಾಕರಣಶಾಸ್ತ್ರವನ್ನು ಪೂರ್ಣವಾಗಿ ಅಧ್ಯಯನ ಮಾಡಿದ್ದಾನೆ. ಆದ್ದರಿಂದ ವೇದಾಧ್ಯಯನವನ್ನು ಮಾಡಿಸು' ಎಂದು. ಇಲ್ಲಿ ಅನೇನ ವ್ಯಾಕರಣಮ್ ಅಧೀತಂ ಎಂಬ ಹಿಂದೆ ಪ್ರಸಕ್ತವಾದ ವಾಕ್ಯದಲ್ಲಿ ಏತಚ್ಛಬ್ದದ ಪ್ರಯೋಗವಿದೆ. ಅದೇ ಏತಚ್ಛಬ್ದದ ಪ್ರಯೋಗವು ಮುಂದಿನ ವಾಕ್ಯದಲ್ಲೂ ಕೂಡ ಏನಂ ಛಂದೋ ಅಧ್ಯಾಪಯ ಎಂಬುದಾಗಿ ಇರುತ್ತದೆ. ಇದು ಅನ್ವಾದೇಶವಾದ್ದರಿಂದ ನಿತ್ಯವಾಗಿಯೇ ಏನಂ ಎಂಬುದಾಗಿ ಪ್ರಯೋಗ ಮಾಡಬೇಕೇ ಹೊರತು 'ಏತಂ ಛಂದೋಽಧ್ಯಾಪಯ' ಎಂಬ ಪ್ರಯೋಗ ಮಾಡಬಾರದು. ವೈರಾಗ್ಯಭಾಗ್ಯೋ ಮಮ ಎಂಬಲ್ಲಿ ಹೀಗೆ ಅನ್ವಾದೇಶವು ಇರುವುದಿಲ್ಲ. ಪಾದಮಧ್ಯ ಎಂಬ ನಿಮಿತ್ತ ಪ್ರಯುಕ್ತವಾಗಿ ಮೇ ಎಂಬ ಪ್ರಯೋಗ ಮಾಡಬೇಕೆಂಬ ನಿಯಮವಿದ್ದರೂ ಕೂಡ, ಈ ವಾರ್ತಿಕದ ಪ್ರಕಾರ ಅನ್ವಾದೇಶವಿರುವುದರಿಂದ ಮೇ ಎಂಬ ಪ್ರಯೋಗ ಮಾಡಬೇಕಿಲ್ಲ. ಏಕೆಂದರೆ ಹಿಂದಿನ 'ರಮಾನಿವಾಸೋ' ಎಂಬ ವಾಕ್ಯದಲ್ಲಿ ಅಥವಾ ಪಾದದಲ್ಲಿ ಅಸ್ಮತ್ ಶಬ್ದವು ಪ್ರಸಕ್ತವೇ ಆಗಿಲ್ಲ. ಯಾವುದೊಂದು ಕಾರ್ಯವನ್ನು ವಿಧಾನಮಾಡಲು ಅಸ್ಮತ್‌ಶಬ್ದವನ್ನು ಸ್ವೀಕರಿಸಿಲ್ಲ. ಮುಂದಿನ ಈ ಪಾದದಲ್ಲೂ ಕೂಡ ಯಾವುದೇ ಅಪೂರ್ವಕಾರ್ಯದ ವಿಧಾನವೂ ಇಲ್ಲ. ಆದ್ದರಿಂದ ಇದು ಅನ್ವಾದೇಶ ಎಂದು ಕರೆಸಿಕೊಳ್ಳುವುದಿಲ್ಲ. ಅನನ್ವಾದೇಶದಲ್ಲಿ ವಿಕಲ್ಪವಾಗಿ ಪ್ರಯೋಗವನ್ನು ಹೇಳಿರುವುದರಿಂದ ಮಮ ಎಂಬ ಪ್ರಯೋಗವು ಸಾಧುವಾಗುತ್ತದೆ. ಮೇ ಎಂಬ ಪ್ರಯೋಗವೂ ಕೂಡ ಸಾಧುವಾಗುತ್ತದೆ. ಹಾಗಾಗಿ 'ವೈರಾಗ್ಯಭಾಗ್ಯೋ ಮಮ' ಎಂಬ ಪ್ರಯೋಗವು ವ್ಯಾಕರಣವಿರುದ್ಧವಾಗಿಲ್ಲ.

## ರಸಘಟ್ಟ

## ಶ್ರೀಪದ್ಮನಾಭತೀರ್ಥರ ಮಹಿಮೆ

ಲಘುರಸರಂಜಿನೀ – ಚತುರ್ಥಂ ಗುರುತ್ವಂ ಪದ್ಮನಾಭತೀರ್ಥೇ ಅಸ್ತೀತಿ ತತೋ ವೈರಾಗ್ಯಾದಿವಿಭೂತಿಮ್ ಆಶಾಸ್ತೇ – ರಮೇತಿ ॥ 'ರಮಾನಿವಾಸೋಚಿತವಾಸಭೂಮಿಃ' ಇತ್ಯನೇನ ಶ್ರೀಪದ್ಮನಾಭತೀರ್ಥಸ್ಯ ಶ್ರೀನಿವಾಸಪ್ರೇಮಪಾತ್ರತ್ವಂ ಪ್ರತೀಯತೇ । ತತಃ 'ಪ್ರಿಯೋ ಹಿ ಜ್ಞಾನಿನೋತ್ಯರ್ಥಮಹಂ ಸ ಚ ಮಮ ಪ್ರಿಯಃ' ಇತ್ಯುಕ್ತೇಃ ತತ್ಪ್ರೇಮಪಾತ್ರತ್ವಂ ಶ್ರೀನಿವಾಸಸ್ಯ ಚ ಪ್ರತೀಯತೇ । ತದುಭಯಮಪಿ ಸನ್ನ್ಯಾಯರತ್ನಾವಲೀಗ್ರಂಥಕರಣೇ ವೈರಾಗ್ಯಭಾಗ್ಯೇ ಚ ಹೇತುಃ ॥

ವೇದವ್ಯಾಸದೇವರು ಮೊದಲನೆಯ ಗುರು. ಮಧ್ವಾಚಾರ್ಯರು ಎರಡನೆಯ ಗುರು. ಶ್ರೀಭಾರತೀದೇವಿಯರು ಮೂರನೆಯ ಗುರು. ಶ್ರೀಪದ್ಮನಾಭತೀರ್ಥರು ನಾಕನೆಯ ಗುರು ಆಗಿದ್ದಾರೆ.

ಇವರ ಬಳಿ ವೈರಾಗ್ಯಾದಿ ಸಂಪತ್ತನ್ನು ಪ್ರಾರ್ಥಿಸಲು 'ರಮಾನಿವಾಸೋಚಿತವಾಸಭೂಮಿಃ' ಇತ್ಯಾದಿಯಾಗಿ ಸ್ತುತಿಸುತ್ತಿದ್ದಾರೆ. 'ರಮಾನಿವಾಸೋಚಿತವಾಸಭೂಮಿಃ' ಇತ್ಯಾದಿ ವಿಶೇಷಣದಿಂದ ಶ್ರೀಪದ್ಮನಾಭತೀರ್ಥರು ಶ್ರೀನಿವಾಸನಿಗೆ ಪ್ರೇಮಪಾತ್ರರಾಗಿದ್ದಾರೆಂದು ತಿಳಿಯುತ್ತದೆ. 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ' ಎಂಬ ಕೃಷ್ಣನ ಮಾತಿನಂತೆ ಶ್ರೀನಿವಾಸನನ್ನು ಇವರು ಭಕ್ತಿ ಮಾಡುತ್ತಾರಾದ್ದರಿಂದ ಇವರು ಶ್ರೀನಿವಾಸನಿಗೆ ಪ್ರೇಮಾಸ್ಪದರಾಗಿದ್ದಾರೆಂದು ತಿಳಿಯಬೇಕು. ಈ ಎರಡೂ ಬಗೆಯ ಪ್ರೇಮಪಾತ್ರತ್ವವು ಸನ್ನ್ಯಾಯರತ್ನಾವಲಿಯ ರಚನೆಗೆ ಮತ್ತು ವೈರಾಗ್ಯಭಾಗ್ಯಕ್ಕೆ ಹೇತುವಾಗಿರುತ್ತದೆ.

## ಸತ್ತರ್ಕದೀಪಾವಳಿಯನ್ನೇಕೆ ಉದಾಹರಿಸಿಲ್ಲ

ವಾಕ್ಯಾರ್ಥರತ್ನಮಾಲಾ – ಸತ್ತರ್ಕದೀಪಾವಳ್ಯಾದಿಗ್ರಂಥಪರಿತ್ಯಾಗೇನ ಏತದನುವ್ಯಾಖ್ಯಾನವ್ಯಾಖ್ಯಾನರೂಪಸನ್ನ್ಯಾಯರತ್ನಾವಳಿಮಾತ್ರಗ್ರಹಣೇನ ಅತ್ರ ತದುಪಜೀವನಸ್ಯ ಸೂಚನಾದಿತಿ ಭಾವಃ।

ಶ್ರೀಪದ್ಮನಾಭತೀರ್ಥರು ಬ್ರಹ್ಮಸೂತ್ರಕ್ಕೆ ಸತ್ತರ್ಕದೀಪಾವಳಿ ಎಂಬ ಗ್ರಂಥವನ್ನು ರಚನೆ ಮಾಡಿದ್ದಾರೆ. ಇನ್ನೂ ಅನೇಕ ಗ್ರಂಥಗಳನ್ನೂ ರಚನೆ ಮಾಡಿದ್ದಾರೆ. ಅವುಗಳನ್ನೆಲ್ಲಾ ಬಿಟ್ಟು ಅನುವ್ಯಾಖ್ಯಾನದ ವ್ಯಾಖ್ಯಾನವೆನಿಸಿದ ಸನ್ನ್ಯಾಯರತ್ನಾವಳಿ ಎಂಬ ಗ್ರಂಥವನ್ನಷ್ಟೇ ಸುಧಾಕಾರರು ಉಲ್ಲೇಖ ಮಾಡುತ್ತಿದ್ದಾರೆ. ಇದರಿಂದ ಸನ್ನ್ಯಾಯರತ್ನಾವಳಿ ಗ್ರಂಥವು ಈ ಗ್ರಂಥಕ್ಕೆ ಉಪಜೀವ್ಯವಾಗಿದೆ ಎಂದು ಸೂಚಿಸಿದಂತಾಯಿತು.

## ಜ್ಞಾನ, ಭಕ್ತಿ, ವಿರಕ್ತಿಸಂಪನ್ನರು ಶ್ರೀಪದ್ಮನಾಭತೀರ್ಥರು

ರಸರಂಜಿನೀ– ಅಮೃತಾಂಭೋಧಿರ್ಹಿ ರಮಾಯಾಃ ನಿವಾಸಸ್ಥಾವಸ್ಥಾನಸ್ಯೋಚಿತಾ ಯೋಗ್ಯಾ ವಾಸಭೂಮಿಃ ಪಿತೃಗೇಹರೂಪ ಇತಿ।

ಲಕ್ಷ್ಮೀನಿವಾಸಭೂತಸ್ಯ ಹರೇರುಚಿತಾ ಸರ್ವೈಃ ಶ್ಲಾಘ್ಯಾಃ ವಾಸಭೂಮಿಃ ಆವಾಸಯೋಗ್ಯಸ್ಥಾನಭೂತ ಇತಿ ವಾ ತಸ್ಯೈವ ತತ್ಪ್ರಿಯಸ್ಥಾನತ್ವೇನ ಪುರಾಣಾದಿಪ್ರಸಿದ್ಧತ್ವಾತ್ । ಅಯಂ ತು ಸರ್ವದಾ ಶ್ರೀಹರಿಧ್ಯಾತೃತಯಾ ವಿಶೇಷತಃ ತತ್ಸನ್ನಿಧಾನಪಾತ್ರಮಿತಿ ಸರ್ವಸಮ್ಮತ ಇತಿ । ಅನೇನ ಭಕ್ತಿಮತ್ವಂ ಸೂಚಿತಮ್ । ಭಕ್ತಿಂ ವಿನಾ ಪ್ರೀತಿಪೂರ್ವಕಶ್ರೀಹರಿಸನ್ನಿಧಾನಪಾತ್ರತ್ವಾಯೋಗಾತ್ । ತಥಾ ರತ್ನಾವಲೀನಾಂ ಜನ್ಮಭೂಮಿರಿಯಂ ತು ಸಂತೋ ನಿರ್ದೋಷಾ ಯೇ ನ್ಯಾಯಾಸ್ತ ಏವ ರತ್ನಾನಿ ತೇಷಾಂ

**ಸಂಘವತ್ತ್ವಾತ್ ತನ್ನಾಮಕಸ್ಯ ಗ್ರಂಥಸ್ಯೋತ್ಪಾದಕಃ ಅನೇನ ಜ್ಞಾನವತ್ತ್ವಂ ಸೂಚಿತಮ್ । ತದಭಾವೇ ಗ್ರಂಥನಿರ್ಮಾಣಾಯೋಗಾತ್ । ತಥಾ ವೈರಾಗ್ಯಂ ಶೌಕ್ಲ್ಯಂ ಭಾಗ್ಯಂ ಯಸ್ಯ ತಾದೃಶೋಽಯಂ ತು ವಿಷಯವಿರಕ್ತಿರೂಪಭಾಗ್ಯವಾನ್ ॥**

ಅಮೃತಸಮುದ್ರವು ಲಕ್ಷ್ಮಿಯ ವಾಸಸ್ಥಾನವಾಗಿದೆ. ಈ ಅಮೃತಸಮುದ್ರವೇ ಅವಳ ತಂದೆಯ ಮನೆ. ಆದ್ದರಿಂದ ಭಗವಂತನಿಗೆ ಅತ್ಯಂತಪ್ರಿಯವಾದ ಸ್ಥಾನವೆಂದರೆ ಅಮೃತಸಮುದ್ರ. ಪ್ರಕೃತ ಪದ್ಮನಾಭತೀರ್ಥರನ್ನು ಅಮೃತಸಮುದ್ರಕ್ಕೆ ಹೋಲಿಸಿದ್ದಾರೆ. ನಿರಂತರ ಹರಿಚಿಂತನೆಯಲ್ಲೇ ತತ್ಪರರಾಗಿರುವುದರಿಂದ ಹರಿಸನ್ನಿಧಾನ ಇವರಲ್ಲಿ ಅಪೂರ್ವವಾಗಿದೆ. ಹೀಗೆ ರಮಾನಿವಾಸೋಚಿತವಾಸಭೂಮಿಃ ಎಂಬ ವಿಶೇಷಣದಿಂದ ಪದ್ಮನಾಭತೀರ್ಥರಲ್ಲಿ ಹರಿಭಕ್ತಿಯನ್ನು ಹೇಳಿದ್ದಾರೆ. ಭಕ್ತಿಯಿಲ್ಲದೇ ಪ್ರೀತಿಪೂರ್ವಕವಾದ ಹರಿಸನ್ನಿಧಾನಕ್ಕೆ ಪಾತ್ರರಾಗಲು ಸಾಧ್ಯವಿಲ್ಲ. ಇನ್ನು ಸನ್ನ್ಯಾಯರತ್ನಾವಳಿಜನ್ಮಭೂಮಿಃ ಎಂಬ ವಿಶೇಷಣದಿಂದ ಅತ್ಯಂತ ಜ್ಞಾನಿಗಳಾಗಿದ್ದಾರೆಂದು ತಿಳಿಸಿದ್ದಾರೆ. ಒಳ್ಳೆಯ ನ್ಯಾಯಗಳೆಂಬ ರತ್ನಾವಲಿಗಳಿಗೆ ಜನಕರಾಗಿದ್ದಾರೆ. ಸನ್ನ್ಯಾಯರತ್ನಾವಳಿ ಎಂಬ ಗ್ರಂಥಕ್ಕೆ ಉತ್ಪಾದಕರಾಗಿದ್ದಾರೆ. ಇಂಥ ಶ್ರೇಷ್ಠಗ್ರಂಥವನ್ನು ಬರೆಯಬೇಕೆಂದರೆ ದೊಡ್ಡ ಜ್ಞಾನಿಗಳೇ ಆಗಿರಬೇಕೆಂಬುದು ಅಭಿಪ್ರಾಯ. ಇಲ್ಲದಿದ್ದರೆ ಗ್ರಂಥನಿರ್ಮಾಣವೇ ಸಾಧ್ಯವಾಗುವುದಿಲ್ಲ. ವೈರಾಗ್ಯಭಾಗ್ಯ ಎಂಬ ಮೂರನೆಯ ವಿಶೇಷಣದಿಂದ ವಿಷಯವಿರಕ್ತಿಯೆಂಬ ಭಾಗ್ಯವಂತರಾಗಿದ್ದಾರೆ. ಇವರ ವೈರಾಗ್ಯವು ಸಮುದ್ರದಲ್ಲಿರುವ ಶೌಕ್ಲ್ಯವರ್ಣದಂತೆ ಕಂಗೊಳಿಸುತ್ತಿದೆ. ಹೀಗೆ ಮೂರು ವಿಶೇಷಣಗಳಿಂದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಪದ್ಮನಾಭತೀರ್ಥರಲ್ಲಿ ಸಮರ್ಥಿಸಿದ್ದಾರೆ.

## ಪದ್ಮನಾಭತೀರ್ಥಪದಕ್ಕೆ ಅಪೂರ್ವ ವ್ಯುತ್ಪತ್ತಿ

**ಏರೀಬಾಳಾಚಾರ್ಯರು – ಯತ್ ಶ್ರಿಯಮಪಿ ಪರಸ್ಮೈ ಪ್ರಾಯಚ್ಛತ್ । ಕಿಂ ತತೋಽನ್ಯದ್ ವೈರಾಗ್ಯಂ ನಾಮ ಇತಿ ಪ್ರತೀಮಃ । ಪದ್ಮಾನಿ ನಯತೀತಿ ಪದ್ಮನಃ ಸೂರ್ಯಃ । ತಸ್ಯ ಆಭೇವ ಆಭಾ ಯಸ್ಯ ಸಃ ಪದ್ಮನಾಭಃ । ತದುಕ್ತಂ ಸುಮಧ್ವವಿಜಯೇ –**

**'ದುರ್ಮಂತ್ರೈಃ ಖಲಪಟಲೈಃ ಪ್ರಚೋದ್ಯಮಾನೋ**
**ಗ್ರಾಮೇಶೋ ವೃಷಲಪತಿಃ ಪ್ರಹರ್ತುಮೇನಮ್ ।**
**ಸಂಪ್ರಾಪ್ತಸ್ತತ ಉತ ಯಾಂತಮೀಕ್ಷಮಾಣಃ**
**ಪ್ರೋದ್ಯಂತಂ ರವಿಮಿವ ವಿಸ್ಮಿತೋ ನನಾಮ'**

ಇತಿ ॥ ಯದ್ವಾ ಆ ಈಷತ್ ಸಮ್ಯಗ್ ವಾ ಆಭಾ ಯಸ್ಯ ಸಃ ಆಭಃ। ಸ ನ ಭವತೀ ನಾಭಃ। ನಸಮಾಸೋಽಯಮ್ । ಪದ್ಮಃ ಚೋಲಜಃ ಪದ್ಮತೀರ್ಥೋ ಮಾಯಿಭಿಕ್ಷುರ್ನಾಭೋ ವಿಚ್ಛವಿರ್ಯಸ್ಮಾತ್ ಸ ತಥೋಕ್ತಃ। ಶ್ರೀಮಧ್ವಾಚಾರ್ಯಃ। ಚಾತುರ್ಮಾಸ್ಯಾತ್ ಉತ್ಥಾಯ ವಿದ್ರವಂತಂ ನಿಜಪುಸ್ತಕಸ್ತೋಮಸ್ತೇನಂ ಚೋಲಜಂ ಪದ್ಮತೀರ್ಥಂ ಮಧ್ಯೇ ಮಾರ್ಗೇ ತೂರ್ಣಂ ನಿರುಧ್ಯ ಗೋಗಣೈರ್ಭೀಷಯಿತ್ವಾ ಪಾರ್ಥಃ ಸೈಂಧವಮಿವ ತಂ ವಿಚ್ಛವಿಂ ಚಕಾರ ಇತ್ಯೇಷೋ ಅರ್ಥಃ ಸುಮಧ್ವವಿಜಯೇ ದ್ವಾದಶೇ ವ್ಯಕ್ತ ಇತಿ। ವಿಸ್ತರೇಣ ನೇಹ ತಾನಿ ವಚನಾನ್ಯುದಾಹರಾಮ ಇತಿ ದಿಕ್। ತಸ್ಮಾತ್ ತೀರ್ಥಂ ಶಾಸ್ತ್ರಂ ಸ್ಯ ಸಃ ಪದ್ಮನಾಭತೀರ್ಥಃ । ಸ ಏವ ಅಮೃತಾಬ್ಧಿಃ ವಿಭೂತ್ಯೈ ಭವತಾತ್ ಭೂಯಾತ್ ।

ತಮ್ಮಲ್ಲಿರುವ ಲಕ್ಷ್ಮಿಯೆಂಬ ಸಂಪತ್ತನ್ನು ದಾನವನ್ನಾಗಿ ಕೊಟ್ಟದ್ದರಿಂದ ಇವರು ವೈರಾಗ್ಯವೇ ಭಾಗ್ಯವಾಗಿ ಉಳ್ಳವರು. ಇದಕ್ಕಿಂತ ಬೇರೆಯಾದ ವೈರಾಗ್ಯವೆಂಬುದು ಯಾವುದಿದೆ.

'ಪದ್ಮಾನಿ ನಯತೀತಿ ಪದ್ಮನಃ' ಎಂಬ ನಿಷ್ಪತ್ತಿಯಿಂದ ಪದ್ಮನಶಬ್ದಕ್ಕೆ ಸೂರ್ಯ ಎಂದರ್ಥ. ತಸ್ಯ ಆಭಾ ಇವ ಆಭಾ ಯಸ್ಯ ಸಃ = ಪದ್ಮನಾಭಃ. ಸೂರ್ಯನ ಕಾಂತಿಯಂತೆ ಕಾಂತಿಯುಳ್ಳವರು ಪದ್ಮನಾಭರು = ಶ್ರೀಮಧ್ವಾಚಾರ್ಯರು. ಇದನ್ನೇ ಮಧ್ವವಿಜಯದಲ್ಲಿ ಹೀಗೆ ಹೇಳಿದ್ದಾರೆ.

'ದುರ್ಮಂತ್ರೈಃ ಖಲಪಟಲೈಃ ಪ್ರಚೋದ್ಯಮಾನೋ
ಗ್ರಾಮೇಶೋ ವೃಷಲಪತಿಃ ಪ್ರಹರ್ತುಮೇನಮ್ ।
ಸಂಪ್ರಾಪ್ತಸ್ತ ಉತ ಯಾಂತಮೀಕ್ಷಮಾಣಃ
ಪ್ರೋದ್ಯಂತಂ ರವಿಮಿವ ವಿಸ್ಮಿತೋ ನನಾಮ'

ಅಥವಾ ನ ಆಭಃ ಎಂಬ ನಸಮಾಸವನ್ನು ಮಾಡಿದಾಗ ಕಾಂತಿರಹಿತರಾದ ಪದ್ಮ ಎಂಬ ಚೋಲದೇಶದ ಅದ್ವೈತಸನ್ಯಾಸಿ ಎಂದರ್ಥ. ಯಾರಿಂದ ಈ ಪದ್ಮತೀರ್ಥನೆಂಬ ಸನ್ಯಾಸಿಯು ಕಾಂತಿರಹಿತನಾದನೋ ಅಂಥ ಮಧ್ವಾಚಾರ್ಯರು ಪದ್ಮನಾಭ ಎನ್ನಿಸುವರು. ಪದ್ಮಃ ನಾಭಃ ಯಸ್ಮಾತ್ ಸಃ = ಪದ್ಮನಾಭಃ. ಪದ್ಮನಾಭೇನ ತೀರ್ಥಂ ಯಸ್ಯ ಸಃ ಪದ್ಮನಾಭತೀರ್ಥಃ ಎಂಬ ವಿಗ್ರಹವನ್ನು ಇಲ್ಲಿ ತಿಳಿಯಬೇಕು. ಪದ್ಮನಾಭ ಎನಿಸಿದ ಶ್ರೀಮಧ್ವಾಚಾರ್ಯರಿಂದ ತೀರ್ಥಂ = ಶಾಸ್ತ್ರೋಪದೇಶವು ಯಸ್ಯ = ಯಾರಿಗೆ ನೇರವಾಗಿ ದೊರಕಿತೋ ಸಃ = ಅಂಥ ಪದ್ಮನಾಭತೀರ್ಥರು ಎನಗೆ ಸಂಪತ್ತುಗಳನ್ನು ಕರುಣಿಸಲಿ ಎಂಬುದು ಇದರ ಅರ್ಥವಾಗುತ್ತದೆ.

## ಸುಧಾಪರಿಮಳಸಾರ

ಪ್ರಾಚೀನಟೀಕಾಕಾರರಾದ ಪದ್ಮನಾಭತೀರ್ಥರನ್ನು ಹೀಗೆ ಸ್ಮರಿಸುತ್ತಿದ್ದಾರೆ.

ರಮಾನಿವಾಸೋಚಿತವಾಸಭೂಮಿಃ ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿಃ ಭವತಾದ್ ವಿಭೂತ್ಯೈ ॥

ಅನುವ್ಯಾಖ್ಯಾನಗ್ರಂಥಕ್ಕೆ ಶ್ರೀಪದ್ಮನಾಭತೀರ್ಥರು ಸನ್ನ್ಯಾಯರತ್ನಾವಳೀ ಎಂಬ ಟೀಕೆಯನ್ನು ಬರೆದಿದ್ದಾರೆ. ಇದೇ ಮೊಟ್ಟಮೊದಲ ಟೀಕೆಯಾಗಿದೆ. ನ್ಯಾಯಸುಧಾಗ್ರಂಥವು ಕೇವಲ ಅಮೃತವಾದರೆ ಈ ಸನ್ನ್ಯಾಯರತ್ನಾವಳೀಗ್ರಂಥವು ಅಮೃತಸಮುದ್ರವೇ ಆಗಿದೆ ಎಂಬುದನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ. ಇವರಲ್ಲಿರುವ ವೈರಾಗ್ಯವೇ ಸಮುದ್ರದಲ್ಲಿರುವ ಶ್ವೇತವರ್ಣದಂತೆ ಕಂಗೊಳಿಸುತ್ತಿದೆ.

## ಶ್ರೀಅಕ್ಷೋಭ್ಯತೀರ್ಥರೇ ನಿರಂತರ ನಿಮ್ಮ ಸೇವೆಗೈಯ್ಯುವೆ

**ಶ್ರೀಮನ್ನ್ಯಾಯಸುಧಾ–**
**ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।**
**ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ ಮಮ ॥೬॥**

ಗುರುಗಳಾದ ಶ್ರೀಅಕ್ಷೋಭ್ಯತೀರ್ಥರೇ! ತಾವು ವ್ಯಾಕರಣ, ಮೀಮಾಂಸಾ, ಬ್ರಹ್ಮತರ್ಕ ಮೊದಲಾದ ಗ್ರಂಥಗಳನ್ನೆಲ್ಲಾ ಆಮೂಲಾಗ್ರವಾಗಿ ತಿಳಿದಿರುವಿರಿ. ಪ್ರತಿವಾದಿಗಳ ಅಹಂಕಾರವನ್ನು ಕತ್ತರಿಸಿರುವಿರಿ. ಭಕ್ತಿಯಿಂದ ತಮ್ಮ ಸೇವೆಯಲ್ಲಿಯೇ ನಾನು ರತನಾಗುವೆನು. ಅನುಗ್ರಹಿಸಿರಿ.

ಅನ್ವಯಾರ್ಥ– ಪದವಾಕ್ಯಪ್ರಮಾಣಜ್ಞಾನ್ ಪದ= ಪದಗಳ ನಿಷ್ಪತ್ತಿಯನ್ನು ಮಾಡುವ ವ್ಯಾಕರಣಶಾಸ್ತ್ರ, ವಾಕ್ಯ = ವಾಕ್ಯಾರ್ಥಜ್ಞಾನಕ್ಕೆ ಉಪಯುಕ್ತವಾದ ಯುಕ್ತಿಗಳನ್ನು ಹೇಳುವ ಮೀಮಾಂಸಾ ಶಾಸ್ತ್ರ, ಪ್ರಮಾಣ = ಉದ್ದೇಶಲಕ್ಷಣವಿಭಾಗಪರೀಕ್ಷಾದಿಗಳಿಂದ ಪ್ರಮಾಣಸ್ವರೂಪವನ್ನು ನಿರ್ಧರಿಸುವ ಪ್ರಮಾಣಶಾಸ್ತ್ರಗಳನ್ನು ಬ್ರಹ್ಮತರ್ಕ ಮೊದಲಾದವುಗಳನ್ನು ತಿಳಿದಿರುವ, ಪ್ರತಿವಾದಿಮದಚ್ಛಿದಃ = ಪ್ರತಿವಾದಿಗಳ ಅಹಂಕಾರವನ್ನು ಕತ್ತರಿಸಿರುವ, ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ = ಶ್ರೀಅಕ್ಷೋಭ್ಯತೀರ್ಥ-

ರೆಂದು ನಾಮಾಂಕಿತರಾದ, ಮಮ = ನನ್ನ, ಗುರೂನ್ = ಗುರುಗಳನ್ನು, ಉಪತಿಷ್ಠೇ = ಮನಸ್ಸಿನಿಂದಲೇ ಸೇವೆಗೈಯ್ಯುತ್ತೇನೆ.

ವಿಗ್ರಹ– ಪದವಾಕ್ಯಪ್ರಮಾಣಜ್ಞಾನ್ – ಪದಂ ಚ ವಾಕ್ಯಂ ಚ ಪ್ರಮಾಣಂ ಚ ಪದವಾಕ್ಯ-ಪ್ರಮಾಣಾನಿ, ಪದವಾಕ್ಯಪ್ರಮಾಣಾನಿ ಜಾನಂತೀತಿ ಪದವಾಕ್ಯಪ್ರಮಾಣಜ್ಞಾಃ ತಾನ್.

ಪ್ರತಿವಾದಿಮದಚ್ಛಿದಃ - ಪ್ರತಿ ವದಂತೀತಿ ಪ್ರತಿವಾದಿನಃ, ಪ್ರತಿವಾದಿನಃ ಮದಃ ಪ್ರತಿವಾದಿ-ಮದಃ, ಪ್ರತಿವಾದಿಮದಂ ಛಿಂದಂತೀತಿ ಪ್ರತಿವಾದಿಮದಚ್ಛಿದಃ, ತಾನ್ ಪ್ರತಿವಾದಿಮದ-ಚ್ಛಿದಃ.

ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ – ಶ್ರೀಮಾಂಶ್ಚಾಸೌ ಅಕ್ಷೋಭ್ಯತೀರ್ಥಶ್ಚ ಶ್ರೀಮದ-ಕ್ಷೋಭ್ಯತೀರ್ಥಃ, ಶ್ರೀಮದಕ್ಷೋಭ್ಯತೀರ್ಥಾ ಆಖ್ಯಾ ಯೇಷಾಂ ತೇ ಶ್ರೀಮದಕ್ಷೋಭ್ಯ-ತೀರ್ಥಾಖ್ಯಾಃ, ತಾನ್.

ಉಪತಿಷ್ಠೇ - ಉಪ ಇತ್ಯುಪಸರ್ಗಪೂರ್ವಕಾತ್ ಷ್ಠಾ ಗತಿನಿವೃತ್ತೌ' ಇತಿಧಾತೋಃ ಲಟ ಉತ್ತಮಪುರುಷ ಏಕವಚನೇ ಉಪತಿಷ್ಠೇ ಇತಿ ರೂಪಮ್.

## 'ಉಪತಿಷ್ಠೇ' ಎಂಬ ಪದದ ವ್ಯಾಖ್ಯಾನ

**ಪರಿಮಳ–** ಸ್ವಗುರೂನ್ ನಮತಿ – ಪದೇತಿ ॥ ಶಬ್ದಮೀಮಾಂಸಾನ್ಯಾಯಶಾಸ್ತ್ರಜ್ಞಾನ್ ಇತ್ಯರ್ಥಃ । ಉಪತಿಷ್ಠೇ ಮನಸಾ ಪೂಜಯಾಮಿ । 'ಉಪಾನ್ಮಂತ್ರಕರಣೇ' ಇತಿ ಸೂತ್ರೇ 'ಉಪಾದ್ ದೇವಪೂಜಾಸಂಗತಿಕರಣಮಿತ್ರಕರಣಪಥಿಷು' ಇತಿ ವಾರ್ತಿಕೇನ ಪೂಜಾ-ಯಾಮ್ ಆತ್ಮನೇಪದಮ್ ॥

ತಮ್ಮ ಗುರುಗಳಾದ ಶ್ರೀಅಕ್ಷೋಭ್ಯತೀರ್ಥರನ್ನು 'ಪದವಾಕ್ಯ' ಇತ್ಯಾದಿಯಾಗಿ ಪ್ರಣಾಮ ಮಾಡುತ್ತಿದ್ದಾರೆ. ಪದವಾಕ್ಯಪ್ರಮಾಣಜ್ಞಾನ್ ಎಂದರೆ ಶಬ್ದಶಾಸ್ತ್ರ, ಮೀಮಾಂಸಾಶಾಸ್ತ್ರ, ನ್ಯಾಯ -ಶಾಸ್ತ್ರಗಳನ್ನು ತಿಳಿದಿರುವವರು ಎಂದರ್ಥ. 'ಉಪತಿಷ್ಠೇ' ಎಂಬ ಪದಕ್ಕೆ ಮನಸ್ಸಿನಲ್ಲಿಯೇ ಪೂಜೆ ಮಾಡುತ್ತೇನೆ ಎಂದರ್ಥ. ವಾಸ್ತವಿಕವಾಗಿ 'ಉಪತಿಷ್ಠಾಮಿ' ಎಂದು ಪರಸ್ಮೈಪದವನ್ನು ಪ್ರಯೋಗಮಾಡಬೇಕಿತ್ತು. ಆದರೆ 'ಉಪಾನ್‌ಮಂತ್ರಕರಣೇ' ಎಂಬ ಸೂತ್ರದ 'ಉಪಾದ್

ದೇವಪೂಜಾಸಂಗತಿಕರಣಮಿತ್ರಕರಣಪಥಿಷು' ಎಂಬ ವಾರ್ತಿಕದಲ್ಲಿ ಪೂಜಾರ್ಥದಲ್ಲಿ ಆತ್ಮನೇಪದಿಯನ್ನು ವಿಧಾನ ಮಾಡಲಾಗಿದೆ. ಆದ್ದರಿಂದ ಉಪತಿಷ್ಠೇ ಎಂದು ಪ್ರಯೋಗಿಸಿದ್ದಾರೆ.

## ಶ್ರೀಅಕ್ಷೋಭ್ಯತೀರ್ಥರಲ್ಲಿ ಮುಖ್ಯಗುರುತ್ವದ ಪ್ರತಿಪಾದನೆ

**ವಾಕ್ಯಾರ್ಥಚಂದ್ರಿಕಾ – ಸಾಧಕೋಕ್ತೌ ಬಾಧಕಪರಿಹಾರೇ ಚ ಸಾಮರ್ಥ್ಯೇನ 'ಅಸಂಶಯಃ ಸಂಶಯಚ್ಛಿತ್' ಇತ್ಯುಕ್ತತತ್ತ್ವನಿರ್ಣಾಯಕತಯಾ ಮುಖ್ಯಗುರುತ್ವಂ ಪ್ರತಿಪಾದಯನ್ನೇವ ಸಾಕ್ಷಾದ್ಗುರೂನ್ ಉಪತಿಷ್ಠತೇ – ಪದೇತಿ ॥**

ಸಾಧಕಪ್ರಮಾಣವನ್ನು ಹೇಳಲು ಬಾಧಕಪ್ರಮಾಣವನ್ನು ಪರಿಹರಿಸಲು ಸಾಮರ್ಥ್ಯವಿರುವುದರಿಂದ 'ಅಸಂಶಯಃ ಸಂಶಯಚ್ಛಿದ್' ಎಂಬುದಾಗಿ ಹೇಳಲ್ಪಟ್ಟ ತತ್ತ್ವನಿರ್ಣಾಯಕತ್ವೇನ ಮುಖ್ಯಗುರುತ್ವವು ಶ್ರೀಅಕ್ಷೋಭ್ಯತೀರ್ಥರಲ್ಲಿದೆ. ಇವರು ನನ್ನ ಸಾಕ್ಷಾತ್ ಗುರುಗಳಾಗಿದ್ದಾರೆ. ಹೀಗೆ ತಮ್ಮ ಗುರುಗಳಲ್ಲಿ ಮುಖ್ಯಗುರುತ್ವವನ್ನು ಪ್ರತಿಪಾದನೆ ಮಾಡುತ್ತಾ ಮನಸ್ಸಿನಿಂದಲೇ ಪೂಜೆ ಮಾಡಲು 'ಪದವಾಕ್ಯ' ಇತ್ಯಾದಿಯಾದ ಮಂಗಳಾಚರಣೆಯನ್ನು ಮಾಡುತ್ತಿದ್ದಾರೆ.

ವಿವರಣೆ – 'ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ' ಎಂಬಂತೆ ತಮಗೆ ಸಂಶಯವಿರಬಾರದು; ಮತ್ತೊಬ್ಬರ ಸಂಶಯವನ್ನು ಪರಿಹರಿಸಬೇಕು. ಇವರೇ ಗುರುಗಳೆನ್ನಿಸುತ್ತಾರೆ. ಇಂಥ ಗುರುತ್ವವಿರುವವರು ತತ್ತ್ವನಿರ್ಣಾಯಕರಾಗುತ್ತಾರೆ. ಈ ಗುರುತ್ವವಿರಬೇಕೆಂದರೆ ತಾವು ಸ್ಥಾಪನೆ ಮಾಡಲು ಹೊರಟ -ರುವ ತತ್ತ್ವನಿರ್ಣಯಕ್ಕೆ ಸಾಧಕಪ್ರಮಾಣವನ್ನು ಹೇಳುವ ಸಾಮರ್ಥ್ಯವಿರಬೇಕು. ಬಾಧಕಪ್ರಮಾಣವನ್ನು ಪರಿಹರಿಸುವ ಸಾಮರ್ಥ್ಯವಿರಬೇಕು. ಆಗ ಮಾತ್ರ ತತ್ತ್ವನಿರ್ಣಾಯಕರಾಗುತ್ತಾರೆ. ತನ್ಮೂಲಕವಾಗಿ ಮುಖ್ಯಗುರುತ್ವವು ಪ್ರಾಪ್ತವಾಗುತ್ತದೆ. ಪ್ರಕೃತ ಟೀಕಾರಾಯರು ಅಕ್ಷೋಭ್ಯತೀರ್ಥರಲ್ಲಿ ಅಂಥ ಮುಖ್ಯಗುರುತ್ವವಿದೆ ಎಂಬುದನ್ನು ಪ್ರತಿಪಾದನೆ ಮಾಡುತ್ತಿದ್ದಾರೆ. ಮತ್ತು ಗ್ರಂಥಾರಂಭದಲ್ಲಿ ಮನಸ್ಸಿನಿಂದಲೇ ಗುರುಗಳಿಗೆ ಪೂಜೆಯನ್ನು ಮಾಡುತ್ತಿದ್ದಾರೆ.

## ಪದ, ವಾಕ್ಯ , ಪ್ರಮಾಣ ಇವುಗಳ ವಿವರಣೆ

ವಾಕ್ಯಾರ್ಥಚಂದ್ರಿಕಾ– ಅತ್ರ ಪದಾರ್ಥಜ್ಞಾನೋಪಾಯಭೂತಂ ಪದ್ಯತೇ ಶಬ್ದಾರ್ಥೋಽನೇನ ಇತಿ ವ್ಯುತ್ಪತ್ತ್ಯಾ ವ್ಯಾಕರಣಂ ಪದಮ್, ವಾಕ್ಯಾರ್ಥಜ್ಞಾನೋಪಾಯನ್ಯಾಯ-



ಸಮರ್ಪಕಪ್ರಮೇಯಮೀಮಾಂಸಾಶಾಸ್ತ್ರಂ ವಾಕ್ಯಮ್, ಉದ್ದೇಶಲಕ್ಷಣವಿಭಾಗಪರೀಕ್ಷಾಭಿಃ ಪ್ರಮಾಣಸ್ವರೂಪನಿರ್ಧಾರಕಂ ಪ್ರಮಾಣಮೀಮಾಂಸಾಶಾಸ್ತ್ರಂ ಪ್ರಮಾಣಮ್ ಉಚ್ಯತೇ ಇತಿ ದ್ರಷ್ಟವ್ಯಮ್ ।

ಪದಶಬ್ದಕ್ಕೆ ವ್ಯಾಕರಣಶಾಸ್ತ್ರ ಎಂದರ್ಥ. ಪದಾರ್ಥಜ್ಞಾನಕ್ಕೆ ಕಾರಣವಾದ ಶಬ್ದಾರ್ಥವು ಯಾವ ಶಾಸ್ತ್ರದಿಂದ ತಿಳಿಯುತ್ತದೋ ಅಂಥ ವ್ಯಾಕರಣಶಾಸ್ತ್ರ ಎಂಬುದು ಇದರ ವ್ಯುತ್ಪತ್ತಿ. ವಾಕ್ಯಾರ್ಥಜ್ಞಾನಕ್ಕೆ ಕಾರಣವಾದ ನ್ಯಾಯಸಮರ್ಪಕವಾದ ಮೀಮಾಂಸಾಶಾಸ್ತ್ರವೇ ವಾಕ್ಯ ಎನಿಸುತ್ತದೆ. ಉದ್ದೇಶ,ಲಕ್ಷಣ, ವಿಭಾಗ, ಪರೀಕ್ಷೆಗಳಿಂದ ಪ್ರಮಾಣಸ್ವರೂಪನಿರ್ಧಾರಕವಾದ ಮೀಮಾಂಸಾಶಾಸ್ತ್ರವನ್ನು ಪ್ರಮಾಣ ಎಂದು ಕರೆಯುತ್ತಾರೆ.

ವಿವರಣೆ – ಪದ್ಯತೇ ಅನೇನ ಇತಿ ಪದಮ್ - ಎಂಬ ನಿಷ್ಪತ್ತಿಯನ್ನು ಪದಶಬ್ದಕ್ಕೆ ತಿಳಿಯಬೇಕು. ಪದ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಕಾರಣ ಜ್ಞಾಯತೇ ಎಂಬುದು ಪದ್ಯತೇ ಎಂಬುದರ ಅರ್ಥ. ಯಾವ ಪದಕ್ಕೆ ಯಾವ ಅರ್ಥವನ್ನು ಹೇಳಬೇಕು ಎಂಬುದು ವ್ಯಾಕರಣಶಾಸ್ತ್ರದಿಂದ ತಿಳಿಯುತ್ತದೆ. ವಾಸ್ತವಿಕವಾಗಿ ನಿಜವಾದ ಪದಾರ್ಥಜ್ಞಾನವನ್ನು ತಿಳಿಸುವ ಮಹಾವ್ಯಾಕರಣವನ್ನೇ ಪದಶಬ್ದದಿಂದ ವಿವಕ್ಷಿಸಬೇಕು.

ಪದಾರ್ಥಜ್ಞಾನಕ್ಕೆ ಉಪಾಯಭೂತವಾದದ್ದು ವ್ಯಾಕರಣಶಾಸ್ತ್ರವಾದರೆ ವಾಕ್ಯಾರ್ಥಜ್ಞಾನಕ್ಕೆ ಉಪಾಯಭೂತವಾದ ನ್ಯಾಯಸಮರ್ಪಕವಾದದ್ದು ಮೀಮಾಂಸಾಶಾಸ್ತ್ರ. ಇಲ್ಲೂ ಕೂಡ ನಿಜವಾದ ಪ್ರಮೇಯವನ್ನು ತಿಳಿಸುವ ಬ್ರಹ್ಮಮೀಮಾಂಸಾಶಾಸ್ತ್ರವನ್ನೇ ವಿವಕ್ಷಿಸಬೇಕು. ಗೌಣವಾಗಿ ಪೂರ್ವಮೀಮಾಂಸಾಶಾಸ್ತ್ರವನ್ನು ವಿವಕ್ಷಿಸಬೇಕು.

ಉದ್ದೇಶ, ಲಕ್ಷಣ, ವಿಭಾಗ, ಪರೀಕ್ಷಾ ಕ್ರಮದಿಂದ ಪ್ರಮಾಣಸ್ವರೂಪವನ್ನು ನಿರ್ಧಾರ ಮಾಡುವ ಮೀಮಾಂಸಾಶಾಸ್ತ್ರವೆಂದರೆ ತರ್ಕಶಾಸ್ತ್ರ. ಬ್ರಹ್ಮತರ್ಕವೇ ನಿಜವಾದ ಪ್ರಮಾಣವೆನಿಸುತ್ತದೆ. ಏಕೆಂದರೆ, ಪ್ರಮಾಣದ ಸ್ವರೂಪವನ್ನು ನಿರ್ಧಾರಮಾಡುವ ಸಾಮರ್ಥ್ಯವಿರುವುದು ಬ್ರಹ್ಮತರ್ಕಕ್ಕೆ ಮಾತ್ರ. ಗೌತಮೀಯನ್ಯಾಯಶಾಸ್ತ್ರವನ್ನು ಗೌಣವಾಗಷ್ಟೇ ಇಲ್ಲಿ ವಿವಕ್ಷಿಸಬೇಕು.

## ಉಪತಿಷ್ಠೇ ಎಂಬ ಆತ್ಮನೇಪದಪ್ರಯೋಗದಿಂದ ಅಕ್ಷೋಭ್ಯತೀರ್ಥರು ದೇವತೆಗಳೆಂದು ತಿಳಿಸಿದ್ದಾರೆ.

ವಾಕ್ಯಾರ್ಥಚಂದ್ರಿಕಾ— ಉಪತಿಷ್ಠ ಇತಿ ॥ ಉಪಾನ್ಮಂತ್ರಕರಣೇ ಇತಿ ಆಗ್ನೇಯ್ಯಾऽಗ್ನೀಧ್ರಮುಪತಿಷ್ಠತ ಇತ್ಯಾದ್ಯುಪಪಾದನಾಯ ವೈವಕ್ಷಿಕಮಂತ್ರಕರಣಸ್ಯ ವಿವಕ್ಷಿತತ್ವೇऽಪಿ 'ಆದಿತ್ಯ-





ಮುಪತಿಷ್ಠತೇ' ಇತ್ಯಾದೌ ಅಮಂತ್ರಕರಣೇಽಪಿ ಆತ್ಮನೇಪದೋಪಪಾದನಾಯ ಪ್ರವೃತ್ತೇ ಉಪಾದ್ದೇವಪೂಜಾಸಂಗತಿಕರಣಮಿತ್ರಕರಣಪಥಿಷು ಇತಿ ವಕ್ತವ್ಯಮ್ - ಇತಿ ತತ್ಸೂತ್ರೀಯವಾರ್ತಿಕೇ ದೇವಪೂಜಾದಾವಪಿ ಉಪಪೂರ್ವಾತ್ ತಿಷ್ಠತೇಃ ಆತ್ಮನೇಪದವಿಧಾನಾತ್ ಗುರೋರಪಿ ದೇವಪ್ರತಿಮಾತ್ವೇನ ದೇವತ್ವಾತ್ ತತ್ತತ್ಪೂಜಾಯಾಮಪಿ ದೇವಪೂಜಾತ್ವವಿವಕ್ಷಯಾ ಉಪತಿಷ್ಠ ಇತ್ಯಾತ್ಮನೇಪದೋಪಪತ್ತಿರಿತಿ ಧ್ಯೇಯಮ್ । (ಮಂತ್ರಕರಣೇ ಕಿಂ ಭರ್ತಾರಮ್ ಉಪತಿಷ್ಠತಿ ಯೌವನೇನ। ಆಗ್ನೇಯ್ಯಾಽಽಗ್ನಿದೇವತಯರ್ಚಾ । ವಾರ್ತಿಕೋದಾಹರಣಾನಿ ತು । ಆದಿತ್ಯಮುಪತಿಷ್ಠತೇ, ಕಥಂ ತರ್ಹಿ ಸ್ತುತ್ಯಂ ಸ್ತುತಿಭಿಃ ಅರ್ಥ್ಯಾಭಿಃ ಉಪತಸ್ಥೇ ಸರಸ್ವತೀತಿ । ದೇವತಾತ್ವಾರೋಪಾತ್ । ನೃಪಸ್ಯ ದೇವತಾಂಶತ್ವಾದ್ವಾ। ಗಂಗಾ ಯಮುನಾಮುಪತಿಷ್ಠತೇ ಉಪಶ್ಲಿಷ್ಯತೀತ್ಯರ್ಥಃ। ಪಥಿಕಾನುಪತಿಷ್ಠತೇ ಮಿತ್ರೀಕರೋತೀತ್ಯರ್ಥಃ। ಪಾಂಥಾಃ ಸ್ರುಘ್ನಮುಪತಿಷ್ಠತೇ ಪ್ರಾಪ್ನೋತಿ ಇತ್ಯರ್ಥಃ। ಇತಿ ದ್ರಷ್ಟವ್ಯಾನಿ।)

ಉಪ ಎಂಬ ಉಪಸರ್ಗವಿದ್ದಾಗ ಷ್ಠಾಧಾತುವಿನಿಂದ ನಿಷ್ಪನ್ನವಾದ ಧಾತುವನ್ನು ಆತ್ಮನೇಪದದಲ್ಲಿ ಪ್ರಯೋಗ ಮಾಡಬೇಕು. 'ಆಗ್ನೇಯ್ಯಾಽಗ್ನೀಧ್ರಮುಪತಿಷ್ಠತೇ' ಎಂಬ ಋಕ್ಕಿನಿಂದ ಸ್ತೋತ್ರ ಮಾಡಬೇಕು ಎಂಬ ಮೀಮಾಂಸಾಶಾಸ್ತ್ರದಲ್ಲಿ ಈ ಉದಾಹರಣೆಯನ್ನು ನೀಡಿದ್ದಾರೆ. ಸ್ತೋತ್ರ ಮಾಡುವ ಅಭಿಪ್ರಾಯವಿರುವುದರಿಂದ ಆತ್ಮನೇ ಪದ ಪ್ರಯೋಗವನ್ನು ಉಪತಿಷ್ಠತೇ ಎಂಬುದಾಗಿ ಮಾಡಲಾಗಿದೆ. ಉಪಾನ್ಮಂತ್ರಕರಣೇ ಎಂಬ ಪಾಣಿನೀ ಸೂತ್ರವು ಮಂತ್ರದಿಂದ ಸ್ತೋತ್ರವನ್ನು ಮಾಡುವ ಸಂದರ್ಭದಲ್ಲಿ ಆತ್ಮನೇಪದವನ್ನು ವಿಧಾನ ಮಾಡುತ್ತಿದೆ. ಆದರೆ ಆದಿತ್ಯಂ ಉಪತಿಷ್ಠತೇ ಇತ್ಯಾದಿ ಸ್ಥಳದಲ್ಲಿ ಮಂತ್ರದಿಂದ ಸ್ತೋತ್ರಮಾಡುವ ಉದ್ದೇಶವಿಲ್ಲ. ಬೇರೆ ಪುರಾಣಾದಿ ವಾಕ್ಯಗಳಿಂದ ಸ್ತೋತ್ರಮಾಡುವಾಗಲೂ ಉಪತಿಷ್ಠತೇ ಎಂಬುದಾಗಿ ಇಲ್ಲಿ ಆತ್ಮನೇ ಪದವನ್ನು ಮಾಡಲಾಗಿದೆ. ಈ ಪ್ರಯೋಗವನ್ನು ಉಪಪಾದನೆ ಮಾಡುವುದಕ್ಕಾಗಿ ಅಮಂತ್ರಕರಣದಲ್ಲೂ ಆತ್ಮನೇ ಪದದ ಉಪಪಾದನೆಗಾಗಿ ವಾರ್ತಿಕ ಹೊರಟಿದೆ. ಉಪಾದ್ದೇವಪೂಜಾಸಂಗತಿಕರಣಮಿತ್ರಕರಣಪಥಿಷು ಇತಿ ವಕ್ತವ್ಯಮ್ – ಎಂದು. ಉಪಾನ್ಮಂತ್ರಕರಣೇ ಎಂಬ ಸೂತ್ರದಲ್ಲೇ ಈ ವಾರ್ತಿಕವಿದೆ. ದೇವಪೂಜಾ ಮೊದಲಾದ ಅರ್ಥಗಳು ವಿವಕ್ಷಿತವಾಗಿದ್ದಾಗಲೂ ಉಪ ಎಂಬ ಉಪಸರ್ಗ ಮುಂದಿರುವಾಗ ತಿಷ್ಠತಿಗೆ ಆತ್ಮನೇ ಪದ ಬರುತ್ತದೆಂಬುದು ಇದರ ಅಭಿಪ್ರಾಯ.

ಪ್ರಶ್ನೆ – ಪ್ರಕೃತ ಅಕ್ಷೋಭ್ಯತೀರ್ಥರನ್ನು ಪೂಜಿಸುತ್ತಿಲ್ಲವಲ್ಲ? ಆದ್ದರಿಂದ ಆತ್ಮನೇಪದಪ್ರಯೋಗವನ್ನು ವಾರ್ತಿಕದ ಪ್ರಕಾರವೂ ಕೂಡ ಹೇಳಲು ಹೇಗೆ ಸಾಧ್ಯ ?





ಉತ್ತರ – ಶ್ರೀಅಕ್ಷೋಭ್ಯತೀರ್ಥರೂ ಕೂಡ ದೇವತೆಗಳಿಗೆ ಪ್ರತಿಮೆಯೇ ಆಗಿದ್ದಾರೆ. ಆದ್ದರಿಂದ ಇವರ ಸ್ತೋತ್ರವೂ ಕೂಡ ದೇವಪೂಜೆಯೇ ಆಗಿದೆ. ( ಅಥವಾ ದೇವತೆಗಳ ಅವತಾರರೇ ಆಗಿದ್ದಾರೆ.) ಆದ್ದರಿಂದ ಉಪತಿಷ್ಠೇ ಎಂಬ ಆತ್ಮನೇಪದಪ್ರಯೋಗವು ಉಪಪನ್ನವಾಗುತ್ತದೆ.

ವಿವರಣೆ – ಉಪಾನ್ಮಂತ್ರಕರಣೇ ಎಂಬ ಪಾಣಿನಿಯ ಸೂತ್ರಕ್ಕೆ ಉದಾಹರಣೆಯನ್ನು ಹೀಗೆ ತಿಳಿಯಬೇಕು – ಯೌವನೇನ ಭರ್ತಾರಂ ಉಪತಿಷ್ಠತಿ' 'ತನ್ನ ಯೌವ್ವನದಿಂದ ಪತ್ನಿಯು ಪ್ರೀತಿಗಳಿಸಲು ಭರ್ತೃವನ್ನು ಸಮೀಪಿಸಿದಳು' ಇಲ್ಲಿ ಪತ್ನಿಗೆ ಗಂಡನನ್ನು ಪ್ರೀತಿ ಮಾಡಬೇಕೆಂಬ ಅಪೇಕ್ಷೆ ಇದೆ. ಪೂಜೆ ಮಾಡಬೇಕೆಂಬ ಅಪೇಕ್ಷೆ ಇಲ್ಲ. ಆದ್ದರಿಂದ ಆತ್ಮನೇ ಪದವು ಬರುವುದಿಲ್ಲ. ಉಪತಿಷ್ಠತಿ ಎಂಬ ಪರಸ್ಮೈಪದವೇ ಬರುತ್ತದೆ.

ಆಗ್ನೇಯ್ಯಾ ಅಗ್ನೀಧ್ರಂ ಉಪತಿಷ್ಠತೇ - ಎಂಬಲ್ಲಿ ಆಗ್ನೇಯಮಂತ್ರದಿಂದ ಸ್ತೋತ್ರಮಾಡುವ ಉದ್ದೇಶವಿರುವುದರಿಂದ ಆತ್ಮನೇಪದಪ್ರಯೋಗವೇ ಬರುತ್ತದೆ. ಉಪತಿಷ್ಠತಿ ಎಂಬುದಾಗಿ ಇಲ್ಲಿ ಪ್ರಯೋಗ ಮಾಡಬಾರದು ಎಂದು.

'ಉಪಾದ್ದೇವಪೂಜಾಸಂಗತಿಕರಣಮಿತ್ರಕರಣಪಥಿಷು ಇತಿ ವಕ್ತವ್ಯಮ್' ಎಂಬ ವಾರ್ತಿಕಕ್ಕೆ ಉದಾಹರಣೆಗಳು ಹೀಗೆ ಇವೆ. – ಉಪ ಎಂಬ ಉಪಸರ್ಗದ ಮುಂದೆ ದೇವಪೂಜೆಯು ವಿವಕ್ಷಿತವಾದಾಗ ಆತ್ಮನೇಪದಿಯು ಬರುತ್ತದೆ. ಉದಾಹರಣೆ – ಆದಿತ್ಯಮ್ ಉಪತಿಷ್ಠತೇ' ಎಂದು. ಹಾಗಾದರೆ ಸರಸ್ವತೀ ಉಪತಸ್ಥೇ ಎಂಬಲ್ಲಿ ಸರಸ್ವತಿಯು ರಾಜನನ್ನು ಪೂಜೆಗೈದಳು ಎಂಬಲ್ಲಿ ಆತ್ಮನೇಪದ ಪ್ರಯೋಗವು ಹೇಗೆ ಎಂದರೆ ಅಲ್ಲಿ ಸರಸ್ವತಿಯು ರಾಜನಲ್ಲಿ ದೇವತ್ವದ ಆರೋಪವನ್ನು ಮಾಡಿದ್ದಾಳೆ. ಅಥವಾ ರಾಜನು ದೇವತೆಯ ಅಂಶನಾಗಿದ್ದಾನೆ. ಆದ್ದರಿಂದ ಆತ್ಮನೇ ಪದಿಯು ಪ್ರಾಪ್ತವಾಗಿದೆ.

ಗಂಗಾ ಯಮುನಾಂ ಉಪತಿಷ್ಠತೇ ಎಂಬಲ್ಲಿ ಸಂಗತಿಕರಣವಿದೆ. ಗಂಗೆಯು ಯಮುನೆಯನ್ನು ಸೇರುತ್ತಾಳೆ. ಪಥಿಕಾನ್ ಉಪತಿಷ್ಠತೇ ಎಂಬಲ್ಲಿ ಮಿತ್ರೀಕರಣವಿದೆ. ಪಥಿಕರು ಮತ್ತೊಬ್ಬ ಪಥಿಕನನ್ನು ಮಿತ್ರನನ್ನಾಗಿ ಮಾಡಿಕೊಳ್ಳುತ್ತಾರೆ. ಪಥಿ ಎಂಬಲ್ಲಿ ಪಾಂಥಾಃ ಸ್ರುಘ್ನಮುಪತಿಷ್ಠತೇ - ದಾರಿಹೋಕರು ಸ್ರುಘ್ನದೇಶವನ್ನು ಹೊಂದುತ್ತಾರೆ ಎಂದು.

ಹೀಗೆ ಉಪ ಎಂಬ ಉಪಸರ್ಗದ ಮುಂದೆ ದೇವಪೂಜೆ, ಸಂಗತಿಕರಣ, ಮಿತ್ರಕರಣ, ಪಥಿ ಇವುಗಳು ಗಮ್ಯಮಾನವಾದಾಗ ಆತ್ಮನೇಪದವು ಪ್ರಾಪ್ತವಾಗುತ್ತದೆನ್ನಲು ಈ ಉದಾಹರಣೆಗಳನ್ನು ತಿಳಿಯಬೇಕು. ಪ್ರಕೃತ ಅಕ್ಷೋಭ್ಯತೀರ್ಥರಲ್ಲಿ ಪೂಜಿಸುವ ಉದ್ದೇಶವಿರುವುದರಿಂದ ಉಪತಿಷ್ಠೇ ಎಂಬುದಾಗಿ ಆತ್ಮನೇಪದ ಪ್ರಯೋಗವು ಪ್ರಾಪ್ತವಾಗಿದೆ.

## ರಸಘಟ್ಟ

## 'ಪದವಾಕ್ಯಪ್ರಮಾಣಜ್ಞಾನ್' ಎಂಬುದರ ವ್ಯಾಖ್ಯಾನ

ಏರೀಬಾಳಾಚಾರ್ಯರು – 'ಪದ್ಯತೇ ಜ್ಞಾಯತೇಽನೇನ' ಇತಿ ಪದಂ ವ್ಯಾಕರಣಮ್ । ವಾಕ್ಯಂ ವಾರ್ತಿಕಮ್ । ಪ್ರಮಾಣಂ ನ್ಯಾಯಶಾಸ್ತ್ರಮ್ । ವಾಕ್ಯಾರ್ಥಜ್ಞಾನೋಪೇಯನ್ಯಾಯ-ಸಮರ್ಪಕಂ ಪ್ರಮೇಯಮೀಮಾಂಸಾಶಾಸ್ತ್ರಂ ವಾಕ್ಯಮ್ । ಉದ್ದೇಶವಿಭಾಗಪರೀಕ್ಷಾಭಿಃ ಪ್ರಮಾಣ-ಸ್ವರೂಪನಿರ್ಧಾರಕಂ ಪ್ರಮಾಣಮೀಮಾಂಸಾಶಾಸ್ತ್ರಂ ಪ್ರಮಾಣಮಿತ್ಯಪಿ ವ್ಯಾಚಕ್ಷತೇ ॥

'ಪದ್ಯತೇ ಶಬ್ದಾರ್ಥಃ ಅನೇನ' ಎಂಬ ವ್ಯುತ್ಪತ್ತಿಯಂತೆ ಶಬ್ದಾರ್ಥಜ್ಞಾನವನ್ನು ಉಂಟುಮಾಡು-ವುದರಿಂದ 'ಪದ'ಶಬ್ದಕ್ಕೆ ವ್ಯಾಕರಣಶಾಸ್ತ್ರ ಎಂದರ್ಥ. ಮತ್ತು 'ಪದಂ ವ್ಯಾಕರಣಂ ಪ್ರೋಕ್ತಂ ಮೀಮಾಂಸಾ ವಾಕ್ಯಮೇವ ಚ' ಎಂಬ ಉಕ್ತಿಯಂತೆ 'ವಾಕ್ಯ' ಎಂದರೆ ವಾಕ್ಯಾರ್ಥಜ್ಞಾನಕ್ಕೆ ಉಪಯೋಗಿಯಾದ ನ್ಯಾಯ -ಗಳನ್ನೊದಗಿಸುವಂತಹ ಮೀಮಾಂಸಾಶಾಸ್ತ್ರ ಎಂದರ್ಥ.

ಮೀಮಾಂಸಾ ತ್ರಿವಿಧಾ ಜ್ಞೇಯಾ ದೈವೀ ಬ್ರಾಹ್ಮೀ ಚ ಕಾರ್ಮಿಕೀ ।
ಬ್ರಹ್ಮತರ್ಕಂ ಚ ಮೀಮಾಂಸಾಂ ಸೇವೇತ ಜ್ಞಾನಸಿದ್ಧಯೇ ॥'

ಎಂದು ಗೀತಾತಾತ್ಪರ್ಯನಿರ್ಣಯದಲ್ಲಿ ಉಲ್ಲೇಖಿಸಿದ ನಾರದೀಯವಚನದಂತೆ ಮೀಮಾಂಸಾ -ಶಾಸ್ತ್ರವೆಂದರೆ ದೈವೀಮೀಮಾಂಸಾ, ಬ್ರಹ್ಮಮೀಮಾಂಸಾ, ಕರ್ಮಮೀಮಾಂಸಾ ಎಂದು ಮೂರು ವಿಧ-ವಾದದ್ದನ್ನು ತಿಳಿಯಬೇಕು. ಪ್ರಮಾಣ ಎಂದರೆ ಉದ್ದೇಶ, ಲಕ್ಷಣ, ವಿಭಾಗ, ಪರೀಕ್ಷೆಗಳಿಂದ ಪ್ರಮಾಣ-ಸ್ವರೂಪನಿರ್ಧಾರಕವಾದಂತಹ ಬ್ರಹ್ಮತರ್ಕವೆಂಬ ಪ್ರಮಾಣಮೀಮಾಂಸಾಶಾಸ್ತ್ರ. ಈ ಎಲ್ಲ ಶಾಸ್ತ್ರಗಳಲ್ಲಿ ವಿಶೇಷಪಾಂಡಿತ್ಯಗಳಿಸಿದ ಶ್ರೀಮದಕ್ಷೋಭ್ಯತೀರ್ಥರಿಂದ ಶ್ರೀಜಯತೀರ್ಥರು ಸನ್ಯಾಸಸ್ವೀಕರಿಸಿ ವಿದ್ಯಾ-ಭ್ಯಾಸ ಮಾಡಿರುವರೆಂದು ಅಭಿಪ್ರಾಯ.

## ಗಿಳಿಯಂತೆ ಪಾಠ ಹೇಳಿದ ಗುರುಗಳು

ಲಘುರಸರಂಜಿನೀ – ನನು ಗುರೂಪದಿಷ್ಟಮಪಿ ವಿಜ್ಞಾನಂ ನ ತಾವತ್ ಶ್ರೋತ್ರ್ಣಾಂ ದೃಢನಿರೂಢಂ ಭವತಿ । ಯಾವತ್ ಪ್ರತಿವಾದಿಪ್ರತರ್ಕಿತಯುಕ್ತ್ಯಾಭಾಸನಿರಾಸ ಇತ್ಯತ ಉಕ್ತಮ್ – ಪ್ರತಿವಾದಿಮದಚ್ಛಿದಮಿತಿ ॥ ಯಥೋಕ್ತಂ ಪೂರ್ವಪ್ರಸ್ಥಾನೇ । 'ದುರ್ವಾದಿವಾರಣವಿದಾರಣದಕ್ಷ-





ದೀಕ್ಷಮ್' ಇತಿ । ಶ್ರೀಮಂತಃ ಶಿಷ್ಯಸಂಪತ್ತಿಮಂತಶ್ಚ ತೇ ಅಕ್ಷೋಭ್ಯತೀರ್ಥಾಖ್ಯಾಶ್ಚ ಇತ್ಯನೇನ ಬಹುಶಿಷ್ಯಸಂಪತ್ತಿರ್ದರ್ಶಿತಾ । ತತ್ರ ಮದ್ವಿಷಯೇ ವಿಶೇಷೋಽಸ್ತೀತ್ಯಾಹ – ಮಮ ಗುರೂನ್ ॥ ಸಾಕ್ಷಾತ್ ತತ್ರಾಪಿ ಅತಿಶಯೇನ ಉಪದೇಶಕಾನ್ ಇತಿ । ಯಥೋಕ್ತಂ ಪ್ರಮೇಯದೀಪಿಕಾಯಾಮ್ – 'ಅಕ್ಷೋಭ್ಯತೀರ್ಥಗುರುಣಾ ಶುಕವತ್ ಶಿಕ್ಷಿತಸ್ಯ ಮೇ' ಇತಿ ॥

ಗುರುಗಳು ಉಪದೇಶ ಮಾಡಿದರೂ ಕೂಡ ತತ್ತ್ವಜ್ಞಾನವು ಶ್ರೋತೃಗಳಿಗೆ ದೃಢವಾಗಿ ನಿರೂಢವಾಗುವುದಿಲ್ಲ. ಪ್ರತಿವಾದಿಗಳಿಂದ ಆಕ್ಷೇಪ ಮಾಡಲ್ಪಟ್ಟ ಯುಕ್ತ್ಯಾಭಾಸಗಳನ್ನು ನಿರಾಸಮಾಡಿದ ಮೇಲಷ್ಟೇ ತತ್ತ್ವಜ್ಞಾನವು ದೃಢವಾಗುತ್ತದೆ. ಈ ದೃಷ್ಟಿಯಿಂದ 'ಪ್ರತಿವಾದಿಮದಚ್ಛಿದಃ' ಎಂಬ ವಿಶೇಷಣವನ್ನು ನೀಡಿದ್ದಾರೆ. ಇದನ್ನೇ ಬ್ರಹ್ಮಸೂತ್ರಭಾಷ್ಯದ ಟೀಕೆ ಬರೆಯುವ ಪ್ರಾರಂಭದಲ್ಲಿ 'ದುರ್ವಾದಿವಾರಣವಿದಾರಣದಕ್ಷದೀಕ್ಷಮ್' ಎಂಬುದಾಗಿ ಅಕ್ಷೋಭ್ಯತೀರ್ಥರನ್ನು ಸ್ತುತಿಸಿದ್ದಾರೆ. 'ಅಕ್ಷೋಭ್ಯತೀರ್ಥಾಖ್ಯಃ' ಎಂಬ ಮಾತಿನಿಂದ ಗುರುಗಳಾದ ಶ್ರೀಅಕ್ಷೋಭ್ಯತೀರ್ಥರು ತತ್ತ್ವಜ್ಞಾನಾದಿ ಸಂಪದ್ಭರಿತರಾಗಿದ್ದಾರೆ ಶಿಷ್ಯಸಂಪತ್ತಿನಿಂದಲೂ ಕೂಡಿದ್ದಾರೆ ಎಂದು ತಿಳಿಸಿದ್ದಾರೆ. ಆದರೆ ನನ್ನ ವಿಷಯದಲ್ಲಿ ಅವರಿಗೆ ವಿಶೇಷವಾದ ಕಾರುಣ್ಯವಿದೆ. ಇದನ್ನು ತಿಳಿಸಲು 'ಮಮ' ಎಂಬ ಪದವನ್ನು ಉಲ್ಲೇಖ ಮಾಡಿದ್ದಾರೆ. ನೇರವಾಗಿ ನನಗೆ ಉಪದೇಶಿಸಿದ್ದಾರೆ. ಮತ್ತು ಉಳಿದೆಲ್ಲ ಶಿಷ್ಯರಿಗಿಂತ ಅತಿಶಯವಾದ ತತ್ತ್ವಜ್ಞಾನವನ್ನು ನನಗೆ ನೀಡಿದ್ದಾರೆ. ಇದನ್ನೇ ಪ್ರಮೇಯದೀಪಿಕಾಮಂಗಳಶ್ಲೋಕದಲ್ಲಿ ಜಯತೀರ್ಥರು ತಮ್ಮ ಗುರುಗಳನ್ನು ಪ್ರಶಂಸಿಸಿದ ಪರಿ ಹೀಗಿದೆ – 'ಅಕ್ಷೋಭ್ಯತೀರ್ಥಗುರುಣಾ ಶುಕವತ್ ಶಿಕ್ಷಿತಸ್ಯ ಮೇ' - 'ಗುರುಗಳಾದ ಅಕ್ಷೋಭ್ಯತೀರ್ಥರು ನನಗೆ ಗಿಳಿಗೆ ಪಾಠ ಹೇಳುವಂತೆ ಪಾಠ ಹೇಳಿದ್ದಾರೆ'.

## ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ ಎಂಬುದಕ್ಕೆ ಮೂರು ಮಜಲಿನ ನಿಷ್ಪತ್ತಿಗಳು.

ವಿರೀಬಾಳಾಚಾರ್ಯರು – 'ಕ್ಷೋಭ್ಯೋ ನ ಭವತಿ' ಇತಿ ಅಕ್ಷೋಭ್ಯಃ । ತೀರ್ಥೇ ಅಧ್ವರೇ ಅಕ್ಷೋಭ್ಯಃ ಅಕ್ಷೋಭ್ಯತೀರ್ಥಃ । ರಾಜದಂತಾದಿಷು ಉಪಸಂಖ್ಯೇಯತಯಾ ಪರನಿಪಾತಃ । ಶ್ರೀಮಾಂಶ್ಚಾಸೌ ಅಕ್ಷೋಭ್ಯತೀರ್ಥಶ್ಚ ತಥೋಕ್ತಃ । ಶ್ರೀಮಧ್ವಾಚಾರ್ಯಃ ಯಸ್ಮಾತ್ ಆಖ್ಯಾ ನಾಮ ಯೇಷಾಂ ತೇ ತಥೋಕ್ತಾಃ ತಾನ್ । ಶ್ರೀಮಧ್ವಾಚಾರ್ಯಪ್ರದತ್ತಸ್ವಾಭಿಧಾನಾನ್ ಗುರೂನ್ ಇತ್ಯರ್ಥಃ । ಶ್ರೀಮಧ್ವಾಚಾರ್ಯಃ ಸ್ವಪ್ರಿಯಶಿಷ್ಯಸ್ಯಾಧ್ವರಮುಪಗಮ್ಯ ತದ್ವಿಘಾತುಕಾನ್ ದುರ್ಮದಾನ್ ಮಂಡಿತಂಮನ್ಯಾನ್ ವಿಜಿತ್ಯ ವಿದ್ರಾವ್ಯ ತಂ ಧರ್ಮರಾಜಂ ಭೀಮ ಇವ ಸಾಧ್ವಯಾಜಯತ್





## ರಸಘಟ್ಟ

## 'ಪದವಾಕ್ಯಪ್ರಮಾಣಜ್ಞಾನ್' ಎಂಬುದರ ವ್ಯಾಖ್ಯಾನ

ಏರೀಬಾಳಾಚಾರ್ಯರು – 'ಪದ್ಯತೇ ಜ್ಞಾಯತೇऽನೇನ' ಇತಿ ಪದಂ ವ್ಯಾಕರಣಮ್ । ವಾಕ್ಯಂ ವಾರ್ತಿಕಮ್ । ಪ್ರಮಾಣಂ ನ್ಯಾಯಶಾಸ್ತ್ರಮ್ । ವಾಕ್ಯಾರ್ಥಜ್ಞಾನೋಪೇಯನ್ಯಾಯ-ಸಮರ್ಪಕಂ ಪ್ರಮೇಯಮೀಮಾಂಸಾಶಾಸ್ತ್ರಂ ವಾಕ್ಯಮ್ । ಉದ್ದೇಶವಿಭಾಗಪರೀಕ್ಷಾಭಿಃ ಪ್ರಮಾಣ-ಸ್ವರೂಪನಿರ್ಧಾರಕಂ ಪ್ರಮಾಣಮೀಮಾಂಸಾಶಾಸ್ತ್ರಂ ಪ್ರಮಾಣಮಿತ್ಯಪಿ ವ್ಯಾಚಕ್ಷತೇ ॥

'ಪದ್ಯತೇ ಶಬ್ದಾರ್ಥಃ ಅನೇನ' ಎಂಬ ವ್ಯುತ್ಪತ್ತಿಯಂತೆ ಶಬ್ದಾರ್ಥಜ್ಞಾನವನ್ನು ಉಂಟುಮಾಡು-ವುದರಿಂದ 'ಪದ'ಶಬ್ದಕ್ಕೆ ವ್ಯಾಕರಣಶಾಸ್ತ್ರ ಎಂದರ್ಥ. ಮತ್ತು 'ಪದಂ ವ್ಯಾಕರಣಂ ಪ್ರೋಕ್ತಂ ಮೀಮಾಂಸಾ ವಾಕ್ಯಮೇವ ಚ' ಎಂಬ ಉಕ್ತಿಯಂತೆ 'ವಾಕ್ಯ' ಎಂದರೆ ವಾಕ್ಯಾರ್ಥಜ್ಞಾನಕ್ಕೆ ಉಪಯೋಗಿಯಾದ ನ್ಯಾಯ -ಗಳನ್ನೊದಗಿಸುವಂತಹ ಮೀಮಾಂಸಾಶಾಸ್ತ್ರ ಎಂದರ್ಥ.

ಮೀಮಾಂಸಾ ತ್ರಿವಿಧಾ ಜ್ಞೇಯಾ ದೈವೀ ಬ್ರಾಹ್ಮೀ ಚ ಕಾರ್ಮಿಕೀ ।
ಬ್ರಹ್ಮತರ್ಕಂ ಚ ಮೀಮಾಂಸಾಂ ಸೇವೇತ ಜ್ಞಾನಸಿದ್ಧಯೇ ॥'

ಎಂದು ಗೀತಾತಾತ್ಪರ್ಯನಿರ್ಣಯದಲ್ಲಿ ಉಲ್ಲೇಖಿಸಿದ ನಾರದೀಯವಚನದಂತೆ ಮೀಮಾಂಸಾ -ಶಾಸ್ತ್ರವೆಂದರೆ ದೈವೀಮೀಮಾಂಸಾ, ಬ್ರಹ್ಮಮೀಮಾಂಸಾ, ಕರ್ಮಮೀಮಾಂಸಾ ಎಂದು ಮೂರು ವಿಧ-ವಾದದ್ದನ್ನು ತಿಳಿಯಬೇಕು. ಪ್ರಮಾಣ ಎಂದರೆ ಉದ್ದೇಶ, ಲಕ್ಷಣ, ವಿಭಾಗ, ಪರೀಕ್ಷೆಗಳಿಂದ ಪ್ರಮಾಣ-ಸ್ವರೂಪನಿರ್ಧಾರಕವಾದಂತಹ ಬ್ರಹ್ಮತರ್ಕವೆಂಬ ಪ್ರಮಾಣಮೀಮಾಂಸಾಶಾಸ್ತ್ರ. ಈ ಎಲ್ಲ ಶಾಸ್ತ್ರಗಳಲ್ಲಿ ವಿಶೇಷಪಾಂಡಿತ್ಯಗಳಿಸಿದ ಶ್ರೀಮದಕ್ಷೋಭ್ಯತೀರ್ಥರಿಂದ ಶ್ರೀಜಯತೀರ್ಥರು ಸನ್ಯಾಸಸ್ವೀಕರಿಸಿ ವಿದ್ಯಾ-ಭ್ಯಾಸ ಮಾಡಿರುವರೆಂದು ಅಭಿಪ್ರಾಯ.

## ಗಿಳಿಯಂತೆ ಪಾಠ ಹೇಳಿದ ಗುರುಗಳು

ಲಘುರಸರಂಜಿನೀ – ನನು ಗುರೂಪದಿಷ್ಟಮಪಿ ವಿಜ್ಞಾನಂ ನ ತಾವತ್ ಶ್ರೋತೃಣಾಂ ದೃಢನಿರೂಢಂ ಭವತಿ । ಯಾವತ್ ಪ್ರತಿವಾದಿಪ್ರತರ್ಕಿತಯುಕ್ತ್ಯಾಭಾಸನಿರಾಸ ಇತ್ಯತ ಉಕ್ತಮ್ – ಪ್ರತಿವಾದಿಮದಚ್ಛಿದಮಿತಿ ॥ ಯಥೋಕ್ತಂ ಪೂರ್ವಪ್ರಸ್ಥಾನೇ । 'ದುರ್ವಾದಿವಾರಣವಿದಾರಣದಕ್ಷ-





ದೀಕ್ಷಮ್' ಇತಿ । ಶ್ರೀಮಂತಃ ಶಿಷ್ಯಸಂಪತ್ತಿಮಂತಶ್ಚ ತೇ ಅಕ್ಷೋಭ್ಯತೀರ್ಥಾಖ್ಯಾಶ್ಚ ಇತ್ಯನೇನ ಬಹುಶಿಷ್ಯಸಂಪತ್ತಿರ್ದರ್ಶಿತಾ । ತತ್ರ ಮದ್ವಿಷಯೇ ವಿಶೇಷೋಽಸ್ತೀತ್ಯಾಹ – ಮಮ ಗುರೂನ್ ॥ ಸಾಕ್ಷಾತ್ ತತ್ರಾಪಿ ಅತಿಶಯೇನ ಉಪದೇಶಕಾನ್ ಇತಿ । ಯಥೋಕ್ತಂ ಪ್ರಮೇಯದೀಪಿಕಾಯಾಮ್ – 'ಅಕ್ಷೋಭ್ಯತೀರ್ಥಗುರುಣಾ ಶುಕವತ್ ಶಿಕ್ಷಿತಸ್ಯ ಮೇ' ಇತಿ ॥

ಗುರುಗಳು ಉಪದೇಶ ಮಾಡಿದರೂ ಕೂಡ ತತ್ತ್ವಜ್ಞಾನವು ಶ್ರೋತೃಗಳಿಗೆ ದೃಢವಾಗಿ ನಿರೂಢ-ವಾಗುವುದಿಲ್ಲ. ಪ್ರತಿವಾದಿಗಳಿಂದ ಆಕ್ಷೇಪ ಮಾಡಲ್ಪಟ್ಟ ಯುಕ್ತ್ಯಾಭಾಸಗಳನ್ನು ನಿರಾಸಮಾಡಿದ ಮೇಲಷ್ಟೇ ತತ್ತ್ವಜ್ಞಾನವು ದೃಢವಾಗುತ್ತದೆ. ಈ ದೃಷ್ಟಿಯಿಂದ 'ಪ್ರತಿವಾದಿಮದಚ್ಛಿದಃ' ಎಂಬ ವಿಶೇಷಣವನ್ನು ನೀಡಿ-ದ್ದಾರೆ. ಇದನ್ನೇ ಬ್ರಹ್ಮಸೂತ್ರಭಾಷ್ಯದ ಟೀಕೆ ಬರೆಯುವ ಪ್ರಾರಂಭದಲ್ಲಿ 'ದುರ್ವಾದಿವಾರಣವಿದಾರಣ-ದಕ್ಷದೀಕ್ಷಮ್' ಎಂಬುದಾಗಿ ಅಕ್ಷೋಭ್ಯತೀರ್ಥರನ್ನು ಸ್ತುತಿಸಿದ್ದಾರೆ. 'ಅಕ್ಷೋಭ್ಯತೀರ್ಥಾಖ್ಯ:' ಎಂಬ ಮಾತಿನಿಂದ ಗುರುಗಳಾದ ಶ್ರೀಅಕ್ಷೋಭ್ಯತೀರ್ಥರು ತತ್ತ್ವಜ್ಞಾನಾದಿ ಸಂಪದ್ಭರಿತರಾಗಿದ್ದಾರೆ ಶಿಷ್ಯಸಂಪತ್ತಿ-ನಿಂದಲೂ ಕೂಡಿದ್ದಾರೆ ಎಂದು ತಿಳಿಸಿದ್ದಾರೆ. ಆದರೆ ನನ್ನ ವಿಷಯದಲ್ಲಿ ಅವರಿಗೆ ವಿಶೇಷವಾದ ಕಾರುಣ್ಯವಿದೆ. ಇದನ್ನು ತಿಳಿಸಲು 'ಮಮ' ಎಂಬ ಪದವನ್ನು ಉಲ್ಲೇಖ ಮಾಡಿದ್ದಾರೆ. ನೇರವಾಗಿ ನನಗೆ ಉಪದೇಶಿಸಿದ್ದಾರೆ. ಮತ್ತು ಉಳಿದೆಲ್ಲ ಶಿಷ್ಯರಿಗಿಂತ ಅತಿಶಯವಾದ ತತ್ತ್ವಜ್ಞಾನವನ್ನು ನನಗೆ ನೀಡಿದ್ದಾರೆ. ಇದನ್ನೇ ಪ್ರಮೇಯದೀಪಿಕಾಮಂಗಳಶ್ಲೋಕದಲ್ಲಿ ಜಯತೀರ್ಥರು ತಮ್ಮ ಗುರುಗಳನ್ನು ಪ್ರಶಂಸಿಸಿದ ಪರಿ ಹೀಗಿದೆ – 'ಅಕ್ಷೋಭ್ಯತೀರ್ಥಗುರುಣಾ ಶುಕವತ್ ಶಿಕ್ಷಿತಸ್ಯ ಮೇ' - 'ಗುರುಗಳಾದ ಅಕ್ಷೋಭ್ಯತೀರ್ಥರು ನನಗೆ ಗಿಳಿಗೆ ಪಾಠ ಹೇಳುವಂತೆ ಪಾಠ ಹೇಳಿದ್ದಾರೆ'.

## ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ ಎಂಬುದಕ್ಕೆ ಮೂರು ಮಜಲಿನ ನಿಷ್ಪತ್ತಿಗಳು.

ವಿಠೀಬಾಳಾಚಾರ್ಯರು – 'ಕ್ಷೋಭ್ಯೋ ನ ಭವತಿ' ಇತಿ ಅಕ್ಷೋಭ್ಯಃ । ತೀರ್ಥೇ ಅಧ್ವರೇ ಅಕ್ಷೋಭ್ಯಃ ಅಕ್ಷೋಭ್ಯತೀರ್ಥಃ । ರಾಜದಂತಾದಿಷು ಉಪಸಂಖ್ಯೇಯತಯಾ ಪರನಿಪಾತಃ । ಶ್ರೀಮಾಂಶ್ಚಾಸೌ ಅಕ್ಷೋಭ್ಯತೀರ್ಥಶ್ಚ ತಥೋಕ್ತಃ । ಶ್ರೀಮಧ್ವಾಚಾರ್ಯಃ ಯಸ್ಮಾತ್ ಆಖ್ಯಾ ನಾಮ ಯೇಷಾಂ ತೇ ತಥೋಕ್ತಾಃ ತಾನ್ । ಶ್ರೀಮಧ್ವಾಚಾರ್ಯಪ್ರದತ್ತಸ್ವಾಭಿಧಾನಾನ್ ಗುರೂನ್ ಇತ್ಯರ್ಥಃ । ಶ್ರೀಮಧ್ವಾಚಾರ್ಯಃ ಸ್ವಪ್ರಿಯಶಿಷ್ಯಸ್ಯಾಧ್ವರಮುಪಗಮ್ಯ ತದ್ ವಿಘಾತುಕಾನ್ ದುರ್ಮ-ದಾನ್ ಮಂಡಿತಂಮನ್ಯಾನ್ ವಿಜಿತ್ಯ ವಿದ್ರಾವ್ಯ ತಂ ಧರ್ಮರಾಜಂ ಭೀಮ ಇವ ಸಾಧ್ವಯಾಜಯತ್

ಇತಿ ಸುಮಧ್ವವಿಜಯೇ ನವಮಸರ್ಗೇ ಪ್ರಸಿದ್ಧೇಯಂ ಕಥಾ ವಿಸ್ತರಭಿಯಾ ತದ್ವಚನಾನಿ ನೇಹೋದಾಹರಿಷ್ಯಾಮಃ। ಅಥವಾ ಶ್ರೀರ್ವಿಷಮಸ್ಯಾಸ್ತೀತಿ ಶ್ರೀಮಾನ್ ಸರ್ಪಃ। ತೇನ ಕ್ಷೋಭ್ಯೋ ನ ಭವತೀತಿ ಅಕ್ಷೋಭ್ಯಃ ಶ್ರೀಮಧ್ವಾಚಾರ್ಯಃ। ತದುಕ್ತಂ ಸುಮಧ್ವವಿಜಯೇ –

ಕ್ವಚಿದಮುಂ ನಿಜಘಾಂಸುರಶಾಂತಿಮಾನ್ ಉಪಸಸರ್ಪ ಸಸರ್ಪಮಯೋಽಸುರಃ।
ತ್ವರಿತಮುದ್ಧತವಿಸ್ಪತಮಸ್ತಕಃ ಪ್ರತಿದದಂಶಯದೈನಮವಿಕ್ಷತಮ್।
ಮೃದುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ ಪ್ರತತಾಮ ಸ'

ಇತ್ಯಾದಿ । ಶಿಷ್ಟಂ ಪ್ರಾಗ್ವತ್ । ಯದ್ವಾ ಶ್ರೀಃ ಪಾಂಡಿತ್ಯಸಂಪತ್ತಿಃ ಅಸ್ಯಾಸ್ತೀತಿ ಶ್ರೀಮಾನ್ ವಿದ್ಯಾರಣ್ಯೋ ಮಾಯಿಭಿಕ್ಷುಃ ತೇನ ಅಕ್ಷೋಭ್ಯಶ್ಚಾಸೌ ತೀರ್ಥಂ ಗುರುಶ್ಚೇತಿ ಶ್ರೀಮದಕ್ಷೋಭ್ಯತೀರ್ಥಮ್ ಇತ್ಯಾಖ್ಯಾ ಯೇಷಾಂ ತೇ ತಥೋಕ್ತಾಃ ತಾನ್ ಗುರೂನ್ ಇತ್ಯರ್ಥಃ । ಅಸ್ಯೈವ ತಾತ್ಪರ್ಯಕಥನಂ – ಪ್ರತಿವಾದಿಮದಚ್ಛಿದಃ ಇತಿ ॥ ತದುಕ್ತಂ ಸತ್ಯನಿಧಿವಿಲಾಸೇ –

ಮಿಥ್ಯಾವಾದೀಭಸಂಸತ್ ಪ್ರಕಟಿತವಚನಾಟೋಪಸಿಂಹಸ್ವನಸ್ಯ
ಕ್ಷೋಣೀಶದ್ವಾರದೇಶೋದ್ಘುಷಿತನಿಜಜಯಾಪೂರಿತಾಶಾಂತರಸ್ಯ।
ಅಕ್ಷೋಭ್ಯಾಖ್ಯಸ್ಯ ಭಿಕ್ಷೋಃ ಪ್ರಥಯತಿ ಜಯಿತಾಮುತ್ತಮಾರಣ್ಯವಾದೇ
ವೇದಾಂತಾಚಾರ್ಯನಾಮ್ನಾ ವಿರಚಿತಜಯಪದ್ಯಾತ್ಮಕೋಽಯಂ ನಿಬಂಧಃ ॥

'ಅಸಿನಾ ತತ್ವಮಸಿನಾ ಪರಜೀವಪ್ರಭೇದಿನಾ।
ವಿದ್ಯಾರಣ್ಯಮಹಾರಣ್ಯಮ್ ಅಕ್ಷೋಭ್ಯಮುನಿರಚ್ಛಿನತ್ ॥' ಇತಿ ॥

1. ಅಕ್ಷೋಭ್ಯತೀರ್ಥರು ಎಂದರೆ ಶ್ರೀಮಧ್ವಾಚಾರ್ಯರು. ಅದು ಹೀಗೆ – ಕ್ಷೋಭ್ಯಃ ನ ಭವತೀತಿ ಅಕ್ಷೋಭ್ಯಃ - ತೀರ್ಥೇ ಅಕ್ಷೋಭ್ಯಃ ಅಕ್ಷೋಭ್ಯತೀರ್ಥಃ. ರಾಜದಂತಾದಿಶಬ್ದಗಳಂತೆ ಪರನಿಪಾತವನ್ನು ಮಾಡಬೇಕು. ಶ್ರೀಮಾಂಶ್ಚಾಸೌ ಅಕ್ಷೋಭ್ಯತೀರ್ಥಶ್ಚ ಶ್ರೀಮದಕ್ಷೋಭ್ಯತೀರ್ಥಃ ಎಂಬುದು ವಿಗ್ರಹ. ಯಾಗದಲ್ಲಿ ಕ್ಷೋಭೆಗೆ ಒಳಗಾಗದ ಮಧ್ವಾಚಾರ್ಯರು ಅಕ್ಷೋಭ್ಯತೀರ್ಥರೆಂದು ಕರೆಸಿಕೊಳ್ಳುತ್ತಾರೆ. ಇಂಥ ಮಧ್ವಾಚಾರ್ಯರಿಂದ ಅಕ್ಷೋಭ್ಯತೀರ್ಥ ಎಂಬ ಹೆಸರನ್ನು ಪಡೆದ ಗುರುಗಳು ಅಕ್ಷೋಭ್ಯತೀರ್ಥಾಖ್ಯರು. ಶ್ರೀಮದಕ್ಷೋಭ್ಯತೀರ್ಥಾತ್ ಆಖ್ಯಾ ಯೇಷಾಂ ತೇ ಶ್ರೀಮದಕ್ಷೋಭ್ಯತೀರ್ಥಾಖ್ಯಾಃ, ತಾನ್ = ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ ಎಂಬುದಾಗಿ ನಿಷ್ಪತ್ತಿಯನ್ನು ತಿಳಿಯಬೇಕು. ಶ್ರೀಮಧ್ವಾಚಾರ್ಯರು ತಮ್ಮ ಪ್ರಿಯಶಿಷ್ಯನ ಯಜ್ಞಕ್ಕೆ ತೆರಳಿದರು. ಅಲ್ಲಿ ಯಜ್ಞಕ್ಕೆ ಘಾತಮಾಡುವ ದುಷ್ಟ





ಪಂಡಿತರನ್ನು ನಿಗ್ರಹಿಸಿದರು. ಯಜ್ಞವು ಸಾಂಗೋಪಾಂಗವಾಗಿ ಪರಿಪೂರ್ಣವಾಗುವಂತೆ ರಕ್ಷಣೆ ನೀಡಿದರು. ಧರ್ಮರಾಜನ ರಾಜಸೂಯಯಾಗಕ್ಕೆ ಭೀಮಸೇನದೇವರು ರಕ್ಷಣೆ ನೀಡಿದಂತೆ ಶ್ರೀಮಧ್ವಾಚಾರ್ಯರು ರಕ್ಷಣೆ ನೀಡಿದರು ಎಂಬ ಉಲ್ಲೇಖವು ಮಧ್ವವಿಜಯದ ನವಮಸರ್ಗದಲ್ಲಿ 'ಸಾಧ್ವಯಾಜಯೇತ್' ಎಂಬ ಶ್ಲೋಕದಲ್ಲಿ ಉಲ್ಲೇಖಿಸಿದ್ದಾರೆ. ಆದ್ದರಿಂದ ಅಕ್ಷೋಭ್ಯತೀರ್ಥರು ಎಂಬ ಪದಕ್ಕೆ ಯಾಗವು ಕ್ಷೋಭೆಗೊಳಗಾಗದಂತೆ ರಕ್ಷಿಸಿದ ಮಧ್ವಾಚಾರ್ಯರು ಎಂಬರ್ಥವು ತಿಳಿಯುತ್ತದೆ.

2. ಅಥವಾ ಶ್ರೀಃ ಅಸ್ಯಾಸ್ತೀತಿ ಶ್ರೀಮಾನ್ ಶ್ರೀಮತಾ ಕ್ಷೋಭ್ಯಃ ನ ಭವತೀತಿ ಶ್ರೀಮದಕ್ಷೋಭ್ಯಃ, ಶ್ರೀಮದಕ್ಷೋಭ್ಯಶ್ಚಾಸೌ ತೀರ್ಥಶ್ಚ ಶ್ರೀಮದಕ್ಷೋಭ್ಯತೀರ್ಥಃ, ಶ್ರೀಮದಕ್ಷೋಭ್ಯತೀರ್ಥಾತ್ ಆಖ್ಯಾ ಯೇಷಾಂ ತೇ ಶ್ರೀಮದಕ್ಷೋಭ್ಯತೀರ್ಥಾಖ್ಯಾಃ, ತಾನ್ = ಶ್ರೀಮದಕ್ಷೋಭ್ಯತೀರ್ಥಾನ್ ಎಂಬ ನಿಷ್ಪತ್ತಿಯನ್ನು ತಿಳಿಯಬಹುದು. ಶ್ರೀಃ = ವಿಷವು, ಅಸ್ಯಾಸ್ತೀತಿ ಶ್ರೀಮಾನ್ = ಸರ್ಪವು. ಇಂಥ ಸರ್ಪದಿಂದ ಕ್ಷೋಭ್ಯಃ ನ ಭವತೀತಿ = ಕ್ಷೋಭೆಗೆ ಒಳಗಾಗದವರು. ಶ್ರೀಮಧ್ವಾಚಾರ್ಯರು. ಶ್ರೀಮದಕ್ಷೋಭ್ಯಶ್ಚಾಸೌ ತೀರ್ಥಶ್ಚ ಶ್ರೀಮದಕ್ಷೋಭ್ಯತೀರ್ಥಃ. ಮಧ್ವವಿಜಯದಲ್ಲಿ

ಕ್ವಚಿದಮುಂ ನಿಜಘಾಂಸುರಶಾಂತಿಮಾನ್ ಉಪಸಸರ್ಪ ಸಸರ್ಪಮಯೋಽಸುರಃ।
ತ್ವರಿತಮುದ್ಧತವಿಸ್ತೃತಮಸ್ತಕಃ ಪ್ರತಿದದಂಶಯದೈನಮವಿಕ್ಷತಮ್ ।
ಮೃದುಪದಾರುಣಚಾರುತರಾಂಗುಲೀವಿಹೃತಿಪಿಷ್ಟತನುಃ ಪ್ರತತಾಮ ಸಃ'

ಇತ್ಯಾದಿ ಶ್ಲೋಕದಿಂದ ಮಣಿಮಂತನೇ ಸರ್ಪನಾಗಿ ಬಂದಾಗ ತಮ್ಮ ಮೃದುಪದದಿಂದ ಅವನನ್ನು ವರೆಸಿ ಹಾಕಿದರು ಎಂಬ ಉಲ್ಲೇಖವಿದೆ. ಆದ್ದರಿಂದ ಸರ್ಪವು ತನ್ನನ್ನು ಕಚ್ಚಲು ಬಂದಾಗ ತಮಗೆ ಯಾವುದೇ ರೀತಿಯಲ್ಲಿ ಕ್ಷೋಭೆಯಾಗಲಿಲ್ಲ. ಸರ್ಪವೇ ಕ್ಷೋಭೆಯನ್ನು ಹೊಂದಿತು. ಹೀಗೆ ಅಕ್ಷೋಭ್ಯತೀರ್ಥ ಎಂಬ ಪದಕ್ಕೆ ಸರ್ಪದಿಂದ ಕ್ಷೋಭೆಗೊಳಗಾಗದ ಶ್ರೀಮಧ್ವಾಚಾರ್ಯರು ಎಂಬ ಅರ್ಥವು ದೊರೆಯುತ್ತದೆ. ಇಂಥ ಶ್ರೀಮಧ್ವಾಚಾರ್ಯರಿಂದ ತಮಗೆ ಅಕ್ಷೋಭ್ಯತೀರ್ಥ ಎಂಬ ಹೆಸರು ಬಂದಿದೆ. ಅಂತಹ ಗುರುಗಳಾದ ಶ್ರೀಅಕ್ಷೋಭ್ಯತೀರ್ಥರನ್ನು ಸೇವಿಸುತ್ತೇನೆ ಎಂಬುದಾಗಿ ತಿಳಿಯಬೇಕು.

3. ಅಥವಾ ಶ್ರೀಃ ಅಸ್ಯಾಸ್ತೀತಿ ಶ್ರೀಮಾನ್ ಶ್ರೀಮತಾ ಅಕ್ಷೋಭ್ಯಃ ಶ್ರೀಮದಕ್ಷೋಭ್ಯಃ ಶ್ರೀಮದಕ್ಷೋಭ್ಯಶ್ಚಾಸೌ ತೀರ್ಥಶ್ಚ ಶ್ರೀಮದಕ್ಷೋಭ್ಯತೀರ್ಥಃ, ಶ್ರೀಮದಕ್ಷೋಭ್ಯತೀರ್ಥಃ ಇತಿ ಆಖ್ಯಾ ಯೇಷಾಂ ತೇ ಶ್ರೀಮದಕ್ಷೋಭ್ಯತೀರ್ಥಾಖ್ಯಾಃ, ತಾನ್ ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ ಎಂಬ ನಿಷ್ಪತ್ತಿಯನ್ನು ತಿಳಿಯಬಹುದು. ಇದರ ಅಭಿಪ್ರಾಯ ಹೀಗಿದೆ – ಶ್ರೀಃ ಅಸ್ಯಾಸ್ತೀತಿ = ಶ್ರೀಮಾನ್ = ಪಾಂಡಿತ್ಯಸಂಪತ್ತನ್ನು ಪಡೆದಿರುವ ವಿದ್ಯಾರಣ್ಯ ಎಂಬ ಮಾಯಾವಾದಿಯು ಶ್ರೀಮಾನ್ ಎನಿಸಿಕೊಳ್ಳುತ್ತಾನೆ. ಅವನಿಂದ





ಕ್ಷೋಭೆಗೆ ಒಳಗಾಗದವರು ಅಕ್ಷೋಭ್ಯತೀರ್ಥರು. ಹೀಗೆ ಅಕ್ಷೋಭ್ಯತೀರ್ಥ ಎಂಬ ಹೆಸರನ್ನು ಪಡೆದಿರುವ ಗುರುಗಳು ಅಕ್ಷೋಭ್ಯತೀರ್ಥಾಖ್ಯಾ ಎನಿಸುತ್ತಾರೆ. ಇದರ ತಾತ್ಪರ್ಯವನ್ನೇ ಪ್ರತಿವಾದಿಮದಚ್ಛಿದಃ ಎಂಬ ವಿಶೇಷಣದಿಂದ ತಿಳಿಸಿದ್ದಾರೆ. ಸತ್ಯನಿಧಿವಿಲಾಸದಲ್ಲಿ ವಿದ್ಯಾರಣ್ಯರನ್ನು ಅಕ್ಷೋಭ್ಯತೀರ್ಥರು ನಿಗ್ರಹಿಸಿದ ಬಗ್ಗೆ ಹೀಗೆ ಉಲ್ಲೇಖಿಸಲಾಗಿದೆ. –

ಮಿಥ್ಯಾವಾದೀಭಸಂಸತ್ ಪ್ರಕಟಿತವಚನಾಟೋಪಸಿಂಹಸ್ವನಸ್ಯ
ಕ್ಷೋಣೀಶದ್ವಾರದೇಶೋದ್ಘುಷಿತನಿಜಜಯಾಪೂರಿತಾಶಾಂತರಸ್ಯ ।
ಅಕ್ಷೋಭ್ಯಾಖ್ಯಸ್ಯ ಭಿಕ್ಷೋಃ ಪ್ರಥಯತಿ ಜಯಿತಾಮುತ್ತಮಾರಣ್ಯವಾದೇ
ವೇದಾಂತಾಚಾರ್ಯನಾಮ್ನಾ ವಿರಚಿತಜಯಪದ್ಯಾತ್ಮಕೋಽಯಂ ನಿಬಂಧಃ ॥

ಶ್ರೀಅಕ್ಷೋಭ್ಯತೀರ್ಥರು ಮಿಥ್ಯಾವಾದಿಗಳೆಂಬ ಆನೆಗಳ ಸಮೂಹಕ್ಕೆ ಸಿಂಹಘರ್ಜನೆಯಂತಿದ್ದಾರೆ. ಚಂದ್ರನ ಮೂಲಕ ಕಿರಣಗಳು ಹೊರಹೊಮ್ಮಿ ದಿಕ್ಕುವಿದಿಕ್ಕುಗಳನ್ನು ವ್ಯಾಪಿಸುವಂತೆ 'ಜಯ' ಎಂಬ ಕೀರ್ತಿಯಿಂದ ದಿಕ್ಕುವಿದಿಕ್ಕುಗಳನ್ನು ವ್ಯಾಪಿಸಿದ್ದಾರೆ. ಇಂಥ ಭಿಕ್ಷುಗಳು ಎಲ್ಲೆಡೆ ಜಯಶಾಲಿಗಳಾಗಲಿ. 'ವೇದಾಂತಾಚಾರ್ಯ' ಎಂಬುವನಿಂದ ಈ ಜಯಪದ್ಯವನ್ನು ವಿರಚಿಸಲಾಗಿದೆ.

'ಅಸಿನಾ ತತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯಮ್ ಅಕ್ಷೋಭ್ಯಮುನಿರಚ್ಛಿನತ್ ॥ – ಎಂಬುದಾಗಿ.

ಶ್ರೀಅಕ್ಷೋಭ್ಯತೀರ್ಥಮುನಿಗಳು ಪರಜೀವಪ್ರಭೇದಿಯಾದ ತತ್ವಮಸಿ ಎಂಬ ಕೊಡಲಿ ಹಿಡಿದು ವಿದ್ಯಾರಣ್ಯ ಎಂಬ ದೊಡ್ಡ ಕಾಡನ್ನು ಕತ್ತರಿಸಿಹಾಕಿದರು.

## ಸುಧಾಪರಿಮಳಸಾರ

ತಮಗೆ ಸನ್ಯಾಸಾಶ್ರಮವನ್ನು ನೀಡಿ ವಿದ್ಯಾದಾನವನ್ನು ಕೂಡ ಮಾಡಿದ ಮುಖ್ಯಗುರುಗಳಾದ ಶ್ರೀಅಕ್ಷೋಭ್ಯತೀರ್ಥರಲ್ಲಿ ಭಕ್ತಿಪೂರ್ವಕವಾದ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದಾರೆ.

ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ ಮಮ ॥

ಶಬ್ದಶಾಸ್ತ್ರ, ಮೀಮಾಂಸಾಶಾಸ್ತ್ರ, ನ್ಯಾಯಶಾಸ್ತ್ರಗಳಲ್ಲಿ ಶ್ರೀಅಕ್ಷೋಭ್ಯತೀರ್ಥರು ಅದ್ವಿತೀಯರಾಗಿದ್ದಾರೆ. ಇವರನ್ನು ಮನಸ್ಸಿನಲ್ಲಿಯೇ ಪೂಜಿಸುತ್ತೇನೆ.





## ಪರಿಮಳವೈಶಿಷ್ಟ್ಯ

* ಪದ, ವಾಕ್ಯ , ಪ್ರಮಾಣ ಈ ಶಬ್ದಗಳಿಗೆ ಅರ್ಥವಿವರಣೆ.

* 'ಉಪತಿಷ್ಠೇ' ಎಂಬ ಆತ್ಮನೇಪದಪ್ರಯೋಗವು ವ್ಯಾಕರಣವಿರುದ್ಧವಲ್ಲ ಎಂಬುದರ ವಿವರಣೆ.

## ಅನುವ್ಯಾಖ್ಯಾನಕಮಲದಲ್ಲಿ ನಾ ದುಂಬಿ

**ಶ್ರೀಮನ್ನ್ಯಾಯಸುಧಾ–**

**ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ।**

**ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥೭॥**

ಶ್ರೀಮಧ್ವಾಚಾರ್ಯರ ಸ್ವಚ್ಛ ಮನಸ್ಸೇ ಮಾನಸಸರೋವರ. ಅನುವ್ಯಾಖ್ಯಾನಗ್ರಂಥವೇ ಅಲ್ಲಿ ಹುಟ್ಟಿದ ದಿವ್ಯಕಮಲ. ಇಂಥ ಅನುವ್ಯಾಖ್ಯಾನಕಮಲದಲ್ಲಿ ಎನ್ನ ಮನ ದುಂಬಿಯಂತೆ ಆಸಕ್ತವಾಗಿದೆ.

ಅನ್ವಯಾರ್ಥ – ಶ್ರೀಮದಾನಂದತೀರ್ಥಾರ್ಯಸನ್ಮನಸ್ಸರಸೀಭುವಿ = ಶ್ರೀಮಧ್ವಾಚಾರ್ಯರ ನಿರ್ದುಷ್ಟವಾದ ಮನಸ್ಸೆಂಬ ಮಾನಸಸರೋವರದಲ್ಲಿ ಹುಟ್ಟಿದ, ಅನುವ್ಯಾಖ್ಯಾನನಲಿನೇ = ಅನುವ್ಯಾಖ್ಯಾನವೆಂಬ ಕಮಲದಲ್ಲಿ, ಮೇ = ನನ್ನ , ಮನಃ = ಮನಸ್ಸು, ಚಂಚರೀಕತಿ = ದುಂಬಿಯಂತೆ ಆಸಕ್ತವಾಗಿದೆ.

ವಿಗ್ರಹ – ಶ್ರೀಮದಾನಂದತೀರ್ಥಾರ್ಯಸನ್ಮನಸ್ಸರಸೀಭುವಿ – ಆನಂದಕರಂ ತೀರ್ಥಂ ಯಸ್ಮಾತ್ ಸಃ ಆನಂದತೀರ್ಥಃ, ಶ್ರೀಮಾಂಶ್ಚಾಸೌ ಆನಂದತೀರ್ಥಶ್ಚ ಶ್ರೀಮದಾನಂದತೀರ್ಥಃ, ಶ್ರೀಮದಾನಂದತೀರ್ಥಶ್ಚಾಸೌ ಆರ್ಯಶ್ಚ ಶ್ರೀಮದಾನಂದತೀರ್ಥಾರ್ಯಃ, ಸತ್ ಚ ತತ್ ಮನಃ ಚ ಸನ್ಮನಃ, ಶ್ರೀಮದಾನಂದತೀರ್ಥಾರ್ಯಸ್ಯ ಸನ್ಮನಃ ಶ್ರೀಮದಾನಂದತೀರ್ಥಾರ್ಯಸನ್ಮನಃ, ಶ್ರೀಮದಾನಂದತೀರ್ಥಾರ್ಯಸನ್ಮನಃ ಏವ ಸರಸೀ ಶ್ರೀಮದಾನಂದತೀರ್ಥಾರ್ಯಸನ್ಮನಸ್ಸರಸೀ, ಶ್ರೀಮದಾನಂದತೀರ್ಥಾರ್ಯಸನ್ಮನಸ್ಸರಸ್ಯಾಂ ಭವತೀತಿ ಶ್ರೀಮದಾ-

ನಂದತೀರ್ಥಾರ್ಯಸನ್ಮನಸ್ಸರಸೀಭು, ತಸ್ಮಿನ್ ಶ್ರೀಮದಾನಂದತೀರ್ಥಾರ್ಯಸನ್ಮನಸ್ಸರಸೀಭುವಿ.

ಅನುವ್ಯಾಖ್ಯಾನಲಿನೇ– ಅನುವ್ಯಾಖ್ಯಾನಮೇವ ನಲಿನಂ, ಅನುವ್ಯಾಖ್ಯಾನನಲಿನಂ ತಸ್ಮಿನ್, ಅನುವ್ಯಾಖ್ಯಾನನಲಿನೇ.

ಚಂಚರೀಕತಿ – ಚಂಚರೀಕವತ್ ಆಚರತಿ ಇತಿ ಚಂಚರೀಕತಿ

## 'ಚಂಚರೀಕತಿ' ಎಂಬುದರ ವ್ಯಾಖ್ಯಾನ

ಪರಿಮಳ– ಸ್ವಚಿಕೀರ್ಷಿತಂ ವ್ಯನಕ್ತಿ – ಶ್ರೀಮದಿತಿ ॥ ಸನ್ಮನೋರೂಪಸರಸಾಂ ಸರೋವರೇ ಭುವಿ ಜಾತ ಇತ್ಯರ್ಥಃ । 'ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ' ಇತಿ ಪುಂವದ್ಭಾವಃ । ಅನುವ್ಯಾಖ್ಯಾನಾಖ್ಯಕಮಲೇ ಚಂಚರೀಕತಿ = ಚಂಚರೀಕವತ್ ಭ್ರಮರವದ್ ಆಚರತಿ । 'ಇಂದಿಂದಿರಭ್ರಮರಷಟ್‌ಪದಚಂಚರೀಕಾ' ಇತ್ಯಾದಿಶಬ್ದರತ್ನಾಕರೋಕ್ತೇಃ । 'ಇಂದಿಂದಿರಶ್ಚಂಚರೀಕಃ' ಇತಿ ಕ್ವಾಚಿತ್ಕಾಮರಪಾಠಃ ಪ್ರಕ್ಷಿಪ್ತಃ । ಅನೇಕಕೋಷೇಷ್ವದರ್ಶನಾತ್ । ತದ್‌ವ್ಯಾಖ್ಯಾತೃಭಿಃ ಅಸ್ಪಷ್ಟತ್ವಾಚ್ಚ । ಅನೇಕಧಾ ವ್ಯಾಖ್ಯಾತುಂ ಮನಃ ಪ್ರವರ್ತತೇ ಇತ್ಯರ್ಥಃ । ಆಚಾರಾರ್ಥಾತ್ ಕ್ವಿಬಂತಾತ್ ಚಂಚರೀಕಶಬ್ದಾದ್ ತಿಜ್ ಪ್ರತ್ಯಯಃ ॥

ತಾವು ಏನು ಮಾಡಲು ಸಂಕಲ್ಪಿಸಿದ್ದಾರೋ ಅದನ್ನು ಪ್ರತಿಜ್ಞಾಪೂರ್ವಕವಾಗಿ ಉಪಸ್ಥಾಪನೆ ಮಾಡಲು 'ಶ್ರೀಮತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಶ್ರೀಮದಾಚಾರ್ಯರ ಶುದ್ಧವಾದ ಮನಸ್ಸೆಂಬ ಸರೋವರದಲ್ಲಿ ಅನುವ್ಯಾಖ್ಯಾನ ಗ್ರಂಥವು ಹುಟ್ಟಿದೆ. ಇದನ್ನು ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ಎಂದು ತಿಳಿಸಿದ್ದಾರೆ. 'ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ' ಎಂಬ ಸೂತ್ರದಂತೆ ಭೂಶಬ್ದದ ಮೇಲೆ ಪುಂವದ್ಭಾವವು ಬಂದು ಭುವಿ ಎಂದು ನಿಷ್ಪನ್ನವಾಗಿದೆ. ಅನುವ್ಯಾಖ್ಯಾನವೆಂಬ ಕಮಲದಲ್ಲಿ ದುಂಬಿಯಂತೆ ನನ್ನ ಮನಸ್ಸು ಆಸಕ್ತವಾಗಿದೆ ಎಂಬುದಾಗಿ ಅರ್ಥವನ್ನು ತಿಳಿಯಬೇಕು. ಚಂಚರೀಕತಿ ಎಂಬ ಪದಕ್ಕೆ ಚಂಚರೀಕವತ್ ಆಚರತಿ ಎಂದರ್ಥ. 'ಇಂದಿಂದಿರಭ್ರಮರಷಟ್‌ಪದಚಂಚರೀಕಾ' ಎಂಬುದಾಗಿ ಶಬ್ದ-

ರತ್ನಾಕರದಲ್ಲಿ ಚಂಚರೀಕಪದವು ಭ್ರಮರಪದದ ಪರ್ಯಾಯವಾಗಿದೆ ಎಂದು ಹೇಳಿದ್ದಾರೆ. 'ಇಂದಿಂದಿರಶ್ಚಂಚರೀಕಃ' ಎಂಬ ಅಮರದ ಪಾಠವನ್ನು ಕೆಲವರು ಉಲ್ಲೇಖಿಸುತ್ತಾರೆ. ಇದು ಪ್ರಕ್ಷಿಪ್ತವಾಗಿದೆ. ಅನೇಕ ಅಮರಕೋಶ ಪುಸ್ತಕಗಳಲ್ಲಿ ಈ ಪಾಠವು ಕಾಣಿಸುತ್ತಿಲ್ಲ. ಮತ್ತು ಅಮರಕೋಶದ ವ್ಯಾಖ್ಯಾನಕಾರರೂ ಕೂಡ ಈ ವಾಕ್ಯಕ್ಕೆ ವ್ಯಾಖ್ಯಾನ ಮಾಡಿಲ್ಲ.

ಅನುವ್ಯಾಖ್ಯಾನಗ್ರಂಥವನ್ನು ಅನೇಕಬಗೆಯಲ್ಲಿ ವ್ಯಾಖ್ಯಾನಮಾಡಲು ನನ್ನ ಮನಸ್ಸು ಪ್ರವೃತ್ತಿಯಾಗುತ್ತಿದೆ ಎಂದು ತಾತ್ಪರ್ಯ. ಚಂಚರೀಕಶಬ್ದದ ಮೇಲೆ ಆಚಾರಾರ್ಥದಲ್ಲಿ ಕ್ವಿಪ್ ಪ್ರತ್ಯಯವು ಬಂದು ಅನಂತರ ಧಾತುಸಂಜ್ಞೆ ಮೊದಲಾದವುಗಳು ಪ್ರಾಪ್ತವಾಗಿ ತಿಙ್‌ಪ್ರತ್ಯಯವು ಬಂದಿದೆ. ಆದ್ದರಿಂದ ಚಂಚರೀಕತಿ ಎಂಬ ಪ್ರಯೋಗವು ಸಾಧುವಾಗಿದೆ.

ವಾಕ್ಯಾರ್ಥಚಂದ್ರಿಕಾ– ಸ್ವಮನಶ್ಚಂಚರೀಕೋಪಮೋಕ್ತ್ಯಾಜೇನ ಚಿಕೀರ್ಷಿತಂ ವ್ಯನಕ್ತಿ – ಶ್ರೀಮದಿತಿ ॥

ತಮ್ಮ ಮನಸ್ಸು ಅನುವ್ಯಾಖ್ಯಾನವಿಷಯದಲ್ಲಿ ದುಂಬಿಯಂತೆ ಆಗಿದೆ ಎಂಬ ಉಪಮೆಯನ್ನು ಹೇಳುವ ಮೂಲಕ ತಾವು ಮಾಡುವ ಗ್ರಂಥದ ಪ್ರತಿಜ್ಞೆಯನ್ನು 'ಶ್ರೀಮದಾನಂದತೀರ್ಥಾರ್ಯ' ಎಂಬುದಾಗಿ ಹೇಳುತ್ತಿದ್ದಾರೆ.

## ಸರಸೀಭುವಿ ಎಂಬ ಶಬ್ದಪ್ರಯೋಗಕ್ಕೆ ಸಾಧುತ್ವಸಮರ್ಥನೆ

ವಿಶೇಷವಿಚಾರ – ಪರಿಮಳಗ್ರಂಥದಲ್ಲಿ ಹೇಳಿದ್ದನ್ನು ವಂಶಪಲ್ಲಿ ಶ್ರೀನಿವಾಸಾಚಾರ್ಯರು ವಿವರವಾಗಿ ವ್ಯಾಖ್ಯಾನ ಮಾಡಿದ್ದಾರೆ. ಅದು ಹೀಗೆ –

ವಂಶಪಲ್ಲಿಆಚಾರ್ಯರು – ಸನ್ನನಃಸರಸೀಭುವಿ ॥ ನಿರ್ದುಷ್ಟಮನೋಲಕ್ಷಣಸರೋ-ವರೋತ್ಪನ್ನೇನ ಇತ್ಯಸ್ಯ ನಲಿನವಿಶೇಷಣತ್ವೇನ ಭು ಭುನೀ ಭೂನಿತಿ ನಪುಂಸಕಭೂಶಬ್ದಸ್ಯ ಸಪ್ತಮೀ ಭುನೀತಿ ಸ್ಯಾತ್ । ನ ತು ಭೂಃ ಭುವೌ ಭುವಃ ಇತಿ ಪುಂಲಿಂಗಶಬ್ದಸ್ಯ ಸಪ್ತಮೀ ಭುವಿ ಇತಿ । ಅತಃ ಕಥಮನಯೋಃ ವಿಶೇಷಣ-ವಿಶೇಷ್ಯಭಾವ ಇತಿ ಚೇತ್ । ಉಚ್ಯತೇ । ಭೂಶಬ್ದಸ್ಯ ಭಾಷಿತ-ಪುಂಸ್ಕತ್ವಾತ್ ತಸ್ಯ ಚ ತೃತೀಯಾದಿಷು 'ಭಾಷಿತಪುಂಸ್ಕಂ ಪುಂವದ್ಗಾಲವಸ್ಯ' ಇತಿ ಸೂತ್ರೇ ಟಾದಿ-ವಿಭಕ್ತಿಷು ಪುಂವದ್ಭಾವೋಕ್ತೇಃ ಭು ಭುನೀ ಭೂನೀತಿ ನಪುಂಸಕತ್ವೇಽಪಿ ತೃತೀಯಾದಿವಿಭಕ್ತಿಷು ಭುವಾ





ಭೂಭ್ಯಾಮ್ ಇತ್ಯಾದಿ ಪುಂಲಿಂಗವದೇವ ಭವತಿ । ಅತೋ ಭುವೀತಿ ಯುಕ್ತಮ್ । ಭಾಷಿತಪುಂಸ್ಕ-ಸ್ವರೂಪಮುಕ್ತಮ್ –

'ಯನ್ನಿಮಿತ್ತಮುಪಾದಾಯ ಪುಂಸಿ ಶಬ್ದಃ ಪ್ರವರ್ತತೇ ।
ನಪುಂಸಕೇಽಪಿ ತಚ್ಚೇತ್ಸ್ಯಾದ್ ಭಾಷಿತಪುಂಸ್ಕಂ ತದುಚ್ಯತೇ' ಇತಿ ।

ಯದಾ ಸರಸೀಭು ನಲಿನಂ ಭೇಕಶ್ಚ ತದುಭಯತ್ರಾಪಿ ತಚ್ಛಬ್ದಪ್ರವೃತ್ತೌ ಸರಸೀಭುತ್ವಮೇವ ನಿಮಿತ್ತಂ ನಾನ್ಯದಿತಿ ಭವತಿ ಭಾಷಿತಪುಂಸ್ಕಮ್ । ಅತ ಏವ ಭಾಷಿತಪುಂಸ್ಕತ್ವಾಭಾವಾತ್ –

'ಪೀಲುರ್ವೃಕ್ಷಃ ಫಲಂ ಪೀಲು ಪೀಲುನೇ ನ ತು ಪೀಲವೇ ।
ವೃಕ್ಷೇ ನಿಮಿತ್ತಂ ಪೀಲುತ್ವಂ ತಜ್ಜತ್ವಂ ತತ್ಫಲೇ ಪುನಃ ॥'

ಇತಿ ಪ್ರತ್ಯುದಾಹರಣಮಭಾಣೀತಿ ದ್ರಷ್ಟವ್ಯಮ್ ॥

'ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ' ಎಂಬುದು ಅನುವ್ಯಾಖ್ಯಾನನಲಿನ ಎಂಬುದಕ್ಕೆ ವಿಶೇಷಣವಾಗಿದೆ. ನಲಿನಶಬ್ದವು ನಪುಂಸಕಲಿಂಗದಲ್ಲಿರುವುದರಿಂದ ಅದಕ್ಕೆ ವಿಶೇಷಣವಾದ ಸರಸೀಭು ಎಂಬುದು ಕೂಡ ನಪುಂಸಕಲಿಂಗದಲ್ಲೇ ಪ್ರಯೋಗ ಮಾಡಬೇಕು. ಆಗ ಸರಸೀಭುನಿ ಎಂಬ ರೂಪವಾಗಬೇಕು. ಭೂ, ಭುನೀ, ಭೂನೀ ಎಂಬುದಾಗಿ ನಪುಂಸಕ ಪ್ರಥಮಾವಿಭಕ್ತಿಯ ರೂಪಗಳು. ಸಪ್ತಮೀವಿಭಕ್ತಿಯಲ್ಲಿ ಭುನಿ ಎಂದಾಗುತ್ತದೆ. ಭೂಃ, ಭುವೌ, ಭುವಃ ಎಂಬುದು ಪುಲ್ಲಿಂಗಶಬ್ದದ ಪ್ರಥಮಾವಿಭಕ್ತಿಯ ರೂಪಗಳು. ಇದು ಸಪ್ತಮೀವಿಭಕ್ತಿಯಲ್ಲಿ ಭುವಿ ಎಂದಾಗುತ್ತದೆ. ಪ್ರಕೃತ ನಲಿನಶಬ್ದಕ್ಕೆ ವಿಶೇಷಣವಾದ್ದರಿಂದ ಭುನಿ ಎಂದೇ ಆಗಬೇಕು. ಆದರೆ ಭುವಿ ಎಂಬ ಪುಲ್ಲಿಂಗಪ್ರಯೋಗವನ್ನೇ ಮಾಡಿದ್ದಾರೆ. ಹೀಗಿರುವಾಗ ವಿಶೇಷಣವಿಶೇಷ್ಯಭಾವವನ್ನು ಹೇಗೆ ಹೇಳುವುದು?

ಉತ್ತರ – ಭೂಶಬ್ದವು ಭಾಷಿತಪುಂಸ್ಕವಾಗಿದೆ. ಆದ್ದರಿಂದ ತೃತೀಯಾದಿವಿಭಕ್ತಿಗಳಲ್ಲಿ 'ಭಾಷಿತ-ಪುಂಸ್ಕಂ ಪುಂವದ್ಗಾಲವಸ್ಯ' ಎಂಬ ಸೂತ್ರದ ಪ್ರಕಾರ ಟಾದಿವಿಭಕ್ತಿಗಳಲ್ಲಿ ಪುಂವದ್ಭಾವವು ಪ್ರಾಪ್ತ-ವಾಗುತ್ತದೆ. ಪ್ರಥಮಾವಿಭಕ್ತಿಯು 'ಭೂ, ಭುನೀ, ಭೂನೀ' ಎಂದಿದ್ದರೂ ತೃತೀಯಾ ವಿಭಕ್ತಿಯಲ್ಲಿ ಭುವಾ ಭೂಭ್ಯಾಮ್ ಎಂದು ಪುಲ್ಲಿಂಗದಂತೆ ರೂಪಗಳಾಗುತ್ತವೆ. ನಪುಂಸಕಲಿಂಗದ ಸಪ್ತಮೀವಿಭಕ್ತಿಯು ಕೂಡ ಭುವಿ ಎಂದೇ ಆಗುತ್ತದೆ.

ಭಾಷಿತಪುಂಸ್ಕ ಎಂದರೇನು? ಎಂಬ ಪ್ರಶ್ನೆಗೆ ವ್ಯಾಕರಣದಲ್ಲಿಯೇ ಉತ್ತರಿಸಲಾಗಿದೆ.





'ಯನ್ನಿಮಿತ್ತಮುಪಾದಾಯ ಪುಂಸಿ ಶಬ್ದಃ ಪ್ರವರ್ತತೇ ।
ನಪುಂಸಕೇಽಪಿ ತಚ್ಚೇತ್ಸ್ಯಾದ್‌ಭಾಷಿತಪುಂಸ್ಕಂ ತದುಚ್ಯತೇ'

ಯಾವಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ ಪುಲ್ಲಿಂಗದಲ್ಲೇ ಶಬ್ದವನ್ನು ಪ್ರಯೋಗಿಸಲಾಗುತ್ತದೆ. ಅದೇ ಪ್ರವೃತ್ತಿನಿಮಿತ್ತ ನಪುಂಸಕಲಿಂಗದಲ್ಲಿದ್ದರೆ ಆಗ ಭಾಷಿತಪುಂಸ್ಕ ಎಂದು ಕರೆಯಬೇಕು.

'ಸರಸೀಭು' ಎಂಬ ಶಬ್ದದ ಪ್ರವೃತ್ತಿನಿಮಿತ್ತ ಸರಸಿಭುತ್ವ ಎಂದಾಗಿದೆ. ಇದು ಪುಲ್ಲಿಂಗಶಬ್ದದಿಂದ ಪ್ರತಿಪಾದ್ಯವಾದ ಭೇಕ(ಕಪ್ಪೆ)ದಲ್ಲಿ ಹಾಗೂ ನಪುಂಸಕಲಿಂಗಶಬ್ದವೆನಿಸಿದ ನಲಿನ ಶಬ್ದಪ್ರತಿಪಾದ್ಯವಾದ ಕಮಲದಲ್ಲಿ ಸಾಧಾರಣವಾಗಿದೆ. ಆದ್ದರಿಂದ ಈ ಶಬ್ದವು ಭಾಷಿತಪುಂಸ್ಕ ಎನಿಸುತ್ತದೆ. ಆದ್ದರಿಂದಲೇ ವ್ಯಾಕರಣದಲ್ಲಿ ಭಾಷಿತಪುಂಸ್ಕತ್ವವು ಇಲ್ಲದ ಕಾರಣ ಪೀಲವೇ ಎನ್ನಬಾರದು ಪೀಲುನೇ ಎನ್ನಬೇಕು ಎಂದು ಹೇಳಿದ್ದಾರೆ. –

'ಪೀಲುರ್ವೃಕ್ಷಃ ಫಲಂ ಪೀಲು ಪೀಲುನೇ ನ ತು ಪೀಲವೇ ।
ವೃಕ್ಷೇ ನಿಮಿತ್ತಂ ಪೀಲುತ್ವಂ ತಜ್ಜತ್ವಂ ತತ್ಫಲೇ ಪುನಃ ॥'

'ಪೀಲು'ಶಬ್ದಕ್ಕೆ 'ವೃಕ್ಷ, ಫಲ' ಎಂದು ಎರಡು ಅರ್ಥಗಳಿವೆ. ಆದರೆ ಚತುರ್ಥೀವಿಭಕ್ತಿಯಲ್ಲಿ ಫಲ ಎಂಬರ್ಥವಿವಕ್ಷಿಸಿದಾಗ 'ಪೀಲುನೇ' ಎನ್ನಬೇಕು. 'ಪೀಲವೇ' ಎನ್ನಬಾರದು. ಏಕೆಂದರೆ ಪುಲ್ಲಿಂಗ ಪೀಲುಶಬ್ದಕ್ಕೆ 'ವೃಕ್ಷತ್ವ' ಪ್ರವೃತ್ತಿನಿಮಿತ್ತ. ನಪುಂಸಕಲಿಂಗ ಪೀಲುಶಬ್ದಕ್ಕೆ 'ವೃಕ್ಷಜನ್ಯತ್ವ' ಪ್ರವೃತ್ತಿನಿಮಿತ್ತ.

ಪರಿಮಳದಲ್ಲಿರುವ ''ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ'' ಎಂಬ ವಾಕ್ಯಕ್ಕೆ ಮೇಲೆ ಹೇಳಿದಷ್ಟು ಅಭಿಪ್ರಾಯವನ್ನು ವಿವಕ್ಷಿಸಬೇಕು.

'ಇಂದಿಂದಿರಶ್ಚಂಚರೀಕಃ.. ಅಸ್ಪೃಷ್ಟತ್ವಾಚ್ಚ' ಎಂಬ ವಾಕ್ಯ ಪರಿಮಳವಾಕ್ಯದ ಪ್ರಕ್ಷೇಪವಾಗಿರಬೇಕು. ಏಕೆಂದರೆ ಅಮರಕೋಶದ ಮಾತು ಪ್ರಕೃತಕ್ಕೆ ಅನುಕೂಲವೇ ಆಗಿದೆ. ಹೀಗಿರುವಾಗ ಅದನ್ನು ಉಲ್ಲೇಖ ಮಾಡಿ ಪ್ರಕ್ಷೇಪ ಎನ್ನುವುದು ಅನಾವಶ್ಯಕ. ಶಬ್ದರತ್ನಾಕರ ಉಲ್ಲೇಖಿಸಿದರೆ ಸಾಕು. ಮುಂದಿನ ವಾಕ್ಯ ಅವಶ್ಯಕ.

ಕಾಶೀಟಿಪ್ಪಣೆ – 'ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ' ಇತಿ ಪುಂವದ್ಭಾವವಿಕಲ್ಪಾನ್ನಲಿನಶಬ್ದೇ ಪುಂಲಿಂಗತ್ವಸ್ಯಾಪಿ ಅನುಶಾಸನಾದ್ವಾ 'ಮಾನಯಾನಾಭಿಧಾನ ನಲಿನ ಪುಲಿನ' ಇತ್ಯಾದಿಲಿಂಗಾನುಶಾಸನಸೂತ್ರೇಣ ಪುಂಲಿಂಗತಾವಿಧಾನಾದಿತಿ ಭಾವಃ । 'ಭುವಿ' ಇತಿ ನುಮಾಗಮಾಭಾವಃ ।

ಯದ್ಯಪಿ 'ನಲಿನ' ಶಬ್ದವು ನಪುಂಸಕಲಿಂಗವಾಗಿರುವುದರಿಂದ ಆ 'ನಲಿನ'ಶಬ್ದಕ್ಕೆ ವಿಶೇಷಣ -ವಾದ ಸರಸೀ ಭೂ= ಎಂಬ ಶಬ್ದವೂ ಕೂಡ ನಪುಂಸಕಲಿಂಗವಾಗಿದೆ. ಆದ್ದರಿಂದ 'ಸರಸೀಭುವಿ' ಎಂದು ರೂಪವಾಗಬೇಕು. ಆದರೂ 'ತೃತೀಯಾದಿಷು ಭಾಷಿತಪುಂಸ್ಕಂ ಪುವದ್ಗಾಲವಸ್ಯ' ಎಂಬ ಸೂತ್ರದ ಪ್ರಕಾರ ಪುಲ್ಲಿಂಗವಾದ ಭೇಕಾದಿಗಳಲ್ಲಿಯೂ ಕೂಡ ಈ ಸರಸೀಭೂ ಶಬ್ದದ ಪ್ರಯೋಗವಿದ್ದದ್ದರಿಂದ ಭಾಷಿತ-ಪುಂಸ್ಕವಾದ ಈ ಸರಸೀಭೂ ಶಬ್ದಕ್ಕೆ ತೃತೀಯಾದಿ ವಿಭಕ್ತಿಗಳಲ್ಲಿ ಪುಂವದ್ಭಾವ ಬರುವುದರಿಂದ ಸರಸೀ-ಭುವಿ ಎಂಬ ಪ್ರಯೋಗವು ಸಾಧುವಾಗುತ್ತದೆ.

ಅಥವಾ 'ಮಾನಯಾನಾಭಿಧಾನ ನಲಿನ ಪುಲಿನ ಉತ್ತಾನ ಶಯನ ಆಸನ ಸ್ಥಾನ ಚಂದನ ಆಲಾನ ಸಮಾನ ಭವನ ವಸನ ಸಂಭಾವನ ವಿಭಾವನ ವಿಮಾನಾನಿ ನಪುಂಸಕೇ ಚ' ಎಂಬ ಲಿಂಗಾನು-ಶಾಸನ ಸೂತ್ರದಲ್ಲಿ ಚ ಶಬ್ದದಿಂದ ಈ ಮೇಲ್ಕಂಡ ಶಬ್ದಗಳಿಗೆ ಪುಂಸ್ತ್ವವನ್ನು ಪಾಕ್ಷಿಕವಾಗಿ ವಿಧಾನ ಮಾಡಿದ್ದಾರೆ. ಪ್ರಕೃತದಲ್ಲಿ ಪುಲ್ಲಿಂಗವಾದ ನಲಿನ ಶಬ್ದಕ್ಕೆ ವಿಶೇಷಣತ್ವೇನ ಸರಸೀಭುವಿ ಎನ್ನುವುದನ್ನು ವಿವಕ್ಷಾ ಮಾಡಿದ್ದರಿಂದ ಯಾವ ದೋಷವೂ ಇಲ್ಲ. ಸರಸೀಭುವಿ ಎಂದು ಇಲ್ಲದಿರುವುದು ಸಮಂಜ-ಸವೇ.

## ಚಂಚರೀಕತಿ ಎಂಬ ಧಾತುವಿನ ವಿಚಾರ

ಕಂಬಾಲೂರು ರಾಮಚಂದ್ರತೀರ್ಥರು – ಸರ್ವಪ್ರಾತಿಪದಿಕೇಭ್ಯಃ ಕ್ವಿಬಾಚಾರ ಇತಿ ಚಂಚ-ರೀಕಪ್ರಾತಿಪದಿಕಾತ್ ಆಚಾರಾರ್ಥೇ ಕ್ವಿಪಿ 'ಸನಾದ್ಯಂತಾ ಧಾತವಃ' ಇತಿ ಧಾತುಸಂಜ್ಞಾಯಾಂ ಶಪ್ಪಿಬಾದೀತಿ ದ್ರಷ್ಟವ್ಯಮ್ ।

ಸಕಲ ಪ್ರಾತಿಪದಿಕಗಳ ಮೇಲೆ ಆಚಾರಾರ್ಥದಲ್ಲಿ ಕ್ವಿಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಆಗ 'ಸನಾದ್ಯಂತಾ ಧಾತವಃ' ಎಂಬ ಸೂತ್ರದಿಂದ ಧಾತುಸಂಜ್ಞೆಯು ಪ್ರಾಪ್ತವಾಗುತ್ತದೆ. ಅನಂತರ ಶಪ್ ಕ್ವಿಪ್ ಮೊದಲಾದ ಪ್ರತ್ಯಯಗಳು ಬಂದು ಲಡಾದಿಗಳು ಪ್ರಾಪ್ತವಾಗುತ್ತವೆ.

ವಿಶೇಷವಿಚಾರ – ಮಾನಸಸರೋವರದಲ್ಲಿ ಉದ್ಭವಿಸಿದ, ಸಾವಿರಾರು ದಳಗಳುಳ್ಳ, ಸುಗಂಧಮಧುರ-ಮಕರಂದದಿಂದ ಭರಿತವಾದ ವಿಶಿಷ್ಟವಾದ ಕಮಲದ ಬಗ್ಗೆ ಶ್ರೇಷ್ಠಭ್ರಮರ ವಿಶೇಷವಾಗಿ ವಶವಾಗುತ್ತದೆ. ಆ ಕಮಲದಲ್ಲಿ ಪುಷ್ಕಳವಾಗಿರುವ ದಿವ್ಯಮಕರಂದಧಾರೆಯನ್ನು ಭ್ರಮರಕ್ಕೆ ಎಷ್ಟೆಷ್ಟು ಆಸ್ವಾದಿಸಿದರೂ ಸಾಕೆನಿಸು-ವುದಿಲ್ಲ. ಮಧುರಮಧುಧಾರೆಯನ್ನು ಸಂಭ್ರಮದಿಂದ ಯಥೇಚ್ಛವಾಗಿ ಭ್ರಮರ ಆಸ್ವಾದಿಸುತ್ತದೆ. ನಂತರ ಪರಮಾನಂದಭರಿತವಾಗಿ ಮಧುರಸ್ವರದಿಂದ ಝೇಂಕರಿಸುತ್ತಾ ಸುತ್ತಮುತ್ತ ಹಾರಾಡುತ್ತದೆ. ಸುಗಂಧ-





ಮಕರಂದದ ಸೆಳೆತಕ್ಕೆ ಒಳಗಾದ ಭ್ರಮರ, ಪುನಃ ಪುನಃ ಆ ಕಮಲದ ಬಳಿ ಭರದಿಂದ ಹಾರಿ ಬಂದು ಮಧುರಮಧುಧಾರೆಯನ್ನು ಹೀರುತ್ತದೆ. ಅಂತೆಯೇ ಶ್ರೀಮದಾನಂದತೀರ್ಥರ ಯಾವ ವಿಧದ ಕಶ್ಮಲ-ಲೇಶವೂ ಇಲ್ಲದ ವಿಶಾಲಮನಸ್ಸೇ ದಿವ್ಯವಾದ ಮಾನಸಸರೋವರದಂತಿದೆ. ಆದರಿಂದ ಉದ್ಭವಿಸಿದ ಅನುವ್ಯಾಖ್ಯಾನವೆಂಬ ಗ್ರಂಥ ಅತ್ಯುತ್ಕೃಷ್ಟವಾದ ಕಮಲದಂತಿದೆ. ಸಹಸ್ರದಳಗಳುಳ್ಳ ಕಮಲದಲ್ಲಿ ದಿವ್ಯ-ಮಕರಂದ ತುಂಬಿರುವಂತೆ ಈ ಅನುವ್ಯಾಖ್ಯಾನಕಮಲದಲ್ಲೂ ದಿವ್ಯಮಕರಂದದಂತಿರುವ ಆಶ್ಚರ್ಯಾ-ಕರವೂ, ಆತ್ಮಾಕರ್ಷಕವೂ ಆದ ವಿಧವಿಧದ ಪ್ರಕೃಷ್ಟಪ್ರಮೇಯಭಾವಗಳು ತುಂಬಿವೆ. ಇಂಥ ಅಪೂರ್ವಮಕರಂದವನ್ನು ಅನುಭವಿಸುವುದರಲ್ಲಿ ಶ್ರೀಜಯತೀರ್ಥರ ವಿಶಿಷ್ಟವಾದ ಮನಸ್ಸು ಭ್ರಮರದಂತೆ ಆಸಕ್ತವಾಗಿದೆ. ಆದ್ದರಿಂದ ಭ್ರಮರವು ಪುನಃಪುನಃ ಕಮಲದ ಮಕರಂದವನ್ನು ಸವಿದು ಝೇಂಕರಿಸುವಂತೆ, ಶ್ರೀಜಯತೀರ್ಥರ ಮನಸ್ಸೂ ಅನುವ್ಯಾಖ್ಯಾನದ ವಾಕ್ಯಗಳಲ್ಲಿ ತುಂಬಿರುವ ಅನೇಕವಿಧದ ಉತ್ಕೃಷ್ಟಾರ್ಥ-ಗಳೆಂಬ ಮಕರಂದವನ್ನು ಪುನಃ ಪುನಃ ಆಸ್ವಾದಿಸಿ ಅನೇಕರೀತಿಯಲ್ಲಿ ವ್ಯಾಖ್ಯಾನ ಮಾಡುತ್ತದೆ. ಭ್ರಮರವು ತನ್ನ ಶಕ್ತಿಗನುಸಾರವಾಗಿ ಅನೇಕ ಬಾರಿ ಮಕರಂದ ಹೀರಿದರೂ ಆ ಕಮಲದಲ್ಲಿನ್ನೂ ಮಕರಂದ ತುಂಬಿರುವಂತೆ, ಶ್ರೀಜಯತೀರ್ಥರ ಮನಸ್ಸೂ ಅನುವ್ಯಾಖ್ಯಾನದ ವಾಕ್ಯಗಳಿಗೆ ಅನೇಕರೀತಿಗಳಲ್ಲಿ ವ್ಯಾಖ್ಯಾನ ಮಾಡಿದರೂ ಇನ್ನೂ ಅನೇಕ ಬಗೆಯ ಅಪೂರ್ವಭಾವಗಳು ಆ ಅನುವ್ಯಾಖ್ಯಾನದ ವಾಕ್ಯಗಳಲ್ಲಿ ತುಂಬಿ-ರುತ್ತವೆ. ಹೀಗೆ ಶ್ರೀಜಯತೀರ್ಥರು, ಅನುವ್ಯಾಖ್ಯಾನಕ್ಕೆ ಅನೇಕ ರೀತಿ ವ್ಯಾಖ್ಯಾನ ಮಾಡಲು ನನ್ನ ಮನಸ್ಸು ಹಾತೊರೆಯುತ್ತಿದೆಯೆಂದು ತಮ್ಮ ಉದ್ದೇಶವನ್ನು ಈ ಪದ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಚಂಚರೀಕತಿ' ಅಂದರೆ ಭ್ರಮರದಂತೆ ವರ್ತಿಸುತ್ತದೆ ಎಂದರ್ಥ.

## ಸುಧಾಪರಿಮಳಸಾರ

ಮಂಗಳಾಚರಣೆ ಮುಗಿಯಿತು. ಮುಂದೆ ಗ್ರಂಥಪ್ರತಿಜ್ಞೆಯನ್ನು ಮಾಡಿ ವ್ಯಾಖ್ಯೇಯವಾದ ಗ್ರಂಥದ ವರ್ಣನೆಯನ್ನು ಮಾಡುತ್ತಿದ್ದಾರೆ.

ಶ್ರೀಮದಾನಂದತೀರ್ಥಾರ್ಯಸನ್ಮನಃಸರಸೀಭುವಿ ।
ಅನುವ್ಯಾಖ್ಯಾನನಲಿನೇ ಚಂಚರೀಕತಿ ಮೇ ಮನಃ ॥

ಅನುವ್ಯಾಖ್ಯಾನಗ್ರಂಥವನ್ನು ಒಮ್ಮೆ ವ್ಯಾಖ್ಯಾನ ಮಾಡಿ ಮುಗಿಸಿದ್ದೇನೆ. ಪುನಃ ವ್ಯಾಖ್ಯಾನ ಮಾಡಬೇಕೆಂದೆನಿಸುತ್ತದೆ. ಎರಡನೇ ವ್ಯಾಖ್ಯಾನ ಮಾಡಿ ಮುಗಿಸಿದಾಗ ಪುನಃ ಮತ್ತೊಂದು ರೀತಿಯಲ್ಲಿ ವ್ಯಾಖ್ಯಾನ ಮಾಡಬೇಕೆನಿಸುತ್ತದೆ. ಹೀಗೆ ದುಂಬಿಯು ಕಮಲದ ಮಕರಂದವನ್ನು ಪುನಃ ಪುನಃ ಬಂದು ಆಸ್ವಾದಿಸುವಂತೆ ನನ್ನ ಸ್ಥಿತಿಯಾಗಿದೆ. ಅನುವ್ಯಾಖ್ಯಾನಗ್ರಂಥವು ಆಚಾರ್ಯರ ಹೃದಯಸರೋವರದಲ್ಲಿ ಹುಟ್ಟಿದ ಕಮಲದಂತಿದೆ.

## ಪರಿಮಳದ ವೈಶಿಷ್ಟ್ಯ

* ಸರಸೀಭುವಿ ಎಂಬುದಕ್ಕೆ ಪುಂವದ್ಭಾವದ ಸಮರ್ಥನೆ.
* ಚಂಚರೀಕತಿ ಎಂಬುದಕ್ಕೆ ಶಬ್ದರತ್ನಾಕರದ ಆಧಾರದಲ್ಲಿ ವಿವರಣೆ.
* ಚಂಚರೀಕತಿ ಎಂಬ ಶಬ್ದಪ್ರಯೋಗಕ್ಕೆ ಸಾಧುತ್ವಸಮರ್ಥನೆ.

## ಏಕಕಾಲದಲ್ಲಿ ಸ್ವಾಹಂಕಾರಖಂಡನೆ ಮತ್ತು ಸ್ವಸಾಮರ್ಥ್ಯಮಂಡನೆ

**ಶ್ರೀಮನ್ನ್ಯಾಯಸುಧಾ–**

**ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ**
**ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಮ್ ।**
**ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ**
**ಪ್ರಪನ್ನಾ ಮಾನ್ಯಾಃ ಸ್ಮ ಕಿಮಪಿ ಚ ವದಂತೋऽಪಿ ಮಹತಾಮ್ ॥೮॥**

೧. ಮಹಾವ್ಯಾಕರಣವೆಂಬ ಸಮುದ್ರದಲ್ಲಿ ನಾವು ಮುಳುಗಿ ಎದ್ದವರಲ್ಲ. ವೇದಾರ್ಥವಿಚಾರರೂಪವಾದ ಕರ್ಮಮೀಮಾಂಸಾ, ದೈವೀಮೀಮಾಂಸಾ, ಬ್ರಹ್ಮಮೀಮಾಂಸಾ ಶಾಸ್ತ್ರಗಳಲ್ಲಿ ನಾವು ಚಾತುರ್ಯವನ್ನೂ ಹೊಂದಿಲ್ಲ. ಬ್ರಹ್ಮತರ್ಕ ನ್ಯಾಯಶಾಸ್ತ್ರಗಳಲ್ಲಿ ಪ್ರೌಢಿಮೆಯನ್ನು ಹೊಂದಿದವರಲ್ಲ. ತಿಳಿಯಬೇಕಾದ ಪರತತ್ತ್ವ ಹಾಗೂ ಅಪರತತ್ತ್ವಗಳನ್ನು ತಿಳಿದವರೂ ಅಲ್ಲ. ಆದರೆ ಶ್ರೀಮಧ್ವಾಚಾರ್ಯರೆಂಬ ಗುರುಗಳ ಕಾರುಣ್ಯಮಾರ್ಗವನ್ನು ಪಡೆದಿದ್ದೇವೆ. ಆದ್ದರಿಂದಲೇ ಅವರ ಗ್ರಂಥದಲ್ಲಿರುವ ಯುಕ್ತವಾದ, ಅಥವಾ ಆಪಾತತಃ ಅಯುಕ್ತವೆಂದು ತೋರುವ ಅಥವಾ ಲೋಕವಿಲಕ್ಷಣವಾದ ಪ್ರಮೇಯಗಳನ್ನು ಹೇಳಲು ಸಮರ್ಥರಾಗಿ ಮಹಾತ್ಮರಿಂದಲೂ ಮಾನ್ಯರಾಗಿದ್ದೇವೆ.

೨. ನಾವು ವ್ಯಾಕರಣಶಾಸ್ತ್ರದಲ್ಲಿ ಮುಳಿಗೆದ್ದವರಲ್ಲ ಎಂದಲ್ಲ; ಅಥವಾ ವೇದಾರ್ಥವಿಚಾರಕವಾದ ಮೀಮಾಂಸಾಶಾಸ್ತ್ರದಲ್ಲಿ ಚಾತುರ್ಯವನ್ನು ಹೊಂದಿದವರಲ್ಲ ಎಂದಲ್ಲ;





ನ್ಯಾಯಶಾಸ್ತ್ರದಲ್ಲಿ ಪ್ರೌಢಿಮೆಯನ್ನು ಹೊಂದಿದವರಲ್ಲ ಎಂದಲ್ಲ; ಪರಾಪರತತ್ವಗಳನ್ನೆಲ್ಲಾ ತಿಳಿದಿದ್ದೇವೆ. ಆದರೂ ಕೂಡ ಲೋಕದಲ್ಲಿ ಈ ಕಾರಣದಿಂದ ಮಾನ್ಯರಾಗಿರುವುದಲ್ಲ. ಕೇವಲ ಶ್ರೀಮಧ್ವಾಚಾರ್ಯರೆಂಬ ಗುರುಗಳ ಕಾರುಣ್ಯಸರಣಿಯನ್ನು ಹೊಂದಿ ಮಾನ್ಯ-ರಾಗಿದ್ದೇವೆ. ನಾವು ಯಾವುದೇ ರೀತಿಯಲ್ಲಿ ವ್ಯಾಖ್ಯಾನ ಮಾಡಿದರೂ ಕೂಡ ಸಜ್ಜನರು ಮಾನ್ಯ ಮಾಡುತ್ತಾರೆ. ಅಥವಾ ಕಿಂಚ, ಅಪಿಚ ಇತ್ಯಾದಿ ರೀತಿಯಲ್ಲಿ ಅನೇಕ ಅರ್ಥಗಳನ್ನು ಹೇಳುವವರಾಗಿ ಮಾನ್ಯರಾಗಿದ್ದೇವೆ.

ಅನ್ವಯಾರ್ಥ – ವಯಂ= ನಾವು, ಶಬ್ದಾಬ್ಧೌ ಗಾಢಾ ನ = ವ್ಯಾಕರಣಶಾಸ್ತ್ರವೆಂಬ ಸಮುದ್ರದಲ್ಲಿ ಮುಳಿಗೆದ್ದವರಲ್ಲ, ನಿಗಮಚರ್ಚಾಸು = ವೇದಾರ್ಥವಿಚಾರರೂಪವಾದ ಕರ್ಮಮೀಮಾಂಸಾ, ದೇವೀ ಮೀಮಾಂಸಾ ಬ್ರಹ್ಮ ಮೀಮಾಂಸಾಗಳಲ್ಲಿ, ಚತುರಾಃ ನಃ= ಚಾತುರ್ಯಹೊಂದಿದವರಲ್ಲ, ನ್ಯಾಯೇ ಪ್ರೌಢಾಃ ನಚಃ ನ್ಯಾಯಶಾಸ್ತ್ರಗಳಲ್ಲಿ ಪ್ರೌಢಿಮೆಯನ್ನು ಹೊಂದಿದವರಲ್ಲ. ವಿದಿತವೇದ್ಯಾಃ ಅಪಿ ನಚಃ ತಿಳಿಯಬೇಕಾದ ಪರಾಪರತತ್ವಗಳನ್ನು ಸರಿಯಾಗಿ ತಿಳಿದವರೂ ಅಲ್ಲ. ಪರಂ= ಆದರೆ, ಶ್ರೀಮತ್ ಪೂರ್ಣಪ್ರಮತಿಗುರುಕಾರುಣ್ಯಸರಣಿಂ = ಶ್ರೀಮಧ್ವಾಚಾರ್ಯರೆಂಬ ಗುರುಗಳ ಕಾರುಣ್ಯದ ಸರಣಿ-ಯನ್ನು, ಪ್ರಪನ್ನಾ ಸಂತಃ= ಪಡೆದವರಾಗಿ, ಕಿಮಪಿ ಚ ವದಂತೋಽಪಿಃ ಯುಕ್ತವಾದ ಅಥವಾ ಆಪಾತತಃ ಅಯುಕ್ತವೆಂದು ತೋರುವ ಪ್ರಮೇಯಗಳನ್ನು ಅಥವಾ ಲೋಕವಿಲಕ್ಷಣವಾದ ಪ್ರಮೇಯಗಳನ್ನು, ವದಂತಃ= ಹೇಳುವವರಾಗಿ, ಮಹತಾಂ ಮಾನ್ಯಾಃ ಸ್ಮಃ= ಮಹಾತ್ಮರಿಗೂ ಮಾನ್ಯರಾಗಿದ್ದೇವೆ.

2. ವಯಂ = ನಾವು, ಅಪಿ = ವಾಸ್ತವಿಕವಾಗಿ, ಶಬ್ದಾಬ್ಧೌ ಗಾಢಾ ನ ಇತಿ ನ = ವ್ಯಾಕರಣ-ಶಾಸ್ತ್ರದಲ್ಲಿ ಮುಳಿಗೆದ್ದವರಲ್ಲ ಎಂದಲ್ಲ; ಚ = ಮತ್ತು ನಿಗಮಚರ್ಚಾಸು ಚತುರಾಃ ನ ಇತಿ ನ = ಮೀಮಾಂಸಾಶಾಸ್ತ್ರದಲ್ಲಿ ಚತುರರಾಗಿಲ್ಲ ಎಂದಲ್ಲ; ನ್ಯಾಯೇಪ್ರೌಢಾಃ ನ ಇತಿ ನ = ನ್ಯಾಯಶಾಸ್ತ್ರದಲ್ಲಿ ಪ್ರೌಢಿಮೆಯನ್ನು ಹೊಂದಿದವರಲ್ಲ ಎಂದಲ್ಲ; ಚ = ಮತ್ತು, ವಿದಿತವೇದ್ಯಾಃ ನ ಇತಿ ನ = ಪರಾಪರ-ತತ್ವಗಳನ್ನು ತಿಳಿದವರಲ್ಲ ಎಂದಲ್ಲ; ಅಪಿ = ಹಾಗಿದ್ದರೂ ಕೂಡ, ಪರಂ = ಕೇವಲ, ಶ್ರೀಮತ್ಪೂರ್ಣ-ಪ್ರಮತಿಗುರುಕಾರುಣ್ಯಸರಣಿಂ - ಶ್ರೀಪೂರ್ಣಪ್ರಜ್ಞರೆಂಬ ಗುರುಗಳ ಅನುಗ್ರಹವನ್ನು, ಪ್ರಪನ್ನಾಃ = ಹೊಂದಿದವರಾಗಿ, ಕಿಮಪಿ ಚ ವದಂತೋಽಪಿ = ಏನನ್ನೇ ಹೇಳಿದರೂ ಅಥವಾ ಕಿಂಚ, ಅಪಿ ಚ ಇತ್ಯಾದಿರೀತಿಯಲ್ಲಿ ಅನೇಕ ಅರ್ಥಗಳನ್ನು ಹೇಳಿದರೂ, ಮಹತಾಂ = ಸಜ್ಜನರಿಗೆ, ಮಾನ್ಯಾಃ ಸ್ಮ = ಮಾನ್ಯರಾಗಿದ್ದೇವೆ.





ವಿಗ್ರಹ – ಶಬ್ದಾಬ್ಧೌ = ಶಬ್ದ ಏವ ಅಬ್ಧಿಃ ಶಬ್ದಾಬ್ಧಿಃ ತಸ್ಮಿನ್ = ಶಬ್ದಾಬ್ಧೌ

ನಿಗಮಚರ್ಚಾಸು – ನಿಗಮಾನಾಂ ಚರ್ಚಾಃ ನಿಗಮಚರ್ಚಾಃ ತಾಸು ನಿಗಮಚರ್ಚಾಸು

ವಿದಿತವೇದ್ಯಾಃ - ವೇತ್ತುಂ ಯೋಗ್ಯಂ ವೇದ್ಯಂ , ವಿದಿತಂ ವೇದ್ಯಂ ಯೈಸ್ತೇ - ವಿದಿತವೇದ್ಯಾಃ

ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ – ಪೂರ್ಣಾ ಪ್ರಮತಿಃ ಯಸ್ಯ ಸಃ ಪೂರ್ಣ-ಪ್ರಮತಿಃ, ಶ್ರೀಮಾಂಶ್ಚಾಸೌ ಪೂರ್ಣಪ್ರಮತಿಶ್ಚ = ಶ್ರೀಮತ್ಪೂರ್ಣಪ್ರಮತಿಃ, ಶ್ರೀಮತ್ಪೂರ್ಣ-ಪ್ರಮತಿಃ ಏವ ಗುರುಃ = ಶ್ರೀಮತ್ಪೂರ್ಣಪ್ರಮತಿಗುರುಃ, ಶ್ರೀಮತ್ಪೂರ್ಣಪ್ರಮತಿಗುರೋಃ ಕಾರುಣ್ಯಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಂ, ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸ್ಯ ಸರಣಿಃ - ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಃ ತಾಂ ಶ್ರೀಮತ್ಪೂರ್ಣಪ್ರಮತಿ-ಗುರುಕಾರುಣ್ಯಸರಣಿಂ.

ವದಂತಃ - ವದ ವ್ಯಕ್ತಾಯಾಂ ವಾಚಿ ಇತಿ ಧಾತೋಃ ಶತೃಪ್ರತ್ಯಯಾಂತಃ ಶಬ್ದಃ

## ತಮ್ಮಲ್ಲಿರುವ ಮಹಿಮೆಯು ವಿನಯದಿಂದ ಕೂಡಿದೆ

ಪರಿಮಳ– 'ಚಂಚರೀಕತಿ' ಇತ್ಯುಕ್ತ್ಯಾ ಪ್ರಾಪ್ತಂ ಸ್ವಮಹತ್ವಂ ವಿನಯೇನ ಭೂಷಯಿತುಂ ವಿನಯಪ್ರದರ್ಶನಂ ಕರೋತಿ – ನ ಶಬ್ದೇತಿ ॥ ನಿಗಮಚರ್ಚಾಸು = ವೇದವಿಚಾರೇಷು । ಕ್ವಚಿದಪಿ ಚೇನ್ನ ಪ್ರೌಢಿಃ ತರ್ಹಿ ಕಿಂ ಬಲಂ ವ್ಯಾಖ್ಯಾನೇ? ಇತ್ಯತ ಆಹ – ಪರಮ್ ಇತಿ ॥

ಹಿಂದಿನ ಶ್ಲೋಕದಲ್ಲಿ 'ಚಂಚರೀಕತಿ ಮೇ ಮನಃ' ಎಂಬುದರಿಂದ ಅನುವ್ಯಾಖ್ಯಾನಕ್ಕೆ ಅನೇಕರೀತಿಯಲ್ಲಿ ವ್ಯಾಖ್ಯಾನ ಮಾಡುತ್ತೇವೆಂದು ಹೇಳಿದರು. ಇದರಿಂದ ತಮ್ಮ ಮಹಿಮೆಯು ಸೂಚಿತವಾಯಿತು. ಹೀಗೆ ತಮ್ಮ ಮಹಿಮೆಯು ವಿನಯವೆಂಬ ಗುಣದಿಂದ ಭೂಷಿತವಾಗಿದೆ ಎಂಬುದನ್ನು ತೋರಿಸಲು, ವಿನಯಪ್ರದರ್ಶನ ಮಾಡಲು 'ನ ಶಬ್ದಾಬ್ಧೌ' ಎಂದು ಹೇಳುತ್ತಿ-ದ್ದಾರೆ. 'ನಿಗಮಚರ್ಚಾಸು' ಎಂದರೆ ವೇದವಿಚಾರಗಳಲ್ಲಿ ಎಂದರ್ಥ. ನಿಮಗೆ ಯಾವುದೇ ಶಾಸ್ತ್ರದಲ್ಲಿ ಪ್ರೌಢಿಮೆ ಇಲ್ಲ ಎಂದರೆ ವ್ಯಾಖ್ಯಾನ ಮಾಡುವ ಸಾಮರ್ಥ್ಯ ಹೇಗಿದೆ? ಎಂಬ ಪ್ರಶ್ನೆಗೆ 'ಪರಮ್' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.





# ಗುರುಕಾರುಣ್ಯವೆಂಬ ಬಲ ಎನ್ನಲ್ಲಿದೆ

ಪರಿಮಳ– ಅನ್ಯದ್ ಬಲಮಸ್ತೀತ್ಯರ್ಥಃ । ತತ್ ಕಿಮ್? 'ಗುರುಕಾರುಣ್ಯಸರಣಿಂ ಪ್ರಪನ್ನಾಃ' ಇತಿ ಯತ್ ತದೇವ ಬಲಮ್, ಅತೋ ಮಾನ್ಯಾ ಇತ್ಯನ್ವಯಃ । ಏತೇನ 'ಅಗ್ರೇ ವಕ್ಷ್ಯಮಾಣಂ ಸರ್ವಂ ಮೂಲಾಭಿಪ್ರೇತಮ್' ಇತಿ ಧ್ವನಿತಮ್ । ಕಿಮಪಿ ಸಾಧ್ವಸಾಧು ವಾ ಇತ್ಯರ್ಥಃ । ವಿನಯೋಕ್ತಿರೇವ ಏಷಾ ।

ಯಾವುದೇ ಶಾಸ್ತ್ರಗಳಲ್ಲಿ ಪ್ರೌಢಿಮೆ ಇಲ್ಲದಿದ್ದರೂ ನನ್ನಲ್ಲೊಂದು ಶಕ್ತಿ ಇದೆ. ಅದೇನು? ಎಂದರೆ ಗುರುಗಳ ಕಾರುಣ್ಯಕ್ಕೆ ಪಾತ್ರನಾಗಿರುವಿಕೆ. ಆದ್ದರಿಂದಲೇ ನಾವು ಮಾನ್ಯರಾಗಿದ್ದೇವೆ. ಹೀಗೆ ಹೇಳಿದ್ದರಿಂದ ಮುಂದೆ ವ್ಯಾಖ್ಯಾನ ಮಾಡುವ ಪ್ರತಿಯೊಂದು ವಿಷಯವೂ ಅನು-ವ್ಯಾಖ್ಯಾನವೆಂಬ ಮೂಲಕ್ಕೆ ಅಭಿಪ್ರೇತವಾಗಿದೆ ಎಂದು ಸೂಚಿತವಾಯಿತು. 'ಕಿಮಪಿ' ಎಂಬ ಶಬ್ದಕ್ಕೆ ಸರಿಯಾಗಿ ಹೇಳಿದರೂ ಸರಿಯಾಗಿ ಹೇಳದಿದ್ದರೂ ಎಂದರ್ಥ. ಈ ಮಾತು ಕೇವಲ ವಿನಯಪ್ರದರ್ಶಕ.

ವಿಶೇಷವಿಚಾರ – ಹಿಂದಿನ ಪದ್ಯದಲ್ಲಿ ಶ್ರೀಜಯತೀರ್ಥರು 'ಚಂಚರೀಕತಿ ಮೇ ಮನಃ' ಎಂಬ ಮಾತಿನಿಂದ ಭ್ರಮರವು ತನ್ನ ಶಕ್ತ್ಯನುಸಾರವಾಗಿ ಪುನಃಪುನಃ ಕಮಲದ ಮಕರಂದವನ್ನು ಹೀರುವಂತೆ, ತಮ್ಮ ಮನಸ್ಸೂ ಭ್ರಮರದಂತೆ ವರ್ತಿಸುತ್ತಾ ಅನುವ್ಯಾಖ್ಯಾನವಾಕ್ಯಗಳಿಗೆ ಪುನಃಪುನಃ ಯಥಾಶಕ್ತಿ ವ್ಯಾಖ್ಯಾನ ಮಾಡಲು ಹಾತೊರೆಯುತ್ತಿದೆ ಎಂದು ಹೇಳಿದರು. ಇದನ್ನು ಪಾಮರಸಜ್ಜನರು ಆತ್ಮಪ್ರಶಂಸೆ-ಯೆಂದು ಭ್ರಮಿಸಬಾರದೆಂದು ಈ ಪದ್ಯದಲ್ಲಿ ತಮ್ಮ ಅಲ್ಪಪಾತ್ರವನ್ನು ವಿನಯಪೂರ್ವಕವಾಗಿ ಸ್ಪಷ್ಟ-ಪಡಿಸುತ್ತಿದ್ದಾರೆ. ಅನುವ್ಯಾಖ್ಯಾನವು ಹಲವು ದರ್ಶನಗಳ ಜಟಿಲವಿಚಾರಗಳನ್ನು ಯುಕ್ತಿಯುಕ್ತವಾಗಿ ವಿಮರ್ಶಿಸುವ ಪ್ರೌಢಗ್ರಂಥ. ಅದನ್ನು ರಚಿಸಿದವರು ಪೂರ್ಣಪ್ರಜ್ಞರೆಂಬ ಅನ್ವರ್ಥಕನಾಮವುಳ್ಳ ಶ್ರೀಮದಾನಂದತೀರ್ಥರು. ಅವರಾದರೂ ಸಮುದ್ರದಂತಿರುವ ಮಹಾವ್ಯಾಕರಣಶಾಸ್ತ್ರದ ಸಮಗ್ರಪರಿ-ಜ್ಞಾನವುಳ್ಳವರು. ವೇದವೇದ್ಯರಾದ ವೇದವ್ಯಾಸರಿಂದಲೇ ಅನಂತವೇದಗಳ ನಿಗೂಢಭಾವಗಳೆಲ್ಲವನ್ನೂ ಚೆನ್ನಾಗಿ ಬಲ್ಲವರು.

''ಬ್ರಹ್ಮತರ್ಕಂ ಚ ಭಗವಾನ್ ಸ ಏವ ಕೃತವಾನ್ ಪ್ರಭುಃ ।
ಪಂಚಾಶತ್ಕೋಟಿವಿಸ್ತಾರಾನ್ನಾರಾಯಣತನೌ ಕೃತಾತ್ ॥''





ಎಂದು ಅನುವ್ಯಾಖ್ಯಾನದಲ್ಲೇ ಹೇಳಿದಂತೆ ಐವತ್ತುಕೋಟಿ ಪದ್ಯಗಳ ವಿಸ್ತಾರವುಳ್ಳ 'ಬ್ರಹ್ಮತರ್ಕ' ಮುಂತಾದ ನ್ಯಾಯಶಾಸ್ತ್ರಗಳಲ್ಲಿ ತಲಸ್ಪರ್ಶಿಪಾಂಡಿತ್ಯವುಳ್ಳವರು. ಜೀವೋತ್ತಮರಾದ ಅವರು ಪರತತ್ವದ ಬಗ್ಗೆ ಎಲ್ಲ ಜೀವರಿಗಿಂತಲೂ ಅತ್ಯಧಿಕವಾಗಿ ತಿಳಿದವರು. ಅಪರತತ್ವವೆನಿಸಿದ ಸಮಸ್ತಜಗತ್ತಿನ ಬಗ್ಗೆ ಸಮಗ್ರಪರಿಜ್ಞಾನವುಳ್ಳವರು. ಇಂಥ ಸರ್ವಜ್ಞಾಚಾರ್ಯರು ರಚಿಸಿದ ಪ್ರೌಢಗ್ರಂಥಗಳಿಗೆ ವ್ಯಾಖ್ಯಾನ ಮಾಡುವ ಅರ್ಹತೆ ಇರಬೇಕಾದರೆ ವ್ಯಾಖ್ಯಾನಕಾರರೂ ಮಹಾವ್ಯಾಕರಣಶಾಸ್ತ್ರ ಮುಂತಾದ ಮಹಾ-ಶಾಸ್ತ್ರಗಳಲ್ಲಿ ವಿಸ್ತೃತವಾದ ಪಾಂಡಿತ್ಯ ಗಳಿಸಿರಬೇಕು. ಆದ್ದರಿಂದ ಅಂತಹ ಶ್ರೇಷ್ಠಮಟ್ಟದ ಅರ್ಹತೆ ಗರುಡ -ಶೇಷಾದಿದೇವಶ್ರೇಷ್ಠರಿಗೇ ಮುಖ್ಯವಾಗಿರುವುದೆಂದು ಶ್ರೀಜಯತೀರ್ಥರೇ ವಿಷ್ಣುತತ್ವವಿನಿರ್ಣಯ-ಟೀಕಾದಲ್ಲಿ ಹೀಗೆ ಸ್ಪಷ್ಟಪಡಿಸಿದ್ದಾರೆ. ''ಆನಂದತೀರ್ಥಭಗವದ್ವಚಸಾಂ ವಿಶಿಷ್ಟವ್ಯಾಖ್ಯಾನಕರ್ಮಣಿ ಸುರಾ ಹಿ ಅಧಿಕಾರಿಣೋऽತ್ರ'' ಎಂದು.

ಹೀಗೆ ಶ್ರೀಮದಾನಂದತೀರ್ಥರ ಪ್ರೌಢಗ್ರಂಥಕ್ಕೆ ವ್ಯಾಖ್ಯಾನ ಮಾಡುವಂತಹ ಶ್ರೇಷ್ಠಮಟ್ಟದ ಅರ್ಹತೆ ತನಗಿಲ್ಲದಿದ್ದರೂ ತನ್ನ ಪ್ರಯತ್ನ ನಿಷ್ಫಲವಲ್ಲವೆಂದು ಹೀಗೆ ವಿವರಿಸುತ್ತಾರೆ. ಶ್ರೀಮದಾಚಾರ್ಯರ ಗ್ರಂಥಗಳ ಬಗ್ಗೆ ಅಚಲವಾದ ಭಕ್ತಿಶ್ರದ್ಧೆಗಳು ತನಗಿದ್ದುದರಿಂದ ಆ ಪರಮಗುರುಚರಣರಾದ ಪೂರ್ಣ-ಪ್ರಜ್ಞರ ಕಾರುಣ್ಯದ ಪಂಕ್ತಿ ತನಗೆ ಲಭಿಸಿದೆ.

''ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇऽಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥''

ಎಂಬ ಉಕ್ತಿಯಂತೆ ಶ್ರೀಹರಿವಾಯುಗುರುಗಳಲ್ಲಿ ದೃಢಭಕ್ತಿಯುಳ್ಳ ಜಿಜ್ಞಾಸುಗಳಿಗೆ ಶ್ರೀಹರಿಗುರು-ಕರುಣೆಯಿಂದ ಉಕ್ತ ಅನುಕ್ತವಾದ ಎಲ್ಲ ನಿರ್ದುಷ್ಟವಾದ ವಿವಿಧವಿಶಿಷ್ಟಾರ್ಥಗಳು ಪ್ರತಿಭಾತವಾಗು-ತ್ತವೆಯಾದ್ದರಿಂದ ತಮಗೂ ಶ್ರೀಮದಾನಂದತೀರ್ಥರ ಕರುಣೆಯಿಂದಲೇ ಅನುವ್ಯಾಖ್ಯಾನದ ಅನೇಕ ವಿಧದ ಉತ್ಕೃಷ್ಟಾರ್ಥಗಳು ಗೋಚರಿಸುತ್ತಿವೆಯೆಂದು ಅಭಿಪ್ರಾಯ. ಆದ್ದರಿಂದ 'ಚಂಚರೀಕತಿ ಮೇ ಮನಃ' ಎಂದು ಹಿಂದಿನ ಪದ್ಯದಲ್ಲಿ ಹೇಳಿದಂತೆ ಅನುವ್ಯಾಖ್ಯಾನವಾಕ್ಯಗಳಿಗೆ 'ಕಿಂಚ' 'ಅಪಿಚ' 'ಕಿಂಚ' 'ಅಪಿಚ' ಎಂದು ಅನೇಕವಿಧದ ವಿಶಿಷ್ಟವ್ಯಾಖ್ಯಾನ ಮಾಡುತ್ತಾ ಶ್ರೀಜಯತೀರ್ಥರು ಮಹಾಜನರ ಮನ್ನಣೆಗೆ ಪಾತ್ರರಾಗಿರುವುದಾಗಿ ಸ್ಪಷ್ಟಪಡಿಸುವರು.

ವಿಶ್ವಗುರುಗಳಾದ ಶ್ರೀಮದಾನಂದತೀರ್ಥರಿಂದ ನಿರ್ಮಿಸಲ್ಪಟ್ಟ ಅನುವ್ಯಾಖ್ಯಾನಗ್ರಂಥದ ವಿಶ್ವ-ತೋಮುಖವೈಶಿಷ್ಟ್ಯವನ್ನು ಈ ಪದ್ಯದಿಂದ ಶ್ರೀಜಯತೀರ್ಥರು ಸ್ಪಷ್ಟಪಡಿಸಿರುವರು. ಮತ್ತು ಅನು-





ವ್ಯಾಖ್ಯಾನವಾಕ್ಯಗಳಲ್ಲಿ ಅಡಕವಾದ ಗಾಂಭೀರ್ಯಮಾಧುರ್ಯಗಳ ವೈವಿಧ್ಯವನ್ನು ಆಸ್ವಾದಿಸಿ ಕೃತ-ಕೃತ್ಯರಾದ ಶ್ರೀಜಯತೀರ್ಥರು, ಪಾಮರಸಜ್ಜನರ ಮೇಲಿನ ಕೃಪೆಯಿಂದ ಅವರೂ ತಮ್ಮಂತೆ ಕೃತಕೃತ್ಯ-ರಾಗಲೆಂಬ ಔದಾರ್ಯದಿಂದ ಈ ನ್ಯಾಯಸುಧಾಗ್ರಂಥವನ್ನು ರಚಿಸಿರುವರು. ಹೊರತು ತಮ್ಮ ಲೋಕ-ವಿಲಕ್ಷಣವಾದ ಅದ್ಭುತಪಾಂಡಿತ್ಯವನ್ನು ಪ್ರದರ್ಶಿಸಬೇಕೆಂಬ ಪ್ರತಿಷ್ಠೆಗಾಗಿ ಅಲ್ಲ. ಶ್ರೀಮದಾಚಾರ್ಯರ ಗ್ರಂಥಕ್ಕೆ ವ್ಯಾಖ್ಯಾನ ಮಾಡುವಂತಹ ಈ ಪ್ರಸಂಗದಲ್ಲಿ ಶ್ರೀಜಯತೀರ್ಥರು ತಮಗೆ ಶ್ರೀಮದಾ-ಚಾರ್ಯರಂತೆ ಲೋಕೋತ್ತರವಾದ ಮಹಾವ್ಯಾಕರಣ, ಬ್ರಹ್ಮತರ್ಕ ಮುಂತಾದ ಮಹಾಶಾಸ್ತ್ರಸಾಗರದಲ್ಲಿ ವಿಸ್ತೃತಪಾಂಡಿತ್ಯವಿಲ್ಲವೆಂದು ವಿನಮ್ರಪೂರ್ವಕವಾಗಿ ಈ ಪದ್ಯದಲ್ಲಿ ಸ್ಪಷ್ಟಪಡಿಸಿರುವರು. ಹೊರತು ಲೋಕಪ್ರಸಿದ್ಧವಾದ ವ್ಯಾಕರಣ, ನ್ಯಾಯ ಮುಂತಾದ ಶಾಸ್ತ್ರಗಳಲ್ಲಿ ಪಾಂಡಿತ್ಯವಿಲ್ಲವೆಂದು ಈ ಶ್ಲೋಕದ ಅಭಿಪ್ರಾಯವಲ್ಲ. ಏಕೆಂದರೆ ಶ್ರೀಜಯತೀರ್ಥರ ನ್ಯಾಯಸುಧಾಗ್ರಂಥ ಸಕಲಶಾಸ್ತ್ರಗಳ ಪಾಂಡಿತ್ಯಕ್ಕೆ ಹೆಗ್ಗುರುತಾಗಿದೆ. ಈ ನ್ಯಾಯಸುಧಾಗ್ರಂಥದಲ್ಲಿ ಲೋಕಪ್ರಸಿದ್ಧವಾದ ವ್ಯಾಕರಣ, ಮೀಮಾಂಸಾ, ನ್ಯಾಯಶಾಸ್ತ್ರಗಳ ಬಗ್ಗೆ ಶ್ರೀಜಯತೀರ್ಥರಿಗಿರುವ ಅತ್ಯುಚ್ಚ ಮಟ್ಟದ ಪಾಂಡಿತ್ಯವನ್ನು ಆದ್ಯಂತವಾಗಿ ಕಾಣಬಹುದು. ಪ್ರತಿಯೊಂದು ತಾತ್ವಿಕವಿಷಯವನ್ನು ಕೂಲಂಕಷವಾಗಿ ವಿಶ್ಲೇಷಿಸಿ, ತರ್ಕಬದ್ಧವಾಗಿ ಪ್ರಮಾಣಬದ್ಧವಾಗಿ ವಿಮರ್ಶಿಸುವಂತಹ ಅಪೂರ್ವಪ್ರತಿಭೆಯ ಸೊಬಗನ್ನು ಈ ಗ್ರಂಥದಲ್ಲಿ ವಿಶೇಷ-ವಾಗಿ ಕಾಣಬಹುದು. ಇದನ್ನು 'ನ ಶಬ್ದಾಬ್ಧೌ ಗಾಢಾಃ? ನಚ ನಿಗಮಚರ್ಚಾಸು ಚತುರಾಃ?' ನಾವು ವ್ಯಾಕರಣನಿಷ್ಣಾತರಲ್ಲವೇನು? ಮೀಮಾಂಸಾಚತುರರಲ್ಲವೇನು? ಎಂದು ಕಾಕುಸ್ವರದಿಂದ ಶ್ರೀಜಯತೀರ್ಥರೇ ತಿಳಿಸಿದ್ದಾರೆ. ಆದ್ದರಿಂದಲೇ 'ಸುಧಾ ವೈ ಪಠನೀಯಾ ವಸುಧಾ ವಾ ಪಾಲನೀಯಾ' ಎಂಬ ಗಾದೆ ಸುಪ್ರಸಿದ್ಧವಾಗಿರುತ್ತದೆ. ಅಂದರೆ ನಮ್ಮ ಬದುಕು ಸಫಲ ಆಗಬೇಕಾದರೆ ನಾವು ಸಾಧಿಸಬೇಕಾದ ಮಹಾ-ಕಾರ್ಯಗಳು ಎರಡು. ಅದರಲ್ಲಿ ಕಷ್ಟಕರವಾದ ನ್ಯಾಯಸುಧಾಗ್ರಂಥವನ್ನೇ ಮುಖ್ಯವಾಗಿ ಅಭ್ಯಸಿಸಬೇಕು. ಅದಾಗದಿದ್ದರೆ ಜಗತ್ತಿನ ರಾಜ್ಯಭಾರವನ್ನಾದರೂ ಮಾಡಬೇಕು. ಹೀಗೆ ಭೂಮಂಡಲದ ರಾಜ್ಯ-ಭಾರಕ್ಕಿಂತಲೂ ಕಷ್ಟಸಾಧ್ಯವೆನಿಸುವಂತಹ ನ್ಯಾಯಸುಧಾಧ್ಯಯನವು, ಸಕಲಜ್ಞಾನಿಜನರಿಂದ ವಿಶೇಷ-ಮನ್ನಣೆ ಪಡೆದಿದೆ. ಅಷ್ಟೇ ಅಲ್ಲದೆ ಅಪರೋಕ್ಷಜ್ಞಾನಿಗಳಾದ ಶ್ರೀರಾಘವೇಂದ್ರತೀರ್ಥರು, ನ್ಯಾಯ-ಸುಧಾಗ್ರಂಥಕ್ಕೆ ಟಿಪ್ಪಣಿ ಬರೆಯುವಾಗ ಹೀಗೆ ಅತ್ಯಾದರದಿಂದ ಉದ್ಗರಿಸಿದ್ದಾರೆ.

"ಪ್ರತಿವಾಕ್ಯಂ ಪ್ರತಿಪದಮನೇಕಾಕೂತಗರ್ಭಿತಾ ।
ಪ್ರತಿಭಾತಿ ಸುಧಾऽಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ॥"





ಅಂದರೆ 'ಸುಧಾಗ್ರಂಥದ ಪ್ರತಿವಾಕ್ಯ ಮತ್ತು ಪ್ರತಿಪದವೂ ಕೂಡ ಅನೇಕ ಉತ್ಕೃಷ್ಟ ಅಭಿಪ್ರಾಯಗಳನ್ನೊಳಗೊಂಡಿದೆ. ಆದರೂ ತಮ್ಮ ಟಿಪ್ಪಣಿಗ್ರಂಥ ಚಿಕ್ಕದಾಗಿರಲೆಂಬ ದೃಷ್ಟಿಯಿಂದ ಆ ಎಲ್ಲ ಅಭಿಪ್ರಾಯಗಳನ್ನೂ ಹೇಳುತ್ತಿಲ್ಲ.' ಎಂದು. ಹೀಗೆ ಅನೇಕ ಮಹಾತ್ಮರ ವಾಸ್ತವವಾದ ವಿಶೇಷಪ್ರಶಂಸೆಗೆ ಪಾತ್ರವಾದ ಈ ಗ್ರಂಥ, ಸಾತ್ವಿಕಜಿಜ್ಞಾಸುಗಳೆಲ್ಲರಿಗೂ ಉತ್ತಮಮಾರ್ಗದರ್ಶಕವಾಗಿರುತ್ತದೆಯೆಂದು ತಿಳಿಯಬೇಕು. ಲೋಕಪ್ರಸಿದ್ಧವಾದ ಸಕಲಶಾಸ್ತ್ರಗಳ ಪ್ರಕಾಂಡಪಾಂಡಿತ್ಯದ ಜೊತೆಗೆ ಶ್ರೀಮದಾನಂದತೀರ್ಥಗುರುಚರಣರ ಕಾರುಣ್ಯದಿಂದ ತಾವು ಕಂಡುಕೊಂಡ ವಿವಿಧವಿಶಿಷ್ಟಾರ್ಥಗಳೆಲ್ಲವೂ ಗುರುಮಧ್ವರಿಗೆ ಅಭಿಪ್ರೇತವೇ ಆಗಿದೆಯೆಂದು 'ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ ಪ್ರಪನ್ನಾಃ .....' ಎಂಬ ವಾಕ್ಯದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಈ ಗ್ರಂಥದ ಬಗ್ಗೆ ಅನಾದರಲೇಶಕ್ಕೂ ಅವಕಾಶವಿಲ್ಲ.

## ಬಹುವಚನಪ್ರಯೋಗದ ಸಾರ್ಥಕ್ಯ

**ಪರಿಮಳ– ವಸ್ತುತೋ ಮಯಿ ಗುರುಕಾರುಣ್ಯಸರಣಿಪ್ರತಿಪತ್ತಿಲಬ್ಧಶಬ್ದಾಬ್ಧಿಅವಗಾಹಾದಯೋ ವ್ಯಾಖ್ಯಾನಪ್ರಯೋಜಕೀಭೂತಾ ಧರ್ಮಾಃ ಸಂತಿ ಇತಿ ಸ್ವಗತವ್ಯಾಖ್ಯೋಪಯುಕ್ತಧರ್ಮಬಾಹುಲ್ಯಾಭಿಪ್ರಾಯೇಣ ಬಹುವಚನೋಕ್ತಿಃ।**

ವಾಸ್ತವಿಕವಾಗಿ 'ನನ್ನಲ್ಲಿ ಗುರುಕಾರುಣ್ಯಕ್ಕೆ ಪಾತ್ರನಾಗಿರುವಿಕೆ' ಎಂಬ ಬಲವಿದೆ. ಇದರಿಂದ ವ್ಯಾಕರಣಶಾಸ್ತ್ರದ ಪಾಂಡಿತ್ಯ ಮೊದಲಾದವುಗಳು ಇದ್ದೇ ಇವೆ. ವ್ಯಾಖ್ಯಾನಕ್ಕೆ ಪ್ರಯೋಜಕವಾದ ಎಲ್ಲಾ ಧರ್ಮಗಳೂ ಇರುತ್ತವೆ. ಹೀಗೆ ತಮ್ಮಲ್ಲಿರುವ ವ್ಯಾಖ್ಯಾನಕ್ಕೆ ಉಪಯುಕ್ತವಾದ ಧರ್ಮಬಾಹುಲ್ಯದ ಅಭಿಪ್ರಾಯದಿಂದ 'ಗಾಢಾಃ' ಇತ್ಯಾದಿ ಸ್ಥಳಗಳಲ್ಲಿ ಬಹುವಚನವನ್ನು ಪ್ರಯೋಗ ಮಾಡಿದ್ದಾರೆ.

ವಿಶೇಷವಿಚಾರ – 'ಅಸ್ಮದೋಃ ದ್ವಯೋಶ್ಚ' ಎಂಬ ಸೂತ್ರದಲ್ಲಿ ಏಕತ್ವ ಹಾಗೂ ದ್ವಿತ್ವಗಳು ವಿವಕ್ಷಿತವಾದಾಗ ಅಸ್ಮತ್‌ಶಬ್ದಕ್ಕೆ ಬಹುವಚನವು ಬರುತ್ತದೆಂದು ಹೇಳಲಾಗಿದೆ. ಆದರೆ 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕವು ವಿಶೇಷಣಸಹಿತವಾದ ಅಸ್ಮತ್‌ಶಬ್ದಕ್ಕೆ ಏಕತ್ವ ಹಾಗೂ ದ್ವಿತ್ವಗಳು ವಿವಕ್ಷಿತವಾದಾಗ ಬಹುವಚನವನ್ನು ನಿಷೇಧ ಮಾಡಿದೆ. ಹೀಗಿರುವಾಗ 'ಗಾಢಾಃ ಚತುರಾಃ' ಇತ್ಯಾದಿಯಾಗಿ ಬಹುವಚನವನ್ನು ಹೇಗೆ ಪ್ರಯೋಗ ಮಾಡಿದರು?





ಉತ್ತರ – ಈ ಪ್ರಶ್ನೆಗೆ ಪರಿಮಳ ಗ್ರಂಥದಲ್ಲಿ ಎರಡು ಬಗೆಯ ಉತ್ತರವನ್ನು ನೀಡಲಾಗಿದೆ. ವಿನಯೋಕ್ತಿಯಿಂದ ಗಾಢತ್ವಾದಿಗಳು ತಮ್ಮಲ್ಲಿ ಇಲ್ಲವೆಂದು ನಿಷೇಧಮಾಡಿದ್ದಾರೆ. ಆದರೂ ಕೂಡ ವ್ಯಾಖ್ಯಾನಪ್ರಯೋಜಕವಾದ ಗಾಢತ್ವಾದಿ ಧರ್ಮಗಳು ತಮ್ಮಲ್ಲಿ ಇದ್ದೇ ಇವೆ ಎಂಬುದನ್ನು ಸೂಚನೆ ಮಾಡುವುದಕ್ಕಾಗಿ ಬಹುವಚನವನ್ನು ಪ್ರಯೋಗಿಸಿದ್ದಾರೆ. ಈ ಬಹುತ್ವವು ಧರ್ಮಗಳಲ್ಲಿ ಅನ್ವಯವನ್ನು ಹೊಂದುತ್ತದೆ. ತಮ್ಮಲ್ಲಿ ಅನ್ವಯವನ್ನು ಹೊಂದುವುದಿಲ್ಲ. ಆದ್ದರಿಂದ ಬಹುತ್ವವಿಶಿಷ್ಟಧರ್ಮವಂತಃ ಎಂಬ ಅಭಿಪ್ರಾಯವನ್ನು ತಿಳಿಯಬೇಕು. ಈ ಅಭಿಪ್ರಾಯವಿದ್ದಾಗ 'ಬಹುಷು ಬಹುವಚನಮ್' ಎಂಬ ಸೂತ್ರದಿಂದ ಬಹುವಚನವು ಪ್ರಾಪ್ತವಾಗುತ್ತದೆ. 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕಕ್ಕೆ ಇಲ್ಲಿ ಪ್ರಸಕ್ತಿಯೇ ಇರುವುದಿಲ್ಲ.

## ಬಹುವಚನಪ್ರಯೋಗದಿಂದಲೇ ಮತ್ತೊಂದು ಅರ್ಥವು ವಿವಕ್ಷಿತ

**ಪರಿಮಳ– ಯದ್ವಾ 'ಗಾಢಾಃ' ಇತ್ಯಾದೇಃ ನಿಷೇಧಪ್ರತಿಯೋಗಿತಯಾ 'ಪ್ರಪನ್ನಾಃ' ಇತ್ಯಸ್ಯ ಮಾನ್ಯತ್ವೋಪಪಾದಕತಯಾ ಉಪಾತ್ತತ್ವೇನ ಮಾನ್ಯತ್ವಾದೇಃ ವಿಧೇಯತಯಾ ಚ 'ವಯಮ್' ಇತ್ಯೇತದವಿಶೇಷಣತ್ವೇನ ಸವಿಶೇಷಣಸ್ಯ ತು ನೇತಿ ನಿಷೇಧಾಪ್ರವೃತ್ತೇಃ ಅಸ್ಮದೋ ದ್ವಯೋಶ್ಚ ಇತ್ಯೇಕಸ್ಮಿನ್ನಪಿ ಬಹುವಚನಂ ಧ್ಯೇಯಮ್ ।**

ಅಥವಾ 'ಗಾಢಾಃ' ಇತ್ಯಾದಿಗಳು ನಿಷೇಧಕ್ಕೆ ಪ್ರತಿಯೋಗಿಗಳಾಗಿ 'ಪ್ರಪನ್ನಾಃ' ಎಂಬುದನ್ನು ಮಾನ್ಯತ್ವಕ್ಕೆ ಉಪಪಾದಕವಾಗಿ ಉಲ್ಲೇಖಿಸಿದ್ದಾರೆ. ಆದ್ದರಿಂದ ಮಾನ್ಯತ್ವಾದಿಗಳು ವಿಧೇಯ-ಗಳಾಗಿವೆ. 'ವಯಂ' ಎಂಬುದಕ್ಕೆ ಇವುಗಳು ವಿಶೇಷಣವಾಗಿಲ್ಲ. ಆದ್ದರಿಂದ 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕಕ್ಕೆ ಇಲ್ಲಿ ಪ್ರಸಕ್ತಿ ಇರುವುದಿಲ್ಲ. ಆದ್ದರಿಂದ 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರದಂತೆ ಒಬ್ಬರಲ್ಲಿ ಬಹುವಚನಪ್ರಯೋಗವು ಯುಕ್ತವಾಗುತ್ತದೆ.

ವಿಶೇಷವಿಚಾರ – 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರದಲ್ಲಿ ಏಕತ್ವ ಹಾಗೂ ದ್ವಿತ್ವಗಳು ವಿವಕ್ಷಿತವಾದಾಗಲೂ ಅಸ್ಮತ್ ಶಬ್ದಕ್ಕೆ ಬಹುವಚನವು ಬರುವುದು ಎಂದು ಹೇಳಿದ್ದರಿಂದ ಪ್ರಕೃತದಲ್ಲಿ ಏಕತ್ವವು ವಿವಕ್ಷಿತವಾಗಿದ್ದರೂ ವಯಂ ಎಂದು ಬಹುವಚನ ಪ್ರಯೋಗ ಮಾಡಿದ್ದಾರೆ. ಯದ್ಯಪಿ 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕದಲ್ಲಿ ವಿಶೇಷಣ ಸಹಿತವಾದ ಅಸ್ಮತ್ ಶಬ್ದಕ್ಕೆ ಏಕತ್ವ





ದ್ವಿತ್ವಗಳು ವಿವಕ್ಷಿತವಾದಾಗ ಬಹುವಚನವನ್ನು ನಿಷೇಧ ಮಾಡಲಾಗಿದೆ. ಆದರೂ "ತಂ ತ್ವಾ ವಯಂ ಜಡಧಿಯೋ ನ ವಿದಾಮ ಭೂಮನ್" ಇತ್ಯಾದಿಗಳಲ್ಲಿ ಸವಿಶೇಷಣವಾದ ಅಸ್ಮತ್ ಶಬ್ದಕ್ಕೂ ಕೂಡ ಬಹುವಚನ ಕಂಡಿದ್ದರಿಂದ ಆ ವಾರ್ತಿಕದಲ್ಲಿ ಮಾಡಿದ ಪ್ರತಿಷೇಧವು ಪ್ರಾಯಿಕವೆಂದು ತಿಳಿಯಬೇಕು. ಅಥವಾ 'ತ್ವಂ ರಾಜಾ ವಯಮಪ್ಯುಪಾಸಿತಗುರುಪ್ರಜ್ಞಾಭಿಮಾನೋನ್ನತಾಃ' ಇತ್ಯಾದಿಗಳಲ್ಲಿ ಗುರುಪ್ರಜ್ಞಾಭಿಮಾನೋನ್ನತತ್ವಕ್ಕೆ ವಿಧೇಯತ್ವ ವಿವಕ್ಷೆಯು ಇರುವುದರಿಂದ ವ್ಯಾವೃತ್ತಿಯಲ್ಲಿ ತಾತ್ಪರ್ಯ ಇಲ್ಲದ ಕಾರಣ ವಿಶೇಷಣತ್ವವು ಇಲ್ಲ ಎನ್ನುವ ಅಭಿಪ್ರಾಯದಿಂದ ವಯಂ ಎಂಬುದಾಗಿ ಪ್ರಯೋಗ ಮಾಡಿದಂತೆ ಪ್ರಕೃತದಲ್ಲಿಯೂ ಮಾನ್ಯತ್ವವು ವಿಧೇಯವಾಗಿದ್ದರಿಂದ ಪ್ರಪನ್ನತ್ವವು ವಿಧೇಯವಾದ ಮಾನ್ಯತ್ವಕ್ಕೆ ಉಪಪಾದಕತಯಾ ಹೇಳಲ್ಪಟ್ಟದ್ದರಿಂದ ಗಾಢತ್ವಾದಿಗಳು ನಿಷೇಧ್ಯವಾದ್ದರಿಂದ ಈ ಯಾವ ಧರ್ಮಗಳು ವ್ಯಾವೃತ್ತಿಯನ್ನು ಬೋಧಿಸುವ ಇಚ್ಛೆಯಿಂದ ಪ್ರತಿಪಾದಿತವಾಗದ ಕಾರಣ ತದ್ವಾಚಕವಾದ ಮಾನ್ಯಾದಿ ಶಬ್ದಗಳು ವಿಶೇಷಣವಾಗುವುದಿಲ್ಲ. ಆದ್ದರಿಂದ 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕದಲ್ಲಿ ಹೇಳಿದ ಪ್ರತಿಷೇಧಕ್ಕೆ ಪ್ರಕೃತದಲ್ಲಿ ಪ್ರಸಕ್ತಿಯೇ ಇಲ್ಲದಿರುವುದರಿಂದ ವಯಂ ಎಂಬ ಬಹುವಚನ-ಪ್ರಯೋಗವು ಸಾಧುವಾಗುವುದು.

'ಶಬ್ದಶಾಸ್ತ್ರದಲ್ಲಿ ನಮಗೆ ಪ್ರಾವೀಣ್ಯವಿಲ್ಲ. ವೇದಾರ್ಥವಿಚಾರಗಳಲ್ಲಿ ನಮಗೆ ಚಾತುರ್ಯವಿಲ್ಲ' ಎಂಬುದಾಗಿ ವ್ಯಾಖ್ಯಾನ ಮಾಡಿದರೆ 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕದ ಪ್ರಕಾರ ಬಹುವಚನವು ಅಯುಕ್ತವಾಗುತ್ತದೆ. ಆದ್ದರಿಂದ 'ಶಬ್ದಾಬ್ಧೌ ಗಾಢಾ ನ ಇತಿ ನ; ನಿಗಮಚರ್ಚಾಸು ಚತುರಾ ನ ಇತಿ ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಬೇಕು. ಈ ಪಕ್ಷದಲ್ಲಿ ಎಲ್ಲಾ ಧರ್ಮಗಳೂ ಮಾನ್ಯತ್ವಕ್ಕೆ ಉಪಪಾದಕವಾಗಿರುತ್ತವೆ. ಮಾನ್ಯತ್ವಾದಿಗಳು ವಿಧೇಯವಾಗಿರುವುದರಿಂದ ವಿಶೇಷಣ ಎನಿಸಿಕೊಳ್ಳು-ವುದಿಲ್ಲ. ಆದ್ದರಿಂದ ವಾರ್ತಿಕದ ಪ್ರಕಾರ ಬಹುವಚನದ ನಿಷೇಧಕ್ಕೆ ಸಂಗತಿ ಇರುವುದಿಲ್ಲ. ಟೀಕಾ-ರಾಯರು ಬಹುವಚನವನ್ನು ಪ್ರಯೋಗ ಮಾಡಿದ್ದರಿಂದಲೇ ತಮ್ಮಲ್ಲಿ ಎಲ್ಲಾ ಬಗೆಯ ಪಾಂಡಿತ್ಯಗಳಿವೆ ಎಂಬುದನ್ನು ಸೂಚಿಸಿದ್ದಾರೆಂದು ಇದರಿಂದ ತಿಳಿಯುತ್ತದೆ.

## 'ಪ್ರತಿವಾಕ್ಯಂ ಪ್ರತಿಪದಂ' ಎಂಬ ಶ್ಲೋಕ

**ಪರಿಮಳ**– ಶ್ಲೋಕಾನಾಂ ಚ ವಕ್ತವ್ಯಬಹುತ್ವೇಽಪಿ ಗ್ರಂಥಗೌರವಭಯಾತ್ ಸಂಕ್ಷೇಪಃ।





ಪ್ರತಿವಾಕ್ಯಂ ಪ್ರತಿಪದಮ್ ಅನೇಕಾಕೂತಗರ್ಭಿತಾ ।
ಪ್ರತಿಭಾತಿ ಸುಧಾऽಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ॥೮॥

ಎಲ್ಲ ಮಂಗಳಶ್ಲೋಕಗಳಿಗೆ ಹೇಳಬೇಕಾದ ವಿಚಾರ ಇನ್ನೂ ಬಹಳಷ್ಟಿದೆ. ಆದರೆ ಗ್ರಂಥ-ಗೌರವಭಯದಿಂದ ಸಂಕ್ಷೇಪವಾಗಿ ನಿರೂಪಣೆ ಮಾಡಿದ್ದೇವೆ.

ಪ್ರತಿವಾಕ್ಯಂ ಪ್ರತಿಪದಮ್ ಅನೇಕಾಕೂತಗರ್ಭಿತಾ ।
ಪ್ರತಿಭಾತಿ ಸುಧಾऽಥಾಪಿ ಗ್ರಂಥಾಲ್ಪತ್ವಾಯ ನೋಚ್ಯತೇ ॥

ನ್ಯಾಯಸುಧೆಯ ಪ್ರತಿವಾಕ್ಯ ಪ್ರತಿಪದವೂ ಕೂಡ ಅನೇಕ ಗೂಢವಾದ ಅಭಿಪ್ರಾಯ-ಗಳಿಂದ ತುಂಬಿದೆ ಎಂದು ನಮಗೆ ಕಾಣಿಸುತ್ತಿದೆ. ಆದರೂ ಕೂಡ ಗ್ರಂಥಗೌರವದೋಷ ಬರಬಾರದೆನ್ನಲು ಆ ಅಭಿಪ್ರಾಯಗಳನ್ನೆಲ್ಲ ನಮ್ಮಿಂದ ಹೇಳಲು ಸಾಧ್ಯವಾಗುತ್ತಿಲ್ಲ.

## ಉತ್ತಮರಲ್ಲಿರುವಷ್ಟು ಜ್ಞಾನ ಎನಗಿಲ್ಲ

ವಾಕ್ಯಾರ್ಥಚಂದ್ರಿಕಾ – 'ಕೇವಲಂ ಗುರುದೇವತಾಪ್ರಸಾದಲಬ್ಧಾ ಏತದ್‌ಗ್ರಂಥಪ್ರತಿ-ಪಾದಿತಪದಸ್ವರೂಪಪ್ರಮಾಣಪ್ರಮೇಯೋಪಪಾದಕನ್ಯಾಯಜಾತೇ ನ ಅನಾದರಃ ಕಾರ್ಯಃ' ಇತ್ಯೇತದ್ ವ್ಯಂಜಯನ್ ಸ್ವಗರ್ವಂ ಪರಿಹರತಿ – ನ ಶಬ್ದೇತಿ ॥

ಕೇವಲ ಗುರುಪ್ರಸಾದದಿಂದ ಈ ಗ್ರಂಥವು ಪ್ರಾಪ್ತವಾಗಿದೆ. ಈ ಗ್ರಂಥದಲ್ಲಿ ಪ್ರತಿಪಾದಿತವಾದ ಪದಸ್ವರೂಪ ಪ್ರಮಾಣ, ಪ್ರಮೇಯ ಹಾಗೂ ಇವುಗಳಿಗೆ ಉಪಪಾದಕವಾದ ನ್ಯಾಯಗಳು. ಇವುಗಳಲ್ಲಿ ಅನಾದರ ಮಾಡಬಾರದು. ಏಕೆಂದರೆ ಗುರುಪ್ರಸಾದದಿಂದ ಲಬ್ಧವಾಗಿವೆ. ಈ ವಿಷಯವನ್ನು ಸ್ಪಷ್ಟ-ಪಡಿಸುತ್ತಾ ತಮ್ಮ ಅಹಂಕಾರವನ್ನು ಪರಿಹರಿಸಲು – 'ನ ಶಬ್ದಾಬ್ಧೌ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ನ ಶಬ್ದಾಬ್ಧೌ' ಇತ್ಯಾದಿ ವಾಕ್ಯದಿಂದ ಕ್ರಮವಾಗಿ ವ್ಯಾಕರಣಶಾಸ್ತ್ರ, ಮೀಮಾಂಸಾಶಾಸ್ತ್ರ, ನ್ಯಾಯಶಾಸ್ತ್ರಗಳ ಜ್ಞಾನವು ತಮಗಿಲ್ಲ ಎಂಬುದನ್ನು ತಿಳಿಸಿದ್ದಾರೆ. ತಮಗಿಂತ ಉತ್ತಮರು ಯಾರಿದ್ದಾರೋ ಅವರಿಗೆ ಶಬ್ದ-ಶಾಸ್ತ್ರಾದಿಗಳ ಜ್ಞಾನ ಎಷ್ಟಿದೆಯೋ ಅಷ್ಟಿಲ್ಲ ಎಂಬುದು ಅಭಿಪ್ರಾಯ. ಕಿಮಪಿ ಚ ಎಂಬುದರಿಂದ ಲೌಕಿಕ-ಕಾರಣವಿಲ್ಲ ಎಂದು ತಿಳಿಸಿದ್ದಾರೆ. ಅಲೌಕಿಕಕಾರಣವಿರುವುದರಿಂದ ಅಕಾರಣಕಾರ್ಯೋತ್ಪತ್ತಿಯ ಪ್ರಸಂಗ-ವಿಲ್ಲ ಎಂಬುದನ್ನು ''ಪರಂ'' ಎಂಬುದರಿಂದ ತಿಳಿಸಿದ್ದಾರೆ.

ವಿವರಣೆ – ನಶಬ್ದಾಬ್ಧೌ ಗಾಥಾ ಎಂಬ ಶ್ಲೋಕವನ್ನು ನೋಡಿದಾಗ ಯಾವುದೇ ಶಾಸ್ತ್ರದಲ್ಲಿ ಪಾಂಡಿತ್ಯವಿಲ್ಲ ಎಂಬರ್ಥವು ತಿಳಿಯುತ್ತದೆ. ಆದರೆ ವಾಕ್ಯಾರ್ಥಚಂದ್ರಿಕಾಕಾರರು ಮಹತಾಂ ಎಂಬ ಪದದ ಜೊತೆಗೆ ಅನ್ವಯ ಮಾಡಿಕೊಂಡು ಅಪೂರ್ವವಾದ ಅರ್ಥವನ್ನು ತಿಳಿಸಿದ್ದಾರೆ. ತಾರತಮ್ಯದಲ್ಲಿ ತಮಗಿಂತ ಉತ್ತಮರಿಗೆ ಎಷ್ಟುಶಬ್ದಶಾಸ್ತ್ರಾದಿಗಳಲ್ಲಿ ಪಾಂಡಿತ್ಯವಿದೆಯೋ ಅಷ್ಟು ತಮಗಿಲ್ಲ ಎಂದು ಈ ಶ್ಲೋಕದಿಂದ ತಿಳಿಸಿದ್ದಾರೆ ಎಂದು.

ಅಲೌಕಿಕವಿಷಯವನ್ನು ಯಾರು ಮಾತನಾಡುತ್ತಾರೋ ಅವರ ವಿಷಯದಲ್ಲಿ ಲೌಕಿಕರು 'ಏನೇನೋ ಮಾತ-ನಾಡುತ್ತಾನೆ' ಎಂದು ಹೇಳುತ್ತಾರೆ. ಪ್ರಕೃತ ಕಿಮಪಿ ಚ ಎಂಬುದರಿಂದ ಏನೇನೋ ಹೇಳುತ್ತಿದ್ದೇವೆ ಎಂಬರ್ಥ-ವನ್ನೇ ಟೀಕಾರಾಯರು ಹೇಳಿದ್ದಾರೆ. ಅಂದರೆ ಲೌಕಿಕವಿಷಯಗಳನ್ನು ಈ ಶಾಸ್ತ್ರದಲ್ಲಿ ಹೇಳುತ್ತಿಲ್ಲ. ಅಲೌಕಿಕ-ವಿಷಯಗಳನ್ನಷ್ಟೇ ಹೇಳುತ್ತಿದ್ದೇವೆ ಎಂಬರ್ಥವು ಇದರಿಂದ ತಿಳಿಯುತ್ತದೆ. ಆದ್ದರಿಂದ ವಿಷಯಗಳೇ ಇಲ್ಲದ ಕಾರಣ ಗ್ರಂಥನಿರ್ಮಾಣವು ವ್ಯರ್ಥವಲ್ಲವೇ ಎಂಬ ಆಕ್ಷೇಪಕ್ಕೆ ಕಾರಣವಿಲ್ಲ.

## ಶ್ಲೋಕದಲ್ಲಿ ಬಹುವಚನಪ್ರಯೋಗದ ಸಮರ್ಥನೆ

ವಾಕ್ಯಾರ್ಥಚಂದ್ರಿಕಾ– ಅತ್ರ 'ಅಸ್ಮದೋಃ ದ್ವಯೋಶ್ಚ' ಇತಿ ಬಹುವದ್ಭಾವಾದ್ ವಯಮಿತಿ ಬಹುವಚನಮ್ । 'ತ್ವಂ ರಾಜಾ ವಯಮಪ್ಯುಪಾಸಿತ- ಗುರುಪ್ರಜ್ಞಾಭಿಮಾನೋನ್ನತಾ' ಇತ್ಯಾದಾ-ವುನ್ನತತ್ವಾದೇಃ ವಿಧೇಯತ್ವೇನ ವ್ಯಾವೃತ್ತೌ ಅತಾತ್ಪರ್ಯಾತ್ ಅವಿಶೇಷಣತ್ವವತ್ 'ನ ಶಬ್ದಾಬ್ಧೌ ಗಾಥಾಃ' ಇತ್ಯಾದೇರಪಿ ವಿಧೇಯತ್ವೇನ ಅವಿಶೇಷಣತ್ವಾತ್ 'ಪರಂ ಶ್ರೀಮತ್' ಇತ್ಯಾದೇಶ್ಚಾ-ವಿಧೇಯತ್ವೇಽಪಿ ಹೇತುಪರತಯಾ ವ್ಯಾವೃತ್ತೌ ಅತಾತ್ಪರ್ಯೇಣ ಅವಿಶೇಷಣತ್ವಾತ್ ನಾತ್ರ 'ಸ-ವಿಶೇಷಣಸ್ಯ ಪ್ರತಿಷೇಧೋ ವಕ್ತವ್ಯಃ' ಇತಿ ಪ್ರತಿಷೇಧಸ್ಯ ಪ್ರಸಕ್ತಿರಿತಿ ದ್ರಷ್ಟವ್ಯಮ್ । (ಪ್ರತಿಷೇಧಸ್ಯೇತಿ । ಅಸ್ಮದೋ ದ್ವಯೋಶ್ಚ ಇತ್ಯುಕ್ತಬಹುವದ್ಭಾವಪ್ರತಿಷೇಧಸ್ಯೇತ್ಯರ್ಥಃ । ತಥಾ ಚ 'ಅಹಂ ಪಂಡಿತೋ ಬ್ರವೀಮಿ' ಇತಿವತ್ 'ಅಹಂ ಪ್ರಪನ್ನೋ ಮಾನ್ಯೋಽಸ್ಮಿ' ಇತಿ ನ ಪ್ರಯುಕ್ತಮ್ ಇತಿ ಭಾವಃ।)

ಗ್ರಂಥಕಾರರು ಒಬ್ಬರೇ ಆಗಿರುವುದರಿಂದ ವಯಂ ಎಂಬ ಬಹುವಚನವು ಅನುಪಪನ್ನವಾಗಿದೆ. ಎಂದು ಹೇಳಬಾರದು? 'ಅಸ್ಮದೋಃ ದ್ವಯೋಶ್ಚ' ಎಂಬ ಸೂತ್ರದಿಂದ ಬಹುವಚನವು ಪ್ರಾಪ್ತವಾಗಿದೆ.

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಯಾವುದು ವ್ಯಾವರ್ತಕವೋ ಅದು ವಿಶೇಷಣ-ವಾಗುತ್ತದೆ. ವಿಧೇಯವಾದದ್ದು, ನಿಷೇಧ್ಯವಾದದ್ದು, ವಿಧೇಯಕ್ಕೆ ಉಪಪಾದಕವಾದದ್ದು ವ್ಯಾವರ್ತಕ-





ವಾಗುವುದಿಲ್ಲ. ಆದ್ದರಿಂದ ಇವುಗಳು ವಿಶೇಷಣವಾಗುವುದಿಲ್ಲ. ಉದಾ – 'ತ್ವಂ ರಾಜಾ ವಯಮಪ್ಯು-ಪಾಸಿತಗುರುಪ್ರಜ್ಞಾಭಿಮಾನೋನ್ನತಾ' ಎಂಬಲ್ಲಿ ಉನ್ನತತ್ವಾದಿಗಳು ವಿಧೇಯವಾಗಿರುವುದರಿಂದ ವ್ಯಾವ-ರ್ತಕವಾಗಿರುವುದಿಲ್ಲ. ಆದ್ದರಿಂದ ವಿಶೇಷಣಗಳೂ ಆಗಿರುವುದಿಲ್ಲ. ಅದರಂತೆ ಪ್ರಕೃತ 'ನ ಶಬ್ದಾಬ್ಧೌ ಗಾಧಾಃ' ಎಂಬಲ್ಲಿ ಶಬ್ದಾಬ್ಧೌ ಗಾಢತ್ವವು ನಿಷೇಧ್ಯವಾಗಿದೆ; ತದಭಾವವು ವಿಧೇಯವಾಗಿದೆ. ಯಾವುದು ವಿಧೇಯವಾಗುತ್ತದೋ ಅದು ವಿಶೇಷಣವಾಗಲು ಸಾಧ್ಯವಿಲ್ಲ. ಪರಂ ಶ್ರೀಮತ್ಪೂರ್ಣಪ್ರಮತಿಗುರು-ಕಾರುಣ್ಯಸರಣತ್ವವು ವಿಧೇಯವಲ್ಲ. ಆದರೆ ವಿಧೇಯಕ್ಕೆ ಹೇತುವಾಗಿದೆ. ಆದ್ದರಿಂದ ವ್ಯಾವೃತ್ತಿಯಲ್ಲಿ ಅದಕ್ಕೂ ಕೂಡ ತಾತ್ಪರ್ಯವು ಇಲ್ಲದ ಕಾರಣ ಅವಿಶೇಷಣವಾಗಿದೆ. 'ಮಾನ್ಯಾಃ' ಎಂಬುದು ಸಾಕ್ಷಾ-ತ್ತಾಗಿಯೇ ವಿಧೇಯವಾಗಿದೆ. ಹೀಗೆ ಶ್ಲೋಕದಲ್ಲಿ ಯಾವುದೂ ಕೂಡ ವಿಶೇಷಣವಾಚಕ ಪದವೇ ಇಲ್ಲ. ಆದ್ದರಿಂದ 'ಸವಿಶೇಷಣಸ್ಯ ಪ್ರತಿಷೇಧೋ ವಕ್ತವ್ಯಃ' ಎಂಬ ಪ್ರತಿಷೇಧಕ್ಕೆ ಇಲ್ಲಿ ಪ್ರಸಂಗವೇ ಇರುವುದಿಲ್ಲ. ವ್ಯಾವರ್ತಕವಾದ ವಿಶೇಷಣವಾಗಿದ್ದರೆ ಮಾತ್ರ ಬಹುವಚನ ಪ್ರಯೋಗವು ಅಯುಕ್ತವಾಗುತ್ತಿತ್ತು. ಎಲ್ಲವೂ ವಿಧೇಯವೇ ಆಗಿರುವುದರಿಂದ ಬಹುವಚನಪ್ರಯೋಗ ಮಾಡಬಹುದು.

## ಒಂದು ಸಣ್ಣವಿಮರ್ಶೆ

೧. ಗ್ರಂಥಪ್ರಾರಂಭದಲ್ಲಿ ಅಹಂಕಾರ ಖಂಡನೆ ಮಾಡಿಕೊಳ್ಳುವುದು ಶಿಷ್ಟಾಚಾರ ಪರಂಪರೆಯಿಂದ ಪ್ರಾಪ್ತವಾಗಿದೆ. ಅಹಂಕಾರ ಖಂಡನೆಯನ್ನು ಮಾಡಿಕೊಳ್ಳುವುದರಿಂದ ಶಿಷ್ಯರಿಗೆ ಮಾರ್ಗದರ್ಶನ-ವಾಗುತ್ತದೆ. ಮತ್ತು ಗ್ರಂಥಕಾರರಲ್ಲಿ ಭಕ್ತಿ ಹೆಚ್ಚಾಗುತ್ತದೆ. ಆದ್ದರಿಂದ 'ನ ಶಬ್ದಾಬ್ಧೌ ಗಾಧಾಃ' ಎಂಬ ಶ್ಲೋಕದಲ್ಲಿ ಶ್ರೀಜಯತೀರ್ಥರು ಅಹಂಕಾರಖಂಡನೆಯನ್ನು ಮಾಡಿಕೊಂಡಿರುವುದು ಸಾಧುವೇ ಆಗಿದೆ. ಹೀಗಿರುವಾಗ ಶಬ್ದಶಾಸ್ತ್ರದಲ್ಲಿ ಪ್ರಾವೀಣ್ಯ ಇಲ್ಲವೆಂದಿಲ್ಲ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುವ ಮೂಲಕ ಶಬ್ದಾದಿಶಾಸ್ತ್ರದಲ್ಲಿ ಶ್ರೇಷ್ಠವಾದ ಪಾಂಡಿತ್ಯವಿದೆ, ವೇದಾರ್ಥವಿಚಾರ ತಿಳಿದಿದೆ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುವುದು ಹೇಗೆ ಸರಿ? ಹೀಗೆ ವ್ಯಾಖ್ಯಾನ ಮಾಡುವುದರಿಂದ ಅಹಂಕಾರ ಖಂಡನೆಯು ಆಗದೇ ವಿಪರೀತವಾಗಿ ತಮ್ಮ ಮಹಿಮೆಯನ್ನೇ ಹೇಳಿಕೊಂಡಂತಾಗುತ್ತದಲ್ಲವೇ? ಶ್ರೀಜಯತೀರ್ಥರಿಗೆ ಗ್ರಂಥಾ-ರಂಭದಲ್ಲಿ ಈ ಅಭಿಪ್ರಾಯ ಇರಲು ಹೇಗೆ ಸಾಧ್ಯ ? ಪರಿಮಳಕಾರರೇಕೆ ಹಾಗೆ ವ್ಯಾಖ್ಯಾನ ಮಾಡಿ-ದ್ದಾರೆ?

ಸಮಾಧಾನ – ಈ ಆಕ್ಷೇಪಕ್ಕೆ ಅನೇಕ ರೀತಿಯಲ್ಲಿ ಸಮಾಧಾನ ತಿಳಿಯಬಹುದು. ನಮಗೆ ಶಬ್ದಶಾಸ್ತ್ರದಲ್ಲಿ ಪ್ರಾವೀಣ್ಯವಿದೆ; ವೇದಾದಿಶಾಸ್ತ್ರಗಳ ವಿಚಾರ ತಿಳಿದಿದೆ. ಈ ಎಲ್ಲ ಪಾಂಡಿತ್ಯವಿರುವುದು




ಸತ್ಯ. ಈ ದೃಷ್ಟಿಯಿಂದ ನಾವು ಮಾನ್ಯತೆಯನ್ನು ಪಡೆದಿಲ್ಲ. ಶ್ರೀಮಧ್ವಾಚಾರ್ಯರ ಕಾರುಣ್ಯಕ್ಕೆ ಪಾತ್ರರಾಗಿ ಮಾನ್ಯತೆಯನ್ನು ಪಡೆದಿದ್ದೇವೆ ಎಂಬುದು ಧ್ವನಿ. ಇದರಿಂದ ತಮ್ಮಲ್ಲಿರುವ ಸಾಮರ್ಥ್ಯವನ್ನು ತಿಳಿಸಿ, ಶ್ರೀಪೂರ್ಣಪ್ರಜ್ಞರ ಅನುಗ್ರಹಕ್ಕೆ ಪಾತ್ರರಾಗಿದ್ದೇವೆಂದು ವಿನಯಪ್ರದರ್ಶನವನ್ನೇ ಮಾಡಿರುತ್ತಾರೆ. ಈ ಅಭಿಪ್ರಾಯ ಟೀಕಾರಾಯರಿಗೆ ಇಲ್ಲದಿದ್ದರೆ ಗಾಢಾಃ ಚತುರಾಃ ಇತ್ಯಾದಿ ಪದಗಳಲ್ಲಿ ಬಹುವಚನಪ್ರಯೋಗವೇ ಕೂಡುತ್ತಿರಲಿಲ್ಲ. ಏಕೆಂದರೆ ಅಸ್ಮತ್ ಪದಕ್ಕೆ ವಿಶೇಷಣವಾಚಕಪದವು ಸೇರಿದಾಗ ಏಕತ್ವ, ದ್ವಿತ್ವಗಳು ವಾಚಕವಾದಾಗ ಬಹುವಚನವು ಬರಲು ಸಾಧ್ಯವೇ ಇಲ್ಲ. ಆದರೂ ಬಹುವಚನಪ್ರಯೋಗವನ್ನು ಮಾಡಿರುವುದರಿಂದ 'ಶಬ್ದಾಬ್ಧೌ ಗಾಢಾಃ ನ ಇತಿ ನ' ಎಂಬ ಅಭಿಪ್ರಾಯವು ಟೀಕಾರಾಯರಿಗೆ ಇದೆ ಎಂಬುದು ಮನದಟ್ಟಾಗುತ್ತದೆ.

೨. ಒಂದು ವೇಳೆ ಯಾವುದೇ ಶಾಸ್ತ್ರಪಾಂಡಿತ್ಯ ತನಗಿಲ್ಲವೆಂದು ಹೇಳಿದರೆ ಪ್ರತಿವಾದಿಗಳು ಆಕ್ಷೇಪ ಮಾಡುತ್ತಾರೆ. 'ಯಾವುದೇ ತರಹದ ಪಾಂಡಿತ್ಯವಿಲ್ಲದಿರುವ ನೀವು ಟೀಕೆಯನ್ನು ಬರೆಯಲು ಹೇಗೆ ಹೊರಟಿರಿ? ನೀವು ಹೇಳಿದ್ದನ್ನು ಪ್ರಮಾಣವೆಂದು ಒಪ್ಪಲು ಹೇಗೆ ಸಾಧ್ಯ ?

ಈ ಆಕ್ಷೇಪಕ್ಕೆ ಈಗ ಉತ್ತರವನ್ನು ನೀಡಿದಂತಾಯಿತು. ನಮಗೆ ವ್ಯಾಖ್ಯಾನ ಬರೆಯುವ ಸಾಮರ್ಥ್ಯವಿದೆ. ಎಲ್ಲಾ ಶಾಸ್ತ್ರಗಳನ್ನು ನಾವು ಓದಿದ್ದೇವೆ. ಅಂದ ಮಾತ್ರಕ್ಕೆ ನಮ್ಮ ಸಾಮರ್ಥ್ಯದಿಂದ ನಾವು ಟೀಕೆಯನ್ನು ಬರೆಯುತ್ತಿರುವುದಲ್ಲ. ಗುರುಗಳಾದ ಶ್ರೀಪೂರ್ಣಪ್ರಜ್ಞರ ಕಾರುಣ್ಯಲೇಶದಿಂದಷ್ಟೇ ನಮ್ಮಲ್ಲಿ ಇಂಥ ಸಾಮರ್ಥ್ಯವಿದೆ ಎಂಬುದಾಗಿ ಶ್ರೀಟೀಕಾರಾಯರು ಉತ್ತರಿಸಿದ್ದಾರೆ.

೩. ಪರವಾದಿಗಳ ಟೀಕೆಗಳು ಹಾಗೂ ವ್ಯಾಖ್ಯಾನಗಳು ಕೇವಲ ಪಾಂಡಿತ್ಯಪೂರ್ಣವಾಗಿರುತ್ತವೆ. ಅವುಗಳಲ್ಲಿ ಗುರುಕಾರುಣ್ಯದ ಸರಣಿಯು ಇರುವುದಿಲ್ಲ. ನಾವು ಬರೆಯುತ್ತಿರುವ ನ್ಯಾಯಸುಧಾ ಗ್ರಂಥ ಹಾಗಲ್ಲ. ಪಾಂಡಿತ್ಯಪೂರ್ಣವಾಗಿದೆ. ಜೊತೆಯಲ್ಲಿ ಪ್ರತಿಯೊಂದು ವಿಷಯಗಳೂ ಕೂಡ ಗುರುಕಾರುಣ್ಯದ ಸರಣಿಯಲ್ಲಿ ಸಾಗಿವೆ.

೪. ಅಥವಾ ಏತೇ ಚ ಅಹಂ ಚ ವಯಂ ಎಂಬುದಾಗಿ ಏಕಶೇಷಸಮಾಸ ಮಾಡಿದಾಗ ವಯಂ ಎಂಬ ಶಬ್ದಕ್ಕೆ ಶಿಷ್ಯರು ಹಾಗೂ ನಾವು ಎಂಬರ್ಥವು ತಿಳಿಯುತ್ತದೆ. ಗುರುಕಾರುಣ್ಯದ ಸರಣಿಯಿಂದ ನಾವಷ್ಟೇ ಮಾನ್ಯರಾಗಿರುವುದಲ್ಲ. ಈ ಗ್ರಂಥವನ್ನು ಓದುವ ಶಿಷ್ಯಂದಿರೂ ಕೂಡ ಮಾನ್ಯತೆಯನ್ನು ಪಡೆಯುತ್ತಾರೆ.







ಹೀಗೆ ಅನೇಕ ಕಾರಣಗಳಿರುವುದರಿಂದ ಪರಿಮಳ ಟಿಪ್ಪಣಿಯಲ್ಲಿ 'ಶಬ್ದಾಚ್ಚೌ ಗಾಥಾ ನ ಇತಿ ನ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದು ಅತ್ಯಂತ ಅಪೂರ್ವವಾಗಿದೆ. ಹೀಗೆ ವ್ಯಾಖ್ಯಾನವನ್ನು ಮಾಡಲೇ ಬೇಕು. ಇಲ್ಲದಿದ್ದರೆ ಟೀಕಾರಾಯರ ಶ್ಲೋಕಕ್ಕೆ ಪರಿಪೂರ್ಣವಾದ ತಿಳುವಳಿಕೆಯನ್ನು ಹೊಂದಲು ಸಾಧ್ಯವೇ ಇಲ್ಲ.

## ರಸಘಟ್ಟ

## 'ಮಾನ್ಯಾಃ ಸ್ಮಃ' ಎಂಬ ಪ್ರಯೋಗ ಸಾಧುವೇ?

ಯಾದುಪತ್ಯ – ಅತ್ರ ಯದ್ಯಪಿ 'ಅಸ್ಮದೋಃ ದ್ವಯೋಶ್ಚ' ಇತ್ಯತ್ರ 'ಸವಿಶೇಷಣಸ್ಯ ಪ್ರತಿ- ಷೇಧೋ ವಕ್ತವ್ಯಃ' ಇತ್ಯುಕ್ತತ್ವಾತ್ ಅಹಂ ಪಂಡಿತೋ ಬ್ರವೀಮಿ ಇತಿವತ್ 'ಅಹಂ ಪ್ರಪನ್ನೋ ಮಾನ್ಯೋಽಸ್ಮಿ' ಇತ್ಯೇವ ವಕ್ತವ್ಯಮ್, ತಥಾಽಪಿ ಬಹುತ್ವಾರೋಪಮಾತ್ರೇಣ ಬಹುವಚನೋಪ- ಪತ್ತಿಃ।

ವಾಸ್ತವಿಕವಾಗಿ 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರ ಹೇಳಿದ್ದನ್ನು 'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕವು ನಿಷೇಧ ಮಾಡುತ್ತಿದೆ. 'ಅಹಂ ಬ್ರವೀಮಿ' ಎಂದು ಹೇಳಬಹುದು. ಬ್ರವೀಮಿ ಎಂಬುದಕ್ಕೆ ವಿಶೇಷಣವಾಚಕಪದವನ್ನು ಸೇರಿಸಿ 'ಅಹಂ ಪಂಡಿತಃ ಬ್ರವೀಮಿ' ಎಂದು ಹೇಳುತ್ತವೆ. ಅದ- ರಂತೆ ವಯಂ ಬ್ರೂಮಃ ಎಂದು ಹೇಳಬಹುದು. ಆದರೆ 'ವಯಂ ಪಂಡಿತಾಃ ಬ್ರೂಮಃ' ಎಂದು ಹೇಳು- ವಂತಿಲ್ಲ. ಪ್ರಕೃತ ಅಹಂ ಪ್ರಪನ್ನಃ ಮಾನ್ಯಃ ಅಸ್ಮಿ ಎನ್ನಬಹುದು. ಆದರೆ ವಯಂ ಪ್ರಪನ್ನಾಃ ಮಾನ್ಯಾಃ ಸ್ಮಃ ಎಂದು ಹೇಳುವಂತಿಲ್ಲ. ಯಾವಾಗ ಅಸ್ಮತ್ ಶಬ್ದವು ವಿಶೇಷಣದಿಂದ ಸಹಿತವಾಗುತ್ತದೋ ಆಗ ಬಹು- ವಚನವು ಬರುವುದಿಲ್ಲವೆಂದು ವಾರ್ತಿಕ ಹೇಳುತ್ತಿದೆ. ಆದ್ದರಿಂದ ವಯಂ ಸ್ಮಃ ಎನ್ನಬಹುದು. ವಯಂ ಮಾನ್ಯಾಃ ಸ್ಮಃ ಎಂದು ಹೇಳುವಂತಿಲ್ಲ. ಆದರೂ ಕೂಡ ಕೇವಲ ಬಹುತ್ವದ ಆರೋಪದಿಂದ ಬಹು- ವಚನವು ಯುಕ್ತವಾಗುತ್ತದೆ.

## ವಾರ್ತಿಕವೇ ಅನಿತ್ಯ

ಶ್ರೀನಿಧಿತೀರ್ಥೀಯ– ವಾರ್ತಿಕವಚನಸ್ಯ ಅನಿತ್ಯತಯಾ ಅನಾದರಣೀಯತ್ವಾತ್। ವೈರಾಗ್ಯ- ಶತಕಾದೌ 'ಕುಠಾರಾ ವಯಮ್' ಇತ್ಯಾದಿ ಬಹುಪ್ರಯೋಗಸ್ಯ ದರ್ಶನಾತ್। 'ಶಿಷ್ಯಾಪೇಕ್ಷಯಾ ಪೂಜಾಯಾಂ ವಾ ಬಹುವಚನಮ್' ಇತಿ ಜ್ಞೇಯಮ್।

'ಸವಿಶೇಷಣಸ್ಯ ಪ್ರತಿಷೇಧಃ' ಎಂಬ ವಾರ್ತಿಕವೇ ಅನಿತ್ಯವಾದ್ದರಿಂದ ಅದನ್ನು ಆದರ ಮಾಡುವ ಅವಶ್ಯಕತೆಯಿಲ್ಲ. 'ಕುಠಾರಾ ವಯಮ್' ಇತ್ಯಾದಿಯಾಗಿ ವೈರಾಗ್ಯಶತಕದಲ್ಲಿ ಪ್ರಯೋಗ ಮಾಡಿರುವುದು ಕಂಡಿದೆ. ಶಿಷ್ಯರನ್ನು ಸೇರಿಸಿಕೊಂಡು ಬಹುವಚನವನ್ನು ಪ್ರಯೋಗ ಮಾಡಿದ್ದು ಯುಕ್ತವಾಗುತ್ತದೆ. ಆಗ 'ಏತೇ ಚ ಅಹಂ ಚ ವಯಮ್' ಎಂಬ ಏಕಶೇಷಸಮಾಸವನ್ನು ತಿಳಿಯಬೇಕು.

## ಶ್ಲೋಕದಲ್ಲಿ ಕಾಕುಸ್ವರ

ಶ್ರೀನಿಧಿತೀರ್ಥೀಯ – ಅಥವಾ ಶಬ್ದಾಬ್ಧೌ ಗಾಢಾ ನ ಕಿಮ್? ಗಾಢಾ ಏವೇತ್ಯೇವಂ ಕಾಕ್ವಾ ಯೋಜನಾ ಕಾರ್ಯಾ। ಕಾಕುರ್ಧ್ವನಿವಿಕಾರಃ। ಕಿಂಶಬ್ದಃ ತದ್ವ್ಯಂಜಕತ್ವೇನೋಪಾತ್ತ ಇತಿ ಜ್ಞೇಯಮ್॥

ಅಥವಾ ಕಾಕುಸ್ವರದಿಂದ ಯೋಜನೆಯನ್ನು ಮಾಡಬಹುದು. "ವಯಂ ಶಬ್ದಾಬ್ಧೌ ಗಾಢಾಃ ನ ಕಿಮ್? ಕಿಂತು ಗಾಢಾಃ ಏವ । ನಿಗಮಚರ್ಚಾಸು ಚತುರಾಃ ನ ಕಿಮ್? ಕಿಂತು ಚತುರಾಃ ಏವ । ನ್ಯಾಯೇ ಪ್ರೌಢಾಃ ನ ಕಿಮ್? ಕಿಂತು ಪ್ರೌಢಾಃ ಏವ । ವಿದಿತವೇದ್ಯಾಃ ನ ಕಿಮ್ ? ಕಿಂತು ವಿದಿತವೇದ್ಯಾಃ ಏವ । ಶಬ್ದವ್ಯಾಕರಣಾದಿಗಳಲ್ಲಿ ಗಾಢತ್ವಾದಿಗಳು ನಮ್ಮಲ್ಲಿ ಇಲ್ಲವೇನು? ಇದ್ದೇ ಇದೆ. ಆದರೂ ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ = ಗುರ್ವನುಗ್ರಹವನ್ನು, ಪ್ರಪನ್ನಾಃ = ಹೊಂದಿದವರಾಗಿ, ಮಾನ್ಯಾಃ ಸ್ಮಃ ಮಾನ್ಯರಾಗಿದ್ದೇವೆ.

## 'ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ'

## ಎಂಬುದಕ್ಕೆ ಎಂಟು ಮಜಲಿನ ಅರ್ಥ

ವಿರೀಬಾಳಾಚಾರ್ಯರು– ಶ್ರೀಮಾನನಂತಃ ತೇನ ತದ್ವಚನೇನೇತಿ ಯಾವತ್ । ಪೂರ್ಣಪ್ರಮತಿಃ ಶ್ರೀಮನ್ಮಧ್ವಶಾಸ್ತ್ರಶ್ರವಣಸ್ಯ ಮೋಕ್ಷಃ ಫಲಮ್ ಇತಿ ಪ್ರಕೃಷ್ಟಂ ಜ್ಞಾನಂ ಯೇಷಾಂ ತೇ ಶ್ರೀಮತ್ಪೂರ್ಣಪ್ರಮತಯಃ ಸನಕಾದಿಮುನಯಃ ತೇಷಾಂ ಗುರುಃ ಶ್ರೀಮಧ್ವಾಚಾರ್ಯಃ। ತಸ್ಯ ಕಾರುಣ್ಯಂ ಕರುಣಾ ಏವ ಸರಣಿಃ ಪದ್ಧತಿಃ ತಾಂ ಪ್ರಪನ್ನಾಃ ಇತಿ ಯತ್ ತತ ಏವ ಮಾನ್ಯಾ ಸ್ಮಃ । ಇತರತ್ ಮಾನ್ಯತಾಯಾಮ್ ಅಪ್ರಯೋಜಕಮ್ ಇತಿ ಭಾವಃ । 'ಕಾರುಣ್ಯಂ ಕರುಣಾ ಘೃಣಾ' । 'ಸರಣಿಃ ಪದ್ಧತಿಃ ಪದ್ಯೇ'ತಿ ಚಾಮರಃ । ಕದಾಚಿತ್ ಶ್ರೀಮಧ್ವಾಚಾರ್ಯಸ್ಯ ವ್ಯಾಖ್ಯಾಂ ಶ್ರೋತುಂ ಸಸನಕಾದಿಮುನಿಃ ಗಗನೇಽಲಬ್ಧಪ್ರಷ್ಟತನುಃ ಸಹಸ್ರಮಸ್ತಕೋಽನಂತೋಽಭ್ಯುಪೇತ್ಯ ತಾಂ ಶ್ರುತ್ವಾ ನನಂದ,





ತದಾ ತೇ ಮುನಯಃ ಕಿಮಸ್ಯ ವ್ಯಾಖ್ಯಾನಶ್ರವಣಸ್ಯ ಫಲಮ್? ಇತಿ ತಮುಪಪನ್ನಾಃ ಪಪ್ರಚ್ಛುಃ। ತದಾ ಸಃ ನಿರ್ದುಃಖಾನಂದಾನುಭವಲಕ್ಷಣೋ ಮೋಕ್ಷ ಏವ ತಸ್ಯ ಮುಖ್ಯಫಲಮ್ ಇತ್ಯುಜ್ಜಗಾರೇತಿ ಸುಮಧ್ವವಿಜಯೇ ಏಕಾದಶಸರ್ಗೇ ಪ್ರಸಿದ್ಧೇಷಾ ಕಥಾ। ಶ್ರೀಮತೋ ಹರೇಃ ಪೂರ್ಣಪ್ರಮತಿರಿಚ್ಛಾ ಮನೋರಥೋ ಯೇನಾಸೌ ತಥೋಕ್ತಃ।

ವೇದಾಂತಮಾರ್ಗಪರಿಮಾರ್ಗಣದೀನದೂನಾಃ
ದೈವೀಃ ಪ್ರಜಾ ವಿಶರಣಾಃ ಕರುಣಾಪದಂ ನಃ।
ಆನಂದಯೇ ಸುಮುಖಭೂಷಿತಭೂಮಿಭಾಗೋ
ರೂಪಾಂತರೇಣ ಮಮ ಸದ್ಗುಣನಿರ್ಣಯೇನ ॥'

ಇತ್ಯಾದಿ ಸುಮಧ್ವವಿಜಯೋಕ್ತೇಃ। ಸ ಚಾಸೌ ಗುರುಶ್ಚೇತಿ ವಾ। ಮತಿಬುದ್ಧಿಪೂಜಾರ್ಥೇಭ್ಯಶ್ಚ' ಇತಿ ಸೂತ್ರೇ ಮತಿಶಬ್ದಸ್ಯೇಚ್ಛಾರ್ಥತಯಾ ವೈಯಾಕರಣೈರ್ವಿವರಣಾತ್ । ತಸ್ಯೇತ್ಯಾದಿ ಪ್ರಾಗ್ವತ್ ॥

ಪೂರ್ಣಪ್ರಮತಿಃ ಪೂರ್ಣಬೋಧಶ್ಚ ಗುರವಃ ಪ್ರಾಕ್ ಪ್ರಣತಾ ಭಾರತ್ಯಾದಯಶ್ಚ ಶ್ರೀಮತ್ಪೂರ್ಣಪ್ರಮತಿಗುರವಃ। ಕುರುಪಾಂಡವನ್ಯಾಯೇನ ಇಯಮುಕ್ತಿಃ। ಶ್ರೀಮಂತಶ್ಚ ತೇ ಪೂರ್ಣಪ್ರಮತಿಗುರವಶ್ಚ ತೇಷಾಂ ಕಾರುಣ್ಯಸರಣಿಮ್ ಇತಿ ವಾ ॥ ತದುಕ್ತಮನ್ಯತ್ರ । 'ವ್ಯಾಖ್ಯಾಸ್ಯೇ ಗೀತಾಭಾಷ್ಯಂ ತತ್ಕರುಣಾಬಲಾತ್' ಇತಿ । ತೇಷಾಂ ಕರುಣಾಬಲಾತ್ ಇತಿ ತದರ್ಥಃ ಶ್ರೀಮತಿ ವಿಷ್ಣೌ ಪೂರ್ಣಾ ಪ್ರಮತಿರಿಚ್ಛಾ ಯಸ್ಯೇತಿ ವಾ ಶ್ರೀಮತೋ ಹರೇಃ ಪೂರ್ಣಾ ಪ್ರಮತಿರಿಚ್ಛಾ ಯಸ್ಮಿನ್ ಇತಿ ವಾ ಪೂರ್ಣಪ್ರಮತಿಃ ಸ ಚಾಸೌ ಗುರುಶ್ಚೇತಿ ವಾ 'ಯಸ್ಯಾಹಮಾಪ್ತ ಆಪ್ತೇಭ್ಯೋ ಯೋ ಮ ಆಪ್ತತಮಃ ಸದಾ' ಇತಿ ಆಚಾರ್ಯೋಕ್ತೇಃ। ಶ್ರೀಮತಿ ವಿಷ್ಣೌ ಪೂರ್ಣಪ್ರಮತಿರಿಚ್ಛಾ ಯಸ್ಯಾಃ ಸಾ ತಥೋಕ್ತಾ ಲಕ್ಷ್ಮೀಃ ಸಾ ಗುರುರ್ಯಸ್ಯೇತಿ ವಾ । 'ವವ್ರೇ ಪರಂ ಸರ್ವಗುಣೈರಪೇಕ್ಷಿತಂ ರಮಾಮುಕುಂದಂ ನಿರಪೇಕ್ಷಮೀಪ್ಸಿತಮ್' ಇತಿ ಭಾಗವತೋಕ್ತೇಃ। ತಸ್ಯ ಕಾರುಣ್ಯಸರಣಿಮಿತಿ ಪ್ರಾಗ್ವತ್। ಏವಮೇವ ವಿವೃತ್ಯಂತರಾಣಿ ಸೂಕ್ಷ್ಮೇಕ್ಷಣೈಃ ಊಹನೀಯಾನಿ ॥

'ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ' ಎಂಬ ಶಬ್ದಕ್ಕೆ ಅನೇಕರೀತಿಗಳಿಂದ ಅರ್ಥಗಳನ್ನು ತಿಳಿಯಬಹುದು ಎಂದು ಏರೀ ಬಾಳಾಚಾರ್ಯರು ಹೇಳುತ್ತಾರೆ.

1) ಶ್ರೀಮಾಂಶ್ಚ ಅಸೌ ಪೂರ್ಣಪ್ರಮತಿಶ್ಚ ಶ್ರೀಮತ್ಪೂರ್ಣಪ್ರಮತಿಃ । ಸಚಾಸೌ ಗುರುಶ್ಚ ।





ತಸ್ಯ ಕಾರುಣ್ಯ ಸರಣಃ , ಜ್ಞಾನಾದಿ ಸಂಪತ್ತುಗಳಿಂದ ಮಂಡಿತರಾದ ಶ್ರೀಮದಾಚಾರ್ಯರ ಅನುಗ್ರಹದ ಸರಣಿಯನ್ನು ,

2) ಶ್ರೀಮಾನ್= ಶ್ರೀ= ವಿಷ, ಅದನ್ನು ಪಡೆದ ಶೇಷದೇವರು, ತೇನ= ಅವರಿಂದ, ಪೂರ್ಣಾ ಪ್ರಮತಿಃ= ಮಧ್ವಶಾಸ್ತ್ರಶ್ರವಣದಿಂದ ಮೋಕ್ಷರೂಪವಾದ ಫಲವು ದೊರಕುವುದು ಎಂಬ ಶ್ರೇಷ್ಠವಾದ ಜ್ಞಾನವು ಯೇಷಾಂ= ಯಾರಿಗೆ ಪ್ರಾಪ್ತವಾಯಿತೋ ಅಂತಹ ಸನಕಾದಿಗಳು, ಶ್ರೀಮತ್ಪೂರ್ಣಪ್ರಮತಯಃ ತೇಷಾಂ ಗುರುಃ ಅವರ ಗುರುಗಳು ಮಧ್ವಾಚಾರ್ಯರು, ತಸ್ಯ ಕಾರುಣ್ಯಸರಣಿಂ ಪ್ರಪನ್ನಾಃ

3) 'ಮತಿಬುದ್ಧಿಪೂಜಾರ್ಥೇಭ್ಯಶ್ಚ' ಎಂಬ ವ್ಯಾಕರಣಸೂತ್ರದ ವೃತ್ತಿಯಲ್ಲಿ ಮತಿ ಶಬ್ದಕ್ಕೆ 'ಇಚ್ಛಾ' ಎಂಬ ಅರ್ಥವನ್ನು ಬರೆದಿದ್ದಾರೆ. ಆದ್ದರಿಂದ ಶ್ರೀಮತಃ = ಪರಮಾತ್ಮನ, ಪ್ರಮತಿಃ = ಶ್ರೇಷ್ಠವಾದ ಸಜ್ಜನರ ಉದ್ಧಾರ ಮಾಡಬೇಕೆಂಬ ಇಚ್ಛೆಯು, ಯೇನ= ಯಾರಿಂದ, ಪೂರ್ಣಾಃ = ಪೂರ್ಣವಾಯಿತೋ, ಸಃ = ಅಂತಹ ಶ್ರೀಮದಾಚಾರ್ಯರು, ಶ್ರೀಮತ್ಪೂರ್ಣಪ್ರಮತಿಃ ಸ ಚಾಸೌ ಗುರುಶ್ಚ ತಸ್ಯ ಕಾರುಣ್ಯ-ಸರಣಿಂ ಪ್ರಪನ್ನಾಃ।

4) ಶ್ರೀಮತಃ = ಪರಮಾತ್ಮನ, ಪೂರ್ಣಾ ಪ್ರಮತಿಃ = ಪೂರ್ಣವಾದ ಪ್ರಸಾದರೂಪವಾದ ಇಚ್ಛೆಯು, ಯಸ್ಮಿನ್ = ಯಾರ ವಿಷಯದಲ್ಲಿದೆಯೋ, ಸಃ ಪೂರ್ಣಪ್ರಮತಿಃ, ಸ ಚಾಸೌ ಗುರುಶ್ಚ , ತಸ್ಯ ಕಾರುಣ್ಯಸರಣಿಂ ಪ್ರಪನ್ನಾಃ.

5) ಶ್ರೀಮತಿ = ಪರಮಾತ್ಮನಲ್ಲಿ, ಪೂರ್ಣಾ ಪ್ರಮತಿಃ = ಪೂರ್ಣವಾದ ಇಚ್ಛೆಯು, ಯಸ್ಯ= ಯಾರಿಗಿದೆಯೋ, ಸಃ = ಅಂತಹ ಶ್ರೀಮದಾಚಾರ್ಯರು ಶ್ರೀಮತ್ಪೂರ್ಣಪ್ರಮತಿಃ ಸ ಚಾಸೌ ಗುರುಶ್ಚ ತಸ್ಯ ಕಾರುಣ್ಯಸರಣಿಂ ಪ್ರಪನ್ನಾಃ.

6) ಶ್ರೀಮತಿ = ಪರಮಾತ್ಮನಲ್ಲಿ ಪೂರ್ಣಾ ಪ್ರಮತಿಃ = ಪೂರ್ಣವಾದ ಇಚ್ಛೆಯು, ಯಸ್ಯಾಃ= ಯಾವಳಿಗಿದೆಯೋ, ಸಾ = ಅಂತಹ ಮಹಾಲಕ್ಷ್ಮಿಯು, ಶ್ರೀಮತ್ಪೂರ್ಣಪ್ರಮತಿಃ ಸಾ ಗುರುಃ ಯಸ್ಯ ಅವಳು ಯಾರಿಗೆ ನೇರವಾಗಿ ಗುರುವಾಗಿದ್ದಾಳೋ ಅಂತಹ ಶ್ರೀಮದಾಚಾರ್ಯರು ಶ್ರೀಮತ್ಪೂರ್ಣ-ಪ್ರಮತಿಗುರುಃ, ತಸ್ಯ ಕಾರುಣ್ಯ ಸರಣಿಂ ಪ್ರಪನ್ನಾಃ.

7) ಶ್ರೀಮತ್ಪೂರ್ಣಪ್ರಮತಿಃ ಏವ ಗುರುಃ ಯೇಷಾಂ ತೇ ಶ್ರೀಮತ್ಪೂರ್ಣಪ್ರಮತಿಗುರುಕಾಃ = ಶ್ರೀಮದಾಚಾರ್ಯರೇ ಗುರುಗಳಾಗಿ ಉಳ್ಳ ಪದ್ಮನಾಭತೀರ್ಥಾದಿಗಳು ತೇಷಾಂ= ಅವರ, ಅರುಣ್ಯಾಃ= ಶತ್ರುಶ್ರೇಷ್ಠರು, (ಅರವಃ ಶತ್ರವಃ ತಾನ್ ನಯಂತೀತಿ ಅರುಣ್ಯಾಃ) ತೇಷಾಂ = ಅವರ, ಅಸರಣಿಂ ಪ್ರಪನ್ನಾಃ





= ಮಾರ್ಗವನ್ನು ಹೊಂದದೇ ಇದ್ದವರು ಅರ್ಥಾತ್ ಗುರುಗಳ ವಿರೋಧಿಗಳನ್ನು ಅನುಸರಿಸದೇ ಇದ್ದವರು ಅತ ಏವ ಮಾನ್ಯಾಃ ಸ್ಮಃ = ಆದ್ದರಿಂದಲೇ ಮಾನ್ಯರಾಗಿದ್ದೇವೆ.

8) ಅಥವಾ ಶ್ರೀಮತ್ಪೂರ್ಣಪ್ರಮತಿಗುರುಶ್ಚ ಅಸೌ ಕಶ್ಚ ಶ್ರೀಮತ್ಪೂರ್ಣಪ್ರಮತಿಗುರುಕಃ ಶ್ರೀಮಧ್ವಾಚಾರ್ಯರೆಂಬ ಭಾವಿಬ್ರಹ್ಮರು ತಸ್ಯ ಅರುಣ್ಯಃ ತೇಷಾಂ ಅಸರಣಂ ಪ್ರಪನ್ನಾಃ ಅತ ಏವ ಮಾನ್ಯಾಃ ಸ್ಮಃ ।

## ಸುಧಾಪರಿಮಳಸಾರ

ನ್ಯಾಯಸುಧಾ ಎಂಬ ಮೇರುಕೃತಿಯನ್ನು ಬರೆಯುತ್ತಿರುವ ಶ್ರೀಮಟ್ಟೀಕಾಕೃತ್ಪಾದರಿಗೆ ಅಹಂಕಾರ ಲೇಶವೂ ಇಲ್ಲ ಎಂಬುದು ತಿಳಿಯುತ್ತದೆ.

ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ
ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಮ್ ।
ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ
ಪ್ರಪನ್ನಾ ಮಾನ್ಯಾಃ ಸ್ಮ ಕಿಮಪಿ ಚ ವದಂತೋಽಪಿ ಮಹತಾಮ್ ॥

ಶಬ್ದಶಾಸ್ತ್ರದಲ್ಲಿ ನಾವು ಪ್ರವೀಣರಲ್ಲ. ವೇದವಿಚಾರದಲ್ಲಿ ಚತುರರಲ್ಲ; ನ್ಯಾಯಶಾಸ್ತ್ರದಲ್ಲಿ ಪ್ರೌಢಿಮೆ ಇಲ್ಲ. ಆದರೂ ಆಚಾರ್ಯರ ಕರುಣೆಯನ್ನು ಆಶ್ರಯಿಸಿ ತಪ್ಪನ್ನು, ಅಥವಾ ಸರಿ-ಯಾದದ್ದನ್ನು ಹೇಳಿದರೂ ಮಾನ್ಯರಾಗಿದ್ದೇವೆ.

ಶ್ಲೋಕದಿಂದ ಸ್ವಾಹಂಕಾರಖಂಡನೆಯನ್ನು ಮಾಡಿರುತ್ತಾರೆ. ಯಾವುದೇ ಪಾಂಡಿತ್ಯವಿಲ್ಲದಿದ್ದರೆ ಗ್ರಂಥಬರೆಯುವ ಅರ್ಹತೆ ನಿಮಗೆಲ್ಲಿದೆ ಎಂಬ ಪ್ರಶ್ನೆಗೂ ಇದರಲ್ಲೇ ಉತ್ತರವಿದೆ. ನನ್ನಲ್ಲಿ ಎಲ್ಲಾ ತರಹದ ಪಾಂಡಿತ್ಯಗಳಿವೆ. ಆದರೂ ಕೂಡ ಪಾಂಡಿತ್ಯದ ಮದದಿಂದ ನಾನು ಈ ಗ್ರಂಥವನ್ನು ಬರೆಯುತ್ತಿರುವುದಲ್ಲ. ಗುರುಗಳಾದ ಶ್ರೀಮದಾಚಾರ್ಯರ ಕರುಣೆಯಿಂದಷ್ಟೇ ಈ ಗ್ರಂಥ-ವನ್ನು ಬರೆಯಲು ಸಮರ್ಥನಾಗಿದ್ದಾನೆ. ಈ ವಿಷಯವು ಬಹುವಚನಪ್ರಯೋಗದಿಂದ ತಿಳಿ-ಯುತ್ತದೆ.

ಏಕತ್ವ, ಅಥವಾ ದ್ವಿತ್ವವು ವಿವಕ್ಷಿತವಾದ ಅಸ್ಮತ್ ಶಬ್ದಕ್ಕೆ ಬಹುವಚನವು ವಿಕಲ್ಪವಾಗಿ ಬರು-ತ್ತದೆಂದು 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರವು ಹೇಳುತ್ತಿದೆ. 'ಅಹಂ' ಎಂಬರ್ಥದಲ್ಲೇ ವಯಂ ಎಂಬ ಬಹುವಚನವನ್ನು ಈ ಶ್ಲೋಕದಲ್ಲಿ ಮಾಡಿರುತ್ತಾರೆ. ವಾಸ್ತವಿಕವಾಗಿ 'ಸವಿಶೇ-

ಷಣಸ್ಯ ಪ್ರತಿಷೇಧಃ' ವಿಶೇಷಣವಿಶಿಷ್ಟವಾದ ಅಸ್ಮತ್ ಶಬ್ದಕ್ಕೆ ಬಹುವಚನವು ಬರುವುದಿಲ್ಲ ಎಂಬುದು ಇದರ ಅರ್ಥ. ಇದರ ಪ್ರಕಾರ 'ಪ್ರಪನ್ನಾಃ' ಇತ್ಯಾದಿ ವಿಶೇಷಣವಿಶಿಷ್ಟವಾದ ಅಸ್ಮತ್ ಶಬ್ದಕ್ಕೆ ಬಹುವಚನಪ್ರಾಪ್ತಿಯ ಅವಕಾಶವಿಲ್ಲ. ಆದರೂ ಕೂಡ 'ಗಾಢಾಃ' ಇತ್ಯಾದಿಯಾಗಿ ಹೇಳಲ್ಪಟ್ಟ ಗಾಢತ್ವಾದಿಗಳು ನಿಷೇಧಕ್ಕೆ ಪ್ರತಿಯೋಗಿಯಾಗಿವೆ. ವಿಶೇಷಣಗಳಾಗಿರುವುದಿಲ್ಲ. 'ಗುರುಕಾರುಣ್ಯಸರಣಂ ಪ್ರಪನ್ನಾಃ' ಎಂಬಲ್ಲಿ ಹೇಳಲ್ಪಟ್ಟ ಪ್ರಪನ್ನತ್ವವು ಕೂಡ ಕೇವಲ ಮಾನ್ಯತ್ವಕ್ಕೆ ಉಪಪಾದಕವಾಗಿದೆ. ಹಾಗಾಗಿ ಇದೂ ಕೂಡ ವಿಶೇಷಣವಾಗಿರುವುದಿಲ್ಲ. ಮಾನ್ಯತ್ವವು ವಿಧೇಯವಾಗಿರುವುದರಿಂದ 'ಮಾನ್ಯಾಃ' ಎಂಬುದು ಕೂಡ ವಿಶೇಷಣವಲ್ಲ. ಹೀಗೆ ಅಸ್ಮತ್‌ಶಬ್ದವು ವಿಶೇಷಣವಿಶಿಷ್ಟವಾಗದ ಕಾರಣ ಬಹುವಚನವು ಪ್ರಾಪ್ತವಾಗುತ್ತದೆ. ಆದ್ದರಿಂದ ಒಬ್ಬನೇ ವ್ಯಕ್ತಿಯಾದರೂ 'ವಯಂ' ಎಂಬ ಬಹುವಚನಪ್ರಯೋಗವು ಸಾಧುವಾಗಿದೆ.

## ಪರಿಮಳದ ವೈಶಿಷ್ಟ್ಯ

* 'ಚಂಚರೀಕತಿ' ಎಂಬುದರಿಂದ ಅಹಂಕಾರ ತೋರಿಸಿದಂತಾಯಿತೇ? ಎಂಬ 'ನ ಶಬ್ದಾಬ್ಧೌ' ಎಂಬ ಶ್ಲೋಕವೆಂದು ವ್ಯಾಖ್ಯಾನಿಸಿದ್ದಾರೆ.

* ಯಾವುದೇ ಪಾಂಡಿತ್ಯವಿಲ್ಲದ ನಿಮಗೆ ನ್ಯಾಯಸುಧಾಗ್ರಂಥ ಬರೆಯುವ ಅರ್ಹತೆ ಹೇಗಿದೆ? ಎಂಬ ಪ್ರಶ್ನೆಗೂ ಇದೇ ಶ್ಲೋಕದಿಂದ ಉತ್ತರಿಸಿದ್ದು ಅಪೂರ್ವವಾಗಿದೆ.

* 'ವಯಂ' ಎಂಬ ಬಹುವಚನದ ಪ್ರಯೋಗಕ್ಕೆ ಸಾಧುತ್ವ ಹೇಳಿರುವುದು.

## ಅನುವ್ಯಾಖ್ಯಾನ ಮಂಗಳಶ್ಲೋಕಕ್ಕೆ ಪೀಠಿಕೆ

**ಶ್ರೀಮನ್ನ್ಯಾಯಸುಧಾ– ಭಗವತಾ ಬಾದರಾಯಣೇನ ಪ್ರಾಣಿನಾಂ ನಿಃಶ್ರೇಯಸಾಯ ಪ್ರಣೀತಮಪಿ ಬ್ರಹ್ಮಮೀಮಾಂಸಾಶಾಸ್ತ್ರಮ್ ಅಸಾಧುನಿಬಂಧಾಂಧತಮಸಾಽವಕುಂಠಿತತ್ವೇನ ಅಪ್ರಣೀತಮಿವ ಮನ್ಯಮಾನೋ ಭಗವಾನ್ ಆನಂದತೀರ್ಥಮುನಿಃ ಯಥಾಽಚಾರ್ಯಾಭಿಪ್ರಾಯಂ ಅಸ್ಯ ಭಾಷ್ಯಂ ವಿಧಾಯ, ಅನುಭಾಷ್ಯಮಪಿ ಕರಿಷ್ಯನ್ ವಿಲೀನಪ್ರಕೃತಿತಯಾ ಸ್ವಯಮ್ ಅಂತರಾಯ-**



**ವಿಧುರೋಽಪಿ ಅನವರತಮ್ ಈಶ್ವರಪ್ರವಣಕಾಯವೃತ್ತಿರಪಿ ನಾರಾಯಣಪ್ರಣಾಮಾದಿಕಂ ಪ್ರಾರಿಪ್ಸಿತಸ್ಯ ಅನಂತರಾಯಪರಿಸಮಾಪ್ತೇಃ ಪ್ರಚಯಸ್ಯ ಚ ಹೇತುತಯಾ ಅವಿಗೀತಶಿಷ್ಟಾಚಾರಪರಂಪರಾದಿಣಾ ಅವಗತಮವಶ್ಯಂ ಕರಣೀಯಂ ಶಿಷ್ಯಾನ್ ಗ್ರಾಹಯಿತುಂ ಗ್ರಂಥಾದೌ ನಿಬಧ್ನಾತಿ – ನಾರಾಯಣಮಿತಿ ॥**

ಷಡ್ಗುಣೈಶ್ವರ್ಯಸಂಪನ್ನರಾದ ಬಾದರಾಯಣರು ಸಜ್ಜನರ ಶಾಶ್ವತಸುಖಕ್ಕಾಗಿ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚಿಸಿರುವರು. ಆದರೆ ದುಷ್ಟರು ಈ ಶಾಸ್ತ್ರಕ್ಕೆ ಅಪವ್ಯಾಖ್ಯಾನವನ್ನು ಮಾಡಿರುವರು. ಆದ್ದರಿಂದ ಗಾಢವಾದ ಅಂಧಕಾರದಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಮುಚ್ಚಿಹೋಗಿದೆ. ರಚಿತವಾಗಿದ್ದರೂ ರಚಿತವಾಗಿರದಂತಾಗಿದೆ. ಇದನ್ನು ಗಮನಿಸಿದ ಭಗವಾನ್ ಆನಂದತೀರ್ಥಮುನಿಗಳು ಸೂತ್ರಕಾರರಿಗೆ ಅಭಿಮತವಾದ ಅರ್ಥವನ್ನು ತಿಳಿಸಲು ಬ್ರಹ್ಮಸೂತ್ರಭಾಷ್ಯ ಎಂಬ ಗ್ರಂಥವನ್ನು ರಚನೆ ಮಾಡಿದರು. ಪ್ರಕೃತ ಅನುವ್ಯಾಖ್ಯಾನ ಎಂಬ ಮತ್ತೊಂದು ಗ್ರಂಥವನ್ನು ರಚನೆ ಮಾಡಲು ಉದ್ಯುಕ್ತರಾಗಿದ್ದಾರೆ. ಶ್ರೀಮಧ್ವಾಚಾರ್ಯರು ಲಿಂಗಶರೀರವೆಂಬ ಪ್ರಕೃತಿಯ ದೋಷಪ್ರಭಾವಕ್ಕೆ ಗುರಿಯಾಗದವರು. ಆದ್ದರಿಂದಲೇ ಯಾವುದೇ ತರಹದ ವಿಘ್ನಗಳು ಇವರಿಗೆ ಇರುವುದಿಲ್ಲ. ಮತ್ತು ನಿರಂತರ ಹರಿಯ ಆರಾಧನೆಯಲ್ಲೇ ಇವರ ಶರೀರ ಇಂದ್ರಿಯಗಳು ಆಸಕ್ತವಾಗಿರುತ್ತವೆ. ಆದರೂ ಸಹ ಗ್ರಂಥಾರಂಭದಲ್ಲಿ ನಾರಾಯಣಪ್ರಣಾಮವನ್ನು ಮಾಡುತ್ತಿದ್ದಾರೆ. ತಾವು ಯಾವ ಗ್ರಂಥವನ್ನು ಮಾಡಲು ಇಚ್ಛಿಸಿದ್ದಾರೋ ಆ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಬೇಕು ಮತ್ತು ಆ ಗ್ರಂಥವು ಕೀರ್ತಿಶಾಲಿಯಾಗಬೇಕು. ಈ ಎರಡು ಕಾರಣಕ್ಕಾಗಿ ಅವಿಗೀತಶಿಷ್ಟಾಚಾರಪರಂಪರೆಯು ಗ್ರಂಥಾರಂಭದಲ್ಲಿ ಮಂಗಳಾಚರಣೆಯನ್ನು ಮಾಡುತ್ತಲೇ ಬಂದಿದೆ. ಆ ಸಂಪ್ರದಾಯಕ್ಕನುಗುಣವಾಗಿ ತಾವೂ ಸಹ ಗ್ರಂಥಾರಂಭದಲ್ಲಿ ಮಂಗಳ-ವನ್ನು ಆಚರಣೆ ಮಾಡುತ್ತಿದ್ದಾರೆ. ಶಿಷ್ಯರೂ ಸಹ ಇದರಂತೆ ಗ್ರಂಥಾರಂಭದಲ್ಲಿ ಮಂಗಳವನ್ನು ಆಚರಣೆ ಮಾಡಬೇಕೆಂಬುದನ್ನು ತಿಳಿಸಲು ತಾವು ಮಾಡಿದ ಗ್ರಂಥದ ನಿಬಂಧನೆಯನ್ನೂ ಕೂಡ 'ನಾರಾಯಣಮ್' ಇತ್ಯಾದಿಯಾಗಿ ಮಾಡುತ್ತಿದ್ದಾರೆ.





## ಅನುವ್ಯಾಖ್ಯಾನಕ್ಕೆ ವೈಯರ್ಥ್ಯಶಂಕಾಪರಿಹಾರ

**ಪರಿಮಳ– ಭಾಷ್ಯಾದಿವೈಯರ್ಥ್ಯಶಂಕಾಂ ನಿರಾಹ – ಭಗವತಾ ಇತ್ಯಾದಿನಾ ॥ ಅಸಾಧ್ವಿತಿ ॥ ಅಸಮೀಚೀನಗ್ರಂಥಾಖ್ಯಾಂಧತಮಸೇನ ಪ್ರತಿಬದ್ಧತತ್ವಜ್ಞಾನಜನನಶಕ್ತಿಕತ್ವೇನ ಅಪ್ರಣೀತಮಿವ ಇತ್ಯರ್ಥಃ । ಸೂತ್ರಕೃತೇಃ ಪೂರ್ವಂ ವಿದ್ಯಮಾನಯೋಃ ಸಾಧುಜನಮನೋಗತಸಂಶಯವಿಪರ್ಯಯೋಃ ಅನಪಗಮಾತ್ ಇತಿ ಭಾವಃ ।**

ಶ್ರೀಮದಾಚಾರ್ಯರು ರಚನೆ ಮಾಡಿದ ಬ್ರಹ್ಮಸೂತ್ರ, ಅನುವ್ಯಾಖ್ಯಾನ ಮೊದಲಾದ ಗ್ರಂಥಗಳಿಗೆ ವೈಯರ್ಥ್ಯಶಂಕೆಯನ್ನು ಪರಿಹರಿಸಲು 'ಭಗವತಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಅಸಾಧುನಿಬಂಧಾಂಧತಮಸಾ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ದುಷ್ಟವಾದ ಗ್ರಂಥವೆಂಬ ಗಾಢವಾದ ಕತ್ತಲೆಯಿಂದ ಬ್ರಹ್ಮಮೀಮಾಂಸಾಶಾಸ್ತ್ರವು ತತ್ವಜ್ಞಾನವನ್ನು ಹುಟ್ಟಿಸುವ ಶಕ್ತಿಯನ್ನು ಕಳೆದುಕೊಂಡಿದೆ. ಏಕೆಂದರೆ ಅಸಮೀಚೀನ ಗ್ರಂಥವೆಂಬ ಗಾಢಾಂಧಕಾರವು ಪ್ರತಿಬಂಧಕವಾಗಿದೆ. ಆದ್ದರಿಂದ ರಚನೆ ಮಾಡದಂತಾಗಿದೆ ಎಂಬುದು ಇದರ ಅಭಿಪ್ರಾಯ. ಸೂತ್ರಕಾರರು ಬರುವ ಮೊದಲು ಸಜ್ಜನರ ಮನಸ್ಸಿನಲ್ಲಿ ಯಾವ ಸಂಶಯವಿಪರೀತಜ್ಞಾನಗಳು ಇದ್ದವೋ ಅವು ಪರಿಹಾರವಾಗದೇ ಹಾಗೆಯೇ ಉಳಿದಿದೆ ಎಂದಭಿಪ್ರಾಯ.

ವಿಶೇಷವಿಚಾರ – ಅನುವ್ಯಾಖ್ಯಾನದ ಮೊದಲ ಶ್ಲೋಕಕ್ಕೆ ಅವತಾರಿಕೆಯನ್ನು ಶ್ರೀಜಯತೀರ್ಥರು 'ಭಗವತಾ ಬಾದರಾಯಣೇನ.....' ಮುಂತಾದ ವಾಕ್ಯಗಳಿಂದ ನೀಡುತ್ತಾರೆ. ವೇದಗಳ ಮೂಲಕ ತತ್ವಜ್ಞಾನವನ್ನು ಪಡೆದು ಸುಜೀವಿಗಳು ಶ್ರೇಯಸ್ಸನ್ನು ಪಡೆಯಲಿ ಎಂಬ ಉದ್ದೇಶದಿಂದ ಬಾದರಾಯಣರು ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳನ್ನು ರಚಿಸಿದರು. ಅನಂತರ ಅನೇಕಮತಾಚಾರ್ಯರು ಸೂತ್ರಕಾರರ ಅಭಿಪ್ರಾಯಕ್ಕೆ ವಿರುದ್ಧವಾಗಿ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ ಮಾಡಿದರು. ಇದರಿಂದಾಗಿ ಸುಜೀವಿಗಳಿಗೆ ತತ್ವಜ್ಞಾನ ದೊರೆಯಲಿಲ್ಲ. ಹೀಗೆ ಬಾದರಾಯಣರಿಂದ ಸೂತ್ರಗಳು ರಚಿತವಾದರೂ, ರಚನೆಯ ಫಲವಾದ ತತ್ವಜ್ಞಾನವು ಸುಜೀವಿಗಳಿಗೆ ದೊರೆಯದ ಕಾರಣ 'ಅರಚಿತ'ವಾದಂತೆ ಆದವು. ಅದಕ್ಕಾಗಿಯೇ ಶ್ರೀಮದಾನಂದತೀರ್ಥರು ಸೂತ್ರಕಾರರ ಭಾವಕ್ಕೆ ಅನುಗುಣವಾಗಿ ಭಾಷ್ಯವನ್ನು ರಚಿಸಿದರು.





## ವಿಘ್ನಗಳಿಲ್ಲದಿದ್ದರೂ ಮಂಗಳಾಚರಣೆ ಮಾಡಿದರು

ಪರಿಮಳ– ಯಥಾಚಾರ್ಯಾಭಿಪ್ರಾಯಂ = ಸೂತ್ರಕಾರಾಭಿಪ್ರಾಯಮ್, ಅನತಿಕ್ರಮ್ಯ । ಅಸ್ಯ = ಬ್ರಹ್ಮಮೀಮಾಂಸಾಶಾಸ್ತ್ರಸ್ಯ । ಅನುಭಾಷ್ಯಮಪೀತಿ ॥ ತತ್ಕೃತ್ಯಮ್ ಅನ್ವಪಿ ಚ ಇತ್ಯಾದೌ ಅಗ್ರೇ ವ್ಯಕ್ತಮ್ । ಗ್ರಂಥಾದೌ ನಿಬಂಧನೇನ ಪ್ರಣಾಮಾದಿಕಂ ಕೃತಮ್ ಇತಿ ತಾವದವಗಮ್ಯತೇ । ಅನ್ಯಥಾ ತದಯೋಗಾತ್ । ತಚ್ಚ ಇತರಜನಕೃತಮಿವ ವಿಘ್ನವಿಘಾತಾದ್ಯರ್ಥಮ್ ಇತಿ, ಇದಾನೀಮೇವ ಕೃತಮಿತಿ ಚ ಪ್ರತೀಯತೇ । ತತ್ಪ್ರತೀತಿದ್ವಯಂ ನಿರಸಿತುಂ 'ಸ್ವಯಮ್' ಇತ್ಯಾದ್ಯಪ್ಯಂತಂ ವಿಶೇಷಣದ್ವಯಮ್ ।

'ಯಥಾಽಚಾರ್ಯಾಭಿಪ್ರಾಯಂ' ಎಂಬ ಪದಕ್ಕೆ ಸೂತ್ರಕಾರರ ಅಭಿಪ್ರಾಯಕ್ಕೆ ಅನುಗುಣವಾಗಿ ಎಂದರ್ಥ. ಅಸ್ಯ = ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಎಂದರ್ಥ. 'ಅನುಭಾಷ್ಯಮಪಿ ಕರಿಷ್ಯನ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಸಾರ್ಥಕ್ಯವು ಮುಂದೆ 'ಅನ್ವಪಿ ಚಾಹಮೇವ' ಎಂಬುದಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಸ್ಪಷ್ಟವಾಗುತ್ತದೆ.

ಗ್ರಂಥದ ಪ್ರಾರಂಭದಲ್ಲಿ ಮಂಗಳವನ್ನು ನಿಬಂಧನೆ ಮಾಡುವುದರಿಂದ ಪ್ರಣಾಮಾದಿಗಳನ್ನು ಮಾಡಿದ್ದಾರೆಂದು ತಿಳಿಯುತ್ತದೆ. ಇಲ್ಲದಿದ್ದರೆ ನಿಬಂಧನೆ ಮಾಡುವುದು ಅಯುಕ್ತವಾಗುತ್ತದೆ. ಈ ಮಂಗಳಾಚರಣೆಯನ್ನು ಬೇರೆ ಜನರು ಮಾಡುವಂತೆ ವಿಘ್ನವಿಘಾತಕ್ಕೋಸ್ಕರ ಮಧ್ವಾಚಾರ್ಯರು ಮಾಡಿದ್ದಾರೆ. ಮತ್ತು ಗ್ರಂಥದ ಪ್ರಾರಂಭದಲ್ಲೇ ಮಾಡಿದ್ದಾರೆ ಎಂಬುದಾಗಿ ಎರಡು ಬಗೆಯ ಪ್ರತೀತಿಗಳು ಬರುತ್ತವೆ. ಈ ಎರಡು ಬಗೆಯ ಪ್ರತೀತಿಗಳನ್ನು ನಿರಾಕರಣೆ ಮಾಡುವುದಕ್ಕಾಗಿ 'ಸ್ವಯಂ' ಎಂದು ಪ್ರಾರಂಭ ಮಾಡಿ 'ಅಪಿ' ಎಂಬಲ್ಲಿಯ ತನಕ ಎರಡು ವಿಶೇಷಣಗಳನ್ನು ಹೇಳಿರುತ್ತಾರೆ.

ವಿಶೇಷವಿಚಾರ – ಗ್ರಂಥಾರಂಭದಲ್ಲಿ ಶ್ರೀಮದಾನಂದತೀರ್ಥರು 'ನಾರಾಯಣಂ ನಿಖಿಲ....' ಎಂದು ನಾರಾಯಣಪ್ರಣಾಮರೂಪ ಮಂಗಳವನ್ನು ಆಚರಿಸಿ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಇದು ಸರಿಯಲ್ಲ. ಮಂಗಳಾಚರಣೆಯ ಫಲ ಪ್ರಾರಂಭಿಸಿದ ಗ್ರಂಥದ ನಿರ್ವಿಘ್ನಪರಿಸಮಾಪ್ತಿ ಹಾಗೂ ಗ್ರಂಥಪ್ರಸಿದ್ಧಿ. ಶ್ರೀಹರಿಯ ನಿತ್ಯಾಪರೋಕ್ಷಿಗಳೂ ಜೀವೋತ್ತಮರೂ ಆದ ಶ್ರೀಮದಾನಂದತೀರ್ಥರ





ಲಿಂಗಶರೀರವು ಸುಟ್ಟ ಬಟ್ಟೆಯಂತೆ ಹೆಸರಿಗಷ್ಟೇ ಇದೆ. ಆದ್ದರಿಂದ ಲಿಂಗಶರೀರದ ದೋಷಕಾರ್ಯವಾದ ಅಜ್ಞಾನವಿಪರೀತಜ್ಞಾನಗಳೆಂದೂ ಅವರಿಗಿಲ್ಲ. ಹೀಗೆ ಪ್ರಕೃತಿಯ ದೋಷಬಂಧನಕ್ಕೆಂದೂ ಸಿಲುಕದ ಜೀವನ್ಮುಕ್ತರಾದ ಶ್ರೀಮದಾನಂದತೀರ್ಥರು ಸ್ವಭಾವದಿಂದಲೇ ಯಾವಾಗಲೂ ವಿಘ್ನಗಳಿಲ್ಲದವರು. ಆದ್ದರಿಂದ ಅವರೇಕೆ ಮಂಗಳವನ್ನಾಚರಿಸಬೇಕು? ''ಸ್ವತಃ ವಿಘ್ನರಹಿತರಾದರೂ ಶ್ರೀಮದಾನಂದ-ತೀರ್ಥರು ಪರಮ ಆಸ್ತಿಕಸ್ವಭಾವದವರಾದ್ದರಿಂದ ಮಂಗಳವನ್ನಾಚರಿಸಿದ್ದಾರೆ'' ಎಂಬುದೂ ಸರಿಯಲ್ಲ. ಪರಮಾಸ್ತಿಕಸ್ವಭಾವದವರಾದ್ದರಿಂದ ಸರ್ವದಾ ಭಗವಂತನಲ್ಲಿಯೇ ತಮ್ಮ ಶರೀರ, ಇಂದ್ರಿಯ, ಅಂತಃ-ಕರಣಗಳನ್ನು ತೊಡಗಿಸಿರುವವರು ಶ್ರೀಮದಾನಂದತೀರ್ಥರು.

## ಮಂಗಳಾಚರಣೆಯು ಶಿಷ್ಟಾಚಾರಪರಂಪರಾಪ್ರಾಪ್ತ

ಪರಿಮಳ– ಪ್ರಣಾಮಾದಿಕಮ್ = ಪ್ರಣಾಮಸ್ತವನಾದಿಕಮ್ । ಅವಿಗೀತೇತಿ ॥ 'ಅವಿಪ್ರತಿಪನ್ನವ್ಯಾಸಾದಿಶಿಷ್ಟಾನಾಮ್ ಆಚಾರೇಣ ಮನ್ವಾದಿಶಿಷ್ಟಾನಾಮ್ ಆಚಾರಃ' ಇತ್ಯೇವಮಾಚಾರಪರಂಪರಯಾ ತದನುಮಿತಶ್ರುತ್ಯಾದಿನಾ ಚ ಅವಗತಮಿತ್ಯರ್ಥಃ । ಶ್ರುತ್ಯನುಮಾನಪ್ರಕಾರಶ್ಚ ಅಗ್ರೇ 'ತತ್ರ ತಾರಾ' ಇತ್ಯೇತದ್ ಅವತಾರಿಕಾಯಾಂ ವ್ಯಕ್ತಃ।

'ಪ್ರಣಾಮಾದಿಕಂ' ಎಂದರೆ ನಮಸ್ಕಾರ ಮಾಡುವುದು, ಸ್ತೋತ್ರಮಾಡುವುದು ಇತ್ಯಾದಿ ಭಗವದಾರಾಧನೆಗಳು ಎಂದರ್ಥ. 'ಅವಿಗೀತ' ಪದಕ್ಕೆ ವಿಪ್ರತಿಪತ್ತಿ ಇಲ್ಲದ ಎಂದರ್ಥ. 'ಶಿಷ್ಟಾ-ಚಾರ' ಎಂದರೆ ವೇದವ್ಯಾಸರೇ ಮೊದಲಾದ ಶಿಷ್ಟರಿಂದ ಆಚರಿಸಲ್ಪಟ್ಟ ಎಂದರ್ಥ. 'ಪರಂಪರಾ-ದಿನಾ' ಎಂದರೆ ವೇದವ್ಯಾಸದೇವರೇ ಮೊದಲಾದ ಶಿಷ್ಟರಿಂದ ಆಚರಿಸಲ್ಪಟ್ಟ ಮಂಗಳಾ-ಚರಣೆಯನ್ನು ಕಂಡು ಮನ್ವಾದಿ ಮೊದಲಾದ ಶಿಷ್ಟರು ಆಚರಣೆ ಮಾಡಿದ್ದಾರೆ. ಹೀಗೆ ಆಚಾರ-ಪರಂಪರೆಯಿಂದ ಗ್ರಂಥಾರಂಭದಲ್ಲಿ ಮಂಗಳಾಚರಣೆಯನ್ನು ಮಾಡಲೇ ಬೇಕು ಎಂಬುದಾಗಿ ಶ್ರುತಿಯನ್ನು ಊಹಿಸಬೇಕು. ಇಂಥ ಅನುಮಿತಶ್ರುತಿಯಿಂದ ಮಂಗಳಾಚರಣೆಯು ವಿಹಿತ-ವಾಗಿದೆ ಎಂಬರ್ಥವನ್ನು 'ಅವಿಗೀತ' ಇತ್ಯಾದಿವಾಕ್ಯಕ್ಕೆ ತಿಳಿಯಬೇಕು. ಅನುಮಿತವಾದ ಶ್ರುತಿಯ ಪ್ರಕಾರವನ್ನು 'ತತ್ರ ತಾರಾಥ' ಎಂಬ ಅನುವ್ಯಾಖ್ಯಾನದ ಮೂಲಕ್ಕೆ ಅವತಾರಿಕೆ ನೀಡುವ ಸಂದರ್ಭದಲ್ಲಿ ಸ್ಪಷ್ಟವಾಗುತ್ತದೆ.





ವಿಶೇಷವಿಚಾರ – ಗ್ರಂಥಾರಂಭಸಮಯದಲ್ಲಿ ವಿಶೇಷವಾಗಿ ಮಂಗಳವನ್ನು ಏಕೆ ಆಚರಿಸಿದರು? ಈ ಆಶಂಕೆಗಳಿಗೆ ಸಮಾಧಾನವನ್ನು 'ಶಿಷ್ಯಾನ್ ಗ್ರಾಹಯಿತುಂ' ಎಂದು ನೀಡಿದ್ದಾರೆ— ಅದ್ವೈತ, ವಿಶಿಷ್ಟಾದ್ವೈತ ಮುಂತಾದ ಪರಮತೀಯರಿಂದಲೂ ವಿಶಿಷ್ಟಶಿಷ್ಟರೆಂದು ಸಂಪ್ರತಿಪನ್ನರಾದವರು ವೇದ-ವ್ಯಾಸರೇ ಮುಂತಾದ ಮಹನೀಯರು. ಅಂತಹ ಶ್ರೇಷ್ಠಶಿಷ್ಟರ ಆಚರಣೆಯ ಪರಂಪರೆಯಿಂದ, 'ನಾರಾಯಣನ ನಮಸ್ಕಾರ ಅಥವಾ ಸ್ತುತಿರೂಪವಾದ ಮಂಗಳಾಚರಣೆಯು 'ಪ್ರಾರಂಭಿಸಿದ ಗ್ರಂಥದ ನಿರ್ವಿಘ್ನಪರಿಸಮಾಪ್ತಿ ಹಾಗೂ ಪ್ರಸಿದ್ಧಿಗೆ ಕಾರಣವೆಂದು' ತಿಳಿದುಬಂದಿದೆ. ಆದ್ದರಿಂದಲೇ ಅಂತಹ ಮಂಗಳವನ್ನು ಗ್ರಂಥಾರಂಭದಲ್ಲಿ ಅವಶ್ಯವಾಗಿ ಮಾಡಲೇಬೇಕು ಎಂದು ತಮ್ಮ ಬಳಿ ಇರುವ ಶಿಷ್ಯರಿಗೆ ತಿಳಿಸಬೇಕು. ಹೀಗೆ ಶಿಷ್ಯಶಿಕ್ಷಣಕ್ಕೋಸ್ಕರವೇ ಆನಂದತೀರ್ಥರು ತಾವು ಸ್ವಭಾವದಿಂದಲೇ ವಿಘ್ನರಹಿತ-ರಾಗಿದ್ದರೂ ಸದಾ ಈಶ್ವರಾಸಕ್ತವಾದ ಶರೀರ, ಇಂದ್ರಿಯ, ಅಂತಃಕರಣಗಳುಳ್ಳವರಾದರೂ ನಾರಾಯಣ -ನಮಸ್ಕಾರರೂಪಮಂಗಳವನ್ನು ಗ್ರಂಥಾರಂಭದಲ್ಲಿ ಮಾಡಿದ್ದಾರೆ.

ಶ್ರೀಮದಾನಂದತೀರ್ಥರ ಜೊತೆಯಲ್ಲಿರುವ ಶಿಷ್ಯರು ಅವರ ಆಚರಣೆಯಿಂದ ಈ ವಿಚಾರವನ್ನು ತಿಳಿಯಬಹುದು. ಆದರೆ ಶ್ರೀಮದಾನಂದತೀರ್ಥರ ನಂತರ ಬರುವ ಶಿಷ್ಯರು ಹೇಗೆ ತಿಳಿದುಕೊಳ್ಳ-ಬೇಕು? ಅವರಿಗೂ ತಿಳಿಸುವುದಕ್ಕೋಸ್ಕರವೇ ಶ್ರೀಮದಾಚಾರ್ಯರು ತಾವು ಗ್ರಂಥಾರಂಭದಲ್ಲಿ ಮಾಡಿದ ಮಂಗಳವನ್ನು ಗ್ರಂಥದ ಪ್ರಾರಂಭದಲ್ಲಿ ಉಲ್ಲೇಖಿಸಿದ್ದಾರೆ.

## ಮಂಗಳಶ್ಲೋಕದಿಂದ ವ್ಯಾವರ್ತ್ಯವಾಗುವ ಆಕ್ಷೇಪಗಳು

ವಾಕ್ಯಾರ್ಥಚಂದ್ರಿಕಾ – ನನು ಪ್ರಾಮಾಣ್ಯವಿಷಯಾದಿಮತ್ತದುರ್ಗಮಾರ್ಥತ್ವಾನಾಂ ವ್ಯಾಖ್ಯೇಯತ್ವಪ್ರಯೋಜಕತಯಾ ಪ್ರಕೃತಶಾಸ್ತ್ರೇ ಚ ತದಭಾವಾತ್, ತದ್ಭಾವೇऽಪಿ ವಾ ಭಾಷ್ಯಾಂತ-ರಾಣಾಂ ಸತ್ವೇನ ಏತದ್ಭಾಷ್ಯಾನುಭಾಷ್ಯಯೋರೇವ ಅಕರ್ತವ್ಯತ್ವೇನ, ತದನಂತರಾಯಪರಿ-ಸಮಾಪ್ತ್ಯಾದೇಃ ಪ್ರಯೋಜನಸ್ಯ ಅಸಂಭವಾತ್, ವಿಲೀನಪ್ರಕೃತಿತಯಾ ಅನವರತಮ್ ಈಶ್ವರಪ್ರವಣ-ಕಾಯಕರಣತಯಾ ಭವದಭ್ಯುಪೇತಭಾಷ್ಯಕಾರಸ್ಯ ಗ್ರಂಥಾರಂಭ ಏವಾಂತರಾಯವಿರಹೋದ್ದೇಶೇನ ಮಂಗಲಕೃತೇಸ್ತ್ವಯಾ ವಕ್ತುಮಶಕ್ಯತ್ವಾಚ್ಚ ಆಚಾರಪರಂಪರಾಯಾ ಅಂಧಪರಂಪರಾತ್ವಸಂಭವೇನ ಪ್ರಮಾಣಾಭಾವಾಚ್ಚ, ನಾರಾಯಣಪ್ರಣಾಮಾದೇಃ ಅಕರ್ತವ್ಯತಯಾ ಗ್ರಂಥೇ ನಿವೇಶನಸ್ಯ ಚ ಪ್ರಯೋಜನಾಭಾವೇನ ಸುತರಾಮ್ ಅನುಪಪತ್ತೇರಸಂಗತಮೇತತ್ ಪ್ರಥಮಪದ್ಯಮ್ ಇತ್ಯತ ಆಹ – ಭಗವತಾ ಇತಿ ॥





ಅನುವ್ಯಾಖ್ಯಾನದ ಮಂಗಳಪದ್ಯಕ್ಕೆ ಮುಂದೆ ಟೀಕೆಯಲ್ಲಿ ಎಷ್ಟು ವ್ಯಾಖ್ಯಾನ ಮಾಡಿದ್ದಾರೋ ಅದರಿಂದೆಲ್ಲಾ ವ್ಯಾವರ್ತ್ಯವಾಗುವ ಆಶಂಕೆಗಳ ಒಟ್ಟು ಸಂಗ್ರಹ ಹೀಗಿದೆ –

1. ಪ್ರಕೃತ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ವ್ಯಾಖ್ಯೇಯತ್ವವೇ ಕೂಡುವುದಿಲ್ಲ. ಏಕೆಂದರೆ ಪ್ರಾಮಾಣ್ಯ, ವಿಷಯಾದಿಗಳ ಇರುವಿಕೆ, ದುರ್ಗಮಾರ್ಥತ್ವ ಈ ಮೂರು ಇದ್ದರೆ ಮಾತ್ರ ಅಂಥ ಗ್ರಂಥವು ವ್ಯಾಖ್ಯಾನ ಮಾಡಲು ಅರ್ಹವಾಗುತ್ತದೆ. ಆದರೆ ಈ ಶಾಸ್ತ್ರದಲ್ಲಿ ಈ ಮೂರೂ ಕೂಡ ಇರುವುದಿಲ್ಲ.

2. ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಪ್ರಾಮಾಣ್ಯ, ವಿಷಯಾದಿಮತ್ತ್ವ, ದುರ್ಗಮಾರ್ಥತ್ವ ಈ ಮೂರು ಇವೇ ಎಂದೇ ಒಪ್ಪೋಣ. ಆದರೂ ಕೂಡ ಬೇರೆ ಶಂಕರಭಾಷ್ಯಾದಿಗಳೇ ಇರುವಾಗ ಶ್ರೀಮಧ್ವಾ-ಚಾರ್ಯರ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಾದಿ ಗ್ರಂಥಗಳು ಏಕೆ ಬೇಕಿತ್ತು? ಇದರ ಅವಶ್ಯಕತೆ ಜಿಜ್ಞಾಸುಗಳಿಗೆ ಇರುವುದಿಲ್ಲ.

3. ಅನುವ್ಯಾಖ್ಯಾನ ಗ್ರಂಥವೇ ಅನಾವಶ್ಯಕವಾದ್ದರಿಂದ ಅನಾರಂಭಣೀಯವಾಗಿದೆ. ಹೀಗಿರುವಾಗ ಈ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಬೇಕು ಎಂಬ ಉದ್ದೇಶದಿಂದ ಮಂಗಳಾಚರಣೆಯನ್ನೇಕೆ ಮಾಡಬೇಕು? ಈ ಮಂಗಳಾಚರಣೆಗೆ ಪ್ರಯೋಜನವೇ ಇರುವುದಿಲ್ಲ.

4. ಮತ್ತು ನೀವು ಅಂಗೀಕಾರ ಮಾಡಿದ ಭಾಷ್ಯಕಾರರು ಮಂಗಳಾಚರಣೆ ಮಾಡುವ ಅವಶ್ಯಕತೆಯೇ ಇಲ್ಲ. ಏಕೆಂದರೆ ನಿಮ್ಮ ಪ್ರಕಾರ ಭಾಷ್ಯಕಾರರಿಗೆ ಪ್ರಕೃತಿಯ ಬಂಧನವೇ ಇರುವುದಿಲ್ಲ. ನಿರಂತರವಾಗಿ ಈಶ್ವರನಲ್ಲಿ ಆಸಕ್ತವಾದ ಇಂದ್ರಿಯ ಮತ್ತು ದೇಹವುಳ್ಳವರಾಗಿದ್ದಾರೆ. ಇಂಥವರಿಗೆ ವಿಘ್ನಗಳೇ ಇರುವುದಿಲ್ಲ. ಹೀಗಿರುವಾಗ ವಿಘ್ನಗಳ ಪರಿಹಾರದ ಉದ್ದೇಶದಿಂದ ಗ್ರಂಥಾರಂಭದಲ್ಲೇ ಮಂಗಳಾ-ಚರಣೆ ಮಾಡುವುದು ವ್ಯರ್ಥ. ಗ್ರಂಥಾರಂಭದಲ್ಲಿ ಇವರು ಮಾಡಿದ ಮಂಗಳಾಚರಣೆಗೆ ವಿಘ್ನಪರಿಹಾರವೆಂಬ ಪ್ರಯೋಜನವನ್ನು ಹೇಳಲು ಸಾಧ್ಯವೇ ಇಲ್ಲ.

5. ನಿಜವಾಗಿಯೂ ಈ ಮಂಗಳಾಚರಣೆಯನ್ನು ಮಾಡಲೇಬೇಕಿಲ್ಲ. ಶಿಷ್ಟಾಚಾರಪರಂಪರಾಪ್ರಾಪ್ತವಾದದ್ದರಿಂದ ಅವಶ್ಯವಾಗಿ ಮಾಡಲೇಬೇಕೆಂದು ನೀವು ಉತ್ತರಿಸಬೇಕು. ಆದರೆ ಆ ಶಿಷ್ಟಾಚಾರ್ಯಪರಂಪರೆಯು ಅಂಧಪರಂಪರೆಯಾಗಿದೆ. ಅದನ್ನು ಅನುಸರಿಸುವ ಅವಶ್ಯಕತೆಯೇ ಇಲ್ಲ. ಏಕೆಂದರೆ, ಮಂಗಳಾಚರಣೆ ಮಾಡಬೇಕೆನ್ನಲು ಯಾವುದೇ ಪ್ರಮಾಣವಿಲ್ಲ.

6. ನಾರಾಯಣಪ್ರಣಾಮವೇ ಅನಾವಶ್ಯಕ. ಗ್ರಂಥದಲ್ಲಿ ಅದರ ನಿವೇಶನವು ಸುತರಾಂ







ಅನಾವಶ್ಯಕ. ಆದ್ದರಿಂದ ಮೊದಲನೆಯ ಪದ್ಯಕ್ಕೆ ಯಾವುದೇ ರೀತಿಯಲ್ಲೂ ಕೂಡ ಸಂಗತಿಯು ಕೂಡುವುದಿಲ್ಲ.

ಈ ಎಲ್ಲ ಪ್ರಶ್ನೆಗಳಿಗೆ 'ಭಗವತಾ ಬಾದರಾಯಣೇನ' ಇತ್ಯಾದಿ ಟೀಕಾವಾಕ್ಯದಿಂದ ಉತ್ತರಿಸುತ್ತಿದ್ದಾರೆ.

## ಎಲ್ಲಾ ಬಗೆಯ ಆಕ್ಷೇಪಗಳಿಗೆ ಸಮಾಧಾನ

ವಾಕ್ಯಾರ್ಥಚಂದ್ರಿಕಾ – ಅತ್ರ ಜ್ಞಾನವೈರಾಗ್ಯೈಶ್ವರ್ಯಸಮರ್ಪಕಭಗವಚ್ಛಬ್ದೇನ ವಿವಕ್ಷಿತಾರ್ಥತತ್ತ್ವಜ್ಞಾನವಿವಕ್ಷಾಕರಣಪಾಟವಾನಾಂ ಲಾಭೇನ, 'ಪ್ರಾಣಿನಾಂ ನಿಃಶ್ರೇಯಸಾಯ' ಇತಿ ವಕ್ತೃಪ್ರೀತಿವಿಷಯತ್ವತತ್ತ್ವಜ್ಞಾನಯೋಗ್ಯತ್ವಲಾಭೇನ, ವಕ್ತ್ರಾನುಕೂಲ್ಯಶ್ರೋತ್ರಾನುಕೂಲ್ಯಯೋಃ ನಿಃಶ್ರೇಯ-ಸಾಯ ಪ್ರಣೀತಮ್ ಇತ್ಯನೇನೈವ ಪ್ರಸಂಗಾನುಕೂಲ್ಯಸ್ಯ ಚ ಸಿದ್ಧ್ಯಾ, ಆಪ್ತೋಕ್ತತಯಾऽಪ್ರಾಮಾಣ್ಯ ಶಂಕಾಯಾಃ ವೇದಾರ್ಥಭೂತಪರಬ್ರಹ್ಮನಿರ್ಣಾಯಕನ್ಯಾಯಗ್ರಥನಪರೇಣ ಬ್ರಹ್ಮಮೀಮಾಂಸಾಶಾಸ್ತ್ರಶಬ್ದೇನ ವೇದಾದಿ ಇತಿಕರ್ತವ್ಯತಾತ್ವಲಾಭೇನ ವಿಷಯಾದಿರಾಹಿತ್ಯಶಂಕಾಯಾಃ, ನಿಬಂಧೇತಿ ವ್ಯಾಖ್ಯಾನರೂಪನಿಬಂಧಪ್ರವೃತ್ತ್ಯುಕ್ತ್ಯಾ ದುರ್ಗಮಾರ್ಥತ್ವಾಭಾವಶಂಕಾಯಾಃ, ಏತದ್ ಗ್ರಂಥಯೋರ್ಭಾಷ್ಯಾನುಭಾಷ್ಯಶಬ್ದೌ ಪ್ರಯುಜ್ಯ ಯಥಾऽऽಚಾರ್ಯಾಭಿಪ್ರಾಯಮ್ ಇತಿ ತದರ್ಥಕಥನೇನಾನ್ಯತ್ರ ನಿತರಾಂ ಬಂಧಕತ್ವಾರ್ಥಕನಿಬಂಧಶಬ್ದಂ ಪ್ರಯುಜ್ಯ ಆಚಾರ್ಯಾಭಿಪ್ರಾಯಾನನುಸಾರಿತ್ವರೂಪಾಸಾಧುತ್ವೇನ ತದ್ವಿಶೇಷಣೇನ ಏತಯೋರನ್ಯೇನ ಗತಾರ್ಥತ್ವಶಂಕಾಯಾಃ, ಅವಿಗೀತಶಿಷ್ಟೇತ್ಯಂಧಪರಂಪರಾತ್ವಶಂಕಾಯಾಃ, 'ವಿಲೀನ' ಇತ್ಯಾದಿಕಾಯಕರಣವೃತ್ತಿರಪಿ ಶಿಷ್ಯಾನ್ ಗ್ರಾಹಯಿತುಮಿತ್ಯಂತೇನ ಭಾಷ್ಯಕಾರಸ್ಯ ಗ್ರಂಥಾರಂಭ ಏವ ಅಂತರಾಯವಿರಹೋದ್ದೇಶಕಕೃತ್ಯನುಪಪತ್ತಿಶಂಕಾಯಾಃ ಗ್ರಂಥನಿಬಂಧನಾನುಪಪತ್ತಿಶಂಕಾಯಾಶ್ಚ ಪರಿಹಾರೇಣ ಪದ್ಯಂ ಸಂಗತಮಿತಿ ದ್ರಷ್ಟವ್ಯಮ್ ॥

ಮೇಲಿನ ಪ್ರಶ್ನೆಗಳಿಗೆ ಉತ್ತರವನ್ನು ಹೀಗೆ ತಿಳಿಯಬೇಕು –

'ಭಗವತಾ ಬಾದರಾಯಣೇನ' ಎಂಬಲ್ಲಿರುವ ಭಗವಚ್ಛಬ್ದದಿಂದ ವಿವಕ್ಷಿತಾರ್ಥತತ್ತ್ವಜ್ಞಾನ, ವಿವಕ್ಷಾ, ಕರಣಪಾಟವಗಳು ಇವೆ ಎಂದು ಸಿದ್ಧವಾಗುತ್ತದೆ. ಹೇಗೆಂದರೆ ಭಗವತ್ ಶಬ್ದಕ್ಕೆ ಒಟ್ಟು ಆರು ಅರ್ಥಗಳು. ಅವುಗಳಲ್ಲಿ ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಿಂದ ಈ ಮೂರು ಲಾಭವಾಗುತ್ತವೆ. ಜ್ಞಾನದಿಂದ ತತ್ತ್ವಜ್ಞಾನವು, ವೈರಾಗ್ಯದಿಂದ ವಿವಕ್ಷೆಯು, ಐಶ್ವರ್ಯದಿಂದ ಕರಣಪಾಟವಗಳು ತಿಳಿಯು-





ತ್ರವೆ. ಏಕೆಂದರೆ, ಪರಪ್ರಯೋಜನೋದ್ದೇಶದಿಂದ ವಿವಕ್ಷೆಯು ಬರಬೇಕೆಂದರೆ ಮೊದಲು ತಮ್ಮಲ್ಲೇ ವೈರಾಗ್ಯವು ಇರಬೇಕು. ಇಲ್ಲದಿದ್ದರೆ ಪರಪ್ರಯೋಜನದ ಉದ್ದೇಶ ಬರುವುದಿಲ್ಲ. ಐಶ್ವರ್ಯ ಎಂದರೆ ಈಶ್ವರತ್ವ ಎಂದರ್ಥ. ಈಶ್ವರತ್ವ ಬರಬೇಕೆಂದರೆ ಕರಣಪಾಟವವು ಇರಲೇ ಬೇಕು.

'ಪ್ರಾಣಿನಾಂ ನಿಃಶ್ರೇಯಸಾಯ' ಎಂದು ಹೇಳಿದ್ದರಿಂದ ವಕ್ತೃಪ್ರೀತಿವಿಷಯತ್ವ ಹಾಗೂ ತತ್ವಜ್ಞಾನ -ಯೋಗ್ಯತ್ವವು ತಿಳಿಯಲ್ಪಡುತ್ತದೆ. ಹೀಗೆ ಭಗವತಾ ಎಂಬುದರಿಂದ ವಕ್ತ್ರಾನುಕೂಲ್ಯ ಹಾಗೂ ಪ್ರಾಣಿನಾಂ ನಿಃಶ್ರೇಯಸಾಯ ಎಂಬುದರಿಂದ ಶ್ರೋತ್ರಾನುಕೂಲ್ಯವನ್ನು ತಿಳಿಸಿದಂತಾಯಿತು. 'ನಿಃಶ್ರೇಯಸಾಯ ಪ್ರಣೀತಂ' ಎಂಬುದರಿಂದ ಪ್ರಸಂಗಾನುಕೂಲ್ಯವನ್ನು ತಿಳಿಸಿದಂತಾಯಿತು. ಹೀಗೆ ಮೂರು ಬಗೆಯ ಆನು-ಕೂಲ್ಯಗಳು ಇರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಆಪ್ತೋಕ್ತತ್ವವು ಸಿದ್ಧವಾಯಿತು.

ಆಪ್ತೋಕ್ತವಾದ್ದರಿಂದ ಅಪ್ರಾಮಾಣ್ಯಶಂಕೆಯು ಪರಿಹಾರವಾಗುತ್ತದೆ.

ಬ್ರಹ್ಮ ಎಂಬ ಪದಕ್ಕೆ ಪರಬ್ರಹ್ಮಪರವಾದ ಯಾವ ವೇದವಿದೆಯೋ ತದರ್ಥನಿರ್ಣಾಯಕವಾದ ನ್ಯಾಯಗ್ರಥನಾತ್ಮಕವಾದದ್ದು ಈ ಬ್ರಹ್ಮಮೀಮಾಂಸಾಶಾಸ್ತ್ರವಾಗಿದೆ. ವೇದಾದಿಗಳಿಗೆ ಬ್ರಹ್ಮಮೀಮಾಂಸಾ-ಶಾಸ್ತ್ರವು ಇತಿಕರ್ತವ್ಯತಾರೂಪವಾಗಿದೆ ಎಂದು ಸಿದ್ಧವಾಯಿತು. ಆಗ ವೇದಕ್ಕೆ ಯಾವುದು ವಿಷಯಾದಿ-ಗಳಾಗಿವೆಯೋ ಅದೇ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೂ ಕೂಡ ವಿಷಯಗಳಾಗಿವೆ. ಇದರಿಂದ ಗ್ರಂಥದಲ್ಲಿ ವಿಷಯಾದಿಗಳು ಇಲ್ಲವೆಂಬ ಆಶಂಕೆಯು ಪರಿಹಾರವಾಗುತ್ತದೆ.

'ಅಸಾಧುನಿಬಂಧಾಂಧತಮಸಾ' ಎಂಬ ಪದಪ್ರಯೋಗದಿಂದ ದುರ್ಗಮಾರ್ಥತ್ವ ಶಂಕೆಯನ್ನು ಪರಿಹರಿಸಿದಂತಾಯಿತು. ಅದು ಹೀಗೆ – ನಿಬಂಧ ಎಂಬ ಪದಕ್ಕೆ ವ್ಯಾಖ್ಯಾನ ಎಂದರ್ಥ. ಬ್ರಹ್ಮಸೂತ್ರಕ್ಕೆ ಬೇಕಾದಷ್ಟು ವ್ಯಾಖ್ಯಾನಗಳಿವೆ. ಅವೆಲ್ಲವೂ ಕೂಡ ಅಸಾಧುವಾಗಿವೆ. ಅಂಥ ಅಸಾಧುವಾದ ವ್ಯಾಖ್ಯಾನ-ಗಳು ಕತ್ತಲಂತಿವೆ ಎಂದು ಹೇಳಿದ್ದರಿಂದ ಬ್ರಹ್ಮಸೂತ್ರಗಳಿಗೆ ಬೇಕಾದಷ್ಟು ವ್ಯಾಖ್ಯಾನಗಳಿವೆ ಎಂದು ತಿಳಿಸಿ-ದಂತಾಯಿತು. ದುರ್ಗಮಾರ್ಥವಾಗದಿದ್ದರೆ ಅಷ್ಟೊಂದು ಮಂದಿ ವ್ಯಾಖ್ಯಾನ ಮಾಡಲು ಪ್ರವೃತ್ತಿಯನ್ನೇ ಮಾಡುತ್ತಿರಲಿಲ್ಲ. ಕೆಟ್ಟ ವ್ಯಾಖ್ಯಾನವಾಗಲೀ ಅಥವಾ ಒಳ್ಳೆಯ ವ್ಯಾಖ್ಯಾನವಾಗಲಿ ಇಷ್ಟೊಂದು ವ್ಯಾಖ್ಯಾನಗಳು ಜಗತ್ತಿನಲ್ಲಿ ಹರಡಿರಬೇಕಾದರೆ ಬ್ರಹ್ಮಸೂತ್ರಗಳಿಗೆ ದುರ್ಗಮಾರ್ಥತ್ವವು ಅರ್ಥಾತ್ ಸಿದ್ಧವಾಯಿತು.

ಶಂಕರಭಾಷ್ಯಾದಿಗಳಿರುವಾಗ ಈ ಅನುವ್ಯಾಖ್ಯಾನವು ಗತಾರ್ಥವಲ್ಲವೇ? ಎಂಬ ಆಶಂಕೆಯನ್ನು ಹಿಂದೆ ಮಾಡಲಾಗಿತ್ತು. ಈ ಆಶಂಕೆಯು 'ಯಥಾಽಽಚಾರ್ಯಾಭಿಪ್ರಾಯಂ ತದರ್ಥಕಥನೇನ'





ಎಂಬುದರಿಂದ ಪರಿಹಾರವಾಯಿತು. ಅದು ಹೀಗೆ – ಶಂಕರಭಾಷ್ಯಾದಿಗಳನ್ನು ಟೀಕೆಯಲ್ಲಿ ನಿಬಂಧ ಎಂಬ ಶಬ್ದದಿಂದ ಕರೆದಿದ್ದಾರೆ. 'ನಿಬಂಧ' ಎಂಬ ಶಬ್ದಕ್ಕೆ 'ನಿತರಾಂ ಬಧ್ನಾತೀತಿ' ಎಂಬ ನಿಷ್ಪತ್ತಿಯಿಂದ ನಮ್ಮನ್ನು ಚೆನ್ನಾಗಿ ಬಂಧನ ಮಾಡುತ್ತದೆ ಹೊರತು ಮೋಚನೆ ಮಾಡುವುದಿಲ್ಲ ಎಂಬರ್ಥವು ತಿಳಿಯುತ್ತದೆ. ಇಂಥ ನಿಬಂಧಶಬ್ದದಲ್ಲಿ ಅಸಾಧುತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ವ್ಯಾಖ್ಯೇಯಗ್ರಂಥಕಾರರ ಅಭಿಪ್ರಾಯಕ್ಕೆ ಅನುಸಾರಿಯೂ ಕೂಡ ಆಗಿರುವುದಿಲ್ಲ ಎಂದು ತಿಳಿಸಿದರು. ಹೀಗೆ ಹೇಳಿದ್ದರಿಂದ ಅವರ ಭಾಷ್ಯದಿಂದ ನಿಮ್ಮ ಭಾಷ್ಯವು ಗತಾರ್ಥವಾಯಿತು ಎಂಬ ಶಂಕೆಯು ಪರಿಹಾರವಾಯಿತು. ಈ ಎರಡು ಗ್ರಂಥಗಳಿಗೆ ಭಾಷ್ಯ ಹಾಗೂ ಅನುಭಾಷ್ಯ ಎಂಬ ಶಬ್ದಪ್ರಯೋಗ ಮಾಡಿ, ಯಥಾಚಾರ್ಯಾಽಽಭಿಪ್ರಾಯಂ ಎಂಬುದಾಗಿ ಅದರ ಅರ್ಥವನ್ನು ವಿವರಣೆ ಮಾಡಿದ್ದರಿಂದ ಮತ್ತು ಬೇರೆ ಭಾಷ್ಯಗಳಲ್ಲಿ ನಿಬಂಧ ಎಂಬ ಶಬ್ದವನ್ನು ಪ್ರಯೋಗ ಮಾಡಿ ಅವುಗಳಲ್ಲಿ ಅಸಾಧುತ್ವವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಭಾಷ್ಯ ಹಾಗೂ ಅನುಭಾಷ್ಯಗಳಿಗೆ ಶಂಕರಭಾಷ್ಯಾದಿಗಳಿಂದ ಗತಾರ್ಥತ್ವಶಂಕೆಯನ್ನು ಪರಿಹಾರ ಮಾಡಿದಂತಾಯಿತು.

'ಅವಿಗೀತಶಿಷ್ಟಾಚಾರಪರಂಪರಾದಿನಾ' ಎಂಬ ವಿಶೇಷಣದಿಂದ ಈ ಮಂಗಳಾಚರಣೆಯು ಅಂಧ-ಪರಂಪರೆಯಾಗಿದೆ ಎಂಬ ಆಶಂಕೆಯನ್ನು ಪರಿಹರಿಸಿದ್ದಾರೆ.

'ವಿಲೀನಪ್ರಕೃತಿತಯಾ' ಎಂಬಲ್ಲಿಂದ ಪ್ರಾರಂಭ ಮಾಡಿ 'ಕಾಯಕರಣವೃತ್ತಿರಪಿ ಶಿಷ್ಯಾನ್ ಗ್ರಾಹಯಿತುಂ' ಎಂಬಲ್ಲಿಯ ತನಕದ ಪದಗಳ ವಿನ್ಯಾಸದಿಂದ ಭಾಷ್ಯಕಾರರು ಗ್ರಂಥಾರಂಭದಲ್ಲಿಯೇ ಏಕೆ ಮಂಗಳಾಚರಣೆಯನ್ನು ಮಾಡಿದ್ದಾರೆಂಬ ಆಶಂಕೆಯನ್ನು ಪರಿಹರಿಸಿದ್ದಾರೆ. ಮತ್ತು ವಿಘ್ನಗಳಿಲ್ಲದಿದ್ದರೂ ಮಂಗಳಾಚರಣೆಯನ್ನು ಮಾಡಿದ್ದು ವ್ಯರ್ಥ ಎಂಬ ಅನುಪಪತ್ತಿಶಂಕೆಯನ್ನು ಪರಿಹರಿಸಿದ್ದಾರೆ. ಗ್ರಂಥದಲ್ಲಿ ಮಾಡಿದ ಮಂಗಳಾಚರಣೆಯ ನಿಬಂಧನದ ಅವಶ್ಯಕತೆ ಇಲ್ಲ ಎಂಬ ಶಂಕೆಯನ್ನು ಕೂಡ ಪರಿಹರಿಸಿದ್ದಾರೆ.

ಸನ್ನಿಹಿತಶಿಷ್ಯರಿಗೆ ತಮ್ಮ ಚೇಷ್ಟೆಯಿಂದಲೇ ಮಂಗಳಾಚರಣೆಯನ್ನು ಮಾಡಬೇಕೆಂದು ತಿಳಿಸಿದ್ದಾರೆ. ಅಸನ್ನಿಹಿತ ಶಿಷ್ಯರಿಗೆ ನಿಬಂಧದ ಮೂಲಕ ಮಂಗಳಾಚರಣೆಯು ಅವಶ್ಯಕವೆಂದು ತಿಳಿಸಿದ್ದಾರೆ. ಆದ್ದರಿಂದ ಈ ಮಂಗಳಾಚರಣೆ ಪದ್ಯವು ಅತ್ಯಂತ ಸಂಗತವಾಗಿದೆ.

* * * * *





## ರಸಘಟ್ಟ

## ಈ ಅನುವ್ಯಾಖ್ಯಾನವೇಕೆ?

ಕಾಶೀಟಿಪ್ಪಣೀ– ನನು ಶಾಸ್ತ್ರಮೇವೇದಮ್ ಅನುಪಾದೇಯಮ್ ಅನವಧೃತ-ಪ್ರಾಮಾಣ್ಯಕತ್ವಾತ್ । ಉಪಾದೇಯತ್ವೇ ವಾ ಭಾಷ್ಯಾಂತರೈರೇವ ತದರ್ಥಾವಗಮಾತ್ ನ ಪುನರ್ವ್ಯಾಖ್ಯೇಯಮ್ । ತಥಾತ್ವೇ ವಾ ಭಾಷ್ಯೇಣ ಏವಾಲಮ್, ಕೃತಮನುಭಾಷ್ಯೇಣ । ಅಸ್ತು ವಾ ತದಪಿ । ತದಾದೌ ವಿಶಿಷ್ಟಮಂಗಲಾಚರಣಂ ವ್ಯರ್ಥಮ್ । ತಸ್ಯ ವಿಘ್ನವಿಘಾತಾದಿಹೇತುತ್ವೇ ಮಾನಾ-ಭಾವಾತ್ । ತದ್ಭಾವೇಽಪಿ ಭಾಷ್ಯಕರ್ತುರವಿಘ್ನತ್ವಾತ್ । ಫಲಾಂತರಸ್ಯ ಚ ಭಗವತಿ ನಿತ್ಯಪ್ರಾವಣ್ಯೇ-ನೈವ ಉಪಪತ್ತೇಃ । ತನ್ನಿಬಂಧನಂ ತು ನಿತರಾಮ್ ಅನರ್ಥಕಮ್ ಇತ್ಯಾಶಂಕಾಂ ಪರಿಹರನ್ ಆದ್ಯಪದ್ಯಮ್ ಅವತಾರಯತಿ – ಭಗವತೇತ್ಯಾದಿ ॥

ಈ ಶಾಸ್ತ್ರವೇ ಅನುಪಾದೇಯವಾಗಿದೆ. ಏಕೆಂದರೆ ಇದರ ಪ್ರಾಮಾಣ್ಯವನ್ನು ನಿರ್ಧಾರ ಮಾಡಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ಉಪಾದೇಯವೆಂದು ಒಪ್ಪಿದರೂ ಬೇರೆ ಭಾಷ್ಯಕಾರರು ಬ್ರಹ್ಮ-ಮೀಮಾಂಸಾಶಾಸ್ತ್ರದ ಅರ್ಥವನ್ನು ತಿಳಿಸಿರುತ್ತಾರೆ. ನೀವು ಭಾಷ್ಯವನ್ನು ಬರೆಯುವ ಅವಶ್ಯಕತೆ ಇಲ್ಲ. ಒಂದು ವೇಳೆ ಅವರು ಬರೆದ ಭಾಷ್ಯವು ತಪ್ಪು. ನೀವೇ ಭಾಷ್ಯವನ್ನು ಬರೆಯಬೇಕೆಂದು ಒಪ್ಪುವು-ದಾದರೂ ಭಾಷ್ಯಮಾತ್ರ ಸಾಕು. ಅನುವ್ಯಾಖ್ಯಾನವನ್ನು ಬರೆಯುವ ಅವಶ್ಯಕತೆಯಿಲ್ಲ. ಪರವಾದಿನಿಗ್ರಹ-ಕ್ಕೋಸ್ಕರ ಅನುವ್ಯಾಖ್ಯಾನಗ್ರಂಥವು ಆವಶ್ಯಕ ಎಂದು ಹೇಳಿದರೆ ಹಾಗೆಯೇ ಒಪ್ಪೋಣ. ಆದರೆ ಅನುವ್ಯಾಖ್ಯಾನದ ಪ್ರಾರಂಭದಲ್ಲಿ ವಿಶಿಷ್ಟವಾದ ಮಂಗಳಾಚರಣೆಯನ್ನು ಮಾಡಿದ್ದು ವ್ಯರ್ಥ. ಏಕೆಂದರೆ ಈ ಮಂಗಳಾಚರಣೆಗೆ ವಿಘ್ನವಿಘಾತಾದಿಪ್ರಯೋಜನಗಳು ಇವೆ ಎಂದು ಒಪ್ಪಲು ಪ್ರಮಾಣವಿಲ್ಲ. ಒಂದು ವೇಳೆ ಪ್ರಯೋಜನವಿದೆಯೆಂದು ಹೇಳಿದರೂ ಭಾಷ್ಯಕಾರರಿಗೆ ಯಾವುದೇ ವಿಘ್ನಗಳು ಇರುವುದಿಲ್ಲ. ಬೇರೆ ಫಲಗಳು ಈ ಮಂಗಳದಿಂದ ಸಿಗುವ ಅವಶ್ಯಕತೆಯಿಲ್ಲ; ನಿತ್ಯಾಪರೋಕ್ಷಿಗಳಾಗಿರುವುದರಿಂದ ನೇರವಾಗಿ ಭಗವಂತನಿಂದಲೇ ಆ ಫಲಗಳು ಅವರಿಗೆ ದೊರೆಯುತ್ತವೆ. ಅಥವಾ ಗ್ರಂಥಾರಂಭದಲ್ಲಿ ಮಂಗಳವು ಆವಶ್ಯಕವೆಂದು ಒಪ್ಪೋಣ. ಆದರೂ ಕೂಡ ಗ್ರಂಥಾರಂಭದಲ್ಲಿ ಅದರ ನಿಬಂಧನೆಯು ಅನರ್ಥಕವಾಗಿದೆ. ಈ ಎಲ್ಲಾ ಆಶಂಕೆಗಳಿಗೆ ಪರಿಹಾರವನ್ನು ಹೇಳುವ ಮೂಲಕ ಅನುವ್ಯಾಖ್ಯಾನದ ಮೊದಲ ಪದ್ಯಕ್ಕೆ ಅವತಾರಿಕೆಯನ್ನು ನೀಡಲು 'ಭಗವತಾ' ಇತ್ಯಾದಿಯಾಗಿ ಪ್ರಸ್ತಾವನೆ ಮಾಡುತ್ತಿದ್ದಾರೆ.





## ಅನುವ್ಯಾಖ್ಯಾನದಲ್ಲಿ ಮಂಗಳಾಚರಣೆ ಏಕೆ?

ಯಾದುಪತ್ಯ – ನನ್ವಸ್ತು ನಿಬಂಧಃ ಶಿಷ್ಯಾನ್ ಗ್ರಾಹಯಿತುಂ, ಕಿಂತು ಗ್ರಂಥಾರಂಭಸಮಯೇ ಕೃತಸ್ಯೈವ ನಾರಾಯಣಪ್ರಣಾಮಸ್ಯ ಅಕೃತಸ್ಯ 'ನಮಾಮಿ' ಇತ್ಯಾದಿರೂಪೇಣ ನಿವೇಶನೇ ಪ್ರತಾರಕತ್ವಪ್ರಸಂಗಾತ್ । ನ ಚ ತತ್ಕರಣಮತ್ರ ಸಂಭವತಿ, ಆನಂದತೀರ್ಥಮುನೇಃ ವಿಲೀನಪ್ರಕೃತಿತಯಾ ಜೀವನ್ಮುಕ್ತತ್ವೇನ ಸ್ವತ ವಿವಾಂತರಾಯವಿಧುರತ್ವೇನ ತತ್ಕರಣೇ ಉಕ್ತಪ್ರಯೋಜನಾಭಾವಾತ್ । ನ ಚ 'ಪರಮಾಸ್ತಿಕಸ್ವಭಾವವತ್ತ್ವಾತ್ ತತ್ಕರಣಮ್' ಇತಿ ವಾಚ್ಯಮ್, ತೇನ ಅನವರತಮ್ ಈಶ್ವರಪ್ರವಣಕಾಯಕರಣವೃತ್ತಿತ್ವಸ್ಯೈವ ಲಾಭೇನ ಆರಂಭಸಮಯೇ ವಿಶೇಷೇಣ ತತ್ಕರಣಾಲಾಭಾತ್ ಇತ್ಯಾಶಂಕ್ಯ , ಆಹ – ವಿಲೀನಪ್ರಕೃತಿತಯಾ ಇತಿ ॥

ಮಂಗಳದ ನಿಬಂಧನೆಯನ್ನು ಶಿಷ್ಯರ ಶಿಕ್ಷಣೆಗೋಸ್ಕರ ಮಾಡಬೇಕೆಂಬುದನ್ನು ಒಪ್ಪೋಣ. ಗ್ರಂಥಾರಂಭದ ಸಂದರ್ಭದಲ್ಲಿ ಯಾವ ನಾರಾಯಣ ಪ್ರಣಾಮವನ್ನು ಮಾಡಿರುತ್ತಾರೋ ಅದರ ನಿಬಂಧನೆಯೇ ಇದಾಗಿದೆ. ಒಂದು ವೇಳೆ ಗ್ರಂಥಾರಂಭದಲ್ಲಿ ಮಾಡಲ್ಪಡದ ನಾರಾಯಣಪ್ರಣಾಮವನ್ನು 'ನಮಾಮಿ' ಎಂದು ನಿಬಂಧನೆ ಮಾಡಿದರೆ ಪ್ರತಾರಕತ್ವದೋಷವು ಬರುತ್ತದೆ. ಆದರೆ ಶ್ರೀಮಧ್ವಾಚಾರ್ಯರು ಇಂಥ ನಿಬಂಧನೆಯನ್ನು ಮಾಡುವ ಅವಶ್ಯಕತೆ ಇಲ್ಲ. ಏಕೆಂದರೆ ಪ್ರಕೃತಿಯ ಬಂಧನದ ದೋಷವೇ ಇವರಿಗೆ ತಟ್ಟುವುದಿಲ್ಲವಾದ್ದರಿಂದ ಜೀವನ್ಮುಕ್ತರಾಗಿದ್ದಾರೆ. ಸ್ವತಃ ವಿಘ್ನವಿದೂರರು ಆಗಿದ್ದಾರೆ. ಹೀಗಿರುವಾಗ ಮಂಗಳವನ್ನು ಮಾಡುವುದರಿಂದ ಯಾವುದೇ ಪ್ರಯೋಜನವು ಇರುವುದಿಲ್ಲ. ಇನ್ನು ಪರಮಾಸ್ತಿಕರಾದ್ದರಿಂದ ಮಂಗಳವನ್ನು ಮಾಡಿದ್ದಾರೆ ಎನ್ನಬೇಕು. ಆದರೆ ನಿರಂತರ ಭಗವಂತನ ಆರಾಧನೆಗಾಗಿಯೇ ತಮ್ಮ ಶರೀರ ಇಂದ್ರಿಯಗಳನ್ನು ಮುಡುಪಾಗಿಟ್ಟಿದ್ದಾರೆ. ಹೀಗಿರುವಾಗ ಪ್ರಾರಂಭದಲ್ಲಿಯೇ ಮಂಗಳವನ್ನು ಆಚರಣೆ ಮಾಡಿದ್ದಾರೆಂದು ವಿಶೇಷವಾಗಿ ಹೇಳಲು ಬರುವುದಿಲ್ಲ. ಈ ಪ್ರಶ್ನೆಗೆ ಉತ್ತರಿಸಲು 'ವಿಲೀನಪ್ರಕೃತಿತಯಾ' ಇತ್ಯಾದಿ ವಾಕ್ಯಗಳು ಹೊರಟಿವೆ.

## ಸುಧಾಪರಿಮಳಸಾರ

ನ್ಯಾಯಸುಧಾಗ್ರಂಥವು ಪ್ರಾರಂಭವಾಗುತ್ತಿದೆ. ''ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬ ಅನುವ್ಯಾಖ್ಯಾನಶ್ಲೋಕಕ್ಕೆ ಪೀಠಿಕೆಯನ್ನು ನೀಡುತ್ತಿದೆ. ಬ್ರಹ್ಮಮೀಮಾಂಸಾಶಾಸ್ತ್ರವು ತತ್ತ್ವಜ್ಞಾನವನ್ನು ನೀಡುವುದರಲ್ಲಿ ಸೂರ್ಯನಂತೆ ಇದೆ. ಆದರೆ ದುಷ್ಟರ ಭಾಷ್ಯಗಳಿಂದ ಮುಚ್ಚಿಹೋಗಿದೆ. ಅವರ ಭಾಷ್ಯಗಳಿಂದ ಪ್ರಾಪ್ತವಾದ ಸಂಶಯ ಹಾಗೂ ವಿಪರೀತಜ್ಞಾನಗಳನ್ನು





ಪರಿಹರಿಸಿ ನಿಜವಾದ ಅರ್ಥವನ್ನು ತಿಳಿಸಿದಾಗ ಪುನಃ ಆ ಬ್ರಹ್ಮಮೀಮಾಂಸಾಶಾಸ್ತ್ರವೆಂಬ ಸೂರ್ಯೋದಯವಾಗುತ್ತದೆ. ಅದಕ್ಕಾಗಿ ಶ್ರೀಮಧ್ವಾಚಾರ್ಯರು ಯಥಾರ್ಥವಾದ ವ್ಯಾಖ್ಯಾನ-ರೂಪವಾಗಿ ಅನುವ್ಯಾಖ್ಯಾನ ಎಂಬ ಗ್ರಂಥವನ್ನು ರಚನೆ ಮಾಡುತ್ತಿದ್ದಾರೆ. ಮೊದಲು ಮಂಗಳಾಚರಣೆಯು ಶಿಷ್ಟಾಚಾರಪರಂಪರಾಪ್ರಾಪ್ತವಾಗಿರುವುದರಿಂದ ತನಗಿಷ್ಟವಾದ ನಾರಾಯಣನನ್ನು ಭಕ್ತಿಯಿಂದ ನಮಸ್ಕಾರ ಮಾಡುತ್ತಿದ್ದಾರೆ.

* * * * * *

# ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಅನುವ್ಯಾಖ್ಯಾನ

## ಪ್ರಿಯತಮ ನಾರಾಯಣನಿಗೆ ಭಕ್ತಿಯ ನಮನ

**ಅನು– ನಾರಾಯಣಂ ನಿಖಿಲಪೂರ್ಣಗುಣೈಕದೇಹಂ**
**ನಿರ್ದೋಷಮಾಪ್ಯತಮಪ್ಯಖಿಲೈಃ ಸುವಾಕ್ಯೈಃ ।**
**ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ**
**ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ।।೧।।**

ನನ್ನ ಅಚ್ಚುಮೆಚ್ಚಿನ ಪ್ರಿಯತಮ ನಾರಾಯಣನೇ! ನಿನ್ನ ಆ ದೇಹ ಕೇವಲ ಗುಣಗಳಿಂದಲೇ ಕೂಡಿದೆ. ದೋಷಲೇಶವೂ ಇರುವುದಿಲ್ಲ. ನೀನು ಅಪೌರುಷೇಯವಾದ ವೇದರಾಶಿಗಳಿಂದ ತದನುಸಾರಿಯಾದ ಪೌರುಷೇಯ ಶಾಸ್ತ್ರಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿರುವಿ. ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಸಂಹಾರಾದಿಗಳಿಗೆ ಕಾರಣನಾಗಿರುವಿ. ಎಲ್ಲರಿಂದಲೂ ವಂದ್ಯರಾದ ಲಕ್ಷ್ಮೀಬ್ರಹ್ಮಾದಿಗಳಿಂದಲೂ ಕೂಡ ವಂದ್ಯನಾಗಿರುವಿ. ನಿನಗೆ ನಿರಂತರ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳು.

ಅನ್ವಯಾರ್ಥ – ನಿಖಿಲಪೂರ್ಣಗುಣೈಕದೇಹಂ = ಎಲ್ಲಾ ಗುಣಗಳಿಂದ ಪೂರ್ಣವಾದ ದೇಹವುಳ್ಳ ನಿರ್ದೋಷಂ = ದೋಷವಿಲ್ಲದ, ಅಖಿಲೈಃ ಸುವಾಕ್ಯೈಃ = ಎಲ್ಲ ಬಗೆಯ ಅಪೌರುಷೇಯ ತದನುಸಾರಿಯಾದ ಪೌರುಷೇಯಗ್ರಂಥಗಳಿಂದ, ಆಪ್ಯತಮಂ = ಮುಖ್ಯವಾಗಿ ಪ್ರತಿಪಾದ್ಯನಾಗಿರುವಿ. ಅಸ್ಯ = ಈ ಜಗತ್ತಿನ, ಉದ್ಭವಾದಿದಂ = ಸೃಷ್ಟಿಸ್ಥಿತಿಸಂಹಾರಾದಿಗಳನ್ನು ಮಾಡುವಿ, ಅಶೇಷವಿಶೇಷತೋಽಪಿ = ಲಕ್ಷ್ಮೀಬ್ರಹ್ಮಾದಿಗಳಿಂದಲೂ, ವಂದ್ಯಂ = ವಂದ್ಯನಾದ, ಮಮ = ನನಗೆ, ಪ್ರಿಯತಮಂ = ಪ್ರಿಯತಮನಾದ, ನಾರಾಯಣಂ = ನಾರಾಯಣನನ್ನು, ಸದಾ = ನಿರಂತರವಾಗಿ, ಸನ್ನಮಾಮಿ = ಭಕ್ತಿಯಿಂದ ಪ್ರಣಾಮ ಮಾಡುತ್ತೇನೆ.





ವಿಗ್ರಹವಾಕ್ಯ – ನಾರಾಯಣಂ – ಅರಾಯಣಃ ನ ಭವತೀತಿ ನಾರಾಯಣಃ ತಂ ನಾರಾಯಣಂ

ನಿಖಿಲಪೂರ್ಣಗುಣೈಕದೇಹಂ – ಪೂರ್ಣಾಶ್ಚ ತೇ ಗುಣಾಶ್ಚ ಪೂರ್ಣಗುಣಾಃ ನಿಖಿಲಾಶ್ಚ ತೇ ಪೂರ್ಣಗುಣಾಶ್ಚ ನಿಖಿಲಪೂರ್ಣಗುಣಾಃ, ನಿಖಿಲಪೂರ್ಣಗುಣಾಃ ಏವ ಏಕದೇಹಃ ಯಸ್ಯ ಸಃ ನಿಖಿಲಪೂರ್ಣಗುಣೈಕದೇಹಃ, ತಂ ನಿಖಿಲಪೂರ್ಣಗುಣೈಕದೇಹಂ

ನಿರ್ದೋಷಂ - ನಿರ್ಗತಃ ದೋಷಃ ಯಸ್ಯ ಸಃ ನಿರ್ದೋಷಃ ತಂ ನಿರ್ದೋಷಂ

ಉದ್ಭವಾದಿದಂ - ಉದ್ಭವಃ ಏವ ಆದಿಃ ಯಸ್ಯ ಸಃ ಉದ್ಭವಾದಿಃ, ಉದ್ಭವಾದಿಕಂ ದದಾತೀತಿ ಉದ್ಭವಾದಿದಃ ತಂ ಉದ್ಭವಾದಿದಂ

ಅಶೇಷವಿಶೇಷತಃ – ಅಶೇಷಾಶ್ಚ ತೇ ವಿಶೇಷಾಶ್ಚ ಅಶೇಷವಿಶೇಷಾಃ ತಸ್ಮಾತ್ ಅಶೇಷವಿಶೇಷತಃ

ವಂದ್ಯಂ – ವದಿ ಅಭಿವಾದನಸ್ತುತ್ಯೋಃ ಇತಿ ಧಾತೋಃ ಲ್ಯಬಂತಮವ್ಯಯಮ್

ಪ್ರಿಯತಮಂ - ಅತ್ಯಂತಂ ಪ್ರಿಯಃ ಪ್ರಿಯತಮಃ ತಂ ಪ್ರಿಯತಮಂ

ಸನ್ನಮಾಮಿ - ಸಮ್ ಇತ್ಯುಪಸರ್ಗಪೂರ್ವಕಾತ್ ಣಮು ಪ್ರಹ್ವತ್ವೇ ಶಬ್ದೇ ಚ ಇತಿ ಧಾತೋಃ ಲಟಿ ಉತ್ತಮಪುರುಷೇ ಏಕವಚನೇ ಸನ್ನಮಾಮಿ ಇತಿ ರೂಪಮ್ ।

* * * * *

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರ ಸಾಕ್ಷಾತ್ ಶಿಷ್ಯರಾದ
ಶ್ರೀಪದ್ಮನಾಭತೀರ್ಥಪೂಜ್ಯಚರಣಭಟ್ಟಾರಕರಿಂದ ವಿರಚಿತವಾದ ಅನುವ್ಯಾಖ್ಯಾನ ಟೀಕೆ

# ಸನ್ಯಾಯರತ್ನಾವಳಿ

## ಪರಮಪ್ರಿಯ ನಾರಾಯಣನಿಗೆ ನಮನ

**ಶ್ರೀಗುರುಭ್ಯೋ ನಮಃ ॥ ಹರಿಃ ಓಂ ॥**

**ನಾರಾಯಣಮಸಂಖ್ಯೇಯಕಲ್ಯಾಣಗುಣವಿಗ್ರಹಮ್ ।**

**ವಂದೇ ಭಕ್ತ್ಯಾ ಸದಾ ಧ್ವಸ್ತದೂಷಣಂ ಪರಮಪ್ರಿಯಮ್ ॥**

ಓ ಪರಮಪ್ರಿಯನಾದ ನಾರಾಯಣನೇ! ನಿನ್ನ ಕಲ್ಯಾಣಗುಣಗಳನ್ನು ಎಣಿಸಿ ಮುಗಿಸಲು ಸಾಧ್ಯವೇ ಇಲ್ಲ. ಇಂಥ ಗುಣಗಳೇ ಮೂರ್ತಿಮತ್ತಾದ ಸ್ವರೂಪನು ನೀನು. ಎಂದೆಂದಿಗೂ ದೋಷಗಳಿಲ್ಲದ ನಿನಗೆ ಭಕ್ತಿಯಿಂದ ನಮಿಸುವೆ.

## ವೇದವ್ಯಾಸರಿಗೆ ನಮನ

**ನಮೋ ಭಗವತೇ ತಸ್ಮೈ ವ್ಯಾಸರೂಪಾಯ ವಿಷ್ಣವೇ ।**

**ಯತ್ಪ್ರಸಾದಾತ್ ಪರಂ ಜ್ಞಾನಂ ಪ್ರಾಪ್ಯತೇ ವಿಬುಧಾದಿಭಿಃ ॥**

ಮಹಾವಿಷ್ಣುಸ್ವರೂಪರಾದ ಗುರು ವೇದವ್ಯಾಸರೇ! ಚತುರ್ಮುಖಬ್ರಹ್ಮಾದಿದೇವತೆಗಳೂ ಕೂಡ ಯಾವ ನಿಮ್ಮ ಪ್ರಸಾದದಿಂದಲೇ ಪರತತ್ವಜ್ಞಾನವನ್ನು ಪಡೆಯುವರೋ ಅಂಥ ಷಡ್ಗುಣೈಶ್ವರ್ಯಸಂಪನ್ನರಾದ ನಿಮಗೆ ಭಕ್ತಿಯ ನಮನ.

## ಗುರುಮಧ್ವರಿಗೆ ನಮನ

**ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ ವಿದ್ಯಾದಿವಾಕರಾನ್ ।**

**ವಂದೇ ಕುದೃಷ್ಟಿದುರ್ಬೋಧವ್ಯಾಸಸಿದ್ಧಾಂತದೀಪಿಕಾನ್ ॥**

ಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೇ! ನಾನು ಪರವಾದಿಗಳ ಅಪವ್ಯಾಖ್ಯಾನ-ವೆಂಬ ಕುದೃಷ್ಟಿಯಿಂದ ವೇದವ್ಯಾಸರ ಸಿದ್ಧಾಂತವನ್ನು ತಿಳಿಯಲು ಅಸಮರ್ಥನಾಗಿದ್ದೆ. ಇಂಥ ಎನಗೆ ನಿಜವಾದ





ವೇದವ್ಯಾಸರ ಸಿದ್ಧಾಂತವನ್ನು ತಿಳಿಸಿಕೊಟ್ಟು ಉದ್ಧಾರ ಮಾಡಿದ ಎನ್ನ ಪಾಲಿನ ದಿವಾಕರರಾದ ತಮಗೆ ಎಂದೆಂದೂ ನಮನ.

## ಗ್ರಂಥಪ್ರತಿಜ್ಞೆ

**ತತ್ಕೃತಾಂ ಬ್ರಹ್ಮಸೂತ್ರಾಣಾಮನುವ್ಯಾಖ್ಯಾಂ ಯಥಾಮತಿ ।**
**ವಿವೃಣೋಮ್ಯರ್ಥಗಂಭೀರಾಂ ಹರಿತತ್ತ್ವಪ್ರಕಾಶಿಕಾಮ್ ॥**

ನನ್ನ ಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಬ್ರಹ್ಮಸೂತ್ರಗಳಿಗೆ ಅನುವ್ಯಾಖ್ಯಾನವೆಂಬ ಗ್ರಂಥವನ್ನು ಬರೆದಿರುವರು. ಇದು ಶ್ರೀಹರಿಯ ತತ್ತ್ವವನ್ನು ಇದಮಿತ್ಥಂ ಎಂದು ನಿರ್ಣಯಿಸುತ್ತದೆ. ಅತ್ಯಂತ ಗಂಭೀರವಾಗಿದೆ. ಈ ಅನುವ್ಯಾಖ್ಯಾನಗ್ರಂಥಕ್ಕೆ ನನ್ನ ಬುದ್ಧಿಗೆ ತೋಚಿದಷ್ಟು ಗುರುಗಳಿಂದ ತಿಳಿದ ವಿಷಯವನ್ನೇ ವ್ಯಾಖ್ಯಾನರೂಪದಲ್ಲಿ ತಿಳಿಸಲು ಪ್ರವೃತ್ತನಾಗಿದ್ದೇನೆ.

## ಶ್ರೀಮದಾಚಾರ್ಯರಿಂದ ಇಷ್ಟದೇವನ ನಮನ

**ಸನ್ನ್ಯಾಯರತ್ನಾವಳಿ– ಗ್ರಂಥಾದೌ ಶಿಷ್ಟಾಚಾರಾದಿಪ್ರಾಪ್ತಸ್ಯ ಮಂಗಳಾಚರಣರೂಪಸ್ಯ ಇಷ್ಟದೇವತಾ-ನಮಸ್ಕಾರಸ್ಯ ಪ್ರಾರಿಪ್ಸಿತಗ್ರಂಥಸಮಾಪ್ತಿಪ್ರಚಯಾದ್ಯರ್ಥತ್ವಾತ್ ಶಿಷ್ಟಜನಾಗ್ರಣೀಃ ಆಚಾರ್ಯಃ ಸ್ವೇಷ್ಟದೇವತಾಂ ಸನ್ನಮತಿ – ನಾರಾಯಣಮಿತಿ ॥**

ಯಾವುದೇ ಗ್ರಂಥದ ಪ್ರಾರಂಭದಲ್ಲಿ ಮಂಗಳವನ್ನು ಆಚರಣೆ ಮಾಡಬೇಕು. ಇದು ಶಿಷ್ಟಾಚಾರಪರಂಪರಾ-ಪ್ರಾಪ್ತವಾಗಿದೆ. ಮತ್ತು ಈ ಮಂಗಳಾಚರಣೆಯು ತಮಗೆ ಇಷ್ಟನಾದ ದೇವತಾನಮಸ್ಕಾರ ರೂಪವಾಗಿದೆ. ಇಂಥ ಮಂಗಳಾಚರಣೆಯನ್ನು ಮಾಡುವುದರಿಂದ ಯಾವ ಗ್ರಂಥವನ್ನು ರಚನೆ ಮಾಡಲು ಅಪೇಕ್ಷಿತವಾಗಿರುತ್ತದೋ ಆ ಗ್ರಂಥವು ವಿಘ್ನವಿಲ್ಲದೇ ಕೊನೆಗಾಣುತ್ತದೆ. ಆ ಗ್ರಂಥಕ್ಕೆ ಕೀರ್ತಿ ಮೊದಲಾದವುಗಳು ಪ್ರಾಪ್ತವಾಗುತ್ತವೆ. ಹೀಗೆ ಅನೇಕ ಪ್ರಯೋಜನಗಳಿರುವುದರಿಂದ ಶಿಷ್ಟಜನರಲ್ಲೇ ಶ್ರೇಷ್ಠರಾದ ಶ್ರೀಮದಾಚಾರ್ಯರು ತಮ್ಮ ಇಷ್ಟದೇವನನ್ನು ಭಕ್ತಿಯಿಂದ ನಮಿಸುತ್ತಿದ್ದಾರೆ – 'ನಾರಾಯಣಮ್' ಇತ್ಯಾದಿಯಾಗಿ.

## ಅನುವ್ಯಾಖ್ಯಾನಮಂಗಳಶ್ಲೋಕಕ್ಕೆ ಮೊದಲನೆಯ ವ್ಯಾಖ್ಯಾನ

**ಸನ್ನ್ಯಾಯರತ್ನಾವಳಿ– ನಾರಾಯಣಸ್ಯ ಸಮ್ಯಕ್ತ್ವೋಪಪಾದಕಂ – 'ನಿಖಿಲ' ಇತ್ಯಾದಿ ॥ ಗುಣವತ್ತ್ವೇ-ಽಪಿ ಚೇತನತ್ವೇನ ಹಿರಣ್ಯಗರ್ಭಾದಿವದ್ ದೋಷವತ್ತ್ವಂ ಮಾ ಭೂದಿತ್ಯುಕ್ತಮ್ – ನಿರ್ದೋಷ-**





**ಮಿತಿ ॥ ಏವಂಭೂತತ್ವಾದೇವ 'ಅಖಿಲೈಃ ಸುವಾಕ್ಯೈಃ ಜ್ಞಾನದ್ವಾರಾऽತಿಶಯೇನ ಪ್ರಾಪ್ಯಮ್ । ನಿಖಿಲಪೂರ್ಣಗುಣೋಪಪಾದನಾಯ ಉಕ್ತಮ್ – ಅಸ್ಯೋದ್ಭವಾದಿದಮ್ ಇತಿ ॥ ವಿಶ್ವಸ್ಯ ಉದ್ಭವಾದಿದಾತಾರಮ್ ಇತ್ಯರ್ಥಃ । ಅತ ಏವ ವಂದ್ಯಮ್ । ಅಶೇಷಾದ್ ವಿಶಿಷ್ಟತ್ವಾದಪಿ ವಂದ್ಯಮ್ । ಯೋ ಹಿ ಜನನಾದಿಕರ್ತಾ ಯಶ್ಚ ಗುಣಾಧಿಕಃ ಸ ಹಿ ವಂದ್ಯೋ ಭವತಿ । ಅತ ಏವಂಭೂತತ್ವಾದೇವ ಪ್ರಿಯೇಭ್ಯಃ ಸ್ವಾತ್ಮಾದಿಭ್ಯಃ ಅತಿಶಯೇನ ಪ್ರಿಯಮ್ । ತೇಷಾಂ ಪ್ರಿಯತ್ವಾಪಾದಕತ್ವಾತ್ । ಇತರೇಷಾಂ ಪ್ರಾಯಃ ತಥಾऽನುಭೂತ್ಯಭಾವಾತ್ ಮಮ ಇತ್ಯುಕ್ತಮ್ । ಸಮ್ ಇತಿ ಶ್ರದ್ಧಾಭಕ್ತ್ಯತಿಶಯಪೂರ್ವಕತ್ವಮಾಹ ನಮಸ್ಕಾರಸ್ಯ ।**

ನಾರಾಯಣನೇ ನಮಸ್ಕಾರಮಾಡಿಸಿಕೊಳ್ಳಲು ಅತ್ಯಂತಯೋಗ್ಯನಾಗಿದ್ದಾನೆ. ಈ ವಿಷಯವನ್ನು ಉಪಪಾದನೆ ಮಾಡಲು 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳನ್ನು ಹೇಳಿರುತ್ತಾರೆ.

ನಾರಾಯಣನು ಗುಣಗಳುಳ್ಳವನಾಗಿದ್ದಾನೆಂಬುದು ಸರಿ. ಆದರೆ ಚೇತನನಾಗಿರುವುದರಿಂದ ಹಿರಣ್ಯಗರ್ಭಾದಿಗಳಂತೆ ಅಸ್ವಾತಂತ್ರ್ಯಾದಿ ದೋಷವುಳ್ಳವನೂ ಕೂಡ ಆಗಬಹುದಲ್ಲವೇ? ಈ ಆಶಂಕೆಯನ್ನು ನಿರಾಕರಣೆ ಮಾಡುವುದಕ್ಕಾಗಿ 'ನಿರ್ದೋಷಂ' ಎಂಬ ವಿಶೇಷಣವನ್ನು ಹೇಳಿದ್ದಾರೆ. ಪಾರತಂತ್ರ್ಯವೇ ಮೊದಲಾದ ಯಾವ ದೋಷಗಳೂ ಇವನಲ್ಲಿ ಇರುವುದಿಲ್ಲ ಎಂಬುದು ಇದರ ಅಭಿಪ್ರಾಯ.

ಹೀಗೆ ನಾರಾಯಣನು ಸಮಸ್ತದೋಷರಹಿತನಾಗಿರುವುದರಿಂದ ಮತ್ತು ಅನಂತಕಲ್ಯಾಣಗುಣಪರಿಪೂರ್ಣನಾಗಿರುವುದರಿಂದಲೇ ಸದಾಗಮಗಳಿಂದ ಜ್ಞಾನದ ಮುಖಾಂತರ ಸರ್ವೋತ್ತಮನೆಂದು ನಂಬಲು ಯೋಗ್ಯನಾಗಿದ್ದಾನೆ.

ನಾರಾಯಣನಲ್ಲಿ ಸಕಲಗುಣಪರಿಪೂರ್ಣತ್ವವನ್ನು ಉಪಪಾದನೆ ಮಾಡುವುದಕ್ಕಾಗಿ 'ಅಸ್ಯೋದ್ಭವಾದಿದಂ' ಎಂಬ ವಿಶೇಷಣವನ್ನು ಹೇಳಿದ್ದಾರೆ. ಸಮಸ್ತಜಗತ್ತಿಗೆ ಉತ್ಪತ್ತ್ಯಾದಿಗಳನ್ನು ನೀಡುವವನು ಎಂಬುದು ಇದರ ಅರ್ಥ. ಆದ್ದರಿಂದಲೇ ವಂದ್ಯನಾಗಿದ್ದಾನೆ. ಸರ್ವೋತ್ತಮನಾಗಿರುವ ಕಾರಣದಿಂದಲೂ ಈ ನಾರಾಯಣನು ವಂದ್ಯನಾಗಿದ್ದಾನೆ. ಏಕೆಂದರೆ, ಯಾವ ವ್ಯಕ್ತಿಯು ಜನ್ಮಾದಿಗಳಿಗೆ ಕಾರಣನಾಗಿದ್ದಾನೋ, ತಮಗಿಂತ ಗುಣದಲ್ಲಿ ಅಧಿಕನಾಗಿದ್ದಾನೋ ಅವನೇ ವಂದ್ಯನಾಗುತ್ತಾನೆಂಬುದು ಲೋಕಸಿದ್ಧವಾದ ನಿಯಮ. ನಾರಾಯಣನು ಹೀಗೆ ಸಮಸ್ತ ಜಗತ್ತಿಗೆ ಜನ್ಮಕಾರಣನಾಗಿರುವುದರಿಂದ ಮತ್ತು ಗುಣಗಳಿಂದ ಅಧಿಕನಾಗಿರುವುದರಿಂದ ವಂದ್ಯನಾಗಿದ್ದಾನೆ. ಅಷ್ಟೇ ಅಲ್ಲದೇ ಈ ಕಾರಣದಿಂದಲೇ ಪ್ರಿಯರೆನಿಸಿದ ತಮಗಿಂತಲೂ ಅತಿಶಯವಾಗಿ ಪ್ರಿಯನಾಗಿದ್ದಾನೆ. ಬೇರೆ ಪದಾರ್ಥಗಳಲ್ಲಿ ಪ್ರಿಯತ್ವಾದಿಗಳನ್ನು ಹುಟ್ಟಿಸುವವನಾದ್ದರಿಂದಲೂ ಪ್ರಿಯನೆನಿಸಿದ್ದಾನೆ. ಉಳಿದವರಿಗೆ ಪರಮಪ್ರಿಯನೆಂಬ ಅನುಭವವು ಇರುವುದಿಲ್ಲ. ಆದ್ದರಿಂದ ಆಚಾರ್ಯರು 'ಮಮ' ಎಂದಿದ್ದಾರೆ. ಸನ್ನಮಾಮಿ ಎಂಬಲ್ಲಿರುವ 'ಸಮ್' ಎಂಬ ಉಪಸರ್ಗವು ಶ್ರದ್ಧಾತಿಶಯ ಭಕ್ತ್ಯತಿಶಯಗಳನ್ನು ನಮಸ್ಕಾರದಲ್ಲಿ ಸೂಚಿಸುತ್ತಿದೆ.





ವಿವರಣೆ – ಸದಾಗಮಗಳಲ್ಲಿ ಹೇಳಲ್ಪಟ್ಟ ನಾರಾಯಣನ ಸರ್ವೋತ್ತಮತ್ವ ಮೊದಲಾದ ತತ್ವಗಳ ಶ್ರವಣ ಮನನ ನಿಧಿಧ್ಯಾಸನರೂಪವಾದ ಸಾಧನೆಗಳಿಂದ ಅಪರೋಕ್ಷಜ್ಞಾನವು ಪ್ರಾಪ್ತವಾಗುತ್ತದೆ. ಈ ಕ್ರಮದಲ್ಲಿ ಭಕ್ತರಿಗೆ ನಾರಾಯಣನು ಹೊಂದಲು ಯೋಗ್ಯನಾಗಿದ್ದಾನೆಂದು ತಿಳಿಯಬೇಕು.

ನಾರಾಯಣನು ಸಕಲಗುಣಪರಿಪೂರ್ಣನಾಗಿದ್ದಾನೆಂಬುದನ್ನು ಸಮರ್ಥನೆ ಮಾಡುವುದಕ್ಕಾಗಿ 'ಅಸ್ಯೋದ್ಭವಾದಿದಂ' ಎಂದು ಹೇಳಿದ್ದಾರೆ. 'ಅಸ್ಯ' ಎಂಬುದಕ್ಕೆ ಲಕ್ಷ್ಮೀದೇವಿ ಚತುರ್ಮುಖಬ್ರಹ್ಮ ಇವರುಗಳೇ ಮೊದಲಾದವರುಗಳಿಂದ ಕೂಡಿದ ಸಮಸ್ತಜಗತ್ತು ಎಂದರ್ಥ. ಹೀಗೆ ರಮಾಬ್ರಹ್ಮಾದಿಗಳಿಗೂ ಕೂಡ ಉತ್ಪತ್ತ್ಯಾದಿಗಳನ್ನು ನೀಡಬೇಕಾದರೆ ಸಕಲಗುಣಪರಿಪೂರ್ಣನಾಗಿರಲೇ ಬೇಕು. ಇಲ್ಲಿ ರಮಾಬ್ರಹ್ಮಾದಿಗಳಿಗೆ ನೀಡುವ ಉತ್ಪತ್ತ್ಯಾದಿಗಳಲ್ಲಿ ವ್ಯತ್ಯಾಸವಿದೆ. ಒಬ್ಬೊಬ್ಬರಿಗೆ ಒಂದೊಂದು ರೀತಿಯಲ್ಲಿ ಉತ್ಪತ್ತ್ಯಾದಿಗಳಿರುತ್ತವೆ. ಈ ವಿಷಯವು ವಿಯದಧಿಕರಣದಲ್ಲಿ ಸ್ಪಷ್ಟವಾಗುತ್ತದೆ. ಹೀಗೆ ಈ ನಾರಾಯಣನು ಸಮಸ್ತವಿಶ್ವಕ್ಕೆ ಉತ್ಪತ್ತ್ಯಾದಿಗಳನ್ನು ನೀಡುವವನಾದ್ದರಿಂದ ಎಲ್ಲರಿಂದಲೂ ವಂದ್ಯನಾಗಿದ್ದಾನೆ. ಜನ್ಮಪ್ರದಾತೃವಿಗೆ ಗುಣದಲ್ಲಿ ಉತ್ತಮನಿಗೆ ನಮಿಸುವುದು ಲೋಕದಲ್ಲಿ ಕಂಡ ನಿಯಮ. ಸಮಸ್ತಜಗತ್ತಿಗೆ ಜನ್ಮದಾತೃ ಆಗಿರುವುದರಿಂದ ಗುಣಗಳಲ್ಲಿ ಆತ್ಯಧಿಕನಾಗಿರುವುದರಿಂದ ಅವನನ್ನೇ ನಮಿಸಬೇಕೆನ್ನುತ್ತಾರೆ.

ಯಾರಲ್ಲಿ ಪ್ರೀತಿಸಂಪಾದಕವಾದ ಶ್ರೇಷ್ಠಗುಣಗಳು ಇರುತ್ತವೋ ಅಂಥ ವ್ಯಕ್ತಿಯು ತನಗೆ ಪ್ರಿಯನಾಗುತ್ತಾನೆ. ಪರಮಾತ್ಮನು ಸಕಲರಿಗೂ ಕೂಡ ಸರ್ವರಿಗೂ ಕೂಡ ತಾನು ತನ್ನದು ಇತ್ಯಾದಿ ಯಾವ ಪ್ರಿಯವಾದ ವಸ್ತುಗಳಿವೆಯೋ ಅವುಗಳಿಗಿಂತಲೂ ಹೆಚ್ಚಿನ ಪ್ರಿಯಕರವಾದ ಗುಣಗಳಿಂದ ಕೂಡಿದ್ದಾನೆ. ಆದ್ದರಿಂದಲೇ ಭಕ್ತರಿಗೆ ಪ್ರಿಯನಾಗಿದ್ದಾನೆ. ಮತ್ತು ಭಕ್ತರಿಗೆ ಯಾವ ವಸ್ತುವು ಪ್ರಿಯವೋ ಆ ವಸ್ತುವಿನಲ್ಲಿ ಪ್ರಿಯತ್ವವನ್ನು ಹುಟ್ಟಿಸುವವನು ಈ ಪರಮಾತ್ಮನೇ ಆಗಿದ್ದಾನೆ. ಇದರಿಂದಲೂ ಕೂಡ ಭಕ್ತರಿಗೆ ಅತ್ಯಂತಪ್ರಿಯನಾಗಿದ್ದಾನೆ. ಉಳಿದೆಲ್ಲ ಭಕ್ತರಿಗೆ ಪರಮಾತ್ಮನು ಬೇರೆ ನಿಮಿತ್ತದಿಂದ ಅಥವಾ ಮೋಕ್ಷಕ್ಕಾಗಿ ಪ್ರೀತನಾಗಿದ್ದಾನೆ. ಆದರೆ ಶ್ರೀಮದಾಚಾರ್ಯರಿಗೆ ಮಾತ್ರ ನಿರಂತರವಾಗಿ ನಿರುಪಾಧಿಕವಾಗಿ ಪರಮಪ್ರೇಮಾಸ್ಪದನಾಗಿದ್ದಾನೆ. ಈ ಎಲ್ಲ ಭಕ್ತವರ್ಗದಲ್ಲಿ ವಾಯುದೇವರು ಅತ್ಯಂತ ಶ್ರೇಷ್ಠರು. ಇವರಿಗೆ ಪರಮಾತ್ಮನನ್ನು ಬಿಟ್ಟು ಬೇರೆ ಯಾವ ಪದಾರ್ಥವೂ ಪ್ರಿಯವಾಗಿರುವುದಿಲ್ಲ. ಬೇರೆ ಯಾವ ಪದಾರ್ಥವನ್ನಾಗಲೀ ಬೇರೆ ಯಾರೇ ವ್ಯಕ್ತಿಗಳನ್ನಾಗಲೀ ಇವರು ಬಯಸುವುದೇ ಇಲ್ಲ. ಇಂಥ ವಾಯುದೇವರ ಅವತಾರರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಗೆ ಮಾತ್ರ ಭಗವಂತನು ಸದಾ ಪ್ರಿಯತಮನಾಗಿದ್ದಾನೆ. ಆದ್ದರಿಂದಲೇ ಮಮ ಎಂಬುದಾಗಿ ಶ್ಲೋಕದಲ್ಲಿ ಹೇಳಿದ್ದಾರೆ. ಸನ್ನಮಾಮಿ ಎಂಬಲ್ಲಿರುವ 'ಸಮ್' ಎಂಬ ಉಪಸರ್ಗವು ತಾವು ಮಾಡುತ್ತಿರುವ ನಮಸ್ಕಾರವು ಉಳಿದೆಲ್ಲ ಭಕ್ತರುಗಳಿಗಿಂತ ಹೆಚ್ಚಿನ ಶ್ರದ್ಧೆ ಮತ್ತು ಭಕ್ತಿಗಳಿಂದ ಕೂಡಿದೆ ಎಂಬುದನ್ನು ತಿಳಿಸುತ್ತಿದೆ.





## ನಾಕು ಅಧ್ಯಾಯಗಳ ಸಾರಸಂಗ್ರಹವೆಂಬ ಎರಡನೆಯ ವ್ಯಾಖ್ಯಾನ

**ಸನ್ನ್ಯಾಯರತ್ನಾವಳೀ– ಅನೇನೈವ ಶ್ಲೋಕೇನ ಅಧ್ಯಾಯಚತುಷ್ಟಯಾರ್ಥಂ ಸೂಚಿತವಾನ್ । ನಿಖಿಲಪೂರ್ಣಗುಣೈಕದೇಹಮ್ ಇತಿ ಸಮನ್ವಯಂ ಸೂಚಯತಿ । ನಿರ್ದೋಷಮ್ ಇತ್ಯ-ವಿರೋಧಮ್ । ಅಖಿಲೈಃ ಸುವಾಕ್ಯೈಃ ಅಪ್ಯತಮಮ್ ಇತಿ ಸಾಧನಮ್ । 'ಅಸ್ಯೋದ್ಭವಾದಿದಮ್' ಇತಿ ಫಲಮ್ ।**

ಇದೇ ಮಂಗಳಶ್ಲೋಕದಿಂದ ನಾಕು ಅಧ್ಯಾಯಗಳ ಅರ್ಥವನ್ನು ಸೂಚಿಸಿದ್ದಾರೆ. 'ನಿಖಿಲಪೂರ್ಣಗುಣೈಕ-ದೇಹಂ' ಎಂಬ ವಿಶೇಷಣವು ಸರ್ವಶಬ್ದಸಮನ್ವಯವನ್ನು, 'ನಿರ್ದೋಷಂ' ಎಂಬ ವಿಶೇಷಣವು ಅವಿರೋಧ-ವನ್ನೂ, 'ಅಖಿಲೈಃ ಸುವಾಕ್ಯೈಃ ಅಪ್ಯತಮಮ್' ಎಂಬುದನ್ನು ಮೋಕ್ಷಸಾಧನೆಯನ್ನು, 'ಅಸ್ಯೋದ್ಭವಾದಿದಂ' ಎಂಬುದು ಮೋಕ್ಷವೆಂಬ ಪ್ರಯೋಜನವನ್ನು ತಿಳಿಸುತ್ತಿದೆ.

ವಿವರಣೆ – ಈ ಮಂಗಳಶ್ಲೋಕದಿಂದ ಭಗವಂತನನ್ನು ಪ್ರಶಂಸೆ ಮಾಡಿ ನಮಸ್ಕಾರ ಮಾಡುವುದಷ್ಟೇ ಪ್ರಯೋಜನವಲ್ಲ. ಸಮಸ್ತ (ಬ್ರಹ್ಮಮೀಮಾಂಸಾ)ಶಾಸ್ತ್ರದ ಸಾರಸಂಗ್ರಹವನ್ನೂ ಇದರಿಂದಲೇ ಮಾಡಿದ್ದಾರೆ. ಅದು ಹೀಗೆ – ಮೊದಲನೆಯ ಅಧ್ಯಾಯವು ಸಮನ್ವಯಾಧ್ಯಾಯವಾಗಿದೆ. ಎಲ್ಲಾ ಬಗೆಯ ಶಬ್ದಗಳ ಸಮ-ನ್ವಯವನ್ನು ಇದರಲ್ಲಿ ಮಾಡುತ್ತಾರೆ. ತನ್ಮೂಲಕವಾಗಿ ಪರಮಾತ್ಮನು ಸಮಸ್ತಗುಣಪರಿಪೂರ್ಣನಾಗಿದ್ದಾನೆಂಬ ಪ್ರಮೇಯವು ಸಿದ್ಧವಾಗುತ್ತದೆ. ಪ್ರಕೃತ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಿಂದ ಸಮನ್ವಯಾಧ್ಯಾಯದಿಂದ ಸಾಧಿತವಾಗುವ ಪ್ರಮೇಯವನ್ನು ಸಂಗ್ರಹಿಸಿದಂತಾಯಿತು. ಸಮಸ್ತ ಪ್ರಥಮಾಧ್ಯಾಯದ ಸಾರವನ್ನು ಹೇಳಿದಂತಾಯಿತು.

ಎರಡನೆಯದು ಅವಿರೋಧಾಧ್ಯಾಯ. ಪರಮಾತ್ಮನ ಗುಣಪರಿಪೂರ್ಣತ್ವದ ವಿಷಯದಲ್ಲಿ ಯಾವುದೇ ವಿರೋಧವು ಬರುವುದಿಲ್ಲವೆಂಬುದು ಈ ಅಧ್ಯಾಯದ ಪ್ರಮೇಯ. ಇದನ್ನು 'ನಿರ್ದೋಷಂ' ಎಂಬ ವಿಶೇಷಣದಿಂದ ಸಮರ್ಥನೆ ಮಾಡಿದ್ದಾರೆ.

ಮೂರನೆಯದ್ದು ಸಾಧನಾಧ್ಯಾಯ. ಮೋಕ್ಷಸಾಧನೆಗಳು ಯಾವುವು? ಹೇಗೆ ಅನುಷ್ಠಾನ ಮಾಡಬೇಕು? ಇತ್ಯಾದಿ ವಿಷಯಗಳು ಈ ಅಧ್ಯಾಯದಲ್ಲಿವೆ. ಭಗವತ್ತತ್ವವನ್ನು ಪ್ರತಿಪಾದನೆ ಮಾಡುವ ವೇದಶಾಸ್ತ್ರಾದಿಗಳ ಶ್ರವಣಾದಿಗಳಲ್ಲಿ ತೊಡಗಬೇಕು. ತನ್ಮೂಲಕ ಭಕ್ತಿ, ಉಪಾಸನೆಗಳಿಂದ ಅಪರೋಕ್ಷವನ್ನು ಪಡೆಯಬೇಕು ಎಂಬುದಾಗಿ ಹೇಳಿರುತ್ತಾರೆ. ಇದರ ಸಾರವನ್ನೇ 'ಅಖಿಲೈಃ ಸುವಾಕ್ಯೈಃ ಅಪ್ಯತಮಮ್' ಎಂಬ ವಿಶೇಷಣ-ದಿಂದ ಸಂಗ್ರಹಿಸಿದ್ದಾರೆ.



'ಅಸ್ಕೋದ್ಭವಾದಿದಂ' ಎಂಬುದರಿಂದ ನಾಕನೆಯ ಅಧ್ಯಾಯದ ಸಾರವನ್ನು ಸಂಗ್ರಹಿಸಿದಂತಾಯಿತು. ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಸಂಹಾರಜ್ಞಾನಾಜ್ಞಾನಬಂಧಮೋಕ್ಷ ಇವುಗಳನ್ನು ನೀಡುತ್ತಾನೆ ಎಂದು ಹೇಳಿದ್ದರಿಂದ ಇವು-ಗಳಲ್ಲಿ ಸೇರಿದ ಮೋಕ್ಷದಾತೃತ್ವವನ್ನು ಸಮರ್ಥನೆ ಮಾಡಿದಂತಾಯಿತು. ನಾಕನೆಯ ಅಧ್ಯಾಯವು ಇದೇ ವಿಷಯವನ್ನೇ ವಿವರಿಸುತ್ತದೆ.

## ಅನುಬಂಧಚತುಷ್ಟಯವನ್ನು ನಿರೂಪಣೆ ಮಾಡುತ್ತಿದೆ ಎಂಬ ಮೂರನೆಯ ವ್ಯಾಖ್ಯಾನ

**ಸನ್ಯಾಯರತ್ನಾವಳೀ– ಅನೇನೈವ ಅಧಿಕಾರಿವಿಷಯಪ್ರಯೋಜನಸಂಬಂಧಾನ್ ಶಾಸ್ತ್ರಾರಂಭೇ ಅಪೇಕ್ಷಿತಾನ್ ಸೂಚಯತಿ । 'ಸನ್ನಮಾಮಿ' ಇತ್ಯಧಿಕಾರಿಣಂ ಸೂಚಯತಿ । 'ನಾರಾಯಣಮ್' ಇತಿ ವಿಷಯಮ್ । 'ಆಪ್ತತಮಮ್' ಇತಿ ಪ್ರಯೋಜನಮ್ । 'ಉದ್ಭವಾದಿದಮ್' ಇತಿ ವಿಷಯ-ಪ್ರಯೋಜನಯೋಃ ದಾತೃದೇಯಲಕ್ಷಣಸಂಬಂಧಮ್ ।**

ಇದೇ ಮಂಗಳಶ್ಲೋಕದಿಂದ ಅಧಿಕಾರಿ, ವಿಷಯ, ಪ್ರಯೋಜನ ಮತ್ತು ಸಂಬಂಧಗಳನ್ನು ತಿಳಿಸಿದ್ದಾರೆ. ಶಾಸ್ತ್ರಪ್ರಾರಂಭದಲ್ಲಿ ಈ ಅನುಬಂಧ ಚತುಷ್ಟಯವು ಅಪೇಕ್ಷಿತವಾಗಿರುತ್ತದೆ. ಆದ್ದರಿಂದ ಇದನ್ನು ತಿಳಿಸಲೇ ಬೇಕು. 'ಸನ್ನಮಾಮಿ' ಎಂಬುದರಿಂದ ಅಧಿಕಾರಿಯನ್ನು, 'ನಾರಾಯಣಂ' ಎಂಬುದರಿಂದ ವಿಷಯವನ್ನು, 'ಆಪ್ತ-ತಮಮ್' ಎಂಬುದರಿಂದ ಪ್ರಯೋಜನವನ್ನು, 'ಉದ್ಭವಾದಿದಂ' ಎಂಬುದರಿಂದ ವಿಷಯಪ್ರಯೋಜನಗಳಿಗೆ ದಾತೃದೇಯರೂಪವಾದ ಸಂಬಂಧವನ್ನು ತಿಳಿಸಿದ್ದಾರೆ.

ವಿವರಣೆ – ಯಾವುದೇ ಒಂದು ಗ್ರಂಥವು ಅನುಬಂಧಚತುಷ್ಟಯದಿಂದ ಕೂಡಿರಬೇಕು. ಆಗ ಮಾತ್ರ ಪ್ರೇಕ್ಷಾವಂತರು ಆ ಗ್ರಂಥದಲ್ಲಿ ಪ್ರವೃತ್ತರಾಗುತ್ತಾರೆ. ವಿಷಯ, ಪ್ರಯೋಜನ, ಅಧಿಕಾರಿ ಮತ್ತು ಸಂಬಂಧ ಇವುಗಳು ಅನುಬಂಧಚತುಷ್ಟಯ ಎಂದು ಕರೆಸಿಕೊಳ್ಳುತ್ತವೆ. ಪ್ರಕೃತ ಈ ಮಂಗಳಾಚರಣೆಯಲ್ಲಿ ಶ್ರೀಮದಾ-ಚಾರ್ಯರು ಅನೇಕ ವಿಶೇಷಣಗಳಿಂದ ಪರಮಾತ್ಮನನ್ನು ಸ್ತುತಿಸಿದರು. ಸಮಸ್ತಶಾಸ್ತ್ರಾರ್ಥವನ್ನು ಸಂಗ್ರಹಿಸಿ-ದರು. ಈಗ ಅನುಬಂಧಚತುಷ್ಟಯವನ್ನು ಕೂಡ ನಿರೂಪಣೆ ಮಾಡುತ್ತಿದ್ದಾರೆ. ಸನ್ನಮಾಮಿ ಎಂಬುದಕ್ಕೆ ಭಕ್ತಿ, ಶ್ರದ್ಧಾತಿಶಯಗಳಿಂದ ನಮಸ್ಕರಿಸುತ್ತೇನೆ ಎಂದರ್ಥ. ಇಂಥ ಗುಣವುಳ್ಳವನೇ ಈ ಗ್ರಂಥಾಧ್ಯಯನಕ್ಕೆ ಅಧಿಕಾರಿಯಾಗುತ್ತಾನೆಂಬುದು ಇದರಿಂದ ಸೂಚಿತವಾದಂತಾಯಿತು. 'ನಾರಾಯಣಂ' ಎಂಬ ಪದವು ಈ ಗ್ರಂಥದಿಂದ ನಾರಾಯಣನೇ ಪ್ರತಿಪಾದ್ಯನಾಗಿದ್ದಾನೆ ಎಂಬುದಾಗಿ ವಿಷಯೋಪಸ್ಥಾಪನೆ ಮಾಡಿತು. 'ಆಪ್ತ-ತಮಂ' ಎಂಬ ಪದವು ಈ ಗ್ರಂಥದ ಅಧ್ಯಯನದಿಂದ ಪರಮಾತ್ಮನನ್ನು ಹೊಂದುವುದೇ ಪ್ರಯೋಜನ-ವಾಗಿದೆ ಎಂದು ತಿಳಿಸುತ್ತದೆ. 'ಉದ್ಭವಾದಿದಂ' ಎಂಬ ಪದವು ವಿಷಯಪ್ರಯೋಜನಗಳಿಗೆ ದಾತೃದೇಯ-ರೂಪವಾದ ಸಂಬಂಧವನ್ನು ತಿಳಿಸುತ್ತಿದೆ.







## ನಾರಾಯಣಶಬ್ದದ ವ್ಯಾಖ್ಯಾನರೂಪವೆಂಬ ನಾಕನೆಯ ವ್ಯಾಖ್ಯಾನ

**ಸನ್ಯಾಯರತ್ನಾವಳೀ– ನಾರಾಯಣಶಬ್ದಶ್ಚ ವ್ಯಾಕ್ರಿಯತೇ– ನಿಖಿಲಪೂರ್ಣೇತ್ಯಾದಿನಾ ಶ್ಲೋಕೇನ ॥ ನಾರಾಯಣಂ ಗುಣಾನಾಮ್ ಅಯನತ್ವಾತ್ । ಅರಾಣಾಂ ದೋಷಾಣಾಮಯನಂ ನ ಭವತೀತಿ ನಾರಾಯಣ ಇತ್ಯಾದ್ಯೂಹನೀಯಮ್ ॥1॥**

ಈ ಶ್ಲೋಕದ ಮತ್ತೊಂದು ಉದ್ದೇಶ ನಾರಾಯಣಶಬ್ದದ ವ್ಯಾಖ್ಯಾನವಾಗಿದೆ. ನರಾಣಾಂ = ಗುಣಗಳಿಗೆ, ಅಯನತ್ವಾತ್ = ಆಶ್ರಯನಾಗಿರುವುದರಿಂದ ನಾರಾಯಣನೆನಿಸಿದ್ದಾರೆ. ಅರಾಣಾಂ = ದೋಷಗಳಿಗೆ, ಅಯನಂ = ಆಶ್ರಯನು ನ = ಅಲ್ಲವಾದ್ದರಿಂದ ನಿರ್ದೋಷನಾಗಿದ್ದಾನೆ – ಇತ್ಯಾದಿಯಾಗಿ ಊಹಿಸಬೇಕು.

ವಿವರಣೆ - ಈ ಮಂಗಳಶ್ಲೋಕದಿಂದಲೇ ನಾರಾಯಣಪದವನ್ನು ಕೂಡ ವ್ಯಾಖ್ಯಾನ ಮಾಡಿದ್ದಾರೆ. ನರಾಣಾಂ ಅಯನಃ = ನಾರಾಯಣಃ ಎಂಬ ವ್ಯುತ್ಪತ್ತಿಯಿಂದ ಗುಣಗಳಿಗೆ ಆಶ್ರಯನಾಗಿದ್ದಾನೆ ಎಂಬರ್ಥವು ತಿಳಿಯುತ್ತದೆ. 'ನಿಖಿಲಪೂರ್ಣಗುಣೈಕದೇಹಂ' ಎಂಬುದು ಈ ನಾರಾಯಣಶಬ್ದದ ಮೊದಲನೆಯ ವ್ಯಾಖ್ಯಾನ.

'ಅರಾಣಾಂ ಅಯನಂ ನ ಭವತೀತಿ ನಾರಾಯಣಃ' ಎಂಬ ವ್ಯುತ್ಪತ್ತಿಯಿಂದ, ದೋಷಗಳಿಲ್ಲದವನು ಎಂಬರ್ಥವು ತಿಳಿಯುತ್ತದೆ. ಈ ವ್ಯಾಖ್ಯಾನವನ್ನು 'ನಿರ್ದೋಷಂ' ಎಂಬ ವಿಶೇಷಣವು ಮಾಡುತ್ತಿದೆ.

ನಾರಂ = ಜ್ಞಾನಂ, ತಸ್ಯ ಆಶ್ರಯತ್ವಾತ್ = ಪ್ರಾಪ್ಯತ್ವಾತ್ ಎಂಬ ವ್ಯುತ್ಪತ್ತಿಯಿಂದ ಜ್ಞಾನವಿಷಯನಾಗಿದ್ದಾನೆಂಬರ್ಥವು ತಿಳಿಯುತ್ತದೆ. ಇದನ್ನು 'ಆಪ್ಯತಮಪ್ಯಖಿಲೈಸ್ಸುವಾಕ್ಯೈಃ' ಎಂಬ ವಿಶೇಷಣವು ವ್ಯಾಖ್ಯಾನ ಮಾಡಿದೆ.

'ಅಸ್ಮೋದ್ಭವಾದಿದಂ' ಎಂಬ ವಿಶೇಷಣವು ನಾರಾಯಣಶಬ್ದಕ್ಕೆ ಮೋಕ್ಷದಾತೃವಾಗಿದ್ದಾನೆಂಬರ್ಥವನ್ನು ವ್ಯಾಖ್ಯಾನ ಮಾಡುತ್ತಿದೆ.

ಹೀಗೆ ಅನುವ್ಯಾಖ್ಯಾನದ ಮಂಗಳಶ್ಲೋಕವು ನಾಕು ಅರ್ಥಗಳಿಂದ ಕೂಡಿದೆ. ಹೀಗೆ ಶ್ರೀಮದಾಚಾರ್ಯರ ಪ್ರತಿಯೊಂದು ವಾಕ್ಯಗಳೂ ಅನೇಕಾರ್ಥಗಳಿಂದ ಗರ್ಭಿತವಾಗಿದೆ.

ಹೀಗೆ ಅನುವ್ಯಾಖ್ಯಾನದ ಮೊದಲನೆಯ ಮಂಗಳಶ್ಲೋಕದ ವ್ಯಾಖ್ಯಾನವು ಮುಗಿಯಿತು.

* * * * * *





## ಶ್ರೀಮತ್ಕವಿಕುಲತಿಲಕ ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯಸುತ ಶ್ರೀಮನ್ನಾರಾಯಣಪಂಡಿತಾಚಾರ್ಯ ವಿರಚಿತ

# ನಯಚಂದ್ರಿಕಾ

## ವಿಷ್ಣುವಿನ ಅಂತರ್ಬಹಿರುಪಾಸನೆ

**ಹರಿಃ ಓಂ ॥**

**ವಿಷ್ಣುಂ ಸಂಪೂರ್ಣವಿಜ್ಞಾನಪರಮಾನಂದವಿಗ್ರಹಮ್ ।**
**ಕಮಲಾಕಾಂತಮತ್ಯಂತಮಂತರ್ಬಹಿರುಪಾಸ್ಮಹೇ ॥**

ಓ ಮಹಾವಿಷ್ಣುವೇ ಪರಿಪೂರ್ಣವಾದ ವಿಜ್ಞಾನ–ಪರಮಾನಂದಗಳೇ ಆ ನಿನ್ನ ಶರೀರ. ಜಗದರಸಿಯಾದ ಕಮಲೆಯ ವಲ್ಲಭನಾದ ನಿನ್ನನ್ನು ಅಂತರಂಗದಲ್ಲಿ ಮತ್ತು ಬಾಹ್ಯಪ್ರಪಂಚದಲ್ಲಿ ಉಪಾಸನೆಗೈಯ್ಯುವೆ.

## ಬ್ರಹ್ಮನ ಮಹಿಮೆ

**ಶ್ರೀಮನ್ನಾರಾಯಣಾಖ್ಯಾನಂ ಸಜ್ಜ್ಞಾನಾನಂದಲಕ್ಷಣಮ್ ।**
**ವೇದಾಂತವೇದಿತೌದಾರ್ಯಂ ಮುಖ್ಯಂ ಬ್ರಹ್ಮ ಪ್ರತನ್ಮಹೇ ॥**

ಓ ಬ್ರಹ್ಮನೇ! ಶ್ರೀಮನ್ನಾರಾಯಣ ಎಂಬ ಹೆಸರುಳ್ಳ ನೀನು ಸಜ್ಜ್ಞಾನಾನಂದ ಎಂಬ ಲಕ್ಷಣವುಳ್ಳವನಾಗಿರುವಿ. ಸಮಸ್ತವೇದಾಂತಗಳಿಂದ ನಿನ್ನ ಔದಾರ್ಯಗುಣವು ಪ್ರತಿಪಾದಿಸಲ್ಪಟ್ಟಿದೆ. ಇಂಥ ನಿನ್ನ ಮಹಿಮೆಯನ್ನು ನಿರಂತರ ಪೊಗಳುವೆ.

## ಕೃಷ್ಣನಿಗೆ ನಮನ

**ಯೇ ಗೋವರ್ಧನಧೃಚ್ಛತ್ರೇಣಾತ್ರಾಯಿ ಗೋವ್ರಜಃ ।**
**ಕೃಷ್ಣಂ ತಮತಸೀಕೃಷ್ಣಂ ವಂದೇ ಸೌಂದರ್ಯವಾರಿಧಿಮ್ ॥**

ಓ ಕೃಷ್ಣಪರಮಾತ್ಮನೇ! ಗೋವರ್ಧನಗಿರಿಯನ್ನು ಎತ್ತುವ ನೆಪದಿಂದ ಛತ್ರವನ್ನಾಗಿ ಮಾಡಿ ಸಮಸ್ತಗೋವುಗಳನ್ನು ಹಾಗೂ ಗೋಪಾಲಕರನ್ನು ರಕ್ಷಣೆ ಮಾಡಿದಿ. ಅತಸೀಪುಷ್ಪದ ಕಾಂತಿಯಂತೆ ಕಂಗೊಳಿಸುವ ನಿನ್ನ ಆ ಸೌಂದರ್ಯಸಮುದ್ರವನ್ನು ನಮಿಸುವೆ.





ವಿವರಣೆ – ಅತ್ರಾಯಿ – ತ್ರೈಙ್ ಪಾಲನೇ ಕರ್ಮಣಿ ಲುಙ್; ಅತಸೀಕೃಷ್ಣಂ - ಕೃಷ್ಣಪುಷ್ಪಕ್ಷುದ್ರವೃಕ್ಷವಿಶೇಷಃ, ಎಂಬುದಾಗಿ ಹಲಾಯುಧಕೋಶದಲ್ಲಿ ಅತಸೀಪದಕ್ಕೆ ಅರ್ಥವಿದೆ. ಆದ್ದರಿಂದ ನೀಲವರ್ಣದ ಪುಷ್ಪವನ್ನು ಬಿಡುವ ಒಂದು ಸಣ್ಣ ಮರ. ಅದರಂತೆ ಕೃಷ್ಣನಿದ್ದಾನೆಂದು ತಿಳಿಯಬೇಕು.

## ಕ್ಷೀರಸಮುದ್ರರೆಂಬ ಮಧ್ವರಿಗೆ ನಮನ

**ನಮೋ ವೇದಾಂತರಾದ್ಧಾಂತಸೂಕ್ತಿರತ್ನಾಕರಾತ್ಮನೇ ।**

**ಶ್ರೀಮದಾನಂದತೀರ್ಥಾಖ್ಯಭಗವದ್ದುಗ್ಧಸಿಂಧವೇ ॥**

ಓ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೇ! ತಾವು ಭಗವಂತನ ಆವಾಸಸ್ಥಾನವಾದ ಕ್ಷೀರ-ಸಮುದ್ರದಂತಿದ್ದೀರಿ. ವೇದಾಂತಸಮುದ್ರದ ಸೂಕ್ತಿಗಳು ರತ್ನಾಕರದಂತೆ ತಮ್ಮಲ್ಲಿ ಹೇರಳವಾಗಿವೆ. ನಿಮಗೆ ನನ್ನ ನಮನಗಳು.

## ಗುರು ತ್ರಿವಿಕ್ರಮಪಂಡಿತರು ಶುದ್ಧಬುದ್ಧಿ ನೀಡಲಿ

**ತ್ರಿವಿಕ್ರಮಾರ್ಯವರ್ಯಾಣಾಂ ಗುರೂಣಾಂ ಪಾದರೇಣವಃ ।**

**ದಿಶಂತು ಶಶ್ವದಸ್ಮಾಕಂ ಶುದ್ಧಿಂ ಬುದ್ಧೇರ್ಗಿರಾಮಪಿ ॥**

ಪಿತೃಪಾದರಾದ ಮತ್ತು ಗುರುಗಳಾದ ಶ್ರೀತ್ರಿವಿಕ್ರಮಪಂಡಿತರೇ! ತಮ್ಮ ಪಾದಕಮಲದ ಧೂಳಿಗಳು ಎನಗೆ ನಿರಂತರ ಶುದ್ಧವಾದ ಬುದ್ಧಿಯನ್ನು ನೀಡಲಿ. ಮಾತುಗಳನ್ನು ಕೂಡ ಶುದ್ಧೀಕರಿಸಲಿ.

## ಶ್ರೀಪದ್ಮನಾಭತೀರ್ಥರನ್ನು ಭಜಿಪೆ

**ತಂ ಪದ್ಮನಾಭತೀರ್ಥಾಬ್ಧಿಂ ಪದ್ಮನಾಭಪ್ರಿಯಂ ಭಜೇ ।**

**ಸನ್ನ್ಯಾಯರತ್ನಾವಳ್ಯಾಖ್ಯಾ ಯತೋ ಮಧ್ವೇಂದುಬೃಂಹಿತಾತ್ ॥**

ಶ್ರೀಪದ್ಮನಾಭತೀರ್ಥರೇ! ತಾವು ಪದ್ಮನಾಭನಿಗೆ ಪ್ರಿಯವಾದ ಸಮುದ್ರದಂತಿದ್ದೀರಿ. ತಮ್ಮಲ್ಲಿ ಮಧ್ವರೆಂಬ ಚಂದ್ರನಿಂದ ಸನ್ನ್ಯಾಯರತ್ನಾವಳಿ ಎಂಬ ಗ್ರಂಥವು ಉಕ್ಕಿ ಹೊರಬಂದಿತು.

## ಪರಮಹಂಸರನ್ನು ಉಪಾಸನೆಗೈಯ್ಯುವೆ

**ಅನುವ್ಯಾಖ್ಯಾನಸುಧಾಂಬೋಧೌ ಗಂಭೀರೇ ವಿಹರಂತಿ ಯೇ ।**

**ತೇಷಾಂ ಪರಮಹಂಸಾನಾಂ ಪದಚ್ಛಾಯಾಮುಪಾಸ್ಮಹೇ ॥**

ಅನುವ್ಯಾಖ್ಯಾನವೆಂಬ ಅಮೃತಸಮುದ್ರವು ಗಹನವಾಗಿದೆ. ಇದರಲ್ಲಿ ಅನೇಕ ಪರಮಹಂಸರು ವಿಹರಿಸುತ್ತಿದ್ದಾರೆ. ಇವರೆಲ್ಲರ ಪಾದಕಮಲದ ನೆರಳನ್ನೇ ಉಪಾಸನೆಗೈಯ್ಯುವೆ.

## ಉತ್ತಮಗ್ರಂಥಗಳನ್ನೂ ಶರಣೆನ್ನುವೆ

**ಸನ್ನ್ಯಾಯರತ್ನಾವಳಯಃ ಸನ್ನ್ಯಾಯಾಮೃತಬಿಂದವಃ ।**

**ಶ್ರೀಮತತ್ತ್ವಪ್ರದೀಪಾಶ್ಚ ಸಂತು ನಃ ಶರಣಪ್ರದಾಃ ॥**

ಸಮೀಚೀನವಾದ ನ್ಯಾಯಗಳೆಂಬ ರತ್ನಗಳೆಂಬ ಸಮೂಹಗಳು, ಸಮೀಚೀನವಾದ ನ್ಯಾಯಗಳೆಂಬ ಅಮೃತ -ಬಿಂದುಗಳು, ಶ್ರೇಷ್ಠವಾದ ತತ್ತ್ವಗಳೆಂಬ ಬೆಳಕುಗಳು ನನಗೆ ರಕ್ಷಣೆ ನೀಡುವವುಗಳಾಗಲಿ.

ವಿವರಣೆ -ಶ್ರೀಪದ್ಮನಾಭತೀರ್ಥರು ರಚಿಸಿದ ಸನ್ನ್ಯಾಯರತ್ನಾವಳಿ, ಶ್ರೀತ್ರಿವಿಕ್ರಮಪಂಡಿತರು ರಚಿಸಿರುವ ತತ್ತ್ವಪ್ರದೀಪ ಹಾಗೂ ಸೂತ್ರಗಳಿಂದ ತಿಳಿಯುವ ನ್ಯಾಯಗಳು ಇವುಗಳನ್ನು ಶರಣೆನ್ನುವೆ ಎಂಬುದಾಗಿ ತಾವು ಯಾವ ಅನುವ್ಯಾಖ್ಯಾನಕ್ಕೆ ಟೀಕೆಯನ್ನು ಬರೆಯಲು ಹೊರಟಿದ್ದಾರೋ ಅದಕ್ಕಿಂತ ಮೊದಲು ಯಾವ ಗ್ರಂಥಗಳಿದ್ದವೋ ಅವುಗಳನ್ನು ಸ್ಮರಣೆ ಮಾಡಿಕೊಳ್ಳುತ್ತಿದ್ದಾರೆ.

## ಗ್ರಂಥಪ್ರತಿಜ್ಞೆ

**ಶ್ರೀಮದ್ಗುರೂಣಾಂ ಕಾರುಣ್ಯಕಲ್ಪವೃಕ್ಷಸಮಾಶ್ರಯಾತ್ ।**

**ಅಭಿಪ್ರಾಯೋಽನುಭಾಷ್ಯಸ್ಯ ಯಾವದ್ಬೋಧಮನೂದ್ಯತೇ ॥**

ಜ್ಞಾನಭಕ್ತ್ಯಾದಿಗುಣಗಳಿಂದ ಸಂಪದ್ಭರಿತರಾದ ಗುರುಗಳ ಕಾರುಣ್ಯವೆಂಬ ಕಲ್ಪವೃಕ್ಷವನ್ನು ಆಶ್ರಯಿಸಿರುವೆ. ಅನುವ್ಯಾಖ್ಯಾನದ ಅಭಿಪ್ರಾಯವನ್ನು ಎನಗೆ ತಿಳಿದಷ್ಟು ಅನುವಾದ ಮಾಡುವೆ.

## ಮಂಗಳಶ್ಲೋಕದ ವೈಶಿಷ್ಟ್ಯ

**ನಯಚಂದ್ರಿಕಾ–**

**'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ**
**ನಿರ್ದೋಷಮಾಪ್ತತಮಮಪ್ಯಖಿಲೈಃ ಸುವಾಕ್ಯೈಃ ।**
**ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ**
**ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥'**

**ಇತ್ಯನೇನ ಅನುಭಾಷ್ಯಮಾರಭಮಾಣೋ ಭಗವಾನ್ ಅಭೀಷ್ಟದೇವತಾಮ್ ಅಭಿಷ್ಟುವನ್ ನಮಸ್ಕರೋತಿ ಶಿಷ್ಟಾಚಾರಪರಿರಕ್ಷಣಾರ್ಥಮ್ । ಅನೇನೈವ ಅಧಿಕಾರಿವಿಷಯಪ್ರಯೋಜನಾನಿ ತತ್ಸಂಬಂಧಂ ಚ ಸೂಚಯತಿ । ಪ್ರಥಮತ ಏವ ಪ್ರಯೋಜನಸ್ಯ ಅವಗತೌ ಪ್ರವೃತ್ತಿಃ ಸಂಭವತಿ ಇತಿ ತತ್ಸೂಚ್ಯತೇ । 'ಅಸ್ಯೋದ್ಭವಾದಿದಮ್' ಇತ್ಯಾದಿಶಬ್ದೇನ ಮೋಕ್ಷಸ್ಯಾಪಿ ವಿವಕ್ಷಿತತ್ವಾತ್ ನಿರ್ದುಃಖಸುಖಾತ್ಮಕೇ ಮೋಕ್ಷೇ ಪ್ರಯೋಜನೇ ಸರ್ವೇಷಾಮಪಿ ಪ್ರವೃತ್ತಿಃ ಪ್ರಸಜ್ಯತೇ । ತದ್ವ್ಯುದಾಸಾಯ ಅಧಿಕಾರಿಣಂ ವಿಶಿನಷ್ಟಿ – ಸನ್ನಮಾಮೀತಿ ॥**

'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ತತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥'

ಈ ಮಂಗಳಶ್ಲೋಕದಿಂದ ಅನುವ್ಯಾಖ್ಯಾನವನ್ನು ರಚಿಸಲು ಶ್ರೀಮದಾನಂದತೀರ್ಥರು ಪ್ರಾರಂಭ ಮಾಡಿದ್ದಾರೆ. ಷಡ್ಗುಣೈಶ್ವರ್ಯಸಂಪನ್ನರಾದ ಶ್ರೀಮದಾನಂದತೀರ್ಥರು ತಮಗೆ ಅತ್ಯಂತ ಪ್ರೀತಿಪಾತ್ರನಾದ ದೇವನನ್ನು ಕುರಿತು ಸ್ತೋತ್ರ ಮಾಡುವ ಮೂಲಕ ನಮಿಸುತ್ತಿದ್ದಾರೆ. ಗ್ರಂಥಾರಂಭದಲ್ಲಿ ಮಂಗಳಾಚರಣೆ ಮಾಡುವ ಶಿಷ್ಟಾಚಾರವನ್ನು ಇದರಿಂದ ಪರಿರಕ್ಷಣೆ ಮಾಡುತ್ತಿದ್ದಾರೆ.

ಇದೇ ಮಂಗಳಶ್ಲೋಕದಿಂದ ಈ ಗ್ರಂಥಕ್ಕೆ ಯಾರು ಅಧಿಕಾರಿಗಳು? ಗ್ರಂಥದ ವಿಷಯವೇನು? ಇದರ ಪ್ರಯೋಜನವೇನು? ಇವುಗಳಲ್ಲಿರುವ ಸಂಬಂಧ ಯಾವುದು? ಎಂಬುದನ್ನು ಕೂಡ ಸೂಚನೆ ಮಾಡುತ್ತಿದ್ದಾರೆ. ಗ್ರಂಥಾಧ್ಯಯನದ ಪ್ರಾರಂಭದಲ್ಲಿ ಗ್ರಂಥದಿಂದ ದೊರೆಯಬಹುದಾದ ಪ್ರಯೋಜನವನ್ನು ತಿಳಿದಾಗ ಗ್ರಂಥಾಧ್ಯಯನದಲ್ಲಿ ಪ್ರವೃತ್ತಿಯು ಯುಕ್ತವಾಗುತ್ತದೆ. ಆ ಕಾರಣದಿಂದ ಆ ಪ್ರಯೋಜನವನ್ನು ಮೊದಲೇ ಸೂಚನೆ ಮಾಡಿದ್ದಾರೆ.





'ಅಸ್ಯೋದ್ಭವಾದಿದಂ' ಎಂಬಲ್ಲಿರುವ ಆದಿಶಬ್ದದಿಂದ ಮೋಕ್ಷವು ಕೂಡ ವಿವಕ್ಷಿತವಾಗಿದೆ. ನಿರ್ದುಃಖವಾದ ಸುಖಸ್ವರೂಪವಾದ ಮೋಕ್ಷವು ಈ ಗ್ರಂಥದ ಪ್ರಯೋಜನವೆಂದು ಹೇಳಿದಾಗ ಪ್ರತಿಯೊಬ್ಬರೂ ಕೂಡ ಗ್ರಂಥಾಧ್ಯಯನದಲ್ಲಿ ತೊಡಗಲು ಮುನ್ನುಗ್ಗುತ್ತಾರೆ. ಅವರನ್ನು ಪರಿಹರಿಸಲು ಯಾರು ಅಧಿಕಾರಿಗಳೆಂಬುದನ್ನು ವಿಶೇಷವಾಗಿ ಹೇಳಲು ಸನ್ನಮಾಮಿ ಎಂದು ಹೇಳಿದ್ದಾರೆ.

## ಸನ್ನಮಾಮಿ ಎಂದರೆ ಸಾಷ್ಟಾಂಗನಮಸ್ಕಾರ

**ನಯಚಂದ್ರಿಕಾ– 'ಸನ್ನಮಾಮಿ' ಇತ್ಯಷ್ಟಾಂಗವಿಶಿಷ್ಟ ಏವ ಪ್ರಣಾಮೋ ವಿವಕ್ಷಿತಃ ।**

**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥**

**ಇತ್ಯಷ್ಟಾಂಗಾನ್ಯುಚ್ಯಂತೇ । ಉರ ಆದಿನಾ ಪ್ರಣಿಪಾತಃ । ಮನಸಾ ಸದ್ಭಕ್ತಿಕಂ ಸ್ಮರಣಮ್ । ವಚಸಾ ವೇದಮಂತ್ರವಚನಮ್ । ಏವಂ ಚ ಹ್ಯಧ್ಯಯನವಾನ್ ಸುಭಕ್ತಿಮಾನ್ ಏವ ಅಧಿಕಾರೀತ್ಯುಕ್ತಂ ಭವತಿ । 'ಅಹಂ ಸನ್ನಮಾಮಿ' ಇತ್ಯುಕ್ತೇಃ ಸತ್ಯಪ್ಯನಂತಾಧಿಕಾರಿಣ ಇತಿ ಸೂಚಿತಂ ಭವತಿ ।**

**'ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।**
**ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥**

**ಇತಿ ವಚನಾತ್ ಆಚಾರಸ್ಯಾಪಿ ಧರ್ಮಮೂಲತ್ವಾತ್ ಶಾಸ್ತ್ರಪ್ರಯೋಜನಂ ಚ ಶಾಸ್ತ್ರಪ್ರತಿಪಾದ್ಯಾದ್ ಭವಿತುಮರ್ಹತಿ । ತದರ್ಥಂ ಪ್ರತಿಪಾದ್ಯಂ ವಿಷಯಮಪಿ ಸೂಚಯತಿ – ನಾರಾಯಣಮಿತಿ ॥**

'ಸನ್ನಮಾಮಿ' ಎಂಬ ಪದದಿಂದ ಎಂಟು ಅಂಗಗಳಿಂದ ವಿಶಿಷ್ಟವಾದದ್ದೇ ಪ್ರಣಾಮ ಎಂದು ವಿವಕ್ಷಿಸಿದ್ದಾರೆ.

ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥

ವಕ್ಷಸ್ಥಳ, ತಲೆ, ದೃಷ್ಟಿ, ಮನಸ್ಸು, ಮಾತು, ಕಾಲುಗಳು, ಕೈಗಳು, ಮಂಡಿಗಳು ಈ ಎಂಟು ಅಂಗಗಳಿಂದ ಕೂಡಿದ್ದೇ ಪ್ರಣಾಮ ಎಂದು ಕರೆಸಿಕೊಳ್ಳುತ್ತದೆ.

ಉರಸಾ ಶಿರಸಾ – ಎಂಬುದರಿಂದ ನಮಸ್ಕಾರಮಾಡುವ ಕ್ರಮವನ್ನು ತಿಳಿಸಿದರು. ಮನಸಾ ಎಂಬುದರಿಂದ ಸಮೀಚೀನವಾದ ಭಕ್ತಿಯಿಂದ ಕೂಡಿದ ಸ್ಮರಣೆಯನ್ನು ತಿಳಿಸಿದರು. ವಚಸಾ ಎಂಬುದರಿಂದ ವೇದಮಂತ್ರವನ್ನು ಬಾಯಲ್ಲಿ ಉಚ್ಚರಿಸುತ್ತಿರಬೇಕೆಂದು ತಿಳಿಸಿದರು. ಇದರಿಂದ ಅಧ್ಯಯನವುಳ್ಳ ಶ್ರೇಷ್ಠವಾದ ಭಕ್ತಿಯನ್ನು ಹೊಂದಿ–





ರುವವನೇ ಈ ಗ್ರಂಥದ ಅಧ್ಯಯನಕ್ಕೆ ಅಧಿಕಾರಿಯಾಗುತ್ತಾನೆ ಎಂದು ಹೇಳಿದಂತಾಯಿತು. ಅಹಂ ಸನ್ನಮಾಮಿ ಎಂದು ಹೇಳಿದರೂ ಕೂಡ ಈ ಗ್ರಂಥಾಧ್ಯಯನಕ್ಕೆ ಅನಂತ ಅಧಿಕಾರಿಗಳಿದ್ದಾರೆಂಬುದನ್ನು ಕೂಡ ಸೂಚನೆ ಮಾಡಿದ್ದಾರೆ.

'ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।
ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥

ಧರ್ಮಕ್ಕೆ ಮೂಲವೆನಿಸಿದ ಸಮಸ್ತವೇದಗಳು, ವೇದವನ್ನು ಬಲ್ಲವರ ಸ್ಮೃತಿಗಳು, ಹಾಗೂ ವೇದ ಬಲ್ಲವರ ಶೀಲ, ಸಜ್ಜನರ ಆಚಾರ, ಆತ್ಮನ ಪ್ರಸಾದ ಇವಿಷ್ಟೂ ಪ್ರಮಾಣಗಳೆನಿಸುತ್ತವೆ.

ಈ ವಚನದಂತೆ ಆಚಾರವೂ ಕೂಡ ಧರ್ಮಮೂಲವಾಗಿರುವುದರಿಂದ ಇದೂ ಕೂಡ ಶಾಸ್ತ್ರಪ್ರತಿಪಾದ್ಯ- ವಾಗಿರುವ ಕಾರಣ ಶಾಸ್ತ್ರಪ್ರಯೋಜನವಾಗಲು ಸಮರ್ಥವಾಗುತ್ತದೆ. ಅದಕ್ಕಾಗಿ ಶಾಸ್ತ್ರಪ್ರತಿಪಾದ್ಯವಾದ ವಿಷಯವನ್ನು ನಾರಾಯಣಂ ಎಂದು ಪ್ರತಿಪಾದನೆ ಮಾಡಿದ್ದಾರೆ.

## ಅನುಬಂಧಚತುಷ್ಟಯ

**ನಯಚಂದ್ರಿಕಾ– ಏವಂ ಪ್ರತಿಪಾದಕತ್ವಂ ಶಾಸ್ತ್ರಸ್ಯ ಪ್ರತಿಪಾದ್ಯತ್ವಂ ನಾರಾಯಣಸ್ಯ ಪ್ರಯೋಜನಂ ದಾತೃದೇಯಭಾವಂ ಚ ದೇಯತ್ವಂ ಗ್ರಾಹ್ಯತ್ವಂ ಪ್ರಯೋಜನಸ್ಯ ಗೃಹೀತತ್ವಂ ಚ ಅಧಿಕಾರಿಣಃ ಇತಿ ಸಂಬಂಧಶ್ಚ ಸೂಚಿತಃ ।**

**ಏತೇ ಅರ್ಥಾಃ ಭಗವತ್ಯೆವ ಪ್ರಥಮಸೂತ್ರೇ ಹ್ಯಾಕ್ಷಿಪ್ತಾಃ । 'ಅಥ'ಶಬ್ದೇನಾಧಿಕಾರಿ 'ಅತಃ'ಶಬ್ದೇನ ಪ್ರಯೋಜನಂ ಬ್ರಹ್ಮಶಬ್ದೇನ ವಿಷಯಃ ಪ್ರತಿಪಾದ್ಯಪ್ರತಿಪಾದಕತ್ವಲಕ್ಷಣಸಂಬಂಧಶ್ಚ ।**

**'ನಾರಾಯಣಂ ಸನ್ನಮಾಮಿ' ಇತ್ಯನ್ವಯಃ । 'ನಿಖಿಲಪೂರ್ಣಗುಣೈಕದೇಹಮ್' ಇತ್ಯಾದಿವಿಶೇಷಣ- ಚತುಷ್ಟಯೇನ ಅಧ್ಯಾಯಚತುಷ್ಟಯೋಪದಿಷ್ಟಮ್ ಉಪಕ್ಷಿಪತಿ । 'ನಿಖಿಲೈಃ ಪೂರ್ಣಗುಣೈರಭಿನ್ನ- ದೇಹಂ ಗುಣಾತ್ಮಕದೇಹಮ್ ಇತ್ಯರ್ಥಃ । ತತ್ತತ್ ಸಮನ್ವಯೋಕ್ತ್ಯಾ ಗುಣಪೂರ್ಣತ್ವಮೇವ ಹಿ ಪ್ರಥಮಾಧ್ಯಾಯೇ ವಿವಕ್ಷಿತಮ್ । ದ್ವಿತೀಯೇ ತತ್ತದ್ ವಿರೋಧಪರಿಹಾರೇಣ ದೋಷರಹಿತತ್ವಂ ವಿವಕ್ಷಿತಮ್ । ತಚ್ಚ ಆಹ – ನಿರ್ದೋಷಮಿತಿ ॥**

ಹೀಗೆ ಶಾಸ್ತ್ರವು ಪ್ರತಿಪಾದಕವಾಗಿದೆ. ನಾರಾಯಣನು ಪ್ರತಿಪಾದ್ಯನಾಗಿದ್ದಾನೆ. ಮತ್ತು ದಾತೃದೇಯ- ಭಾವವೆಂಬ ಸಂಬಂಧವು ಕೂಡ ಇದೆ. ದೇಯವಾದದ್ದು ಗ್ರಾಹ್ಯವಾಗುತ್ತದೆ. ಪ್ರಯೋಜನವು ಗೃಹೀತವಾಗುತ್ತದೆ. ಹೀಗೆ ಅಧಿಕಾರಿಯ ಸಂಬಂಧವನ್ನು ಸೂಚನೆ ಮಾಡಿದ್ದಾರೆ.





ಈ ಅರ್ಥವನ್ನು ಭಗವಾನ್ ಶ್ರೀವೇದವ್ಯಾಸರೇ ಪ್ರಥಮಸೂತ್ರದಿಂದ ಅರ್ಥಾತ್ ತಿಳಿಸಿದ್ದಾರೆ. ಅದು ಹೀಗೆ – ಅಥ ಶಬ್ದದಿಂದ ಅಧಿಕಾರಿಯನ್ನು ಅತಃ ಶಬ್ದದಿಂದ ಪ್ರಯೋಜನವನ್ನು, ಬ್ರಹ್ಮಶಬ್ದದಿಂದ ವಿಷಯವನ್ನು ಇವುಗಳಿಗೆ ಪ್ರತಿಪಾದ್ಯಪ್ರತಿಪಾದಕತ್ವರೂಪಸಂಬಂಧವನ್ನು ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರವು ತಿಳಿಸುತ್ತಿದೆ.

ನಾರಾಯಣಂ ಸನ್ನಮಾಮಿ ಎಂಬುದಾಗಿ ಅನ್ವಯಕ್ರಮವನ್ನು ತಿಳಿಯಬೇಕು. ನಿಖಿಲಪೂರ್ಣಗುಣೈಕ-ದೇಹಂ ಇವೇ ಮೊದಲಾದ ನಾಕು ವಿಶೇಷಣಗಳಿಂದ ನಾಕು ಅಧ್ಯಾಯಗಳಿಂದ ಪ್ರತಿಪಾದಿಸಲ್ಪಟ್ಟ ವಿಷಯವನ್ನು ಸಂಗ್ರಹ ಮಾಡಿದ್ದಾರೆ. ನಿಖಿಲಪೂರ್ಣಗುಣೈಕದೇಹಂ - ಎಂಬುದಕ್ಕೆ ಸಮಸ್ತವಾದ ಪೂರ್ಣಗುಣಗಳಿಂದ ಅಭಿನ್ನ-ವಾದ ದೇಹವೆನಿಸಿದ ಗುಣಾತ್ಮಕದೇಹ ಎಂದರ್ಥ. ಇದರ ಸಮನ್ವಯವನ್ನು ಮಾಡಿರುವುದರಿಂದ ಗುಣಪೂರ್ಣ-ತ್ವವೇ ಪ್ರಥಮಾಧ್ಯಾಯದಿಂದ ವಿವಕ್ಷಿತವಾಗಿದೆ.

ಎರಡನೇ ಅಧ್ಯಾಯದಲ್ಲಿ ಈ ಪ್ರಥಮಾಧ್ಯಾಯದ ವಿಷಯದಲ್ಲಿ ವಿರೋಧಪರಿಹಾರವನ್ನು ಮಾಡುವುದರ ಮೂಲಕ ದೋಷರಹಿತತ್ವವನ್ನು ವಿವಕ್ಷಿಸಿದ್ದಾರೆ. ಇದನ್ನೇ ನಿರ್ದೋಷಂ ಎಂಬ ವಿಶೇಷಣವು ಪ್ರತಿಪಾದನೆ ಮಾಡುತ್ತಿದೆ.

## ಸಂಕ್ಷೇಪಶಾಸ್ತ್ರಾರ್ಥ

**ನಯಚಂದ್ರಿಕಾ– ಸುವಾಕ್ಯೈಃ = ಸುಷ್ಟುವಾಕ್ಯೈಃ । ಆಪ್ಯತಮಂ = ಜ್ಞೇಯತಮಮ್ । ಪರಬ್ರಹ್ಮಣಿ ಅಧಿಕೃತತಾತ್ಪರ್ಯತ್ವೇನ ಸುನಿಶ್ಚಿತವೇದವಾಕ್ಯಾಃ ಸುವಾಕ್ಯಾಃ ಪುರುಷಃ ಸುವಾಕ್ಯಾಃ । ಜ್ಞಾನವಚನೇ-ನೈವ ತತ್ಸಾಧನವೈರಾಗ್ಯಭಕ್ತ್ಯುಪಾಯೋಽಪಿ ಸೂಚಿತೋ ಭವತಿ । ಅಯಮೇವ ಹಿ ತೃತೀಯಾಧ್ಯಾ-ಯಾರ್ಥಃ । ಫಲಾಧ್ಯಾಯಾರ್ಥೋ ಮೋಕ್ಷಶ್ಚ 'ಅಶೇಷವಿಶೇಷತೋಽಪಿ' 'ಅಸ್ಯೋದ್ಭವಾದಿದಮ್' ಇತಿ ಸೂಚ್ಯತೇ । ಅಸ್ಯ ಜಗತಃ ಉದ್ಭವಸ್ಥಿತಿಸಂಹಾರನಿಯಮನಜ್ಞಾನಾಜ್ಞಾನಬಂಧಮೋಕ್ಷಪ್ರದಮ್ ಅಶೇಷೈರಿತಿ ವಿಶೇಷೈಃ ಸಹ ಇತ್ಯರ್ಥಃ ।**

ಸುವಾಕ್ಯೈಃ ಎಂಬ ಪದಕ್ಕೆ ಸಮೀಚೀನವಾದ ವಾಕ್ಯಗಳಿಂದ ಎಂದರ್ಥ. ಆಪ್ಯತಮಮ್ ಎಂಬ ಪದಕ್ಕೆ ಜ್ಞೇಯತಮನಾದವನು ಎಂದರ್ಥ. ಪರಬ್ರಹ್ಮನಲ್ಲೇ ನಿಜವಾದ ತಾತ್ಪರ್ಯವನ್ನು ತಿಳಿದು ವೇದವಾಕ್ಯಗಳಿಂದ ನಿಶ್ಚಯರೂಪವಾದ ತತ್ವಜ್ಞಾನವನ್ನು ಹೊಂದಿರುವ ಪುರುಷನು ಸುವಾಕ್ಯ ಎಂದು ಕರೆಸಿಕೊಳ್ಳುತ್ತಾನೆ. ಜ್ಞಾನವಚನದಿಂದಲೇ ತತ್ಸಾಧನವಾದ ವೈರಾಗ್ಯಮತ್ತು ಭಕ್ತ್ಯುಪಾಯಗಳನ್ನು ಕೂಡ ಸೂಚನೆ ಮಾಡಿದಂತಾಯಿತು. ಇದೇ ಮೂರನೆಯ ಅಧ್ಯಾಯದ ಅರ್ಥವೆನಿಸಿದೆ.

ಫಲಾಧ್ಯಾಯದ ಅರ್ಥವೆನಿಸಿದ ಮೋಕ್ಷವನ್ನು ಅಶೇಷವಿಶೇಷತೋಽಪಿ ಮತ್ತು ಅಸ್ಯೋದ್ಭವಾದಿದಂ ಎಂಬ





ಎರಡು ವಿಶೇಷಣಗಳಿಂದ ಸೂಚನೆ ಮಾಡಿದ್ದಾರೆ. ಈ ವಿಶೇಷಣಗಳಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳನ್ನು ಪ್ರತಿಯೊಂದು ಪದಾರ್ಥಕ್ಕೂ ಕೂಡ ನೀಡುವವನು ಎಂದರ್ಥ.

## ಅಶೇಷವಿಶೇಷತೋಽಪಿ ಇತ್ಯಾದಿ ವಿಶೇಷಣಗಳಿಗೆ ವ್ಯಾಖ್ಯಾನ

**ನಯಚಂದ್ರಿಕಾ– ಸಂತಿ ಹಿ ಉದ್ಭವಾದಿವಿಶೇಷಾ ಬ್ರಹ್ಮಾದಿಷು ತಾರತಮ್ಯನಿಬಂಧನಾಃ ಪ್ರತಿಕ್ಷಣ-ವಿಶೇಷಾಶ್ಚ ಮೋಕ್ಷಾದಿಷು ದೇವತ್ವಾದಿಯೋಗ್ಯತಾವಿಶೇಷಾಶ್ಚ । 'ಅಶೇಷವಿಶೇಷತೋಽಪಿ' ಇತ್ಯುಪರಿ ಸಂಬಧ್ಯತೇ । ಅಶೇಷೈರ್ಜ್ಞಾನಾನಂದಾದಿಭಿಃ ವಿಶೇಷೈಶ್ಚ ಸಹ ಮಮ ಸದಾ ವಂದ್ಯಂ ಪ್ರಿಯ-ತಮಮ್ । ವಂದನಂ ಸ್ತುತಿಃ ಪ್ರಣಾಮೋ ವಾ । 'ವದಿ ಅಭಿವಾದನಸ್ತುತ್ಯೋಃ' ಇತಿ ಧಾತುಃ । ಅನೇನ ಅನಂತಗುಣಸ್ಯ ನಾರಾಯಣಸ್ಯ ಪ್ರವಚನಮ್ ಉಪಾಸ್ತೌ ಚಾತ್ಮನೋ ಮುಖ್ಯಾಧಿಕಾರಿತ್ವಂ ಸೂಚಯತಿ । ಭಕ್ತಿಂ ಚ ಸ್ನೇಹಬಹುಮಾನರೂಪಾಮ್ । ಅತ ಏವ ತಸ್ಯ ಇಷ್ಟದೇವತಾತ್ವಂ ಚ । ಪ್ರಿಯತಮತ್ವಸ್ಯ ವಿಶಿಷ್ಟೇ । ಸ್ನೇಹವಿಷಯತ್ವಸ್ಯ ಸಖ್ಯಾದಿಷ್ವಪಿ ಸಂಭವಾತ್ ತದ್‌ವ್ಯವಚ್ಛೇದಾಯ ವಂದ್ಯಮ್ ಇತಿ ॥1॥**

'ಅಶೇಷವಿಶೇಷತೋಽಪಿ' ಎಂಬಲ್ಲಿರುವ ವಿಶೇಷಶಬ್ದಕ್ಕೆ ಪ್ರತಿಯೊಂದರಲ್ಲೂ ವೈಶಿಷ್ಟ್ಯವಿದೆ ಎಂದರ್ಥ. ತಾರತಮ್ಯಾದಿಗಳಿಗನುಗುಣವಾಗಿ ಸೃಷ್ಟಿ, ಸ್ಥಿತ್ಯಾದಿಗಳು ಬ್ರಹ್ಮಾದಿಗಳಲ್ಲಿ ವ್ಯತ್ಯಾಸವಾಗುತ್ತವೆ. ಮೋಕ್ಷದಲ್ಲೂ ಕೂಡ ಪ್ರತಿಕ್ಷಣದಲ್ಲೂ ವೈಶಿಷ್ಟ್ಯವಿರುತ್ತದೆ. ದೇವತ್ವಾದಿ ಯೋಗ್ಯತಾದಿಗಳಲ್ಲೂ ಕೂಡ ವೈಶಿಷ್ಟ್ಯವಿದೆ ಎಂಬುದಾಗಿ ತಿಳಿಯಬೇಕು.

ಅಶೇಷವಿಶೇಷತೋಽಪಿ ಎಂಬ ಪದಕ್ಕೆ ಮುಂದೆ ಅನ್ವಯ ತಿಳಿಯಬೇಕು. ಅದು ಹೀಗೆ – ಅಶೇಷವಾದ ಜ್ಞಾನಾನಂದ ಮೊದಲಾದ ವಿಶೇಷಣಗಳಿಂದ ಕೂಡಿದ ನಾರಾಯಣನು ನನಗೆ ಸದಾ ವಂದ್ಯನಾಗಿದ್ದಾನೆ. ಆದ್ದ-ರಿಂದಲೇ ಪ್ರಿಯತಮನಾಗಿದ್ದಾನೆ ಎಂದು.

ವಂದನೆ ಎಂದರೆ ಸ್ತುತಿ ಎಂದರ್ಥ. ಪ್ರಣಾಮ ಎಂದೂ ಕೂಡ ಅರ್ಥವಿದೆ. ವದಿ ಅಭಿವಾದನಸ್ತುತ್ಯೋಃ ಎಂಬ ಧಾತುವಿನಿಂದ ಈ ಎರಡೂ ಅರ್ಥಗಳು ತಿಳಿಯುತ್ತವೆ. ಇದರಿಂದ ಅನಂತಗುಣನಾದ ನಾರಾಯಣನ ಬಗ್ಗೆ ಹೇಳಲು ಮತ್ತು ಉಪಾಸನೆ ಮಾಡಲು ತಾನೇ ಮುಖ್ಯ ಅಧಿಕಾರಿ ಎಂದು ಆಚಾರ್ಯರು ಸೂಚನೆ ಮಾಡಿದ್ದಾರೆ. ಅವರಲ್ಲಿರುವ ಭಕ್ತಿಯು ಕೂಡ ಸ್ನೇಹಬಹುಮಾನರೂಪವಾಗಿದೆ. ಆದ್ದರಿಂದಲೇ ಆಚಾರ್ಯರಿಗೆ ನಾರಾ-ಯಣನು ಇಷ್ಟದೇವನಾಗಿದ್ದಾನೆ. ಪ್ರಿಯತಮತ್ವವಿರುವುದರಿಂದ ವಿಶಿಷ್ಟನಾಗಿದ್ದಾನೆಂದು ತಿಳಿಸಿದ್ದಾರೆ. ಸ್ನೇಹ-ವಿಷಯತ್ವವು ಸ್ನೇಹಿತರಲ್ಲೂ ಕೂಡ ಬರುವುದರಿಂದ 'ವಂದ್ಯಂ' ಎಂಬ ವಿಶೇಷಣವನ್ನು ನೀಡಿದ್ದಾರೆ. ಸ್ನೇಹಿತರು ವಂದ್ಯರಾಗದ ಕಾರಣ ಪರಮಾತ್ಮನಲ್ಲಿ ಎಲ್ಲರಿಗಿಂತ ಆಧಿಕ್ಯವಿದೆಯೆಂದು ತಿಳಿಯಬೇಕು.

## 'ನಾರಾಯಣಂ ಸನ್ನಮಾಮಿ' ಎಂಬುದರ ವ್ಯಾಖ್ಯಾನ

**ಶ್ರೀಮನ್ನ್ಯಾಯಸುಧಾ– ಅತ್ರ 'ನಾರಾಯಣಂ ಸನ್ನಮಾಮಿ' ಇತ್ಯನ್ವಯಃ । ಉತ್ತಮಪುರುಷಪ್ರಯೋಗಾದೇವ 'ಅಹಮ್' ಇತಿ ಲಭ್ಯತೇ । 'ಸಮ್' ಇತಿ ಭಕ್ತ್ಯಾದ್ಯತಿಶಯಸಾಹಿತ್ಯಲಕ್ಷಣಾಂ ಪ್ರಣಾಮಸ್ಯ ಸಮ್ಯಕ್ತ್ವಾಮ್ ಆಹ । ತಥಾವಿಧ ಏವ ಹಿ ನಾರಾಯಣಪ್ರಣಾಮೋ ಭವತಿ ಅಭಿಮತಸಿದ್ಧೇರಂಗಮ್ । 'ನಿಖಿಲ' ಇತ್ಯಾದೀನಾಂ ತು ಪ್ರಣಾಮಕರ್ಮಣಾ ನಾರಾಯಣೇನ ವಿಶೇಷಣತಯಾ ಸಂಬಂಧಃ ।**

ಅನುವ್ಯಾಖ್ಯಾನದಲ್ಲಿ 'ನಾರಾಯಣಂ' ಎಂಬ ಪದಕ್ಕೆ ಕೊನೆಯಲ್ಲಿರುವ 'ಸನ್ನಮಾಮಿ' ಎಂಬ ಪದದ ಜೊತೆಗೆ ಅನ್ವಯವಿರುತ್ತದೆ. ಉತ್ತಮಪುರುಷಪ್ರಯೋಗದಿಂದಲೇ 'ಅಹಂ' ಎಂಬುದು ಲಭ್ಯವಾಗುತ್ತದೆ. 'ಸಮ್' ಎಂಬುದರಿಂದ ಭಕ್ತ್ಯಾದ್ಯತಿಶಯದಿಂದ ಕೂಡಿದ ಪ್ರಣಾಮದಲ್ಲಿ ಸಮ್ಯಕ್ತ್ವತೆಯನ್ನು ಹೇಳುತ್ತಿದ್ದಾರೆ. ಭಕ್ತ್ಯತಿಶಯದಿಂದ ಕೂಡಿದ ನಾರಾಯಣಪ್ರಣಾಮವೇ ಅಭಿಮತಸಿದ್ಧಿಗೆ ಅಂಗವಾಗಿದೆ. 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳು ಪ್ರಣಾಮಕರ್ಮನಾದ ನಾರಾಯಣನಲ್ಲಿ ವಿಶೇಷಣತಯಾ ಸಂಬಂಧವನ್ನು ಹೊಂದುತ್ತವೆ.

ವಿಶೇಷವಿಚಾರ – ಈ ಶ್ಲೋಕದಲ್ಲಿ 'ನಾರಾಯಣಂ' ಎಂಬ ದ್ವಿತೀಯಾವಿಭಕ್ತ್ಯಂತವಾದ ವಿಶೇಷ್ಯಪದಕ್ಕೆ ಸನ್ನಮಾಮಿ ಎಂಬ ನಮನಕ್ರಿಯೆಯಲ್ಲಿ ಅನ್ವಯವನ್ನು ಹೇಳಬೇಕು. 'ಸನ್ನಮಾಮಿ' ಎಂದು ಉತ್ತಮಪುರುಷಪ್ರಯೋಗ ಮಾಡಿದ್ದರಿಂದಲೇ 'ಅಹಂ' ಎಂಬ ಕರ್ತೃಪದ ಲಭ್ಯವಾಗುತ್ತದೆ. 'ಸನ್ನಮಾಮಿ' ಎಂಬಲ್ಲಿರುವ 'ಸಮ್' ಎಂಬ ಉಪಸರ್ಗವು 'ಭಕ್ತಿಜ್ಞಾನಾದ್ಯತಿಶಯದಿಂದ ಕೂಡಿರುವಿಕೆ' ಎಂದು ಪ್ರಣಾಮದ ಸಮೀಚೀನತೆಯನ್ನು ತಿಳಿಸುತ್ತದೆ. ಅಂತಹ ಭಕ್ತ್ಯಾದ್ಯತಿಶಯಸಹಿತವಾದ ನಾರಾಯಣಪ್ರಣಾಮ ಮಾತ್ರ ಅಭೀಷ್ಟಸಿದ್ಧಿಗೆ ಕಾರಣವಾಗುತ್ತದೆ. 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ದ್ವಿತೀಯಾವಿಭಕ್ತ್ಯಂತಪದಗಳಿಗೆ ಪ್ರಣಾಮಕ್ಕೆ ಕರ್ಮನಾದ ನಾರಾಯಣನಲ್ಲಿ ವಿಶೇಷಣಭಾವದಿಂದ ಅನ್ವಯವನ್ನು ಹೇಳಬೇಕು.

## ಮೂಲಶ್ಲೋಕದಲ್ಲಿ ಅನ್ವಯಕ್ರಮ

ಪರಿಮಳ– 'ದ್ವಿತೀಯಾಂತವಿಶೇಷಣಾನಾಂ ವಿಶೇಷ್ಯದ್ವಾರಾ ಕ್ರಿಯಾನ್ವಯೋ ನ ಸಾಕ್ಷಾತ್' ಇತಿ ವಕ್ತುಂ ವಾಕ್ಯವ್ಯವಹಿತತಯಾ ಅನ್ವಯಾಪ್ರತೀತೇರ್ವಾ 'ನಾರಾಯಣಮ್ ಇತ್ಯಪಿ ವಿಶೇಷಣಮ್' ಇತಿ ಭ್ರಮನಿರಾಸಾಯ ವಿಶೇಷ್ಯಮಿತಿ ಸೂಚನಾಯ ವಾಽಽಹ – ಇತ್ಯನ್ವಯ ಇತಿ ॥ ಕರ್ತ್ರನುಕ್ತೇಃ ನ್ಯೂನತಾಮಾಶಂಕ್ಯ 'ಮಮ' ಇತ್ಯಸ್ಯೈವ ವಿಪರಿಣಾಮೇನ ಕರ್ತೃತ್ವಭ್ರಮನಿರಾಸಾಯ ಆಹ – ಉತ್ತಮೇತಿ ॥

'ಅಸ್ಮದ್ಯುತ್ತಮಃ' ಇತಿ ಸೂತ್ರೇ ಅಸ್ಮಚ್ಛಬ್ದೇ ಉಪಪದತ್ವೇನ ಶ್ರೂಯಮಾಣೇಽಶ್ರೂಯಮಾಣೇ ವಾ ತದರ್ಥವಿವಕ್ಷಾಯಾಮ್ ಉತ್ತಮಪುರುಷೋ ಭವತೀತ್ಯುಕ್ತ್ಯಾ ತದವಿನಾಭಾವಾತ್ ಅಹಮ್ ಇತ್ಯಸ್ಯೇತಿ ಭಾವಃ ।

ಶ್ಲೋಕದಲ್ಲಿ ದ್ವಿತೀಯಾಂತವಾದ ಪದಗಳು ವಿಶೇಷಣಗಳಾಗಿವೆ. ಇವುಗಳಿಗೆ ವಿಶೇಷ್ಯನಾದ ನಾರಾಯಣನ ಮೂಲಕವೇ ಕ್ರಿಯೆಯಲ್ಲಿ ಅನ್ವಯವನ್ನು ತಿಳಿಯಬೇಕು. ನೇರವಾಗಿ ಅನ್ವಯವನ್ನು ತಿಳಿಯಬಾರದು. ಇದನ್ನು ತಿಳಿಸಬೇಕಾಗಿದೆ. ವಾಕ್ಯದ ವ್ಯವಧಾನವಿರುವುದರಿಂದ ಅನ್ವಯ -ಪ್ರತೀತಿಯು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕಾಗಿ ಅತ್ರ 'ನಾರಾಯಣಂ ಸನ್ನಮಾಮಿ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅಥವಾ ಈ ಶ್ಲೋಕವನ್ನು ನೋಡಿದಾಗ ನಾರಾಯಣಂ ಎಂಬುದೂ ವಿಶೇಷಣವಾಚಕವಾದ ಪದವೆಂದು ಭ್ರಮೆ ಬರುತ್ತದೆ. ಆದರೆ ಇದು ವಿಶೇಷ್ಯವಾಚಕವಾದ ಪದವಾಗಿದೆ. ಇದನ್ನು ಸೂಚನೆ ಮಾಡುವುದಕ್ಕಾಗಿಯೂ ಕೂಡ 'ಅತ್ರ ನಾರಾಯಣಂ ಸನ್ನಮಾಮಿ' ಎಂದಿದ್ದಾರೆ.

ಶ್ಲೋಕದಲ್ಲಿ ಕರ್ತೃವಾಚಕಪದವನ್ನು ಹೇಳಿರುವುದಿಲ್ಲ. ಆದ್ದರಿಂದ ನ್ಯೂನತಾದೋಷವು ಬರುತ್ತದಲ್ಲವೇ? ಅಥವಾ ಮಮ ಎಂಬ ಪದವನ್ನೇ ವಿಪರಿಣಾಮ ಮಾಡಿಕೊಂಡು ಕರ್ತೃವಾಚಕಪದವನ್ನು ತಿಳಿಯಬೇಕೇ? ಹೀಗೆ ಎರಡು ಪ್ರಕಾರದ ಭ್ರಮೆಗಳನ್ನು ನಿರಾಕರಣೆ ಮಾಡುವುದಕ್ಕಾಗಿ 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂದಿದ್ದಾರೆ.

'ಅಸ್ಮದ್ಯುತ್ತಮಃ' ಎಂಬ ಸೂತ್ರದಲ್ಲಿ ಅಸ್ಮದ್‌ಶಬ್ದವು ಉಪಪದವಾಗಿ ಶ್ರುತವಾದರೂ ಶ್ರುತವಾಗದಿದ್ದರೂ ಅರ್ಥವು ವಿವಕ್ಷಿತವಾದರೆ ಸಾಕು ಉತ್ತಮಪುರುಷಪ್ರಯೋಗವನ್ನು ಮಾಡಬೇಕು ಎಂದು ಹೇಳುತ್ತಿದೆ. ಆದ್ದರಿಂದ ಅಹಂ ಎಂಬುದು ಅರ್ಥಾತ್ ಲಭ್ಯವಾಗುತ್ತದೆ.

ವಿಶೇಷವಿಚಾರ – (೧) ನಿಖಿಲಪೂರ್ಣಗುಣೈಕದೇಹಂ, (೨) ನಿರ್ದೋಷಂ, (೩) ಅಖಿಲೈಃ ಸುವಾಕ್ಯೈಃ ಆಪ್ಯತಮಮ್, (೪) ಅಸ್ಮೋದ್ಭವಾದಿದಂ (೫) ಅಶೇಷವಿಶೇಷತೋಽಪಿ ವಂದ್ಯಂ (೬) ಪ್ರಿಯತಮಂ ಈ ಆರು ದ್ವಿತೀಯಾಂತವಾದ ವಿಶೇಷಣಗಳಿಗೆ ಸನ್ನಮಾಮಿ ಎಂಬ ಕ್ರಿಯೆಯಲ್ಲಿ ನೇರವಾಗಿ ಅನ್ವಯ ಮಾಡಬಾರದು. ನಾರಾಯಣಂ ಎಂಬ ವಿಶೇಷ್ಯವಾಚಕಪದದ ಮೂಲಕವೇ ಅನ್ವಯವನ್ನು ಮಾಡಬೇಕು. ವಾಕ್ಯವ್ಯವಧಾನವಿರುವುದರಿಂದ ಅನ್ವಯಪ್ರತೀತಿಯು ಸ್ಪಷ್ಟವಾಗುವುದಿಲ್ಲ. ಆದಕ್ಕಾಗಿ ಟೀಕೆಯಲ್ಲಿ 'ನಾರಾಯಣಂ ಸನ್ನಮಾಮಿ ಇತ್ಯನ್ವಯಃ' ಎಂದು ಹೇಳಿದ್ದಾರೆ. ಉಳಿದ ದ್ವಿತೀಯಾಂತ -ಪದಗಳಂತೆ ನಾರಾಯಣಂ ಎಂಬ ದ್ವಿತೀಯಾಂತಪದವೂ ಕೂಡ ವಿಶೇಷಣವೆಂದು ತಿಳಿಯಬಾರದು.

ಈ ಶ್ಲೋಕದಲ್ಲಿ 'ಸನ್ನಮಾಮಿ' ಎಂಬ ನಮನಕ್ರಿಯೆಗೆ ಕರ್ತೃ ಯಾರೆಂದು ಹೇಳಿಲ್ಲ. ಆದ್ದರಿಂದ ನ್ಯೂನತೆ ಬರಲಿಲ್ಲವೆ? ಎಂಬ ಪ್ರಶ್ನೆಗೆ ಸಮಾಧಾನವನ್ನು 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂದು ನೀಡಿದ್ದಾರೆ. ಈ ಶ್ಲೋಕದಲ್ಲಿ 'ಸನ್ನಮಾಮಿ' ಎಂದು ಉತ್ತಮಪುರುಷಪ್ರಯೋಗ ಮಾಡಿದ್ದರಿಂದಲೇ 'ಅಹಂ'(ನಾನು) ಎಂಬ ಕರ್ತೃಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಏಕೆಂದರೆ ಉತ್ತಮಪುರುಷವನ್ನು ವಿಧಾನ ಮಾಡುವ 'ಅಸ್ಮದ್ಯುತ್ತಮಃ' ಎಂಬ ಪಾಣಿನಿಯ ಸೂತ್ರವು ಮೇಲಿನ ಅಭಿಪ್ರಾಯವನ್ನೇ ತಿಳಿಸುತ್ತದೆ. 'ಅಸ್ಮದ್ಯುತ್ತಮಃ' ಎಂಬ ಪಾಣಿನಿಯ ಸೂತ್ರವು ಹೀಗೆ ಹೇಳುತ್ತದೆ. ಅಸ್ಮಚ್ಛಬ್ದವು ಉಪಪದವಾಗಿ ಶ್ರುತವಾದರೂ ಅಶ್ರುತವಾದರೂ ಅಸ್ಮಚ್ಛಬ್ದದ ಅರ್ಥವು ವಿವಕ್ಷಿತ(ಹೇಳಲಪೇಕ್ಷಿತ)ವಾದಾಗ ಉತ್ತಮಪುರುಷ ಉಂಟಾಗುತ್ತದೆ.

## ನಮನಕ್ರಿಯೆಯಲ್ಲಿ ಯಾವುದಕ್ಕೆ ಅನ್ವಯ

ವಾಕ್ಯಾರ್ಥಚಂದ್ರಿಕಾ – ನನ್ವತ್ರ ನಮನಕ್ರಿಯಾಯಾಃ ಸಕರ್ಮಕತ್ವಾತ್ 'ನಿಖಿಲ' ಇತ್ಯಾದೀನಾಮ್ ಅನೇಕೇಷಾಂ ಕರ್ಮಕಾರಕಾಣಾಂ ಮಿಲಿತಾನಾಮ್ ಏಕಕ್ರಿಯಾನ್ವಯಾನುಪಪತ್ತ್ಯಾ, ಪ್ರತ್ಯೇಕಂ ಕ್ರಿಯಾನ್ವಯೇ ಚ ವಾಕ್ಯಭೇದಾಪತ್ತ್ಯಾ, ವಿಶೇಷನಿಯಾಮಕಾಭಾವೇನ ಏಕಸ್ಯೈವ ಕ್ರಿಯಾನ್ವಯಾಸಂಭವಾತ್ ಸನ್ನಿಧಾನಾದನಂತ್ಯಸ್ಯೈವ ಕ್ರಿಯಾನ್ವಯೇ ವಿಶಿಷ್ಯ, ನಮ್ಯಸ್ವರೂಪನಿರ್ಧಾರಣಾನಾಪತ್ತೇರ್ನ ಕರ್ಮಕ್ರಿಯಾನ್ವಯಃ ಅತ್ರ ಯುಕ್ತ ಇತ್ಯತ ಆಹ – ಅತ್ರೇತಿ ॥



ನಮನಕ್ರಿಯೆಯು ಸಕರ್ಮಕವಾಗಿದೆ. ಈ ಕ್ರಿಯೆಯಲ್ಲಿ ಕರ್ಮಕಾರಕಗಳಿಗೆ ಅನ್ವಯವನ್ನು ಹೇಳಬೇಕು. ನಿಖಿಲಪೂರ್ಣಗುಣೈಕದೇಹಂ ಇವೇ ಮೊದಲಾದ ಕರ್ಮಕಾರಕಗಳು ಮಿಲಿತವಾಗಿ ಈ ಒಂದೇ ನಮನಕ್ರಿಯೆಯಲ್ಲಿ ಅನ್ವಯವನ್ನು ಹೊಂದಲಾರವು ಪ್ರತ್ಯೇಕವಾಗಿ ಅನ್ವಯವನ್ನು ಹೊಂದು-ವುದಾದರೆ ವಾಕ್ಯಭೇದದೋಷವು ಬರುತ್ತದೆ. ಮತ್ತು ಒಂದಕ್ಕೆ ಅನ್ವಯವನ್ನು ಹೇಳುವುದಾದರೆ ಆ ಒಂದು ಯಾವುದು ಎನ್ನಲು ವಿಶೇಷನಿಯಾಮಕಪ್ರಮಾಣವಿಲ್ಲ. ಆದ್ದರಿಂದ ಒಂದಕ್ಕೆ ಕ್ರಿಯಾನ್ವಯವು ಅಸಂಭಾವಿತವಾಗುತ್ತದೆ. ಕ್ರಿಯಾಪದದ ಜೊತೆಗೆ ಸನ್ನಿಧಾನವಿರುವುದರಿಂದ ಕೊನೆಯದಕ್ಕೆ ಮಾತ್ರ ಅನ್ವಯವೆಂದು ಹೇಳಬೇಕು. ಆಗ ಪ್ರಿಯತಮಶಬ್ದಕ್ಕಷ್ಟೇ ಕ್ರಿಯಾನ್ವಯ ಹೇಳಿದಂತಾಗುತ್ತದೆ. ಇದರಿಂದ ನಮ್ಮಸ್ವರೂಪವು ನಿರ್ಧಾರವಾಗುವುದಿಲ್ಲ. ಆದ್ದರಿಂದ ಈ ಮಂಗಳಶ್ಲೋಕದಲ್ಲಿ ಕರ್ಮಕಾರಕಗಳಿಗೆ ಕ್ರಿಯೆಯಲ್ಲಿ ಅನ್ವಯವೇ ಅನುಪಪನ್ನವಾಗುತ್ತದೆ. ಈ ಆಕ್ಷೇಪಕ್ಕೆ 'ಅತ್ರ' ಇತ್ಯಾದಿ ಗ್ರಂಥದಿಂದ ಉತ್ತರಿ-ಸುತ್ತಿದ್ದಾರೆ.

## ನಾರಾಯಣಂ ಎಂಬ ಕರ್ಮಕಾರಕಕ್ಕೆ ಕ್ರಿಯೆಯಲ್ಲಿ ಅನ್ವಯ

ವಾಕ್ಯಾರ್ಥಚಂದ್ರಿಕಾ– ಅತ್ರ ಚ ಏಕಸ್ಯೈವ ನಮನಕರ್ಮತಯಾ ಉಪಪಾದನೇನ ಪ್ರತ್ಯೇಕ-ಮಿಲಿತಪಕ್ಷೋಕ್ತದೋಷದ್ವಯಸ್ಯ, ರೂಢಪದೋಪಾದಾನೇನ ವಿಶೇಷನಿಯಾಮಕಾಭಾವರೂಪ-ದೋಷಸ್ಯ ವಿಷ್ಣೌ ನಿರೂಢಪದೋಪಾದಾನೇನ ಅಂತಿಮದೋಷಸ್ಯ ಚ ನಿವೃತ್ತಿರಿತಿ ದ್ರಷ್ಟವ್ಯಮ್ ।

ಒಂದೇ ಕರ್ಮಕಾರಕಕ್ಕೆ ನಮನಕ್ರಿಯೆಯಲ್ಲಿ ಅನ್ವಯವನ್ನು ಹೇಳುತ್ತೇವೆ. ಆದ್ದರಿಂದ ಪ್ರತ್ಯೇಕ-ವಾಗಿ ಅನ್ವಯವನ್ನು ಮಾಡಿದರೆ ವಾಕ್ಯಭೇದದೋಷ ಬರುತ್ತದೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ; ಮತ್ತು ಮಿಲಿತವಾದ ಕರ್ಮಕಾರಕಗಳಿಗೆ ಅನ್ವಯ ಮಾಡಿದರೆ ಅನುಪಪನ್ನವಾಗುತ್ತದೆಂಬ ಆಕ್ಷೇಪಕ್ಕೂ ಕೂಡ ಅವಕಾಶವಿಲ್ಲ. ವಾಸ್ತವಿಕವಾಗಿ ಮಿಲಿತವಾದದ್ದಕ್ಕೆ ಅನ್ವಯವು ಅಸಂಭಾವಿತವೇ ಆಗಿದೆ. ಆ ಕರ್ಮ-ಕಾರಕಗಳು ಪರಸ್ಪರ ವಿಶೇಷಣವಿಶೇಷ್ಯಭಾವವನ್ನು ಹೊಂದಿ, ಕ್ರಿಯೆಯಲ್ಲಿ ಅನ್ವಯವು ಹೊಂದಬೇಕು. ಇದನ್ನು ಬಿಟ್ಟು ಪ್ರತ್ಯೇಕವಾದ ಮಿಲಿತವಾದ ಪಕ್ಷವಿದೆ ಎಂದು ಹೇಳುವುದೇ ಅಸಾಧುವಾಗಿದೆ.

ನಾರಾಯಣಂ ಎಂಬ ಕರ್ಮಕಾರಕಕ್ಕೆ ನಮಾಮಿ ಎಂಬ ಕ್ರಿಯೆಯಲ್ಲಿ ಅನ್ವಯವನ್ನು ಮಾಡು-ತ್ತೇವೆ. ಇದು ರೂಢಪದವಾಗಿದೆ. 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳು ಭಗವಂತನ ಹೆಸರು ಎಂಬುದಾಗಿ ರೂಢಿಯಿಲ್ಲ. ಆದರೆ ನಾರಾಯಣಂ ಎಂಬ ಪದವು ಭಗವಂತನ ಹೆಸರು ಎಂಬು-ದಾಗಿ ರೂಢಿ ಇದೆ. ಹೀಗೆ ರೂಢಪದೋಪಾದಾನ ಎಂಬುದೇ ವಿಶೇಷನಿಯಾಮಕವಾಗಿರುವುದರಿಂದ





ಅನೇಕ ಕರ್ಮಕಾರಕಗಳಲ್ಲಿ ಯಾವುದಕ್ಕೆ ಅನ್ವಯ ಮಾಡಬೇಕೆನ್ನಲು ವಿಶೇಷನಿಯಾಮಕವಿಲ್ಲ ಎಂಬ ಪ್ರಶ್ನೆಗೆ ಉತ್ತರಿಸಿದಂತಾಯಿತು. ಮತ್ತು ವಿಷ್ಣುವಿನಲ್ಲಿ ಈ ನಾರಾಯಣಪದವು ನಿರೂಢವಾಗಿರುವುದರಿಂದ ನಮ್ಮಸ್ವರೂಪವೇ ನಿರ್ಧಾರವಾಗುವುದಿಲ್ಲ ಎಂಬ ಕೊನೆಯ ದೋಷವನ್ನೂ ಕೂಡ ಪರಿಹರಿಸಿ-ದಂತಾಯಿತು. ಏಕೆಂದರೆ ಈ ನಿರೂಢ ಪದದಿಂದಲೇ ನಮ್ಮನಾದವನು ನಾರಾಯಣನಾಗಿದ್ದಾನೆ ಎಂದು ಅವನ ಸ್ವರೂಪವನ್ನು ತಿಳಿಸಿದಂತಾಯಿತು.

## 'ಅಹಂ' ಎಂಬ ಕರ್ತೃವಾಚಕಪದವು ಅನಾವಶ್ಯಕ

ವಾಕ್ಯಾರ್ಥಚಂದ್ರಿಕಾ – ನನು 'ನಮಾಮಿ' ಇತಿ ಕರ್ತೃತಿಙಾ ಕರ್ತೃಮಾತ್ರಲಾಭೇಽಪಿ ತಸ್ಯ ಪರಕರ್ತೃತ್ವೇಽಪಿ ಉಪಪತ್ತ್ಯಾ ಸ್ವಮಾತ್ರಕರ್ತೃತ್ವಸಮರ್ಪಕ 'ಅಹಮ್' ಇತ್ಯನುಕ್ತೇಃ ನ್ಯೂನತಾ ಇತ್ಯತ ಆಹ – ಉತ್ತಮೇತಿ ॥

'ನಮಾಮಿ' ಎಂಬಲ್ಲಿ ಕರ್ತೃವಾಚಕವಾದ ತಿಙ್‌ಪ್ರತ್ಯಯವಿದೆ. ಇದರಿಂದ ನಮನಕ್ರಿಯೆಯನ್ನು ಮಾಡುವವನು ಒಬ್ಬ ಕರ್ತೃವಾಗಿದ್ದಾನೆ ಎಂದಷ್ಟೇ ತಿಳಿಯುತ್ತದೆ. ಆ ಕರ್ತೃವು ಬೇರೊಬ್ಬನೂ ಕೂಡ ಆಗಿರಬಹುದು. ತಾನೊಬ್ಬನೇ ಕರ್ತೃವಾಗಿದ್ದಾನೆ ಎಂದು ತಿಳಿಯುವುದಿಲ್ಲ. ಈ ನ್ಯೂನತಾಶಂಕೆಯನ್ನು 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂಬ ಟೀಕಾವಾಕ್ಯದಿಂದ ಪರಿಹರಿಸಿದ್ದಾರೆ.

## ಉತ್ತಮಪುರುಷಪ್ರಯೋಗದಿಂದ ಅಸ್ಮದ್ಯುಪಪದವು ತಿಳಿಯುತ್ತದೆಯೇ?

### ವಾಕ್ಯಾರ್ಥವಿಚಾರ

ವಾಕ್ಯಾರ್ಥಚಂದ್ರಿಕಾ–ಅತ್ರ ಯದೋಪಪದನಿಯಮೋ ಯುಷ್ಮದ್ಯುಪಪದೇ ಮಧ್ಯಮ ಏವ ನ ಪ್ರಥಮೋತ್ತಮೌ ಅಸ್ಮದ್ಯುಪಪದೇ ಉತ್ತಮ ಏವ ನ ಪ್ರಥಮಮಧ್ಯಮೌ, ಶೇಷೇ ಪ್ರಥಮ ಏವ ನ ಮಧ್ಯಮೋತ್ತಮೌ ಇತ್ಯೇವಮಾಕಾರಕನಿಯಮಸ್ಯ ತುಲ್ಯಜಾತೀಯಾಪೇಕ್ಷತ್ವಾತ್ - ತದಾ ಯುಷ್ಮದೋ ಮಧ್ಯಮೇನ ಶೇಷಸ್ಯ ಚ ಪ್ರಥಮೇನ ನಿಯಮಿತತ್ವೇನ ತಯೋರುತ್ತಮಂ ಪ್ರತ್ಯ-ಪ್ರಾಪ್ತೇರುತ್ತಮಂ ಪ್ರತಿ ಸ್ವನಿಯಮಿತಾಸ್ಮದ ಏವ ಉಪಪದತ್ವಮ್ ಆರ್ಥಿಕಮ್ ಇತ್ಯುತ್ತಮ-ಪ್ರಯೋಗಾದಹಮ್ ಇತ್ಯಸ್ಯಾರ್ಥಿಕೋ ಲಾಭಃ । ('ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ' ತಿಙ್‌ವಾಚ್ಯಕಾರಕವಾಚಿನಿ ಯುಷ್ಮದಿ ಪ್ರಯುಜ್ಯಮಾನೇಽಪ್ರಯುಜ್ಯಮಾನೇ







ಚ ಮಧ್ಯಮಃ ಸ್ಯಾತ್ । ಸ್ಥಾನಿನಿ ಇತ್ಯಸ್ಯ ವ್ಯಾಖ್ಯಾನಮ್ ಅಪ್ರಯುಜ್ಯಮಾನ ಇತಿ । 'ಅಸ್ಮದ್ಯುತ್ತಮಃ' । ತಥಾಭೂತೇಽಸ್ಮದ್ಯುತ್ತಮಃ ಸ್ಯಾತ್ । 'ಶೇಷೇ ಪ್ರಥಮಃ' । ಮಧ್ಯಮೋತ್ತಮಯೋರವಿಷಯೇ ಪ್ರಥಮಃ ಸ್ಯಾತ್ ।)

ಆಕ್ಷೇಪ – ಧೂಮವಾನೇವ ಅಗ್ನಿಮಾನ್ ಎಂದು ಹೇಳಬಾರದು. ಅಗ್ನಿಮಾನೇವ ಧೂಮವಾನ್ ಎಂದು ಹೇಳಬೇಕು. ಎಲ್ಲಿ ಏವಕಾರವನ್ನು ಹೇಳುತ್ತೇವೋ ಅದು ವ್ಯಾಪಕವೇ ಆಗಿರಬೇಕು. ಏವಕಾರದಿಂದ ಸಮಭಿವ್ಯಾಹೃತವಾದದ್ದಕ್ಕೆ ವ್ಯಾಪಕತ್ವವು ಲಾಭವಾಗುತ್ತದೆ. ಮತ್ತೊಂದಕ್ಕೆ ವ್ಯಾಪ್ಯತ್ವವು ಲಾಭವಾಗುತ್ತದೆ. ಇದರಂತೆ ಪ್ರಕೃತ ಅಸ್ಮದಾದಿಶಬ್ದಗಳನ್ನು ಎಲ್ಲಿ ಪ್ರಯೋಗ ಮಾಡಬೇಕು ಎನ್ನಲು ಪಾಣಿನಿಯು ಮೂರು ಸೂತ್ರಗಳನ್ನು ರಚನೆ ಮಾಡಿದ್ದಾನೆ. (1) ಅಸ್ಮದ್ಯುತ್ತಮಃ (2) ಯುಷ್ಮದಿ ಮಧ್ಯಮಃ (3) ಶೇಷೇ ಪ್ರಥಮಃ ಎಂದು. ಅಸ್ಮತ್ ಶಬ್ದವು ಉಪಪದವಾಗಿದ್ದಾಗ ಉತ್ತಮಪುರುಷವನ್ನು ಪ್ರಯೋಗ ಮಾಡಬೇಕು. ಯುಷ್ಮತ್ ಶಬ್ದವು ಉಪಪದವಾಗಿರುವಾಗ ಮಧ್ಯಪುರುಷವನ್ನು ಪ್ರಯೋಗಿಸಬೇಕು. ಉಳಿದ ಸಂದರ್ಭದಲ್ಲಿ ಪ್ರಥಮ ಪುರುಷವನ್ನು ವಿವಕ್ಷಿಸಬೇಕು. ಎಂಬುದು ಈ ಮೂರು ಸೂತ್ರಗಳ ಅಭಿಪ್ರಾಯ. ಈ ಸೂತ್ರಗಳಲ್ಲಿ ಉಪಪದ ನಿಯಮವನ್ನು ಮಾಡಬೇಕೆನ್ನುತ್ತಾರೆ. ಉಪಪದನಿಯಮವೆಂದರೆ ಹೀಗರ್ಥ – ಯುಷ್ಮದ್‌ಶಬ್ದವು ಉಪಪದವಾಗಿರುವಾಗ ಮಧ್ಯಮಪುರುಷವೇ ಬರುತ್ತದೆ. ಪ್ರಥಮಪುರುಷ ಉತ್ತಮಪುರುಷಗಳು ಬರುವುದಿಲ್ಲ. ಇದರಂತೆ ಅಸ್ಮತ್‌ಶಬ್ದವು ಉಪಪದವಾಗಿದ್ದಾಗ ಉತ್ತಮಪುರುಷವೇ ಬರುತ್ತದೆ. ಪ್ರಥಮಪುರುಷ ಹಾಗೂ ಮಧ್ಯಮಪುರುಷಗಳು ಬರುವುದಿಲ್ಲ. ಉಳಿದ ಸಂದರ್ಭದಲ್ಲಿ ಪ್ರಥಮಪುರುಷವೇ ಬರುತ್ತದೆ. ಮಧ್ಯಮಪುರುಷ ಹಾಗೂ ಉತ್ತಮಪುರುಷಗಳು ಬರುವುದಿಲ್ಲ. ಈ ಕ್ರಮದಲ್ಲಿ ಮೂರು ಸೂತ್ರಗಳ ಅರ್ಥವನ್ನು ತಿಳಿಯಬೇಕು. ಈ ಉಪಪದನಿಯಮದ ಪ್ರಕಾರ ಉತ್ತಮಪುರುಷಕ್ಕೆ ವ್ಯಾಪಕತ್ವವು ಅಸ್ಮತ್‌ಶಬ್ದಕ್ಕೆ ವ್ಯಾಪ್ಯತ್ವವು ಲಾಭವಾಯಿತು. ಆದ್ದರಿಂದ ಆಚಾರ್ಯರು ಉತ್ತಮಪುರುಷವನ್ನು ಪ್ರಯೋಗ ಮಾಡಿರುವುದರಿಂದ ಅಹಂ ಎಂಬುದು ಲಾಭವಾಗುವುದಿಲ್ಲ. ಏಕೆಂದರೆ ವ್ಯಾಪ್ಯವನ್ನು ಹೇಳುವುದರಿಂದ ವ್ಯಾಪಕವು ಲಾಭವಾಗುತ್ತದೆ. ವ್ಯಾಪಕವನ್ನು ಹೇಳಿದರೆ ವ್ಯಾಪ್ಯವು ಲಾಭವಾಗುವುದಿಲ್ಲ. ಅಗ್ನಿರಸ್ತಿ ಎಂದು ಹೇಳಿದರೆ ಧೂಮವು ಲಾಭವಾಗುವುದಿಲ್ಲ. ಧೂಮಃ ಅಸ್ತಿ ಎಂದು ಹೇಳಿದರೆ ಅಗ್ನಿಯ ಲಾಭವಾಗುತ್ತದೆ. ಅದರಂತೆ ಪ್ರಕೃತ ಅಸ್ಮತ್ ಶಬ್ದವನ್ನು ಪ್ರಯೋಗ ಮಾಡಿದರೆ ಉತ್ತಮಪುರುಷವು ಲಾಭವಾಗುತ್ತದೆ. ಇಲ್ಲಿ ಅಸ್ಮತ್‌ಶಬ್ದವು ವ್ಯಾಪ್ಯವಾಗಿದೆ. ಇದರಿಂದ ವ್ಯಾಪಕವಾದ ಉತ್ತಮಪುರುಷವು ಲಾಭವಾಗುತ್ತದೆ. ಇದಕ್ಕೆ ವಿಪರೀತವಾಗಿ ಉತ್ತಮಪುರುಷದಿಂದ ವ್ಯಾಪ್ಯವಾದ ಅಸ್ಮತ್‌ಶಬ್ದವು ಲಾಭವಾಗುವುದಿಲ್ಲ. ಹೀಗೆ ಉಪಪದ ನಿಯಮ-

ಅನೇಕ ಕರ್ಮಕಾರಕಗಳಲ್ಲಿ ಯಾವುದಕ್ಕೆ ಅನ್ವಯ ಮಾಡಬೇಕೆನ್ನಲು ವಿಶೇಷನಿಯಾಮಕವಿಲ್ಲ ಎಂಬ ಪ್ರಶ್ನೆಗೆ ಉತ್ತರಿಸಿದಂತಾಯಿತು. ಮತ್ತು ವಿಷ್ಣುವಿನಲ್ಲಿ ಈ ನಾರಾಯಣಪದವು ನಿರೂಢವಾಗಿರುವುದರಿಂದ ನಮ್ಮಸ್ವರೂಪವೇ ನಿರ್ಧಾರವಾಗುವುದಿಲ್ಲ ಎಂಬ ಕೊನೆಯ ದೋಷವನ್ನೂ ಕೂಡ ಪರಿಹರಿಸಿದಂತಾಯಿತು. ಏಕೆಂದರೆ ಈ ನಿರೂಢ ಪದದಿಂದಲೇ ನಮ್ಮನಾದವನು ನಾರಾಯಣನಾಗಿದ್ದಾನೆ ಎಂದು ಅವನ ಸ್ವರೂಪವನ್ನು ತಿಳಿಸಿದಂತಾಯಿತು.

## 'ಅಹಂ' ಎಂಬ ಕರ್ತೃವಾಚಕಪದವು ಅನಾವಶ್ಯಕ

ವಾಕ್ಯಾರ್ಥಚಂದ್ರಿಕಾ – ನನು 'ನಮಾಮಿ' ಇತಿ ಕರ್ತೃತಿಙಾ ಕರ್ತೃಮಾತ್ರಲಾಭೇಽಪಿ ತಸ್ಯ ಪರಕರ್ತೃತ್ವೇಽಪಿ ಉಪಪತ್ತ್ಯಾ ಸ್ವಮಾತ್ರಕರ್ತೃತ್ವಸಮರ್ಪಕ 'ಅಹಮ್' ಇತ್ಯನುಕ್ತೇಃ ನ್ಯೂನತಾ ಇತ್ಯತ ಆಹ – ಉತ್ತಮೇತಿ ॥

'ನಮಾಮಿ' ಎಂಬಲ್ಲಿ ಕರ್ತೃವಾಚಕವಾದ ತಿಙ್‌ಪ್ರತ್ಯಯವಿದೆ. ಇದರಿಂದ ನಮನಕ್ರಿಯೆಯನ್ನು ಮಾಡುವವನು ಒಬ್ಬ ಕರ್ತೃವಾಗಿದ್ದಾನೆ ಎಂದಷ್ಟೇ ತಿಳಿಯುತ್ತದೆ. ಆ ಕರ್ತೃವು ಬೇರೊಬ್ಬನೂ ಕೂಡ ಆಗಿರಬಹುದು. ತಾನೊಬ್ಬನೇ ಕರ್ತೃವಾಗಿದ್ದಾನೆ ಎಂದು ತಿಳಿಯುವುದಿಲ್ಲ. ಈ ನ್ಯೂನತಾಶಂಕೆಯನ್ನು 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂಬ ಟೀಕಾವಾಕ್ಯದಿಂದ ಪರಿಹರಿಸಿದ್ದಾರೆ.

## ಉತ್ತಮಪುರುಷಪ್ರಯೋಗದಿಂದ ಅಸ್ಮದ್ಯುಪಪದವು ತಿಳಿಯುತ್ತದೆಯೇ?

### ವಾಕ್ಯಾರ್ಥವಿಚಾರ

ವಾಕ್ಯಾರ್ಥಚಂದ್ರಿಕಾ–ಅತ್ರ ಯದೋಪಪದನಿಯಮೋ ಯುಷ್ಮದ್ಯುಪಪದೇ ಮಧ್ಯಮ ಏವ ನ ಪ್ರಥಮೋತ್ತಮೌ ಅಸ್ಮದ್ಯುಪಪದೇ ಉತ್ತಮ ಏವ ನ ಪ್ರಥಮಮಧ್ಯಮೌ, ಶೇಷೇ ಪ್ರಥಮ ಏವ ನ ಮಧ್ಯಮೋತ್ತಮೌ ಇತ್ಯೇವಮಾಕಾರಕನಿಯಮಸ್ಯ ತುಲ್ಯಜಾತೀಯಾಪೇಕ್ಷತ್ವಾತ್ - ತದಾ ಯುಷ್ಮದೋ ಮಧ್ಯಮೇನ ಶೇಷಸ್ಯ ಚ ಪ್ರಥಮೇನ ನಿಯಮಿತತ್ವೇನ ತಯೋರುತ್ತಮಂ ಪ್ರತ್ಯಪ್ರಾಪ್ತೇರುತ್ತಮಂ ಪ್ರತಿ ಸ್ವನಿಯಮಿತಾಸ್ಮದ ಏವ ಉಪಪದತ್ವಮ್ ಆರ್ಥಿಕಮ್ ಇತ್ಯುತ್ತಮಪ್ರಯೋಗಾದಹಮ್ ಇತ್ಯಸ್ಯಾರ್ಥಿಕೋ ಲಾಭಃ । ('ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ' ತಿಙ್‌ವಾಚ್ಯಕಾರಕವಾಚಿನಿ ಯುಷ್ಮದಿ ಪ್ರಯುಜ್ಯಮಾನೇಽಪ್ರಯುಜ್ಯಮಾನೇ





ಚ ಮಧ್ಯಮಃ ಸ್ಯಾತ್ । ಸ್ಥಾನಿನಿ ಇತ್ಯಸ್ಯ ವ್ಯಾಖ್ಯಾನಮ್ ಅಪ್ರಯುಜ್ಯಮಾನ ಇತಿ। 'ಅಸ್ಮದ್ಯುತ್ತಮಃ'। ತಥಾಭೂತೇಽಸ್ಮದ್ಯುತ್ತಮಃ ಸ್ಯಾತ್ । 'ಶೇಷೇ ಪ್ರಥಮಃ' । ಮಧ್ಯಮೋತ್ತಮಯೋರವಿಷಯೇ ಪ್ರಥಮಃ ಸ್ಯಾತ್ ।)

ಆಕ್ಷೇಪ – ಧೂಮವಾನೇವ ಅಗ್ನಿಮಾನ್ ಎಂದು ಹೇಳಬಾರದು. ಅಗ್ನಿಮಾನೇವ ಧೂಮವಾನ್ ಎಂದು ಹೇಳಬೇಕು. ಎಲ್ಲಿ ಏವಕಾರವನ್ನು ಹೇಳುತ್ತೇವೋ ಅದು ವ್ಯಾಪಕವೇ ಆಗಿರಬೇಕು. ಏವಕಾರದಿಂದ ಸಮಭಿವ್ಯಾಹೃತವಾದದ್ದಕ್ಕೆ ವ್ಯಾಪಕತ್ವವು ಲಾಭವಾಗುತ್ತದೆ. ಮತ್ತೊಂದಕ್ಕೆ ವ್ಯಾಪ್ಯತ್ವವು ಲಾಭವಾಗುತ್ತದೆ. ಇದರಂತೆ ಪ್ರಕೃತ ಅಸ್ಮದಾದಿಶಬ್ದಗಳನ್ನು ಎಲ್ಲಿ ಪ್ರಯೋಗ ಮಾಡಬೇಕು ಎನ್ನಲು ಪಾಣಿನಿಯು ಮೂರು ಸೂತ್ರಗಳನ್ನು ರಚನೆ ಮಾಡಿದ್ದಾನೆ. (1) ಅಸ್ಮದ್ಯುತ್ತಮಃ (2) ಯುಷ್ಮದಿ ಮಧ್ಯಮಃ (3) ಶೇಷೇ ಪ್ರಥಮಃ ಎಂದು. ಅಸ್ಮತ್ ಶಬ್ದವು ಉಪಪದವಾಗಿದ್ದಾಗ ಉತ್ತಮಪುರುಷವನ್ನು ಪ್ರಯೋಗ ಮಾಡಬೇಕು. ಯುಷ್ಮತ್ ಶಬ್ದವು ಉಪಪದವಾಗಿರುವಾಗ ಮಧ್ಯಪುರುಷವನ್ನು ಪ್ರಯೋಗಿಸಬೇಕು. ಉಳಿದ ಸಂದರ್ಭದಲ್ಲಿ ಪ್ರಥಮ ಪುರುಷವನ್ನು ವಿವಕ್ಷಿಸಬೇಕು. ಎಂಬುದು ಈ ಮೂರು ಸೂತ್ರಗಳ ಅಭಿಪ್ರಾಯ. ಈ ಸೂತ್ರಗಳಲ್ಲಿ ಉಪಪದ ನಿಯಮವನ್ನು ಮಾಡಬೇಕೆನ್ನುತ್ತಾರೆ. ಉಪಪದನಿಯಮವೆಂದರೆ ಹೀಗರ್ಥ – ಯುಷ್ಮದ್‌ಶಬ್ದವು ಉಪಪದವಾಗಿರುವಾಗ ಮಧ್ಯಮಪುರುಷವೇ ಬರುತ್ತದೆ. ಪ್ರಥಮಪುರುಷ ಉತ್ತಮಪುರುಷಗಳು ಬರುವುದಿಲ್ಲ. ಇದರಂತೆ ಅಸ್ಮತ್‌ಶಬ್ದವು ಉಪಪದವಾಗಿದ್ದಾಗ ಉತ್ತಮಪುರುಷವೇ ಬರುತ್ತದೆ. ಪ್ರಥಮಪುರುಷ ಹಾಗೂ ಮಧ್ಯಮಪುರುಷಗಳು ಬರುವುದಿಲ್ಲ. ಉಳಿದ ಸಂದರ್ಭದಲ್ಲಿ ಪ್ರಥಮಪುರುಷವೇ ಬರುತ್ತದೆ. ಮಧ್ಯಮಪುರುಷ ಹಾಗೂ ಉತ್ತಮಪುರುಷಗಳು ಬರುವುದಿಲ್ಲ. ಈ ಕ್ರಮದಲ್ಲಿ ಮೂರು ಸೂತ್ರಗಳ ಅರ್ಥವನ್ನು ತಿಳಿಯಬೇಕು. ಈ ಉಪಪದನಿಯಮದ ಪ್ರಕಾರ ಉತ್ತಮಪುರುಷಕ್ಕೆ ವ್ಯಾಪಕತ್ವವು ಅಸ್ಮತ್‌ಶಬ್ದಕ್ಕೆ ವ್ಯಾಪ್ಯತ್ವವು ಲಾಭವಾಯಿತು. ಆದ್ದರಿಂದ ಆಚಾರ್ಯರು ಉತ್ತಮಪುರುಷವನ್ನು ಪ್ರಯೋಗ ಮಾಡಿರುವುದರಿಂದ ಅಹಂ ಎಂಬುದು ಲಾಭವಾಗುವುದಿಲ್ಲ. ಏಕೆಂದರೆ ವ್ಯಾಪ್ಯವನ್ನು ಹೇಳುವುದರಿಂದ ವ್ಯಾಪಕವು ಲಾಭವಾಗುತ್ತದೆ. ವ್ಯಾಪಕವನ್ನು ಹೇಳಿದರೆ ವ್ಯಾಪ್ಯವು ಲಾಭವಾಗುವುದಿಲ್ಲ. ಅಗ್ನಿರಸ್ತಿ ಎಂದು ಹೇಳಿದರೆ ಧೂಮವು ಲಾಭವಾಗುವುದಿಲ್ಲ. ಧೂಮಃ ಅಸ್ತಿ ಎಂದು ಹೇಳಿದರೆ ಅಗ್ನಿಯ ಲಾಭವಾಗುತ್ತದೆ. ಅದರಂತೆ ಪ್ರಕೃತ ಅಸ್ಮತ್ ಶಬ್ದವನ್ನು ಪ್ರಯೋಗ ಮಾಡಿದರೆ ಉತ್ತಮಪುರುಷವು ಲಾಭವಾಗುತ್ತದೆ. ಇಲ್ಲಿ ಅಸ್ಮತ್‌ಶಬ್ದವು ವ್ಯಾಪ್ಯವಾಗಿದೆ. ಇದರಿಂದ ವ್ಯಾಪಕವಾದ ಉತ್ತಮಪುರುಷವು ಲಾಭವಾಗುತ್ತದೆ. ಇದಕ್ಕೆ ವಿಪರೀತವಾಗಿ ಉತ್ತಮಪುರುಷದಿಂದ ವ್ಯಾಪ್ಯವಾದ ಅಸ್ಮತ್‌ಶಬ್ದವು ಲಾಭವಾಗುವುದಿಲ್ಲ. ಹೀಗೆ ಉಪಪದ ನಿಯಮ-

ವನ್ನು ವ್ಯಾಖ್ಯಾನ ಮಾಡಿದಾಗ ಟೀಕೆಯಲ್ಲಿ 'ಉತ್ತಮಪುರುಷಪ್ರಯೋಗಾದೇವ ಅಹಮಿತಿ ಲಭ್ಯತೇ' ಎಂಬುದಾಗಿ ಹೇಗೆ ಹೇಳಿದರು?

ಸಮಾಧಾನ – ಅವಧಾರಣರೂಪವಾದ ನಿಯಮವನ್ನು ಮಾಡುವಾಗ ಸಜಾತೀಯವಾದದ್ದು ಅಪೇಕ್ಷಿತವಾಗಿರುತ್ತದೆ. ಉತ್ತಮಪುರುಷವು ವ್ಯಾಪಕವಾಗಿದೆ. ಅಸ್ಮತ್‌ಶಬ್ದವು ವ್ಯಾಪ್ಯವಾಗಿದೆ ಎಂಬುದು ಸರಿ. ಆದರೂ ಕೂಡ ಯುಷ್ಮದ್ಯುಪಪದ ಹಾಗೂ ಶೇಷ ಎಂಬ ಉಪಪದವು ಮಧ್ಯಮಪುರುಷ ಹಾಗೂ ಪ್ರಥಮಪುರುಷಗಳಿಂದ ನಿಯಮಿತವಾಗಿದೆ. ಇವೆರಡೂ ಉತ್ತಮಪುರುಷಕ್ಕೆ ಪ್ರಾಪ್ತವಾಗುವುದಿಲ್ಲ. ಹೀಗಿರುವಾಗ ಉತ್ತಮಪುರುಷಪ್ರಯೋಗದಿಂದ ಅಸ್ಮದ್ಯುಪಪದವೇ ಪ್ರಾಪ್ತವಾಗುತ್ತದೆ. ಆದ್ದರಿಂದ ಉತ್ತಮಪುರುಷಕ್ಕೆ ವ್ಯಾಪ್ಯವಾದ ಅಸ್ಮತ್‌ಶಬ್ದವು ಉತ್ತಮಪುರುಷಕ್ಕೆ ವ್ಯಾಪಕವೂ ಕೂಡ ಆಗುತ್ತದೆ. ಆದ್ದರಿಂದ ಇವೆರಡಕ್ಕೆ ಸಮವ್ಯಾಪ್ತಿಯು ಸಿದ್ಧವಾಯಿತು. ಯತ್ರ ಉತ್ತಮಪುರುಷಪ್ರಯೋಗಃ ತತ್ರ ಅಸ್ಮತ್ ಶಬ್ದಃ ; ಯತ್ರಾಸ್ಮದ್‌ಶಬ್ದಃ ತತ್ರ ಉತ್ತಮಪುರುಷಃ' ಎಂದು. ವಾಸ್ತವಿಕವಾಗಿ ಸೂತ್ರದಿಂದ ನೇರವಾಗಿ ಅಸ್ಮತ್‌ಶಬ್ದಕ್ಕೆ ವ್ಯಾಪಕತ್ವವು ಸಿದ್ಧವಾಗಿರುವುದಿಲ್ಲ. ಆದರೂ ಕೂಡ ಉಳಿದೆರಡು ಬೇರೆ ಕಡೆ ವ್ಯಾಪ್ಯವಾಗಿರುವುದರಿಂದ ಇದೊಂದು ಮಾತ್ರ ವ್ಯಾಪ್ಯವಾದರೆ ವ್ಯಾಪಕವೂ ಕೂಡ ಆಗುತ್ತದೆ.

## ಉಪಪದನಿಯಮಕ್ಕಿಂತ ಪುರುಷನಿಯಮವನ್ನೇ ವಿವಕ್ಷಿಸುವುದು ಸೂಕ್ತ

ವಾಕ್ಯಾರ್ಥಚಂದ್ರಿಕಾ– ಉಪಪದನಿಯಮೇ ಯುಷ್ಮದಸ್ಮದೀ ನಿಯತೇ, ಪುರುಷಾಃ ಶೇಷಶ್ಚಾನಿಯತಾಃ ಇತಿ ಪ್ರಥಮ ಇತ್ಯೇತಾವತ್ಯೇವ ಉಚ್ಯಮಾನೇನ ನಿಯಮೋ ವಿಜ್ಞಾಯತೇ । ಅತ್ರ ನಿಯಮ್ಯಾಂತರಾಭಾವಾತ್ ಪ್ರಥಮ ಏವ ನಿಯಮ್ಯಃ । ಯತ್ರ ಚ ಪ್ರಥಮಾಪ್ರಥಮಪ್ರಸಂಗಃ ತತ್ರೈವ ಚೈವಂ ವಿಧೋ ನಿಯಮಃ ಕರ್ತವ್ಯಃ । ಶೇಷ ಏವ ಚ ತತ್ಪ್ರಸಂಗ ಇತಿ ತತ್ರೈವ ನಿಯಮೋ ವಿಜ್ಞಾಯತ ಇತಿ ಶೇಷಗ್ರಹಣಂ ವ್ಯರ್ಥಮ್ । ಪುರುಷನಿಯಮೇ ತು ಮಧ್ಯಮೋತ್ತಮೌ ನಿಯತೌ ಯುಷ್ಮದ-ಸ್ಮದೀ ಅನಿಯತೇ ಶೇಷಶ್ಚ । ತತ್ರ ಯುಷ್ಮದಸ್ಮದೋರಪಿ ಪ್ರಥಮಪ್ರಸಂಗೇ ಶೇಷ ಏವ ಪ್ರಥಮ ಇತಿ ನಿಯಮಃ ಕರ್ತವ್ಯಃ । ನ ಚಾಂತರೇಣ ಶೇಷಗ್ರಹಣಮೇವಂ ಶಕ್ಯತೇ ಕರ್ತುಮ್ ಇತಿ ಕರ್ತವ್ಯಂ ಶೇಷಗ್ರಹಣಮ್ - ಇತಿ ಶೇಷಗ್ರಹಣಂ ಕುರ್ವತಃ ಸೂತ್ರಕಾರಸ್ಯಾಭಿಮತೋ ಯುಷ್ಮದ್ಯೇವ ಮಧ್ಯಮ ಅಸ್ಮದ್ಯೇವೋತ್ತಮಃ ಶೇಷ ಏವ ಪ್ರಥಮ ಇತ್ಯೇವಮಾಕಾರಪುರುಷನಿಯಮೋ ಯದಾ ತದಾ ಉತ್ತಮಪುರುಷಸ್ಯಾಸ್ಮದರ್ಥಂ ವಿನಾಽಸಂಭವಾತ್ ಸಾಕ್ಷಾದೇವೋತ್ತಮಪುರುಷಪ್ರಯೋಗಾ-ದಹಂ ಇತ್ಯಸ್ಯ ಲಾಭೋ ನ ತು ಪೂರ್ವವದಾರ್ಥಿಕ ಇತ್ಯುಭಯಥಾಽಪಿ 'ಅಹಮ್' ಇತ್ಯಸ್ಯ





ಲಾಭಾತ್ ನ ನ್ಯೂನತಾ ಇತ್ಯಾಶಯಃ । ಏವಕಾರಃ ಉಭಯಥಾಽರ್ಥಲಾಭಸಂಭವೇಽಪಿ ಲಾಘವಮ್ ಏತತ್ಪಕ್ಷೋದ್ಬಲಕಮ್ ಇತಿ ಸೂಚಯತಿ।

ಮತ್ತೊಂದು ಸಮಾಧಾನ – ಉಪಪದನಿಯಮವನ್ನು ಅನುಸರಿಸಿ ಅರ್ಥಾತ್ ಅಹಂ ಎಂಬುದು ಲಭ್ಯವಾಗುತ್ತದೆಂದು ಉತ್ತರಿಸಿದ್ದಾಯಿತು. ಆದರೆ ಉಪಪದನಿಯಮವು ಪಾಣಿನಿಗೆ ಸಮ್ಮತ-ವಲ್ಲ. ಪುರುಷನಿಯಮವೇ ಪಾಣಿನಿಗೆ ಸಮ್ಮತವಾಗಿದೆ. ಅದು ಹೀಗೆ – (1) ಯುಷ್ಮದಿ ಮಧ್ಯಮಃ (2) ಅಸ್ಮದ್ಯುತ್ತಮಃ (3) ಶೇಷೇ ಪ್ರಥಮಃ ಈ ಕ್ರಮದಲ್ಲಿ ಪಾಣಿನಿಯು ಸೂತ್ರವಿನ್ಯಾಸವನ್ನು ಮಾಡಿರುತ್ತಾನೆ. ಒಂದು ವೇಳೆ ಉಪಪದನಿಯಮವನ್ನು ಅನುಸರಿಸುವುದಾದರೆ ಶೇಷೇ ಪ್ರಥಮಃ ಎಂಬ ಕೊನೆಯ ಸೂತ್ರದಲ್ಲಿ  ಶೇಷೇ ಎಂಬ ಪದವೇ ವ್ಯರ್ಥ. ಪ್ರಥಮಃ ಎಂಬ ಪದವಷ್ಟೇ ಸಾಕು. ಮಧ್ಯಮಪುರುಷ ಹಾಗೂ ಉತ್ತಮ ಪುರುಷಗಳು ವ್ಯಾಪಕಗಳಾಗಿವೆ. ಅಸ್ಮತ್‌ಶಬ್ದವಿದ್ದಾಗ ಉತ್ತಮಪುರುಷ ಬಂದೇ ಬರುತ್ತದೆ. ಯುಷ್ಮದ್ ಶಬ್ದವಿದ್ದಾಗ ಮಧ್ಯಮಪುರುಷ ಬಂದೇ ಬರುತ್ತದೆ. ಎಂದು ಉಪಪದ-ನಿಯಮವನ್ನು ತಿಳಿದಾಗ ಪ್ರಥಮಪುರುಷದಲ್ಲಿ ಅಸ್ಮತ್ ಶಬ್ದ ಹಾಗೂ ಯುಷ್ಮತ್ ಶಬ್ದಗಳು ಪ್ರಾಪ್ತವೇ ಆಗುವುದಿಲ್ಲ. ಪರಿಶೇಷಾತ್ ಪ್ರಥಮಪುರುಷವು ಸ್ವತಃ ಪ್ರಾಪ್ತವಾಗುತ್ತದೆ. ಹೀಗೆ ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿದ ವಿಷಯವನ್ನು ಬಿಟ್ಟು ಉಳಿದ ವಿಷಯದಲ್ಲೇ ಪ್ರಥಮಾವಿಭಕ್ತಿಯು ಬರುತ್ತದೆಂದು ಸ್ಪಷ್ಟವಾಗಿ ತಿಳಿಯುವುದರಿಂದ ಪುನಃ ಶೇಷೇ ಎಂಬ ಪದಪ್ರಯೋಗವು ವ್ಯರ್ಥವಾಗಿದೆ. ಶೇಷೇ ಎಂಬ ಪದಗ್ರಹಣವಿಲ್ಲದಿದ್ದರೂ ಉಳಿದರ್ಥದಲ್ಲೇ ಪ್ರಥಮಾವಿಭಕ್ತಿ(ಪುರುಷ)ಯು ಬರುತ್ತದೆಂದು ತಿಳಿಯು-ತ್ತದೆ.

ಯುಷ್ಮತ್‌ಶಬ್ದವು ಮಧ್ಯಮಪುರುಷದಿಂದ ಅಸ್ಮತ್‌ಶಬ್ದವು ಉತ್ತಮಪುರುಷದಿಂದ ನಿಯತ-ವಾಗಿದೆ. ಆಗ ಪ್ರಥಮಃ ಎಂದಷ್ಟೇ ಹೇಳಿರುವುದರಿಂದ ಪ್ರಥಮಪುರುಷದಲ್ಲಿ ನಿಯಮ್ಯವಾಗಿದೆ. ಯಾವ ಸಂದರ್ಭದಲ್ಲಿ ಪ್ರಥಮಪುರುಷ ಹಾಗೂ ಉಳಿದಪುರುಷಗಳು ಪ್ರಸಕ್ತವಾಗುತ್ತದೆಯೋ ಅಲ್ಲಿ ಮಾತ್ರ ಪ್ರಥಮ ಏವ ಎಂಬುದಾಗಿ ನಿಯಮವನ್ನು ಮಾಡಬೇಕು. ಆದರೆ ಯುಷ್ಮತ್ ಹಾಗೂ ಅಸ್ಮತ್‌ಶಬ್ದಗಳ ಯೋಗವಿದ್ದಾಗ ಪ್ರಥಮಪುರುಷಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಕೇವಲ ಶೇಷದಲ್ಲಷ್ಟೇ ಪ್ರಥಮಾ ಹಾಗೂ ಅಪ್ರಥಮಪ್ರಸಂಗವಿದೆ. ಹೀಗಿರುವಾಗ ಶೇಷಗ್ರಹಣವು ವ್ಯರ್ಥ. ಆದ್ದರಿಂದ ಉಪಪದನಿಯಮವು ಪಾಣಿನಿಗೆ ಸಮ್ಮತವಾಗಿಲ್ಲ.

ಪುರುಷನಿಯಮವನ್ನು ಮಾಡಿದಾಗ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ. ಏಕೆಂದರೆ ಯುಷ್ಮದಿ ಏವ ಮಧ್ಯಮಃ; ಅಸ್ಮದಿ ಏವ ಉತ್ತಮಃ; ಶೇಷೇ ಏವ ಪ್ರಥಮಃ ಎಂಬುದಾಗಿ ಅನ್ವಯವನ್ನು

ಹೇಳಿದಂತಾಗುತ್ತದೆ. ಈ ಪಕ್ಷದಲ್ಲಿ ಮಧ್ಯಮಪುರುಷ ಹಾಗೂ ಉತ್ತಮಪುರುಷಗಳು ಅಸ್ಮತ್‌ಶಬ್ದ ಹಾಗೂ ಯುಷ್ಮತ್‌ಶಬ್ದದಿಂದ ನಿಯತವಾಗುತ್ತವೆ. ಯುಷ್ಮತ್‌ಶಬ್ದ ಹಾಗೂ ಶೇಷಗಳು ನಿಯತವಾಗುವುದಿಲ್ಲ. ಆಗ ಯುಷ್ಮತ್‌ಶಬ್ದದಲ್ಲೇ ಮಧ್ಯಮಪುರುಷ ಬರುತ್ತದೆ ಎಂದು ಹೇಳಿದಾಗ ಬೇರೆ ಪುರುಷಗಳು ಬರುವುದಿಲ್ಲ ಎಂದು ಹೇಳಿದಂತಾಗುವುದಿಲ್ಲ. ಅದರಂತೆ ಅಸ್ಮದ್ಯೇವ ಉತ್ತಮಃ ಎಂದು ಹೇಳಿದಾಗ ಅಸ್ಮತ್‌ಶಬ್ದದಲ್ಲೇ ಉತ್ತಮ ಪುರುಷಬರುತ್ತದೆಂದು ಅರ್ಥವಾಗುತ್ತದೆ. ಈ ಪಕ್ಷದಲ್ಲೂ ಕೂಡ ಬೇರೆ ಪುರುಷಗಳು ಬರುವುದಿಲ್ಲವೆಂದು ಹೇಳಿದಂತಾಗುವುದಿಲ್ಲ. ಈ ಎರಡು ಸೂತ್ರಗಳ ಅನಂತರ ಶೇಷೇ ಪ್ರಥಮಃ ಎಂಬ ಸೂತ್ರವನ್ನು ಹೇಳಿದಾಗ ಈ ಸೂತ್ರಕ್ಕೆ ಯುಷ್ಮತ್‌ಶಬ್ದ ಹಾಗೂ ಅಸ್ಮತ್‌ಶಬ್ದಗಳ ಯೋಗವಿದ್ದಾಗ ಪ್ರಥಮಪುರುಷವು ಪ್ರಾಪ್ತವಾಗುವುದಿಲ್ಲ ಎಂಬುದಾಗಿ ನಿಯಮವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಶೇಷಗ್ರಹಣವನ್ನು ಸೂತ್ರಕಾರರು ಮಾಡಿರುವುದರಿಂದ ಯುಷ್ಮದ್ಯೇವ ಮಧ್ಯಮಃ, ಅಸ್ಮದ್ಯೇವ ಉತ್ತಮಃ, ಶೇಷೇ ಏವ ಪ್ರಥಮಃ ಎಂಬುದಾಗಿ ಪುರುಷನಿಯಮವನ್ನು ಅನುಸರಿಸಿದ್ದಾರೆಂದು ತಿಳಿಯುತ್ತದೆ. ಹೀಗೆ ವ್ಯಾಖ್ಯಾನ ಮಾಡಿದಾಗ ಉತ್ತಮಪುರುಷಪ್ರಯೋದಿಂದಲೇ ಅಹಂ ಎಂಬುದು ಲಾಭವಾಗುತ್ತದೆ ಎಂಬರ್ಥವನ್ನು ಸಾಕ್ಷಾತ್ತಾಗಿಯೇ ಹೇಳಿದಂತಾಯಿತು. ಆದ್ದರಿಂದ ನ್ಯೂನತಾ ದೋಷಕ್ಕೆ ಅವಕಾಶವಿಲ್ಲ. ಟೀಕೆಯಲ್ಲಿ ಉತ್ತಮಪುರುಷಪ್ರಯೋಗಾದೇವ ಎಂಬುದಾಗಿ ಏವಕಾರವನ್ನು ಪ್ರಯೋಗ ಮಾಡಿರುವುದರಿಂದ ಪುರುಷನಿಯಮಪಕ್ಷವನ್ನೇ ವಿವಕ್ಷಿಸಬೇಕೆಂದು ಸೂಚಿಸಿದ್ದಾರೆ. ಏಕೆಂದರೆ ಈ ಪಕ್ಷದಲ್ಲಿ ಲಾಘವವಿದೆ.

## ಇಷ್ಟತ್ವವು ವಂದ್ಯತ್ವಕ್ಕೆ ನೇರವಾಗಿ ಪ್ರಯೋಜಕವಲ್ಲ

ವಾಕ್ಯಾರ್ಥಚಂದ್ರಿಕಾ – ಅತ್ರ ವಿವಕ್ಷಿತಂ 'ಸಮ್' ಇತ್ಯಸ್ಯಾರ್ಥಮಾಹ – ಸಮಿತಿ ॥ ತದ್ವಿವಕ್ಷಾಯಾಂ ನಿಯಾಮಕಮಾಹ – ತಥಾವಿಧ ಇತಿ ॥ ಅನೇನೋತ್ತರವ್ಯಾಖ್ಯಾನೇ ವಿಶಿಷ್ಟೇಷ್ಟಾದ್ಧಿ ಕೃತತ್ವಾನಾಂ ವಂದ್ಯತ್ವಪ್ರಯೋಜಕತಯಾಽಭಿಮತಾನಾಂ ಮಧ್ಯೇ ವಿಶಿಷ್ಟಾದ್ಧಿಕೃತತ್ವಯೋಃ ವಿಶಿಷ್ಟ ವಂದ್ಯತ್ವಪ್ರಯೋಜಕತ್ವವತ್ ಇಷ್ಟತ್ವಸ್ಯ ತದಭಾವಾತ್ ಭಕ್ತ್ಯಾದಿಸಹಕೃತತ್ವರೂಪವಿಶೇಷಣದ್ವಾರೈವ ತದಿತಿ ಯದಭಿಪ್ರೇತಂ ತದಪಿ ಸಮರ್ಥಿತಂ ಭವತಿ।

ವಿವಕ್ಷಿತವಾದ ಸಮ್‌ಪದಕ್ಕೆ ಯಾವ ಅರ್ಥವಿದೆಯೋ ಅದನ್ನು 'ಸಮ್' ಇತ್ಯಾದಿ ಟೀಕಾವಾಕ್ಯದಿಂದ ಹೇಳುತ್ತಿದ್ದಾರೆ. ಇದೇ ಸಮ್ಯಕ್ತ್ವವನ್ನು ವಿವಕ್ಷಿಸಲು ನಿಯಾಮಕಪ್ರಮಾಣವನ್ನು 'ತಥಾವಿಧಃ' ಎಂಬ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ಮುಂದಿನ ವ್ಯಾಖ್ಯಾನದಲ್ಲಿ ವಿಶಿಷ್ಟತ್ವ,

  



ಇಷ್ಟತ್ವ ಹಾಗೂ ಅಧಿಕೃತತ್ವಗಳು ವಂದ್ಯತ್ವಪ್ರಯೋಜಕವಾಗಿವೆ ಎಂಬುದಾಗಿ ಸಮರ್ಥನೆ ಮಾಡುತ್ತಾರೆ. ಈ ಮೂರರ ಮಧ್ಯದಲ್ಲಿ ವಿಶಿಷ್ಟತ್ವ ಹಾಗೂ ಅಧಿಕೃತತ್ವಗಳು ಸಾಕ್ಷಾತ್ತಾಗಿ ವಂದ್ಯತ್ವಪ್ರಯೋಜಕವಾದಂತೆ ಇಷ್ಟತ್ವವು ಆಗಿರುವುದಿಲ್ಲ. ಭಕ್ತ್ಯಾದಿಸಹಕೃತತ್ವರೂಪವಾದ ವಿಶೇಷಣದ ಮೂಲಕವೇ ಪ್ರಯೋಜಕ-ವಾಗಿದೆ ಎಂಬ ಅಭಿಪ್ರಾಯವನ್ನು ಮುಂದೆ ಹೇಳುತ್ತಾರೆ. ಅದನ್ನು ಈಗ ಸಮರ್ಥನೆ ಮಾಡಿದಂತಾಯಿತು.

ವಿವರಣೆ– ಸನ್ನಮಾಮಿ ಎಂಬಲ್ಲಿ ಸಮ್ ಎಂಬ ಉಪಸರ್ಗವಿದೆ. ಇದಕ್ಕೆ ಯಾವ ಅರ್ಥವನ್ನು ವಿವಕ್ಷಿಸಿ-ದ್ದಾರೋ ಅದನ್ನು ಸಮ್ ಇತಿ ಎಂಬ ಟೀಕಾವಾಕ್ಯದಿಂದ ಅರ್ಥವಿವರಿಸುತ್ತಿದ್ದಾರೆ. ಭಕ್ತ್ಯತಿಶಯಸಾಹಿತ್ಯ-ರೂಪವಾದ ಪ್ರಣಾಮದಲ್ಲಿ ಸಮ್ಯಕ್ತ್ವವನ್ನೇ ವಿವಕ್ಷಿಸಲು ಏನು ನಿಯಾಮಕ? ಎಂಬ ಪ್ರಶ್ನೆಗೆ 'ತಥಾವಿಧ' ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ. ಮುಂದಿನ ವ್ಯಾಖ್ಯಾನದಲ್ಲಿ ಟೀಕಾಕಾರರು ವಿಶಿಷ್ಟತ್ವ, ಅಧಿಕೃತತ್ವ, ಹಾಗೂ ಇಷ್ಟತ್ವಗಳು ವಂದ್ಯತ್ವಕ್ಕೆ ಪ್ರಯೋಜಕವಾದ ಧರ್ಮಗಳಾಗಿವೆ ಎಂಬುದಾಗಿ ನಿರೂಪಣೆ ಮಾಡು-ತ್ತಾರೆ. ಈ ಮೂರರಲ್ಲಿ ವಿಶಿಷ್ಟತ್ವ ಹಾಗೂ ಅಧಿಕೃತತ್ವಗಳೆಂಬ ಎರಡು ಧರ್ಮಗಳು ವಂದ್ಯತ್ವಕ್ಕೆ ಪ್ರಯೋ-ಜಕವಾಗುತ್ತವೆ. ಏಕೆಂದರೆ ವಿಶಿಷ್ಟನಾದವನು ಸರ್ವೋತ್ತಮನಾಗಿರುವುದರಿಂದ ವಿಘ್ನಪರಿಹಾರಕನಾಗಿರುತ್ತಾನೆ. ಅಧಿಕೃತನಾದವನು ಸ್ವವಿಷಯಕಗ್ರಂಥಪ್ರಬೋಧಾದಿಗಳನ್ನು ಮಾಡುತ್ತಾನೆ. ಆದ್ದರಿಂದ ವಿಶಿಷ್ಟನಾದವನನ್ನು ಹಾಗೂ ಅಧಿಕೃತನಾದವನನ್ನು ಗ್ರಂಥಾರಂಭದಲ್ಲಿ ನಮಸ್ಕಾರ ಮಾಡಬೇಕು. ಆದರೆ ಇಷ್ಟತ್ವವು ವಂದ್ಯತ್ವಕ್ಕೆ ಹೇಗೆ ಪ್ರಯೋಜಕವಾಗುತ್ತದೆ?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ವಿಶಿಷ್ಟತ್ವ ಹಾಗೂ ಅಧಿಕೃತತ್ವಗಳು ವಂದ್ಯತ್ವಕ್ಕೆ ನೇರವಾಗಿ ಪ್ರಯೋಜಕವಾಗುತ್ತವೆ. ಆದರಂತೆ ಇಷ್ಟತ್ವವು ನೇರವಾಗಿ ಪ್ರಯೋಜಕವಾಗದೇ ಇರಬಹುದು. ಆದರೆ ಭಕ್ತ್ಯಾದಿಸಹಕೃತತ್ವವೆಂಬ ವಿಶೇಷಣದ ಮೂಲಕ ವಂದ್ಯತ್ವಕ್ಕೆ ಪ್ರಯೋಜಕವಾಗಿದೆ. ಅದು ಹೀಗೆ – ಯಾರು ಸರ್ವೋತ್ತಮನಾಗಿದ್ದಾನೋ ಮತ್ತು ಗ್ರಂಥ ಪ್ರತಿಪಾದ್ಯನಾಗಿದ್ದಾನೋ ಅವನಲ್ಲಿ ಭಕ್ತಿಯು ಹುಟ್ಟಬೇಕೆಂದರೆ ಇಷ್ಟನಾಗಿರಲೇಬೇಕು. ಹೀಗೆ ಭಕ್ತಿಯು ಹುಟ್ಟುವುದಕ್ಕೋಸ್ಕರ ಇಷ್ಟತ್ವವು ಪ್ರಯೋಜಕವಾಗುತ್ತದೆ. ಹೀಗೆ ಮುಂದೆ ಟೀಕಾರಾಯರು ಉಪಪಾದನೆ ಮಾಡುತ್ತಾರೆ. ಅದನ್ನು ಈಗ 'ತಥಾವಿಧಃ' ಎಂಬ ವಾಕ್ಯದಿಂದ ಸಮರ್ಥನೆ ಮಾಡಿದಂತಾಯಿತು.

## ನಾರಾಯಣಂ ಎಂಬುದಷ್ಟೇ ಕರ್ಮಕಾರಕ; ಉಳಿದವುಗಳಲ್ಲ

ವಾಕ್ಯಾರ್ಥಚಂದ್ರಿಕಾ– ನನು ತಥಾऽಪಿ 'ನಿಖಿಲ' ಇತ್ಯಾದಿಭಿಃ ವಿಜಾತೀಯೈರ್ವ್ಯವ-ಧಾನಾತ್ ನಾರಾಯಣಮ್ ಇತ್ಯಸ್ಯ 'ನಮಾಮಿ' ಇತ್ಯನೇನಾನ್ವಯಾನುಪಪತ್ತಿಃ। ನಾರಾಯಣಸ್ಯೈವ





ಪ್ರಣಾಮಕರ್ಮತ್ವೇ 'ನಿಖಿಲ' ಇತ್ಯಾದೀನಾಂ ತದಭಾವಾತ್ ತತ್ರ ದ್ವಿತೀಯಾನುಪಪತ್ತಿಶ್ಚ । ನ ಚ 'ನಿಖಿಲ' ಇತ್ಯಾದೀನಾಂ ಪ್ರಣಾಮಕರ್ಮಣಾ ನಾರಾಯಣೇನ ಸಂಬಂಧಾನ್ನ ವಿಜಾತೀಯ-ವ್ಯವಧಾನಂ ನಾಪಿ ದ್ವಿತೀಯಾನುಪಪತ್ತಿರಿತಿ ವಾಚ್ಯಮ್, 'ಗುಣಾನಾಂ ಚ ಪರಾರ್ಥತ್ವಾತ್' ಇತಿ ನ್ಯಾಯೇನ ಕಾರಕಾಣಾಂ ಕ್ರಿಯಾನ್ವಿತಸ್ವಾರ್ಥಬೋಧಕತ್ವವ್ಯುತ್ಪತ್ತ್ಯಾ ಪರಸ್ಪರಸಂಬಂಧಸ್ಯ ಅಸಂಭವಾತ್ ತಾದೃಶಸಂಬಂಧಸ್ಯಾಭಾವಾತ್ । ಯಾದೃಶತಾದೃಶಸಂಬಂಧಸ್ಯ ದ್ವಿತೀಯಾನುಪಪಾದಕತ್ವಾಚ್ಚ ಇತ್ಯತೋ ವಿಶೇಷಣಾನಾಂ ಪೃಥಕ್ಕಾರಕತ್ವಾಭಾವಾದ್ ವಿಶೇಷ್ಯನಿಷ್ಠತ್ವಾಚ್ಚ ವಿಶೇಷ್ಯವಿಶೇಷಣ-ಭಾವಾಭ್ಯುಪಗಮೇ ನ ವ್ಯವಧಾನಂ ನಾಪಿ ದ್ವಿತೀಯಾನುಪಪತ್ತಿರಿತ್ಯಾಹ– ನಿಖಿಲೇತ್ಯಾದೀನಾಂ ತ್ವಿತಿ ॥

ಆಕ್ಷೇಪ – 'ನಿಖಿಲಪೂರ್ಣಗುಣೈಕದೇಹಂ' ಮೊದಲಾದ ವಿಶೇಷಣಗಳು ವಿಜಾತೀಯವಾಗಿವೆ. ಇಂಥ ವಿಜಾತೀಯವಾದ ವಿಶೇಷಣಗಳಿಂದ ವ್ಯವಧಾನವಿರುವುದರಿಂದ 'ನಾರಾಯಣಂ' ಎಂಬ ಸಜಾತೀಯವಾದ ಶಬ್ದಕ್ಕೆ ನಮಾಮಿ ಎಂಬುದರ ಜೊತೆ ಅನ್ವಯವು ಅನುಪಪನ್ನವಾಗುತ್ತದೆ. ಏಕೆಂದರೆ, ನಾರಾಯಣನೇ ಪ್ರಣಾಮಕ್ಕೆ ಕರ್ಮನಾಗಿದ್ದಾನೆ. ನಿಖಿಲಪೂರ್ಣಗುಣೈಕದೇಹತ್ವಾದಿಗಳು ಕರ್ಮವಾಗಿ-ರುವುದಿಲ್ಲ. ಆದ್ದರಿಂದ ಕರ್ಮಣಿ ದ್ವಿತೀಯಾ ಎಂಬ ಸೂತ್ರದಿಂದ ನಾರಾಯಣಂ ಎಂಬ ಪದಕ್ಕೆ ಮಾತ್ರ ದ್ವಿತೀಯಾವಿಭಕ್ತಿಯು ಪ್ರಾಪ್ತವಾಗುತ್ತದೆ. ನಿಖಿಲಪೂರ್ಣಗುಣೈಕದೇಹಂ ಇತ್ಯಾದಿ ವಿಶೇಷಣಗಳಿಗೆ ದ್ವಿತೀಯಾವಿಭಕ್ತಿಯು ಪ್ರಾಪ್ತವಾಗುವುದಿಲ್ಲ.

ನಿಖಿಲಪೂರ್ಣಗುಣೈಕದೇಹಂ ಇತ್ಯಾದಿಗಳು ಪ್ರಣಾಮಕ್ಕೆ ಕರ್ಮನಾದ ನಾರಾಯಣನ ಜೊತೆಗೆ ವಿಶೇಷರೂಪವಾಗಿ ಸಂಬಂಧವನ್ನು ಹೊಂದಿವೆ. ಇವುಗಳು ಸಜಾತೀಯವೇ ಆಗುತ್ತವೆ ಹೊರತು ವಿಜಾತೀಯವಾಗುವುದಿಲ್ಲ. ಆದ್ದರಿಂದ ದ್ವಿತೀಯಾವಿಭಕ್ತಿಯು ಅನುಪಪನ್ನವಾಗುವುದಿಲ್ಲ.

ಹೀಗೆ ಪ್ರಶ್ನಿಸಬಾರದು. 'ಗುಣಾನಾಂ ಪರಾರ್ಥತ್ವಾತ್' ಎಂಬ ನ್ಯಾಯದಂತೆ ಕಾರಕಗಳು ಕ್ರಿಯಾನ್ವಿತವಾದ ಸ್ವಾರ್ಥಬೋಧಕಗಳಾಗುತ್ತವೆ. ಆದ್ದರಿಂದ ಕಾರಕಗಳಿಗೆ ಪರಸ್ಪರಸಂಬಂಧವು ಅಸಂಭಾವಿತವಾದ್ದರಿಂದ 'ನಿಖಿಲಪೂರ್ಣಗುಣೈಕದೇಹಂ' ಎಂಬ ಕಾರಕಕ್ಕೂ ನಾರಾಯಣನೆಂಬ ಕಾರಕಕ್ಕೂ ಸಂಬಂಧವನ್ನು ಹೇಳಲು ಸಾಧ್ಯವಿಲ್ಲ. ಯಾದೃಶತಾದೃಶಸಂಬಂಧವನ್ನು ಹೇಳಬಹುದು. ಆದರೆ ಇದು ದ್ವಿತೀಯಾವಿಭಕ್ತಿಗೆ ಉಪಪಾದಕವಾಗುವುದಿಲ್ಲ?

ಸಮಾಧಾನ – ವಿಶೇಷಣಗಳು ಪ್ರತ್ಯೇಕವಾಗಿ ಕಾರಕವೆಂದು ಕರೆಸಿಕೊಳ್ಳುವುದಿಲ್ಲ. ವಿಶೇಷ್ಯ-ನಿಷ್ಠವಾಗುತ್ತವೆ. ವಿಶೇಷ್ಯವಿಶೇಷಣಭಾವವನ್ನು ಅಂಗೀಕಾರ ಮಾಡಿದಾಗ ವ್ಯವಧಾನವನ್ನು ಹೇಳಲು





ಸಾಧ್ಯವಿಲ್ಲ. ಮತ್ತು ದ್ವಿತೀಯಾವಿಭಕ್ತಿಯೂ ಕೂಡ ಅನುಪಪನ್ನವಾಗುವುದಿಲ್ಲ. ಈ ಅಭಿಪ್ರಾಯದಿಂದ 'ನಿಖಿಲ ಇತ್ಯಾದೀನಾಂ ತು' ಎಂಬ ಟೀಕಾವಾಕ್ಯ ಹೊರಟದೆ.

ವಿಶೇಷವಿವರಣೆ – ಗುಣಾನಾಂ ಚ ಪರಾರ್ಥತ್ವಾತ್ ಎಂಬುದರ ಅಭಿಪ್ರಾಯ ಹೀಗಿದೆ – ಒಂದು ವಾಕ್ಯದಲ್ಲಿ ಕ್ರಿಯೆಯೇ ಪ್ರಧಾನವಾಗಿರುತ್ತದೆ. ಅಂಥ ಕ್ರಿಯೆಗೆ ಕರ್ತೃಕರ್ಮಾದಿ ಕಾರಕಗಳು ಅಂಗವಾಗುತ್ತವೆ. ಆದ್ದರಿಂದ ಕಾರಕಗಳು ಕ್ರಿಯಾನ್ವಿತವಾದ ಸ್ವಾರ್ಥಬೋಧಕವಾಗುತ್ತವೆ ಹೊರತು ನೇರವಾಗಿ ಸ್ವಾರ್ಥವನ್ನು ತಿಳಿಸುವುದಿಲ್ಲ. ಆದ್ದರಿಂದ ಗುಣಾನಾಂ ಚ ಪರಾರ್ಥತ್ವಾತ್ ಎಂಬುದಕ್ಕೆ ಕಾರಕಗಳೆಂಬ ಗುಣಗಳು ಕ್ರಿಯೆಯೆಂಬ ಪರಾರ್ಥಕ್ಕೋಸ್ಕರ ಪ್ರಯುಕ್ತವಾಗುವುದರಿಂದ ಎಂದರ್ಥ. ವಾಕ್ಯದಲ್ಲಿ ಕ್ರಿಯೆಗೆ ಪ್ರಾಧಾನ್ಯವಿರುತ್ತದೆ; ಕಾರಕಗಳು ಗುಣಭೂತವಾಗಿರುತ್ತವೆ. ಇಂಥ ಕಾರಕಗಳು ಸ್ವತಂತ್ರವಾಗಿ ಏನನ್ನೂ ಕೂಡ ಪ್ರತಿಪಾದನೆ ಮಾಡುವುದಿಲ್ಲ. ಇಂಥ ಗುಣಭೂತವಾದ ಕಾರಕಗಳು ಪರಸ್ಪರಸಂಬಂಧವನ್ನೇ ಹೊಂದುವುದಿಲ್ಲ. ಇನ್ನು ಯಾದೃಶ ತಾದೃಶಸಂಬಂಧವನ್ನು ಹೇಳಬೇಕು. ಅದು ದ್ವಿತೀಯಾವಿಭಕ್ತಿಗೆ ಉಪಪಾದಕವಾಗುವುದಿಲ್ಲ.

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು – ಈ ಶ್ಲೋಕದಲ್ಲಿ ಸನ್ನಮಾಮಿ ಎಂಬುದು ಕ್ರಿಯಾವಾಚಕವಾದ ಪದವಾಗಿದೆ. ಇದರಲ್ಲಿ ಅನ್ವಯವನ್ನು ಹೊಂದುವ ಮೂಲಕ ನಾರಾಯಣಂ ಎಂಬುದು ಸ್ವಾರ್ಥಬೋಧಕವಾಗಿದೆ. ಆದ್ದರಿಂದ ನಾರಾಯಣಂ ಎಂಬುದು ಮಾತ್ರ ಕಾರಕಪದವಾಗಿದೆ. ನಿಖಿಲಪೂರ್ಣಗುಣೈಕದೇಹಂ ಇತ್ಯಾದಿಗಳು ಕಾರಕಗಳೇ ಆಗಿರುವುದಿಲ್ಲ. ನಾರಾಯಣಂ ಎಂಬಲ್ಲಿರುವ ದ್ವಿತೀಯಾವಿಭಕ್ತಿಮಾತ್ರ ಕರ್ಮತ್ವವು ಅರ್ಥವಾಗಿದೆ. ನಿಖಿಲಪೂರ್ಣಗುಣೈಕದೇಹಂ ಇತ್ಯಾದಿ ಸ್ಥಳದಲ್ಲಿರುವ ದ್ವಿತೀಯಾವಿಭಕ್ತಿಗಳು ಕೇವಲ ಅಭೇದವನ್ನಷ್ಟೇ ಹೇಳುತ್ತಿವೆ. ಸುಂದರೇಣ ರಾಮೇಣ ಎಂದು ಹೇಳಿದಾಗ ಸುಂದರೇಣ ಎಂಬಲ್ಲಿರುವ ತೃತೀಯಾವಿಭಕ್ತಿಯು ಕೇವಲ ಅಭೇದವನ್ನಷ್ಟೇ ಹೇಳುತ್ತಿದೆ. ರಾಮೇಣ ಎಂಬಲ್ಲಿರುವ ತೃತೀಯಾವಿಭಕ್ತಿಯು ಕರ್ತೃತ್ವವನ್ನು ಹೇಳುತ್ತದೆ. ಆದ್ದರಿಂದ ಕಾರಕವಿಭಕ್ತಿ ಎಂದರೆ ರಾಮಶಬ್ದವು ಮಾತ್ರ. ಸುಂದರಶಬ್ದವು ಕಾರಕಶಬ್ದಕ್ಕೆ ಕೇವಲ ವಿಶೇಷಣವಾಗಿದೆ ಎಂದು ಹೇಗೆ ಹೇಳುತ್ತೇವೋ ಹಾಗೆಯೇ ಇಲ್ಲೂ ಕೂಡ ನಿಖಿಲಪೂರ್ಣಗುಣೈಕದೇಹಂ ಎಂಬುದು ಕಾರಕಪದವಾದ ನಾರಾಯಣಪದಕ್ಕೆ ಕೇವಲ ವಿಶೇಷಣಗಳಾಗಿವೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ನಿಖಿಲಪೂರ್ಣಗುಣೈಕದೇಹಂ ಎಂಬುದಕ್ಕೂ ನಾರಾಯಣಂ ಎಂಬುದಕ್ಕೂ ಕೇವಲ ಯಾದೃಶತಾದೃಶಸಂಬಂಧವನ್ನಷ್ಟೇ ಹೇಳಬೇಕಾದೀತು ಎಂಬ ಆಕ್ಷೇಪವನ್ನು ಪರಿಹರಿಸಿದಂತಾಯಿತು. ಏಕೆಂದರೆ ನಾರಾಯಣಂ ಎಂಬುದಕ್ಕೂ ನಿಖಿಲಪೂರ್ಣಗುಣೈಕದೇಹಂ ಇತ್ಯಾದಿಗಳಿಗೂ ವಿಶೇಷ್ಯವಿಶೇಷಣಭಾವ-





ರೂಪವಾದ ಸಂಬಂಧವಿದೆ. ಆದ್ದರಿಂದಲೇ ದ್ವಿತೀಯಾವಿಭಕ್ತಿಯು ಉಪಪನ್ನವಾಗುತ್ತದೆ. ಹೀಗೆ ಹೇಳಿದ್ದರಿಂದ ವ್ಯವಧಾನವಿದೆ ಎಂಬ ಆಕ್ಷೇಪವನ್ನು ಕೂಡ ಪರಿಹರಿಸಿದಂತಾಯಿತು. ವಿಶೇಷ್ಯವಿಶೇಷಣಭಾವರೂಪವಾದ ಸಂಬಂಧವಿರುವುದರಿಂದ ವ್ಯವಧಾನಕ್ಕೆ ಅವಕಾಶವಿಲ್ಲ.

ಪ್ರಣಾಮಕರ್ಮಣಾ ಎಂಬ ಒಂದೇ ಪದಕ್ಕೆ ವಾಕ್ಯಾರ್ಥಚಂದ್ರಿಕಾಕಾರರು ಹೀಗೆ ಅದ್ಭುತವಾಗಿ ವ್ಯಾಖ್ಯಾನ ಮಾಡಿದ್ದಾರೆ. ಪ್ರಣಾಮದಲ್ಲಿ ಕರ್ಮವಾದವನು ನಾರಾಯಣನು ಮಾತ್ರ. ಆದ್ದರಿಂದ ನಾರಾಯಣಂ ಎಂಬ ಪದವಷ್ಟೇ ಕರ್ಮಕಾರಕವಾಗುತ್ತದೆ. ಈ ಅಭಿಪ್ರಾಯದಿಂದ ಟೀಕೆಯಲ್ಲಿ 'ಪ್ರಣಾಮಕರ್ಮಣಾ' ಎಂಬುದಾಗಿ ಹೇಳಿದ್ದಾರೆ.

## ರಸಘಟ್ಟ

## 'ಸನ್ನಮಾಮಿ' ಎಂಬುದಕ್ಕೆ ಸುಂದರವ್ಯಾಖ್ಯಾನ

ಕಾಶೀಟಿಪ್ಪಣೀ– ನನು ಸಮ್ ಇತ್ಯಸ್ಯ ವೈಯ್ಯರ್ಥ್ಯಮ್ । ಯಾಥಾರ್ಥ್ಯರೂಪಸಮ್ಯಕ್ತ್ವಸ್ಯ ಸ್ವತಸ್ತ್ವೇನೈವ ಲಾಭಾತ್ ಅತ ಆಹ – ಸಮ್ ಇತೀತಿ ॥ ಅತ್ರ ಭಕ್ತಿಶಬ್ದೇನ ಸ್ನೇಹೋ ವಿವಕ್ಷಿತೋ ನ ತು ಮಾಹಾತ್ಮ್ಯಜ್ಞಾನಮಪಿ। ನಮನಸ್ಯೈವ ತದ್ರೂಪತ್ವಾತ್ । ಆದಿನಾ ಅಧಿಕಾರಾದಿಪರಿಗ್ರಹಃ।

ನನು ನಮನೇನೈವ ಫಲಸಿದ್ಧೇಃ ಭಕ್ತ್ಯಾದಿವೈಯರ್ಥ್ಯಮ್ ಅತ ಆಹ – ತಥಾವಿಧ ಇತಿ ॥ ಭಕ್ತ್ಯಾದ್ಯತಿಶಯಸಹಿತ ಇತ್ಯರ್ಥಃ। ಯದ್ಯಪಿ 'ಪ್ರಿಯತಮಮ್' ಇತ್ಯನೇನ ಭಕ್ತ್ಯತಿಶಯೋ ದರ್ಶಿತಃ। ತಥಾಽಪಿ ತತ್ಪೂರ್ವಕಪ್ರಣಾಮಸ್ಯ ಅಭಿಮತಸಿದ್ಧ್ಯಂಗತ್ವಸೂಚನಾಯ ಸಂಶಬ್ದ ಇತಿ ಭಾವಃ॥

ನನು 'ನಿಖಿಲ' ಇತ್ಯಾದೀನಾಂ 'ನಮಾಮಿ' ಇತ್ಯನೇನ ಸಾಕ್ಷಾದನ್ವಯೇ ವಾಕ್ಯಭೇದಃ। ನಾರಾಯಣಮ್ ಇತ್ಯನೇನಾನ್ವಯೇ ಚ ತತ್ಪೂರ್ವಂ ಪ್ರಯೋಗಾಪತ್ತಿಃ। ವಿಶೇಷಣಸ್ಯ ಪೂರ್ವತ್ವನಿಯಮಾದಿತ್ಯತ ಆಹ – ನಿಖಿಲೇತ್ಯಾದೀನಾಮ್ ಇತಿ ॥ ನಾರಾಯಣಪದಸ್ಯ ಪರಮಮಾಂಗಲಿಕತ್ವೇನ ಶಾಸ್ತ್ರಾರ್ಥವಾಚಿತಯಾ ಮುಖ್ಯತ್ವೇನ ಚ ಪ್ರಥಮಂ ಪ್ರಯೋಗೇಽಪಿ ತಾತ್ಪರ್ಯಬಲೇನೋತ್ತರತ್ರ ಯೋಜನಯಾ ವಿಶೇಷ್ಯತ್ವೋಪಪತ್ತೇರಿತಿ ಭಾವಃ॥

ಸನ್ನಮಾಮಿ ಎಂಬಲ್ಲಿ ಸಮ್ ಎಂಬ ಉಪಸರ್ಗವು ವ್ಯರ್ಥವಾಗುತ್ತದೆ. ಏಕೆಂದರೆ ಯಾಥಾರ್ಥ್ಯರೂಪವಾದ ಸಮ್ಯಕ್ತ್ವವು ಸ್ವತಃ ಲಾಭವಾಗುತ್ತದೆ. ಸಮ್ ಎಂದು ಹೇಳದಿದ್ದರೂ ಕೂಡ ನಮಾಮಿ





ಎಂಬುದರಿಂದಲೇ ಸಮ್ಯಕ್ತ್ವವು ತಿಳಿಯುತ್ತದೆಂದು ಅಭಿಪ್ರಾಯ. ಹೀಗಿರುವಾಗ 'ಸಮ್' ಎಂಬ ಉಪಸರ್ಗವನ್ನು ಏಕೆ ಹೇಳಿದರು?

ಉತ್ತರ ಹೀಗಿದೆ – ಸಮ್ ಎಂಬ ಉಪಸರ್ಗದಿಂದ ಭಕ್ತ್ಯಾದಿಗಳಲ್ಲಿ ಅತಿಶಯವನ್ನು ತಿಳಿಸಿದ್ದಾರೆ. ಇದಕ್ಕಾಗಿ ಸಮ್ ಎಂಬ ಉಪಸರ್ಗವು ಸಾರ್ಥಕವಾಗಿದೆ. ಭಕ್ತಿಶಬ್ದದಿಂದ ಸ್ನೇಹವನ್ನು ವಿವಕ್ಷಿಸಬೇಕು. ಮಾಹಾತ್ಮ್ಯಜ್ಞಾನವನ್ನು ವಿವಕ್ಷಿಸಬಾರದು. ಏಕೆಂದರೆ ನಮನದಿಂದಲೇ ಮಾಹಾತ್ಮ್ಯಜ್ಞಾನವು ತಿಳಿಯುತ್ತದೆ. ಸ್ವೋತ್ಕೃಷ್ಟತ್ವಪ್ರಕಾರಕಜ್ಞಾನಾನುಕೂಲವ್ಯಾಪಾರವೇ ನಮನ ಎಂದು ಕರೆಸಿಕೊಳ್ಳುತ್ತದೆ. 'ಭಕ್ತ್ಯಾದಿ' ಎಂಬಲ್ಲಿರುವ ಆದಿಪದದಿಂದ ಅಧಿಕಾರಾದಿಗಳನ್ನು ವಿವಕ್ಷಿಸಬೇಕು.

ಪ್ರಣಾಮದಿಂದಲೇ ಫಲವು ಸಿದ್ಧವಾಗುತ್ತಿರಬೇಕಾದರೆ ಭಕ್ತ್ಯಾದಿಗಳು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ತಥಾವಿಧ ಏವ ಹಿ' ಇತ್ಯಾದಿ ಟೀಕಾವಾಕ್ಯದಿಂದ ಉತ್ತರಿಸಿದ್ದಾರೆ. ಭಕ್ತ್ಯಾದ್ಯತಿಶಯದಿಂದ ಸಹಿತವಾದ ಪ್ರಣಾಮವಷ್ಟೇ ಫಲದಾಯಕವಾಗಿರುತ್ತದೆಂಬುದು ಇದರ ಅಭಿಪ್ರಾಯ. ವಾಸ್ತವಿಕವಾಗಿ ಪ್ರಿಯತಮಮ್ ಎಂಬ ಪದದಿಂದ ಭಕ್ತ್ಯಾದ್ಯತಿಶಯವು ಪ್ರದರ್ಶಿತವಾಗಿದೆ. ಆದರೂ ಕೂಡ ಭಕ್ತ್ಯಾದ್ಯತಿಶಯಸಹಿತವಾದ ಪ್ರಣಾಮವೇ ಅಭಿಮತಸಿದ್ಧಿಗೆ ಅಂಗವಾಗಿದೆ ಎಂದು ಸೂಚನೆ ಮಾಡಬೇಕು. ಅದಕ್ಕಾಗಿ ಸಮ್‌ಶಬ್ದವನ್ನು ಪ್ರಯೋಗಿಸಿದ್ದಾರೆ.

'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳಿಗೆ ನಮಾಮಿ ಎಂಬ ಕ್ರಿಯೆಯ ಜೊತೆಗೆ ನೇರವಾಗಿ ಅನ್ವಯವನ್ನು ಮಾಡಿದರೆ ವಾಕ್ಯಭೇದದೋಷವು ಪ್ರಾಪ್ತವಾಗುತ್ತದೆ. 'ನಾರಾಯಣಂ' ಎಂಬ ವಿಶೇಷ್ಯವಾಚಕಪದದ ಜೊತೆಗೆ ಅನ್ವಯವನ್ನು ಮಾಡಬೇಕೆಂದು ಹೇಳಿದರೆ 'ನಾರಾಯಣಂ' ಎಂಬ ಪದಕ್ಕಿಂತ ಮೊದಲು ಈ ವಿಶೇಷಣಗಳನ್ನು ಪ್ರಯೋಗ ಮಾಡಬೇಕಾಗುತ್ತದೆ. ಏಕೆಂದರೆ ವಿಶೇಷಣವಾಚಕಪದವು ವಿಶೇಷ್ಯವಾಚಕಪದಕ್ಕಿಂತ ಪೂರ್ವಭಾವಿಯಾಗಿರಬೇಕೆಂದು ನಿಯಮವಿದೆ. ಈ ಪ್ರಶ್ನೆಗೆ ಉತ್ತರಿಸಲು 'ನಿಖಿಲೇತ್ಯಾದೀನಾಂ ತು' ಇತ್ಯಾದಿ ವಾಕ್ಯ ಹೊರಟಿದೆ.

ನಾರಾಯಣಪದವು ಪರಮಮಾಂಗಲಿಕವಾಗಿರುವುದರಿಂದ ಸಮಸ್ತಶಾಸ್ತ್ರಾರ್ಥವನ್ನು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದಲೇ ಈ ಎಲ್ಲ ವಿಶೇಷಣಗಳಿಗಿಂತ ಇದು ಮುಖ್ಯವಾಗಿದೆ. ಈ ಕಾರಣದಿಂದ 'ನಾರಾಯಣಂ' ಎಂಬ ಪದವನ್ನೇ ಮೊದಲು ಪ್ರಯೋಗ ಮಾಡಿದ್ದಾರೆ. ತಾತ್ಪರ್ಯಬಲದಿಂದಷ್ಟೇ ಕೊನೆಯಲ್ಲಿ ಯೋಜನೆ ಮಾಡಿಕೊಳ್ಳಬೇಕು. ಈ ಒಂದು ವಿಶೇಷವನ್ನು ಗಮನಿಸಬೇಕು.

## ಸುಧಾಪರಿಮಳಸಾರ

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ನಾರಾಯಣನು ಜಗಜ್ಜನ್ಮಾದಿಕಾರಣನಾಗಿದ್ದಾನೆ. ನಿರ್ದೋಷನಾಗಿದ್ದಾನೆ. ನಿಖಿಲಪೂರ್ಣಗಳೇ ದೇಹವುಳ್ಳವನಾಗಿದ್ದಾನೆ. ಸಕಲವೇದಪ್ರತಿಪಾದ್ಯನಾಗಿದ್ದಾನೆ. ಸರ್ವೋತ್ತಮನಾಗಿ ವಂದ್ಯನಾಗಿದ್ದಾನೆ. ತಮಗೆ ಅತ್ಯಂತ ಪ್ರೇಮಾಸ್ಪದನಾಗಿದ್ದಾನೆ. ಇಂಥ ನಾರಾಯಣನಿಗೆ ಭಕ್ತಿಯ ನಮಸ್ಕಾರಗಳು.

ಹೀಗೆ ಶ್ರೀಮಧ್ವಾಚಾರ್ಯರು ತಮಗೆ ಪ್ರಿಯತಮನಾದ ನಾರಾಯಣನನ್ನು ಗ್ರಂಥಪ್ರಾರಂಭದಲ್ಲಿ ನಮಸ್ಕಾರ ಮಾಡುತ್ತಿದ್ದಾರೆ.

## ಪರಿಮಳವೈಶಿಷ್ಟ್ಯ

* ಅಹಂ ಎಂಬ ಕರ್ತೃವಾಚಕಪದವೇ ಇಲ್ಲವಲ್ಲ? ಎಂಬ ಪ್ರಶ್ನೆಗೆ ಉತ್ತರಿಸಿದ್ದಾರೆ.
* 'ಸನ್ನಮಾಮಿ' ಎಂಬಲ್ಲಿ ಸಮ್ ಎಂಬ ಉಪಸರ್ಗದ ಅರ್ಥವು ಅಪೂರ್ವವಾಗಿದೆ.
* 'ನಾರಾಯಣ' ಎಂಬುದು ವಿಶೇಷ್ಯ. ಉಳಿದವುಗಳು ವಿಶೇಷಣಗಳಾಗಿವೆ. ವಿಶೇಷ್ಯದ ಮೂಲಕವೇ ವಿಶೇಷಣಗಳಿಗೆ ಕ್ರಿಯೆಯಲ್ಲಿ ಅನ್ವಯ ತಿಳಿಯಬೇಕೆಂದು ತಿಳಿಸಿದ್ದಾರೆ.

## ಸ್ತುತಿವಾಚಕಪದಗಳಿಗೆ ಆರ್ಥಿಕಪುನರುಕ್ತಿ ಸಲ್ಲದು.

**ಶ್ರೀಮನ್ನ್ಯಾಯಸುಧಾ– ಪ್ರಯೋಜನಂ ಚ ಸ್ತುತಿಪದಾನಾಂ ವಿಶೇಷ್ಯ-ಪ್ರಶಂಸೈವ । ತತ್ರ ಆರ್ಥಿಕಪುನರುಕ್ತೇಃ ಸ್ತುತಿತ್ವಮೇವ ಸಮಾಧಾನಮ್ ಅವದಾತವ್ಯಮ್ ।**

ಸ್ತುತಿವಾಚಕವಾದ ವಿಶೇಷಣಪದಗಳಿಗೆ ವಿಶೇಷ್ಯಭೂತನಾದ ನಾರಾಯಣನ





ಪ್ರಶಂಸೆಯೇ ಪ್ರಯೋಜನವಾಗಿದೆ. ಹಾಗಾಗಿ ಸ್ತುತಿವಾಚಕ ಪದಗಳೆಲ್ಲವೂ ಒಂದೇ ಅರ್ಥ-ವನ್ನು ಹೇಳುತ್ತಿವೆ ಎಂಬ ಕಾರಣದಿಂದ ಯಾವ ಆರ್ಥಿಕಪುನರುಕ್ತಿದೋಷವು ಬರುತ್ತದೋ ಅದಕ್ಕೆ ಅವಕಾಶವಿಲ್ಲ. ಏಕೆಂದರೆ ಸ್ತೋತ್ರರೂಪವಾದದ್ದರಿಂದಲೇ ದೋಷವಿಲ್ಲ ಎಂಬ ಸಮಾಧಾನವನ್ನು ತಿಳಿಯಬೇಕು.

ವಿಶೇಷವಿಚಾರ – 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ಎಲ್ಲಾ ಸ್ತುತಿಸೂಚಕ ಪದಗಳಿಗೆ ವಿಶೇಷ್ಯನಾದ ನಾರಾಯಣನ ಪ್ರಶಂಸೆಯೇ ಪ್ರಯೋಜನ, ಆದ್ದರಿಂದ ಆ ಸ್ತುತಿಸೂಚಕ ಪದಗಳೆಲ್ಲಾ ಒಂದೇ ಅರ್ಥವನ್ನು ಹೇಳುತ್ತಿವೆ ಎಂಬ ಕಾರಣದಿಂದ ಬರುವ ಆರ್ಥಿಕ ಪುನರುಕ್ತಿದೋಷಕ್ಕೆ ಸ್ತೋತ್ರ-ವಾದ್ದರಿಂದಲೇ ದೋಷವಿಲ್ಲ ಎಂದು ಸಮಾಧಾನವನ್ನು ತಿಳಿಯಬೇಕು.

## ನಾರಾಯಣನ ಪ್ರೀತಿಗಾಗಿ ಪ್ರಶಂಸೆ

ಪರಿಮಳ– ನನು ಏತಾವಂತಿ ವಿಶೇಷಣಾನಿ ವ್ಯರ್ಥಾನಿ । ಯದಿ ವಿಶೇಷ್ಯಸ್ತುತ್ಯರ್ಥಾನಿ ತಥಾಪಿ ನ ಕೃತ್ಯಂ ಪಶ್ಯಾಮ ಇತ್ಯತ ಆಹ – ಪ್ರಯೋಜನಂ ಚೇತಿ ॥ 'ಪ್ರಶಂಸೈವ' ಇತ್ಯುಕ್ತಸ್ತವನಂ ತತ್ ಪ್ರೀತ್ಯರ್ಥಮಿತಿ ಭಾವಃ।

ಮಂಗಳಶ್ಲೋಕದಲ್ಲಿ ಇಷ್ಟೊಂದು ವಿಶೇಷಣಗಳು ವ್ಯರ್ಥ. ಒಂದು ವೇಳೆ ವಿಶೇಷ್ಯ-ಭೂತನಾದ ನಾರಾಯಣನ ಸ್ತುತಿಗೋಸ್ಕರ ಸಾರ್ಥಕವೆನ್ನುವುದಾದರೆ ಅಂತಹ ಸಾರ್ಥಕ್ಯವು ನಮಗೆ ತಿಳಿಯುತ್ತಿಲ್ಲ? ಈ ಪ್ರಶ್ನೆಗೆ 'ಪ್ರಯೋಜನಂ ಚ' ಎಂಬುದರಿಂದ ಉತ್ತರಿಸಿದ್ದಾರೆ. ಆ ಪ್ರಶಂಸೆಯು ಪರಮಾತ್ಮನ ಪ್ರೀತಿಗೋಸ್ಕರ ಆವಶ್ಯಕವಾಗಿದೆ. ಆದ್ದರಿಂದ ವಿಶೇಷಣವಾಚಕ-ಪದಗಳು ವ್ಯರ್ಥವಾಗುವುದಿಲ್ಲ.

## ಪುನರುಕ್ತಿಯ ಸಮರ್ಥನೆ ಹಾಗೂ ಪರಿಹಾರ

ಪರಿಮಳ– ನನ್ವೇವಂ ಗುಣಪದೇನ ಸಾರ್ವಜ್ಞ್ಯಸರ್ವಸ್ವಾತಂತ್ರ್ಯಾದಿಗುಣೋಕ್ತ್ಯಾ ಅಜ್ಞಾನಪಾರತಂತ್ರ್ಯಾದಿದೋಷಭಾವಾಲಾಭಾತ್ 'ನಿರ್ದೋಷಮಿ'ತಿ ಪುನರುಕ್ತಮ್ ।

'ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ..........'

ಇತಿ ವಕ್ಷ್ಯಮಾಣದಿಶಾ 'ಅಸ್ಯೋದ್ಭವಾದಿದಮ್' ಇತ್ಯುಕ್ತ್ಯೈವ ಗುಣಪೂರ್ಣತಾಲಾಭಾತ್ 'ನಿಖಿಲಗುಣಪೂರ್ಣ' ಇತಿ ಚ ಪುನರುಕ್ತಮ್ । 'ಉದ್ಭವಾದಿದಮ್' ಇತ್ಯುಕ್ತ್ಯಾ ದೇಹಸ್ಯಾಪಿ ಲಾಭಾತ್ 'ದೇಹಮ್' ಇತಿ ಚ ಪುನರುಕ್ತಮ್, ಇತ್ಯತ ಆಹ – ತತ್ರಾರ್ಥಿಕೇತಿ ॥

ಗುಣಪದದಿಂದ ಸಾರ್ವಜ್ಞ್ಯ ಸರ್ವಸ್ವಾತಂತ್ರ್ಯ ಮೊದಲಾದ ಗುಣಗಳು ಹೇಳಲ್ಪಟ್ಟಿವೆ. ಇದರಿಂದ ಅಜ್ಞಾನ ಪಾರತಂತ್ರ್ಯಾದಿ ದೋಷಗಳಿಗೆ ಅವಕಾಶವಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ನಿರ್ದೋಷಂ ಎಂಬುದು ನಿಖಿಲಪೂರ್ಣಗುಣೈಕದೇಹಂ ಎಂಬುದರಿಂದ ಪುನರುಕ್ತವಾಗುತ್ತದೆ.

'ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ..........'

'ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಿಂದ ಗುಣಪರಿಪೂರ್ಣತ್ವವು ಸಿದ್ಧವಾಗುವುದಕ್ಕಾಗಿ ಬ್ರಹ್ಮನ ಲಕ್ಷಣವನ್ನು ಹೇಳಲಾಗಿದೆ' ಎಂಬುದಾಗಿ ಮುಂದೆ ಹೇಳುತ್ತಾರೆ. ಆದ್ದರಿಂದ 'ಅಸ್ಯೋದ್ಭವಾದಿದಂ' ಎಂಬುದರಿಂದಲೇ ನಿಖಿಲಪೂರ್ಣಗುಣೈಕದೇಹವು ಲಾಭವಾಗುತ್ತದೆ. ಪುನಃ 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣವನ್ನು ಹೇಳಿದರೆ ಪುನರುಕ್ತಿದೋಷವು ಬರುತ್ತದೆ. 'ಉದ್ಭವಾದಿದಂ' ಎಂದು ಹೇಳಿದ್ದರಿಂದಲೇ ದೇಹವು ಕೂಡ ಲಾಭವಾಗುತ್ತದೆ. ಆದ್ದರಿಂದ 'ದೇಹಂ' ಎಂಬುದು ಪುನರುಕ್ತವಾಗುತ್ತದೆ. ಈ ಪ್ರಶ್ನೆಗೆ 'ತತ್ರ ಆರ್ಥಿಕಪುನರುಕ್ತೇಃ' ಎಂಬುದರಿಂದ ಉತ್ತರಿಸಿದ್ದಾರೆ.

ವಿಶೇಷವಿಚಾರ – ನಾರಾಯಣನು ನಿಖಿಲಪೂರ್ಣಗುಣಗಳೇ ದೇಹವಾಗಿ ಉಳ್ಳವನು. ಅಲ್ಲಿ 'ಗುಣ' ಎಂದರೆ ಸಾರ್ವಜ್ಞ್ಯ, ಸ್ವಾತಂತ್ರ್ಯ ಮೊದಲಾದ ಗುಣಗಳೂ ಸೇರುತ್ತವೆ. ಹೀಗೆ ನಾರಾಯಣನಲ್ಲಿ ಸಾರ್ವಜ್ಞ್ಯ, ಸ್ವಾತಂತ್ರ್ಯ ಮೊದಲಾದ ಗುಣಗಳಿವೆ ಎಂದಾಗಲೇ ಅಜ್ಞಾನ, ಪಾರತಂತ್ರ್ಯ ಮೊದಲಾದ





ದೋಷಗಳೂ ಇಲ್ಲವೆಂದು ತಿಳಿಯುತ್ತದೆ. ಆದ್ದರಿಂದ 'ನಿರ್ದೋಷಂ' (ದೋಷರಹಿತ) ಎಂಬ ವಿಶೇಷಣ ಪುನರುಕ್ತವಾಗುತ್ತದೆ. ಹಾಗೆಯೇ "ಪರಮಾತ್ಮನು ಜಗಜ್ಜನ್ಮಾದಿಗಳಿಗೆ ಕಾರಣನೆಂದು ಹೇಳುವುದರಿಂದಲೇ ಸಕಲಗುಣಪೂರ್ಣನೆಂದು ತಿಳಿಯುತ್ತದೆ." ಎಂದು ಮುಂದೆ ಹೇಳುತ್ತಾರೆ. 'ಅಸ್ಯೋದ್ಭವಾದಿದಮ್' ಎಂದು ಹೇಳಿದ್ದರಿಂದಲೇ ನಿಖಿಲಪೂರ್ಣಗುಣತ್ವವು ನಾರಾಯಣನಲ್ಲಿ ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ ಶ್ಲೋಕದಲ್ಲಿ ಪುನಃ 'ನಿಖಿಲಪೂರ್ಣಗುಣ' ಎಂದು ಹೇಳಿದ್ದು ಪುನರುಕ್ತವಾಗುತ್ತದೆ. ಮತ್ತು 'ಉದ್ಭವಾದಿದಂ' ಎಂಬುದರಿಂದಲೇ ನಾರಾಯಣನಿಗೆ ದೇಹವಿದೆಯೆಂದು ಅರ್ಥಾತ್ ಸಿದ್ಧವಾಗುತ್ತದೆ. ಪುನಃ "ದೇಹಂ" ಎಂದು ಹೇಳಿದ್ದು ಪುನರುಕ್ತವೇ ಆಗುತ್ತದೆ.

ಈ ರೀತಿಯಾದ ಪ್ರಶ್ನೆಯನ್ನು ಪರಿಹರಿಸಲು "ತತ್ರ" ಎಂಬ ವಾಕ್ಯ ಹೊರಟಿದೆ—ಹಿಂದೆ ತಿಳಿಸಿದಂತೆ ಶ್ರೀಮನ್ನಾರಾಯಣನನ್ನು ಪ್ರಶಂಸಿಸಲು ಅನೇಕವಿಶೇಷಣಗಳನ್ನು ಕೊಟ್ಟಿದ್ದಾರೆ. ಹೀಗೆ ವಿಶೇಷಣಪದಗಳಿಗೆ ಶ್ಲಾಘನಾರೂಪವಾದ ಪ್ರಯೋಜನವಿರುವುದರಿಂದ ಆರ್ಥಿಕ ಪುನರುಕ್ತಿಯು ದೋಷವಾಗುವುದಿಲ್ಲ. "ಸ್ತುತಿರೂಪವಾದ ಪ್ರಯೋಜನವಿದ್ದಾಗ ಶಾಬ್ದಿಕ ಪುನರುಕ್ತಿಯೇ (ಸಕಲಗುಣಪರಿಪೂರ್ಣ ಎಂದೇ ಅನೇಕ ಬಾರಿ ಹೇಳುವುದು) ದೋಷವಾಗುವುದಿಲ್ಲ" ಎಂದು ನಿಯಮವಿದೆ. ಇನ್ನು ಆರ್ಥಿಕಪುನರುಕ್ತಿ(ಒಂದೇ ಶಬ್ದವನ್ನು ಅನೇಕ ಬಾರಿ ಉಚ್ಚರಿಸದೆ ಅರ್ಥಾತ್ ಉಂಟಾಗುವ ಪುನರುಕ್ತಿ)ಯಂತೂ ದೋಷವಾಗಲು ಸಾಧ್ಯವೇ ಇಲ್ಲವೆಂದು ತಿಳಿಯಬೇಕು. ವಸ್ತುತಃ ಶ್ಲೋಕದಲ್ಲಿ ಪುನರುಕ್ತಿಗೆ ಅವಕಾಶವೇ ಇಲ್ಲ. ಏಕೆಂದರೆ "ಯಶ್ಚಾರ್ಥಾದರ್ಥೋ ನ ಸ ಚೋದನಾರ್ಥಃ' (ಅರ್ಥಬಲದಿಂದ ಲಭಿಸುವ ಅರ್ಥವು ಶಬ್ದದ ಅರ್ಥವಾಗುವುದಿಲ್ಲ) ಎಂಬ ನಿಯಮವಿದೆ. ಹಾಗಿದ್ದರೂ ಇನ್ನೊಂದು ರೀತಿಯ ಸಮಾಧಾನವನ್ನು ಇಲ್ಲಿ ಹೇಳಿದ್ದಾರೆ.

## ಸ್ತುತಿಯಲ್ಲಿ ಪುನರುಕ್ತಿಯಿಲ್ಲ

ಗುರ್ವರ್ಥದೀಪಿಕಾ– ನಿರ್ದೋಷತ್ವಾದಿಶಬ್ದಭೇದೇಽಪಿ ತೇಷಾಂ ಸರ್ವೇಷಾಂ ಗುಣತ್ವೇನ ನಿಖಿಲಪೂರ್ಣಗುಣೈಕದೇಹಮ್ ಇತ್ಯನೇನೈವ ಗತಾರ್ಥತ್ವಾತ್ । ಆರ್ಥಿಕಪುನರುಕ್ತೇಃ ಇತ್ಯುಕ್ತಮ್ । ಸ್ತೋತಾರೋ ಹಿ ಮಹಾರಾಜ, ರಾಜಕುಲೋತ್ತಂಸ, ನೃಪಶಿಖಾಮಣೇ ಇತ್ಯರ್ಥೈಕ್ಯೇಽಪಿ ಶಬ್ದಭೇದಮಾತ್ರಾತ್ ಸ್ತುವಂತಿ, ತಥಾ ಇಹಾಪಿ ಇತಿ ಭಾವಃ ।

ನಿರ್ದೋಷತ್ವ ಮೊದಲಾದ ಶಬ್ದಗಳಲ್ಲಿ ಭೇದವಿದ್ದರೂ ಇವೆಲ್ಲವೂ ನಿಖಿಲಪೂರ್ಣಗುಣೈಕದೇಹಂ ಎಂಬುದರಿಂದಲೇ ಗತಾರ್ಥವಾಗುತ್ತವೆ. ಈ ದೃಷ್ಟಿಯಿಂದ ಆರ್ಥಿಕಪುನರುಕ್ತೇಃ ಎಂದು





ಟೀಕೆಯಲ್ಲಿ ಹೇಳಿದ್ದಾರೆ. ರಾಜನನ್ನು ಸ್ತೋತ್ರಮಾಡುವವರು 'ಮಹಾರಾಜ!' 'ರಾಜಕುಲೋತ್ತಂಸ!' 'ನೃಪಶಿಖಾಮಣೇ!' ಇತ್ಯಾದಿಯಾಗಿ ಪ್ರಶಂಸೆ ಮಾಡುತ್ತಾರೆ. ಈ ಎಲ್ಲಾ ಶಬ್ದಗಳ ಅರ್ಥ ಒಂದೇ ಆಗಿದೆ. ಆದರೂ ಕೂಡ ಶಬ್ದದಲ್ಲಿ ಭೇದವಿದೆ. ಶಬ್ದದಲ್ಲಿ ಭೇದವಿದ್ದರೂ ಸ್ತೋತ್ರಮಾಡುವುದು ಲೋಕದಲ್ಲಿ ಕಂಡಿದೆ. ಅದರಂತೆ ಪ್ರಕೃತದಲ್ಲೂ ಕೂಡ ಸ್ತೋತ್ರಮಾಡುವಾಗ ಆರ್ಥಿಕಪುನರುಕ್ತಿಯು ದೋಷವಾಗುವುದಿಲ್ಲ. ಶಬ್ದಭೇಧವಿದ್ದರೆ ಸಾಕು ಎಂಬುದನ್ನು ತಿಳಿಯಬೇಕು.

## ವಿಶೇಷಣವಾದರೂ ಸ್ತುತಿಪರವಾಗುತ್ತದೆ

ವಾಕ್ಯಾರ್ಥಚಂದ್ರಿಕಾ – ನನು 'ನಿಖಿಲ' ಇತ್ಯಾದೀನಾಂ ನಾರಾಯಣೇನ ವಿಶೇಷಣತಯಾ ಸಂಬಂಧೇ, ತೈಃ ವಿಶೇಷ್ಯಸ್ಯ ಇತರವ್ಯಾವೃತ್ತಿಮಾತ್ರಲಾಭೇಽಪಿ 'ನಾರಾಯಣಪ್ರಣಾಮಾದಿಕಮ್' ಇತ್ಯತ್ರ 'ಆದಿ'ಪದಸಂಗ್ರಾಹ್ಯತಯಾ ಭವದಭಿಮತಸ್ತುತಿರೂಪಾರ್ಥಕತ್ವಂ ತೇಷಾಂ ನ ಸಿದ್ಧ್ಯೇತ್ ಇತ್ಯತಃ ವ್ಯಾವರ್ತಕಮಾತ್ರದಂಡಾದಿವಿಶೇಷಣಾನಾಂ ತಥಾತ್ವೇಽಪಿ ಸ್ತುತಿಸಮರ್ಪಕವಿಶೇಷಣಪದಾನಾಂ ವಿಶೇಷ್ಯಪ್ರಶಂಸಾಪ್ರಯೋಜನಕತ್ವಂ ನ ಅನುಪಪನ್ನಮ್ ಇತ್ಯಾಹ– ಪ್ರಯೋಜನಂ ಚೇತಿ॥ ವಿಶೇಷಣತ್ವಾಭ್ಯುಪಗಮೇಽಪಿ ನ ಪೂರ್ವಾಭ್ಯುಪೇತತತ್ಪ್ರಶಂಸಾರೂಪಪ್ರಯೋಜನಪರಿತ್ಯಾಗ ಇತ್ಯೇವಶಬ್ದಃ।

ಪ್ರಶ್ನೆ– 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿಗಳು ನಾರಾಯಣನಲ್ಲಿ ವಿಶೇಷಣರೂಪವಾಗಿ ಸಂಬಂಧವನ್ನು ಹೊಂದಿರುತ್ತವೆ. ವಿಶೇಷಣಗಳಿಗೆ ವಿಶೇಷ್ಯವು ಇತರಪದಾರ್ಥಗಳಿಗಿಂತ ಭಿನ್ನವಾಗಿದೆ ಎಂದು ತಿಳಿಸುವುದೇ ಪ್ರಯೋಜನವಾಗಿದೆ. ಹೀಗೆ ಹೇಳಿದಾಗ 'ನಾರಾಯಣಪ್ರಣಾಮಾದಿಕಂ' ಎಂಬಲ್ಲಿ ಆದಿಪದದಿಂದ ಸಂಗ್ರಾಹ್ಯವಾದ ಸಿದ್ಧಾಂತಿಗಳಿಗೆ ಅಭಿಮತವಾದ ಸ್ತುತಿರೂಪವಾದ ಅರ್ಥವು ಆ ವಿಶೇಷಣಗಳಿಗೆ ಸಿದ್ಧವಾಗದೇ ಇರಬೇಕಾದೀತು. ಆದ್ದರಿಂದ ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿಗಳು ವಿಶೇಷಣಗಳೆಂದು ಹೇಗೆ ಹೇಳುತ್ತೀರಿ?

ಉತ್ತರ – 'ದಂಡೀ ದೇವದತ್ತಃ' ಎಂಬಲ್ಲಿ ದಂಡ ಮೊದಲಾದ ವಿಶೇಷಣಗಳಿಗೆ ಇತರವ್ಯಾವೃತ್ತಿಯೇ ಪ್ರಯೋಜನವಾಗಿದೆ. ಅದರಂತೆ ಇಲ್ಲಿ ತಿಳಿಯಬಾರದು. ಇತರ ವ್ಯಾವೃತ್ತಿಯ ಜೊತೆ ಸ್ತುತಿಸಮರ್ಪಕವಾದ ವಿಶೇಷಣಪದಗಳಿಗೆ ವಿಶೇಷ್ಯಪ್ರಶಂಸೆಯು ಕೂಡ ಪ್ರಯೋಜನವಾಗಿದೆ ಎಂದು ತಿಳಿಯಬೇಕು. ಆದ್ದರಿಂದ ಯಾವುದೇ ಅನುಪಪತ್ತಿಯು ಬರುವುದಿಲ್ಲ. ಈ ವಿಷಯವನ್ನು 'ಪ್ರಯೋಜನಂ ಚ' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ನಿಖಿಲಪೂರ್ಣಗುಣೈಕದೇಹತ್ವಾದಿ-





ಗಳು ವಿಶೇಷಣವೆಂದು ಹಿಂದೆ ಅಂಗೀಕಾರಮಾಡಲ್ಪಟ್ಟ ನಾರಾಯಣನ ಪ್ರಶಂಸೆ ಎಂಬ ಪ್ರಯೋಜನವನ್ನು ಪರಿತ್ಯಾಗ ಮಾಡಬೇಕಾಗಿಲ್ಲ ಎಂಬುದು ಏವಶಬ್ದದ ಅರ್ಥ.

## ಪುನರುಕ್ತಿಗೆ ಅವಕಾಶವಿಲ್ಲ

ವಾಕ್ಯಾರ್ಥಚಂದ್ರಿಕಾ – ನನು ತಥಾऽಪಿ 'ನಿಖಿಲ' ಇತ್ಯಾದಿ ವಿಶೇಷಣಲಬ್ಧಗುಣಪೂರ್ಣತ್ವಸ್ಯ ನಿರ್ದೋಷತ್ವಸ್ಯ ಚ 'ಪ್ರಭಾಜಾಲೋಲ್ಲಾಸೋಪಹತ' ಇತ್ಯುಕ್ತರೀತ್ಯಾ ಅವಿನಾಭಾವೇನ ಏಕೋಕ್ತ್ಯಾವಪಿ ಅನ್ಯಸಿದ್ಧೇಃ, ಅನ್ಯಸ್ಯ ಪ್ರಯೋಜನಾಭಾವ ಇತ್ಯತ ಆಹ – ತತ್ರೇತಿ ॥ ವಿಶೇಷಣತ್ವೇऽಪಿ ಪ್ರಶಂಸಾಪ್ರಯೋಜನಕತ್ವೇ ಹೇತುತಯಾ ಉಪನ್ಯಸ್ತಸ್ತುತಿಪದಸ್ಯೈವ ಆರ್ಥಿಕಪೌನರುಕ್ತ್ಯಪರಿಹಾರೇऽಪಿ ಹೇತುತ್ವಮ್ ಇತಿ ಏವಶಬ್ದಃ ॥

ಆದರೂ ಕೂಡ 'ನಿಖಿಲಪೂರ್ಣಗುಣೈಕದೇಹಂ' ಇವೇ ಮೊದಲಾದ ವಿಶೇಷಣಗಳಿಂದ ತಿಳಿಯಲ್ಪಡುವ ಗುಣಪೂರ್ಣತ್ವವು ನಿರ್ದೋಷತ್ವದಿಂದ ಅವಿನಾಭೂತವಾಗಿದೆ. ಇವೆರಡರಲ್ಲಿ ಒಂದನ್ನು ಹೇಳಿದರೆ ಸಾಕು. ಈ ವಿಷಯವನ್ನು 'ಪ್ರಭಾಜಾಲೋಲ್ಲಾಸೋಪಹತ' ಎಂಬ ನ್ಯಾಯಸುಧೆಯಲ್ಲಿ ಹೇಳಿದ ವಿಶೇಷಣಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ವಿವರಿಸಲಾಗಿದೆ. ಆದ್ದರಿಂದ 'ನಿಖಿಲಪೂರ್ಣಗುಣೈಕದೇಹಂ' ಎಂದು ಹೇಳಿದ ಮೇಲೆ ಪುನಃ 'ನಿದೋಷಂ' ಎಂದು ಹೇಳಿದರೆ ಪುನರುಕ್ತಿ ಬರುತ್ತದಲ್ಲವೇ? ಈ ಪ್ರಶ್ನೆಗೆ 'ತತ್ರ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

ವಿಶೇಷಣವಾದರೂ ಕೂಡ ಪ್ರಶಂಸೆ ಎಂಬ ಪ್ರಯೋಜನವುಳ್ಳದ್ದಾಗಿದೆ ಎಂಬ ವಿಷಯದಲ್ಲಿ ಹೇತುವನ್ನಾಗಿ ಹೇಳಲ್ಪಟ್ಟ ಸ್ತುತಿಪದವೇ ಆರ್ಥಿಕಪುನರುಕ್ತಿಯ ಪರಿಹಾರದಲ್ಲೂ ಹೇತುವಾಗಿದೆ. ಹೀಗೆ ಒಂದೇ ಸ್ತುತಿಪದವು ಪ್ರಶಂಸಾಪ್ರಯೋಜನವುಳ್ಳದ್ದಾಗಿದೆ ಎಂಬುದರಲ್ಲಿ ಆರ್ಥಿಕಪುನರುಕ್ತಿ ಬರುವುದಿಲ್ಲ ಎಂಬುದರಲ್ಲಿಯೂ ಹೇತುವಾಗಿದೆ. ಈ ವಿಷಯವನ್ನು ಸ್ತುತಿಪರತ್ವಮೇವ ಎಂಬಲ್ಲಿರುವ 'ಏವ'ಕಾರವು ತಿಳಿಸುತ್ತಿದೆ.

## 'ಯಶ್ಚ ಅರ್ಥಾದರ್ಥಃ ನ ಸ ಚೋದನಾರ್ಥಃ'

ವಾಕ್ಯಾರ್ಥಚಂದ್ರಿಕಾ – ಯಶ್ಚ 'ಅರ್ಥಾದರ್ಥೋ ನ ಸ ಚೋದನಾರ್ಥಃ' ಇತಿ ನ್ಯಾಯೇನಾರ್ಥಾತ್ ತಲ್ಲಾಭೇऽಪಿ ಶಬ್ದಾತ್ ತಲ್ಲಾಭಾದಾರ್ಥಿಕಪೌನರುಕ್ತ್ಯಸ್ಯ ನ ದೂಷಣತ್ವಮ್ ।





ದೂಷಣತ್ವೇ ವಾ ಪ್ರಕೃತೇ ಸಪ್ರಯೋಜನತ್ವಾನ್ನ ತಸ್ಯ ದೂಷಣತ್ವಮ್ ಇತ್ಯಭಿಪ್ರಾಯೇಣ ಏತತ್ ಸಮಾಧಾನಮ್; ಅತೋ ನ ವಕ್ಷ್ಯಮಾಣವಿರೋಧ ಇತಿ ಹೃದಯಮ್ ॥

'ಯಶ್ಚ ಅರ್ಥಾದರ್ಥೋ ನ ಸ ಚೋದನಾರ್ಥಃ' ಎಂಬ ನ್ಯಾಯದಂತೆ ಅರ್ಥಾತ್ ತಿಳಿಯಲ್ಪಟ್ಟ ಅರ್ಥವು ಶಬ್ದದಿಂದ ಲಭ್ಯವಾಗಿರುವುದಿಲ್ಲ. ಆದ್ದರಿಂದ ಆರ್ಥಿಕಪುನರುಕ್ತಿಯು ದೋಷವಾಗುವುದಿಲ್ಲ ಎಂದು ತಿಳಿಯಬೇಕು. ಒಂದು ವೇಳೆ ದೋಷವಿರುವುದೆಂದು ಒಪ್ಪಿದರೂ ಪ್ರಕೃತದಲ್ಲಿ ಪ್ರಯೋಜನವಿರುವುದರಿಂದ ದೋಷವಲ್ಲ ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಆದ್ದರಿಂದ ಮುಂದಿನ ವಿರೋಧಕ್ಕೂ ಅವಕಾಶವಿಲ್ಲ.

## ರಸಘಟ್ಟ

## ಆಪತ್ಯಮಮ್ ಅಖಿಲೈಃಸುವಾಕ್ಯೈಃ ಎಂಬ ವಿಶೇಷಣದಿಂದ ಪುನರುಕ್ತಿಯ ಸಮರ್ಥನೆ

ಕುಂಡಲಗಿರಿ – ನಾರಾಯಣಸ್ಯ ಮಹಾಯೋಗವಿದ್ವದ್‌ರೂಢಿಭ್ಯಾಮ್ ಅಪರ್ಯಾಯಾನಂತವೈದಿಕಶಬ್ದಪ್ರತಿಪಾದ್ಯತ್ವರೂಪಾಧಿಕೃತತ್ವಪ್ರತಿಪಾದನಪರೇಣ 'ಆಪ್ಯತಮಪ್ಯಖಿಲೈಃ ಸುವಾಕ್ಯೈಃ' ಇತಿ ವಿಶೇಷಣೇನೈವ ತತ್ತಚ್ಛಬ್ದಪ್ರವೃತ್ತಿಲಕ್ಷಣಾನಂತಕಲ್ಯಾಣಗುಣಾನಾಮ್ ಅರ್ಥಾತ್ ಲಾಭಾತ್ 'ನಿಖಿಲಪೂರ್ಣಗುಣ' ಇತ್ಯಸ್ಯ ಆರ್ಥಿಕೀ ಪುನರುಕ್ತಿರಿತ್ಯರ್ಥಃ । ಯದ್ವಾ 'ಅಸ್ಯೋದ್ಭವಾದಿದಮ್' ಇತ್ಯನೇನ ನಾರಾಯಣಸ್ಯ ಜಗಜ್ಜನ್ಮಕಾರಣತ್ವೋಕ್ತ್ಯಾ ಪೂರ್ಣಗುಣಸ್ಯಾಜ್ಞಾನಪಾರತಂತ್ರ್ಯಾದಿದೋಷಪ್ರಯುಕ್ತಸ್ಯ ಚ ಜಗಜ್ಜನ್ಮಾದಿಕಾರಣತ್ವಾಯೋಗಾತ್ ಪೂರ್ಣಗುಣತ್ವನಿರ್ದೋಷತ್ವಾದೇಃ ಲಾಭಾತ್ ನಿಖಿಲಪೂರ್ಣಗುಣೈಕದೇಹಂ ನಿರ್ದೋಷಮ್ ಇತ್ಯಾದಿ ವಿಶೇಷಣಾನಾಮ್ ಆರ್ಥಿಕೀ ಪುನರುಕ್ತಿರಿತ್ಯರ್ಥಃ।

ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ನಾರಾಯಣನು ಅಪರ್ಯಾಯವಾದ ಅನಂತವೈದಿಕಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದಲೇ ನಾರಾಯಣನಲ್ಲಿ ಪ್ರಣಾಮಕ್ಕೆ ಯೋಗ್ಯವಾದ ಅಧಿಕೃತತ್ವವೆಂಬ ಧರ್ಮವಿದೆ ಎಂಬುದಾಗಿ ಪ್ರತಿಪಾದನೆ ಮಾಡುವವರಿದ್ದಾರೆ. ಈ ದೃಷ್ಟಿಯಲ್ಲಿ ಚಿಂತನೆ ನಡೆಸಿದಾಗ 'ಆಪ್ಯತಮಪ್ಯಖಿಲೈಃ ಸುವಾಕ್ಯೈಃ' ಎಂಬ ವಿಶೇಷಣದಿಂದಲೇ ವೇದದಲ್ಲಿರುವ ಎಲ್ಲಾ ಶಬ್ದಗಳ ಪ್ರವೃತ್ತಿನಿಮಿತ್ತಗಳೂ ನಾರಾಯಣನಲ್ಲಿ ಪ್ರಾಪ್ತವಾಗುತ್ತವೆ. ಇದರಿಂದಲೇ ಅನಂತಕಲ್ಯಾಣಗುಣಪರಿ-





ಪೂರ್ಣತ್ವವು ಲಾಭವಾಯಿತು. ಆದ್ದರಿಂದಲೇ 'ನಿಖಿಲಪೂರ್ಣಗುಣೈಕದೇಹಮ್' ಎಂದು ಪ್ರತ್ಯೇಕವಾಗಿ ಹೇಳಿದರೆ ಆರ್ಥಿಕ ಪುನರುಕ್ತಿಯು ಬರುತ್ತದೆ.

ಅಥವಾ 'ಅಸ್ಮೋದ್ಭವಾದಿದಂ' ಎಂಬುದರಿಂದಲೇ ನಾರಾಯಣನು ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಹೇಳಿದ್ದಾರೆ. ಪೂರ್ಣಗುಣ ಇಲ್ಲದಿರುವವನಲ್ಲಿ ಅಜ್ಞಾನಪಾರತಂತ್ರ್ಯಾದಿದೋಷಗಳು ಇರುವವನಲ್ಲಿ ಜಗಜ್ಜನ್ಮಾದಿಕಾರಣತ್ವವು ಯುಕ್ತವಾಗುವುದಿಲ್ಲ. ಆದ್ದರಿಂದ 'ಅಸ್ಮೋದ್ಭವಾದಿದಂ' ಎಂಬ ವಿಶೇಷಣದಿಂದ ನಿಖಿಲಪೂರ್ಣಗುಣತ್ವವು ನಿರ್ದೋಷತ್ವವು ಲಾಭವಾಯಿತು. ಪುನಃ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' ಎಂಬ ವಿಶೇಷಣಗಳನ್ನು ಹೇಳಿದರೆ ಆರ್ಥಿಕಪುನರುಕ್ತಿಯು ಪ್ರಾಪ್ತವಾಗುತ್ತದೆ.

## ಆರ್ಥಿಕಪುನರುಕ್ತಿ ಎಂದರೇನು?

**ಗೂಢಕರ್ತೃಕ – ನನ್ವಾರ್ಥಿಕೀ ಪುನರುಕ್ತಿಃ ಇತ್ಯಸ್ಯ ಕೋಽರ್ಥಃ? ಕಿಮ್ ಏಕಾರ್ಥತ್ವಾತ್ ಪುನರುಕ್ತಿರಿತಿ ವಾ । ಅರ್ಥಾದನುಪಪತ್ತ್ಯಾ ಏಕಾರ್ಥತ್ವಾತ್ ಪುನರುಕ್ತಿರಿತಿ ವಾ । ನಾದ್ಯಃ । ಅರ್ಥಭೇದಸ್ಯಾಗ್ರೇ ವಕ್ಷ್ಯಮಾಣತ್ವೇನ ಏಕಾರ್ಥತ್ವಾಭಾವಾತ್ । ನ ದ್ವಿತೀಯಃ । ಅನುಪಪತ್ತ್ಯಾ ಏಕಾರ್ಥತ್ವಸ್ಯ ಸಂಪೂರ್ಣಶಾಸ್ತ್ರೇಽಪಿ ಸತ್ತ್ವೇನ ತಸ್ಯಾಪಿ ಪುನರುಕ್ತತ್ವಾಪತ್ತೇರಿತಿ ಚೇತ್ ಮೈವಮ್ । ಅರ್ಥಸಂಬಂಧಿನೀ ಆರ್ಥಿಕೀ । ಆರ್ಥಿಕೀ ಚಾಸೌ ಪುನರುಕ್ತಿಶ್ಚ ಇತಿ ವಿಗ್ರಹಃ । ಏವಂ ಚಾರ್ಥಶಬ್ದಸ್ಯ ಪ್ರಯೋಜನಪರತ್ವಾತ್ ತತ್ಸಂಬಂಧಿನೀ ಪುನರುಕ್ತಿಃ ಪ್ರಶಂಸಾರೂಪಫಲೈಕ್ಯಸಂಬಂಧಿನೀ ಪುನರುಕ್ತಿರಿತ್ಯರ್ಥಃ ।**

'ಆರ್ಥಿಕೀ ಪುನರುಕ್ತಿಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅರ್ಥ ಏನು? ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಪುನರುಕ್ತಿ ಬರುತ್ತದೆಂದೋ? ಅಥವಾ ಅರ್ಥಾತ್ ಒಂದೇ ಅರ್ಥವನ್ನು ಪ್ರತಿಪಾದನೆ ಮಾಡಿದಂತಾಗುವುದರಿಂದ ಆರ್ಥಿಕಪುನರುಕ್ತಿ ಬರುತ್ತದೆಂದೋ? ಮೊದಲನೆಯ ಪಕ್ಷ ತಪ್ಪು. ಪ್ರತಿಯೊಂದು ಶಬ್ದಗಳಲ್ಲಿರುವ ಅರ್ಥಭೇದವನ್ನು ಮುಂದೆ ಸ್ಪಷ್ಟ ಪಡಿಸುತ್ತಾರೆ. ಆದ್ದರಿಂದ ಎಲ್ಲಾ ಪದಗಳ ಅರ್ಥವನ್ನು ಒಂದೇ ಎಂದು ಹೇಳುವಂತಿಲ್ಲ. ಇನ್ನು ಅರ್ಥಾತ್ ತಿಳಿಯುವ ಅರ್ಥವು ಒಂದೇ ಆಗಿರುವುದರಿಂದ ಆರ್ಥಿಕಪುನರುಕ್ತಿಯು ಬರುತ್ತದೆಂಬ ಎರಡನೆಯ ಪಕ್ಷವೂ ತಪ್ಪು. ಏಕೆಂದರೆ ಅನುಪಪತ್ತಿಪ್ರಮಾಣದಿಂದ ಏಕಾರ್ಥತ್ವವು ಸಂಪೂರ್ಣಶಾಸ್ತ್ರದಲ್ಲೂ ಇದೆ. ಹಾಗಾಗಿ ಸಂಪೂರ್ಣಶಾಸ್ತ್ರವೇ ಪುನರುಕ್ತವಾಗಬೇಕಾಗುತ್ತದೆ. ಹಾಗಾಗಿ ಆರ್ಥಿಕೀಪುನರುಕ್ತಿ ಎಂದರೆ ಏನರ್ಥ?





ಉತ್ತರ – ಆರ್ಥಿಕೀಶಬ್ದಕ್ಕೆ ಅರ್ಥಸಂಬಂಧಿನೀ ಎಂದರ್ಥ. ಆರ್ಥಿಕೀ ಚಾಸೌ ಪುನರುಕ್ತಿಶ್ಚ ಎಂಬುದಾಗಿ ವಿಗ್ರಹವನ್ನು ಇಲ್ಲಿ ತಿಳಿಯಬೇಕು. ಅರ್ಥಶಬ್ದಕ್ಕೆ ಪ್ರಯೋಜನ ಎಂದರ್ಥ. ತತ್ಸಂಬಂಧಿಯಾದದ್ದು ಪುನರುಕ್ತಿಯಾಗಿದೆ ಎಂದರೆ ಪ್ರಶಂಸಾ ಎಂಬ ಒಂದೇ ಫಲದ ಸಂಬಂಧವನ್ನು ಪುನರುಕ್ತಿಯು ಹೊಂದಿದೆ ಎಂದು ತಿಳಿಯಬೇಕು. ಆದ್ದರಿಂದ ಆರ್ಥಿಕೀಪುನರುಕ್ತಿಯು ದೋಷವಾಗುವುದಿಲ್ಲ. ಏಕೆಂದರೆ ಸ್ತುತಿಯಲ್ಲಿ ಪುನರುಕ್ತಿಯು ದೋಷವಲ್ಲ.

## ಸುಧಾಪರಿಮಳಸಾರ

ವಿಶೇಷಣಗಳಿರುವುದೇ ವ್ಯಾವೃತ್ತಿಮಾಡುವುದಕ್ಕಾಗಿ; ಇದು ಒಂದರಿಂದಲೇ ಸಿದ್ಧವಾಗುವಾಗ ಅನೇಕವಿಶೇಷಣಗಳೇಕೇ ಎಂಬ ಪ್ರಶ್ನೆಗೆ ವಿಶೇಷ್ಯಭೂತನಾದ ನಾರಾಯಣನ ಪ್ರಶಂಸೆಯೇ ಅನೇಕ ವಿಶೇಷಣಗಳ ಪ್ರಯೋಜನವಾಗಿದೆ. ಸ್ತೋತ್ರದಲ್ಲಿ ಆರ್ಥಿಕಪುನರುಕ್ತಿಯು ದೋಷವಾಗುವುದಿಲ್ಲ. ಹೆಚ್ಚು ವಿಶೇಷಣಗಳಿಂದ ಪರಮಾತ್ಮನನ್ನು ಸ್ತೋತ್ರಮಾಡಿದರೆ ಅವನ ಪ್ರೀತಿ ಅಧಿಕವಾಗಿ ಲಾಭವಾಗುತ್ತದೆ. ಆದ್ದರಿಂದ ಗುಣಪರಿಪೂರ್ಣತ್ವದಿಂದಲೇ ನಿರ್ದೋಷತ್ವವು ಲಾಭವಾಗುವಾಗ ಪುನಃ ನಿರ್ದೋಷಂ ಎಂಬ ವಿಶೇಷಣವು ವ್ಯರ್ಥವಾಗಿದೆ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

## 'ಅಶೇಷವಿಶೇಷತೋಽಪಿ ವಂದ್ಯಂ' ಎಂಬುದರ ವ್ಯಾಖ್ಯಾನ

**ಶ್ರೀಮನ್ನ್ಯಾಯಸುಧಾ– ಅಥವಾ । ಕುತೋ ನಾರಾಯಣಸ್ಯ ನಮ್ಯತ್ವಮ್? ತಥಾತ್ವೇಽಪಿ ಕುತೋಽನ್ಯಾಸು ದೇವತಾಸು ಸತೀಷು ತಸ್ಯೈವ ನಮನಮ್? ಇತ್ಯತ ಉಕ್ತಮ್ – ಅಶೇಷವಿಶೇಷತೋಽಪಿ ವಂದ್ಯಮ್ ಇತಿ ॥**

**'ವಿಶಿಷ್ಯತೇ ವಸ್ತ್ವೇಭಿಃ' ಇತಿ ವಿಶೇಷಾ ಅಸಾಧಾರಣಧರ್ಮಾ ಅಶೇಷಾಶ್ಚ ತೇ ವಿಶೇಷಾಶ್ಚ । ಅಪಿಃ ಅಭಿವ್ಯಾಪ್ತೌ । ಯಾವಂತೋ ವಂದ್ಯತ್ವನಿಮಿತ್ತಭೂತಾ-ಧರ್ಮಾಃ ತೇಭ್ಯೋ ವಿಶೇಷೇಭ್ಯೋಽಪಿ ಹೇತುಭ್ಯೋ ವಂದ್ಯಮ್ । ತಥಾ ಅಶೇಷಾದ್ ವಂದ್ಯತ್ವೇನ ಸಮಾಶಂಕಿತಾತ್ ಪದ್ಮಾಪದ್ಮಭವಾದೇರ್ಜಗತೋ ವಿಶೇಷೋಽತಿಶಯೋಽಶೇಷವಿಶೇಷಃ ಸರ್ವೋತ್ತಮತ್ವಮ್ ।**





**ತತೋ ಹೇತೋಃ ಸತೀಷು ಅನ್ಯಾಸು ದೇವತಾಸು ವಂದ್ಯಮ್ ಇತಿ । ಏತದು- ಭಯಂ ಕಥಂ ನಾರಾಯಣಸ್ಯ ? ಇತ್ಯತಃ ಅಭಿಹಿತಂ – ನಿಖಿಲೇತ್ಯಾದಿ ॥**

ಅಥವಾ ನಾರಾಯಣನನ್ನೇಕೆ ಮೊದಲು ನಮಸ್ಕಾರ ಮಾಡಬೇಕು? ನಮಸ್ಕಾರ ಮಾಡಿಸಿಕೊಳ್ಳಲು ಯೋಗ್ಯವಾದ ಧರ್ಮ ಅವನಲ್ಲಿದೆಯೇ? ಇದೆ ಎಂದು ಒಪ್ಪಿ- ಕೊಳ್ಳೋಣ. ಆದರೂ ಬೇರೆ ದೇವತೆಗಳು ನಮಸ್ಕಾರ ಮಾಡಿಸಿಕೊಳ್ಳಲು ಯೋಗ್ಯರಾಗಿ- ದ್ದಾರೆ. ಆ ಎಲ್ಲಾ ದೇವತೆಗಳನ್ನು ಬಿಟ್ಟು ನಾರಾಯಣನನ್ನೇ ಏಕೆ ನಮಸ್ಕಾರ ಮಾಡಬೇಕು? ಈ ಎರಡು ಪ್ರಶ್ನೆಗೆ ಉತ್ತರವನ್ನು ನೀಡುವುದಕ್ಕಾಗಿ ಮಂಗಳಶ್ಲೋಕದಲ್ಲಿ 'ಅಶೇಷ- ವಿಶೇಷತೋಽಪಿ ವಂದ್ಯಮ್' ಎಂಬ ವಿಶೇಷಣವನ್ನು ಹೇಳಿರುತ್ತಾರೆ.

ಅಶೇಷವಿಶೇಷತಃ ಎಂಬುದರ ಅರ್ಥ ಹೀಗಿದೆ – ವಿಶಿಷ್ಯತೇ ವಸ್ತು ಏಭಿರಿತಿ ವಿಶೇಷಾಃ ಎಂಬ ನಿಷ್ಪತ್ತಿಯಿಂದ ಯಾವ ವಸ್ತು ತನ್ನಲ್ಲಿರುವ ಅಸಾಧಾರಣಧರ್ಮದಿಂದ ಬೇರೆ ವಸ್ತುಗಳಿಗಿಂತ ಭಿನ್ನವಾಗುತ್ತದೋ ಅಂಥ ಅಸಾಧಾರಣಧರ್ಮವು ವಿಶೇಷ ಎನಿಸಿಕೊಳ್ಳು- ತ್ತದೆ. ಅಶೇಷಾಶ್ಚ ತೇ ವಿಶೇಷಾಶ್ಚ ಎಂಬುದಾಗಿ ವಿಗ್ರಹ ಮಾಡಿದಾಗ ಎಲ್ಲಾ ಬಗೆಯ ಅಸಾಧಾರಣಧರ್ಮಗಳು ಎಂದರ್ಥ. ಅಪಿ ಎಂಬ ಶಬ್ದವು ಸಂಕೋಚ ಮಾಡದೇ ಎಲ್ಲಾ ಧರ್ಮಗಳನ್ನು ವಿವಕ್ಷಿಸಬೇಕು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

ವಂದ್ಯನಾಗುವುದಕ್ಕಾಗಿ ಎಷ್ಟು ಅಸಾಧಾರಣಧರ್ಮಗಳು ಕಾರಣವಾಗಿವೆಯೋ ಆ ಎಲ್ಲಾ ಅಸಾಧಾರಣ ಧರ್ಮಗಳು ನಾರಾಯಣನಲ್ಲಿವೆ. ಮತ್ತು ನಮಸ್ಕಾರ ಮಾಡಿಸಿ- ಕೊಳ್ಳಲು ಅರ್ಹರಾದ ರಮಾ, ಬ್ರಹ್ಮ, ರುದ್ರ, ಇಂದ್ರ ಮೊದಲಾದ ಎಲ್ಲಾ ದೇವತೆ- ಗಳಿಗಿಂತ ವಿಶೇಷ = ಅಧಿಕನಾಗಿದ್ದಾನೆ. ಇದು ಅಶೇಷವಿಶೇಷಶಬ್ದಕ್ಕೆ ಎರಡನೆಯ ಅರ್ಥ. ಸರ್ವೋತ್ತಮತ್ವ ಎಂಬುದು ಈಗಿನ ಅರ್ಥ. ಇಂಥ ಸರ್ವೋತ್ತಮತ್ವವಿರುವುದು ನಾರಾ- ಯಣನಲ್ಲಿ ಮಾತ್ರ .





ಆದ್ದರಿಂದ ಬೇರೆ ದೇವತೆಗಳಿದ್ದರೂ ಕೂಡ ನಾರಾಯಣನೇ ಮುಖ್ಯವಾಗಿ ವಂದ್ಯನಾಗಿದ್ದಾನೆ. ವಂದ್ಯತ್ವಕ್ಕೆ ಪ್ರಯೋಜಕವಾದ ಎಲ್ಲಾ ಅಸಾಧಾರಣಗಳಿರುವಿಕೆ ಮತ್ತು ಸರ್ವೋತ್ತಮತ್ವ ಈ ಎರಡು ಧರ್ಮಗಳು ನಾರಾಯಣನಲ್ಲಿ ಹೇಗಿವೆ? ಎಂಬುದಕ್ಕೆ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣದಿಂದ ಉತ್ತರಿಸುತ್ತಿದ್ದಾರೆ.

## ವಂದ್ಯತ್ವಪ್ರಯೋಜಕವಾದ ಎಲ್ಲಾ ಧರ್ಮಗಳೂ ನಾರಾಯಣನಲ್ಲಿವೆ

**ಪರಿಮಳ–** ಅನ್ಯಥಾಪಿ ಸ್ತುತಿಸಂಭವಾತ್ ಏತೈರೇವ ವಿಶೇಷಣೈಃ ಸ್ತುತೌ ನ ಕಿಂಚಿದ್ ಬೀಜಮ್? ಇತ್ಯತ ಆಹ – ಅಥವೇತಿ ॥ ಆದ್ಯಚೋದ್ಯಂ ನಿರಸಿತುಮಾಹ – ವಿಶಿಷ್ಯತ ಇತಿ ॥ ವ್ಯಾವರ್ತತ ಇತ್ಯರ್ಥಃ।

ಅನುವ್ಯಾಖ್ಯಾನಶ್ಲೋಕದಲ್ಲಿ ಬೇರೆ ರೀತಿಯ ವಿಶೇಷಣಗಳಿಂದಲೂ ಕೂಡ ನಾರಾಯಣನನ್ನು ಸ್ತೋತ್ರಮಾಡಬಹುದಿತ್ತು. ಇವೇ ವಿಶೇಷಣಗಳಿಂದ ಸ್ತೋತ್ರಮಾಡಲು ಯಾವುದೇ ಕಾರಣವಿಲ್ಲ? ಈ ಪ್ರಶ್ನೆಗೆ ಉತ್ತರಿಸಲು 'ಅಥವಾ' ಇತ್ಯಾದಿ ಟೀಕೆಯು ಹೊರಟಿದೆ. ಮೊದಲನೆಯ ಆಕ್ಷೇಪವನ್ನು ಪರಿಹರಿಸಲು 'ವಿಶಿಷ್ಯತೇ' ಇತ್ಯಾದಿ ವಾಕ್ಯವು ಹೊರಟಿದೆ. 'ವಿಶಿಷ್ಯತೇ' ಎಂಬ ಪದಕ್ಕೆ ವ್ಯಾವರ್ತ್ಯತೇ ಎಂದರ್ಥ. ಭಿನ್ನವಾಗಿದೆ ಎಂಬುದು ತಾತ್ಪರ್ಯ.

ವಿಶೇಷವಿಚಾರ – 'ನಿಖಿಲಪೂರ್ಣಗುಣೈಕದೇಹಂ' ಮುಂತಾದ ವಿಶೇಷಣಪದಗಳಿಗೆ ಪ್ರಯೋಜನ -ವನ್ನು ಮತ್ತೊಂದು ರೀತಿಯಿಂದ ಹೇಳುತ್ತಾರೆ 'ಅಥವಾ' ಎಂಬುದಾಗಿ. 'ಅಶೇಷವಿಶೇಷತಃ' ಎಂಬ ಪದಕ್ಕೆ ಎರಡು ರೀತಿ ಸಮಾಸ ಮಾಡಬಹುದು. ೧. ವಿಶಿಷ್ಯತೇ ವಸ್ತು ಏಭಿರಿತಿ ವಿಶೇಷಾಃ, ಅಶೇಷಾಶ್ಚ ತೇ ವಿಶೇಷಾಶ್ಚ ಅಶೇಷವಿಶೇಷಾಃ, ಅಶೇಷವಿಶೇಷೇಭ್ಯಃ ಇತಿ ಅಶೇಷವಿಶೇಷತಃ । ಇದರ ಅಭಿಪ್ರಾಯ ಹೀಗಿದೆ— ಯಾವುದೇ ಒಂದು ವಸ್ತು ಇತರವಸ್ತುಗಳಿಗಿಂತ ಭಿನ್ನ ಎಂದು ಹೇಗೆ ತಿಳಿಯುತ್ತದೆ? ಆ ವಸ್ತುವಿನಲ್ಲಿರುವ ಅಸಾಧಾರಣಧರ್ಮದಿಂದ. ಆ ಅಸಾಧಾರಣಧರ್ಮವೇ ವಿಶೇಷ. ವಂದ್ಯತ್ವಕ್ಕೆ ಕಾರಣಗಳಾದ ಯಾವ ಯಾವ ಅಸಾಧಾರಣಧರ್ಮಗಳಿವೆಯೋ ಅವೆಲ್ಲವೂ ನಾರಾಯಣನಲ್ಲಿವೆ. ಆದ್ದರಿಂದಲೇ ಅವನು ವಂದ್ಯನಾಗಿದ್ದಾನೆ. ನಾರಾಯಣನಿಗೇಕೆ ವಂದ್ಯತ್ವ? ಎಂಬ ಪ್ರಶ್ನೆಗೆ ಇದರಿಂದ ಉತ್ತರ ಹೇಳಿದಂತಾಯಿತು.





ಸರ್ವೋತ್ತಮನಾದ್ದರಿಂದ ನಾರಾಯಣನಿಗೆ ನಮಸ್ಕರಿಸಿದ್ದಾರೆ.

ಪರಿಮಳ– ಯಾವಂತ ಇತಿ ॥ ವಿಶಿಷ್ಟತ್ವ-ಇಷ್ಟತ್ವ-ಅಧಿಕೃತತ್ವರೂಪಾ ಇತಿ ಭಾವಃ । ದ್ವಿತೀಯಚೋದ್ಯಂ ನಿರಾಹ – ತಥೇತ್ಯಾದಿನಾ ॥ ಪದ್ಮೇತಿ ॥ ಶ್ರೀಬ್ರಹ್ಮಾದೇರಿತ್ಯರ್ಥಃ।

'ಯಾವಂತಃ' ಎಂಬ ಪದಕ್ಕೆ ವಿಶಿಷ್ಟತ್ವ, ಇಷ್ಟತ್ವ, ಅಧಿಕೃತತ್ವ ಎಂಬ ಧರ್ಮಗಳು ಎಂದರ್ಥ. ಎರಡನೆಯ ಆಕ್ಷೇಪವನ್ನು ಪರಿಹರಿಸಲು 'ತಥಾ' ಇತ್ಯಾದಿ ಗ್ರಂಥವು ಹೊರಟಿದೆ. ಪದ್ಮಾ ಎಂಬ ಪದಕ್ಕೆ ಲಕ್ಷ್ಮೀದೇವಿಯೆಂದರ್ಥ. 'ಪದ್ಮಭವಃ' ಎಂದರೆ ಬ್ರಹ್ಮದೇವರು ಎಂದರ್ಥ. 'ಆದಿ'ಪದದಿಂದ ರುದ್ರಾದಿಗಳು ವಿವಕ್ಷಿತರು.

ವಿಶೇಷವಿವರಣೆ – 'ಅಶೇಷಾತ್ ವಿಶೇಷಃ, ಅಶೇಷವಿಶೇಷಃ, ಅಶೇಷವಿಶೇಷಾದಿತಿ ಅಶೇಷ-ವಿಶೇಷತಃ' ಎಂದೂ ಸಮಾಸ ಮಾಡಬಹುದು. ಇದರ ಅಭಿಪ್ರಾಯ ಹೀಗಿದೆ—ಜಗತ್ತಿನಲ್ಲಿ, ಲಕ್ಷ್ಮೀ, ಬ್ರಹ್ಮ, ರುದ್ರ ಮುಂತಾದ ಅನೇಕ ದೇವತೆಗಳು ವಂದನೀಯರಾಗಿದ್ದಾರೆ. ಆದರೆ ಅವರಾರೂ ಸರ್ವೋತ್ತಮರಲ್ಲ. ನಾರಾಯಣನೊಬ್ಬನೇ ಸರ್ವೋತ್ತಮ. ಹೀಗೆ ಎಲ್ಲ ದೇವತೆಗಳಿಗಿಂತಲೂ ಎಲ್ಲ ವಿಧಗಳಿಂದಲೂ ಅನಂತಪಾಲು ಮಿಗಿಲಾದ ಶ್ರೀಮನ್ನಾರಾಯಣನೇ ಮುಖ್ಯತಃ ವಂದ್ಯನಾಗಿದ್ದಾನೆ. ಆದ್ದರಿಂದ ಸರ್ವೋತ್ತಮನಾರಾಯಣನನ್ನೇ ಜೀವೋತ್ತಮರಾದ ಶ್ರೀಮಧ್ವರು ಮುಖ್ಯವಾಗಿ ವಂದಿಸಿ ಲೋಕಶಿಕ್ಷಣಕ್ಕಾಗಿ ಗ್ರಂಥಾರಂಭದಲ್ಲಿ ನಿಬಂಧನ ಮಾಡಿದ್ದಾರೆ. ಇದರಿಂದ ನಾರಾಯಣನು ವಂದ್ಯನಾದರೂ ಬೇರೆ ದೇವತೆಗಳಿರುವಾಗ ಅವನನ್ನೇ ಏಕೆ ಆಚಾರ್ಯರು ನಮಿಸಿದರು? ಎಂಬ ಪ್ರಶ್ನೆಗೆ ಉತ್ತರಿಸಿದಂತಾಯಿತು.

ಐದು ವಿಶೇಷಣಗಳೂ ಸಾರ್ಥಕ

ಪರಿಮಳ– ಏತದುಭಯಮಿತಿ ॥ ವಂದ್ಯತ್ವಪ್ರಯೋಜಕಾಸಾಧಾರಣಧರ್ಮವತ್ತ್ವಂ ಸರ್ವೋತ್ತಮತ್ವಂ ಚ ಇತ್ಯುಭಯಮಿತ್ಯರ್ಥಃ । ನಿಖಿಲೇತ್ಯಾದಿ ॥ ವಿಶೇಷಣಪಂಚಕಮ್ ಇತ್ಯರ್ಥಃ।

'ಏತದುಭಯಂ' ಎಂಬ ಪದಕ್ಕೆ ವಂದ್ಯತ್ವಪ್ರಯೋಜಕವಾದ ಅಸಾಧಾರಣಧರ್ಮ-





ವಿರುವಿಕೆ ಮತ್ತು ಸರ್ವೋತ್ತಮತ್ವಗಳು ಎಂದರ್ಥ. 'ನಿಖಿಲ' ಇತ್ಯಾದಿ ಎಂಬುದಕ್ಕೆ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ಐದು ವಿಶೇಷಣಗಳು ಎಂದರ್ಥ.

ವಾಕ್ಯಾರ್ಥಚಂದ್ರಿಕಾ – ಪ್ರಣಾಮಕರ್ಮನಾರಾಯಣವಿಶೇಷಣಾನಾಂ ಪ್ರಣಾಮೋಪಯುಕ್ತಾರ್ಥಪ್ರತಿಪಾದನೇನ ಪ್ರಣಾಮಪ್ರಯೋಜನಕತ್ವಮೇವ ಸ್ವರಸಂ ನ ತು ಪ್ರಯೋಜನಾಂತರಾರ್ಥಕಸ್ತುತಿಪರತ್ವಮ್ ಇತ್ಯಭಿಪ್ರೇತ್ಯ ಆಹ – ಅಥವೇತಿ ॥ ಅತ್ರ 'ನಿಖಿಲ' ಇತ್ಯಾದಿವಿಶೇಷಣತ್ರಯಸ್ಯ ವಂದ್ಯತ್ವಪ್ರಯೋಜಕವೈಶಿಷ್ಟ್ಯೋಪಪಾದಕತ್ವಸ್ಯ ವಂದ್ಯಾಂತರಾತ್ ಅತಿಶಯಪ್ರತಿಪಾದಕತ್ವಸ್ಯ ಚ ವಕ್ಷ್ಯಮಾಣರೀತ್ಯಾ ಸ್ಪಷ್ಟತ್ವಾತ್ ತದುಪಪಾದ್ಯಸಮರ್ಪಕಸ್ಯ 'ಅಶೇಷವಿಶೇಷತೋಽಪಿ' ಇತ್ಯಸ್ಯ ದ್ವೇಧಾ ವ್ಯಾಖ್ಯಾನಮುಚಿತಮ್ ಇತ್ಯಭಿಪ್ರೇತ್ಯ ದ್ವೇಧಾ ತನ್ನಿವರ್ತ್ಯಾಂ ಶಂಕಾಂ ದರ್ಶಯತಿ – ಕುತ ಇತ್ಯಾದಿನಾ ॥

ನಮಸ್ಕಾರಕ್ಕೆ ನಾರಾಯಣನು ಕರ್ಮನಾಗಿದ್ದಾನೆ. ಇವನಿಗೆ ನೀಡಲ್ಪಟ್ಟ ವಿಶೇಷಣಗಳು ನಮಸ್ಕಾರಕ್ಕೆ ಉಪಯುಕ್ತವಾದ ಅರ್ಥವನ್ನೇ ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಪ್ರಣಾಮಪ್ರಯೋಜಕವಾಗಿವೆ. ಹೀಗೆಯೇ ವ್ಯಾಖ್ಯಾನ ಮಾಡುವುದು ಸ್ವರಸವಾಗುತ್ತದೆ. ಬೇರೆ ಪ್ರಯೋಜನ ಹೇಳುವುದು ಅಸ್ವರಸವಾಗಿದೆ. ಕೇವಲ ಸ್ತುತಿಪರವಾಗಿದೆ ಎಂದು ಹೇಳುವುದರಲ್ಲಿ ಅರ್ಥವಿಲ್ಲ. ಈ ಅಭಿಪ್ರಾಯದಿಂದ 'ಅಥವಾ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ಮೂರು ವಿಶೇಷಣಗಳು ವಂದ್ಯತ್ವಪ್ರಯೋಜಕವಾದ ವೈಶಿಷ್ಟ್ಯವನ್ನು ಪ್ರತಿಪಾದನೆ ಮಾಡುತ್ತಿವೆ. ವಂದ್ಯರಾದ ಲಕ್ಷ್ಮೀಬ್ರಹ್ಮಾದಿಗಳಿಗಿಂತ ಅತಿಶಯವನ್ನು ಪ್ರತಿಪಾದನೆ ಮಾಡುವುದು ಮುಂದೆ ಹೇಳುವಂತೆ ಸ್ಪಷ್ಟವಾಗಿದೆ. ಆದ್ದರಿಂದ ಇದರ ಉಪಪಾದನೆಗಾಗಿ ಅಶೇಷವಿಶೇಷತೋಽಪಿ ಎಂಬುದಕ್ಕೆ ಎರಡು ರೀತಿಯಲ್ಲಿ ವ್ಯಾಖ್ಯಾನ ಮಾಡಬೇಕಾಗಿದೆ. ಆದ್ದರಿಂದ ತನ್ನಿವರ್ತ್ಯವಾದ ಎರಡು ಆಶಂಕೆಗಳನ್ನು 'ಕುತಃ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

## 'ಅಪಿ'ಶಬ್ದಕ್ಕೆ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ– 'ವಿಶೇಷತೋಽಪಿ' ಇತ್ಯಪಿಶಬ್ದಸ್ಯ ಸಮುಚ್ಚಾಯಕತ್ವಾಸಂಭವಾತ್ 'ಸರ್ವಕರ್ಮಾಣ್ಯಪಿ ಸದಾ ಕುರ್ವಾಣಃ' ಇತಿ ಗೀತಾತಾತ್ಪರ್ಯನಿರ್ಣಯೇ 'ಏಕಮಪಿ ಕರ್ಮ ತದನಾದರೇಣ ನ ಕಾರ್ಯಮ್' ಇತ್ಯಾದಿನಾ ಆಚಾರ್ಯೈರಭಿವ್ಯಾಪ್ತ್ಯರ್ಥತಯಾ ತಸ್ಯ ವ್ಯಾಖ್ಯಾತ-





ತ್ವಾತ್ 'ಸರ್ವೋಽಸ್ಯಾನೇಯಾಃ' ಇತ್ಯಾದಿಲೋಕವ್ಯವಹಾರಸಿದ್ಧತ್ವಾಚ್ಚ 'ಅಶೇಷ'ಪದಸಂಕೋಚ-ಪ್ರತೀತಿಂ ವಾರಯಿತುಮ್ ಅಭಿವ್ಯಾಪ್ತ್ಯರ್ಥತಯಾ ತಂ ವ್ಯಾಚಷ್ಟೇ – ಅಪಿರಿತಿ ॥

'ವಿಶೇಷತೋಽಪಿ' ಎಂಬಲ್ಲಿರುವ ಅಪಿಶಬ್ದವು ಸಮುಚ್ಚಯಾರ್ಥದಲ್ಲಿ ಪ್ರಯುಕ್ತವಾಗಿಲ್ಲ. ಅಭಿವ್ಯಾಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. 'ಸರ್ವಕರ್ಮಣ್ಯಪಿ ಸದಾ ಕುರ್ವಾಣಃ' ಎಂಬುದಾಗಿ ಗೀತಾ-ತಾತ್ಪರ್ಯನಿರ್ಣಯದಲ್ಲಿ ಒಂದು ಕೆಲಸವನ್ನೂ ಕೂಡ ಅನಾದರದಿಂದ ಮಾಡಬಾರದು ಎಂಬುದಾಗಿ ಅಭಿವ್ಯಾಪ್ತ್ಯರ್ಥದಲ್ಲಿ ಅಪಿ ಶಬ್ದವನ್ನು ವ್ಯಾಖ್ಯಾನ ಮಾಡಿದ್ದಾರೆ.

ಮತ್ತು ಲೋಕದಲ್ಲಿಯೂ ಕೂಡ 'ಸರ್ವೋಽಸ್ಯಾನೇಯಾಃ' ಎಂಬಲ್ಲಿ ಅಪಿಶಬ್ದವು ಅಭಿ-ವ್ಯಾಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಅದರಂತೆ ಪ್ರಕೃತದಲ್ಲಿ ಅಪಿಶಬ್ದವು ಅಭಿವ್ಯಾಪ್ತ್ಯರ್ಥದಲ್ಲಿದೆ ಎಂದು ತಿಳಿಯಬೇಕು. ಇದನ್ನು 'ಅಪಿಃ ಅಭಿವ್ಯಾಪ್ತೌ' ಎಂಬುದಾಗಿ ಟೀಕೆಯಲ್ಲಿ ವ್ಯಾಖ್ಯಾನಮಾಡಿದ್ದಾರೆ.

## ರಸಘಟ್ಟ

ಆನಂದಃ – ನನು ಸ್ತುತಿಪದಾನಾಂ ವಿಶೇಷ್ಯಪ್ರಶಂಸಾಮಾತ್ರಪ್ರಯೋಜನತ್ವೇ ಏಭಿರೇವ ವಿಶೇಷಣೈಃ ಸ್ತುತಿಕರಣೇ ಬೀಜಾಭಾವ ಇತ್ಯತಃ ಪಕ್ಷಾಂತರಮಾಹ – ಅಥವಾ ಇತಿ ॥

ಸ್ತುತಿವಾಚಕಪದಗಳಿಗೆ ನಾರಾಯಣನನ್ನು ಪ್ರಶಂಸೆ ಮಾಡುವುದೇ ಪ್ರಯೋಜನವಾಗುವು-ದಾದರೆ ಇದೇ ವಿಶೇಷಣಗಳಿಂದಲೇ ಏಕೆ ಸ್ತೋತ್ರಮಾಡಬೇಕು? ಅದಕ್ಕೇನು ಬೀಜ? ಎಂಬುದಕ್ಕೆ ಮತ್ತೊಂದು ಪಕ್ಷವನ್ನು 'ಅಥವಾ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

## ಅಭಿವ್ಯಾಪ್ತ್ಯರ್ಥದಲ್ಲಿ ಅಪಿಶಬ್ದ

ಯಾದುಪತ್ಯ – ಯಾವಂತೋ ವಂದ್ಯತ್ವನಿಮಿತ್ತಭೂತಾ ಧರ್ಮಾ ಲೋಕೇ ಪ್ರಸಿದ್ಧಾಃ ತೇಷಾಂ ಸರ್ವೇಷಾಂ ಪ್ರಕೃತೇಽಭಿವ್ಯಾಪ್ತಿಃ ಅಸಂಕೋಚೇನ ವೃತ್ತಿರಿತಿ ಯಾವತ್ ।

ಎಷ್ಟು ವಂದ್ಯತ್ವನಿಮಿತ್ತವಾದ ಧರ್ಮಗಳು ಲೋಕದಲ್ಲಿ ಪ್ರಸಿದ್ಧವಾಗಿವೆಯೋ ಅವೆಲ್ಲವೂ ಕೂಡ ನಾರಾಯಣನಲ್ಲಿ ಅಸಂಕುಚಿತವಾಗಿ ಇರುತ್ತವೆ. ಇದನ್ನು 'ಅಪಿ'ಶಬ್ದವು ತಿಳಿಸುತ್ತಿದೆ.

## ಸುಧಾಪರಿಮಳಸಾರ

ನಾರಾಯಣನನ್ನು 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳಿಂದ ಸ್ತುತಿಸಿದ್ದಾರೆ. ಬೇರೆ ರೀತಿಯಲ್ಲೂ ಕೂಡ ಸ್ತೋತ್ರ ಮಾಡಬಹುದಿತ್ತು. ಇದೇ ವಿಶೇಷಣಗಳನ್ನು ಹೇಳಲು ಏನಾದರೂ ಕಾರಣವಿದೆಯೇ? ಎಂಬ ಪ್ರಶ್ನೆಗೆ ಸುಧಾಕಾರರು ಉತ್ತರಿಸುತ್ತಿದ್ದಾರೆ. ಒಟ್ಟು ಎರಡು ಮುಖ್ಯಕಾರಣ. ನಮಸ್ಕಾರ ಮಾಡಿಸಿಕೊಳ್ಳಲು ಯೋಗ್ಯವಾದ ಎಲ್ಲ ಧರ್ಮಗಳು ನಾರಾಯಣನಲ್ಲಿವೆ. ಮತ್ತು ನಮಸ್ಕಾರ ಮಾಡಿಸಿಕೊಳ್ಳಲ್ಪಡುವ ಲಕ್ಷ್ಮೀ, ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಂದಲೂ ಕೂಡ ನಾರಾಯಣನು ನಮ್ಯನಾಗಿದ್ದಾನೆ. ಈ ಎರಡು ಕಾರಣಗಳಿಗಾಗಿ ಈ ಐದು ವಿಶೇಷಣಗಳನ್ನು ಮಂಗಲಾಚರಣೆಯಲ್ಲಿ ಹೇಳಿರುತ್ತಾರೆ. ಈ ವೈಶಿಷ್ಟ್ಯವನ್ನು ಅನುವ್ಯಾಖ್ಯಾನ ಶ್ಲೋಕದಲ್ಲಿಯೇ 'ಅಶೇಷವಿಶೇಷತೋಽಪಿ ವಂದ್ಯಮ್' ಎಂಬ ವಿಶೇಷಣದಿಂದ ತಿಳಿಸಿರುತ್ತಾರೆ. ಆದ್ದರಿಂದ 'ಅಶೇಷವಿಶೇಷತೋಽಪಿ' ಎಂಬ ವಿಶೇಷಣವು ಎಲ್ಲರಿಂದಲೂ ವಂದ್ಯನಾಗಿರುವಿ ಎಂದಷ್ಟೇ ಹೇಳುತ್ತಿಲ್ಲ. ಉಳಿದ ವಿಶೇಷಣಗಳಿಗೆ ಸಾರ್ಥಕ್ಯವನ್ನೂ ಕೂಡ ಸಮರ್ಥನೆ ಮಾಡುತ್ತಿದೆ. ಗ್ರಂಥಪ್ರಾರಂಭದಲ್ಲಿ ಹೇಳಲೇಬೇಕಾದ ವಂದ್ಯತ್ವಪ್ರಯೋಜಕಧರ್ಮವನ್ನು ಹೇಳುತ್ತಿದೆ. ಮತ್ತು ವಿಷ್ಣುಸರ್ವೋತ್ತಮತ್ವವನ್ನು ಕೂಡ ಸಮರ್ಥಿಸುತ್ತಿದೆ. ಹೀಗೆ 'ಅಶೇಷವಿಶೇಷತೋಽಪಿ' ಎಂಬ ವಿಶೇಷಣದ ವೈಶಿಷ್ಟ್ಯವನ್ನು ತಿಳಿಯಬೇಕು.

## ವಂದ್ಯದೇವತೆಯಲ್ಲಿ ತ್ರೈವಿಧ್ಯಸಮರ್ಥನೆ

**ಶ್ರೀಮನ್ನ್ಯಾಯಸುಧಾ– ತ್ರಿವಿಧಾ ಹಿ ದೇವತಾ ವಂದ್ಯಾ ಭವತಿ । ವಿಶಿಷ್ಟ-ಅಧಿಕೃತ-ಇಷ್ಟಾ ಚೇತಿ ॥ ನಹಿ ದೇವತಾವಂದನಂ ವ್ಯಸನಿತಯಾ ಕ್ರಿಯತೇ । ಕಿಂತು ವಿಘ್ನವಿಘಾತಾದಿಪ್ರಯೋಜನಾಪೇಕ್ಷಯಾ । ವಿಶಿಷ್ಟಸ್ಯೈವ ದೇವತಾತಸ್ಯೇಷ್ಟೇ । ಅಧಿಕೃತಾ ಚ ಸ್ವವಿಷಯಗ್ರಂಥಪ್ರಬೋಧಾದಿಕಂ ಸಂಪಾದಯತಿ । ವಂದನಂ ಖಲು ಭಕ್ತ್ಯಾದ್ಯುಪೇತಮೇವ ಸಫಲಮ್ । ತಚ್ಚ ಇಷ್ಟಾಯಾಮೇವ ದೇವತಾಯಾಮ್ ಉಪಪದ್ಯತ ಇತಿ ।**

ದೇವತೆಯು ಮೂರು ರೀತಿಯಲ್ಲಿ ವಂದ್ಯನಾಗುವನು. (೧) ವಿಶಿಷ್ಟನಾದಾಗ, (೨) ಅಧಿಕೃತನಾದಾಗ, (೩) ಇಷ್ಟನಾದಾಗ ಎಂದು. ದೇವತಾವಂದನೆಯು ಕೇವಲ ವ್ಯಸನ-





ಕ್ಕೋಸ್ಕರ (ಚಟಕ್ಕೋಸ್ಕರ) ಮಾಡುವುದಿಲ್ಲ. ವಿಘ್ನವಿಘಾತ, ಗ್ರಂಥಸಮಾಪ್ತಿ, ಪ್ರಚಯ ಮೊದಲಾದ ಪ್ರಯೋಜನಗಳ ಅಪೇಕ್ಷೆಯಿಂದಷ್ಟೇ ಮಾಡುತ್ತಾರೆ. ಇಂಥ ವಿಘ್ನವಿಘಾತಾದಿಗಳನ್ನು ಮಾಡಲು ವಿಶಿಷ್ಟದೇವತೆಯೇ ಸಮರ್ಥನಾಗುವನು. ತನ್ನನ್ನು ಪ್ರತಿಪಾದನೆ ಮಾಡುವ ಗ್ರಂಥದ ಜ್ಞಾನವನ್ನು ಅಧಿಕೃತದೇವತೆಯು ಉಂಟುಮಾಡುತ್ತಾನೆ. ಇನ್ನು ಭಕ್ತ್ಯತಿಶಯ, ಶ್ರದ್ಧಾತಿಶಯಗಳಿಂದ ಕೂಡಿದ ನಮಸ್ಕಾರವೇ ಫಲಪ್ರದವಾಗುತ್ತದೆ. ಇಂಥ ನಮಸ್ಕಾರವನ್ನು ಇಷ್ಟನಾದ ದೇವತೆಯಲ್ಲಷ್ಟೇ ಮಾಡಲು ಸಾಧ್ಯ .

## ಮಂಗಳಶ್ಲೋಕದ ಐದು ವಿಶೇಷಣಗಳು ವಂದ್ಯತ್ವಪ್ರಯೋಜಕವಾಗಿವೆ

ಪರಿಮಳ– ತತ್ರ ವಿಶೇಷಣತ್ರಯೇಣ ವಿಶಿಷ್ಟತ್ವಮನ್ಯಾಭ್ಯಾಮಧಿಕೃತತ್ವೇಷ್ಟತ್ವೇ ಇತಿ ವಕ್ತುಂ ವಂದ್ಯತ್ವಪ್ರಯೋಜಕಧರ್ಮಾನ್ ತಾವದಾಹ – 'ತ್ರಿವಿಧಾ ಹಿ' ಇತ್ಯಾದಿನಾ 'ಉಪಪದ್ಯತೇ' ಇತ್ಯಂತೇನ । ವಿಶಿಷ್ಟಾ ವಂದ್ಯಾಃ ಇತ್ಯೇತದ್ ವ್ಯನಕ್ತಿ – ನ ಹೀತಿ ॥ ಅಧಿಕೃತಾ ವಂದ್ಯಾಃ ಇತ್ಯೇತದ್ ವ್ಯನಕ್ತಿ – ಅಧಿಕೃತಾ ಚೇತಿ ॥

ಇಷ್ಟಾ ವಂದ್ಯಾಃ ಇತ್ಯೇತದ್ ವ್ಯನಕ್ತಿ – ವಂದನಮಿತಿ ॥ ಇತಿಶಬ್ದೋ ಹೇತ್ವರ್ಥಃ । ಇತಿ ಹೇತೋಃ 'ತ್ರಿವಿಧಾ ವಂದ್ಯಾಃ' ಇತಿ ಪೂರ್ವೇಣಾನ್ವಯಃ ।

ಮಂಗಳಶ್ಲೋಕದಲ್ಲಿ ಒಟ್ಟು ಐದು ವಿಶೇಷಣಗಳಿವೆ. ಅವುಗಳಲ್ಲಿ ಮೂರು ವಿಶಿಷ್ಟತ್ವವನ್ನು, ಉಳಿದೆರಡು ಅಧಿಕೃತತ್ವ ಮತ್ತು ಇಷ್ಟತ್ವವನ್ನು ನಾರಾಯಣನಲ್ಲಿ ಸಮರ್ಥನೆ ಮಾಡುತ್ತಿವೆ. ಇದನ್ನು ಹೇಳುವುದಕ್ಕಾಗಿ ವಂದ್ಯತ್ವಪ್ರಯೋಜಕವಾದ ಧರ್ಮವನ್ನು 'ತ್ರಿವಿಧಾ ಹಿ' ಎಂಬಲ್ಲಿಂದ ಪ್ರಾರಂಭಿಸಿ 'ಉಪಪದ್ಯತೇ ಇತಿ' ಎಂಬಲ್ಲಿಯ ತನಕ ಸುಧಾಕಾರರು ಹೇಳುತ್ತಿದ್ದಾರೆ. ವಿಶಿಷ್ಟನಾದವನು ವಂದ್ಯನಾಗುತ್ತಾನೆ ಎಂಬುದರ ಸಮರ್ಥನೆಗಾಗಿ 'ನ ಹಿ' ಎಂಬ ವಾಕ್ಯ ಹೊರಟಿದೆ. ಅಧಿಕೃತನಾದವನು ವಂದ್ಯನಾಗುತ್ತಾನೆಂಬುದರ ಸಮರ್ಥನೆಗಾಗಿ 'ಅಧಿಕೃತಾ ಚ' ಎಂಬ ವಾಕ್ಯ ಹೊರಟಿದೆ.





ಇಷ್ಟನಾದವನು ವಂದ್ಯನಾಗುತ್ತಾನೆ ಎಂಬುದರ ಸಮರ್ಥನೆಗಾಗಿ 'ವಂದನಮ್' ಇತ್ಯಾದಿ ವಾಕ್ಯವು ಹೊರಟಿದೆ. ಕೊನೆಯಲ್ಲಿರುವ ಇತಿಶಬ್ದವು ಹೇತ್ವರ್ಥದಲ್ಲಿದೆ. ಇದಕ್ಕೆ 'ತ್ರಿವಿಧಾ ಹಿ ದೇವತಾ ವಂದ್ಯಾ' ಎಂಬಲ್ಲಿ ಅನ್ವಯ ಮಾಡಬೇಕು. ಈ ಕಾರಣದಿಂದ ದೇವತೆಯು ಮೂರು ರೀತಿಯಲ್ಲಿ ವಂದ್ಯನಾಗುತ್ತಾನೆ ಎಂಬುದು ಇದರ ಅರ್ಥ.

ವಿಶೇಷವಿಚಾರ – ವಂದ್ಯತ್ವಕ್ಕೆ ಪ್ರಯೋಜಕಗಳಾದ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವವೆಂಬ ಮೂರು ಬಗೆಯ ಧರ್ಮಗಳನ್ನು ಯಾವ ದೇವತೆ ಹೊಂದಿರುವನೋ ಆ ದೇವತೆಯು ಗ್ರಂಥಾರಂಭದಲ್ಲಿ ವಂದ್ಯವಾಗುವನು. ಈ ಮೂರು ಬಗೆಯ ವಂದ್ಯತ್ವಪ್ರಯೋಜಕಧರ್ಮಗಳೂ ಶ್ರೀಮನ್ನಾರಾಯಣನಲ್ಲಿವೆ.

೧. ಗ್ರಂಥಾರಂಭದಲ್ಲಿ ಯಾವ ದೇವತೆಯನ್ನು ನಾವು ನಮಸ್ಕರಿಸಬೇಕೋ ಆ ದೇವತೆಯಲ್ಲಿ ವಿಶೇಷವಾದ ಮಹತ್ವವಿರಬೇಕು. ಅಂತಹ ವಿಶಿಷ್ಟದೇವತೆಯಿಂದಷ್ಟೇ ನಮಗೆ ಸಂಭವಿಸಬಹುದಾದ ವಿಘ್ನಗಳು ಪರಿಹಾರವಾಗಲು ಸಾಧ್ಯ. ಜಗಜ್ಜನ್ಮಾದಿಕಾರಣನೂ, ಅನಂತಗುಣಪರಿಪೂರ್ಣನೂ, ನಿರ್ದೋಷನೂ ಆದ ನಾರಾಯಣನಲ್ಲಿ ನಮ್ಮ ವಿಘ್ನಗಳೆಲ್ಲವನ್ನೂ ಪರಿಹರಿಸುವ ಸಾಮರ್ಥ್ಯವಿದೆಯೆಂಬುದು ಸುಸ್ಪಷ್ಟ.

೨. ರಚಿಸಲಿರುವ ಗ್ರಂಥದಲ್ಲಿ ಪ್ರತಿಪಾದನೀಯವಾದ ವಿಷಯದ ಬಗ್ಗೆ ಸಮೀಚೀನಜ್ಞಾನವು ಗ್ರಂಥರಚನೆಯ ಮೊದಲೇ ಅತ್ಯಾವಶ್ಯಕ. ಈ ರೀತಿಯ ಜ್ಞಾನವನ್ನುಂಟುಮಾಡುವ ಸಾಮರ್ಥ್ಯವಿರುವುದು ಗ್ರಂಥದಿಂದ ಪ್ರತಿಪಾದ್ಯವಾದ ಅಧಿಕೃತದೇವತೆಗೆ ಮಾತ್ರ. ಪ್ರಕೃತ ಶ್ರೀಮನ್ನಾರಾಯಣನು ಸಕಲಸಚ್ಛಾಸ್ತ್ರಪ್ರತಿಪಾದ್ಯನಾದ್ದರಿಂದ, ಗ್ರಂಥರಚನೆಗೆ ಬೇಕಾದ ತಾತ್ತ್ವಿಕಪ್ರಬೋಧನೆಯನ್ನು ನೀಡಲು ಸಮರ್ಥನಾಗಿದ್ದಾನೆ.

೩. ಭಕ್ತಿಜ್ಞಾನಾದಿಗಳಿಂದ ಯುಕ್ತವಾದ ದೇವತಾವಂದನೆ ಮಾತ್ರ ಫಲವನ್ನು ನೀಡುವುದು. ವಂದಿಸುವವನಿಗೆ ದೇವತೆ ಇಷ್ಟವಾದಾಗ ಮಾತ್ರ ಆ ದೇವತೆಯಲ್ಲಿ ಅವನಿಗೆ ಭಕ್ತಿ ಆವಿರ್ಭವಿಸಲು ಸಾಧ್ಯ. ಪ್ರಕೃತ ಗ್ರಂಥಕರ್ತರಾದ ಶ್ರೀಮದಾನಂದತೀರ್ಥರಿಗೆ ಶ್ರೀಮನ್ನಾರಾಯಣನು ಪರಮಪ್ರೇಮಾಸ್ಪದನಾಗಿದ್ದಾನೆ.



# 'ಉಪಪಾದನ' 'ಪ್ರದರ್ಶನ' ಈ ಎರಡು ಶಬ್ದಪ್ರಯೋಗಗಳ ಬಗ್ಗೆ ಅಪೂರ್ವವಿಷಯ

ವಾಕ್ಯಾರ್ಥಚಂದ್ರಿಕಾ– ನನು 'ನಿಖಿಲ' ಇತ್ಯಾದಿವಿಶೇಷಣಾನಾಮ್ ಅನ್ಯತ್ರ ಅಭಾವೇನ ವಂದ್ಯತ್ವಪ್ರಯೋಜಕತ್ವಾನಿಶ್ಚಯಾತ್ ಕಥಮೇಷಾಂ ತತ್ಪ್ರಯೋಜಕತ್ವೇನೋಕ್ತಿಃ ಇತ್ಯತೋ 'ನಿಖಿಲ' ಇತ್ಯಾದಿವಿಶೇಷಣತ್ರಯಸ್ಯ ವಂದ್ಯತ್ವಪ್ರಯೋಜಕತ್ವೇನ ಅನ್ಯತ್ರೋಪಲಬ್ಧವೈಶಿಷ್ಟ್ಯೋಪಪಾದಕತಯಾ; 'ಅಖಿಲೈಃ ಸುವಾಕ್ಯೈಃ ಆಪ್ತತಮಮ್' ಇತಿ, 'ಸದಾ ಪ್ರಿಯತಮಂ ಮಮ' ಇತಿ ಪ್ರಕೃತಾಧಿಕೃತೇಷ್ಟತ್ವಸ್ವರೂಪಪ್ರದರ್ಶಕವಿಶೇಷಣಯೋಶ್ಚ ತತ್ಪ್ರಯೋಜಕತ್ವೇನ ಅನ್ಯತ್ರೋಪಲಬ್ಧ-ಅಧಿಕೃತೇಷ್ಟರೂಪಸಾಮಾನ್ಯಮುಖೇನ ವಂದ್ಯತ್ವಪ್ರಯೋಜಕಪ್ರತಿಪಾದಕತ್ವಸಂಭವಾತ್ ನ ಅನುಪಪತ್ತಿರಿತ್ಯಭಿಪ್ರೇತ್ಯಾಹ – ತ್ರಿವಿಧಾ ಇತಿ ॥ ಅತ ಏವ ವೈಶಿಷ್ಟ್ಯೋಪಪಾದನಾಯ ಇತಿ, ಅಧಿಕೃತತ್ವಪ್ರದರ್ಶನಾಯ ಇತಿ, ಇಷ್ಟತ್ವಪ್ರದರ್ಶನಮ್ ಇತಿ ವೈಚಿತ್ರ್ಯಮ್ । ವಿಶಿಷ್ಟಾಧಿಕೃತತ್ವಯೋಃ ವಂದ್ಯತ್ವನಿಮಿತ್ತತಾಮ್ ಉಪಪಾದಯನ್ ಇಷ್ಟತ್ವಸ್ಯ ವಂದನವಿಶೇಷಣೀಭೂತಭಕ್ತ್ಯಾದಿದ್ವಾರಾ ವಿಶಿಷ್ಯವಂದ್ಯತ್ವನಿಮಿತ್ತತಾಮ್ ಉಪಪಾದಯತಿ – ನ ಹೀತ್ಯಾದಿನಾ ॥

ಪ್ರಶ್ನೆ – 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' 'ಅಸ್ಮೋದ್ಭವಾದಿದಂ' ಎಂಬ ಮೂರು ವಿಶೇಷಣಗಳು ಬೇರೆಲ್ಲೂ ಪ್ರಸಿದ್ಧವಾಗಿರುವುದಿಲ್ಲ. ಆದ್ದರಿಂದ ವಂದ್ಯತ್ವಪ್ರಯೋಜಕವೆಂದು ನಿಶ್ಚಯವಾಗದ ಕಾರಣ ತತ್ಪ್ರಯೋಜಕವೆಂದು ಹೇಗೆ ಹೇಳುವಿರಿ?

ಈ ಪ್ರಶ್ನೆ ತಪ್ಪು. ಈ ಮೂರು ವಿಶೇಷಣಗಳು ನೇರವಾಗಿ ವಂದ್ಯತ್ವಕ್ಕೆ ಪ್ರಯೋಜಕವಲ್ಲ. ಬೇರೆಡೆ ಉಪಲಬ್ಧವಾದ ವೈಶಿಷ್ಟ್ಯಕ್ಕೆ ಉಪಪಾದಕವಾಗುವ ಮೂಲಕವಾಗಿವೆ. 'ಅಖಿಲೈಃ ಸುವಾಕ್ಯೈಃ ಆಪ್ತತಮಮ್' 'ಸದಾ ಪ್ರಿಯತಮಂ ಮಮ' ಈ ಎರಡು ವಿಶೇಷಣಗಳು ಅಧಿಕೃತತ್ವ ಹಾಗೂ ಇಷ್ಟತ್ವದ ಸ್ವರೂಪಕ್ಕೆ ಪ್ರದರ್ಶಕವಾದ ವಿಶೇಷಣಗಳಾಗಿವೆ. ಅಧಿಕೃತತ್ವ ಮತ್ತು ಇಷ್ಟತ್ವಕ್ಕೆ ಪ್ರಯೋಜಕವಾಗುವ ಮೂಲಕ ಬೇರೆಡೆ ಉಪಲಬ್ಧವಾದ ಅಧಿಕೃತತ್ವ ಇಷ್ಟತ್ವರೂಪವಾದ ಸಾಮಾನ್ಯಧರ್ಮವನ್ನು ಪ್ರತಿಪಾದನೆ ಮಾಡುವ ಮೂಲಕ ವಂದ್ಯತ್ವಕ್ಕೆ ಪ್ರಯೋಜಕವಾಗಿವೆ. ಆದ್ದರಿಂದ ಯಾವುದೇ ಅನುಪಪತ್ತಿಯಿಲ್ಲ. ಈ ಅಭಿಪ್ರಾಯದಿಂದ 'ತ್ರಿವಿಧಾ ಹಿ' ಇತ್ಯಾದಿ ಗ್ರಂಥವು ಪ್ರವೃತ್ತವಾಗಿದೆ.

ಆದ್ದರಿಂದಲೇ ವೈಶಿಷ್ಟ್ಯವನ್ನು ಉಪಪಾದನೆ ಮಾಡುವುದಕ್ಕಾಗಿ ಎಂದು ಹೇಳಿದರು. ಅಧಿ-

ಕೃತತ್ವವನ್ನು ತೋರಿಸುವುದಕ್ಕಾಗಿ, ಇಷ್ಟತ್ವವನ್ನು ತೋರಿಸುವುದಕ್ಕಾಗಿ ಎಂಬುದಾಗಿ ಟೀಕೆಯಲ್ಲಿ ವ್ಯತ್ಯಾಸ ಮಾಡಿ ಹೇಳಿದರು.

ವಿಶಿಷ್ಟತ್ವ ಹಾಗೂ ಅಧಿಕೃತತ್ವಗಳು ವಂದ್ಯತ್ವಕ್ಕೆ ನೇರವಾಗಿ ಕಾರಣಗಳಾಗಿವೆ. ಆದರೆ ಇಷ್ಟತ್ವವು ವಂದನದಲ್ಲಿ ವಿಶೇಷಣವಾದ ಭಕ್ತ್ಯಾದಿಗಳ ಮೂಲಕ ನಿಮಿತ್ತವಾಗಿದೆ. ಇದನ್ನು ಉಪಪಾದನೆ ಮಾಡಲು 'ನ ಹಿ' ಇತ್ಯಾದಿ ವಾಕ್ಯವು ಹೊರಟಿದೆ.

ವಿಶೇಷವಿಚಾರ – ಪ್ರಶ್ನೆ : ನಾರಾಯಣಃ ವಂದ್ಯಃ ನಿಖಿಲಪೂರ್ಣಗುಣೈಕದೇಹತ್ವಾತ್, ನಿರ್ದೋಷತ್ವಾತ್, ಅಸ್ಮೋದ್ಭವಾದಿದತ್ವಾತ್' ಎಂಬುದಾಗಿ ಅನುಮಾನವನ್ನು ಶ್ಲೋಕದಲ್ಲಿ ವಿವಕ್ಷಿಸಿದ್ದೀರಿ. ಆದರೆ ಈ ಅನುಮಾನದ ವ್ಯಾಪ್ತಿಯೇ ಸಿದ್ಧವಾಗಿರುವುದಿಲ್ಲ. 'ಯತ್ರ ನಿಖಿಲಪೂರ್ಣಗುಣೈಕದೇಹತ್ವಾದಿಕಂ ತತ್ರ ವಂದ್ಯತ್ವಂ' ಎಂಬ ವ್ಯಾಪ್ತಿಗೆ ಎಲ್ಲಿಯೂ ದೃಷ್ಟಾಂತವೇ ಇಲ್ಲ. ಆದ್ದರಿಂದ ಅನುಮಾನವನ್ನು ಹೇಗೆ ಮಾಡುತ್ತೀರಿ?

ಉತ್ತರ – ಮೇಲಿನ ಅನುಮಾನವು ನಮಗೆ ವಿವಕ್ಷಿತವಲ್ಲ. 'ನಾರಾಯಣಃ ವಂದ್ಯಃ ವೈಶಿಷ್ಟ್ಯಾತ್' ಎಂಬ ಅನುಮಾನವೇ ನಮಗೆ ವಿವಕ್ಷಿತ. 'ಯತ್ರ ವೈಶಿಷ್ಟ್ಯಂ ತತ್ರ ವಂದ್ಯತ್ವಮ್' ಎಂಬ ವ್ಯಾಪ್ತಿಯು ಲೋಕದಲ್ಲಿ ಸಿದ್ಧವಾಗಿದೆ. ಈ ಅನ್ಯತ್ರಪ್ರಸಿದ್ಧವಾದ ವೈಶಿಷ್ಟ್ಯವನ್ನು ಉಪಪಾದನೆ ಮಾಡುವುದಕ್ಕಾಗಿ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ಮೂರು ವಿಶೇಷಣಗಳು ಪ್ರವೃತ್ತವಾಗಿವೆ. ಆದ್ದರಿಂದ ವಂದ್ಯತ್ವಕ್ಕೆ ನೇರವಾಗಿ ಪ್ರಯೋಜಕವಾಗಿವೆ ಎಂದು ತಿಳಿಯಬಾರದು.

ಗಮನಿಸಿ –

ವೈಶಿಷ್ಟ್ಯವು ಅನ್ಯತ್ರ ಉಪಲಬ್ಧವಾಗಿದೆ. ಇದು ವಂದ್ಯತ್ವಕ್ಕೆ ಪ್ರಯೋಜಕವಾಗಿದೆ. ಇಂಥ ವೈಶಿಷ್ಟ್ಯಕ್ಕೆ ಉಪಪಾದಕವಾಗಿ ಮೂರು ವಿಶೇಷಣಗಳಿವೆ. ಆದರೆ 'ಸದಾ ಪ್ರಿಯತಮಂ ಮಮ' ಎಂಬುದು ಇಷ್ಟತ್ವಕ್ಕೆ ಉಪಪಾದಕವಲ್ಲ. 'ಅಖಿಲೈಃ ಸುವಾಕ್ಯೈಃ ಆಪ್ಯತಮಮ್' ಎಂಬುದು ಅಧಿಕೃತತ್ವಕ್ಕೆ ಉಪಪಾದಕವಲ್ಲ. ಮತ್ತೇನೆಂದರೆ 'ಸದಾ ಪ್ರಿಯತಮಂ' ಎಂಬುದು ಇಷ್ಟತ್ವರೂಪವೇ ಆಗಿದೆ. 'ಅಖಿಲೈಃ ಸುವಾಕ್ಯೈಃ ಆಪ್ಯತಮಮ್' ಎಂಬುದು ಕೂಡ ಅಧಿಕೃತತ್ವರೂಪವೇ ಆಗಿದೆ. ಆದಕ್ಕಾಗಿ ಹಿಂದೆ 'ವೈಶಿಷ್ಟ್ಯೋಪಪಾದಕತಯಾ' ಎಂದು ಹೇಳಿದರು. ಈಗ 'ಅಧಿಕೃತಇಷ್ಟತ್ವಸ್ವರೂಪಪ್ರದರ್ಶಕವಿಶೇಷಣಯೋಃ' ಎಂದು ಹೇಳಿದರು.

ಪರಮಾತ್ಮನಲ್ಲಿರುವ ಅಧಿಕೃತತ್ವವು ವಿಶೇಷರೂಪವಾಗಿದೆ. ಮತ್ತು ಇಷ್ಟತ್ವವು ಕೂಡ ವಿಶೇಷರೂಪವಾಗಿದೆ. ಲೋಕದಲ್ಲಿ ಬೇರೆಯವರಲ್ಲೂ ಕೂಡ ಈ ಅಧಿಕೃತತ್ವ ಹಾಗೂ ಇಷ್ಟತ್ವಗಳು ಸಾಮಾನ್ಯಮುಖದಿಂದ





ಪ್ರಸಿದ್ಧವಾಗಿವೆ. ಪ್ರಕೃತ 'ಅಖಿಲೈಃ ಸುವಾಕ್ಯೈಃ ಆಪ್ಯತಮಮ್' 'ಸದಾ ಪ್ರಿಯತಮಂ ಮಮ' ಎಂಬೆರಡು ವಿಶೇಷಣಗಳು ಪ್ರಕೃತನಾದ ಪರಮಾತ್ಮನಲ್ಲಿರುವ ಅಧಿಕೃತತ್ವ ಹಾಗೂ ಇಷ್ಟತ್ವಸ್ವರೂಪವನ್ನು ಪ್ರತಿಪಾದನೆ ಮಾಡುತ್ತಿವೆ. ಇದರ ಮೂಲಕ ವಂದ್ಯತ್ವಕ್ಕೆ ಪ್ರಯೋಜಕವಾದ ಬೇರೆಡೆ ಪ್ರಸಿದ್ಧವಾದ ಅಧಿಕೃತತ್ವ ಇಷ್ಟತ್ವವೆಂಬ ಸಾಮಾನ್ಯಧರ್ಮವನ್ನು ಸಾಧನೆ ಮಾಡಬೇಕು. ಆದ್ದರಿಂದ 'ನಾರಾಯಣಃ ವಂದ್ಯಃ ಅಧಿ-ಕೃತತ್ವಾತ್, ಇಷ್ಟತ್ವಾತ್' ಎಂಬ ಅನುಮಾನದಲ್ಲಿರುವ ಹೇತುವು ಲೋಕಪ್ರಸಿದ್ಧವಾದ ಸಾಮಾನ್ಯರೂಪ-ವಾಗಿದೆ. ಈ ಹೇತುವನ್ನು ಉಪಪಾದನೆ ಮಾಡಲು 'ಅಖಿಲೈಃ ಸುವಾಕ್ಯೈಃ ಆಪ್ಯತಮಮ್' ಮತ್ತು 'ಸದಾ ಪ್ರಿಯತಮಂ ಮಮ' ಎಂಬೆರಡು ವಿಶೇಷಣಗಳು ಪರಂಪರೆಯಿಂದ ಸಾಧನೆ ಮಾಡುತ್ತಿವೆ. ಈ ಎರಡು ವಿಶೇಷಣಗಳು ನೇರವಾಗಿ ಪ್ರಕೃತನಾದ ಪರಮಾತ್ಮನ ಅಧಿಕೃತತ್ವ ಹಾಗೂ ಇಷ್ಟತ್ವಸ್ವರೂಪವನ್ನೇ ಪ್ರತಿಪಾದನೆ ಮಾಡುತ್ತಿವೆ. ತನ್ಮೂಲಕ ಲೋಕಸಿದ್ಧವಾದ ಅಧಿಕೃತತ್ವ ಹಾಗೂ ಇಷ್ಟತ್ವಗಳು ಸಿದ್ಧವಾಗುತ್ತವೆ. ತನ್ಮೂಲಕವಾಗಿ ನಾರಾಯಣನಲ್ಲಿ ವಂದ್ಯತ್ವವು ಸಿದ್ಧವಾಗುತ್ತದೆ ಎಂದು ತಿಳಿಯಬೇಕು.

ಪರಮಾತ್ಮನಲ್ಲಿರುವ ಅಧಿಕೃತತ್ವವಾಗಲೀ ಇಷ್ಟತ್ವವಾಗಲೀ ಬೇರೆಲ್ಲೂ ಇರುವುದಿಲ್ಲ. ಆದರೆ ಕೇವಲ ಅಧಿ ಕೃತತ್ವಸಾಮಾನ್ಯ ಹಾಗೂ ಇಷ್ಟತ್ವಸಾಮಾನ್ಯಗಳು ಬೇರೆಯವರಲ್ಲೂ ಇದೆ. ತನ್ಮೂಲಕವಾಗಿಯೇ ವಂದ್ಯತ್ವ-ವನ್ನು ಸಾಧನೆ ಮಾಡಬೇಕು.

ಟೀಕೆಯಲ್ಲಿ ಮಾಡಲ್ಪಟ್ಟ ವಾಕ್ಯಪ್ರಯೋಗವನ್ನು ಇಲ್ಲಿ ಸೂಕ್ಷ್ಮವಾಗಿ ಗಮನಿಸಬೇಕು. ವೈಶಿಷ್ಟ್ಯವನ್ನು ಸಮರ್ಥನೆ ಮಾಡುವಾಗ 'ಉಪಪಾದನಾಯ' ಎಂಬ ಪದಪ್ರಯೋಗ ಮಾಡಿರುವರು. ಅಧಿಕೃತತ್ವವನ್ನು ಹೇಳುವಾಗ 'ಅಧಿಕೃತತ್ವಪ್ರದರ್ಶನಾಯ' ಎಂಬುದಾಗಿ ಪ್ರದರ್ಶನಪದವನ್ನು ಅದರಂತೆ 'ಇಷ್ಟತ್ವಪ್ರದರ್ಶನಂ' ಎಂಬಲ್ಲೂ ಕೂಡ ಪ್ರದರ್ಶನ ಎಂಬ ಪದವನ್ನೇ ಪ್ರಯೋಗಿಸಿದ್ದಾರೆ. ಹೀಗೆ ಪದಪ್ರಯೋಗಗಳನ್ನು ಮಾಡಿ-ದ್ದರಿಂದ ವೈಶಿಷ್ಟ್ಯವನ್ನು ಉಪಪಾದನೆ ಮಾಡಲು ಮೂರು ವಿಶೇಷಣಗಳಿವೆ. ಆದರೆ 'ಅಖಿಲೈಃ ಸುವಾಕ್ಯೈಃ ಆಪ್ಯತಮಮ್' ಎಂಬುದು ಅಧಿಕೃತತ್ವವನ್ನು ಉಪಪಾದನೆ ಮಾಡಲು ಇರುವುದಲ್ಲ. ಅಧಿಕೃತತ್ವಸ್ವರೂಪವೇ ಆಗಿದೆ. 'ಸದಾ ಪ್ರಿಯತಮಂ ಮಮ' ಎಂಬುದು ಕೂಡ ಇಷ್ಟತ್ವವನ್ನು ಉಪಪಾದನೆ ಮಾಡುತ್ತಿಲ್ಲ. ಇಷ್ಟತ್ವರೂಪವೇ ಆಗಿದೆ ಎಂಬ ವೈಚಿತ್ರ್ಯವನ್ನು ಗಮನಿಸಬೇಕು.

ಮತ್ತೊಂದು ಗಮನಿಸಬೇಕಾದ ವಿಷಯ. ವಿಶಿಷ್ಟತ್ವ, ಹಾಗೂ ಅಧಿಕೃತತ್ವಗಳು ವಂದ್ಯತ್ವಕ್ಕೆ ನೇರವಾಗಿ ನಿಮಿತ್ತವಾಗಿವೆ. ಆದರೆ ಇಷ್ಟತ್ವವು ನೇರವಾಗಿ ವಂದ್ಯತ್ವಕ್ಕೆ ನಿಮಿತ್ತವಲ್ಲ. ಭಕ್ತ್ಯಾದಿಗಳೇ ವಂದ್ಯತ್ವಕ್ಕೆ ನೇರವಾಗಿ ನಿಮಿತ್ತಗಳಾಗಿವೆ. ಆದ್ದರಿಂದ 'ಭಗವಾನ್ ವಂದ್ಯಃ ಭಕ್ತ್ಯಾದ್ಯಾಶ್ರಯತ್ವಾತ್' ಎಂಬ ಅನುಮಾನವನ್ನು ವಿವಕ್ಷಿಸಿ ಇಲ್ಲಿರುವ ಭಕ್ತ್ಯಾದ್ಯಾಶ್ರಯತ್ವಕ್ಕೆ ಉಪಪಾದನೆ ಮಾಡಲು ಇಷ್ಟತ್ವವನ್ನು ವಿವಕ್ಷಿಸಬೇಕು. ಹೀಗೆ ಇಷ್ಟತ್ವವು ವಂದನಕ್ಕೆ ವಿಶೇಷಣಭೂತವಾದ ಭಕ್ತಿ ಶ್ರದ್ಧೆ ಇವುಗಳ ಮೂಲಕ ವಿಶಿಷ್ಟನಾದ ನಾರಾಯಣನು ವಂದ್ಯ-





ನಾಗಿದ್ದಾನೆನ್ನಲು ನಿಮಿತ್ತವಾಗಿದೆ. ಆದ್ದರಿಂದಲೇ ಟೀಕೆಯಲ್ಲಿ 'ನ ಹಿ' ಎಂಬ ವಾಕ್ಯದಿಂದ ನೇರವಾಗಿ ವೈಶಿಷ್ಟ್ಯ ಮತ್ತು ಅಧಿಕೃತತ್ವಗಳಿಗೆ ವಂದ್ಯತ್ವನಿಮಿತ್ತವನ್ನು ಉಪಪಾದನೆ ಮಾಡಿ ಇಷ್ಟತ್ವವನ್ನು ಹೇಳುವಾಗ 'ವಂದನಂ ಖಲು ಭಕ್ತ್ಯಾದ್ಯುಪೇತಮೇವ ಸಫಲಮ್' ಎಂಬುದಾಗಿ ಹೇಳಿ, 'ಇಷ್ಟಾಯಾಮೇವ ದೇವತಾಯಾಮ್ ಉಪಪದ್ಯತೇ' ಎಂದು ಹೇಳಿದ್ದಾರೆ.

## ರಸಘಟ್ಟ

## ವಿಶಿಷ್ಟ, ಅಧಿಕೃತ, ಇಷ್ಟಶಬ್ದಗಳ ಅರ್ಥ

ಕುಂಡಲಗಿರಿ – ವಿಶಿಷ್ಟೇತಿ ॥ ವಿಶಿಷ್ಟಾ = ಸರ್ವೋತ್ತಮಾ । ಅಧಿಕೃತಾ = ಪ್ರಕೃತಗ್ರಂಥ-ಪ್ರತಿಪಾದ್ಯಾ । ಇಷ್ಟಾ = ಪರಮಪ್ರೇಮಾಸ್ಪದಭೂತಾ ದೇವತಾ ವಂದ್ಯಾ ಭವತೀತ್ಯರ್ಥಃ । ತಸ್ಯೇಷ್ಟ ಇತಿ ॥ ಅಧೀಗರ್ಥದಯೇಷಾಂ ಕರ್ಮಣಿ ಇತಿ ದ್ರಷ್ಟವ್ಯಮ್ ।

ವಿಶಿಷ್ಟದೇವತೆ = ಸರ್ವೋತ್ತಮನಾದ ದೇವತೆ.

ಅಧಿಕೃತ ದೇವತೆ = ಪ್ರಕೃತಗ್ರಂಥಪ್ರತಿಪಾದ್ಯನಾದ ದೇವತೆ.

ಇಷ್ಟದೇವತೆ = ಅವನಿಗಿಂತ ಮತ್ತೊಬ್ಬ ಪ್ರೇಮಾಸ್ಪದನಾಗದ ದೇವತೆ.

ತಸ್ಯ = ಪ್ರಯೋಜನವನ್ನು ಈಷ್ಟೇ = ಕೊಡಲು ಸಮರ್ಥನಾಗುತ್ತಾನೆ. ಅಧೀಗರ್ಥದಯೇಷಾಂ ಕರ್ಮಣಿ ಎಂಬ ಸೂತ್ರದಿಂದ ಕರ್ಮಾರ್ಥದಲ್ಲಿ ಷಷ್ಠೀವಿಭಕ್ತಿಯು ಪ್ರಾಪ್ತವಾಗಿದೆ.

## ವ್ಯಸನ ಎಂದರೇನು?

ಕಾಶಿಕಾ – ವ್ಯಸನಿತಯಾ ಇತಿ ॥ ಯದಕರಣೇ ಚಿತ್ತಕ್ಷೋಭಃ ತಚ್ಚಿಕೀರ್ಷಾ ವ್ಯಸನಮ್ । ಯಥಾ ಪಟ್ವಾಭ್ಯಾಸಾಹಿತಕರಪರಿಸ್ಪಂದಾದಿಚಿಕೀರ್ಷಾ ।

'ಯದಕರಣೇ ಚಿತ್ತಕ್ಷೋಭಃ ತಚ್ಚಿಕೀರ್ಷಾ ವ್ಯಸನಮ್' = ಯಾವುದನ್ನು ಮಾಡದಿದ್ದರೆ ಮನಸ್ಸು ಉದ್ವಿಗ್ನವಾಗುತ್ತದೋ ಅದನ್ನು ಮಾಡುವ ಬಯಕೆ ವ್ಯಸನ ಎನಿಸಿಕೊಳ್ಳುತ್ತದೆ. ಕನ್ನಡಭಾಷೆಯಲ್ಲಿ ಇದನ್ನು ಚಟ ಎಂದು ಕರೆಯುತ್ತಾರೆ. ಕೆಲವೊಬ್ಬರಿಗೆ ಸುಮ್ಮನೇ ಕೈ ಅಲ್ಲಾಡಿಸುವ ಚಟವಿರುತ್ತದೆ. ಇದರಂತೆ ಮಂಗಳಾಚರಣೆಯಲ್ಲ ಎಂದು ತಿಳಿಯಬೇಕು.



## ಯಾವ ದೇವತೆ ಯಾವ ಫಲ ನೀಡುವನು?

**ಕಾಶೀಟಿಪ್ಪಣಿ– ವಿಶಿಷ್ಟೈವ ಇತಿ ॥ ದೇವತಾ ತುಷ್ಟಾ ಸತೀ ತಸ್ಯ ಪ್ರಯೋಜನಸ್ಯ ಈಷ್ಟೇ ಸಾಧಿಕಾ ಭವತಿ । ಅಧಿಕೃತಾ ಚ ದೇವತಾ ತುಷ್ಟಾ ಸ್ವಪ್ರತಿಪಾದಕಗ್ರಂಥನಿಷ್ಪಾದಕಶಬ್ದಾರ್ಥ-ಸ್ಫೂರ್ತ್ಯಾದಿಕಂ ದದಾತೀತ್ಯರ್ಥಃ । ತಚ್ಚೇತಿ ॥ ಭಕ್ತ್ಯಾದಿವಿಶಿಷ್ಟವಂದನಮಿತ್ಯರ್ಥಃ । ಇತ್ಯತೋ ವಂದ್ಯಾ ಇತಿ ಸಂಬಂಧಃ । ತಥಾ ಚ ಸಮರ್ಥಪ್ರಸಾದದ್ವಾರಾ ನಿರ್ವಿಘ್ನಪರಿಸಮಾಪ್ತ್ಯಾದಿಸಾಧನಭಕ್ತ್ಯಾದಿವಿಶಿಷ್ಟ-ವಂದನವಿಷಯತ್ವೇ ಸಾಮರ್ಥ್ಯರೂಪವಿಶಿಷ್ಟತ್ವಸ್ಯ ದ್ವಾರನಿರ್ವಾಹಕತ್ವಾದಧಿಕೃತತ್ವಸ್ಯ ಸಹಕಾರಿ-ಸಂಪಾದಕತ್ವಾತ್ ಇಷ್ಟತ್ವಸ್ಯ ಚ ವಿಶಿಷ್ಟಕಾರಣನಿರ್ವಾಹಕತ್ವಾತ್ ನಿಮಿತತ್ವಮಿತಿ ಭಾವಃ ।**

ವಿಶಿಷ್ಟನಾದ ದೇವತೆಯು ಪ್ರಸನ್ನನಾದಾಗ ಜಿಜ್ಞಾಸುವಿನ ಪ್ರಯೋಜನವನ್ನು ಕೊಡಲು ಸಮರ್ಥನಾಗುತ್ತಾನೆ. ಆದ್ದರಿಂದ ವಿಶಿಷ್ಟನಾದವನು ನಮಸ್ಕಾರಕ್ಕೆ ಅರ್ಹನಾಗಿದ್ದಾನೆ. ಅಧಿಕೃತದೇವತೆಯು ಪ್ರಸನ್ನನಾದಾಗ ತನ್ನ ಪ್ರತಿಪಾದಕವಾದ ಯಾವ ಗ್ರಂಥವಿದೆಯೋ ತನ್ನಿಷ್ಪಾದಕವಾದ ಶಬ್ದಸ್ಫೂರ್ತ್ಯಾ-ದಿಗಳನ್ನು ನೀಡುತ್ತಾನೆ. ಆದ್ದರಿಂದ ಅಧಿಕೃತನು ನಮಸ್ಕಾರಕ್ಕೆ ಅರ್ಹನಾಗಿದ್ದಾನೆ. 'ತಚ್ಚ' ಎಂಬುದರಿಂದ ಭಕ್ತ್ಯಾದಿ ವಿಶಿಷ್ಟದೇವತೆಯು ವಂದನಕ್ಕೆ ಯೋಗ್ಯನಾಗಿದ್ದಾನೆ ಎಂದಿದ್ದಾರೆ. ಹೀಗೆ ಹೇಳಿದಾಗ ಸಮರ್ಥನಾದ ದೇವತೆಯು ಪ್ರಸಾದವನ್ನು ನೀಡುವ ಮೂಲಕ ನಿರ್ವಿಘ್ನವಾದ ಪರಿಸಮಾಪ್ತ್ಯಾದಿಗಳಿಗೆ ಸಾಧನವಾದ ಭಕ್ತ್ಯಾದಿವಿಶಿಷ್ಟವಾದ ನಮಸ್ಕಾರಕ್ಕೆ ದೇವತೆಯು ವಿಷಯನಾಗುತ್ತಾನೆ ಎಂದು ಹೇಳಿ-ದಂತಾಗುತ್ತದೆ. ಆಗ ಸಾಮರ್ಥ್ಯವೆಂಬ ವೈಶಿಷ್ಟ್ಯವು ಪ್ರಸಾದವೆಂಬ ದ್ವಾರನಿರ್ವಾಹಕವಾದ್ದರಿಂದ ಅಧಿ-ಕೃತತ್ವವು, ಸಹಕಾರಿ ಸಂಪಾದಕವಾಗುವುದರಿಂದ ಇಷ್ಟತ್ವವು ವಂದ್ಯತ್ವಕ್ಕೆ ಕಾರಣವೆಂದು ಹೇಳಿದಂತಾ-ಯಿತು. ಹೀಗೆ ಹೇಳಿದರೆ ಮೂರೂ ಕೂಡ ಒಟ್ಟಿಗೆ ವಂದ್ಯತ್ವಪ್ರಯೋಜಕವಾಗುತ್ತವೆ.

## ವಂದ್ಯತ್ವಕ್ಕೆ ಪ್ರತ್ಯೇಕ ನಿಮಿತ್ತಗಳಿವು

**ಕಾಶೀ – ನನ್ವೇವಂ ದೇವತಾವಂದನೇ ವಿಶಿಷ್ಟತ್ವಾದೀನಾಂ ತ್ರಯಾಣಾಮಪ್ಯಪೇಕ್ಷಿತತಯಾ ಪ್ರತ್ಯೇಕಂ ವಂದ್ಯತ್ವನಿಮಿತ್ತತ್ವಾನುಪಪತ್ತಿಃ । ನ ಚ ತೇಷಾಂ ಸಮುದಿತಾನಾಮ್ ಏವಾತ್ರ ನಿಮಿತ್ತತ್ವ-ಮಭಿಪ್ರೇತಮಿತಿ ಯುಕ್ತಮ್ । 'ಧರ್ಮಾದಿಕಂ ವಂದನೀಯಂ ಸ್ಯಾತ್' ಇತಿ ಗ್ರಂಥವಿರೋಧಾತ್ । ಧರ್ಮಾದಿರಧಿಕೃತತ್ವೇಽಪಿ ವಿಶಿಷ್ಟತ್ವಾವಿರಹೇಣ ವಂದ್ಯತ್ವಾಪ್ರಸಕ್ತೇಃ । ವ್ಯಾಖ್ಯಾತೃಣಾಂ ಸ್ವರ್ಗಸ್ರಕ್ ಚಂದನಾದೇಃ ಪ್ರಿಯತ್ವಾದಿಮಾತ್ರೇಣ ವಂದ್ಯತ್ವಾಪಾದನವಿರೋಧಾಚ್ಚ ಇತಿ ಚೇನ್ನ । ಅಧಿಕೃತತ್ವ-ಮಾತ್ರೇಣ ಪ್ರಬೋಧಾದಿಕಾಮಸ್ಯ ವಿಶಿಷ್ಟತ್ವಾದಿಮಾತ್ರೇಣ ಫಲಾಂತರಕಾಮಸ್ಯ ಚ ದೇವತಾ-**





ವಂದನದರ್ಶನಾತ್ । ಭಕ್ತಿಸಾಮಾನ್ಯಸ್ಯ ಉಭಯತ್ರ ಘಟಕತ್ವೇಽಪಿ ವಕ್ಷ್ಯಮಾಣೇಷ್ಟತ್ವಘಟಕವಿಶಿಷ್ಟ-ಭಕ್ತೇರ್ವಿಶಿಷ್ಟಾಘಟಕತ್ವಾಚ್ಚ। ವಿಶಿಷ್ಟತ್ವಾದೀನಾಂ ಪೃಥಗ್‌ವಂದ್ಯತ್ವನಿಮಿತ್ತತ್ವಮಾವಶ್ಯಕಮ್ ॥

ಮೇಲೆ ಹೇಳಿದಂತೆ ವಿಶಿಷ್ಟತ್ವಾದಿಗಳು ಮೂರೂ ಕೂಡ ವಂದ್ಯತ್ವಕ್ಕೆ ಅಪೇಕ್ಷಿತವೆಂದು ಒಪ್ಪಿದರೆ ಪ್ರತ್ಯೇಕವಾಗಿ ವಂದ್ಯತ್ವನಿಮಿತ್ತತ್ವವೇ ಇವುಗಳಿಗೆ ಬರುವುದಿಲ್ಲವೆಂದಾಯಿತು. ಸಮುದಿತವಾಗಿಯೇ ಇವುಗಳು ನಿಮಿತ್ತವಾಗುತ್ತವೆ ಎಂದು ಹೇಳಬಾರದು. ಏಕೆಂದರೆ 'ಧರ್ಮಾದಿಕಂ ವಂದನೀಯಂ ಸ್ಯಾತ್' ಎಂಬ ಗ್ರಂಥದ ವಿರೋಧ ಬರುತ್ತದೆ. ಏಕೆಂದರೆ ಧರ್ಮಾದಿಗಳು ಗ್ರಂಥಪ್ರತಿಪಾದ್ಯವಾದ್ದರಿಂದ ಅಧಿಕೃತ-ವಾಗಿದ್ದರೂ ವಿಶಿಷ್ಟತ್ವ ಹಾಗೂ ಇಷ್ಟತ್ವ ಎಂಬ ವಂದ್ಯತ್ವಪ್ರಯೋಜಕಧರ್ಮಗಳು ಅವುಗಳಲ್ಲಿ ಇಲ್ಲ. ಅದರಂತೆ ವ್ಯಾಖ್ಯಾನ ಮಾಡುವವರಿಗೆ ಸ್ವರ್ಗ, ಸ್ರಕ್, ಚಂದನಗಳು ಪ್ರಿಯವಾಗಿರುತ್ತವೆ. ಅವುಗಳು ಕೂಡ ವಂದ್ಯವಾಗಬೇಕಾಗುತ್ತವೆ. ಮತ್ತು ಗ್ರಂಥಪ್ರತಿಪಾದ್ಯನಾದವನಿಂದ ಗ್ರಂಥಜ್ಞಾನವನ್ನು ಯಾರು ಬಯಸುತ್ತಾನೋ ಅವನು ಅಧಿಕೃತನಾದವನಿಗಷ್ಟೇ ನಮಸ್ಕಾರ ಮಾಡುತ್ತಾನೆ. ಇನ್ನು ಕೆಲವೆಡೆ ಪ್ರಯೋಜನವನ್ನಷ್ಟೇ ಅಪೇಕ್ಷಿಸುವವರು ವಿಶಿಷ್ಟನನ್ನಷ್ಟೇ ನಮಸ್ಕರಿಸುತ್ತಾರೆ. ಈ ಅಧಿಕೃತನಾದವನಲ್ಲಿ, ಹಾಗೂ ವಿಶಿಷ್ಟನಾದವನಲ್ಲಿ ಭಕ್ತಿಯು ಸಾಮಾನ್ಯವಾಗಿ ಇರಬಹುದು. ಆದರೆ ಮುಂದೆ ಹೇಳುವಂತೆ ಅತಿಶಯವಾದ ಭಕ್ತಿ ಪರಮಪ್ರೇಮಾಸ್ಪದರೂಪವಾದ ಭಕ್ತಿಯು ಅವನಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ ವಿಶಿಷ್ಟತ್ವಾದಿಗಳು ವಂದ್ಯತ್ವಕ್ಕೆ ಪ್ರತ್ಯೇಕವಾದ ಅವಚ್ಛೇದಕಧರ್ಮಗಳು ಎಂದು ತಿಳಿಯಬೇಕು.

## ದೇವತಾಪದಕ್ಕೆ ಸಾರ್ಥಕ್ಯಚಿಂತನೆ

ಲಘುರಸರಂಜನೀ – ಅತ್ರ ಕುತೋಽನ್ಯಾಸು ದೇವತಾಸು ಸತೀಷು ಇತ್ಯಾದಿ ಬಹುಸ್ಥಲೇಷು ದೇವತಾಪದಪ್ರಯೋಗೇ ನ ದೇವತಾವಂದ್ಯತ್ವಂ ಏವೇದಂ ವಿಶಿಷ್ಟತ್ವಾದಿನಿಮಿತ್ತತ್ರಯಂ ನ ಗುರ್ವಾದಿ -ವಂದ್ಯತ್ವ ಇತಿ ಸೂಚಯತಿ । ತತ್ರ ಗುರುತ್ವಪಿತೃತ್ವಮಾತೃತ್ವಾದೀನಾಮೇವ ನಿಮಿತ್ತತಯೋಪ-ಲಂಭಾತ್ । ಅತ ಏವ ವಂದ್ಯತ್ವನಿಮಿತ್ತಾಶೇಷಾಸಾಧಾರಣಧರ್ಮಪರತಯಾ ವಿಶೇಷಪದ-ನಿರ್ವಚನಾವಸರೇ ದೇವತಾಗುರ್ವಾದಿಸರ್ವವಂದ್ಯಸಂಗ್ರಹಾಯ 'ವಿಶಿಷ್ಯತೇ ವಸ್ತು ಏಭಿಃ' ಇತಿ ವಸ್ತುಪದಮೇವ ಪ್ರಯುಕ್ತಂ ನ ತು ದೇವತೇತಿ । ತೇನ ಸರ್ವತ್ರಾಪಿ ವಂದ್ಯತ್ವೇ ಯದಿ ವಿಶಿಷ್ಟತ್ವಾದಿ-ತ್ರಯಮೇವ ನಿಮಿತ್ತಂ ಸ್ಯಾತ್ ತರ್ಹಿ ದೇವತಾತಿರಿಕ್ತಗುರ್ವಾದೀನಾಂ ವಂದ್ಯತೈವ ನ ಸ್ಯಾದಿತ್ಯಾಶಂಕಾ ಪರಿಹೃತಾ ಭವತಿ। ಗುರ್ವಾದಿಷ್ವಪಿ ಗುರುತ್ವಾದಿನಿಮಿತ್ತೈಃ ಸಂಪ್ರತಿಪನ್ನನಮ್ಯತಾಯಾ ಅಪರಿತ್ಯಾಗಾತ್। ತತ್ರಾಪಿ ಅನ್ಯದೇವತಾವಂದ್ಯತ್ವೇ ಇದಂ ವಿಶಿಷ್ಟತ್ವಾದಿನಿಮಿತ್ತತ್ರಯಮೇವ । ಅತ ಏವ 'ತ್ರಿವಿಧಾ ಹಿ





ದೇವತಾ ವಂದ್ಯಾ ಭವತಿ' ಇತ್ಯಾದಿನಾ ಸಾಮಾನ್ಯತ ಏವೋಪಪಾದನಂ ಕೃತಮ್ । ನಾರಾಯಣಾಖ್ಯದೇವತಾವಂದ್ಯತ್ವೇ ತು ಉಭಯಮಪಿ ನಿಮಿತ್ತಂ ಭವತಿ । 'ತಂ ದೇವಂ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಮ್' ಇತಿ ಟೀಕೋಕ್ತೇಃ ।

'ಕುತೋ ಅನ್ಯಾಸು ದೇವತಾಸು ಸತೀಷು' ಇತ್ಯಾದಿ ಅನೇಕಸ್ಥಳಗಳಲ್ಲಿ ದೇವತಾಪದವನ್ನು ಸುಧಾಕಾರರು ಪ್ರಯೋಗಿಸುತ್ತಿದ್ದಾರೆ. ಇದರಿಂದ ವಿಶಿಷ್ಟತ್ವಾದಿನಿಮಿತ್ತಗಳು ದೇವತಾವಂದ್ಯತ್ವಕ್ಕೆ ಪ್ರಯೋಜಕ ಹೊರತು ಗುರು ಮೊದಲಾದವರ ವಂದ್ಯತ್ವಕ್ಕೆ ಪ್ರಯೋಜಕವಲ್ಲ ಎಂದು ಸೂಚಿಸಿದ್ದಾರೆ. ಗುರುಗಳನ್ನು ತಂದೆ ತಾಯಿ ಮೊದಲಾದವರನ್ನು ನಮಸ್ಕರಿಸುವಾಗ ಗುರುತ್ವ, ಪಿತೃತ್ವ, ಮಾತೃತ್ವಗಳೇ ನಿಮಿತ್ತಗಳಾಗುತ್ತವೆ ಹೊರತು ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವಗಳು ಪ್ರಯೋಜಕಗಳಾಗುವುದಿಲ್ಲ. ಆದ್ದರಿಂದಲೇ ಯಾವುದು ವಂದ್ಯ ಎಂದು ಸಾಮಾನ್ಯವಾಗಿ ಹೇಳುವ ಸ್ಥಳಗಳಲ್ಲಿ ವಸ್ತುಪದವನ್ನೇ ಪ್ರಯೋಗ ಮಾಡಿದ್ದಾರೆ. ದೇವತಾಪದವನ್ನು ಪ್ರಯೋಗ ಮಾಡಿಲ್ಲ. ಒಂದು ವೇಳೆ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವಗಳು ಪ್ರಯೋಜಕವೆಂದು ಹೇಳಿದರೆ ಆಗ ಗುರುಗಳು, ತಂದೆ ತಾಯಿ ಇವರುಗಳನ್ನು ನಮಸ್ಕಾರ ಮಾಡದೇ ಇರಬೇಕಾಗುತ್ತದೆ. ಆದ್ದರಿಂದ ಗುರುತ್ವಾದಿಗಳು ಬೇರೆಡೆ ನಿಮಿತ್ತಗಳೆಂದು ಹೇಳಬೇಕು. ಆದ್ದರಿಂದಲೇ ಪ್ರಕೃತ 'ತ್ರಿವಿಧಾ ಹಿ ದೇವತಾ ವಂದ್ಯಾ ಭವತಿ' ಎಂಬುದಾಗಿ ಸಾಮಾನ್ಯವಾಗಿ ದೇವತಾವಂದನೆಯನ್ನು ಉಪಪಾದನೆ ಮಾಡಿದ್ದಾರೆ. ನಾರಾಯಣನೆಂಬ ದೇವತೆಯಲ್ಲಿ ವಂದ್ಯತ್ವಪ್ರಯೋಜಕವಾದ ಈ ಮೂರೂ ಧರ್ಮಗಳಿವೆ. ಜೊತೆಯಲ್ಲಿ ಗುರುತ್ವ, ಮಾತೃತ್ವ, ಪಿತೃತ್ವ ಮೊದಲಾದ ಧರ್ಮಗಳು ಕೂಡ ಇರುತ್ತವೆ. ಆದ್ದರಿಂದಲೇ ವಿಷ್ಣುತತ್ವನಿರ್ಣಯಟೀಕೆಯಲ್ಲಿ 'ತಂ ದೇವಂ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಮ್' ಎಂದಿದ್ದಾರೆ.

## ಸುಧಾಪರಿಮಳಸಾರ

ಅನುವ್ಯಾಖ್ಯಾನದ ಮಂಗಳಶ್ಲೋಕದಲ್ಲಿ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' 'ಅಸ್ಯೋದ್ಭವಾದಿದಂ' ಎಂಬ ಮೂರು ವಿಶೇಷಣಗಳು ನಾರಾಯಣನೇ ಸರ್ವೋತ್ತಮನಾಗಿದ್ದಾನೆಂದು ಸಮರ್ಥಿಸುತ್ತಿವೆ. 'ಅಖಿಲೈಃ ಸುವಾಕ್ಯೈಃ ಆಪ್ಯತಮಂ' ಎಂಬ ವಿಶೇಷಣವು ನಾರಾಯಣನೇ ಗ್ರಂಥಪ್ರತಿಪಾದ್ಯನಾಗಿದ್ದಾನೆಂದು ಹೇಳುತ್ತಿದೆ. 'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣವು ಗ್ರಂಥಕಾರರಿಗೆ ಅತ್ಯಂತ ಇಷ್ಟನಾಗಿದ್ದಾನೆಂದು ಹೇಳುತ್ತಿದೆ. ಹೀಗೆ ಒಟ್ಟು ಐದು ವಿಶೇಷಣಗಳಲ್ಲಿ ಮೂರು ವಿಶೇಷಣಗಳು ಸರ್ವೋತ್ತಮತ್ವವನ್ನು ಉಳಿದೆರಡು





ವಿಶೇಷಣಗಳು ಅಧಿಕೃತತ್ವ ಮತ್ತು ಇಷ್ಟತ್ವಗಳನ್ನು ಸಮರ್ಥಿಸುತ್ತಿವೆ. ಇದರಿಂದ ವಂದ್ಯತ್ವ-ಪ್ರಯೋಜಕವಾದ ಮೂರು ಧರ್ಮಗಳು ನಾರಾಯಣನಲ್ಲಿ ಅಸಂಕುಚಿತವಾಗಿ ಇರುತ್ತವೆ. ಆದ್ದರಿಂದ ಇವನನ್ನು ಗ್ರಂಥಾರಂಭದಲ್ಲಿ ನಮಸ್ಕಾರ ಮಾಡುವುದು ಅತ್ಯಂತ ಸಾರ್ಥಕ ಮತ್ತು ಕರ್ತವ್ಯವೆಂದು ತಿಳಿಸಿದಂತಾಯಿತು. ಗ್ರಂಥಾರಂಭದಲ್ಲಿ ವಿಶಿಷ್ಟನಾದವನನ್ನು ನಮಸ್ಕರಿಸಿದಾಗ ವಿಘ್ನಪರಿಹಾರ, ಗ್ರಂಥಸಮಾಪ್ತಿ, ಗ್ರಂಥದ ಕೀರ್ತಿ ಇವುಗಳು ಪ್ರಾಪ್ತವಾಗುತ್ತವೆ. ಗ್ರಂಥಪ್ರತಿ-ಪಾದ್ಯನನ್ನು ನಮಸ್ಕರಿಸಿದಾಗ ಗ್ರಂಥದಿಂದ ಯಥಾರ್ಥಜ್ಞಾನವು ಉಂಟಾಗುತ್ತದೆ. ಇಷ್ಟನಾದ ದೇವತೆಯನ್ನು ನಮಸ್ಕರಿಸಿದಾಗ ಭಕ್ತ್ಯತಿಶಯ ಶ್ರದ್ಧಾತಿಶಯಗಳ ನಮಸ್ಕಾರವು ಸಾರ್ಥಕ-ವಾಗುತ್ತದೆ. ಆದ್ದರಿಂದ ಗ್ರಂಥಾರಂಭದಲ್ಲಿ ಈ ಎಲ್ಲಾ ಧರ್ಮಗಳಿಂದ ಕೂಡಿದ ನಾರಾಯಣ-ನನ್ನು ಶ್ರೀಮಧ್ವಾಚಾರ್ಯರು ನಮಸ್ಕಾರ ಮಾಡಿದ್ದಾರೆ.

## ಪರಿಮಳ ವೈಶಿಷ್ಟ್ಯ

* ಅನುವ್ಯಾಖ್ಯಾನ ಶ್ಲೋಕದಲ್ಲಿ ಮೂರು ವಿಶೇಷಣಗಳು ಸರ್ವೋತ್ತಮಪ್ರತಿ-ಪಾದಕವಾಗಿವೆ. ಉಳಿದೆರಡು ವಿಶೇಷಣಗಳು ಗ್ರಂಥಪ್ರತಿಪಾದ್ಯನೆಂದು ಇಷ್ಟನೆಂದು ಸಮರ್ಥಿಸುತ್ತಿವೆ ಎಂಬ ವಿಶೇಷವು ಅಪೂರ್ವವಾಗಿದೆ.

* 'ಉಪಪದ್ಯತೇ ಇತಿ' ಎಂಬಲ್ಲಿ ಇತಿಶಬ್ದಕ್ಕೆ ಹೇತ್ವರ್ಥವನ್ನು ಹೇಳಿ 'ತ್ರಿವಿಧಾ ಹಿ ದೇವತಾ ವಂದ್ಯಾ ಭವತಿ' ಎಂಬ ನಾಕೈದು ವಾಕ್ಯಗಳ ಹಿಂದಿರುವ ಪದಗಳ ಜೊತೆಗೆ ಅನ್ವಯವನ್ನು ತಿಳಿಸಿದ್ದು ಅಪೂರ್ವವಾಗಿದೆ.

## ಮೂರು ವಿಶೇಷಣಗಳು ಸರ್ವೋತ್ತಮತ್ವಪ್ರತಿಪಾದಕಗಳು

**ಶ್ರೀಮನ್ನ್ಯಾಯಸುಧಾ– ತತ್ರ ವೈಶಿಷ್ಟ್ಯೋಪಪಾದನಾಯ– 'ನಿಖಿಲಪೂರ್ಣ-ಗುಣೈಕದೇಹಂ' 'ನಿರ್ದೋಷಮ್' 'ಅಸ್ಯೋದ್ಭವಾದಿದಮ್' – ಇತಿ ವಿಶೇಷಣ-ತ್ರಯಮ್ ॥ ನಿಖಿಲಾ = ನಿಃಶೇಷಾಃ, ಪೂರ್ಣಾಃ ಪ್ರತ್ಯೇಕಮಪಿ ಅನವಧಿಕಾ, ಗುಣಾಃ ಆನಂದಾದಯಃ । ಏಕಶಬ್ದಃ ಕೇವಲಾರ್ಥಃ । ತೇ ಏವ ದೇಹೋ ಯಸ್ಯ ನ ಪುನಃ ಪ್ರಾಕೃತಾದಿಃ ಇತಿ ತಥೋಕ್ತಃ । ನಿಷ್ಕ್ರಾಂತೋ ದೋಷೇಭ್ಯಃ ಪಾರ-**

  



**ತಂತ್ರಾ ್ಯದಿಭ್ಯಃ ಇತಿ ನಿರ್ದೋಷಃ । ಅಸ್ಯ ಪ್ರತ್ಯಕ್ಷಾದಿಪ್ರಮಾಣಸಿದ್ಧತಯಾ ಬುದ್ಧಿಸನ್ನಿಹಿತಸ್ಯ ಸ್ವವ್ಯತಿರಿಕ್ತಪ್ರಪಂಚಸ್ಯ ಉದ್ಭವ ಉತ್ಪತ್ತಿರಾದಿರಸ್ಯ ಇತ್ಯುದ್ಭವಾದಿ ಜನ್ಮಾದ್ಯಷ್ಟಕಂ ತದ್ಯಥಾಸಂಭವಂ ದದಾತಿ ಇತಿ ಉದ್ಭವಾದಿದಃ ತಮ್ । 'ಅಸ್ಯ' ಇತಿ ಸಂಬಂಧಮಾತ್ರೇ ಷಷ್ಠೀ। 'ಅಶೇಷವಿಶೇಷತೋಽಪಿ' ಇತ್ಯೇತದ್ 'ಅಸ್ಯೋದ್ಭವಾದಿದಮ್' ಇತ್ಯನೇನಾಪಿ ಸಂಬಧ್ಯತೇ । ವಿಯದಧಿಕರಣಾದಿವ್ಯುತ್ಪಾದ್ಯಸಮಸ್ತಾವಾಂತರಭೇದಸಹಿತಃ ಉದ್ಭವಾದಿದಮ್ ಇತಿ ॥**

ವಂದ್ಯತ್ವಪ್ರಯೋಜಕವಾದ ಮೂರು ಧರ್ಮಗಳ ನಡುವೆ ವೈಶಿಷ್ಟ್ಯವನ್ನು ಉಪಪಾದನೆ ಮಾಡುವುದಕ್ಕಾಗಿ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' 'ಅಸ್ಯೋದ್ಭವಾದಿದಮ್' ಎಂಬ ಮೂರು ವಿಶೇಷಣಗಳನ್ನು ಅನುವ್ಯಾಖ್ಯಾನ ಶ್ಲೋಕದಲ್ಲಿ ಹೇಳಿರುತ್ತಾರೆ.

ನಿಖಿಲಪೂರ್ಣಗುಣೈಕದೇಹಂ, ನಿಖಿಲಾಃ = ಎಲ್ಲಾ ಬಗೆಯ, ಪೂರ್ಣಾಃ = ಒಂದೊಂದೂ ಅಪರಿಮಿತವಾದ, ಗುಣಾಃ = ಆನಂದಾದಿಗುಣಗಳು. ನಿಖಿಲಪೂರ್ಣಗುಣೈಕದೇಹಂ ಎಂಬಲ್ಲಿರುವ ಏಕ ಶಬ್ದವು ಕೇವಲ ಎಂಬರ್ಥದಲ್ಲಿದೆ. ಅಪರಿಮಿತವಾದ ಆನಂದಜ್ಞಾನಾದಿಗುಣಗಳೇ ಶರೀರವಾಗಿ ಉಳ್ಳವನು. ಪ್ರಾಕೃತಾದಿ ಶರೀರವಿಲ್ಲದವನು ಎಂಬುದು 'ನಿಖಿಲಪೂರ್ಣಗುಣೈಕದೇಹಂ' ಎಂಬುದರ ಅರ್ಥ.

ಪಾರತಂತ್ರ್ಯಮೊದಲಾದ ದೋಷಗಳಿಲ್ಲದವನು ನಿರ್ದೋಷನು ಎನಿಸುತ್ತಾನೆ.

ಅಸ್ಯೋದ್ಭವಾದಿದಂ - ಅಸ್ಯ = ಪ್ರತ್ಯಕ್ಷಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿರುವುದರಿಂದ ಬುದ್ಧಿಸನ್ನಿಹಿತವಾದ ತನಗಿಂತ ಭಿನ್ನವಾದ ಪ್ರಪಂಚಕ್ಕೆ, ಉದ್ಭವಾದಿದಂ = ಸೃಷ್ಟಿ ಮೊದಲಾದ ಎಂಟು ಧರ್ಮಗಳನ್ನು ಯಥಾಯೋಗ್ಯವಾಗಿ ನೀಡುವವನನ್ನು ಎಂಬುದು 'ಅಸ್ಯೋದ್ಭವಾದಿದಂ' ಎಂಬ ವಿಶೇಷಣದ ಅರ್ಥ. ಅಸ್ಯ ಎಂಬಲ್ಲಿರುವ ಷಷ್ಠೀ





ವಿಭಕ್ತಿಗೆ ಕೇವಲ ಸಂಬಂಧ ಎಂದರ್ಥ. 'ಅಶೇಷವಿಶೇಷತೋಽಪಿ' ಎಂಬುದನ್ನು 'ಅಸ್ಯೋದ್ಭವಾದಿದಂ' ಎಂಬಲ್ಲೂ ಕೂಡ ಅನ್ವಯ ಮಾಡಬೇಕು. ವಿಯದದಧಿಕರಣ, ಮಾತರಿಶ್ವಾಧಿಕರಣ, ಜ್ಯಾಧಿಕರಣ ಮೊದಲಾದವುಗಳಲ್ಲಿ ಹೇಳಿರುವಂತೆ 'ಸಮಗ್ರವಾದ ಒಳ ಪ್ರಭೇದಗಳಿಂದ ಕೂಡಿರುವ ಸೃಷ್ಟಿ ಮುಂತಾದವುಗಳನ್ನು ನೀಡುವವನು' ಎಂದು ಅರ್ಥವಾಗುತ್ತದೆ.

## ತತ್ರ ಎಂಬ ಪದಕ್ಕೆ ಎರಡರ್ಥ

ಪರಿಮಳ– ತತಃ ಕಿಮ್? ಇತ್ಯತೋ ವಾಹ – ತತ್ರೇತಿ ॥ ತ್ರೇಧಾ ವಂದ್ಯತ್ವೇ ಸತಿ ಇತಿ ವಾ ವಿಶೇಷಣಪಂಚಕಮಧ್ಯೇ ಇತಿ ವಾಽರ್ಥಃ।

ಮೂರು ಬಗೆಯಲ್ಲಿ ದೇವತೆಯು ವಂದ್ಯನಾಗುವುದರಿಂದ ಏನು ಹೇಳಿ- ದಂತಾಯಿತು? ಎಂಬ ಪ್ರಶ್ನೆಗೆ 'ತತ್ರ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಆದ್ದರಿಂದ ತತ್ರ ಎಂಬ ಪದಕ್ಕೆ ಮೂರು ರೀತಿಯಲ್ಲಿ ದೇವತೆಯು ವಂದ್ಯನೆಂದು ಸಿದ್ಧನಾದ್ದರಿಂದ ಎಂದರ್ಥ. ಅಥವಾ ಮಂಗಳಶ್ಲೋಕದಲ್ಲಿ ಐದು ವಿಶೇಷಣಗಳಿವೆ ಅವುಗಳ ಮಧ್ಯದಲ್ಲಿ ಎಂದರ್ಥ.

## ಏಕಶಬ್ದವನ್ನು ಸೇರಿಸಿ ಸಮಾಸ ಹೇಗೆ ಮಾಡಿದರು?

ಪರಿಮಳ– ಏಕಶಬ್ದಸ್ಯ ಸಂಖ್ಯಾರ್ಥತ್ವೇನ ಗುಣವಿಶೇಷಣತ್ವೇ 'ಪೂರ್ವಕಾಲೈಕಸರ್ವ- ಜರತ್ ಪುರಾಣನವಕೇವಲಾಃ ಸಮಾನಾಧಿಕರಣೇನ' ಇತ್ಯನೇನೈಕಶಬ್ದಸ್ಯ ಪ್ರಥಮಾಂತ- ನಿರ್ದೇಶೇನ ಸಮಾಸವಿಧಾನಾತ್ 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಇತ್ಯುಪಸರ್ಜನಸಂಜ್ಞಾಯಾಂ 'ಉಪಸರ್ಜನಂ ಪೂರ್ವಮ್' ಇತಿ ಪೂರ್ವನಿಪಾತೋ 'ನಿಖಿಲೇ'ತ್ಯನೇನ ವಿರೋಧಶ್ಚ ಪ್ರಾಪ್ನೋತೀತ್ಯತ ಆಹ – ಏಕಶಬ್ದ ಇತಿ ॥

ಏಕಶಬ್ದವು ಸಂಖ್ಯಾ ಎಂಬರ್ಥದಲ್ಲಿದೆ. ಇದನ್ನು ಗುಣದಲ್ಲಿ ವಿಶೇಷಣವನ್ನಾಗಿ ಹೇಳಿದ್ದಾರೆ. ಆದ್ದರಿಂದ 'ಪೂರ್ವಕಾಲೈಕಸರ್ವಜರತ್ ಪುರಾಣನವಕೇವಲಾಃ ಸಮಾನಾಧಿಕರಣೇನ' ಎಂಬ





ಸೂತ್ರದಿಂದ ಏಕಶಬ್ದವು ಸಮಾಸದಲ್ಲಿ ಪ್ರಥಮಾವಿಭಕ್ತಿಯಲ್ಲಿ ವಿಧಿಸಲ್ಪಟ್ಟಿದೆ. ಆಗ 'ಪ್ರಥಮಾನಿರ್ದಿಷ್ಟಂ ಸಮಾಸೋಪಸರ್ಜನಂ' ಎಂಬ ಸೂತ್ರದಂತೆ ಉಪಸರ್ಜನಸಂಜ್ಞೆಯು ಪ್ರಾಪ್ತವಾಗುತ್ತದೆ. ಸಮಾಸದಲ್ಲಿ ಯಾವ ಪದಕ್ಕೆ ಉಪಸರ್ಜನಸಂಜ್ಞೆಯು ಇರುತ್ತದೋ ಅದು ಮೊದಲು ಬರಬೇಕೆಂದು 'ಉಪಸರ್ಜನಂ ಪೂರ್ವಂ' ಎಂಬ ಸೂತ್ರವು ಹೇಳುತ್ತದೆ. ಆದ್ದರಿಂದ 'ಗುಣೈಕದೇಹಂ' ಎಂಬ ಸಮಾಸದಲ್ಲಿ ಏಕಶಬ್ದವು ನಿಖಿಲ ಎಂಬ ಶಬ್ದಕ್ಕಿಂತ ಮೊದಲೇ ಬರಬೇಕು. ಒಂದು ವೇಳೆ 'ಏಕನಿಖಿಲಗುಣೈಕದೇಹಂ' ಎಂದು ಸಮಾಸ ಮಾಡಿದರೆ ನಿಖಿಲಪದದಿಂದ ವಿರೋಧವು ಕೂಡ ಬರುತ್ತದೆ. ಆದ್ದರಿಂದ ಏಕಶಬ್ದವನ್ನು ಸೇರಿಸಿಕೊಂಡು ಸೇರಿಸಿಕೊಂಡು ಸಮಾಸವನ್ನು ಹೇಗೆ ಮಾಡಿದರು? ಎಂಬ ಪ್ರಶ್ನೆಗೆ 'ಏಕಶಬ್ದಃ ಕೇವಲಾರ್ಥಃ' ಎಂಬುದರಿಂದ ಉತ್ತರಿಸಿದ್ದಾರೆ.

## ಕೇವಲಾರ್ಥದಲ್ಲಿರುವ ಏಕಶಬ್ದವು ಸಮಾಸವಾಗುತ್ತದೆ.

**ಪರಿಮಳ– ಏಕೇ ಮುಖ್ಯಾನ್ಯಕೇವಲಾಃ ಇತ್ಯುಕ್ತೇಃ । 'ದೋಷೈಕದೃಕ್ ಪುರೋಭಾಗೀ ದೀರ್ಘಸೂತ್ರಶ್ಚಿರಕ್ರಿಯಃ' ಇತ್ಯಮರೇ 'ನಿಯತಿಕೃತನಿಯಮರಹಿತಾಂ ಹ್ಲಾದೈಕಮಯೀಮ್' ಇತಿ ಕಾವ್ಯಪ್ರಕಾಶೇ ಚ ಪ್ರಯೋಗಾತ್ ಸಂಖ್ಯಾರ್ಥಸ್ಯೈವ ಏಕಶಬ್ದಸ್ಯ ಪೂರ್ವಕಾಲೈಕೇತಿ ಸೂತ್ರೇ ನಿರ್ದೇಶೋ ನ ಕೇವಲಾರ್ಥಸ್ಯೇತಿ ನ ದೋಷ ಇತಿ ಭಾವಃ । ಕೇವಲಾರ್ಥೈಕಶಬ್ದಸ್ಯ ಗುಣವಿಶೇಷಣತ್ವೇ ಲಬ್ಧಾರ್ಥಮಾಹ – ತ ಏವೇತಿ ॥**

ಏಕಶಬ್ದವು ಸಂಖ್ಯಾರ್ಥದಲ್ಲಷ್ಟೇ ಇರುವುದಲ್ಲ; 'ಏಕೇ ಮುಖ್ಯಾನ್ಯ ಕೇವಲಾಃ' ಎಂದು ಹೇಳಿದಂತೆ ಅನೇಕಾರ್ಥವನ್ನು ಹೊಂದಿದೆ. ಪ್ರಕೃತ ಕೇವಲ ಎಂಬರ್ಥದಲ್ಲಿ ಏಕಶಬ್ದವನ್ನು ಪ್ರಯೋಗಿಸಲಾಗಿದೆ. ಸಂಖ್ಯಾವಾಚಕವಾದ ಏಕಶಬ್ದವನ್ನು ಮಾತ್ರ 'ಪೂರ್ವಕಾಲೈಕ' ಎಂಬ ಸೂತ್ರದಲ್ಲಿ ವಿವಕ್ಷಿಸಿದ್ದಾರೆ. ಆದ್ದರಿಂದ ಹಿಂದೆ ಹೇಳಿದ ಯಾವುದೇ ದೋಷಗಳಿಗೆ ಅವಕಾಶವಿಲ್ಲ. ಮತ್ತು 'ದೋಷೈಕದೃಕ್ ಪುರೋಭಾಗೀ ದೀರ್ಘಸೂತ್ರಶ್ಚಿರಕ್ರಿಯಃ' ಎಂಬ ಅಮರಕೋಶದಲ್ಲಿ 'ನಿಯತಿಕೃತನಿಯಮರಹಿತಾಂ ಹ್ಲಾದೈಕಮಯೀಮ್' ಎಂಬ ಕಾವ್ಯಪ್ರಕಾಶದಲ್ಲಿ ಏಕಶಬ್ದವನ್ನು ಕೇವಲ ಎಂಬರ್ಥದಲ್ಲಿ ವಿವಕ್ಷಿಸಲಾಗಿದೆ. ಆದ್ದರಿಂದ ಸಂಖ್ಯಾವಾಚಕವಾದ ಏಕ-





ಶಬ್ದಕ್ಕೆ ಮಾತ್ರ ಪೂರ್ವನಿಪಾತವು ಪ್ರಾಪ್ತವಾಗುತ್ತದೆ. ಕೇವಲಾರ್ಥದಲ್ಲಿರುವ ಏಕಶಬ್ದಕ್ಕೆ ಪೂರ್ವನಿಪಾತವು ಪ್ರಾಪ್ತವಾಗುವುದಿಲ್ಲ ಎಂದಭಿಪ್ರಾಯ. ಕೇವಲ ಎಂಬರ್ಥದಲ್ಲಿರುವ ಏಕ-ಶಬ್ದವು ಗುಣದಲ್ಲಿ ವಿಶೇಷಣವಾದಾಗ ಯಾವ ಅರ್ಥವು ದೊರೆಯುತ್ತದೋ ಅದನ್ನು 'ತೇ ಏವ' ಎಂಬುದರಿಂದ ತಿಳಿಸುತ್ತಿದ್ದಾರೆ.

## ನಿರ್ದೋಷ ಮತ್ತು ಅಸ್ಯೋದ್ಭವಾದಿದಂ ಎಂಬುದರ ವ್ಯಾಖ್ಯಾನ.

ಪರಿಮಳ– 'ನಿರಾದಯಃ ಕ್ರಾಂತಾದ್ಯರ್ಥೇ ಪಂಚಮ್ಯಾ' ಇತ್ಯುಕ್ತೇರಾಹ– ನಿಷ್ಕ್ರಾಂತೋ ದೋಷೇಭ್ಯ ಇತಿ ॥ 'ಪಾರತಂತ್ರ್ಯಾದಿಭ್ಯಃ' ಇತ್ಯುಕ್ತ್ಯಾ ಕಥಂ ಸರ್ವೋತ್ತಮತ್ವಂ ನಾರಾ-ಯಣಸ್ಯ ? ಇತ್ಯೇತದಂಶೋಽಪಿ ಉಪಪಾದಿತೋ ಧ್ಯೇಯಃ।

ಈಶ್ವರಸ್ಯ ಜನ್ಮಲಯಾದ್ಯಭಾವೋಕ್ತಿಪರೈಃ ಅಸಂಭವಸ್ತು ಇತ್ಯಾದ್ಯಧಿಕರಣೈರ-ವಿರೋಧಾಯ ವಾ ವ್ಯಾಘಾತಪರಿಹಾರಾಯ ವಾಽಽಹ – ಸ್ವವ್ಯತಿರಿಕ್ತೇತಿ ॥ ಏತೇನಾಪಿ ಸರ್ವೋತ್ತಮತ್ವಮ್ ಅಸ್ಯೋಪಪಾದಿತಂ ಧ್ಯೇಯಮ್ ।

ನಿರ್ ಮೊದಲಾದ ಉಪಸರ್ಗಗಳು, ಕ್ರಾಂತ = ಅತಿಕ್ರಮಿಸಿದವನು ಮೊದಲಾದ ಅರ್ಥ-ಗಳಲ್ಲಿ ಪಂಚಮ್ಯಂತದ ಜೊತೆ ಸಮಾಸ ಹೊಂದುತ್ತವೆ. ಎಂಬ ನಿಯಮವಿರುವುದರಿಂದ 'ನಿಷ್ಕ್ರಾಂತದೋಷೇಭ್ಯಃ' ಎಂದು ಹೇಳಿದ್ದಾರೆ. ನಿರ್ ಮೊದಲಾದ ಉಪಪದಗಳು ಕ್ರಾಂತಾ-ದ್ಯರ್ಥದಲ್ಲಿ ಪಂಚಮೀವಿಭಕ್ತಿಯಿಂದ ಸಹಿತವಾಗುತ್ತವೆ ಎಂಬುದು ಇದರ ಅಭಿಪ್ರಾಯ. ಆದ್ದರಿಂದ ದೋಷೇಭ್ಯಃ ಎಂಬ ಪಂಚಮೀವಿಭಕ್ತಿಯನ್ನು ಪ್ರಯೋಗ ಮಾಡಿದ್ದಾರೆ. 'ಪಾರ-ತಂತ್ರ್ಯಾದಿಭ್ಯಃ' ಎಂದು ಹೇಳಿದ್ದರಿಂದಲೇ ನಾರಾಯಣನು ಹೇಗೆ ಸರ್ವೋತ್ತಮನಾಗಿದ್ದಾನೆ ಎಂಬ ಅಂಶವನ್ನು ಕೂಡ ಉಪಪಾದನೆ ಮಾಡಿದಂತಾಯಿತು.

ಈಶ್ವರನಿಗೆ ಜನ್ಮ ಲಯ ಮೊದಲಾದವುಗಳು ಇಲ್ಲವೆಂದೂ ಅಸಂಭವಾದ್ಯಧಿಕರಣಗಳಲ್ಲಿ ನಿರೂಪಣೆ ಮಾಡಿದ್ದಾರೆ. ಆ ಅಧಿಕರಣಗಳ ವಿರೋಧವು ಬರಬಾರದು ಎಂಬುದರ ಸಮರ್ಥ-ನೆಗಾಗಿ 'ಸ್ವವ್ಯತಿರಿಕ್ತಪ್ರಪಂಚಸ್ಯ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಅಥವಾ ಈಶ್ವರನಿಗೆ

  



ಜನ್ಮಾದಿಗಳನ್ನು ಹೇಳಿದರೆ ಜನ್ಮಾದಿಗಳು ಇಲ್ಲವೆಂದು ಹೇಳಿದ ಮಾತಿನಿಂದ ವ್ಯಾಘಾತ ಬರುತ್ತದೆ. ಅದರ ಪರಿಹಾರಕ್ಕಾಗಿಯೂ 'ಸ್ವವ್ಯತಿರಿಕ್ತಪ್ರಪಂಚಸ್ಯ' ಎಂದು ಹೇಳಿದ್ದಾರೆ. 'ಅಸ್ಯೋದ್ಭವಾದಿದಂ' ಎಂಬುದರಿಂದಲೂ ಕೂಡ ಸರ್ವೋತ್ತಮತ್ವವನ್ನು ಉಪಪಾದನೆ ಮಾಡಿದಂತಾಯಿತು.

## ಉದ್ಭವಶಬ್ದವನ್ನೇ ಪ್ರಯೋಗಿಸಲು ಕಾರಣ

ಪರಿಮಳ– ಜನ್ಮಾದ್ಯಷ್ಟಕಮಿತಿ ॥

ಗುಣವ್ಯತ್ಯಯ ಏತಸ್ಮಿನ್ ಮಾಯಾವತ್ತ್ವಾದಧೀಶಿತುಃ ।
ನ ಪೌರ್ವಾಪರ್ಯಮಿಚ್ಛಂತಿ ನದ್ಯಾಂ ಭ್ರಾಮ್ಯದ್‌ಭ್ರಮೇರಿವ ॥

ಇತಿ ತೃತೀಯಸ್ಕಂಧೋಕ್ತ್ಯಾ ಪೌರ್ಣಮಾಸ್ಯಾಮಾವಾಸ್ಯಾತಿಥ್ಯೋರಿವ ಜನ್ಮಸ್ಥಿತ್ಯಾದೇರಿದಂ ಪ್ರಾಥಮ್ಯಾಭಾವೇಽಪಿ ಲಬ್ಧಜನ್ಮನ ಏವ ಸ್ಥಿತಿಲಯಾದೀತಿ ಜನ್ಮನ ಆದಿತ್ವಮುಪೇತ್ಯ 'ಜನ್ಮಾದಿ' ಇತ್ಯುಕ್ತಮ್ ।

ಗುಣವ್ಯತ್ಯಯ ಏತಸ್ಮಿನ್ ಮಾಯಾವತ್ತ್ವಾದಧೀಶಿತುಃ ।
ನ ಪೌರ್ವಾಪರ್ಯಮಿಚ್ಛಂತಿ ನದ್ಯಾಂ ಭ್ರಾಮ್ಯದ್‌ಭ್ರಮೇರಿವ ॥

ಸತ್ವ ಮೊದಲಾದ ಗುಣಗಳ ವ್ಯತ್ಯಾಸರೂಪವಾದ ಈ ಸಂಸಾರದಲ್ಲಿ ಪರಮಾತ್ಮನ ಅಚಿಂತ್ಯಶಕ್ತಿಯ ವೈಭವದಿಂದ ಸೃಷ್ಟಿ ಮೊದಲಾದವುಗಳು ನಡೆಯುತ್ತವೆ. ನದಿಯ ತಿರುಗಣಿಗಳಂತೆ ಚಕ್ರಾಕಾರವಾಗಿ ಸೃಷ್ಟಿಸ್ಥಿತ್ಯಾದಿಗಳು ನಡೆಯುತ್ತವೆ ಎಂಬುದಾಗಿ ಭಾಗವತ ತೃತೀಯಸ್ಕಂಧದಲ್ಲಿ ಹೇಳಲಾಗಿದೆ. ಆದ್ದರಿಂದ ಅಮಾವಾಸ್ಯೆ ಹಾಗೂ ಹುಣ್ಣಿಮೆ ತಿಥಿಗಳಲ್ಲಿ ಇದು ಮೊದಲು ಇದು ಅನಂತರ ಎಂದು ಹೇಗೆ ಹೇಳಲು ಸಾಧ್ಯವಿಲ್ಲವೋ, ನದಿಯ ಪ್ರವಾಹಗಳಲ್ಲಿ ಇದು ಮೊದಲು ಎಂದು ನಿರ್ಣಯಿಸಲು ಹೇಗೆ ಬರುವುದಿಲ್ಲವೋ ಅದರಂತೆ ಸೃಷ್ಟಿ,ಸ್ಥಿತಿ ಸಂಹಾರಾದಿಗಳಲ್ಲಿ ಇದು ಮೊದಲು ಎಂದು ನಿರ್ಣಯಿಸಲು ಸಾಧ್ಯವಿಲ್ಲ. ಆದ್ದರಿಂದ ಸ್ಥಿತ್ಯಾದಿ ಎಂದು ಅಥವಾ ಸಂಹಾರಾದಿ ಎಂದು ಹೇಳಬಹುದಿತ್ತು. ಜನ್ಮಾದಿ ಎಂದು ಏಕೆ ಹೇಳಿದರು?





ಉತ್ತರ – ಈ ಪ್ರಶ್ನೆ ತಪ್ಪು. ಏಕೆಂದರೆ ಯಾವುದೇ ಒಂದು ವಸ್ತುವಿಗೆ ಸ್ಥಿತಿ ಮತ್ತು ಸಂಹಾರಗಳು ಆಗಬೇಕೆಂದರೆ ಆ ವಸ್ತು ಮೊದಲು ಸೃಷ್ಟಿಯಾಗಿರಬೇಕು. ಆದ್ದರಿಂದ ಸೃಷ್ಟಿ-ವಾಚಕವಾದ ಉದ್ಭವಶಬ್ದವನ್ನೇ ಮಂಗಳಶ್ಲೋಕದಲ್ಲಿ ಮೊದಲು ಉಲ್ಲೇಖ ಮಾಡಿದ್ದಾರೆ.

## ಸ್ವಭಾವಕ್ಕನುಗುಣವಾಗಿ ಸೃಷ್ಟ್ಯಾದಿಗಳು

ಪರಿಮಳ– ಯಥಾಸಂಭವಮಿತಿ ॥ ಜನ್ಮಸ್ಥಿತಿಲಯನಿಯಮನಾನಿ ಸರ್ವಸ್ಯ । ಜ್ಞಾನಾ-ಜ್ಞಾನಬಂಧಮೋಕ್ಷಾನ್ ಬ್ರಹ್ಮಾದಿಚೇತನಸ್ಯ । ತತ್ರಾಪಿ ಮೋಕ್ಷಂ ಸತಾಮೇವ ಇತ್ಯೇವಂ-ರೂಪೇಣ ಇತ್ಯರ್ಥಃ।

ಜನ್ಮಸ್ಥಿತಿಲಯನಿಯಮನಗಳು ಪ್ರತಿಯೊಂದು ಪದಾರ್ಥಗಳಲ್ಲಿವೆ. ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಬ್ರಹ್ಮಾದಿ ಚೇತನರಲ್ಲಿವೆ. ಅದರಲ್ಲೂ ಮೋಕ್ಷವು ಸಜ್ಜನರಲ್ಲಿ ಮಾತ್ರ ಇದೆ ಎಂಬುದಾಗಿ 'ಯಥಾಸಂಭವಂ' ಎಂಬ ಪದದ ಅರ್ಥವನ್ನು ತಿಳಿಯಬೇಕು.

ವಿಶೇಷವಿಚಾರ– ನಾರಾಯಣನು ಸಮಸ್ತಪ್ರಪಂಚಕ್ಕೆ ಜನ್ಮಾದ್ಯಷ್ಟಕಗಳನ್ನು ನೀಡುತ್ತಾನೆ ಎಂಬುದು ಅಸ್ಯೋದ್ಭವಾದಿದಂ ಎಂಬುದರ ಅರ್ಥ: ಇದನ್ನು ಯಥಾಯೋಗ್ಯವಾಗಿ ನೀಡುತ್ತಾನೆಂಬುದನ್ನು ಅರ್ಥ-ಮಾಡಿಕೊಳ್ಳಬೇಕು. ಏಕೆಂದರೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ ಬಂಧಮೋಕ್ಷಗಳನ್ನು ಎಲ್ಲಾ ಪದಾರ್ಥಗಳಲ್ಲೂ ಒಂದೇ ರೀತಿಯಾಗಿ ಹೇಳಲು ಸಾಧ್ಯವಿಲ್ಲ. ಆಯಾ ವಸ್ತುಗಳ ಸ್ವಭಾವಕ್ಕೆ ಅನುಗುಣವಾಗಿ ಈ ಸೃಷ್ಟ್ಯಾದಿಗಳನ್ನು ನೀಡುತ್ತಾನೆ. ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ ಎಂಬ ನಾಕು ಧರ್ಮಗಳು ಸಕಲಚೇತನರಲ್ಲಿ ಹಾಗೂ ಅಚೇತನಪದಾರ್ಥಗಳಲ್ಲಿ ಸಾಧಾರಣವಾಗಿವೆ. ಆದರೆ ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಚೇತನರಿಗೆ ಮಾತ್ರ ಸಂಬಂಧಪಟ್ಟದ್ದು. ಅದರಲ್ಲೂ ಕೊನೆಯ ಮೋಕ್ಷವನ್ನು ಸಜ್ಜನರಿಗೆ ಮಾತ್ರ ನೀಡುತ್ತಾನೆ.

## ಅಸ್ಯೋದ್ಭವಾದಿದಂ ಎಂಬಲ್ಲಿ ಚತುರ್ಥೀವಿಭಕ್ತಿಯು ಬರಬೇಕಿತ್ತಲ್ಲವೇ?

ಪರಿಮಳ– 'ಚತುರ್ಥೀಸಂಪ್ರದಾನೇ' ಇತಿ ಚತುರ್ಥ್ಯಾ ಭಾವ್ಯಮ್ । ಕಥಮಸ್ಯ ಇತಿ ಷಷ್ಠೀತ್ಯತ ಆಹ – ಸಂಬಂಧಮಾತ್ರ ಇತಿ ॥ ನ ತು ಸಂಪ್ರದಾನತ್ವಮಪ್ಯತ್ರ ವಿವಕ್ಷ್ಯತೇ ಇತಿ

  



ಮಾತ್ರಪದಾರ್ಥಃ । 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಇತಿ ಸೂತ್ರೇ ಆಚೋಂತ್ಯಾದಿಟಿ' ಇತ್ಯಾದಾವಿವ ಲಘುಸಂಜ್ಞಾಯಾಃ ಕಾರ್ಯತ್ವೇऽಪಿ ಸಂಪ್ರದಾನಮ್ ಇತಿ ಗುರುಸಂಜ್ಞಾಕರಣಮ್ ಅನ್ವರ್ಥತ್ವವಿಜ್ಞಾನಾರ್ಥಮ್ । ತೇನ ಬಹುಮಾನಪೂರ್ವಂ ಸ್ವಸ್ವತ್ವತ್ಯಾಗೇನ ಪರಸ್ವತ್ವಾಪಾದಾನಾದಿರೂಪದಾನಂ ಯತ್ರ ತತ್ರೈವ ಸಂಪ್ರದಾನಸಂಜ್ಞಾ ನತ್ವನ್ಯತ್ರ ರಜಕಸ್ಯ ವಸ್ತ್ರಂ ದದಾತಿ ಇತ್ಯಾದಾವಿತಿ ವೃತ್ತ್ಯಾದಾವುಕ್ತೇಃ ಇಹಾಪಿ ಸಂಪ್ರದಾನ-ಸಂಜ್ಞಾऽಭಾವಾತ್ 'ಷಷ್ಠೀ ಶೇಷೇ' ಇತಿ ಷಷ್ಠ್ಯೇವೇತಿ ಭಾವಃ।

'ಚತುರ್ಥೀಸಂಪ್ರದಾನೇ' ಎಂಬ ಸೂತ್ರದಂತೆ 'ಇದಂ' ಎಂಬ ಶಬ್ದದ ಮುಂದೆ ಚತುರ್ಥೀವಿಭಕ್ತಿ ಬರಬೇಕು. ಆದರೆ ಅಸ್ಯ ಎಂಬುದಾಗಿ ಷಷ್ಠೀವಿಭಕ್ತಿಯನ್ನು ಪ್ರಯೋಗಿಸಿದ್ದಾರೆ. ಇದು ಹೇಗೆ? ಎಂಬ ಪ್ರಶ್ನೆಗೆ 'ಸಂಬಂಧಮಾತ್ರೇ' ಎಂಬುದಾಗಿ ಉತ್ತರಿಸಿದ್ದಾರೆ. ಸಾಮಾನ್ಯವಾದ ಸಂಬಂಧದಲ್ಲಷ್ಟೇ ಉದ್ದೇಶವಿದೆ. ಸಂಪ್ರದಾನತ್ವದಲ್ಲಿ ಉದ್ದೇಶವಿಲ್ಲ ಎಂಬುದು ಮಾತ್ರಪದದ ಅರ್ಥ.

'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಎಂಬ ಸೂತ್ರದಲ್ಲಿ ಹಾಗೂ 'ಆಚೋಂ-ತ್ಯಾದಿಟಿ' ಇತ್ಯಾದಿ ಸೂತ್ರಗಳಲ್ಲಿ ಟಿ ಇತ್ಯಾದಿಯಾಗಿ ಲಘುಸಂಜ್ಞೆಯನ್ನು ಮಾಡಿದಂತೆ ಇಲ್ಲೂ ಕೂಡ ಲಘುಸಂಜ್ಞೆಯನ್ನೇ ಮಾಡಬಹುದಿತ್ತು. ಆದರೂ ಕೂಡ ಸಂಪ್ರದಾನವೆಂಬ ಗುರುಸಂಜ್ಞೆ ಮಾಡಿದ್ದಾರೆ. ಈ ಸಂಜ್ಞೆ ಅನ್ವರ್ಥಕವೆಂದು ತಿಳಿಸುವುದು ಪಾಣಿನಿಯ ಅಭಿಪ್ರಾಯವಾಗಿದೆ. ಆದ್ದರಿಂದ ಸಂಪ್ರದಾನಮ್ ಎಂಬುದು ಕೇವಲ ಪಾರಿಭಾಷಿಕಪದವಲ್ಲ. ಗೌರವಪೂರ್ವಕವಾಗಿ ತನ್ನಲ್ಲಿರುವ ಸ್ವಾಮಿತ್ವವನ್ನು ಪರಿತ್ಯಾಗಮಾಡಿ ಪರರಿಗೆ ಸಂಬಂಧಪಟ್ಟ ಸ್ವಾಮಿತ್ವವನ್ನು ಸ್ಥಾಪಿಸು-ವುದು ದಾನ ಎನಿಸಿಕೊಳ್ಳುತ್ತದೆ. ಅಂಥ ಸಂದರ್ಭದಲ್ಲೇ ಸಂಪ್ರದಾನಸಂಜ್ಞೆಯು ಪ್ರಾಪ್ತವಾಗು-ತ್ತದೆ. ಬೇರೆ ಕಡೆ ಬರುವುದಿಲ್ಲ. 'ರಜಕಸ್ಯ ವಸ್ತ್ರಂ ದದಾತಿ' ಎಂಬಲ್ಲಿ ಇಂಥ ಸಂಪ್ರದಾನವು ಇಲ್ಲದ ಕಾರಣ ಸಂಪ್ರದಾನಸಂಜ್ಞೆಯು ಬರುವುದಿಲ್ಲ ಎಂಬುದಾಗಿ ಕಾಶಿಕಾವೃತ್ತ್ಯಾದಿಗಳಲ್ಲಿ ಹೇಳಿದ್ದಾರೆ. ಪ್ರಕೃತ, ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ವಿಷಯದಲ್ಲಿ ಇಂಥ ಸಂಪ್ರ-ದಾನವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಚತುರ್ಥೀವಿಭಕ್ತಿಯು ಪ್ರಾಪ್ತವಾಗದೇ 'ಷಷ್ಠೀ ಶೇಷೇ' ಎಂಬ ಸೂತ್ರದಿಂದ ಷಷ್ಠೀವಿಭಕ್ತಿಯು ಬಂದಿದೆ.

ವಿಶೇಷವಿಚಾರ– 'ನಾರಾಯಣನು ಈ ಜಗತ್ತಿಗೆ ಸ್ಥಿತ್ಯಾದಿಗಳನ್ನು ನೀಡುತ್ತಾನೆ' ಎಂಬ ಅರ್ಥದಲ್ಲಿ 'ಅಸ್ಮೈ ಉದ್ಭವಾದಿದಂ' ಎಂದು ಸಂಪ್ರದಾನಾರ್ಥದಲ್ಲಿ ಚತುರ್ಥೀ ಬರಬೇಕಾಗಿತ್ತು. ಅಸ್ಯ ಉದ್ಭವಾದಿದಂ ಎಂಬ ಷಷ್ಠೀ ಹೇಗೆ? ಯಾಕೆಂದರೆ ದಾನಕ್ಕೆ ಕರ್ಮವಾದದ್ದು ಜಗತ್ತು ಎಂಬ ಅಭಿಪ್ರಾಯವಿರುವುದರಿಂದ 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಎಂಬ ಸೂತ್ರದಿಂದ ಜಗದ್ವಾಚಿಯಾದ ಇದಂ ಶಬ್ದಕ್ಕೆ ಸಂಪ್ರದಾನಸಂಜ್ಞಾ ಬರುತ್ತದೆ. ಅನಂತರ 'ಚತುರ್ಥೀ ಸಂಪ್ರದಾನೇ' ಎಂಬ ಸೂತ್ರದಿಂದ ಸಂಪ್ರದಾನಸಂಜ್ಞಾ ಇರುವ ಇದಂಶಬ್ದಕ್ಕೆ ಚತುರ್ಥೀವಿಭಕ್ತಿ ಬರುತ್ತದೆ. ಈ ರೀತಿ ಹೇಳುವುದು ಸರಿಯಲ್ಲ. ಏಕೆಂದರೆ ಜಗದ್ವಾಚಿಯಾದ ಇದಂ ಶಬ್ದಕ್ಕೆ ಸಂಪ್ರದಾನಸಂಜ್ಞಾ ಬರಬೇಕಾದರೆ ಜಗತ್ತು ದಾನಕ್ರಿಯೆಯ ಕರ್ಮಕ್ಕೆ ಆಶ್ರಯವಾಗಿರಬೇಕು. ಆದರೆ ಇದು ಕೂಡುವುದಿಲ್ಲ. ಕಾರಣವೇನೆಂದರೆ 'ದಾ'ಧಾತುವಿಗೆ ''ತನ್ನ ಸ್ವಾಮಿತ್ವವನ್ನು ತ್ಯಜಿಸಿ ಪರರ ಸ್ವಾಮಿತ್ವವನ್ನು ಸ್ಥಾಪಿಸುವುದು'' (ಸ್ವಸ್ವತ್ವಧ್ವಂಸವಿಶಿಷ್ಟಪರಸ್ವತ್ವಾಪಾದಕತ್ವಂ) ಎಂದು ಅರ್ಥ. ಇಂಥ ದಾನವು ಅಭಿಪ್ರೇತವಿರುವಲ್ಲಿಯೇ ಸಂಪ್ರದಾನಸಂಜ್ಞಾ ಬರುತ್ತದೆ. ಆದ್ದರಿಂದಲೇ 'ರಜಕಸ್ಯ ವಸ್ತ್ರಂ ದದಾತಿ' ಎಂಬಲ್ಲಿ ಸಂಪ್ರದಾನಸಂಜ್ಞಾ ಬರುವುದಿಲ್ಲ. ಹಾಗೆಯೇ ಪ್ರಕೃತದಲ್ಲಿ ಪರಮಾತ್ಮನು ಈ ಜಗತ್ತಿಗೆ ಕೊಡುವ ಉತ್ಪತ್ತ್ಯಾದಿಗಳು, ಕೊಟ್ಟ ಮೇಲೂ ಪರಮಾತ್ಮನ ಅಧೀನವೇ ಆಗಿರುತ್ತವೆ. ಆದ್ದರಿಂದ ಇನ್ನು ಮುಂದೆ ಈ ವಸ್ತು ತನ್ನದಲ್ಲ ಎಂಬ ಅನುಸಂಧಾನವು(ಸ್ವಸ್ವತ್ವಧ್ವಂಸ) ಇಲ್ಲದಿರುವುದರಿಂದ ಜಗತ್ತು ಸಂಪ್ರದಾನವಾಗುವುದಿಲ್ಲ. ಆದ್ದರಿಂದ ಇಲ್ಲಿ ಸಂಪ್ರದಾನಾರ್ಥದಲ್ಲಿ ಚತುರ್ಥೀ ಬರದೇ 'ಅಸ್ಯ ಉದ್ಭವಾದಿದಂ' ಎಂದು ಷಷ್ಠೀವಿಭಕ್ತಿಯೇ ಬಂದಿದೆ.

ತನ್ನ ಸ್ವಾಮಿತ್ವವನ್ನು ತ್ಯಜಿಸಿ ಪರರ ಸ್ವಾಮಿತ್ವವನ್ನು ಸ್ಥಾಪಿಸುವುದು (ಸ್ವಸ್ವತ್ವಧ್ವಂಸವಿಶಿಷ್ಟಪರಸ್ವತ್ವಾಪಾದಕತ್ವಂ) ಎಂಬ ಅರ್ಥವು ಸರಿಯಲ್ಲ. ಹಾಗಾದಲ್ಲಿ 'ವರಾಯ ಕನ್ಯಾಂ ದದಾತಿ' ಎಂಬಲ್ಲಿ ಚತುರ್ಥೀ ಬರದೇ ಇರಬೇಕಾದೀತು. ಏಕೆಂದರೆ ಅಲ್ಲಿ ಈ ಕನ್ಯಾವಸ್ತುವು ಇನ್ನು ಮುಂದೆ ನಮ್ಮದಲ್ಲ ಎಂಬ ಅನುಸಂಧಾನವಿರುವುದಿಲ್ಲ. (ಸ್ವಸ್ವತ್ವಧ್ವಂಸವು ಇರುವುದಿಲ್ಲ).

ಆದ್ದರಿಂದ 'ದಾ'ಧಾತುವಿಗೆ ಪರರ ಸ್ವಾಮಿತ್ವವನ್ನು ಸ್ಥಾಪಿಸುವುದು(ಪರಸ್ವತ್ವಾಪಾದಕತ್ವಂ) ಎಂದಷ್ಟೇ ಅರ್ಥೈಸಬೇಕು. ಇದಾದರೂ ಪ್ರಪಂಚದಲ್ಲಿ ಇದ್ದೇ ಇದೆ. ಆದ್ದರಿಂದ ಷಷ್ಠಿಯನ್ನು ಯಾಕೆ ಹೇಳಬೇಕು? ಈ ರೀತಿಯಾದ ಪ್ರಶ್ನೆಯೂ ಸರಿಯಾದದ್ದಲ್ಲ. ಪರಮಾತ್ಮನು ಜಗತ್ತಿಗೆ ಉದ್ಭವಾದಿಧರ್ಮಗಳನ್ನು ಕೊಟ್ಟರೂ ಸಹ ಅವು ಪರಮಾತ್ಮನ ಅಧೀನವೇ ಆಗಿರುತ್ತವೆ. ಹೊರತು ಈ ವಸ್ತು ಇನ್ನು ಮುಂದೆ ನನ್ನದಲ್ಲ ಎಂಬ ಅನುಸಂಧಾನ ಪರಮಾತ್ಮನಿಗೆ ಇರುವುದಿಲ್ಲ. ಈ ಕಾರಣದಿಂದ ಸಂಪ್ರದಾನಸಂಜ್ಞೆಗೆ ಅವಕಾಶವೇ ಇಲ್ಲ.

'ಉಪಾಧ್ಯಾಯಃ ಶಿಷ್ಯಾಯ ಚಪೇಟಿಕಾಂ ದದಾತಿ' ಎಂಬಲ್ಲಿಯೂ ಚತುರ್ಥೀ ಬಾರದಿರಬೇಕಾದೀತು. ಏಕೆಂದರೆ 'ಗುರುವಿಗೆ ಚಪೇಟಿಕಾವು ಶಿಷ್ಯಾಧೀನವಾಗಲಿ'' ಎಂಬ ಇಚ್ಛೆ ಇರುವುದಿಲ್ಲ. ಆದ್ದರಿಂದ 'ದಾ'ಧಾತುವಿಗೆ ಕ್ರಿಯಾಮಾತ್ರ ಅರ್ಥವೆಂದಿಟ್ಟುಕೊಳ್ಳಬೇಕು. ಈ ರೀತಿ ಹೇಳಿದಾಗ ಯಾವ ಸ್ಥಳದಲ್ಲಿಯೂ ದೋಷವಿಲ್ಲ. ಇದು ಪ್ರಪಂಚದಲ್ಲಿಯೂ ಇರುವುದರಿಂದ ಸಂಪ್ರದಾನಸಂಜ್ಞಾ ಬರಬಹುದು. ಆದ್ದರಿಂದ 'ಅಸ್ಮೈ' ಎಂದು ಚತುರ್ಥೀವಿಭಕ್ತಿಯೇ ಬರಬೇಕು.

ಈ ರೀತಿಯಾದ ಪ್ರಶ್ನೆಗೆ ಸುಧಾದಲ್ಲಿ 'ಸಂಬಂಧಮಾತ್ರೇ ಷಷ್ಠೀ' ಎಂದು ಉತ್ತರಿಸುತ್ತಿದ್ದಾರೆ. 'ವಿವಕ್ಷಾತಃ ಕಾರಕಾಣಿ ಭವಂತಿ' (ವಕ್ತೃವಿನ ವಿವಕ್ಷೆಯಂತೆ ಕಾರಕವಿಭಕ್ತಿಗಳು ಬರುತ್ತವೆ) ಎಂಬುದೂ ವೈಯಾಕರಣರೇ ಅಂಗೀಕರಿಸಿರುವ ಒಂದು ನಿಯಮ. ಆದ್ದರಿಂದ ಸಂಪ್ರದಾನತ್ವದ ವಿವಕ್ಷೆ ಇದ್ದಾಗ ಮಾತ್ರ 'ಬ್ರಾಹ್ಮಣಾಯ ಗಾಂ ದದಾತಿ' ಮುಂತಾದವುಗಳಲ್ಲಿ ಚತುರ್ಥೀ ಬರುತ್ತದೆ. ಆದರೆ ಪ್ರಕೃತ ಪ್ರಪಂಚದಲ್ಲಿ ಸಂಪ್ರದಾನತ್ವದ ವಿವಕ್ಷೆಯನ್ನು ಮಾಡಿಲ್ಲ. ಈ ರೀತಿಯಾಗಿ ಚತುರ್ಥೀವಿಭಕ್ತಿಯನ್ನು ಹೇಳದೇ 'ಷಷ್ಠೀ ಶೇಷೇ' ಎಂಬ ಸೂತ್ರದಿಂದ ಸಂಬಂಧಮಾತ್ರದಲ್ಲಿ ಷಷ್ಠೀವಿಭಕ್ತಿಯನ್ನು ಹೇಳಿದ್ದಾರೆ.

## ಸಂಬಂಧಸಾಮಾನ್ಯದಲ್ಲಿ ಷಷ್ಠೀವಿಭಕ್ತಿಯು ಬಂದಿದೆ

**ಪರಿಮಳ– ಯದ್ವಾ 'ಉದ್ಭವಾತ್' ಇತಿ ಪದಸ್ಯ 'ನಿತ್ಯಸಾಪೇಕ್ಷತ್ವಾತ್ ಸಮಾಸಃ' ಇತ್ಯುಪೇತ್ಯ ಕರ್ಮತ್ವಸಂಪ್ರದಾನತ್ವವಿಶೇಷೌದಾಸೀನ್ಯೇನ ಸಂಬಂಧಸಾಮಾನ್ಯಾಶ್ರಯೇಣ 'ಉದ್ಭವಾದಿ' ಇತ್ಯನೇನ ತದ್ದಮಿತಿ ದದಾತಿನಾ ವಾಽನ್ವಯ ಇತಿ ಭಾವೇನಾಹ – ಸಂಬಂಧಮಾತ್ರ ಇತಿ ॥ ಅಥವಾ 'ಅಸ್ಯ' ಇತಿ ಷಷ್ಠೀ ಕರ್ತರಿ ಚೇತ್ ಆದಿಪದೋಕ್ತಪಾಲನಾದಿನಾಽನ್ವಯಃ । ತಸ್ಯ ಜಗತ್ಕರ್ಮಕತ್ವಾತ್ । ಕರ್ಮಣಿ ಚೇತ್ ಉದ್ಭವಾದಿನಾಽನ್ವಯಃ ತಸ್ಯ ತತ್ಕರ್ತೃಕತ್ವಾತ್ ಅತ ಆಹ – ಸಂಬಂಧಮಾತ್ರ ಇತಿ ॥**

ಅಥವಾ 'ಉದ್ಭವಾದಿದಂ' ಎಂಬಲ್ಲಿ ಆದಿಪದವು ನಿತ್ಯಸಾಪೇಕ್ಷಿತವಾದ್ದರಿಂದ ಸಮಾಸವಾಗಿದೆ. ಆದ್ದರಿಂದ ಕರ್ಮತ್ವ, ಸಂಪ್ರದಾನತ್ವ ಮೊದಲಾದ ಅರ್ಥವಿಶೇಷಗಳಲ್ಲಿ ಅಭಿಪ್ರಾಯವಿಲ್ಲದೇ ಕೇವಲ ಸಾಮಾನ್ಯವಾದ ಸಂಬಂಧವನ್ನಷ್ಟೇ ವಿವಕ್ಷಿಸಲಾಗಿದೆ. 'ಉದ್ಭವಾದಿ' ಎಂಬಲ್ಲಿ ಅಥವಾ ಉದ್ಭವಾದಿಗಳನ್ನು ಕೊಡುವವನು ಎಂಬಲ್ಲಿ ಅನ್ವಯವನ್ನು ಹೇಳುವ ಅಭಿಪ್ರಾಯದಿಂದ





'ಸಂಬಂಧಮಾತ್ರೇ' ಎಂಬ ವಾಕ್ಯವು ಹೊರಟಿದೆ. ಜಗತ್ಸಂಬಂಧಿಯಾದ ಉದ್ಭವಾದಿಗಳನ್ನು ಕೊಡುತ್ತಾನೆ ಎಂಬುದು ಈ ಪಕ್ಷದಲ್ಲಿ ತಿಳಿಯುವ ಅರ್ಥ.

ಅಥವಾ 'ಅಸ್ಯ' ಎಂಬಲ್ಲಿರುವ ಷಷ್ಠೀವಿಭಕ್ತಿಯು ಕರ್ತ್ರರ್ಥದಲ್ಲಿ ವಿವಕ್ಷಿತವಾದರೆ ಆದಿ-ಪದದಿಂದ ಹೇಳಲ್ಪಟ್ಟ ಪಾಲನ ಮುಂತಾದವುಗಳ ಜೊತೆ ಅನ್ವಯವನ್ನು ಹೊಂದುವುದಿಲ್ಲ. ಏಕೆಂದರೆ, ಪಾಲನಾದಿಗಳಿಗೆ ಜಗತ್ತು ಕರ್ಮವಾಗಿದೆ ಹೊರತು ಕರ್ತೃವಾಗಿರುವುದಿಲ್ಲ. ಕರ್ಮಾರ್ಥದಲ್ಲಿ ಇದೆ ಎಂದು ಹೇಳಿದರೆ ಉದ್ಭವಾದಿಗಳಿಂದ ಅನ್ವಯವು ದೊರಕುವುದಿಲ್ಲ. ಹೀಗೆ ಕರ್ತೃ ಹಾಗೂ ಕರ್ಮಾರ್ಥಗಳಲ್ಲಿ ಅನ್ವಯವೇ ದೊರೆಯುವುದಿಲ್ಲವೆಂಬ ಆಕ್ಷೇಪದ ಪರಿಹಾರಕ್ಕಾಗಿ 'ಸಂಬಂಧಮಾತ್ರೇ' ಇತ್ಯಾದಿ ವಾಕ್ಯವು ಹೊರಟಿದೆ.

ವಿಶೇಷವಿಚಾರ – 'ನಿತ್ಯಸಾಪೇಕ್ಷತ್ವಾತ್ ಸಮಾಸಃ ಎಂಬುದಕ್ಕೆ ನಿಯತವಾದ ಆಕಾಂಕ್ಷೆಯು ಇದ್ದರೆ ಮಾತ್ರ ಅಸಮರ್ಥಪದಗಳಲ್ಲಿಯೂ ಕೂಡ ಸಮಾಸವಾಗುತ್ತದೆ ಎಂದರ್ಥ. ಈ ನಿಯಮದ ಪ್ರಕಾರ ಸಾಮರ್ಥ್ಯವಿಲ್ಲದಿದ್ದರೂ ಉದ್ಭವಾದಿದಂ ಎಂಬುದಾಗಿ ಸಮಾಸವಾಗಿದೆ ಎಂದು ತಿಳಿಯಬೇಕು.

'ಸಂಬಂಧಮಾತ್ರೇ ಷಷ್ಠೀ' ಎಂಬ ವಾಕ್ಯಕ್ಕೆ ಅವತರಣಿಕೆಯನ್ನು ಹೀಗೆ ತಿಳಿಯಬೇಕು— ಷಷ್ಠೀ-ವಿಭಕ್ತಿಯು ಕರ್ತ್ರರ್ಥದಲ್ಲಿ ಮತ್ತು ಕರ್ಮಾರ್ಥದಲ್ಲಿ ಬರುತ್ತದೆ. ಜಗತ್ತು ಉದ್ಭವಾದ್ಯಷ್ಟಕಗಳಿಗೆ ಕರ್ತೃ ಆಗಲಾರದು. ಏಕೆಂದರೆ 'ಜಗತ್ ಉದ್ಭವತಿ' ಎಂದು ಹೇಳಲಿಕ್ಕೆ ಬರುತ್ತದೆ. ಆದ್ದರಿಂದ ಉದ್ಭವ-ಕರ್ತೃತ್ವವನ್ನು ಜಗತ್ತಿನಲ್ಲಿ ಹೇಳಬಹುದು. ಆದರೆ 'ಜಗತ್ ಸಂಹರತಿ', 'ಜಗತ್ ನಿಯಮತಿ' ಇತ್ಯಾದಿ-ರೀತಿಯಾಗಿ ಸಂಹಾರಾದಿಕರ್ತೃತ್ವವನ್ನು ಹೇಳಲು ಬರುವುದಿಲ್ಲ. ಆದ ಕಾರಣ ಕರ್ತ್ರರ್ಥದಲ್ಲಿ ಷಷ್ಠೀ ಬರುವುದಿಲ್ಲ.

ಹಾಗೆಯೇ ಜಗತ್ ನಿಯಮ್ಯತೇ, ಜ್ಞಾಯತೇ, ಇತ್ಯಾದಿರೀತಿಯಾಗಿ ನಿಯಮನಾದಿಕರ್ಮತ್ವವನ್ನು ಜಗತ್ತಿನಲ್ಲಿ ಹೇಳಲಿಕ್ಕೆ ಬಂದರೂ ಸಹ ಉದ್ಭವಾದಿಕರ್ಮತ್ವವನ್ನು ಹೇಳಲಿಕ್ಕೆ ಬರುವುದಿಲ್ಲ. ಆದ್ದರಿಂದ ಕರ್ಮತ್ವವು ಜಗತ್ತಿನಲ್ಲಿ ಇಲ್ಲವಾದ್ದರಿಂದ ಕರ್ಮಾರ್ಥದಲ್ಲಿಯೂ ಷಷ್ಠೀವಿಭಕ್ತಿಯು ಬರುವುದಿಲ್ಲ. ಈ ರೀತಿಯಾಗಿ ಕರ್ತ್ರರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಷಷ್ಠೀವಿಭಕ್ತಿಯು ಬಾರದ ಕಾರಣ ಪ್ರಕೃತ-ದಲ್ಲಿ ಅಸ್ಯ ಎಂದು ಹೇಗೆ ಹೇಳಿದಿರಿ?

ಈ ಪ್ರಶ್ನೆಗೆ 'ಸಂಬಂಧಮಾತ್ರೇ ಷಷ್ಠೀ' ಎಂದು ಉತ್ತರಿಸುತ್ತಿದ್ದಾರೆ. ಷಷ್ಠೀವಿಭಕ್ತಿಯು ಇಲ್ಲಿ





ಕರ್ತ್ರರ್ಥದಲ್ಲಿಯೂ ಬಂದಿಲ್ಲ. ಕರ್ಮಾರ್ಥದಲ್ಲಿಯೂ ಬಂದಿಲ್ಲ. ಕೇವಲ ಸಂಬಂಧಾರ್ಥದಲ್ಲಿ ಬಂದಿದೆ ಎಂದು ಅರ್ಥ.

## ಅಶೇಷವಿಶೇಷತೋಽಪಿ ಎಂಬುದಕ್ಕೆ ವ್ಯಾಖ್ಯಾನ

ಪರಿಮಳ– ನನು 'ಸ್ವವ್ಯತಿರಿಕ್ತಪ್ರಪಂಚಸ್ಯ' ಇತಿ ವ್ಯಾಖ್ಯಾ ನ ಯುಕ್ತಾ । ಪ್ರಕೃತಿಜೀವ-ಕಾಲವೇದಾದೇರ್ನಿತ್ಯಸ್ಯ ಜನ್ಮಾದ್ಯಯೋಗಾತ್ ಇತ್ಯತ ಆಹ – ಅಶೇಷೇತಿ ॥ ತಥಾತ್ವೇ ಕೋಽರ್ಥಃ? ಇತ್ಯತ ಆಹ – ವಿಯದಿತಿ ॥ 'ವಿಶೇಷತ ಇತಿ ತೃತೀಯಾರ್ಥೇ ತಸಿಃ' ಇತ್ಯುಪೇತ್ಯ ಅರ್ಥಮಾಹ – ಅವಾಂತರಭೇದಸಹಿತೇತಿ ॥

'ಅಸ್ಯ' ಎಂಬ ಪದಕ್ಕೆ ತನಗಿಂತ ಅತಿರಿಕ್ತವಾದ ಪ್ರಪಂಚಕ್ಕೆ ಎಂಬುದಾಗಿ ಗ್ರಂಥದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಇದು ತಪ್ಪು. ಏಕೆಂದರೆ ತನಗಿಂತ ಅತಿರಿಕ್ತವಾದ ಪ್ರಕೃತಿ, ಜೀವ, ಕಾಲ, ವೇದ ಇವೇ ಮೊದಲಾದವುಗಳು ನಿತ್ಯವಾದ್ದರಿಂದ ಜನನಾದಿಗಳೇ ಇಲ್ಲವಲ್ಲ? ಈ ಪ್ರಶ್ನೆಗೆ 'ಅಶೇಷವಿಶೇಷತೋಽಪಿ ಇತ್ಯೇತತ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಹೀಗೆ ಅನ್ವಯ ಮಾಡಿದಾಗ ದೊರೆಯುವ ಅರ್ಥವನ್ನು ವಿಯತ್ ಇತ್ಯಾದಿ ವಾಕ್ಯದಿಂದ ಗ್ರಂಥಕಾರರೇ ಸ್ಪಷ್ಟಪಡಿಸಿದ್ದಾರೆ. ವಿಶೇಷತಃ ಎಂಬಲ್ಲಿ ತಸಿಪ್ರತ್ಯಯವಿದೆ. ಇದು ತೃತೀಯಾವಿಭಕ್ತ್ಯರ್ಥದಲ್ಲಿದೆ. ಇದನ್ನು ತಿಳಿಸುವುದಕ್ಕಾಗಿ ಅಶೇಷವಿಶೇಷತೋಽಪಿ ಎಂಬುದರ ಅರ್ಥವನ್ನು 'ಅವಾಂತರ-ಭೇದಸಹಿತ' ಎಂಬ ಪದದಿಂದ ಹೇಳಿದ್ದಾರೆ.

## ಅನೇಕರೀತಿಯಲ್ಲಿ ಸೃಷ್ಟಿ, ಸ್ಥಿತಿ, ಸಂಹಾರಗಳು

ಪರಿಮಳ– 'ನ ವಿಯದಶ್ರುತೇಃ' 'ಏತೇನ ಮಾತರಿಶ್ವಾ ವ್ಯಾಖ್ಯಾತಃ' 'ಜ್ಯೋಽತ ಏವ' ಇತ್ಯೇತೇಷು ಅಧಿಕರಣೇಷು ನಿತ್ಯಸ್ಯಾಪಿ ಪರಾಧೀನವಿಶೇಷಾವಾಪ್ತಿರೂಪಜನಿರುಚ್ಯತೇ । ಪ್ರಕೃತೇಃ ಜಡಸ್ಯ ಪರಿಣಾಮಃ । ತದಭಿಮಾನಿಶ್ರಿಯಃ ಸಿಸೃಕ್ಷುತ್ವಮ್ । ಗಗನಸ್ಯ ಮೂರ್ತ-ಸಂಯೋಗಿತ್ವಮ್ । ಮಾತರಿಶ್ವಾದಿಜೀವಸ್ಯ ದೇಹಯೋಗಃ । ಇಂದ್ರಿಯಾಣಾಮುಪಚಯಃ ಇತ್ಯಾದಿರೂಪೇಣ ವ್ಯುತ್ಪಾದ್ಯ ಅಶೇಷವಿಶೇಷಸಹಿತೋ ಯ ಉದ್ಭವಃ । ತಥಾ ಜೀವಾನಾಂ

ಪ್ರಕೃತ ಏತಾವತ್ತ್ವಂ ಹಿ ಇತ್ಯತ್ರೋಕ್ತದಿಶಾ ಅನ್ನಾದಿದಾನೇನ । ಅನ್ಯೇಷಾಂ ನಿತ್ಯಾನಾಮುತ್ತರಕಾಲಸಂಬಂಧಾದಿನಾ ಸ್ಥಿತಿರಿತ್ಯಾದಿ । ತಥಾ ಸಂಹೃತಿರಪಿ ಕಾರ್ಯಸ್ಯ ಜಡಸ್ಯ ಧ್ವಂಸಃ । ಜೀವಾನಾಂ ದೇಹಲಯಃ । ಶ್ರಿಯಃ ಅತ್ಯಂತಸಾಮೀಪ್ಯಮ್ ಇತ್ಯಾದಿ । ತದಾದಿದಮಿತ್ಯರ್ಥಃ।

'ನ ವಿಯದಶ್ರುತೇಃ' 'ಏತೇನ ಮಾತರಿಶ್ವಾ ವ್ಯಾಖ್ಯಾತಃ' 'ಜ್ಯೋಽತ ಏವ' ಈ ಅಧಿಕರಣಗಳಲ್ಲಿ ನಿತ್ಯವಾದ ಪದಾರ್ಥಗಳಿಗೂ ಕೂಡ ಪರಾಧೀನವಿಶೇಷದ ಸಂಬಂಧವಾಗುವುದೇ ಜನನವೆಂದು ಸಮರ್ಥಿಸಲಾಗಿದೆ. ಜಡಪ್ರಕೃತಿಗೆ ಪರಿಣಾಮವಾಗುವುದೇ ಜನನ. ಅದಕ್ಕೆ ಅಭಿಮಾನಿಯಾದ ಲಕ್ಷ್ಮೀದೇವಿಗೆ ಸೃಷ್ಟಿಮಾಡುವ ಬಯಕೆಯೇ ಜನನ. ಆಕಾಶಕ್ಕೆ ಮೂರ್ತಪದಾರ್ಥಗಳ ಸಂಯೋಗವೇ ಜನನ. ಮುಖ್ಯಪ್ರಾಣಾದಿ ಜೀವರಿಗೆ ದೇಹಸಂಬಂಧವಾಗುವುದೇ ಜನನ. ಇಂದ್ರಿಯಗಳಿಗೆ ಉಪಚಯಹೊಂದುವುದೇ ಜನನ. ಇತ್ಯಾದಿಯಾಗಿ ಅವಾಂತರ -ಭೇದಸಹಿತವಾದ ಉತ್ಪತ್ತಿಯನ್ನು ವಿವಕ್ಷಿಸಬೇಕು. ಅದರಂತೆ ಸ್ಥಿತಿಸಂಹಾರಾದಿಗಳನ್ನು ಕೂಡ ವಿವಕ್ಷಿಸಬೇಕು. ಪ್ರಕೃತ 'ಏತಾವತ್ತ್ವಂ ಹಿ' ಎಂಬಲ್ಲಿ ಹೇಳಿದಂತೆ ಅನ್ನಾದಿಗಳನ್ನು ಕೊಡುವುದೇ ಸ್ಥಿತಿ. ನಿತ್ಯಪದಾರ್ಥಗಳಿಗೆ ಉತ್ತರಕಾಲಸಂಬಂಧವನ್ನು ನೀಡುವುದೇ ಸ್ಥಿತಿ ಇತ್ಯಾದಿಯಾಗಿ ವಿವಕ್ಷಿಸಬೇಕು. ಇದರಂತೆ ಸಂಹಾರವನ್ನೂ ಕೂಡ ತಿಳಿಯಬೇಕು. ಜಡಭೂತವಾದ ಕಾರ್ಯಗಳಿಗೆ ಧ್ವಂಸವೇ ನಾಶ. ಜೀವರಿಗೆ ದೇಹದ ಲಯವೇ ನಾಶ. ಲಕ್ಷ್ಮೀದೇವಿಗೆ ಭಗವಂತನ ಅತ್ಯಂತಸಾಮೀಪ್ಯವೇ ನಾಶ. ಇತ್ಯಾದಿಯಾಗಿ ತಿಳಿಯಬೇಕು. ಆದ್ದರಿಂದ ಉತ್ಪತ್ತಿ ಸ್ಥಿತಿ ಲಯ ಮೊದಲಾದವುಗಳನ್ನು ಆಯಾಯ ವಸ್ತುಗಳ ಸ್ವಭಾವಕ್ಕನುಗುಣವಾಗಿ ಪರಮಾತ್ಮನು ನೀಡುತ್ತಾನೆ. ಇದನ್ನೇ 'ಯಥಾ ಸಂಭವಂ' ಎಂದು ಹೇಳಿದ್ದಾರೆ.

## 'ಏಕಶತಂ ಷಷ್ಠ್ಯರ್ಥಾಃ'

ಗುರ್ವರ್ಥದೀಪಿಕಾ – ತತ್ರ 'ವೈಶಿಷ್ಟ್ಯೋಪಪಾದನಾಯ' ಇತ್ಯತ್ರ 'ಸರ್ವೋತ್ತಮತ್ವರೂಪವೈಶಿಷ್ಟ್ಯೋಪಪಾದನಾಯ' ಇತ್ಯರ್ಥಃ । ಸಂಪ್ರದಾನಾಖ್ಯಸಂಬಂಧವಿಶೇಷಾಪೇಕ್ಷಾಯಾಂ 'ಸಂಪ್ರದಾನೇ ಚತುರ್ಥೀ' ಇತಿ ವಚನಾತ್ 'ಅಸ್ಮೈ ಉದ್ಭವಾದಿದಮ್' ಇತಿ ಸ್ಯಾದಿತಿ ಶಂಕಾಪರಿಹಾರಾಯ





'ಏಕಶತಂ ಷಷ್ಠ್ಯರ್ಥಾಃ' ಇತಿ ಸಾಮಾನ್ಯತಃ ಸಕಲಸಂಬಂಧೇಷ್ವಪಿ ಷಷ್ಠೀವಿಧಾನಾತ್ । ಸಂಬಂಧಮಾತ್ರೇ ಷಷ್ಠೀ ಇತ್ಯುಕ್ತಮ್ ।

ವೈಶಿಷ್ಟ್ಯೋಪಪಾದನಾಯ' ಎಂಬುದಕ್ಕೆ ಸರ್ವೋತ್ತಮತ್ವರೂಪವಾದ ವೈಶಿಷ್ಟ್ಯವನ್ನು ಉಪಪಾದನೆ ಮಾಡುವುದಕ್ಕೋಸ್ಕರ ಎಂದರ್ಥ. ಸಂಪ್ರದಾನ ಎಂಬ ಸಂಬಂಧವಿಶೇಷದ ಅಪೇಕ್ಷೆಯು ಪ್ರಾಪ್ತವಾದರೆ 'ಸಂಪ್ರದಾನೇ ಚತುರ್ಥೀ' ಎಂಬ ಮಾತಿನಂತೆ 'ಅಸ್ಯೈ ಉದ್ಭವಾದಿದಂ' ಎಂದು ಆಗಬೇಕಲ್ಲವೇ? ಎಂಬ ಆಶಂಕೆಯು ಬರುತ್ತದೆ. ಆದರೆ 'ಏಕಶತಂ ಷಷ್ಠ್ಯರ್ಥಾಃ' ಎಂಬ ನಿಯಮದ ಪ್ರಕಾರ ಸಕಲಸಂಬಂಧಾರ್ಥದಲ್ಲೂ ಕೂಡ ಷಷ್ಠೀವಿಭಕ್ತಿಯನ್ನು ವಿಧಿಸಲಾಗಿದೆ. ಆದ್ದರಿಂದ 'ಸಂಬಂಧಮಾತ್ರೇ ಷಷ್ಠೀ' ಎಂಬುದಾಗಿ ಹೇಳಿದ್ದಾರೆ.

## 'ವೈಶಿಷ್ಟ್ಯೋಪಪಾದನಾಯ' ಎಂದು ಸಮ್ಮುಗ್ಧವಾಗಿ ಪ್ರಯೋಗಿಸಲು ಕಾರಣವೇನು?

ವಾಕ್ಯಾರ್ಥಚಂದ್ರಿಕಾ– ವೈಶಿಷ್ಟ್ಯಾದಿಸರ್ವಪ್ರತಿಪಾದಕತ್ವಪ್ರತೀತಿಮ್ ಅಪಾಕರೋತಿ – ತತ್ರೇತ್ಯಾದಿನಾ ॥ ನಿಖಿಲಪೂರ್ಣಗುಣತ್ವಪಾರತಂತ್ರ್ಯಾದಿರಾಹಿತ್ಯಸಕಲಜಗಜ್ಜನಕತ್ವಾದಿನಾ ಸರ್ವವೈಶಿಷ್ಟ್ಯೇ ಪ್ರತಿಪಾದಿತೇ ಗುಣವತ್ವರಾಗಾದಿರಾಹಿತ್ಯಬಹುಜನಕತ್ವಾದಿ ಪ್ರಯುಕ್ತವೈಶಿಷ್ಟ್ಯಮುಪಪಾದಿತಂ ಭವತಿ ಕಿಮುತ ಇತ್ಯಾಶಯೇನ ಸಮ್ಮುಗ್ಧತಯಾ 'ವೈಶಿಷ್ಟ್ಯೋಪಪಾದನಾಯ' ಇತ್ಯುಕ್ತಮಿತಿ ಧ್ಯೇಯಮ್ ।

ವೈಶಿಷ್ಟ್ಯಾದಿ ಸರ್ವಪ್ರತಿಪಾದಕತ್ವಪ್ರತೀತಿಯನ್ನು ನಿರಾಕರಣೆ ಮಾಡಲು 'ತತ್ರ' ಇತ್ಯಾದಿ ಗ್ರಂಥವು ಹೊರಟಿದೆ. ನಿಖಿಲಪೂರ್ಣಗುಣತ್ವ, ಪಾರತಂತ್ರ್ಯಾದಿರಾಹಿತ್ಯ, ಸಕಲಜಗಜ್ಜನಕತ್ವ ಎಂಬ ಮೂರು ಧರ್ಮಗಳಿಂದ ನಾರಾಯಣನಲ್ಲಿ ಸರ್ವವೈಶಿಷ್ಟ್ಯವು ಪ್ರತಿಪಾದಿತವಾಗಿದೆ. ಇದರಿಂದ ಗುಣವತ್ವ, ರಾಗಾದಿರಾಹಿತ್ಯ, ಬಹುಜನಕತ್ವಪ್ರಯುಕ್ತವಾದ ಸರ್ವಸಾಧಾರಣವಾದ (ಇತರದೇವತೆಗಳಲ್ಲೂ ಇರುವ) ವೈಶಿಷ್ಟ್ಯವನ್ನು ಉಪಪಾದನೆ ಮಾಡಿದಂತಾಗುತ್ತದೆಂದು ಪ್ರತ್ಯೇಕವಾಗಿ ಹೇಳಬೇಕೇನು? ಹೀಗೆ ಕೈಮುತ್ಯನ್ಯಾಯದಿಂದಲೇ ವಂದ್ಯತ್ವಪ್ರಯೋಜಕವಾದ ವೈಶಿಷ್ಟ್ಯವು ಸಿದ್ಧವಾಗುತ್ತದೆ. ಇದನ್ನು ತಿಳಿಸುವ ಅಭಿಪ್ರಾಯದಿಂದ ಟೀಕೆಯಲ್ಲಿ 'ವೈಶಿಷ್ಟ್ಯೋಪಪಾದನಾಯ' ಎಂದು ಸಮ್ಮುಗ್ಧವಾಗಿ ಪದಪ್ರಯೋಗವನ್ನು ಮಾಡಿದ್ದಾರೆ.





ವಿವರಣೆ – ಟೀಕೆಯಲ್ಲಿ ಒಟ್ಟು ಎರಡು ಶಂಕೆಯನ್ನು ಮಾಡಿದ್ದಾರೆ. (1) ನಾರಾಯಣನು ಏಕೆ ವಂದ್ಯ-ನಾಗಿದ್ದಾನೆ? (2) ಬೇರೆ ದೇವತೆಗಳಿದ್ದಾಗ ಇವನನ್ನೇ ಏಕೆ ನಮಸ್ಕರಿಸಬೇಕು?

ಈ ಎರಡು ಪ್ರಶ್ನೆಗಳಿಗೆ ವೈಶಿಷ್ಟ್ಯಾದಿಗಳಿರುವುದರಿಂದ ನಾರಾಯಣನೇ ವಂದ್ಯನಾಗಿದ್ದಾನೆಂದು ಉತ್ತರಿಸ-ಲಾಯಿತು. ಮತ್ತು ಸರ್ವೋತ್ತಮತ್ವವಿರುವುದರಿಂದ ಬೇರೆಯವರು ವಂದ್ಯರಾಗುವುದಿಲ್ಲ. ಇವನೇ ವಂದ್ಯ-ನಾಗುತ್ತಾನೆಂದು ಇತರಪ್ರಹಾಣೇನ ವಂದ್ಯತ್ವವನ್ನು ತಿಳಿಯಬೇಕು. ಹೀಗೆ ಎರಡು ಉತ್ತರವನ್ನು ಹೇಳಿದ್ದಾರೆ. ಪರಮಾತ್ಮನಲ್ಲಿ ವೈಶಿಷ್ಟ್ಯವನ್ನು ಒಪ್ಪಿ ಮೂರು ವಿಶೇಷಣಗಳನ್ನು ನೀಡಿದ್ದಾರೆಂದು ಟೀಕೆಯಲ್ಲಿ ಹೇಳಿದರು. ಹಾಗಾದರೆ ಈ ಮೂರು ವಿಶೇಷಣಗಳಿರುವವನಲ್ಲಿ ಮಾತ್ರ ವೈಶಿಷ್ಟ್ಯವಿದೆ ಎಂದಾಯಿತು. ಜಗತ್ತಿನಲ್ಲಿ ಬೇರೆಯವರಲ್ಲಿ ಈ ವೈಶಿಷ್ಟ್ಯವೇ ಇಲ್ಲವೆಂದು ಒಪ್ಪಿದಂತಾಯಿತು.

(ಪರಿಮಳಟಪ್ಪಣಿಯಲ್ಲಿ ವೈಶಿಷ್ಟ್ಯವೆಂದರೆ ಸರ್ವೋತ್ತಮತ್ವ ಎಂದರ್ಥ. ಇದು ಇತರರಿಗಿಂತ ಅತಿಶಯ-ರೂಪವೂ ಕೂಡ ಆಗಿದೆ ಎಂದು ಹೇಳಿದರು. ಪ್ರಕೃತ ವಾಕ್ಯಾರ್ಥಚಂದ್ರಿಕಾಕಾರರು ವೈಶಿಷ್ಟ್ಯವೇ ವಂದ್ಯತ್ವಕ್ಕೆ ಪ್ರಯೋಜಕವಾಗಿದೆ. ವೈಶಿಷ್ಟ್ಯವು ಸರ್ವಸಾಧಾರಣವಾಗಿದೆ. ಈ ವೈಶಿಷ್ಟ್ಯವನ್ನು ಉಪಪಾದನೆ ಮಾಡುವುದ-ಕ್ಕಾಗಿ ಇತರರಿಗಿಂತ ಅತಿಶಯವಾಗಿರುವಿಕೆಯೇ ಬೇರೆ ಎಂದು ವಿವಕ್ಷಿಸುತ್ತಿದ್ದಾರೆ).

ವೈಶಿಷ್ಟ್ಯವು ಸರ್ವಸಾಧಾರಣವಾಗಿದೆ. ಗುಣವತ್ತ್ವ, ರಾಗಾದಿರಾಹಿತ್ಯ, ಬಹುಜನಕತ್ವ ಇವುಗಳಿದ್ದರೆ ವೈಶಿಷ್ಟ್ಯವು ಪ್ರಾಪ್ತವಾಗುತ್ತದೆ. ಗಣಪತಿ ಮೊದಲಾದ ದೇವತೆಗಳಲ್ಲೂ ಕೂಡ ಗುಣವತ್ತ್ವಾದಿ ಧರ್ಮ-ಗಳಿರುವುದರಿಂದ ವಂದ್ಯತ್ವಪ್ರಯೋಜಕವಾದ ವೈಶಿಷ್ಟ್ಯವು ಸಿದ್ಧವಾಗುತ್ತದೆ. ಆದ್ದರಿಂದ ಲೋಕಸಿದ್ಧವಾದ ಈ ವೈಶಿಷ್ಟ್ಯವು ಕೈಮುತ್ಯನ್ಯಾಯದಿಂದಲೇ ಪರಮಾತ್ಮನಲ್ಲಿ ಪ್ರಾಪ್ತವಾಗುತ್ತದೆಂದು ಸಮರ್ಥನೆ ಮಾಡಲು ಇತರಪ್ರಹಾಣೇನ ಸರ್ವವಂದ್ಯತ್ವಕ್ಕೆ ಪ್ರಯೋಜಕವಾದ ನಿಖಿಲಪೂರ್ಣಗುಣೈಕದೇಹತ್ವಾದಿ ವಿಶೇಷಣಗಳನ್ನು ಹೇಳಿರುತ್ತಾರೆ. ಆದ್ದರಿಂದ ಸರ್ವಸಾಧಾರಣವಾದ ವೈಶಿಷ್ಟ್ಯವೇ ಬೇರೆ ಇತರಪ್ರಹಾಣೇನ ಸರ್ವೋತ್ತಮತ್ವವೇ ಬೇರೆ. 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳು ಸರ್ವಸಾಧಾರಣವಾದ ವೈಶಿಷ್ಟ್ಯವನ್ನು ಉಪಪಾದನೆ ಮಾಡುವುದಕ್ಕಾಗಿ ಪ್ರಯುಕ್ತವಾಗಿರುವುದೇ ಇಲ್ಲ. ಪ್ರಕೃತ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳಿಂದ ನಿಖಿಲಪೂರ್ಣಗುಣತ್ವ, ಪಾರತಂತ್ರ್ಯಾದಿರಾಹಿತ್ಯ, ಜಗಜ್ಜನ್ಮಾದಿಕಾರಣತ್ವವೆಂಬ ಬೇರೆಲ್ಲೂ ಇಲ್ಲದ ಸರ್ವೋತ್ತಮತ್ವವು ನಾರಾಯಣನಲ್ಲಿ ಉಪಪಾದಿತವಾಗುತ್ತದೆ. ಇದರಿಂದ ಗುಣವತ್ತ್ವ, ರಾಗಾದಿರಾಹಿತ್ಯ, ಬಹುಜನಕತ್ವ ಪ್ರಯೋಜಕವಾದ ಸರ್ವಸಾಧಾರಣವಾದ ವೈಶಿಷ್ಟ್ಯವು ಕೈಮುತ್ಯನ್ಯಾಯ-ದಿಂದಲೇ ಪರಮಾತ್ಮನಲ್ಲಿ ಸಿದ್ಧವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ ಸಮುಗ್ಧವಾಗಿ 'ವೈಶಿಷ್ಟ್ಯೋಪಪಾ-ದನಾಯ' ಎಂದು ಹೇಳಿದ್ದಾರೆ.





ಇದನ್ನು ಗಮನಿಸಬೇಕು – ವೈಶಿಷ್ಟ್ಯವು ಎರಡು ವಿಧ. (1) ಅಸಾಧಾರಣಸರ್ವವೈಶಿಷ್ಟ್ಯ (2) ಸರ್ವಸಾಧಾರಣವೈಶಿಷ್ಟ್ಯ ಎಂದು. ಈ ಎರಡರಲ್ಲಿ ಅಸಾಧಾರಣಸರ್ವವೈಶಿಷ್ಟ್ಯವನ್ನು ಉಪಪಾದನೆ ಮಾಡುವುದಕ್ಕಾಗಿಯೇ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿಯಾಗಿ ವಿಶೇಷಣಗಳು ಹೊರಟವೆ. ಆದರೆ ಕೈಮುತ್ಯನ್ಯಾಯದಿಂದ ಸರ್ವಸಾಧಾರಣವಾದ ವೈಶಿಷ್ಟ್ಯವು ಕೂಡ ಸಿದ್ಧವಾಗುತ್ತದೆ. ಈ ಎರಡೂ ಬಗೆಯ ವೈಶಿಷ್ಟ್ಯಗಳನ್ನು ನಾರಾಯಣನಲ್ಲಿ ಉಪಪಾದನೆ ಮಾಡಲೇಬೇಕು. ಆಗ ಮಾತ್ರ ವಂದ್ಯತ್ವವು ಸಿದ್ಧವಾಗುತ್ತದೆ.

## ವೈಶಿಷ್ಟ್ಯೋಪಪಾದನಾಯ ಎಂಬುದಕ್ಕೆ ಮತ್ತೊಂದು ಪ್ರಯೋಜನ

ವಾಕ್ಯಾರ್ಥಚಂದ್ರಿಕಾ– ಯದ್ವಾ, ಪ್ರಕೃತೇ 'ನಿಖಿಲ' ಇತ್ಯಾದಿ ವಿಶೇಷಣಾನಾಂ ವೈಶಿಷ್ಟ್ಯಂ ವಂದ್ಯಾಂತರಾದತಿಶಯಶ್ಚ ಇತ್ಯುಭಯೋಪಪಾದಕತ್ವಾಭಿಪ್ರಾಯೇಣ 'ವೈಶಿಷ್ಟ್ಯೋಪಪಾದನಾಯ' ಇತ್ಯುಕ್ತಮಿತಿ ದ್ರಷ್ಟವ್ಯಮ್ ।

ಅಥವಾ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳು ಕೇವಲ ವೈಶಿಷ್ಟ್ಯಕ್ಕೆ ಉಪಪಾದಕವಲ್ಲ; ವಂದ್ಯಾಂತರಾತ್ ಅತಿಶಯಕ್ಕೂ ಕೂಡ ಉಪಪಾದಕವಾಗಿದೆ. ಹೀಗೆ ಎರಡಕ್ಕೂ ಕೂಡ ಉಪಪಾದಕವಾಗಿರುವುದರಿಂದ 'ವೈಶಿಷ್ಟ್ಯೋಪಪಾದನಾಯ' ಎಂಬುದಾಗಿ ಸಾಮಾನ್ಯವಾಗಿ ಟೀಕೆಯಲ್ಲಿ ಹೇಳಿರುತ್ತಾರೆ.

## ನಿಖಿಲಾಃ ಇತ್ಯಾದಿವಾಕ್ಯದಿಂದ ಪರಿಹಾರವಾಗುವ ನಾಕುಶಂಕೆಗಳು

ವಾಕ್ಯಾರ್ಥಚಂದ್ರಿಕಾ– 'ನಿಖಿಲಾನಾಂ ಪೂರ್ಣಗುಣಾಃ' ಇತಿ ಸಮಾಸಭ್ರಾಂತಿಂ, ನಿಖಿಲಪೂರ್ಣಶಬ್ದಯೋರೇಕಾರ್ಥತ್ವೇನ ದ್ವಂದ್ವಾನುಪಪತ್ತಿಶಂಕಾಮ್ ಏಕಪದಸ್ಯ ಸಂಖ್ಯಾರ್ಥತ್ವೇನ ಪೂರ್ವನಿಪಾತಶಂಕಾಂ, ಸತ್ತಾದಿಗುಣೈಕದೇಹವತ್ತ್ವಸ್ಯ ಜೀವಾದಿಸಾಧಾರಣ್ಯಾಪಾದಕತ್ವಾದ್ ದೋಷಶಬ್ದಸ್ಯ ರಾಗದ್ವೇಷಮೋಹಾರ್ಥತ್ವೇನ ಪ್ರಸಿದ್ಧೇಃ ತದ್ರಾಹಿತ್ಯಸ್ಯ ಪದ್ಮಾಪದ್ಮಭವಾದ್ಯತಿಶಯಾಹೇತುತ್ವಾತ್ ಸ್ವಪುತ್ರಾದ್ಯುದ್ಭವಾದಿದತ್ವಸ್ಯ ಸರ್ವಸಾಧಾರಣ್ಯಾನ್ನೈಷಾಂ ಸರ್ವವೈಶಿಷ್ಟ್ಯೋಪಪಾದಕತ್ವಮಿತಿ ಶಂಕಾಂ ಚ ಪರಿಹರತಿ – ನಿಖಿಲಾ ಇತ್ಯಾದಿನಾ ॥

ನಿಖಿಲಪೂರ್ಣಗುಣೈಕದೇಹಂ ಎಂಬಲ್ಲಿ ನಿಖಿಲಾನಾಂ ಪೂರ್ಣಗುಣಾಃ ನಿಖಿಲಪೂರ್ಣಗುಣಾಃ ಎಂಬುದಾಗಿ ಸಮಾಸಭ್ರಾಂತಿಯನ್ನು, ನಿಖಿಲ ಹಾಗೂ ಪೂರ್ಣಶಬ್ದಗಳು ಒಂದೇ ಅರ್ಥವುಳ್ಳವುಗಳಾಗಿವೆ. ಇವೆರಡಕ್ಕೆ ದ್ವಂದ್ವಸಮಾಸವು ಯುಕ್ತವಾಗುವುದಿಲ್ಲ ಎಂಬ ಆಕ್ಷೇಪವನ್ನು 'ನಿಖಿಲಾಃ' ಇತ್ಯಾದಿ

ಟೀಕಾವಾಕ್ಯದಿಂದ ಪರಿಹರಿಸುತ್ತಿದ್ದಾರೆ. ಮತ್ತು ಏಕಪದವು ಸಂಖ್ಯಾರ್ಥಕವಾಗಿರುವುದರಿಂದ ಪೂರ್ವನಿಪಾತವನ್ನು ಹೊಂದಬೇಕು ಎಂಬ ಆಕ್ಷೇಪವನ್ನು ಕೂಡ ಪರಿಹರಿಸುತ್ತಿದ್ದಾರೆ. ಅಷ್ಟೇ ಅಲ್ಲದೇ ಸತ್ವಾದಿಗುಣೈಕದೇಹವತ್ವವು ಜೀವಾದಿಸಾಧಾರಣ್ಯಾಪಾದಕವಾಗಿರುವುದರಿಂದ ವೈಶಿಷ್ಟ್ಯಕ್ಕೆ ಗುಣೈಕದೇಹತ್ವವು ಉಪಪಾದಕವಾಗುವುದಿಲ್ಲ. ದೋಷಶಬ್ದಕ್ಕೆ ರಾಗ, ದ್ವೇಷ, ಮೋಹ ಮೊದಲಾದ ಅರ್ಥಗಳು ಪ್ರಸಿದ್ಧವಾಗಿವೆ. ತದ್ರಾಹಿತ್ಯವು ಲಕ್ಷ್ಮೀ ಚತುರ್ಮುಖಬ್ರಹ್ಮ ಇವರಲ್ಲೂ ಇವೆ. ಇವರಿಂದ ಅತಿಶಯವು ನಾರಾಯಣನಲ್ಲಿದೆ ಎನ್ನಲು ನಿರ್ದೋಷತ್ವವು ಹೇತುವಾಗುವುದಿಲ್ಲ. ಅಸ್ಯೋದ್ಭವಾದಿತ್ವವು ಸರ್ವಸಾಧಾರಣವಾಗಿದೆ. ಏಕೆಂದರೆ ಸ್ವಪುತ್ರಾದ್ಯುದ್ಭವಾದಿದತ್ವವು ಎಲ್ಲರಲ್ಲೂ ಇದೆ. ಇದೂ ಕೂಡ ಸರ್ವವೈಶಿಷ್ಟ್ಯಕ್ಕೆ ಉಪಪಾದಕವಾಗುವುದಿಲ್ಲ. ಈ ಆಶಂಕೆಯನ್ನೂ ಕೂಡ 'ನಿಖಿಲಾಃ' ಇತ್ಯಾದಿ ಟೀಕಾವಾಕ್ಯದಿಂದ ಪರಿಹಾರ ಮಾಡುತ್ತಿದ್ದಾರೆ.

ವಿಶೇಷವಿವರಣೆ – 'ನಿಖಿಲಾಃ ನಿಶ್ಶೇಷಾಃ ಪೂರ್ಣಾಃ, ಪ್ರತ್ಯೇಕಮಪಿ ಅನವಧಿಕಾಃ ಗುಣಾಃ ಆನಂದಾದಯಃ' ಇತ್ಯಾದಿ ಟೀಕಾವಾಕ್ಯದಿಂದ ಪರಿಹಾರವಾಗುವ ಆಕ್ಷೇಪಗಳನ್ನು ಇಲ್ಲಿ ತೋರಿಸುತ್ತಿದ್ದಾರೆ. ಒಟ್ಟು ನಾಕು-ಬಗೆಯಲ್ಲಿ ಆಕ್ಷೇಪಗಳು ಪ್ರಾಪ್ತವಾಗುತ್ತಿವೆ.

(1) 'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಲ್ಲಿ ನಿಖಿಲಾನಾಂ ಪೂರ್ಣಗುಣಾಃ ಎಂಬುದಾಗಿ ಷಷ್ಠೀತತ್ಪುರುಷಸಮಾಸವನ್ನು ಮಾಡಬಹುದೆಂಬ ಶಂಕೆಯು ಬರುತ್ತದೆ. ಆಗ ಬ್ರಹ್ಮಾದಿದೇವತೆಗಳಲ್ಲಿ ಎಷ್ಟು ಗುಣಗಳವೆಯೋ ಅದೇ ಗುಣಗಳು ಪೂರ್ಣವಾಗಿ ಪರಮಾತ್ಮನಲ್ಲಿವೆ ಎಂದರ್ಥವಾಗುತ್ತದೆ. ಇದು ತಪ್ಪು. ಬೇರೆಯವರಲ್ಲಿರುವ ಗುಣಗಳೇ ಪರಮಾತ್ಮನಲ್ಲಿವೆ ಎಂದು ಸರ್ವಥಾ ತಿಳಿಯಬಾರದು. ಆದ್ದರಿಂದ ಷಷ್ಠೀ-ತತ್ಪುರುಷವನ್ನು ಆಶ್ರಯಿಸಿದರೆ ಸಿದ್ಧಾಂತಕ್ಕೆ ವಿರೋಧ ಬರುತ್ತದೆ. ನಿಖಿಲಾಶ್ಚ ತೇ ಪೂರ್ಣಾಶ್ಚ - ಎಂಬುದಾಗಿ ಕರ್ಮಧಾರಯಸಮಾಸವನ್ನೇ ಆಶ್ರಯಿಸಬೇಕು.

(2) ನಿಖಿಲಶಬ್ದಕ್ಕೂ ಪೂರ್ಣಶಬ್ದಕ್ಕೂ ದ್ವಂದ್ವಸಮಾಸವನ್ನು ಆಶ್ರಯಿಸಲು ಸಾಧ್ಯವಿಲ್ಲ. ನಿಖಿಲಾಶ್ಚ ಪೂರ್ಣಾಶ್ಚ' ಎಂಬುದಾಗಿ ದ್ವಂದ್ವಸಮಾಸವನ್ನು ಮಾಡಬೇಕೆಂದರೆ ಎರಡೂ ಪದಗಳ ಅರ್ಥ ಬೇರೆ ಬೇರೆ ಆಗಿರಬೇಕು. ಆದರೆ ನಿಖಿಲಶಬ್ದ ಹಾಗೂ ಪೂರ್ಣಶಬ್ದಗಳು ಏಕಾರ್ಥಕವಾಗಿರುವುದರಿಂದ ದ್ವಂದ್ವ-ಸಮಾಸವೂ ಕೂಡ ತಪ್ಪು.

(3) 'ಗುಣೈಕದೇಹಂ' ಎಂಬಲ್ಲಿ ಇರುವ ಏಕಪದವು ಸಂಖ್ಯಾರ್ಥಕವಾಗಿದೆ. ಆಗ ಸಂಖ್ಯಾರ್ಥಕವಾದ ಏಕಪದಕ್ಕೆ ಪೂರ್ವನಿಪಾತಸಂಜ್ಞೆಯನ್ನು ಹೇಳಿರುವುದರಿಂದ ಏಕಗುಣ ಎಂದೇ ಆಗಬೇಕು. 'ಗುಣೈಕದೇಹಂ' ಎಂದು ಹೇಗೆ ಹೇಳಿದರು?

(4) ಗುಣೈಕದೇಹತ್ವವು ವೈಶಿಷ್ಟ್ಯಕ್ಕೆ ಉಪಪಾದಕವೇ ಅಲ್ಲ. ಏಕೆಂದರೆ, ಪ್ರಾಕೃತವಾದ ಸತ್ವಾದಿಗುಣೈಕದೇಹವತ್ವವು ಜೀವಾದಿಗಳಲ್ಲೂ ಸಾಧಾರಣವಾಗಿದೆ. ಪರಮಾತ್ಮನಲ್ಲಿ ಮಾತ್ರ ಈ ಗುಣೈಕದೇಹತ್ವವು ಇದೆಯೆಂದು ಹೇಳಲಾಗದು. ಇದರಂತೆ ನಿರ್ದೋಷತ್ವವು ಕೂಡ ವೈಶಿಷ್ಟ್ಯಕ್ಕೆ ಉಪಪಾದಕವಲ್ಲ. ಇಲ್ಲಿರುವ ದೋಷಶಬ್ದಕ್ಕೆ ರಾಗ ದ್ವೇಷ ಮೋಹ ಮೊದಲಾದ ಅರ್ಥಗಳೇ ಲೋಕಪ್ರಸಿದ್ಧವಾಗಿವೆ. ತದ್ರಾಹಿತ್ಯವು ಲಕ್ಷ್ಮೀ, ಚತುರ್ಮುಖಬ್ರಹ್ಮಾದಿಗಳಲ್ಲೂ ಕೂಡ ಇರುವುದರಿಂದ ನಾರಾಯಣನಲ್ಲಿ ಮಾತ್ರ ನಿರ್ದೋಷತ್ವವಿದೆಯೆಂದು ಹೇಳಲು ಸಾಧ್ಯವಾಗುವುದಿಲ್ಲ. ಅಸ್ಯೋದ್ಭವಾದಿದತ್ವವೂ ಕೂಡ ವೈಶಿಷ್ಟ್ಯಕ್ಕೆ ಉಪಪಾದಕವಲ್ಲ. 'ಅಸ್ಯ' ಎಂಬ ಪದಕ್ಕೆ ಕಣ್ಣಿಗೆ ಕಾಣಸುತ್ತಿರುವ ಪುತ್ರಾದಿಗಳನ್ನು ವಿವಕ್ಷಿಸಿದಾಗ ಸಕಲ ಜೀವರಲ್ಲೂ ಈ ಸ್ವಪುತ್ರಾದಿ ಉದ್ಭವಾದಿತ್ವವು ಇರುವ ಕಾರಣ ಸರ್ವಸಾಧಾರಣವಾಯಿತು. ಹೀಗೆ ಮೂರು ವಿಶೇಷಣಗಳು ಸರ್ವವೈಶಿಷ್ಟ್ಯಕ್ಕೆ ಹೇಗೆ ಉಪಪಾದಕಗಳಾಗುತ್ತವೆ. ಈ ನಾಕು ಬಗೆಯ ಆಶಂಕೆಗಳನ್ನು 'ನಿಖಿಲಾಃ' ಇತ್ಯಾದಿ ಟೀಕಾವಾಕ್ಯದಿಂದ ಪರಿಹಾರ ಮಾಡುತ್ತಿದ್ದಾರೆ.

ಮೇಲಿನ ನಾಕುಬಗೆಯ ಆಶಂಕೆಗಳಿಗೆ 'ನಿಖಿಲಾಃ' ಇತ್ಯಾದಿ ವಾಕ್ಯದಿಂದ ತಿಳಿಸಿದ ಉತ್ತರ ಹೀಗಿದೆ. 'ನಿಖಿಲ' ಪದಕ್ಕೆ ನಿಃಶೇಷ ಎಂದರ್ಥ. 'ಪೂರ್ಣ' ಎಂಬ ಪದಕ್ಕೆ ಪ್ರತ್ಯೇಕವಾಗಿ ನಿರವಧಿಕವಾಗಿರುವವು ಎಂದರ್ಥ. ಇದರಿಂದ ಎರಡೂ ಶಬ್ದಗಳು ಏಕಾರ್ಥಕವಾಗಿವೆ ಎಂಬ ಆಶಂಕೆಯು ಪರಿಹಾರವಾಯಿತು. 'ಏಕ'ಪದಕ್ಕೆ ಕೇವಲ ಎಂಬರ್ಥವನ್ನು ಹೇಳಿದ್ದರಿಂದ ಸಂಖ್ಯಾರ್ಥಕವಾದ್ದರಿಂದ ಪೂರ್ವನಿಪಾತವಾಗಬೇಕೆಂಬ ಆಶಂಕೆಯು ಪರಿಹಾರವಾಯಿತು. 'ಗುಣೈಕದೇಹ' ಎಂದರೆ ಪ್ರಾಕೃತಾದಿ ಗುಣಗಳನ್ನು ವಿವಕ್ಷಿಸದೇ ಅಪ್ರಾಕೃತವಾದ ಆನಂದಾದಿಗುಣಗಳನ್ನೇ ವಿವಕ್ಷಿಸಬೇಕೆಂದು ವ್ಯಾಖ್ಯಾನ ಮಾಡಿರುವುದರಿಂದ ಜೀವಾದಿಸಾಧಾರಣವಾದ ಸತ್ವಾದಿಗುಣಗಳನ್ನು ವಿವಕ್ಷಿಸಬೇಕೆಂಬ ಆಶಂಕೆಯು ಪರಿಹಾರವಾಯಿತು. 'ನಿರ್ದೋಷ'ಶಬ್ದಕ್ಕೆ ಪಾರತಂತ್ರ್ಯಾದಿಗುಣಗಳಿಂದ ರಹಿತನಾದವನು ಎಂಬರ್ಥವನ್ನು ಹೇಳಿದ್ದರಿಂದ ರಾಗದ್ವೇಷಾದ್ಯರ್ಥಗಳನ್ನು ವಿವಕ್ಷಿಸಿ ಚತುರ್ಮುಖಾದಿಗಳು ಕೂಡ ನಿರ್ದುಷ್ಟರಾಗುತ್ತಾರೆಂಬ ಆಶಂಕೆಯು ಪರಿಹಾರವಾಯಿತು. 'ಅಸ್ಯೋದ್ಭವಾದಿದಂ' ಎಂಬಲ್ಲಿ ಅಸ್ಯ ಎಂಬ ಪದದಿಂದ ಪರಮಾತ್ಮಾತಿರಿಕ್ತವಾದ ಸಮಸ್ತಪ್ರಪಂಚವನ್ನು ವಿವಕ್ಷಿಸಬೇಕೆಂದು ಹೇಳಿದ್ದರಿಂದ ಕೇವಲ ಸ್ವಪುತ್ರಾದ್ಯುದ್ಭವಾದಿದತ್ವವನ್ನು ವಿವಕ್ಷಿಸಬಾರದೆಂದು ಸ್ಪಷ್ಟವಾಯಿತು.

## ಏಕಶಬ್ದವು ಕೇವಲಾರ್ಥವೆನ್ನಲು ಬಹಳ ಅರ್ಥವಿದೆ

ವಾಕ್ಯಾರ್ಥಚಂದ್ರಿಕಾ – ಏಕಶಬ್ದಃ ಕೇವಲಾರ್ಥ ಇತಿ ॥ ಸಂಖ್ಯಾರ್ಥತ್ವೇ ಹ್ಯೇಕಶಬ್ದಸ್ಯ ನ ತಾವದತ್ರ ಪೂರ್ವೇಣ ವಿಶೇಷಣಸಮಾಸೋಽಂಗೀಕರ್ತುಂ ಯುಕ್ತಃ, ತಸ್ಯ 'ದಿಕ್ ಸಂಖ್ಯೇ





ಸಂಜ್ಞಾಯಾಮ್' ಇತಿ ಸಂಜ್ಞಾಯಾಮೇವ ನಿಯಮಿತತ್ವೇನ ಪ್ರಕೃತೇ ತು 'ಏಕಶಾಠೀ' ಇತ್ಯಾದಾವಿವ ವಿಶಿಷ್ಟಶಬ್ದಸ್ಯ ಸಂಜ್ಞಾತ್ವಾಭಾವೇನ ತದಸಂಭವಾತ್, ಅತಃ ಸಂಖ್ಯಾರ್ಥಕೈಕಶಬ್ದಸ್ಯ ಸಮಾನಾಧಿಕರಣೇನ ಸಮಾಸವಿಧಾನಾರ್ಥಂ ಪ್ರವೃತ್ತೇನ ಪೂರ್ವಕಾಲೈಕೇತಿ ಸೂತ್ರೇಣೈವ ಸ ವಾಚ್ಯಃ। (ಸರ್ವ-ಜರತ್ ಪುರಾಣನವಕೇವಲಾಃ ಸಮಾನಾಧಿಕರಣೇನ' ಇತಿ ಸೂತ್ರಶೇಷೋ ದ್ರಷ್ಟವ್ಯಃ) ನ ಚಾಸೌ ವಕ್ತುಂ ಶಕ್ಯಃ, ತಥಾ ಸತಿ ತಸ್ಯ ಪೂರ್ವಕಾಲಿಕೇತಿ ಸಮಾಸಶಾಸ್ತ್ರೇ ಪ್ರಥಮಾನಿರ್ದಿಷ್ಟತಯಾ 'ಪ್ರಥಮಾ-ನಿರ್ದಿಷ್ಟಂ ಸಮಾಸ ಉಪಸರ್ಜನಮ್' ಇತ್ಯುಪಸರ್ಜನತ್ವೇನ 'ಉಪಸರ್ಜನಂ ಪೂರ್ವಮ್' ಇತಿ ಪೂರ್ವನಿಪಾತಪ್ರಸಂಗಾತ್ । 'ನಿಖಿಲಪೂರ್ಣಗುಣಾ ಏಕೋ ದೇಹೋ ಯಸ್ಯ' ಇತಿ ಬಹುವ್ರೀಹ್ಯಾಶ್ರಯಣೇಽಪಿ 'ಬಹುವ್ರೀಹೌ ಸರ್ವನಾಮಸಂಖ್ಯಯೋಃ ಪ್ರಾಙ್ನಿಪಾತೋ ವಕ್ತವ್ಯಃ' ಇತಿ ಸಂಖ್ಯಾಯಾಃ ಪ್ರಾಙ್ನಿಪಾತನಿಯಮನಾತ್ ಏಕಶಬ್ದಸ್ಯ ಪೂರ್ವನಿಪಾತಪ್ರಸಂಗ ಏವ । ಅತ ಏವ ಅನಿತ್ಯೈಕರೂಪಾ ಇತ್ಯಾದೌ ಅನಿತ್ಯಮೇಕಂ ರೂಪಂ ಯೇಷಾಮ್ ಇತಿ ತ್ರಿಪದಬಹುವ್ರೀಹ್ಯನಾಶ್ರಯಣಮಭಿಯುಕ್ತಾನಾಮ್ । ಚತುರ್ಥೇ (೪.೨/೫೪೭೨) ಚ ಅನುಮಾನಮೇಕಂ ಶರಣಂ ಯಸ್ಯೇತಿ ತ್ರಿಪದಬಹುವ್ರೀಹ್ಯನಾಶ್ರಯಣಂ ಟೀಕಾಕಾರಾಣಾಮಪಿ। ಕೇವಲಾರ್ಥತ್ವೇ ತು ನ ತತ್ಪ್ರಸಂಗ ಇತ್ಯುಕ್ತರೀತ್ಯಾ ಸಮಾಸದ್ವಯಮಪಿ ಉಪಪನ್ನಮಿತಿ ಭಾವಃ।

'ಏಕಶಬ್ದಃ ಕೇವಲಾರ್ಥಃ' ಎಂಬುದಾಗಿ ಟೀಕೆಯಲ್ಲಿ ಏಕಶಬ್ದಕ್ಕೆ ಕೇವಲ ಎಂಬರ್ಥವನ್ನು ವಿವಕ್ಷಿಸಬೇಕೆಂದು ಹೇಳಿದ್ದಾರೆ. ಇಲ್ಲದಿದ್ದರೆ 'ಗುಣೈಕ' ಎಂಬ ಪದಪ್ರಯೋಗವೇ ತಪ್ಪಾಗುತ್ತಿತ್ತು. ಅದು ಹೀಗೆ. ಏಕಶಬ್ದಕ್ಕೆ 'ಸಂಖ್ಯೆ' ಎಂಬರ್ಥವನ್ನು ವಿವಕ್ಷಿಸಿದರೆ ಗುಣ ಎಂಬ ಪೂರ್ವಪದದ ಜೊತೆ ವಿಶೇಷಣಸಮಾಸವನ್ನು ಅಂಗೀಕಾರ ಮಾಡುವುದು ಅಯುಕ್ತವಾಗುತ್ತದೆ. ಈ ವಿಶೇಷಣ ಸಮಾಸವು 'ದಿಕ್‌ಸಂಖ್ಯೇ ಸಂಜ್ಞಾಯಾಮ್' ಎಂಬ ಸೂತ್ರದ ಪ್ರಕಾರ ದಿಗ್ವಾಚಕವಾದ ಮತ್ತು ಸಂಖ್ಯಾವಾಚಕವಾದ ಶಬ್ದಗಳಿಗೆ ಸಂಜ್ಞೆಯಲ್ಲಷ್ಟೇ ಪ್ರಾಪ್ತವಾಗುತ್ತದೆಂದು ನಿಯಮ ಮಾಡಲಾಗಿದೆ. 'ಏಕಾ ಚ ಸಾ ಶಾಠೀ ಚ = ಏಕಶಾಠೀ' ಇತ್ಯಾದಿ ವಿಶಿಷ್ಟವಾಚಕವಾದ ಶಬ್ದಗಳಿಗೆ ಸಂಜ್ಞಾತ್ವ ಇದೆ. ಆದ್ದರಿಂದ ಸಂಖ್ಯಾವಾಚಕವಾದರೂ ಕೂಡ ವಿಶೇಷಣಸಮಾಸವು ಪ್ರಾಪ್ತವಾಗುತ್ತದೆ. ವಿಶೇಷಣಸಮಾಸವು ಪ್ರಾಪ್ತವಾಗುತ್ತದೆ. ಪ್ರಕೃತ ಗುಣೈಕ ಎಂಬ ಪದವು ಸಂಜ್ಞಾವಾಚಕಪದವಲ್ಲ. ಹಾಗಾಗಿ ದಿಕ್ ಸಂಖ್ಯೇ ಸಂಜ್ಞಾಯಾಮ್ ಎಂಬ ಸೂತ್ರದಿಂದ ವಿಶೇಷಣಸಮಾಸವು ಪ್ರಾಪ್ತವಾಗುವುದಿಲ್ಲ.

ಆದ್ದರಿಂದ ಸಂಖ್ಯಾರ್ಥಕವಾದ ಏಕಶಬ್ದಕ್ಕೆ ಸಮಾನಾಧಿಕರಣವಾದ ಮತ್ತೊಂದು ಪದದ ಜೊತೆ ಸಮಾಸವನ್ನು ವಿಧಾನ ಮಾಡುವುದಕ್ಕಾಗಿ 'ಪೂರ್ವಕಾಲೈಕ' ಇತ್ಯಾದಿ ಸೂತ್ರವು ಹೊರಟಿದೆ. 'ಪೂರ್ವ-

ಕಾಲೈಕ ಸರ್ವಜರತ್ ಪುರಾಣನವಕೇವಲಾ ಸಮಾನಾಧಿಕರಣೇನ' ಈ ಸೂತ್ರವು 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರಕ್ಕೆ ಅಪವಾದವಾಗಿ ಹೊರಟಿದೆ. ಆದ್ದರಿಂದ ಗುಣೈಕ ಎಂಬಲ್ಲಿ ಈ ಸೂತ್ರದ ಪ್ರಕಾರ ಸಮಾಸವಾಗುತ್ತದೆಂದು ಹೇಳಬೇಕು. ಆದರೆ ಇದೂ ಕೂಡ ಸಾಧ್ಯವಿಲ್ಲ. ಏಕೆಂದರೆ, ಪೂರ್ವಕಾಲೈಕ ಎಂಬ ಸಮಾಸಶಾಸ್ತ್ರದಲ್ಲಿ ಯಾವುದು ಪ್ರಥಮಾನಿರ್ದಿಷ್ಟವಾಗಿದೆಯೋ ಅದು ಉಪ-ಸರ್ಜನಸಂಜ್ಞೆಯನ್ನು ಹೊಂದುತ್ತದೆ. 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಂ' ಎಂಬ ಸೂತ್ರದಂತೆ ಪೂರ್ವ, ಕಾಲ, ಏಕ ಇತ್ಯಾದಿ ಪದಗಳು ಉಪಸರ್ಜನಸಂಜ್ಞೆಯನ್ನು ಹೊಂದುತ್ತವೆ. ಆಗ 'ಉಪಸರ್ಜನಂ ಪೂರ್ವಂ' ಎಂಬ ಸೂತ್ರದ ಪ್ರಕಾರ ಪೂರ್ವನಿಪಾತವು ಬರಬೇಕು. ಪುನಃ ಏಕಗುಣ ಎಂದೇ ಆಗಬೇಕು ಗುಣೈಕ ಎಂದಾಗುವುದಿಲ್ಲ ಎಂಬ ಆಕ್ಷೇಪ ಬಂದೇ ಬರುತ್ತದೆ.

'ನಿಖಿಲಪೂರ್ಣಗುಣಾಃ ಏಕಃ ದೇಹಃ ಯಸ್ಯ ಸಃ' ಎಂಬುದಾಗಿ ಬಹುಪದಬಹುವ್ರೀಹಿ-ಸಮಾಸವನ್ನು ಆಶ್ರಯಿಸುತ್ತೇವೆ. ಈ ಪಕ್ಷದಲ್ಲಿ ವಿಶೇಷಣಸಮಾಸವಾಗದ ಕಾರಣ ಪೂರ್ವನಿಪಾತ ಬರಲಿ ಎಂಬ ಆಕ್ಷೇಪವು ಪ್ರಾಪ್ತವಾಗುವುದಿಲ್ಲ?

ಇದು ಕೂಡ ತಪ್ಪು. ಏಕೆಂದರೆ, 'ಬಹುವ್ರೀಹೌ ಸರ್ವನಾಮಸಂಖ್ಯಯೋಃ ಪ್ರಾಙ್ ನಿಪಾತೋ ವಕ್ತವ್ಯಃ' ಎಂಬ ಸೂತ್ರವು ಬಹುವ್ರೀಹಿ ಸಮಾಸದಲ್ಲೂ ಕೂಡ ಸರ್ವನಾಮಶಬ್ದಗಳಿಗೆ ಹಾಗೂ ಸಂಖ್ಯಾ-ವಾಚಕಶಬ್ದಗಳಿಗೆ ಪೂರ್ವನಿಪಾತವನ್ನು ವಿಧಾನ ಮಾಡುತ್ತಿದೆ. ಪ್ರಕೃತ ಏಕಶಬ್ದವು ಸಂಖ್ಯಾವಾಚಕವಾಗಿ-ರುವುದರಿಂದ ಬಹುವ್ರೀಹಿಸಮಾಸದಲ್ಲಿ ಸೇರಿರುವುದರಿಂದ ಪೂರ್ವನಿಪಾತವನ್ನು ಹೊಂದಬೇಕು. ಆಗ 'ಏಕನಿಖಿಲಪೂರ್ಣಗುಣದೇಹಃ' ಎಂದಾಗಬೇಕಾಗುತ್ತದೆ. 'ನಿಖಿಲಪೂರ್ಣಗುಣೈಕದೇಹಃ' ಎಂದಾಗು-ವುದಿಲ್ಲ. ಬಹುವ್ರೀಹಿಸಮಾಸದಲ್ಲಿ ಈ ನಿಯಮ ಇರುವುದರಿಂದಲೇ 'ಅನಿತ್ಯೈಕರೂಪ' ಇತ್ಯಾದಿ ಸ್ಥಳದಲ್ಲಿ 'ಅನಿತ್ಯಂ ಏಕಂ ರೂಪಂ ಯೇಷಾಂ ತೇ ಅನಿತ್ಯೈಕರೂಪಾಃ' ಎಂಬುದಾಗಿ ತ್ರಿಪದಬಹುವ್ರೀಹಿ-ಯನ್ನು ಅಭಿಯುಕ್ತರು ಆಶ್ರಯಿಸುವುದಿಲ್ಲ. ಒಂದು ವೇಳೆ ಬಹುಪದಬಹುವ್ರೀಹಿಯನ್ನು ಆಶ್ರಯಿಸಿದರೆ ಏಕಶಬ್ದವು ಪೂರ್ವನಿಪಾತವನ್ನು ಹೊಂದಬೇಕಾಗುತ್ತಿತ್ತು.

ಅಷ್ಟೇ ಅಲ್ಲದೇ ನಾಕನೆಯ ಅಧ್ಯಾಯದಲ್ಲಿ 'ಅನುಮಾನೈಕಶರಣಃ' ಎಂಬ ಅನುವ್ಯಾಖ್ಯಾನದ ಪದಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಸುಧಾಕಾರರು 'ಅನುಮಾನಂ ಏಕಂ ಶರಣಂ ಯಸ್ಯ ಸಃ' ಎಂಬುದಾಗಿ ತ್ರಿಪದಬಹುವ್ರೀಹಿಯನ್ನು ಆಶ್ರಯಿಸಿರುವುದಿಲ್ಲ. ಹಾಗೆ ಆಶ್ರಯಿಸಿದ್ದರೆ ಏಕಪದಕ್ಕೆ ಪೂರ್ವ-ನಿಪಾತವು ಬರಬೇಕಾಗುತ್ತಿತ್ತು. ಹೀಗೆ ಅಭಿಯುಕ್ತರ ಪ್ರಯೋಗಗಳಿಗೆ ಅನುಸಾರಿಯಾಗಿ ಇಲ್ಲಿಯೂ

ಕೂಡ 'ನಿಖಿಲಪೂರ್ಣಗುಣಗಳುಳ್ಳ ಒಂದು ದೇಹವಿರುವವನು' ಎಂಬುದಾಗಿ ಬಹುವ್ರೀಹಿಸಮಾಸವನ್ನು ಆಶ್ರಯಿಸಬಾರದು.

ಈ ಸಮಸ್ಯೆಗಳಿರುವುದರಿಂದ ಟೀಕೆಯಲ್ಲಿ ಏಕಶಬ್ದಕ್ಕೆ ಕೇವಲ ಎಂಬರ್ಥವನ್ನು ಹೇಳಿದ್ದಾರೆ. ಅನುವ್ಯಾಖ್ಯಾನದ ಪದ್ಯದಲ್ಲಿರುವ ಏಕಶಬ್ದಕ್ಕೆ ಸಂಖ್ಯೆಯೆಂಬ ಅರ್ಥವು ವಿವಕ್ಷಿತವಲ್ಲ. ಕೇವಲ ಎಂಬರ್ಥವು ವಿವಕ್ಷಿತವಾಗಿದೆ. ಆದ್ದರಿಂದ ವಿಶೇಷಣಸಮಾಸವನ್ನು ಮಾಡಬಹುದು. ಆಗ ಕೇವಲ ಗುಣಗಳೇ ಶರೀರವಾಗಿ ಉಳ್ಳವನು ಎಂಬರ್ಥವು ತಿಳಿಯುತ್ತದೆ. ತ್ರಿಪದಬಹುವ್ರೀಹಿಯನ್ನು ಕೂಡ ಮಾಡಬಹುದು. ಆಗ ನಿಖಿಲಪೂರ್ಣಗುಣಗಳುಳ್ಳ ಒಂದು ದೇಹವಿರುವವನು ಎಂಬರ್ಥವು ಸಿದ್ಧವಾಗುತ್ತದೆ. ಹೀಗೆ ಕೇವಲಾರ್ಥವನ್ನು ವಿವಕ್ಷಿಸಿದಾಗ ವಿಶೇಷಣಸಮಾಸ ಹಾಗೂ ಬಹುವ್ರೀಹಿಸಮಾಸಗಳು ಉಪಪನ್ನವಾಗುತ್ತವೆ.

ವಿಶೇಷವಿವರಣೆ– 'ಗುಣೈಕದೇಹಂ' ಎಂಬಲ್ಲಿ ಯೇ ಕೇ ಚ ತೇ ಗುಣಾಶ್ಚ = ಏಕಗುಣಾಃ ಎಂಬುದಾಗಿ ವಿಶೇಷಣಸಮಾಸವನ್ನು ಹೇಳಲು ಸಾಧ್ಯವೇ ಇಲ್ಲ. ಪೂರ್ವನಿಪಾತದ ಬಗ್ಗೆ ವಿಚಾರವಿರಲಿ. ಇಲ್ಲಿ ಸಮಾಸವಾಗುವುದಕ್ಕೆ ಅವಕಾಶವಿಲ್ಲ. ಏಕೆಂದರೆ, ಏಕಶಬ್ದಕ್ಕೆ ಸಂಖ್ಯಾ ಎಂಬರ್ಥವನ್ನು ವಿವಕ್ಷಿಸಿದರೆ ಪೂರ್ವ ಎನಿಸಿದ ಗುಣ ಎಂಬ ಶಬ್ದದ ಜೊತೆ ಸಮಾಸವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ, 'ದಿಕ್‌ಸಂಖ್ಯೇ ಸಂಜ್ಞಾಯಾಮ್' ಎಂಬ ಸೂತ್ರವು ದಿಕ್ ಮತ್ತು ಸಂಖ್ಯಾವಾಚಕವಾದ ಸಂಜ್ಞೆಯಲ್ಲಿ ಮಾತ್ರ ಸಮಾಸವಾಗುತ್ತದೆಂದು ವಿಧಾನ ಮಾಡುತ್ತಿದೆ. 'ಏಕಶಾಲೀ' ಎಂಬಲ್ಲಿ ಏಕಶಬ್ದವು ಸಂಖ್ಯಾವಾಚಕವಾಗಿದೆ. ಮತ್ತು ಏಕಶಾಲೀ ಎಂಬುದು ಸಂಜ್ಞೆಯಾಗಿದೆ. (ವ್ಯಕ್ತಿಯನ್ನು ಕರೆಯುವ ಶಬ್ದವಾಗಿದೆ). ಇಂಥ ವಿಶಿಷ್ಟವಾಚಕವಾದ ಶಬ್ದಕ್ಕೆ ವಿಶೇಷಣಸಮಾಸವನ್ನು ಮಾಡಬಹುದು. ಇದರಂತೆ ಗುಣೈಕ ಎಂಬುದು ಸಂಜ್ಞೆಯಾಗಿಲ್ಲ. (ಒಬ್ಬ ವ್ಯಕ್ತಿಯನ್ನು ಕರೆಯುವ ಶಬ್ದವಾಗಿಲ್ಲ). ಆದ್ದರಿಂದ 'ಏಕಶಾಲೀ' ಎಂಬ ವಿಶಿಷ್ಟಶಬ್ದಕ್ಕೆ ವಿಶೇಷಣಸಮಾಸವನ್ನು ಮಾಡಿದಂತೆ ಇಲ್ಲಿ ವಿಶೇಷಣಸಮಾಸವನ್ನು ಮಾಡಲು ಸಾಧ್ಯವಾಗುವುದಿಲ್ಲ.

ಯಾವ ಸೂತ್ರದಿಂದ ಸಮಾಸಮಾಡಬೇಕೆಂಬುದು ಇಲ್ಲಿ ಮುಖ್ಯವಾದ ವಿಚಾರ. 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರದಿಂದ ಸಮಾಸ ಮಾಡಲು ಸಾಧ್ಯವಾಗದಿರಬಹುದು. ಆದರೆ ಇದಕ್ಕೆ ಅಪವಾದವಾಗಿ ಹೊರಟಿರುವ 'ಪೂರ್ವಕಾಲೈಕ ಸರ್ವಜರತ್ ಪುರಾಣನವಕೇವಲಾಃ ಸಮಾನಾಧಿಕರಣೇನ' ಎಂಬ ಈ ಸೂತ್ರವು 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರದಿಂದ ಪ್ರಾಪ್ತವಾದದ್ದನ್ನೇ ಹೇಳಲು ಹೊರಟಿದ್ದರೆ ಇದು ವ್ಯರ್ಥವೇ ಆಗುತ್ತಿತ್ತು. ಆದ್ದರಿಂದ ಪೂರ್ವ, ಕಾಲ, ಏಕ ಮೊದಲಾದ ಶಬ್ದಗಳು ಸಮಾನವಿಭಕ್ತಿಯುಳ್ಳ ಬೇರೆ ಶಬ್ದಗಳ ಜೊತೆ ಸಮಾಸವನ್ನು ಹೊಂದುತ್ತವೆಂಬುದು ಈ ಸೂತ್ರದ





ಅಭಿಪ್ರಾಯ. ಇಲ್ಲಿ 'ಸಮಾನಾಧಿಕರಣೇನ' ಎಂದು ಹೇಳಿದ್ದರಿಂದ ವಿಶೇಷಣವಾಚಕಪದದ ಜೊತೆ ಸಮಾಸಹೊಂದುತ್ತದೆ ಎಂಬುದು ಅಭಿಪ್ರಾಯವಾಗುತ್ತದೆ. ಇದು 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬುದರಿಂದಲೇ ಗತಾರ್ಥವಾಗುವುದರಿಂದ ಪುನಃ ಈ ಸೂತ್ರ ಹೊರಟದ್ದು ವ್ಯರ್ಥವಾಗುತ್ತಿತ್ತು. ಆದರೂ ಕೂಡ 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರದಿಂದ ಎಲ್ಲಿ ಸಮಾಸವು ಪ್ರಾಪ್ತವಾಗುವುದಿಲ್ಲವೋ ಅಲ್ಲಿ ಸಮಾಸವನ್ನು ವಿಧಾನ ಮಾಡುವುದಕ್ಕಾಗಿ 'ಪೂರ್ವಕಾಲೈಕ' ಇತ್ಯಾದಿ ಸೂತ್ರವು ಹೊರಟಿದೆ. ಪ್ರಕೃತ ಸಂಜ್ಞೆಯಾಗಿದ್ದರೆ ವಿಶೇಷಣಂ ವಿಶೇಷ್ಯೇಣ ಬಹುಲಮ್ ಎಂಬುದರಿಂದಲೇ ಸಮಾಸವಾಗುತ್ತದೆ. ಸಂಜ್ಞೆಯಾಗದಿದ್ದರೆ 'ಪೂರ್ವಕಾಲೈಕ' ಇತ್ಯಾದಿ ಸೂತ್ರದಿಂದ ಸಮಾಸವಾಗುತ್ತದೆ. ಆದ್ದರಿಂದ 'ಗುಣೈಕ' ಎಂಬಲ್ಲಿ ಪೂರ್ವಕಾಲೈಕ ಎಂಬ ಸೂತ್ರದ ಪ್ರಕಾರ ಸಮಾಸವಾಗುತ್ತದೆ.

ಹೀಗೆ ಪೂರ್ವಕಾಲೈಕ ಎಂಬ ಸೂತ್ರದ ಪ್ರಕಾರ ಗುಣೈಕ ಎಂಬಲ್ಲಿ ಸಮಾಸವಾಗುತ್ತದೆಂದು ಹೇಳಬೇಕು. ಆದರೆ ಸಮಾಸಶಾಸ್ತ್ರದಲ್ಲಿ ಯಾವುದನ್ನು ಪ್ರಥಮಾನಿರ್ದೇಶಮಾಡಲಾಗಿರುತ್ತದೋ ಅದು ಉಪಸರ್ಜನ-ಸಂಜ್ಞೆಯನ್ನು ಹೊಂದುತ್ತದೆ. 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಎಂಬ ಸೂತ್ರವು ಇದನ್ನು ಹೇಳುತ್ತಿದೆ. ಆಗ 'ಉಪಸರ್ಜನಂ ಪೂರ್ವಮ್' ಎಂಬ ಸೂತ್ರದ ಪ್ರಕಾರ ಪೂರ್ವನಿಪಾತವು ಪ್ರಾಪ್ತವಾಗಿ ಏಕಗುಣ ಎಂದೇ ಆಗಬೇಕು. ಗುಣೈಕ ಎಂದು ಆಗುವುದಿಲ್ಲ. ಇಷ್ಟು ಆಶಂಕೆಯ ಅಭಿಪ್ರಾಯ.

ಕೇವಲ ಎಂಬರ್ಥ ಒಪ್ಪಿದಾಗ ಮಾತ್ರ ಈ ಆಶಂಕೆಯು ಪರಿಹಾರವಾಗುತ್ತದೆಂದು ಇದಕ್ಕೆ ಉತ್ತರ.

## ಅರ್ಥದ ಬಗ್ಗೆಯೂ ಗಮನವಿರಲಿ

ವಾಕ್ಯಾರ್ಥಚಂದ್ರಿಕಾ– ಯದ್ಯಪ್ಯತ್ರ ಟೀಕಾಕೃದಭಿಮತೇ ಬಹುವ್ರೀಹೌ ಸಂಖ್ಯಾರ್ಥತ್ವ-ಪ್ರಯುಕ್ತ ಪೂರ್ವನಿಪಾತವಾರಣೇಽಪಿ ಏಕಶಬ್ದಸ್ಯ ನ ಸರ್ವನಾಮತ್ವಪ್ರಯುಕ್ತಪೂರ್ವನಿಪಾತ-ವಾರಣಂ ಸಂಭವತೀತ್ಯನರ್ಥಕಮೇವ ಕೇವಲಾರ್ಥತ್ವಾಶ್ರಯಣಮ್ । ನ ಚ ಕೇವಲಾರ್ಥಸ್ಯ ಅಸರ್ವನಾಮತ್ವಾತ್ ನೋಕ್ತದೋಷ ಇತಿ ವಾಚ್ಯಮ್ ।

ಏಕೋಽನ್ಯಾರ್ಥೇ ಪ್ರಧಾನೇ ಚ ಪ್ರಥಮೇ ಕೇವಲೇ ತಥಾ ।
ಸಾಧಾರಣೇ ಸಮಾನೇಽಲ್ಪೇ ಸಂಖ್ಯಾಯಾಂ ಚ ಪ್ರಯುಜ್ಯತೇ ॥'

ಇತ್ಯಭಿಧಾನಾತ್ ಸಂತ್ಯೇಕಶಬ್ದಸ್ಯ ಅಷ್ಟಾವರ್ಥಾಃ । ತತ್ರ ಏಕಶಬ್ದಃ ಸಂಖ್ಯಾಯಾಂ ನಿತ್ಯೈಕ-ವಚನಾಂತಃ । ಅನ್ಯೇಷು ತು ಸಪ್ತಸು ವಚನಾಂತರಮಪಿ ಸ್ಯಾದೇವ । ಏಕೇ ಏಕೇಷಾಮಿತಿ ಯಥಾ

ಇತ್ಯಭಿಯುಕ್ತವ್ಯಾಖ್ಯಾನೇನ ಕೇವಲಾರ್ಥಸ್ಯಾಪಿ ತಸ್ಯ ಸರ್ವನಾಮತ್ವಸ್ಯ ಸ್ಥಿತೇಃ । ತಥಾಽಪಿ ಏಕೋ ದೇಹಃ ಏಕದೇಹಃ, ನಿಖಿಲಪೂರ್ಣಗುಣಾ ಏಕದೇಹೋ ಯಸ್ಯ ಇತಿ ದ್ವಿಪದಬಹುವ್ರೀಹ್ಯಾಶ್ರಯಣೇ ನ ದೋಷಃ, ಏಕದೇಶಶಬ್ದಸ್ಯಾಸರ್ವನಾಮತಯಾ ಪೂರ್ವನಿಪಾತಾಭಾವಸಂಭವಾತ್ । ನ ಚೈವಮೇಕಂ ರೂಪಮೇಕರೂಪಮ್, ಅನಿತ್ಯಮೇಕರೂಪಂ ಯೇಷಾಮ್ ಇತ್ಯನ್ಯತ್ರ ದ್ವಿಪದಬಹುವ್ರೀಹ್ಯಾಶ್ರಯಣವತ್, ಏಕಂ ಶರಣಮ್ ಏಕಶರಣಮ್, ಅನುಮಾನಮೇಕಶರಣಂ ಯಸ್ಯೇತಿ ತಥೋಕ್ತಃ, ಇತ್ಯುತ್ತರಗ್ರಂಥೀಯಟೀಕಾಕಾರೀಯದ್ವಿಪದಬಹುವ್ರೀಹ್ಯಾಶ್ರಯಣವಚ್ಚ, ಸಂಖ್ಯಾರ್ಥತ್ವೇಽಪಿ ಏಕಶಬ್ದಸ್ಯ ದ್ವಿಪದಬಹುವ್ರೀಹ್ಯಾಶ್ರಯಣೇ ಅಸಂಖ್ಯಾರ್ಥತ್ವಾದೇವ ಏಕದೇಹಶಬ್ದಸ್ಯ ಪೂರ್ವನಿಪಾತಾಭಾವಸಂಭವಾತ್, ತಸ್ಯ ಕೇವಲಾರ್ಥತ್ವಾಶ್ರಯಣಂ ವ್ಯರ್ಥಮಿತಿ ವಾಚ್ಯಮ್ । ಅರ್ಥಾಧಿಕ್ಯಲಾಭಾಯೈವ ತದಾಶ್ರಯಣಾತ್ । ಅತ ಏವ ಕೇವಲಾರ್ಥತ್ವವಿವಕ್ಷಾವ್ಯಾವರ್ತ್ಯಪ್ರದರ್ಶನಂ ನ ಪುನಃ ಪ್ರಾಕೃತಾದಿರಿತಿ ಜ್ಞೇಯಮ್ ।

ಪ್ರಶ್ನೆ – ಟೀಕಾರಾಯರಿಗೆ ಬಹುವ್ರೀಹಿಸಮಾಸವೇ ಅಭಿಪ್ರೇತವಾಗಿದೆ. ಈ ಸಮಾಸದಲ್ಲಿ ಸಂಖ್ಯಾರ್ಥತ್ವಪ್ರಯುಕ್ತವಾಗಿ ಪೂರ್ವನಿಪಾತವು ಬರುವುದಿಲ್ಲವೆಂದು ಸಮರ್ಥನೆ ಮಾಡಬಹುದು. ಆದರೆ ಇದೇ ಏಕಶಬ್ದವು ಸರ್ವನಾಮಸಂಜ್ಞೆಯನ್ನು ಹೊಂದಿದೆ. ಆದ್ದರಿಂದ ಸರ್ವನಾಮತ್ವಪ್ರಯುಕ್ತವಾಗಿ ಪೂರ್ವನಿಪಾತವನ್ನು ಪರಿಹರಿಸಲು ಸಾಧ್ಯವಿಲ್ಲ. ಆದ್ದರಿಂದ ಏಕಶಬ್ದಕ್ಕೆ ಕೇವಲ ಎಂಬ ಅರ್ಥವನ್ನು ಹೇಳಿದ್ದು ವ್ಯರ್ಥವೇ ಆಗಿದೆ. ಕೇವಲ ಎಂಬರ್ಥವನ್ನು ವಿವಕ್ಷಿಸಿರುವುದರಿಂದ ಇದು ಸರ್ವನಾಮಸಂಜ್ಞೆಯನ್ನು ಹೊಂದುವುದಿಲ್ಲ. ಆದ್ದರಿಂದ ಹಿಂದಿನ ದೋಷ ಬರುವುದಿಲ್ಲವೆಂದು ಹೇಳಬಾರದು. ಕೇವಲಾರ್ಥದಲ್ಲಿರುವ ಇದಕ್ಕೂ ಕೂಡ ಸರ್ವನಾಮಸಂಜ್ಞೆಯು ಬರುವುದೆನ್ನಲು ಅಭಿಧಾನವು ಹೀಗಿದೆ –

'ಏಕೋಽನ್ಯಾರ್ಥೇ ಪ್ರಧಾನೇ ಚ ಪ್ರಥಮೇ ಕೇವಲೇ ಚ ।
ಸಾಧಾರಣೇ ಸಮಾನೇಽಲ್ಪೇ ಸಂಖ್ಯಾಯಾಂ ಚ ಪ್ರಯುಜ್ಯತೇ ॥

ಅನ್ಯ, ಪ್ರಧಾನ, ಪ್ರಥಮ, ಕೇವಲ, ಸಾಧಾರಣ, ಸಮಾನ, ಅಲ್ಪ, ಸಂಖ್ಯಾ ಈ ಎಂಟು ಅರ್ಥಗಳಲ್ಲಿ ಏಕಃ ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ.

ಹೀಗೆ ಏಕಶಬ್ದಕ್ಕೆ ಎಂಟು ಅರ್ಥಗಳಿವೆ. ಇವುಗಳಲ್ಲಿ ಸಂಖ್ಯಾರ್ಥದಲ್ಲಿರುವ ಏಕಶಬ್ದವು ನಿತ್ಯವಾಗಿ ಏಕವಚನಾಂತವಾಗುತ್ತದೆ. ಉಳಿದರ್ಥಗಳಲ್ಲಿ ಏಳು ವಿಭಕ್ತಿಗಳಲ್ಲಿ ದ್ವಿವಚನ ಹಾಗೂ ಬಹುವಚನ-

ಗಳು ಕೂಡ ಇರುತ್ತವೆ. 'ಏಕೇಷಾಂ ಎಂಬುದಾಗಿ ಇದಕ್ಕೆ ಉದಾಹರಣೆಯನ್ನು ನೀಡಿದ್ದಾರೆ. ಈ ಪ್ರಯೋಗಗಳು ಸರ್ವನಾಮಸಂಜ್ಞೆಯಲ್ಲಿದ್ದಾಗ ಮಾತ್ರ ಪ್ರಾಪ್ತವಾಗುತ್ತವೆ. ಹಾಗಾಗಿ ಪ್ರಕೃತ ಕೇವಲಾರ್ಥ-ದಲ್ಲಿರುವ ಏಕಶಬ್ದವು ಕೂಡ ಸರ್ವನಾಮಸಂಜ್ಞೆಯನ್ನು ಹೊಂದುತ್ತದೆ. ಆದ್ದರಿಂದ ಕೇವಲಾರ್ಥವನ್ನು ಹೇಳಿಯೂ ಕೂಡ ಪ್ರಯೋಜನವಾಗಲಿಲ್ಲ.

ಉತ್ತರ – ಟೀಕೆಯಲ್ಲಿ ಹೇಳಿದಂತೆ ಏಕಶಬ್ದವು ಕೇವಲ ಎಂಬ ಅರ್ಥವುಳ್ಳದ್ದೇ ಆಗಿದೆ. ಆದರೆ ಸಮಾಸವನ್ನು ಹೀಗೆ ತಿಳಿಯಬೇಕು. 'ಏಕಶ್ಚಾಸೌ ದೇಹಶ್ಚ ಏಕದೇಹಃ, ನಿಖಿಲಪೂರ್ಣಗುಣಾಃ ಏಕದೇಹಃ ಯಸ್ಯ ಸಃ = ನಿಖಿಲಪೂರ್ಣಗುಣೈಕದೇಹಃ'. ಏಕಶಬ್ದವು ಸರ್ವನಾಮವಾಗಿರಬಹುದು. ಆದರೆ ಏಕ-ದೇಹಶಬ್ದವು ಸರ್ವನಾಮವಲ್ಲ. ಸರ್ವನಾಮಶಬ್ದದಿಂದ ಘಟಿತವಾದ ಶಬ್ದವು ಸರ್ವನಾಮಸಂಜ್ಞೆಯನ್ನು ಹೊಂದುವುದಿಲ್ಲ. ಏಕದೇಹಃ ಎಂಬಲ್ಲಿ ಸರ್ವನಾಮಸಂಜ್ಞೆಯನ್ನು ಹೊಂದಿರುವ ಏಕಶಬ್ದವು ಪೂರ್ವ-ನಿಪಾತವನ್ನೇ ಹೊಂದಿದೆ. ಆದ್ದರಿಂದ ಹಿಂದಿನ ಯಾವುದೇ ದೋಷಕ್ಕೆ ಅವಕಾಶವಿಲ್ಲ. ಇಲ್ಲಿ ಬಹುಪದ-ಬಹುವ್ರೀಹಿಯನ್ನು ನಾವು ಮಾಡುತ್ತಿಲ್ಲ ದ್ವಿಪದಬಹುವ್ರೀಹಿಯನ್ನು ಮಾಡುತ್ತಿದ್ದೇವೆ. ದ್ವಿಪದಬಹು-ವ್ರೀಹಿಯಲ್ಲಿ ಏಕಶಬ್ದವೇ ಇರುವುದಿಲ್ಲ. ಏಕದೇಹಶಬ್ದವು ಇರುತ್ತದೆ. ಆದ್ದರಿಂದ ಪೂರ್ವನಿಪಾತವು ಬರಬೇಕೆಂಬ ಆಕ್ಷೇಪಕ್ಕೆ ಅವಕಾಶವೇ ಇಲ್ಲ.

ಪ್ರಶ್ನೆ – ಹಾಗಾದರೆ ಕೇವಲ ಎಂಬರ್ಥವನ್ನೇಕೆ ಹೇಳಿದಿರಿ? ಸಂಖ್ಯಾ ಎಂಬರ್ಥವನ್ನೇ ಹೇಳಬಹುದಿತ್ತು. ಅದು ಹೀಗೆ – 'ಏಕಂ ತತ್ ರೂಪಂ ಚ ಏಕರೂಪಂ, ಅನಿತ್ಯಂ ಏಕರೂಪಂ ಯೇಷಾಂ ತೇ ಅನಿತ್ಯೈಕರೂಪಾಃ' ಎಂಬಲ್ಲಿ ಏಕಶಬ್ದವನ್ನು ರೂಪಶಬ್ದದ ಜೊತೆ ವಿಶೇಷಣವನ್ನಾಗಿ ಮಾಡಿ ದ್ವಿಪದಬಹುವ್ರೀಹಿಯನ್ನು ಆಶ್ರಯಿಸಿದ್ದಾರೆ. ಅದರಂತೆ ಸುಧಾಕಾರರೂ ಕೂಡ 'ಏಕಂ ಚ ತತ್ ಶರಣಂ ಏಕಶರಣಂ, ಅನುಮಾನಂ ಏಕಶರಣಂ ಯಸ್ಯ ಸಃ ಅನುಮಾನೈಕಶರಣಃ' ಎಂಬುದಾಗಿ ದ್ವಿಪದಬಹುವ್ರೀಹಿಯನ್ನೇ ಮುಂದಿನ ಗ್ರಂಥದಲ್ಲಿ ಸಮರ್ಥಿಸುತ್ತಾರೆ. ಹೀಗೆ ದ್ವಿಪದ ಬಹುವ್ರೀಹಿಯನ್ನು ಆಶ್ರಯಿಸಿದಾಗ ಏಕಶಬ್ದವು ಪ್ರತ್ಯೇಕವಾಗಿ ಇರುವುದೇ ಇಲ್ಲವಾದ್ದರಿಂದ ಪೂರ್ವನಿಪಾತಕ್ಕೆ ಅವಕಾಶವಿಲ್ಲ. ಕೇವಲಾರ್ಥವನ್ನು ಹೇಳುವಂತೆ ಸಂಖ್ಯಾರ್ಥವನ್ನು ವಿವಕ್ಷಿಸಿದರೂ ಕೂಡ ದ್ವಿಪದಬಹುವ್ರೀಹಿಯನ್ನು ಆಶ್ರಯಿಸಿದರೆ ಸಂಖ್ಯಾರ್ಥವುಳ್ಳದ್ದಾಗುವುದಿಲ್ಲ. ಏಕಶಬ್ದವು ಸಂಖ್ಯಾರ್ಥವುಳ್ಳದ್ದಾಗುವುದಾದರೂ ಏಕದೇಹಶಬ್ದವು ಸಂಖ್ಯಾರ್ಥವುಳ್ಳದ್ದಾಗುವುದಿಲ್ಲ. ಆದ್ದರಿಂದ ಏಕಶಬ್ದಕ್ಕೆ ಪೂರ್ವನಿಪಾತವು ಬರ-ಬೇಕಾದೀತು! ಎಂದು ಹೇಳಲಾಗದು. ಆದ್ದರಿಂದ ಕೇವಲ ಎಂಬರ್ಥವನ್ನು ಆಶ್ರಯಿಸುವುದು ವ್ಯರ್ಥ-ವಾಗಿದೆ?

ಉತ್ತರ – ಪೂರ್ವನಿಪಾತಕ್ಕೋಸ್ಕರವೇ ನಾವು ಕೇವಲ ಎಂಬರ್ಥವನ್ನು ವಿವಕ್ಷಿಸಿರುವುದಲ್ಲ. (ಶಬ್ದದ ಬಗ್ಗೆ ಮಾತ್ರ ವಿಚಾರ ಮಾಡುವುದು ಬೇಡ; ಅರ್ಥದ ಬಗ್ಗೆಯು ಕೂಡ ವಿಚಾರ ಮಾಡಬೇಕು). ಕೇವಲ ಎಂಬರ್ಥವನ್ನು ಹೇಳಿದ್ದರಿಂದ ಅರ್ಥಾಧಿಕ್ಯವು ಲಾಭವಾಗುತ್ತಿದೆ. ಪರಮಾತ್ಮನಿಗೆ ಇರುವ ದೇಹವು ಕೇವಲ ಗುಣರೂಪವೇ ಆಗಿದೆ ಹೊರತು ಪ್ರಾಕೃತವಾದದ್ದರ ಸಂಪರ್ಕ ಇರುವುದಿಲ್ಲ ಎಂಬ ಅರ್ಥವು ದೊರೆಯಬೇಕೆಂದರೆ ಕೇವಲ ಎಂಬರ್ಥವನ್ನೇ ಹೇಳಬೇಕು. ಆದ್ದರಿಂದಲೇ ಟೀಕೆಯಲ್ಲಿ 'ನ ಪುನಃ ಪ್ರಾಕೃತಾದಿಃ' ಎಂದು ಹೇಳಿದ್ದಾರೆ.

## 'ಅಸ್ಯ' ಎಂಬಲ್ಲಿರುವ ಷಷ್ಠಿಯು ವಿವಕ್ಷಾಧೀನ

ವಾಕ್ಯಾರ್ಥಚಂದ್ರಿಕಾ– ನನು 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಇತಿ ಸೂತ್ರೇ (ದಾನಸ್ಯ ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಸಂಜ್ಞಃ ಸ್ಯಾತ್)।

ಅನಿರಾಕರಣಾತ್ ಕರ್ತುಸ್ತ್ಯಾಗಾಂಗಂ ಕರ್ಮಣೇಪ್ಸಿತಮ್।
ಪ್ರೇರಣಾನುಮತಿಭ್ಯಾಂ ಚ ಲಭತೇ ಸಂಪ್ರದಾನತಾಮ್॥'

ಇತ್ಯತ್ರ ಚ ಕರ್ತುರ್ದಾನಶೇಷಭೂತಂ ದಾನಕರ್ಮಣಾಪ್ತುಮಿಷ್ಟತಮಮ್ ಅನಿರಾಕರಣಾತ್ ಪ್ರೇರಣಾದನುಮತ್ಯಾ ವಾ ಸಂಪ್ರದಾನತಾಂ ಲಭತೇ ಇತ್ಯುಕ್ತತ್ವಾದೀಶ್ವರಸ್ಯ ದಾನಕರ್ಮಣೋದ್ಭವಾದಿನಾ ಆಪ್ತುಮಿಷ್ಟತಮಸ್ಯ ಅನಿರಾಕುರ್ವತಃ ಅಸ್ಯೇತಿ ನಿರ್ದಿಷ್ಟಸ್ಯ ಜಗತಃ ಸಂಪ್ರದಾನತ್ವಾಚ್ಚತುರ್ಥ್ಯಾ ಭಾವ್ಯಮ್ । (ಅನ್ವರ್ಥಸಂಜ್ಞಾಬಲೇನಾಹ – ದಾನಸ್ಯೇತಿ ॥ ತೇನ ಅಜಾಂ ನಯತಿ, ಹಸ್ತಂ ನಿದಧಾತಿ ವೃಕ್ಷೇ ಇತ್ಯಾದೌ ನಾತಿಪ್ರಸಂಗ ಇತಿ ಭಾವಃ । ದಾನಂ ಚ ಅಪುನರ್ಗ್ರಹಣಾಯ ಸ್ವತ್ವನಿವೃತ್ತಿಪೂರ್ವಕಂ ಪರಸ್ವತ್ವಾಪದಾನಮ್ । ಅತ ಏವ 'ರಜಕಸ್ಯ ವಸ್ತ್ರಂ ದದಾತಿ' ಇತ್ಯಾದೌ ನ ಭವತಿ। ತತ್ರ ಹಿ ದದಾತಿರ್ಭಾಕ್ತಃ। ಏತಚ್ಚ ವೃತ್ತಿಮತಮ್। ಭಾಷ್ಯಮತೇ ತು ನಾನ್ವರ್ಥತಾಯಾಮ್ ಆಗ್ರಹಃ । 'ಖಂಡಿಕೋಪಾಧ್ಯಾಯಸ್ತಸ್ಮೈ ಚಪೇಟಾಂ ದದಾತಿ' ಇತಿ ಪ್ರಯೋಗಾತ್ । 'ರಜಕಸ್ಯ ದದಾತಿ' ಇತಿ ಶೇಷತ್ವವಿವಕ್ಷಾಯಾಂ ಬೋಧ್ಯಮ್ । ನ ಚೈವಮ್ 'ಅಜಾಂ ನಯತಿ ಗ್ರಾಮಮ್' ಇತ್ಯತ್ರ ಅತಿಪ್ರಸಂಗಃ। 'ಯಮಭಿಪ್ರೈತಿ' ಇತ್ಯುಕ್ತ್ಯಾ ಹಿ ಯಮ್ ಇತಿ ನಿರ್ದಿಷ್ಟಸ್ಯ ಶೇಷತ್ವಂ, ಕರ್ಮಣಶ್ಚ ಶೇಷತ್ವಂ ಲಭ್ಯತೇ, ಗ್ರಾಮಸ್ಯ ಚ ಅಜಾಂ ಪ್ರತಿ ಶೇಷತ್ವಂ ನಾಸ್ತಿ)। ನ ಚ ಸ್ವಸತ್ತಾಪರಿತ್ಯಾಗೇನ ಪರಸತ್ತಾಪಾದನಸ್ಯ ದಾನಪದಾರ್ಥಸ್ಯ ಜಗತ ಉದ್ಭವಾದಿವಿಷಯೇ ಈಶ್ವರೇಣಾಕರಣಾತ್ ನ ಚತುರ್ಥೀತಿ ವಾಚ್ಯಮ್; 'ವೃಕ್ಷಾಯ ಜಲಂ ದದಾತಿ, ಖಂಡಿಕೋಪಾ-



ಧ್ಯಾಯಃ ಶಿಷ್ಯಾಯ ಚಪೇಟಿಕಾಂ ದದಾತಿ, ನ ಶೂದ್ರಾಯ ಮತಿಂ ದದ್ಯಾತ್' ಇತ್ಯಾದೌ ಚತುರ್ಥ್ಯುಪಪತ್ತ್ಯರ್ಥಂ ಕಿಂಚಿದ್ ಉದ್ದಿಶ್ಯ ಅಪುನರ್ಗ್ರಹಣಾಯ ಸ್ವದ್ರವ್ಯತ್ಯಾಗಮಾತ್ರಸ್ಯ ದಾನ-ಶಬ್ದಾರ್ಥತಯಾ ವಿವಕ್ಷಣೀಯತ್ವೇನ ಪದಮಂಜರ್ಯಾಮುಕ್ತತ್ವಾತ್ ಪ್ರಕೃತೇ ಮತಿದಾನಾದಿವತ್ ಯಥಾಕಥಂಚಿತ್ ತ್ಯಾಗಸ್ಯ ಪ್ರತಿಪಾದಯಿತುಂ ಶಕ್ಯತ್ವಾತ್, ಭಾಷ್ಯಕಾರೇಣ ಕ್ರಿಯಾಮಾತ್ರಾ-ಶ್ರಯಣೇನ ದದಾತಿಕರ್ಮಣಾ ಇತ್ಯಸ್ಯಾನಾಶ್ರಿತತ್ವಾಚ್ಚ ಸಂಪ್ರದಾನಚತುರ್ಥ್ಯಾ ಭವಿತವ್ಯಮ್ ಇತ್ಯತೋ 'ವಿವಕ್ಷಾತಃ ಕಾರಕಾಣಿ ಭವಂತಿ' ಇತ್ಯುಕ್ತೇಃ ಸಂಪ್ರದಾನಸ್ಯ ಶೇಷತ್ವವಿವಕ್ಷಾಯಾಂ ಯುಕ್ತಾ 'ಅಸ್ಯ' ಇತಿ ಷಷ್ಠೀ ಇತ್ಯಾಹ – ಅಸ್ಯೇತೀತಿ ॥

ಪ್ರಶ್ನೆ – 'ಅಸ್ಯ' ಎಂಬ ಷಷ್ಠೀವಿಭಕ್ತಿಯು ಇಲ್ಲಿ ಅಯುಕ್ತವಾಗಿದೆ. ಅಸ್ಮೈ ಎಂಬುದಾಗಿ ಚತುರ್ಥೀವಿಭಕ್ತಿಯನ್ನೇ ಹೇಳಬೇಕಿತ್ತು. ಏಕೆಂದರೆ 'ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್' ಎಂಬ ಸೂತ್ರವು ಜಗತ್ತಿನಲ್ಲಿ ಸಂಪ್ರದಾನಸಂಜ್ಞೆಯನ್ನು ವಿಧಾನ ಮಾಡುತ್ತಿದೆ. ಈ ಸೂತ್ರದ ಅರ್ಥ ಹೀಗಿದೆ – ಕರ್ಮಣಾ ಎಂಬುದಕ್ಕೆ ದಾನಕರ್ಮದಿಂದ ಎಂದರ್ಥ. ದಾನಕ್ಕೆ ಯಾವುದು ಕರ್ಮ-ವಾಗಿದೆಯೋ ಅಂಥ ಕರ್ಮದಿಂದ ಸಂಬಂಧವನ್ನು ಹೊಂದಲು ಇಚ್ಛಿಸುತ್ತಾನೋ ಅದು ಸಂಪ್ರದಾನ-ಸಂಜ್ಞೆಯನ್ನು ಹೊಂದುತ್ತದೆ. ದಾನಮಾಡುವ ಪುರುಷನು ತನ್ನಿಂದ ಮಾಡಲು ಯೋಗ್ಯವಾದ ದಾನವೆಂಬ ಕ್ರಿಯೆಗೆ ಯಾವುದು ಕರ್ಮವಾಗಿದೆಯೋ ಅಂಥ ದೇಯವಾದ ವಸ್ತುವಿನ ಸಂಬಂಧವು ಯಾರಿಗೆ ಆಗಬೇಕು ಎಂಬುದಾಗಿ ಕರ್ತೃವು ಇಚ್ಛಿಸುತ್ತಾನೋ ಅಂಥವನಿಗೆ ಸಂಪ್ರದಾನಸಂಜ್ಞೆಯು ಬರುತ್ತದೆ.

ಅನಿರಾಕರಣಾತ್ ಕರ್ತುಸ್ತ್ಯಾಗಾಂಗಂ ಕರ್ಮಣೇಪ್ಸಿತಮ್ ।
ಪ್ರೇರಣಾನುಮತಿಭ್ಯಾಂ ಚ ಲಭತೇ ಸಂಪ್ರದಾನತಾಮ್ ॥'

ಅನಿರಾಕರಣದಿಂದ ಮತ್ತು ಪ್ರೇರಣೆ ಅನುಮತಿಗಳಿಂದಲೂ ಸಂಪ್ರದಾನಸಂಜ್ಞೆಯು ಪ್ರಾಪ್ತ-ವಾಗುತ್ತದೆ ಎಂಬುದಾಗಿ ಸಂಪ್ರದಾನಸಂಜ್ಞೆಯು ಎಲ್ಲಿ ಬರುತ್ತದೆಂದು ವಿಧಿಸಲಾಗಿದೆ. ಇಲ್ಲಿ ಕರ್ತೃವು ಕೊಡುವ ದಾನಕ್ಕೆ ಯಾವ ಕರ್ಮವು ಶೇಷವಾಗಿದೆಯೋ ಅಂಥ ಕರ್ಮದಿಂದ ಹೊಂದಲು ಇಷ್ಟತಮ-ವಾದದ್ದು ಅನಿರಾಕರಣೆಯಿಂದ ಪ್ರೇರಣೆಯಿಂದ ಅಥವಾ ಅನುಮತಿಯಿಂದ ಸಂಪ್ರದಾನಸಂಜ್ಞೆಯನ್ನು



ಹೊಂದುತ್ತದೆ ಎಂದು ಈ ಶ್ಲೋಕವು ಹೇಳುತ್ತಿದೆ. ಈಶ್ವರನು ದಾನಕ್ಕೆ ಕರ್ಮವಾದ ಜಗತ್ತಿಗೆ ಉದ್ಭವಾದಿಗಳ ಸಂಬಂಧವು ಆಗಬೇಕೆಂದು ಇಚ್ಛಿಸಿದ್ದಾನೆ. ಇದನ್ನು ಜಗತ್ತು ನಿರಾಕರಣೆ ಮಾಡುತ್ತಿಲ್ಲ.




ಆದ್ದರಿಂದ ಸಂಪ್ರದಾನಸಂಜ್ಞೆಯು ಜಗದ್ವಾಚಕವಾದ 'ಅಸ್ಯ' ಎಂಬ ಪದಕ್ಕೆ ಪ್ರಾಪ್ತವಾಗುತ್ತದೆ. ಆದ್ದರಿಂದ ಅಸ್ಮೈ ಎಂಬುದಾಗಿ ಚತುರ್ಥೀವಿಭಕ್ತಿಯೇ ಬರಬೇಕಲ್ಲವೇ?

ಚತುರ್ಥೀವಿಭಕ್ತಿಯು ಬರಲು ಸಾಧ್ಯವಿಲ್ಲ. ಏಕೆಂದರೆ, ದಾನ ಎಂಬ ಪದಕ್ಕೆ ಸ್ವಸ್ವತ್ವಪರಿತ್ಯಾಗದ ಮೂಲಕ ಪರಸ್ವತ್ವವನ್ನು ಆಪಾದನೆ ಮಾಡುವಿಕೆ ಎಂದರ್ಥ. ಪರಮಾತ್ಮನು ಜಗತ್ತಿನ ಉದ್ಭವಾದಿ ವಿಷಯಗಳಲ್ಲಿ ತನ್ನ ಸ್ವತ್ವವನ್ನು ಪರಿತ್ಯಾಗ ಮಾಡಿ ಪರಸ್ವತ್ವವನ್ನು ಆಪಾದನೆ ಮಾಡುತ್ತಲೇ ಇಲ್ಲ. ಹಾಗಾಗಿ ಸಂಪ್ರದಾನಸಂಜ್ಞೆಗೂ ಅವಕಾಶವಿಲ್ಲ. ಆದ್ದರಿಂದಲೇ ಚತುರ್ಥೀವಿಭಕ್ತಿಯು ಕೂಡ ಬರುವುದಿಲ್ಲ. ಅಸ್ಯ ಎಂಬ ಷಷ್ಠೀವಿಭಕ್ತಿಯ ಪ್ರಯೋಗವು ಸಾಧುವಾಗಿದೆಯಲ್ಲವೇ ಎಂದು ಶಂಕಿಸಬಾರದು.

ವೃಕ್ಷಾಯ ಜಲಂ ದದಾತಿ = ಮರಗಳಿಗೆ ನೀರು ಹಾಕುತ್ತಾನೆ. ಖಂಡಿಕೋಪಾಧ್ಯಾಯಃ ಶಿಷ್ಯಾಯ ಚಪೇಟಿಕಾಂ ದದಾತಿ' ಖಂಡಿಕ ಎಂಬ ಉಪಾಧ್ಯಾಯನು ಶಿಷ್ಯನ ಕಪಾಳಕ್ಕೆ ಹೊಡೆಯುತ್ತಾನೆ, 'ನ ಶೂದ್ರಾಯ ಮತಿಂ ದದ್ಯಾತ್' ಶೂದ್ರನಿಗೆ ಮತಿಯನ್ನು ಕೊಡಬಾರದು. ಈ ಎಲ್ಲ ಸ್ಥಳಗಳಲ್ಲಿ ಸ್ವಸ್ವತ್ವಪರಿತ್ಯಾಗೇನ ಪರಸ್ವತ್ವಾಪಾದನರೂಪವಾದ ದಾನವನ್ನು ವಿವಕ್ಷಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಕಿಂಚಿದುದ್ದಿಶ್ಯ ಅಪುನರ್ಗ್ರಹಣಾಯ ಸ್ವದ್ರವ್ಯತ್ಯಾಗವೇ ದಾನ ಎಂದು ಕರೆಯಬೇಕು. ಹೀಗೆಯೇ ಪದಮಂಜರಿಯಲ್ಲಿ ಹೇಳಲಾಗಿದೆ. ಮತಿದಾನ, ಚಪೇಟಿಕಾದಾನಗಳಂತೆ ಇಲ್ಲೂ ಕೂಡ ಯಥಾಕಥಂಚಿತ್ ಈಶ್ವರನು ಜಗತ್ತಿಗೆ ಉದ್ಭವಾದಿಗಳ ತ್ಯಾಗವನ್ನು ಮಾಡುತ್ತಾನೆ ಎಂದು ಪ್ರತಿಪಾದನೆ ಮಾಡಲು ಸಾಧ್ಯವಿದೆ.

'ವಿವಕ್ಷಾತಃ ಕಾರಕಾಣಿ ಭವಂತಿ' ಎಂಬುದಾಗಿ ಅಭಿಯುಕ್ತರು ಶಬ್ದಪ್ರಯೋಗಮಾಡುವವರ ವಿವಕ್ಷೆಗೆ ಅನುಗುಣವಾಗಿ ಕಾರಕವಿಭಕ್ತಿಗಳು ಬರುತ್ತವೆಂದು ಒಪ್ಪಿರುತ್ತಾರೆ. ಪ್ರಕೃತ ಅಸ್ಯ ಎಂಬಲ್ಲಿ ಸಂಪ್ರದಾನತ್ವವನ್ನು ವಿವಕ್ಷಿಸಿರುವುದಿಲ್ಲ. ಶೇಷತ್ವವನ್ನೇ ವಿವಕ್ಷಿಸಿದ್ದಾರೆ. ಶೇಷತ್ವವು ವಿವಕ್ಷಿತವಾದ್ದರಿಂದ ಅಸ್ಯ ಎಂಬುದಾಗಿ ಷಷ್ಠೀವಿಭಕ್ತಿಯೇ ಪ್ರಾಪ್ತವಾಗುತ್ತದೆ. ಚತುರ್ಥೀವಿಭಕ್ತಿಯು ಪ್ರಾಪ್ತವಾಗುವುದಿಲ್ಲ.

## ಸುಧಾಪರಿಮಳಸಾರ

ಪರಮಾತ್ಮನಲ್ಲಿ ವಂದ್ಯತ್ವವು ಮುಖ್ಯವಾಗಿದೆ. ಇದಕ್ಕೆ ಕಾರಣ ವಂದ್ಯತ್ವಪ್ರಯೋಜಕವಾದ ಮೂರೂ ಧರ್ಮಗಳು ನಿರವಧಿಕವಾಗಿ ಇರುವುದು ಅವನಲ್ಲಿ ಮಾತ್ರ ಎಂದು ಹೇಳಿದರು. ಆ



ಮೂರು ವಂದ್ಯತ್ವಪ್ರಯೋಜಕಧರ್ಮಗಳಲ್ಲಿ ವೈಶಿಷ್ಟ್ಯವನ್ನು ಉಪಪಾದನೆ ಮಾಡಲು 'ನಿಖಿಲ-ಪೂರ್ಣಗುಣೈಕದೇಹಂ' ಇತ್ಯಾದಿ ಮೂರು ವಿಶೇಷಣಗಳು ಪ್ರವೃತ್ತವಾಗಿವೆ. ಅವುಗಳ ಅರ್ಥವನ್ನು ತಿಳಿಯಬೇಕು. ಯಾವ ಕಾರಣದಿಂದ ನಿರವಧಿಕವಾದ ಗುಣಗಳೇ ಶರೀರವುಳ್ಳ-ವನಾಗಿದ್ದಾನೋ ಪ್ರಾಕೃತಶರೀರವನ್ನು ಹೊಂದಿರುವುದಿಲ್ಲವೋ ಆದ್ದರಿಂದ ನಾರಾಯಣನು ಸರ್ವೋತ್ತಮನಾಗಿದ್ದಾನೆ. ಮತ್ತು 'ನಿರ್ದೋಷ' ಎಂಬ ವಿಶೇಷಣವು ಪಾರತಂತ್ರ್ಯಾದಿ ದೋಷಗಳಿಂದ ರಹಿತನಾಗಿದ್ದಾನೆಂದು ಹೇಳುತ್ತಿದೆ. ಪಾರತಂತ್ರ್ಯವಿಲ್ಲವೆಂದರೆ ಸರ್ವೋ-ತ್ತಮತ್ವವು ಇದೆ ಎಂದೇ ಅರ್ಥ. ಹೀಗೆ ನಿರ್ದೋಷ ಎಂಬ ವಿಶೇಷಣವೂ ಕೂಡ ಸರ್ವೋ-ತ್ತಮತ್ವವನ್ನು ಪ್ರತಿಪಾದನೆ ಮಾಡಿದೆ. ಇದರಂತೆ 'ಅಸ್ಮೋದ್ಭವಾದಿದಂ' ಎಂಬ ವಿಶೇಷಣವೂ ಸಮಸ್ತ ಪ್ರಪಂಚಕ್ಕೆ ಜನ್ಮಾದ್ಯಷ್ಟಕಗಳನ್ನು ಆಯಾಯ ವಸ್ತುಗಳ ಸ್ವಭಾವಕ್ಕನುಗುಣವಾಗಿ ನೀಡುತ್ತಾನೆಂದು ಹೇಳುತ್ತಿದೆ. ಆದ್ದರಿಂದಲೂ ಇವನು ಸರ್ವೋತ್ತಮನಾಗಿದ್ದಾನೆ.

ಇಲ್ಲಿ ಕೆಲವು ವ್ಯಾಕರಣವಿಚಾರ – 'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲಿ ಏಕಶಬ್ದವನ್ನು ಸೇರಿಸಿ ಸಮಾಸ ಮಾಡಿದ್ದಾರೆ. ಇದು ವ್ಯಾಕರಣಸೂತ್ರಕ್ಕೆ ವಿರುದ್ಧ. ಸಂಖ್ಯಾವಾಚಕವಾದ ಏಕ-ಶಬ್ದವಿದ್ದರೆ ಪ್ರಥಮಾವಿಭಕ್ತಿಯೇ ಬರಬೇಕೆಂದು 'ಪೂರ್ವಕಾಲೈಕ' ಇತ್ಯಾದಿ ವ್ಯಾಕರಣ-ಸೂತ್ರವು ಹೇಳಿದೆ. ಯಾವುದು ಪ್ರಥಮಾ ವಿಭಕ್ತಿಯಲ್ಲಿರುತ್ತದೋ ಅದು ಉಪಸರ್ಜನ-ಸಂಜ್ಞೆಯನ್ನು ಹೊಂದಿ ಪೂರ್ವನಿಪಾತವನ್ನು ಹೊಂದುತ್ತದೆ. ಆಗ 'ನಿಖಿಲಪೂರ್ಣಗುಣೈಕ-ದೇಹಂ' ಎಂಬುದಾಗಿ ಸಮಾಸವಾಗುವುದಿಲ್ಲ. ಏಕನಿಖಿಲಪೂರ್ಣಗುಣದೇಹಂ ಎಂದಾಗು-ತ್ತದೆ. ಆದ್ದರಿಂದ ಅನುವ್ಯಾಖ್ಯಾನಕಾರರು ನಿಖಿಲಪೂರ್ಣಗುಣೈಕದೇಹಂ ಎಂದು ಹೇಗೆ ಪ್ರಯೋಗಿಸಿದರು? ಈ ಪ್ರಶ್ನೆಗೆ ಉತ್ತರ ಹೀಗಿದೆ– ಸಂಖ್ಯಾವಾಚಕವಾದ ಏಕಪದವನ್ನು ವಿವಕ್ಷಿಸಿದ್ದರೆ ಪೂರ್ವನಿಪಾತವು ಬರಬೇಕಾಗಿತ್ತು. ಆದರೆ ಕೇವಲ ಎಂಬರ್ಥದಲ್ಲಿ ಏಕ-ಶಬ್ದವನ್ನು ವಿವಕ್ಷಿಸಲಾಗಿದೆ. ಆಗ ಪೂರ್ವನಿಪಾತವು ಬರಬೇಕಾಗಿಲ್ಲ. ದೋಷೈಕದೃಕ್ ಎಂಬಲ್ಲಿ ಹ್ಲಾದೈಕಮಯೀಮ್ ಎಂಬಲ್ಲಿ ಇಂಥ ಪ್ರಯೋಗಗಳು ಕಂಡಿವೆ. ಆದ್ದರಿಂದ ವ್ಯಾಕರಣಕ್ಕೆ ವಿರುದ್ಧವಾಗಿ ಪ್ರಯೋಗ ಮಾಡಿರುವುದಿಲ್ಲ.

ಮತ್ತೊಂದು ವ್ಯಾಕರಣವಿಚಾರ – ನಿರ್ ಎಂಬ ಉಪಸರ್ಗವು ಅತಿಕ್ರಮಣಾರ್ಥದಲ್ಲಿ ಪಂಚಮ್ಯಂತದೊಡನೆ ಸಮಾಸವಾಗುತ್ತದೆ. ಆದ್ದರಿಂದ 'ನಿಷ್ಕ್ರಾಂತಃ ದೋಷೇಭ್ಯಃ' ಎಂಬುದಾಗಿ ನ್ಯಾಯಸುಧೆಯಲ್ಲಿ ಪ್ರಯೋಗ ಮಾಡಿದ್ದಾರೆ.

ಸೃಷ್ಟಿಸ್ಥಿತ್ಯಾದಿಗಳನ್ನು ಸಮಸ್ತಜಗತ್ತಿಗೆ ಪರಮಾತ್ಮನು ನೀಡುತ್ತಾನೆಂದು ಹೇಳುವಾಗ ತನ್ನನ್ನು ಬಿಟ್ಟು

ಎಂಬ ವಿಶೇಷಣವನ್ನು ಸೇರಿಸಬೇಕು. ಇಲ್ಲದಿದ್ದರೆ ಪರಮಾತ್ಮನಿಗೆ ಸೃಷ್ಟಿಸ್ಥಿತ್ಯಾದಿಗಳು ಇಲ್ಲವೆಂದು ಸಮರ್ಥಿಸುವ ಅಸಂಭವಾದ್ಯಧಿಕರಣಗಳಿಂದ ವಿರೋಧ ಬರುತ್ತದೆ. ವ್ಯಾಘಾತವೂ ಬರುತ್ತದೆ.

'ಅಸ್ಯೋದ್ಭವಾದಿದಂ' ಎಂಬಲ್ಲಿ ಅಸ್ಯ ಎಂಬ ಷಷ್ಠೀವಿಭಕ್ತಿಯು ಹೇಗೆ ಸರಿ? ಸಂಪ್ರದಾನ-ಸಂಜ್ಞೆಯು ಬಂದು ಅಸ್ಮೈ ಎಂದಾಗಬೇಕಲ್ಲವೇ? ಈ ಪ್ರಶ್ನೆಗೆ ಪರಿಮಳದಲ್ಲಿ ಸುಂದರವಾಗಿ ಉತ್ತರಿಸಿದ್ದಾರೆ. ಎಲ್ಲಿ ತನ್ನಲ್ಲಿರುವ ಸ್ವಾಮಿತ್ವವನ್ನು ಪರಿತ್ಯಾಗ ಮಾಡಿ ಪರರ ಸ್ವಾಮಿತ್ವವನ್ನು ಸ್ಥಾಪಿಸುವ ಉದ್ದೇಶವಿರುತ್ತದೋ ಅಲ್ಲಿಮಾತ್ರ ಅಂಥ ಸಂಪ್ರದಾನಸಂಜ್ಞೆಯು ಪ್ರಾಪ್ತ-ವಾಗುತ್ತದೆ. ಆಗ ಚತುರ್ಥೀವಿಭಕ್ತಿಯನ್ನು ಹೇಳಬೇಕು. ಪರಮಾತ್ಮನು ಯಾವ ಜಗತ್ತಿನ ಯಾವ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುತ್ತಿದ್ದಾನೋ ಅಂಥಲ್ಲಿ ತನ್ನಲ್ಲಿರುವ ಸ್ವಾಮಿತ್ವವನ್ನು ಪರಿತ್ಯಾಗ ಮಾಡುತ್ತಿಲ್ಲ. ಆದ್ದರಿಂದ ಸಂಪ್ರದಾನಸಂಜ್ಞೆಯು ಬಾರದೇ ಸಾಮಾನ್ಯವಾದ ಸಂಬಂಧವನ್ನಷ್ಟೇ ವಿವಕ್ಷಿಸಿ ಷಷ್ಠೀವಿಭಕ್ತಿಯನ್ನು ಹೇಳಲಾಗಿದೆ. 'ಅಸ್ಯ' ಎಂಬ ಷಷ್ಠೀವಿಭಕ್ತಿಯ ಪ್ರಯೋಗದಿಂದಲೇ ಜಗತ್ತಿನ ಸೃಷ್ಟಿಸ್ಥಿತ್ಯಾದಿಗಳಲ್ಲಿ ಪರಮಾತ್ಮನ ಸ್ವಾಮಿತ್ವವು ಇದ್ದೇ ಇರುತ್ತದೆ; ನಷ್ಟವಾಗಿಲ್ಲ ಎಂಬ ಪ್ರಮೇಯವನ್ನು ತಿಳಿಸಿರುತ್ತಾರೆ.

ಷಷ್ಠೀವಿಭಕ್ತಿಯು ಇಲ್ಲಿ ಕರ್ತ್ರರ್ಥದಲ್ಲಿಯೂ ಬಂದಿಲ್ಲ. ಕರ್ಮಾರ್ಥದಲ್ಲಿಯೂ ಬಂದಿಲ್ಲ. ಕೇವಲ ಸಂಬಂಧಾರ್ಥದಲ್ಲಿ ಬಂದಿದೆ ಎಂದು ಅರ್ಥ.

ಶ್ಲೋಕದಲ್ಲಿರುವ ಅಶೇಷವಿಶೇಷತೋಽಪಿ ಎಂಬುದನ್ನು ಅಸ್ಯೋದ್ಭವಾದಿದಂ ಎಂಬಲ್ಲಿಯೂ ಅನ್ವಯಿಸಿಕೊಳ್ಳಬೇಕು. ಆಗ ಎಲ್ಲಾ ರೀತಿಯ ಅವಾಂತರಭೇದಗಳಿಂದ ಸಹಿತವಾದ ಸೃಷ್ಟ್ಯಾದಿ-ಗಳನ್ನು ಜಗತ್ತಿಗೆ ನೀಡುವವನು ನಾರಾಯಣ ಎಂದು ಅರ್ಥವಾಗುತ್ತದೆ. ಇದರ ವಿವರಣೆ-ಯನ್ನು ಹೀಗೆ ತಿಳಿಯಬೇಕು— ನಿತ್ಯವಾದ ಪದಾರ್ಥಗಳಿಗೆ ಪರಾಧೀನವಿಶೇಷದ ಸಂಬಂಧ-ವಾಗುವುದೇ ಸೃಷ್ಟಿ. ಪ್ರಕೃತಿಗೆ ಜಡರೂಪವಾಗಿ ಪರಿಣಾಮ ಹೊಂದುವಿಕೆಯೇ ಸೃಷ್ಟಿ. ಲಕ್ಷ್ಮೀ-ದೇವಿಗೆ ಸೃಷ್ಟಿಸುವ ಇಚ್ಛಾಪ್ರಾಪ್ತಿಯೇ ಸೃಷ್ಟಿ. ಅವ್ಯಾಕೃತಾಕಾಶಕ್ಕೆ ಮೂರ್ತಪದಾರ್ಥಗಳ ಸಂಬಂಧವಾಗುವಿಕೆಯೇ ಸೃಷ್ಟಿ. ಅನಾದಿಯಾದ ಇಂದ್ರಿಯಗಳಿಗೂ ಪಂಚಭೂತಾಂಶಗಳ ಸಂಬಂಧದಿಂದ ಉಪಚಯವಾಗುತ್ತದೆ. ಅದೇ ಅವುಗಳ ಉತ್ಪತ್ತಿ. ಹೀಗೆ ಅನೇಕ ರೀತಿಯಾದ ಉತ್ಪತ್ತಿಗಳನ್ನು ನಾರಾಯಣನು ಕೊಡುತ್ತಾನೆ. ಹಾಗೆಯೇ ಜೀವರಿಗೆ ಅನ್ನಾದಿಗಳನ್ನು ಕೊಡುವ ಮೂಲಕ ಸ್ಥಿತಿಯನ್ನು, ಇತರ ನಿತ್ಯಪದಾರ್ಥಗಳಿಗೆ ಉತ್ತರಕಾಲಸಂಬಂಧರೂಪವಾದ ಸ್ಥಿತಿ-ಯನ್ನೂ ವಿಷ್ಣುವು ಕೊಡುತ್ತಾನೆ. ಹೀಗೆ ಅನೇಕರೀತಿಯಾದ ಸ್ಥಿತಿಗಳ ಕರ್ತಾ ನಾರಾಯಣನೇ ಆಗಿದ್ದಾನೆ. ಇದೇ ರೀತಿಯಾಗಿ ಜಡಪದಾರ್ಥಗಳಿಗೆ ಧ್ವಂಸರೂಪವಾದ ಲಯವನ್ನು, ಚೇತನ-

  



ರಿಗೆ ದೇಹನಾಶರೂಪವಾದ ಲಯವನ್ನೂ ಲಕ್ಷ್ಮೀದೇವಿಗೆ ಅತ್ಯಂತಸಾಮೀಪ್ಯರೂಪವಾದ ಲಯವನ್ನೂ ಈಶನು ಕೊಡುತ್ತಾನೆ. ಹೀಗೆ ಅನೇಕ ರೀತಿಯ ವಿಶೇಷಗಳಿಂದ ಕೂಡಿದ ಸೃಷ್ಟಿ, ಸ್ಥಿತಿ, ಲಯಗಳನ್ನು ಕೊಡುತ್ತಾನಾದ್ದರಿಂದ 'ಅಶೇಷವಿಶೇಷತೋಽಪಿ ಅಸ್ಯೋದ್ಭವಾದಿದಂ' ಎಂದು ಸಿದ್ಧವಾಗುತ್ತದೆ.

## ಪರಿಮಳದ ವೈಶಿಷ್ಟ್ಯ

* 'ನಿಖಿಲಪೂರ್ಣಗುಣೈಕದೇಹಂ' ಎಂಬಲ್ಲಿ ಏಕಶಬ್ದವನ್ನು ಪೂರ್ವನಿಪಾತ ಮಾಡದೇ ಇರುವುದರಿಂದ ಕೇವಲ ಎಂಬರ್ಥವನ್ನು ಭಾಷ್ಯಕಾರರು ವಿವಕ್ಷಿಸಿದ್ದಾರೆ ಎಂದು ತಿಳಿಯುತ್ತದೆ. ಈ ವಿಷಯವನ್ನು ವ್ಯಾಕರಣದ ಆಧಾರದಿಂದ ವಿವರವಾಗಿ ನಿರೂಪಣೆ ಮಾಡಿದ್ದಾರೆ.

* 'ಅಸ್ಯೋದ್ಭವಾದಿದಂ' ಎಂಬ ವಿಶೇಷಣದಿಂದ ಪರಮಾತ್ಮನಲ್ಲಿರುವ ಸರ್ವೋತ್ತಮತ್ವವು ಗ್ರಂಥಕಾರರಿಗೆ ವಿವಕ್ಷಿತವಾಗಿದೆ. ಆದ್ದರಿಂದಲೇ ಅಸ್ಯ ಎಂಬ ಪದಕ್ಕೆ ಸ್ವವ್ಯತಿರಿಕ್ತವಾದ ಪ್ರಪಂಚಕ್ಕೆ ಎಂಬರ್ಥವನ್ನು ಹೇಳಿದ್ದಾರೆ ಎಂಬುದನ್ನು ಉಪಪಾದನೆ ಮಾಡಿದ್ದಾರೆ.

* ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಚಕ್ರದಂತೆ ತಿರುಗುತ್ತಲೇ ಇರುತ್ತವೆ. ಯಾವುದು ಮೊದಲು ಯಾವುದು ನಂತರ ಎಂಬುದು ತಿಳಿಯುವುದಿಲ್ಲ. ಆದರೂ ಜನ್ಮವನ್ನೇ ಮೊದಲು ವಿವಕ್ಷಿಸಬೇಕು ಎಂಬುದನ್ನು ಸಮರ್ಥಿಸಿದ್ದಾರೆ.

* 'ಅಸ್ಯೋದ್ಭವಾದಿದಂ' ಎಂಬಲ್ಲಿ 'ಅಸ್ಯ' ಎಂಬ ಷಷ್ಠೀವಿಭಕ್ತಿಯ ಪ್ರಯೋಗದಿಂದ ಪರಮಾತ್ಮನು ಜಗತ್ತಿನಲ್ಲಿ ಯಾವ ಸೃಷ್ಟ್ಯಾದಿಗಳನ್ನು ಮಾಡುತ್ತಿದ್ದಾನೋ ಅವುಗಳಲ್ಲಿ ತನ್ನ ಸ್ವಾಮಿತ್ವವು ಇದ್ದೇ ಇದೆ. ತನ್ನಲ್ಲಿರುವ ಸ್ವಾಮಿತ್ವವನ್ನು ನಾಶಮಾಡಿಕೊಂಡು ಸೃಷ್ಟಿಜ್ಞಾನಾದಿಗಳನ್ನು ಅವನು ನೀಡುತ್ತಿಲ್ಲ ಎಂಬ ಪ್ರಮೇಯವು ತಿಳಿಯುತ್ತದೆ. ಇಲ್ಲದಿದ್ದರೆ ವ್ಯಾಕರಣದ ಪ್ರಕಾರ ಅಸ್ಮೈ ಎಂದಿರಬೇಕಿತ್ತು ಎಂಬುದನ್ನು ತಿಳಿಸಿದ್ದಾರೆ.

* ಸೃಷ್ಟಿ, ಸ್ಥಿತಿ ಇತ್ಯಾದಿಗಳನ್ನು ಆಯಾ ವಸ್ತುಗಳ ಸ್ವಭಾವಕ್ಕನುಗುಣವಾಗಿ ವಿವಕ್ಷಿಸಬೇಕೆಂಬುದನ್ನು ಅತ್ಯದ್ಭುತವಾಗಿ ನಿರೂಪಣೆ ಮಾಡಿದ್ದಾರೆ.





## 'ಆಪ್ಯತಮಪ್ಯಖಿಲೈಃ ಸುವಾಕ್ಯೈಃ' ಎಂಬುದಕ್ಕೆ ಎರಡರ್ಥ

**ಶ್ರೀಮನ್ನ್ಯಾಯಸುಧಾ– ಅಧಿಕೃತತತ್ವಪ್ರದರ್ಶನಾಯ – ಆಪ್ಯತಮಪ್ಯಖಿಲೈಃ ಸುವಾಕ್ಯೈಃ ಇತಿ ॥ 'ಅಪಿ'ಶಬ್ದೋ ವಂದ್ಯತ್ವೇ ಹೇತುಸಮುಚ್ಚಯಾರ್ಥಃ । ಅಭಿವ್ಯಾಪ್ತೌ ವಾ ।**

**ಅಪೌರುಷೇಯತ್ವೇನ ತನ್ಮೂಲತ್ವೇನ ವಾ ಅನಾಶಂಕಿತದೋಷತ್ವಾದಿನಾ ಶೋಭನಾನಿ ವಾಕ್ಯಾನಿ ವೇದಾದೀನಿ ಬ್ರಹ್ಮಸೂತ್ರಾದೀನಿ ಚ ಸುವಾಕ್ಯಾನಿ ತೈರಖಿಲೈರಪಿ ಆಪ್ಯತಮಮ್ = ಅತಿಶಯೇನ ಪ್ರತಿಪಾದ್ಯಮ್ ।**

ನಾರಾಯಣನಲ್ಲಿ ಅಧಿಕೃತತತ್ವವೆಂಬ ಧರ್ಮವಿದೆ ಎಂಬುದನ್ನು ತೋರಿಸಲು 'ಆಪ್ಯತಮಪ್ಯಖಿಲೈಃ ಸುವಾಕ್ಯೈಃ' ಎಂಬ ವಿಶೇಷಣವನ್ನು ನೀಡಿದ್ದಾರೆ.

ಇಲ್ಲಿರುವ ಅಪಿಶಬ್ದವು ವಂದ್ಯನೆಂಬ ವಿಷಯದಲ್ಲಿ ಮತ್ತೊಂದು ಹೇತುವನ್ನು ಸಮುಚ್ಚಯ ಮಾಡುತ್ತಿದೆ. ಅಥವಾ ಅಭಿವ್ಯಾಪ್ತ್ಯರ್ಥದಲ್ಲಿದೆ.

ಅಥವಾ ಹೀಗರ್ಥ – ವೇದಗಳು ಅಪೌರುಷೇಯಗಳಾದ್ದರಿಂದ ಪುರುಷರಚಿತವಾದ ಗ್ರಂಥಗಳಲ್ಲಿರುವ ಯಾವುದೇ ದೋಷಗಳಿಗೆ ಅವಕಾಶವಿಲ್ಲ. ಬ್ರಹ್ಮಸೂತ್ರಗಳಿಗೆ ಅಂತಹ ಅಪೌರುಷೇಯವಾದ ವೇದಗಳೇ ಮೂಲವಾಗಿವೆ. ಆದ್ದರಿಂದ ವೇದದಂತೆ ಬ್ರಹ್ಮಸೂತ್ರಗಳೂ ಕೂಡ ದೋಷರಹಿತವಾಗಿವೆ.

ಹೀಗೆ ವೇದಾದಿಗಳು ಮತ್ತು ಬ್ರಹ್ಮಸೂತ್ರಗಳು ಸುವಾಕ್ಯಗಳೆನಿಸಿವೆ. ಇಂಥ ಶೋಭನವಾಕ್ಯಗಳಿಂದ ಅತಿಶಯವಾಗಿ (ಮುಖ್ಯವಾಗಿ) ನಾರಾಯಣನು ಪ್ರತಿಪಾದ್ಯನಾಗಿದ್ದಾನೆ ಎಂಬುದು 'ಆಪ್ಯತಮಪ್ಯಖಿಲೈಃ ಸುವಾಕ್ಯೈಃ' ಎಂಬುದರ ಅರ್ಥ.

## ಅಧಿಕೃತತ್ವ ಮತ್ತು ಇಷ್ಟತ್ವಧರ್ಮಗಳ ಸಮರ್ಥನೆ

**ಶ್ರೀಮನ್ನ್ಯಾಯಸುಧಾ– ಯದಿ ವ್ಯಾಚಿಖ್ಯಾಸಿತೇನ ಬ್ರಹ್ಮಮೀಮಾಂಸಾಶಾಸ್ತ್ರೇಣ ತನ್ನಿರ್ಣೇತವ್ಯಾರ್ಥೇನ ವೇದಾದಿನಾ ಚ ಪ್ರತಿಪಾದ್ಯ ಇತಿ ನಾರಾಯಣೋ ವಂದನೀಯಃ । ಹಂತ ತರ್ಹಿ ತತ ಏವ ಧರ್ಮಾದಿಕಂ ಪ್ರಾಣಾದಿಕಂ ವಾ ವಂದನೀಯಂ ಸ್ಯಾತ್ । ನ ಸ್ಯಾತ್ । ತಸ್ಯ ನಾರಾಯಣಪ್ರತಿಪತ್ತ್ಯಂಗತಯಾ ವೇದಾದ್ಯೇಕದೇಶಪ್ರತಿಪಾದ್ಯತ್ವಾತ್ । ಅಸ್ಯ ಪುನಃ ಅನ್ಯಾರ್ಥತಯಾ ಅಖಿಲವೇದಾದಿವೇದ್ಯತ್ವಾತ್ । ತಥಾವಿಧಮೇವ ಚಾಧಿಕೃತಮುಚ್ಯತೇ ಇತ್ಯಾಶಯವತಾ 'ಆಪ್ಯತಮಮಿತ್ಯಖಿಲೈಃ' ಇತಿ ಚೋಕ್ತಮ್ ॥**

ಶ್ರೀಮಧ್ವಾಚಾರ್ಯರು ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ ಮಾಡುತ್ತಿದ್ದಾರೆ. ಈ ಬ್ರಹ್ಮಸೂತ್ರಗಳು ವೇದಾರ್ಥನಿರ್ಣಾಯಕವಾಗಿವೆ. ಇಂಥ ಬ್ರಹ್ಮಸೂತ್ರಗಳಿಂದ ಹಾಗೂ ವೇದಾದಿಗಳಿಂದ ನಾರಾಯಣನು ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದಲೇ ಅಧಿಕೃತದೇವತೆ ಎನಿಸಿದ್ದಾನೆ. ಹೀಗೆ ಅಧಿಕೃತತ್ವವೆಂಬ ಧರ್ಮವಿರುವ ಪ್ರಯುಕ್ತ ವಂದ್ಯನಾಗಿದ್ದಾನೆಂದು ಹೇಳುವುದಾದರೆ ಧರ್ಮ ಹಾಗೂ ಪ್ರಾಣಾದಿದೇವತೆಗಳೂ ಕೂಡ ಈ ವೇದ ಮತ್ತು ಬ್ರಹ್ಮಸೂತ್ರಾದಿಗಳಿಂದ ಪ್ರತಿಪಾದ್ಯರಾದ ಕಾರಣ ವಂದ್ಯರಾಗಬೇಕು?

ಇದು ತಪ್ಪು. ಈ ಧರ್ಮಾದಿಗಳು ಹಾಗೂ ಪ್ರಾಣಾದಿ ದೇವತೆಗಳು ವೇದ ಹಾಗೂ ಬ್ರಹ್ಮಸೂತ್ರಗಳಿಂದ ಮುಖ್ಯವಾಗಿ ಪ್ರತಿಪಾದ್ಯವಾಗಿರುವುದಿಲ್ಲ. ನಾರಾಯಣನ ಜ್ಞಾನಕ್ಕೆ ಅಂಗವಾಗಿ ಪ್ರತಿಪಾದ್ಯವಾಗಿದ್ದಾರೆ. ಮತ್ತು ಸಮಸ್ತವೇದಾದಿಗಳಿಂದ ಪ್ರತಿಪಾದ್ಯವಾಗಿಲ್ಲ. ಏಕದೇಶದಿಂದಷ್ಟೇ ಪ್ರತಿಪಾದ್ಯವಾಗಿದ್ದಾರೆ. ಆದರೆ ನಾರಾಯಣನು ಸಮಗ್ರವೇದ ಹಾಗೂ ಬ್ರಹ್ಮಸೂತ್ರಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಈ ಕಾರಣದಿಂದಲೇ ಅಧಿಕೃತದೇವತೆಯಾಗಿದ್ದಾನೆ. ಇದನ್ನು ತಿಳಿಸುವುದಕ್ಕಾಗಿ 'ಆಪ್ಯತಮಂ' ಎಂದು 'ಅಖಿಲೈಃ' ಎಂದು ಮಂಗಳಶ್ಲೋಕದಲ್ಲಿ ಹೇಳಿದ್ದಾರೆ.





## ಅಪಿಶಬ್ದದ ಸ್ವಾರಸ್ಯ

**ಪರಿಮಳ– ಹೇತುಸಮುಚ್ಚಯಾರ್ಥ ಇತಿ ॥ ನ ಕೇವಲಂ ವಿಶಿಷ್ಟತ್ವಾತ್ ಅಧಿಕೃತತ್ವಾದಪಿ ವಂದ್ಯಮ್ ಇತಿ ಸಮುಚ್ಚಯಾರ್ಥ ಇತ್ಯರ್ಥಃ। 'ಅಖಿಲೈಃ' ಇತ್ಯುಕ್ತಾವಪಿ ತನ್ಮಧ್ಯೇ ಕಿಂಚಿದಪಿ ನಾನ್ಯಪರಮ್ ಇತಿ ದ್ಯೋತನಾಯ ಯಾವದರ್ಥಕಮಪ್ಯಪಿಪದಮಿತಿ ಭಾವೇನಾಹ – ಅಭಿವ್ಯಾಪ್ತೌ ವೇತಿ ॥ ಅತ ಏವ ಆಹ – ಅಖಿಲೈರಪೀತಿ ॥**

'ನಾರಾಯಣನಲ್ಲಿ ವಿಶಿಷ್ಟತ್ವವೆಂಬ ಧರ್ಮವಿರುವುದರಿಂದಷ್ಟೇ ವಂದ್ಯನಾಗಿರುವುದಲ್ಲ; ಅಧಿಕೃತತ್ವವೆಂಬ ಧರ್ಮದಿಂದಲೂ ಕೂಡ ವಂದ್ಯನಾಗಿದ್ದಾನೆ. ಹೀಗೆ ಸಮುಚ್ಚಯವನ್ನು ತಿಳಿಸಲು ಅಪಿಶಬ್ದವು ಪ್ರಯುಕ್ತವಾಗಿದೆ'. ಇದು 'ಸಮುಚ್ಚಯಾರ್ಥಃ' ಎಂಬುದರ ಅರ್ಥ. ನಾರಾಯಣನು ಎಲ್ಲಾ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದರೂ ಕೂಡ ಅವುಗಳಲ್ಲಿ ಯಾವುದೇ ಒಂದು ವಾಕ್ಯವೂ ಕೂಡ ಬೇರೆಯವರನ್ನು ಪ್ರತಿಪಾದನೆ ಮಾಡುವುದಿಲ್ಲ. ಪ್ರತಿಯೊಂದು ವಾಕ್ಯಗಳೂ ಕೂಡ ನಾರಾಯಣನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದನ್ನು ತಿಳಿಸಲು 'ಅಪಿ'ಪದಕ್ಕೆ 'ಅಭಿವ್ಯಾಪ್ತಿ' ಎಂಬರ್ಥವನ್ನು ಟೀಕೆಯಲ್ಲಿ ಹೇಳಿದ್ದಾರೆ. ಆದ್ದರಿಂದಲೇ 'ಅಖಿಲೈಃ ಅಪಿ ಆಪ್ಯತಮಮ್' ಎಲ್ಲಾ ವಾಕ್ಯಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಎಂಬುದಾಗಿ ಅನ್ವಯವನ್ನು ಮಾಡಿರುತ್ತಾರೆ.

## ತಮಪಾದಿಪ್ರತ್ಯಯಗಳೂ ಕೂಡ ಸಾರ್ಥಕ

**ಪರಿಮಳ– ಪದವರ್ಣಸ್ವರಾದಿರೂಪೇಣಾಪಿ ಪ್ರತಿಪಾದ್ಯಮ್ ಇತ್ಯಭಿಪ್ರೇತ್ಯ ಅಭಿವ್ಯಾಪ್ತೌ ವಾ ಇತ್ಯುಕ್ತಮ್ ಇತ್ಯಪ್ಯಾಹುಃ । ತಮಪ್ ಪ್ರತ್ಯಯಾಖಿಲಶಬ್ದಾಪಿಪದಾನಾಂ ಕೃತ್ಯಂ ವ್ಯನಕ್ತಿ – ಯದೀತ್ಯಾದಿನಾ ॥**

ಪದ, ವರ್ಣ, ಸ್ವರಾದಿಗಳಿಂದಲೂ ಕೂಡ ನಾರಾಯಣನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಎಂಬ ಅಭಿಪ್ರಾಯದಿಂದ 'ಅಭಿವ್ಯಾಪ್ತೌ ವಾ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ - ಹೀಗೂ ಕೂಡ ಕೆಲವರು ವ್ಯಾಖ್ಯಾನ ಮಾಡುತ್ತಾರೆ. ತಮಪ್ ಪ್ರತ್ಯಯ ಹಾಗೂ ಅಖಿಲ

ಎಂಬ ಶಬ್ದ ಮತ್ತು ಅಪಿ ಎಂಬ ಪದ ಇವುಗಳಿಗೆ ಸಾರ್ಥಕ್ಯವನ್ನು ತಿಳಿಸಲು 'ಯದಿ' ಇತ್ಯಾದಿ ಗ್ರಂಥವು ಹೊರಟಿದೆ.

## ಧರ್ಮಪ್ರಾಣಾದಿಗಳು ವೇದದಿಂದ ಮುಖ್ಯಪ್ರತಿಪಾದ್ಯವಲ್ಲ

ಪರಿಮಳ– ತಸ್ಯೇತಿ ॥ ಧರ್ಮಾದೇಃ ಪ್ರಾಣಾದೇಶ್ಚ ಇತ್ಯರ್ಥಃ । 'ಅನ್ಯಾರ್ಥಂ ತು ಜೈಮಿನಿಃ' ಇತ್ಯಾದಿನಾ ವಕ್ಷ್ಯಮಾಣನ್ಯಾಯೇನ ನಾರಾಯಣಪ್ರತೀತ್ಯಂಗತ್ವಂ ಜ್ಞೇಯಮ್ । ಏತಾವತಾ ಧರ್ಮಾದೇರಧಿಕೃತತ್ವಂ ನ ನಿರಸ್ತಮಿತಿ ವಂದ್ಯತ್ವಂ ಪ್ರಾಪ್ತಮತ ಆಹ – ತಥಾವಿಧಮೇವೇತಿ ॥ ಅನನ್ಯಾರ್ಥತಯಾ ಅಖಿಲವೇದಾದಿವೇದ್ಯಮೇವ ಇತ್ಯರ್ಥಃ।

'ತಸ್ಯ' ಎಂಬ ಪದಕ್ಕೆ ಧರ್ಮಾದಿಗಳಿಗೆ ಮತ್ತು ಪ್ರಾಣಾದಿದೇವತೆಗಳಿಗೆ ಎಂದರ್ಥ.

'ಅನ್ಯಾರ್ಥಂ ತು ಜೈಮಿನಿಃ' ಇತ್ಯಾದಿ ಸೂತ್ರಗಳಿಂದ ಯಾವ ಯುಕ್ತಿಗಳನ್ನು ಮುಂದೆ ಹೇಳುತ್ತಾರೋ ಅವುಗಳಿಂದ ಧರ್ಮಪ್ರಾಣ ಮೊದಲಾದವುಗಳು ನಾರಾಯಣನ ಜ್ಞಾನಕ್ಕೆ ಅಂಗವಾಗಿವೆ ಎಂದು ತಿಳಿಯಬೇಕು. ಇದರಿಂದ ಧರ್ಮಾದಿಗಳು ಅಧಿಕೃತವಲ್ಲವೆಂದು ನಿರಾಕರಣೆ ಮಾಡದ ಕಾರಣ ಅವುಗಳೂ ಕೂಡ ವಂದ್ಯವಾಗುತ್ತವಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು 'ತಥಾವಿಧಮೇವ' ಎಂಬ ವಾಕ್ಯವು ಹೊರಟಿದೆ. ಯಾವುದಕ್ಕೂ ಅಂಗವಾಗದೇ ಸಮಸ್ತವೇದಗಳಿಂದ ಯಾವ ವಸ್ತು ಮುಖ್ಯವಾಗಿ ಪ್ರತಿಪಾದ್ಯವಾಗುತ್ತದೋ ಅಂಥ ವಸ್ತುವೇ ಅಧಿಕೃತ ಎನಿಸುತ್ತದೆ ಎಂದು ಇದರ ಅಭಿಪ್ರಾಯ.

## ಅಖಿಲಪದವು ಮುಖ್ಯಪ್ರಾಣವ್ಯಾವರ್ತಕವಾಗಿದೆ

ಪರಿಮಳ– ಅಖಿಲೈರಿತಿ ಚೋಕ್ತಮಿತಿ ॥ ಅಖಿಲೈರಪೀತಿ ಚೋಕ್ತಮ್ ಇತ್ಯಭಿವ್ಯಾಪ್ತ್ಯರ್ಥಕಮಪಿಪದಂ ಚ ಧ್ಯೇಯಮ್ । ಅನ್ಯಥಾ ಧರ್ಮಾದೇರಖಿಲವೇದಾಪ್ರತಿಪಾದ್ಯತ್ವೇಽಪಿ 'ತಾ ವಾ ಏತಾಃ ಸರ್ವಾ ಋಚಃ' ಇತ್ಯೈತರೇಯಭಾಷ್ಯೇ ಸರ್ವವೇದಾಭಿಧೇಯತ್ವಂ ವಾಯೋರಪ್ಯಸ್ತೀತ್ಯುಕ್ತ್ಯಾ ಪ್ರಾಣಸ್ಯಾಪಿ ಅಖಿಲವೇದಪ್ರತಿಪಾದ್ಯತ್ವಾತ್





ಅಖಿಲಪದಂ ತದ್‌ವ್ಯಾವರ್ತಕಂ ನ ಸ್ಯಾದ್ ವ್ಯರ್ಥಂ ಚಾಭಿವ್ಯಾಪ್ತ್ಯರ್ಥಕಮಪಿಪದಂ ಸ್ಯಾತ್ । ತಸ್ಮಿನ್ ಸತಿ ತು 'ಪೂವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಇತಿ ಋಗ್ಭಾಷ್ಯೋಕ್ತದಿಶಾ ಮಂತ್ರಾದಿವದ್ ವಾ ಇತ್ಯತ್ರೋಕ್ತನ್ಯಾಯೇನ ಚ ವಿಷ್ಣುಸೂಕ್ತ-ಪುರುಷಸೂಕ್ತಲಕ್ಷ್ಮೀಸೂಕ್ತಾದ್ಯನ್ಯತ್ರೈವ ಪ್ರತಿಪಾದ್ಯತ್ವಾದ್ ಭವತಿ ವ್ಯಾವರ್ತಕಮ್ ಅಖಿಲ-ಪದಮ್ ॥

'ಅಖಿಲೈರಿತಿ ಚೋಕ್ತಮ್' ಎಂಬ ವಾಕ್ಯದಲ್ಲಿ 'ಅಖಿಲೈಃ ಅಪಿ'; 'ಇತಿ ಚೋಕ್ತಮ್' ಎಂಬುದಾಗಿ ಎಲ್ಲಾ ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಎಂಬ ಅಭಿಪ್ರಾಯದಿಂದ ಅಭಿವ್ಯಾಪ್ತ್ಯರ್ಥದಲ್ಲಿರುವ ಅಪಿಶಬ್ದವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ ಧರ್ಮಾದಿಗಳೂ ಕೂಡ ಅಖಿಲವೇದ್ಯಪ್ರತಿಪಾದ್ಯಗಳಾಗಿರುವುದಿಲ್ಲ ಆದರೂ ಕೂಡ 'ತಾ ವಾ ಏತಾಃ ಸರ್ವಾ ಋಚಃ' ಎಂಬ ಐತರೇಯಭಾಷ್ಯದಲ್ಲಿ ಹೇಳಿದಂತೆ ಮುಖ್ಯಪ್ರಾಣನೂ ಕೂಡ ಸರ್ವವೇದ್ಯ-ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಅಖಿಲಪದವು ಪ್ರಾಣನಿಗೂ ಕೂಡ ಅಧಿಕೃತತ್ವವನ್ನು ವ್ಯಾವೃತ್ತಿಮಾಡಲು ಸಮರ್ಥವಾಗುವುದಿಲ್ಲ. ಮತ್ತು ಅಭಿವ್ಯಾಪ್ತಿ ಎಂಬ ಅರ್ಥದಲ್ಲಿರುವ ಅಪಿ ಎಂಬ ಶಬ್ದವೂ ಕೂಡ ವ್ಯರ್ಥವಾಗುತ್ತಿತ್ತು. ಅಖಿಲೈಃ ಅಪಿ ಇತಿ ಚ ಎಂಬುದಾಗಿ ಅಪಿಶಬ್ದ-ವನ್ನೂ ಸೇರಿಸಿದರೆ ಈ ದೋಷ ಬರುವುದಿಲ್ಲ. ಏಕೆಂದರೆ ''ಪೂವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಎಂಬುದಾಗಿ ಋಗ್ಭಾಷ್ಯದಲ್ಲಿ ಹೇಳಿದ ಪ್ರಕಾರ ಮತ್ತು 'ಮಂತ್ರಾದಿವದ್ವಾ' ಎಂಬ ಸೂತ್ರದಲ್ಲಿ ಹೇಳಿದ ಯುಕ್ತಿಯಂತೆ ವಿಷ್ಣುಸೂಕ್ತ, ಪುರುಷಸೂಕ್ತ, ಲಕ್ಷ್ಮೀಸೂಕ್ತ ಮೊದ-ಲಾದವುಗಳನ್ನು ಬಿಟ್ಟು ಉಳಿದ ವೇದಗಳಿಂದಷ್ಟೇ ಮುಖ್ಯಪ್ರಾಣನು ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ 'ಸುವಾಕ್ಯೈಃ ಅಖಿಲೈರಪಿ ಆಪ್ಯತಮಮ್' ಎಂಬಲ್ಲಿ ಹೇಳಿದ ಅಧಿಕೃತತ್ವವು ವಾಯುದೇವನಲ್ಲಿ ಇರುವುದಿಲ್ಲ. ನಾರಾಯಣನಲ್ಲಿ ಮಾತ್ರ ಇರುತ್ತದೆ. ಹೀಗೆ ಅಖಿಲಪದವು ಅನ್ಯವ್ಯಾವರ್ತಕವಾಗುವ ಮೂಲಕ ಸಾರ್ಥಕವಾಗುತ್ತದೆ.

ವಿಶೇಷವಿಚಾರ— 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬಲ್ಲಿ 'ಅಖಿಲೈಃ' ಎಂಬುದನ್ನು ಕೊಡ-ದಿದ್ದರೆ ಕೆಲವು ವೇದಭಾಗಗಳಿಂದ ಪ್ರತಿಪಾದ್ಯವಾದ ಧರ್ಮವೂ ವಂದನೀಯವಾಗಬೇಕಾದೀತು. ಆದ್ದರಿಂದ ಅಖಿಲೈಃ ಎಂದು ಹೇಳಿದ್ದಾರೆ. ಧರ್ಮವು ಎಲ್ಲಾ ವೇದಗಳಿಂದ ಪ್ರತಿಪಾದ್ಯವಲ್ಲವಾದ್ದರಿಂದ





ವಂದನೀಯವಾಗಲಾರದು. ಆದರೆ ಮುಖ್ಯಪ್ರಾಣನು ಸಮಸ್ತವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂದು. 'ತಾ ವಾ ಏತಾಃ ಶೀರ್ಷನ್' ಎಂಬ ಶ್ರುತಿಯು ಹೇಳುತ್ತಿದೆ.

ಆದ್ದರಿಂದ ಮುಖ್ಯಪ್ರಾಣನು ಸಕಲವೇದಪ್ರತಿಪಾದ್ಯನಾದ್ದರಿಂದ ವಿಷ್ಣುವಿನಂತೆ ಅವನೂ ವಂದ-ನೀಯನಾಗಬೇಕಾದೀತು. ಅದಕ್ಕೋಸ್ಕರ ಅಭಿವ್ಯಾಪ್ತಿ ಎಂಬ ಅರ್ಥವನ್ನು ತಿಳಿಸುವ 'ಅಪಿ'ಪದವನ್ನು ಹೇಳಿದ್ದಾರೆ. 'ಪೂರ್ವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಎಂದು ಋಗ್ಭಾಷ್ಯದಲ್ಲಿ ಹೇಳಿದಂತೆ, ವಿಷ್ಣುಪರವಾದ ಸೂಕ್ತಗಳನ್ನು ಹಾಗೂ ಲಕ್ಷ್ಮೀಪರವಾದ ಸೂಕ್ತಗಳನ್ನು ಬಿಟ್ಟು ಉಳಿದ ಸೂಕ್ತಗಳಿಂದಷ್ಟೆ ಮುಖ್ಯಪ್ರಾಣನು ಪ್ರತಿಪಾದ್ಯನೆಂದು ತಿಳಿಯುತ್ತದೆ. ಹೊರತು ಸಕಲವೇದಪ್ರತಿಪಾದ್ಯತ್ವ ಇಲ್ಲವಾದ್ದರಿಂದ ವಂದನೀಯನಾಗುವುದಿಲ್ಲ. ಈ ರೀತಿಯಾಗಿ ಅಪಿಶಬ್ದಸಹಿತವಾದ ಅಖಿಲಪದದ ಸಾರ್ಥಕ್ಯವನ್ನು ತಿಳಿಯಬೇಕು.

ಧರ್ಮ ಮತ್ತು ಪ್ರಾಣಾದಿಗಳು ವೇದಾದಿಗಳ ಏಕದೇಶದಿಂದ ಪ್ರತಿಪಾದ್ಯವಾದರೂ ಗ್ರಂಥಪ್ರತಿ-ಪಾದ್ಯವೂ ಆಗಲಿ ಎಂಬ ಆಕ್ಷೇಪವು ಬರುತ್ತದೆ. ಅದನ್ನು ಪರಿಹರಿಸಲು ತಥಾವಿಧಮೇವ ಎಂಬ ವಾಕ್ಯ ಹೊರಟಿರುತ್ತದೆ. ತಥಾವಿಧಮೇವ ಎಂದರೆ ಮುಖ್ಯವಾಗಿ ಎಲ್ಲಾ ವೇದಗಳಿಂದ ಪ್ರತಿಪಾದಿಸಲ್ಪಟ್ಟ ವಸ್ತುವೇ ಗ್ರಂಥಪ್ರತಿಪಾದ್ಯವೆಂದು ಆ ಆಕ್ಷೇಪಕ್ಕೆ ಸಮಾಧಾನವನ್ನು ತಿಳಿಯಬೇಕು.

'ಅಖಿಲ'ಪದದಿಂದ ಸಕಲವೇದಪ್ರತಿಪಾದ್ಯನಾದ್ದರಿಂದ ನಾರಾಯಣನು ವಂದ್ಯನೆಂದು ತಿಳಿಯುತ್ತದೆ. ತಮಪ್-ಪ್ರತ್ಯಯದಿಂದ ನಾರಾಯಣನು ಮುಖ್ಯವಾಗಿ ಪ್ರತಿಪಾದ್ಯನಾದ್ದರಿಂದ ವಂದ್ಯನೆಂದು ತಿಳಿಯು-ತ್ತದೆ. ಆದ್ದರಿಂದ ವಂದ್ಯತ್ವಕ್ಕೆ ಪ್ರಯೋಜಕವಾದ 'ಸಕಲವೇದಪ್ರತಿಪಾದ್ಯತ್ವ' ಹಾಗೂ 'ಮುಖ್ಯತಯಾ ಪ್ರತಿಪಾದ್ಯತ್ವ' ಎಂಬ ಎರಡು ಹೇತುಗಳ ವಿವಕ್ಷೆಯಿಂದ ಅಖಿಲ ಮತ್ತು ತಮಪ್‌ಪ್ರತ್ಯಯಗಳನ್ನು ನಿರ್ದೇಶಿಸಿದ್ದಾರೆ.

## ಅಪಿಶಬ್ದದ ಸಮುಚ್ಚಾಯಕಪರಮಸಾಧ್ಯ

ವಾಕ್ಯಾರ್ಥಚಂದ್ರಿಕಾ – ಅತ್ರ ಅಪಿಪದಸ್ಯ ಯಥಾಸ್ಥಿತಸ್ಯ ಸಮುಚ್ಚಯಾರ್ಥತಾಯಾಃ ಏವ ವಕ್ತವ್ಯತ್ವಾತ್ ಸಾಕ್ಷಾದ್ ವಂದ್ಯತ್ವಹೇತೋರಸ್ಯ ವಂದ್ಯತ್ವಹೇತುವೈಶಿಷ್ಟ್ಯಹೇತುಭಿಃ 'ನಿಖಿಲ' ಇತ್ಯಾದಿಭಿಃ ಸಾಕ್ಷಾತ್ ಸಾಧ್ಯೇನ ಸಮುಚ್ಚಯಾಸಂಭವಾತ್ ಪರಮಸಾಧ್ಯಸಮುಚ್ಚಯಮಭಿಪ್ರೇತ್ಯ ಆಹ – ಅಪೀತಿ ॥ ಅತ ಏವ ಅಸ್ವರಸಾದ್ಭಿನ್ನಕ್ರಮತ್ವಮಭ್ಯುಪೇತ್ಯ ಅರ್ಥಾಂತರಂ ತಸ್ಯಾಹ – ಅಭೀತಿ ॥





ಅಖಿಲಪದಂ ತದ್‌ವ್ಯಾವರ್ತಕಂ ನ ಸ್ಯಾದ್ ವ್ಯರ್ಥಂ ಚಾಭಿವ್ಯಾಪ್ತ್ಯರ್ಥಕಮಪಿಪದಂ ಸ್ಯಾತ್ । ತಸ್ಮಿನ್ ಸತಿ ತು 'ಪೂವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಇತಿ ಋಗ್ಭಾಷ್ಯೋಕ್ತದಿಶಾ ಮಂತ್ರಾದಿವದ್ ವಾ ಇತ್ಯತ್ರೋಕ್ತನ್ಯಾಯೇನ ಚ ವಿಷ್ಣುಸೂಕ್ತ-ಪುರುಷಸೂಕ್ತಲಕ್ಷ್ಮೀಸೂಕ್ತಾದ್ಯನ್ಯತ್ರೈವ ಪ್ರತಿಪಾದ್ಯತ್ವಾದ್ ಭವತಿ ವ್ಯಾವರ್ತಕಮ್ ಅಖಿಲ-ಪದಮ್ ॥

'ಅಖಿಲೈರಿತಿ ಚೋಕ್ತಮ್' ಎಂಬ ವಾಕ್ಯದಲ್ಲಿ 'ಅಖಿಲೈಃ ಅಪಿ'; 'ಇತಿ ಚೋಕ್ತಮ್' ಎಂಬುದಾಗಿ ಎಲ್ಲಾ ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಎಂಬ ಅಭಿಪ್ರಾಯದಿಂದ ಅಭಿವ್ಯಾಪ್ತ್ಯರ್ಥದಲ್ಲಿರುವ ಅಪಿಶಬ್ದವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ ಧರ್ಮಾದಿಗಳೂ ಕೂಡ ಅಖಿಲವೇದ್ಯಪ್ರತಿಪಾದ್ಯಗಳಾಗಿರುವುದಿಲ್ಲ ಆದರೂ ಕೂಡ 'ತಾ ವಾ ಏತಾಃ ಸರ್ವಾ ಋಚಃ' ಎಂಬ ಐತರೇಯಭಾಷ್ಯದಲ್ಲಿ ಹೇಳಿದಂತೆ ಮುಖ್ಯಪ್ರಾಣನೂ ಕೂಡ ಸರ್ವವೇದ್ಯ-ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಅಖಿಲಪದವು ಪ್ರಾಣನಿಗೂ ಕೂಡ ಅಧಿಕೃತತ್ವವನ್ನು ವ್ಯಾವೃತ್ತಿಮಾಡಲು ಸಮರ್ಥವಾಗುವುದಿಲ್ಲ. ಮತ್ತು ಅಭಿವ್ಯಾಪ್ತಿ ಎಂಬ ಅರ್ಥದಲ್ಲಿರುವ ಅಪಿ ಎಂಬ ಶಬ್ದವೂ ಕೂಡ ವ್ಯರ್ಥವಾಗುತ್ತಿತ್ತು. ಅಖಿಲೈಃ ಅಪಿ ಇತಿ ಚ ಎಂಬುದಾಗಿ ಅಪಿಶಬ್ದ-ವನ್ನೂ ಸೇರಿಸಿದರೆ ಈ ದೋಷ ಬರುವುದಿಲ್ಲ. ಏಕೆಂದರೆ ''ಪೂವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಎಂಬುದಾಗಿ ಋಗ್ಭಾಷ್ಯದಲ್ಲಿ ಹೇಳಿದ ಪ್ರಕಾರ ಮತ್ತು 'ಮಂತ್ರಾದಿವದ್ವಾ' ಎಂಬ ಸೂತ್ರದಲ್ಲಿ ಹೇಳಿದ ಯುಕ್ತಿಯಂತೆ ವಿಷ್ಣುಸೂಕ್ತ, ಪುರುಷಸೂಕ್ತ, ಲಕ್ಷ್ಮೀಸೂಕ್ತ ಮೊದ-ಲಾದವುಗಳನ್ನು ಬಿಟ್ಟು ಉಳಿದ ವೇದಗಳಿಂದಷ್ಟೇ ಮುಖ್ಯಪ್ರಾಣನು ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ 'ಸುವಾಕ್ಯೈಃ ಅಖಿಲೈರಪಿ ಆಪ್ಯತಮಮ್' ಎಂಬಲ್ಲಿ ಹೇಳಿದ ಅಧಿಕೃತತ್ವವು ವಾಯುದೇವನಲ್ಲಿ ಇರುವುದಿಲ್ಲ. ನಾರಾಯಣನಲ್ಲಿ ಮಾತ್ರ ಇರುತ್ತದೆ. ಹೀಗೆ ಅಖಿಲಪದವು ಅನ್ಯವ್ಯಾವರ್ತಕವಾಗುವ ಮೂಲಕ ಸಾರ್ಥಕವಾಗುತ್ತದೆ.

ವಿಶೇಷವಿಚಾರ— 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬಲ್ಲಿ 'ಅಖಿಲೈಃ' ಎಂಬುದನ್ನು ಕೊಡ-ದಿದ್ದರೆ ಕೆಲವು ವೇದಭಾಗಗಳಿಂದ ಪ್ರತಿಪಾದ್ಯವಾದ ಧರ್ಮವೂ ವಂದನೀಯವಾಗಬೇಕಾದೀತು. ಆದ್ದರಿಂದ ಅಖಿಲೈಃ ಎಂದು ಹೇಳಿದ್ದಾರೆ. ಧರ್ಮವು ಎಲ್ಲಾ ವೇದಗಳಿಂದ ಪ್ರತಿಪಾದ್ಯವಲ್ಲವಾದ್ದರಿಂದ





ವಂದನೀಯವಾಗಲಾರದು. ಆದರೆ ಮುಖ್ಯಪ್ರಾಣನು ಸಮಸ್ತವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂದು. 'ತಾ ವಾ ಏತಾಃ ಶೀರ್ಷನ್' ಎಂಬ ಶ್ರುತಿಯು ಹೇಳುತ್ತಿದೆ.

ಆದ್ದರಿಂದ ಮುಖ್ಯಪ್ರಾಣನು ಸಕಲವೇದಪ್ರತಿಪಾದ್ಯನಾದ್ದರಿಂದ ವಿಷ್ಣುವಿನಂತೆ ಅವನೂ ವಂದ-ನೀಯನಾಗಬೇಕಾದೀತು. ಅದಕ್ಕೋಸ್ಕರ ಅಭಿವ್ಯಾಪ್ತಿ ಎಂಬ ಅರ್ಥವನ್ನು ತಿಳಿಸುವ 'ಅಪಿ'ಪದವನ್ನು ಹೇಳಿದ್ದಾರೆ. 'ಪೂರ್ವಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ' ಎಂದು ಋಗ್ಭಾಷ್ಯದಲ್ಲಿ ಹೇಳಿದಂತೆ, ವಿಷ್ಣುಪರವಾದ ಸೂಕ್ತಗಳನ್ನು ಹಾಗೂ ಲಕ್ಷ್ಮೀಪರವಾದ ಸೂಕ್ತಗಳನ್ನು ಬಿಟ್ಟು ಉಳಿದ ಸೂಕ್ತಗಳಿಂದಷ್ಟೆ ಮುಖ್ಯಪ್ರಾಣನು ಪ್ರತಿಪಾದ್ಯನೆಂದು ತಿಳಿಯುತ್ತದೆ. ಹೊರತು ಸಕಲವೇದಪ್ರತಿಪಾದ್ಯತ್ವ ಇಲ್ಲವಾದ್ದರಿಂದ ವಂದನೀಯನಾಗುವುದಿಲ್ಲ. ಈ ರೀತಿಯಾಗಿ ಅಪಿಶಬ್ದಸಹಿತವಾದ ಅಖಿಲಪದದ ಸಾರ್ಥಕ್ಯವನ್ನು ತಿಳಿಯಬೇಕು.

ಧರ್ಮ ಮತ್ತು ಪ್ರಾಣಾದಿಗಳು ವೇದಾದಿಗಳ ಏಕದೇಶದಿಂದ ಪ್ರತಿಪಾದ್ಯವಾದರೂ ಗ್ರಂಥಪ್ರತಿ-ಪಾದ್ಯವೂ ಆಗಲಿ ಎಂಬ ಆಕ್ಷೇಪವು ಬರುತ್ತದೆ. ಅದನ್ನು ಪರಿಹರಿಸಲು ತಥಾವಿಧಮೇವ ಎಂಬ ವಾಕ್ಯ ಹೊರಟಿರುತ್ತದೆ. ತಥಾವಿಧಮೇವ ಎಂದರೆ ಮುಖ್ಯವಾಗಿ ಎಲ್ಲಾ ವೇದಗಳಿಂದ ಪ್ರತಿಪಾದಿಸಲ್ಪಟ್ಟ ವಸ್ತುವೇ ಗ್ರಂಥಪ್ರತಿಪಾದ್ಯವೆಂದು ಆ ಆಕ್ಷೇಪಕ್ಕೆ ಸಮಾಧಾನವನ್ನು ತಿಳಿಯಬೇಕು.

'ಅಖಿಲ'ಪದದಿಂದ ಸಕಲವೇದಪ್ರತಿಪಾದ್ಯನಾದ್ದರಿಂದ ನಾರಾಯಣನು ವಂದ್ಯನೆಂದು ತಿಳಿಯುತ್ತದೆ. ತಮಪ್-ಪ್ರತ್ಯಯದಿಂದ ನಾರಾಯಣನು ಮುಖ್ಯವಾಗಿ ಪ್ರತಿಪಾದ್ಯನಾದ್ದರಿಂದ ವಂದ್ಯನೆಂದು ತಿಳಿಯು-ತ್ತದೆ. ಆದ್ದರಿಂದ ವಂದ್ಯತ್ವಕ್ಕೆ ಪ್ರಯೋಜಕವಾದ 'ಸಕಲವೇದಪ್ರತಿಪಾದ್ಯತ್ವ' ಹಾಗೂ 'ಮುಖ್ಯತಯಾ ಪ್ರತಿಪಾದ್ಯತ್ವ' ಎಂಬ ಎರಡು ಹೇತುಗಳ ವಿವಕ್ಷೆಯಿಂದ ಅಖಿಲ ಮತ್ತು ತಮಪ್‌ಪ್ರತ್ಯಯಗಳನ್ನು ನಿರ್ದೇಶಿಸಿದ್ದಾರೆ.

## ಅಪಿಶಬ್ದದ ಸಮುಚ್ಚಾಯಕಪರಮಸಾಧ್ಯ

ವಾಕ್ಯಾರ್ಥಚಂದ್ರಿಕಾ – ಅತ್ರ ಅಪಿಪದಸ್ಯ ಯಥಾಸ್ಥಿತಸ್ಯ ಸಮುಚ್ಚಯಾರ್ಥತಾಯಾಃ ಏವ ವಕ್ತವ್ಯತ್ವಾತ್ ಸಾಕ್ಷಾದ್ ವಂದ್ಯತ್ವಹೇತೋರಸ್ಯ ವಂದ್ಯತ್ವಹೇತುವೈಶಿಷ್ಟ್ಯಹೇತುಭಿಃ 'ನಿಖಿಲ' ಇತ್ಯಾದಿಭಿಃ ಸಾಕ್ಷಾತ್ ಸಾಧ್ಯೇನ ಸಮುಚ್ಚಯಾಸಂಭವಾತ್ ಪರಮಸಾಧ್ಯಸಮುಚ್ಚಯಮಭಿಪ್ರೇತ್ಯ ಆಹ – ಅಪೀತಿ ॥ ಅತ ಏವ ಅಸ್ವರಸಾದ್ಭಿನ್ನಕ್ರಮತ್ವಮಭ್ಯುಪೇತ್ಯ ಅರ್ಥಾಂತರಂ ತಸ್ಯಾಹ – ಅಥೀತಿ ॥



'ಆಪ್ಯತಮಮಪಿ' ಎಂಬಲ್ಲಿರುವ ಅಪಿಶಬ್ದವು ವಂದ್ಯತ್ವದಲ್ಲಿ ಹೇತುಸಮುಚ್ಚಯವನ್ನು ಮಾಡು-ತ್ತಿದೆ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ವಂದ್ಯತ್ವದಲ್ಲೇ ಏಕೆ ಹೇತುಸಮುಚ್ಚಾಯಕವೆನ್ನಬೇಕು? ಎಂದರೆ ವಂದ್ಯತ್ವಕ್ಕೆ ಸಾಕ್ಷಾತ್ ಹೇತುವಾದದ್ದು ವೈಶಿಷ್ಟ್ಯ. ಈ ವೈಶಿಷ್ಟ್ಯಕ್ಕೆ 'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಂ' 'ಅಸ್ಮೋದ್ಭವಾದಿದಂ' ಎಂಬ ಮೂರು ವಿಶೇಷಣಗಳು ಪ್ರಯೋಜಕಗಳಾಗಿವೆ. ಈ ಮೂರು ವಿಶೇಷಣಗಳು ವಂದ್ಯತ್ವಕ್ಕೆ ವೈಶಿಷ್ಟ್ಯದ ಮೂಲಕ ಹೇತುವಾಗಿವೆ. ನೇರವಾಗಿ ಹೇತುವಾಗಿ-ರುವುದಿಲ್ಲ. ಆದರೆ 'ಅಖಿಲೈಃ ಸುವಾಕ್ಯೈಃ ಆಪ್ಯತಮಮ್' ಎಂಬುದು ನೇರವಾಗಿಯೇ ವಂದ್ಯತ್ವಕ್ಕೆ ಹೇತುವಾಗಿದೆ. ಆದ್ದರಿಂದ ಪರಂಪರಯಾ ಹೇತುವಾದ ನಿಖಿಲಪೂರ್ಣಗುಣೈಕತ್ವಾದಿಗಳನ್ನು ಸಮುಚ್ಚಯ ಮಾಡುವುದಿಲ್ಲ. ಮತ್ತು ಸಾಕ್ಷಾತ್ ಸಾಧ್ಯವೆನಿಸಿದ ವೈಶಿಷ್ಟ್ಯದ ಜೊತೆಯೂ ಕೂಡ ಸಮುಚ್ಚಯವು ಕೂಡುವುದಿಲ್ಲ. ಆದ್ದರಿಂದ ಪರಮಸಾಧ್ಯವೆನಿಸಿದ ವಂದ್ಯತ್ವದ ಜೊತೆಗೆ ಸಮುಚ್ಚಯವನ್ನು ತಿಳಿಯ-ಬೇಕು. ಈ ಅಭಿಪ್ರಾಯದಿಂದ ಟೀಕೆಯಲ್ಲಿ 'ಅಪಿಶಬ್ದಃ ವಂದ್ಯತ್ವೇ ಹೇತುಸಮುಚ್ಚಯಾರ್ಥಃ' ಎಂಬು-ದಾಗಿ ಹೇಳಿದ್ದಾರೆ. ಈ ಪಕ್ಷದಲ್ಲಿ ಅಸ್ವಾರಸ್ಯವಿರುವುದರಿಂದ ಭಿನ್ನಕ್ರಮವನ್ನು ಅಂಗೀಕಾರ ಮಾಡಿ ಮತ್ತೊಂದು ಅರ್ಥವನ್ನು ಹೇಳಲು 'ಅಭಿವ್ಯಾಪ್ತೌ' ಎಂಬುದಾಗಿ ಅಪಿಶಬ್ದಕ್ಕೆ ವ್ಯಾಖ್ಯಾನ ಮಾಡಿದ್ದಾರೆ.

## ರಸಘಟ್ಟ

## ಅಖಿಲಪದವಿರುವಾಗ ಪುನಃ ತಮಪ್ ಪ್ರತ್ಯಯವೇಕೆ?

ಆನಂದಃ – ನನು 'ಆಪ್ಯತಮಮ್' ಇತ್ಯಸ್ಯ ಅಧಿಕೃತತತ್ವಪ್ರತಿಪಾದಕತ್ವೇ ಅಖಿಲ-ತಮಪೋರ್ವೈಯರ್ಥ್ಯಮ್ । ವೇದಪ್ರತಿಪಾದ್ಯಮ್ ಇತ್ಯನೇನೈವ ಅಧಿಕೃತತತ್ವಪ್ರತಿಪಾದನ-ಸಂಭವಾತ್ ಇತ್ಯತಃ, ತಂ ನಿರಸನೀಯಾಮಾಶಂಕಾಮಾಹ – ಯದೀತಿ ॥ 'ಆಪ್ಯತಮಮ್' ಇತಿ, 'ಅಖಿಲೈಃ ಸುವಾಕ್ಯೈಃ' ಇತಿ ಚೋಕ್ತಮಿತಿ । ನ ಚ ಧರ್ಮಾದೌ ಅಖಿಲವೇದಪ್ರತಿಪಾದ್ಯತ್ವಸ್ಯ ವಾಽತಿ-ಶಯೇನ ತತ್ಪ್ರತಿಪಾದ್ಯತ್ವಸ್ಯ ವಾ ಅಸಂಭವೇನಾಖಿಲತಮಪೋರನ್ಯತರೇಣೈವ ತದ್‌ವ್ಯಾವೃತ್ತಿ-ಸಂಭವಾತ್ ಉಭಯೋರ್ಮಧ್ಯೇ ಏಕಸ್ಯ ವೈಯರ್ಥ್ಯಂ ಸ್ಯಾದಿತಿ ವಾಚ್ಯಮ್ । ವೇದಪ್ರತಿಪಾದ್ಯಮ್ ಇತ್ಯುಕ್ತೇ ಧರ್ಮಾದಾವತಿಪ್ರಸಕ್ತೌ ಸತ್ಯಾಂ ತದರ್ಥಮ್ 'ಅಖಿಲೈಃ' ಇತ್ಯುಕ್ತೇ ಶ್ರೀದೇವ್ಯಾ ಅಪಿ ಸ್ವಾವರಸೂಕ್ತೇಷು ಮುಖ್ಯತಃ ಪ್ರತಿಪಾದ್ಯತ್ವೇನ ವಿಷ್ಣುಸೂಕ್ತೇ ತ್ವನ್ಯಾರ್ಥ(ತ್ವಮುಖ್ಯಾರ್ಥ)ಪ್ರತಿ-ಪಾದ್ಯತ್ವೇನ ಅಖಿಲವೇದಪ್ರತಿಪಾದ್ಯತ್ವಸ್ಯ ಸತ್ತ್ವೇನ ತದ್ವ್ಯಾವೃತ್ತ್ಯರ್ಥಂ ತಮಪೋ ಗ್ರಹಣಮ್ । ತಸ್ಯಾಶ್ಚ ಅತಿಶಯೇನ ತತ್ಪ್ರತಿಪಾದ್ಯತ್ವಾಭಾವಾನ್ನ ತತ್ರಾತಿಪ್ರಸಂಗಃ । ತರ್ಹಿ ಅನೇನೈವ ಉಭಯ-







ವ್ಯಾವೃತ್ತಿಸಂಭವಾತ್ ಅಖಿಲಪದವೈಯರ್ಥ್ಯಮಿತಿ ನ ಚ ವಾಚ್ಯಮ್ । ವೇದೈಕದೇಶೇऽತಿಶಯೇನ ವಿಷ್ಣೋಃ ಪ್ರತಿಪಾದ್ಯತ್ವವತ್ ತದೇಕದೇಶಾಂತರೇ ರುದ್ರಸ್ಯಾಪ್ಯತಿಶಯೇನ ಪ್ರತಿಪಾದ್ಯತ್ವಮಿತಿ ಶಂಕಾ-ನಿವಾರಣಾರ್ಥತ್ವೇನ ವೈಯರ್ಥ್ಯಾಭಾವಾತ್ । ತಥಾ ಚ ಅತಿಶಯೇನ ಅಖಿಲವೇದಪ್ರತಿಪಾದ್ಯತ್ವಂ ಸಿದ್ಧ್ಯತೀತಿ ಭಾವಃ। ಅತ ಏವ 'ಗತಿಸಾಮಾನ್ಯಾತ್' ಇತಿ ಸೂತ್ರಮ್ ಅರ್ಥವದಿತಿ ಭಾವಃ।

'ಆಪ್ಯತಮಮ್' ಎಂಬುದು ಅಧಿಕೃತತತ್ವವನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ಹೇಳಿದರೆ ಅಖಿಲ ಹಾಗೂ ತಮಪ್‌ಪ್ರತ್ಯಯ ಎರಡನ್ನೂ ಹೇಳುವುದು ವ್ಯರ್ಥ. ಏಕೆಂದರೆ ವೇದಪ್ರತಿಪಾದ್ಯತ್ವಂ ಎಂಬುದರಿಂದಲೇ ಅಧಿಕೃತತ್ವವನ್ನು ಹೇಳಲು ಬರುತ್ತದೆ. ಈ ಆಶಂಕೆಯನ್ನು ಪರಿಹರಿಸಲು 'ಯದಿ' ಇತ್ಯಾದಿ ಗ್ರಂಥವು ಹೊರಟಿದೆ. 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ ಇತಿ ಚೋಕ್ತಮ್' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಧರ್ಮಾದಿಗಳಲ್ಲಿ ಅಖಿಲವೇದಪ್ರತಿಪಾದ್ಯತ್ವವು ಇರುವುದಿಲ್ಲ. ಮತ್ತು ಮುಖ್ಯಪ್ರತಿಪಾದ್ಯತ್ವವು ಕೂಡ ಇರುವುದಿಲ್ಲ. ಆದ್ದರಿಂದ ಅಖಿಲಪದ ಹಾಗೂ ತಮಪ್‌ಪ್ರತ್ಯಯ ಇವೆರಡಲ್ಲಿ ಯಾವುದಾದರೂ ಒಂದರಿಂದಲೇ ಧರ್ಮಾದಿಗಳನ್ನು ವ್ಯಾವೃತ್ತಿಮಾಡಲು ಬರುತ್ತದೆ. ಆದ್ದರಿಂದ ಅಖಿಲಪದ ಹಾಗೂ ತಮಪ್‌ಪ್ರತ್ಯಯ ಎರಡನ್ನೂ ಕೂಡ ನಿವೇಶಮಾಡಿದ್ದು ವ್ಯರ್ಥ-ವಲ್ಲವೇ?

ಇದು ತಪ್ಪು. ವೇದಪ್ರತಿಪಾದ್ಯಂ ಎಂದಷ್ಟೇ ಹೇಳಿದರೆ ಧರ್ಮಾದಿಗಳಲ್ಲಿ ಅತಿಪ್ರಸಂಗ ಬರುತ್ತದೆ. ಅದಕ್ಕಾಗಿ 'ಅಖಿಲೈಃ' ಎಂದು ಹೇಳಬೇಕು. ಆಗ ಧರ್ಮಾದಿಗಳಿಗೆ ಅಖಿಲವೇದಪ್ರತಿಪಾದ್ಯತ್ವವಿಲ್ಲದ ಕಾರಣ ಅತಿಪ್ರಸಂಗ ಪರಿಹಾರವಾಗುತ್ತದೆ. ಆದರೆ ಲಕ್ಷ್ಮೀದೇವಿಯಲ್ಲಿ ಅಖಿಲವೇದಪ್ರತಿಪಾದ್ಯತ್ವವಿದೆ. ಇದನ್ನು ವ್ಯಾವೃತ್ತಿಮಾಡುವುದಕ್ಕಾಗಿ ತಮಪ್‌ಪ್ರತ್ಯಯವನ್ನು ಹೇಳಲೇಬೇಕು. ಲಕ್ಷ್ಮೀದೇವಿಯು ವಿಷ್ಣು-ವಿಗಿಂತ ಅವರಳಾಗಿ ವೇದಪ್ರತಿಪಾದ್ಯಳಾಗಿದ್ದಾಳೆ ಹೊರತು ಮುಖ್ಯವಾಗಿ ಪ್ರತಿಪಾದ್ಯವಾಗಿಲ್ಲ. ಹಾಗಾದರೆ ಅಖಿಲಪದವು ವ್ಯರ್ಥವಲ್ಲವೇ? ಏಕೆಂದರೆ ತಮಪ್‌ಪ್ರತ್ಯಯದಿಂದಲೇ ಮುಖ್ಯತ್ವವು ತಿಳಿಯುತ್ತದೆ.

ಈ ಪ್ರಶ್ನೆಯು ಕೂಡ ತಪ್ಪು. ವಿಷ್ಣುವು ಹೇಗೆ ವೇದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿ-ದ್ದಾನೋ ಅದರಂತೆ ವೇದದ ಏಕದೇಶದಿಂದ ರುದ್ರನೂ ಕೂಡ ಅತಿಶಯವಾಗಿ ಪ್ರತಿಪಾದ್ಯನಾಗಿದ್ದಾನೆ. ಇದರಿಂದಾಗಿ ಅಖಿಲಪದವನ್ನು ನೀಡಲೇಬೇಕು. ತಮಪ್‌ಪ್ರತ್ಯಯವು ಅತಿಶಯವನ್ನು ಹೇಳಿದರೆ ಅಖಿಲ-ಪದವು ಸಕಲವೇದಗಳನ್ನು ಸಂಗ್ರಹಮಾಡುತ್ತದೆ. ಆದ್ದರಿಂದ ಅಖಿಲಪದ ತಮಪ್‌ಪ್ರತ್ಯಯಗಳೆರಡೂ ಸಾರ್ಥಕವಾಗಿವೆ. ಆದ್ದರಿಂದಲೇ 'ಗತಿಸಾಮಾನ್ಯಾತ್' ಎಂಬ ಸೂತ್ರವು ಅರ್ಥಪೂರ್ಣವಾಗಿದೆ.

## ನಾರಾಯಣಪ್ರತಿಪತ್ತಿಗೆ ಹೇಗೆ ಅಂಗ?

ಶ್ರೀನಿಧಿತೀರ್ಥೀಯ– ನಾರಾಯಣಪ್ರತಿಪತ್ತ್ಯಂಗತಯಾ ಇತಿ ॥ ತದುಕ್ತಮ್ – 'ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ' ಇತಿ । ರಾಜಸಂಬಂಧಿ ರಾಜಾದ್ಯುತ್ಕರ್ಷವರ್ಣನಸ್ಯ ತದುತ್ಕರ್ಷಜ್ಞಾನಾರ್ಥತ್ವದರ್ಶನಾತ್ ।

'ನಾರಾಯಣಪ್ರತಿಪತ್ತ್ಯಂಗತಯಾ' ಎಂದು ನ್ಯಾಯಸುಧೆಯಲ್ಲಿ ಹೇಳಿದೆ. 'ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ' ವೈಷ್ಣವರ ಚರಿತ್ರೆಯನ್ನು ವಿಷ್ಣುವಿನ ಸರ್ವೋತ್ತಮತ್ವದ ಸಾಧನೆಗಾಗಿ ಹೇಳಲಾಗುತ್ತದೆ ಎಂಬ ತಾತ್ಪರ್ಯನಿರ್ಣಯದ ಮಾತನ್ನು ಇಲ್ಲಿ ಸ್ಮರಣೆ ಮಾಡಿಕೊಳ್ಳಬೇಕು. ರಾಜರಿಗೆ ಸಂಬಂಧಪಟ್ಟವರ ಸ್ತೋತ್ರವು ರಾಜನ ಉತ್ಕರ್ಷದ ವರ್ಣನೆಗೆ ಹೇಗೆ ಅಂಗವಾಗುತ್ತದೋ ಅದರಂತೆ.

## 'ಯದಿ ವ್ಯಾಚಿಖ್ಯಾಸಿತೇನ' ಎಂಬ ಟೀಕೆಗೆ ವ್ಯಾಖ್ಯಾನ

ಕಾಶಿಕಾ – ತದುಪಪಾದನಂ ವೇದಸ್ಯ ಅಪೌರುಷೇಯತ್ವೇನ ಪುರಾಣಾದೇಃ ತನ್ಮೂಲತ್ವೇನ ಇತಿ 'ವೇದಾದಿ' ಇತ್ಯಾದಿನಾ ಪುರಾಣಾದಿನಿರ್ಣಯಗ್ರಂಥಪರಿಗ್ರಹಃ । ನಿರ್ಣಾಯಕತ್ವೇನ ಬ್ರಹ್ಮಸೂತ್ರಾಣಾಂ ಪೃಥಗುಕ್ತಿಃ । ಅತಿಶಯೋಽನನ್ಯಾರ್ಥತ್ವಂ ವಿಶೇಷಣೇ ತೃತೀಯಾಪ್ರತಿಪತ್ತೌ ತದನ್ವಯಃ । ಏತೇನ ವಿಷ್ಣೋರುಕ್ತವಿಧಾಧಿಕೃತತ್ವೇ 'ಸರ್ವೇ ವೇದಾ ಯತ್ಪದಮಾಮನಂತಿ, ವೇದೈಶ್ಚ ಸರ್ವೈರಹಮೇವ ವೇದ್ಯಃ' 'ತತ್ತು ಸಮನ್ವಯಾತ್' ಇತ್ಯಾದಿ ಸುವಾಕ್ಯಮೇವ ಪ್ರಮಾಣಮ್ ಇತ್ಯಪಿ ಸೂಚಿತಮ್ । ತಮಪ್ಪ್ರತ್ಯಯಾಖಿಲಪದಯೋಃ ಪ್ರಯೋಜನಂ ವಕ್ತುಮಾಕ್ಷಿಪತಿ – ಯದೀತಿ ॥ ನನು ಸ್ವಚಿಕೀರ್ಷಿತಗ್ರಂಥಪ್ರತಿಪಾದ್ಯತಾಯಾಃ ಸ್ವವಂದ್ಯಪ್ರಯೋಜಕತ್ವೇನ ವಿವಕ್ಷಿತತ್ವಾತ್ ಕಥಂ ಬ್ರಹ್ಮಸೂತ್ರಪ್ರತಿಪಾದ್ಯತ್ವೇನ ಆಚಾರ್ಯವಂದ್ಯತ್ವಮುಚ್ಯತ ಇತ್ಯತ ಆಹ – ವ್ಯಾಚಿಖ್ಯಾಸಿತೇನೇತಿ ॥ ವ್ಯಾಖ್ಯಾನಸ್ಯ ಪೃಥಕ್ ಪ್ರಾಮಾಣ್ಯಾಭಾವೇನ ತದುಪಕೃತವ್ಯಾಖ್ಯೇಯಪ್ರತಿಪಾದ್ಯತ್ವಮೇವ ತತ್ಪ್ರತಿಪಾದ್ಯತ್ವಮಿತಿ ಭಾವಃ । ತರ್ಹಿ ಬ್ರಹ್ಮಸೂತ್ರಪ್ರತಿಪಾದ್ಯತಾಽಪಿ ಕಥಮ್? ಇತ್ಯತ ಆಹ – ತನ್ನಿರ್ಣೀತವ್ಯಾರ್ಥೇನೇತಿ ॥

ವೇದವು ಅಪೌರುಷೇಯವಾಗಿದೆ. ಪುರಾಣಾದಿಗಳು ಅಪೌರುಷೇಯವಾದ ವೇದಮೂಲಕಗಳಾಗಿವೆ. ಆದ್ದರಿಂದ 'ವೇದಾದಿನಾ' ಎಂಬಲ್ಲಿ ಅಪೌರುಷೇಯವಾದ ವೇದ ಹಾಗೂ ತದನುಸಾರಿಯಾದ ಪುರಾಣಗಳನ್ನು ವಿವಕ್ಷಿಸಬೇಕು. ಇವೆರಡೂ ನಿರ್ಣಯಗ್ರಂಥಗಳಾಗಿವೆ. ಬ್ರಹ್ಮಸೂತ್ರಗಳು ನಿರ್ಣಾಯಕ-





ಗ್ರಂಥಗಳಾಗಿರುವುದರಿಂದ 'ಬ್ರಹ್ಮಮೀಮಾಂಸಾಶಾಸ್ತ್ರೇಣ' ಎಂಬುದಾಗಿ ಪ್ರತ್ಯೇಕವಾಗಿ ಉಲ್ಲೇಖ ಮಾಡಿದ್ದಾರೆ. ಹೀಗೆ ಹೇಳಿದ್ದರಿಂದ ಮಹಾವಿಷ್ಣುವು ಅಧಿಕೃತನಾಗಿದ್ದಾನೆಂಬ ವಿಷಯದಲ್ಲಿ 'ಸರ್ವೇ ವೇದಾ ಯತ್ಪದಮಾಮನಂತಿ, ವೇದೈಶ್ಚ ಸರ್ವೈರಹಮೇವ ವೇದ್ಯಃ' 'ತತ್ತು ಸಮನ್ವಯಾತ್' ಇವೇ ಮೊದಲಾದ ಸುವಾಕ್ಯಗಳೇ ಪ್ರಮಾಣವಾಗಿವೆ ಎಂದು ಸೂಚನೆ ಮಾಡಿದಂತಾಯಿತು. 'ಸುವಾಕ್ಯೈಃ ಆಪ್ತತಮಮ್' ಎಂಬುದಕ್ಕೆ ಈ ಎಲ್ಲಾ ವಾಕ್ಯಗಳಿಂದ ಅಧಿಕೃತನೆಂದು ಸಿದ್ಧನಾಗಿದ್ದಾನೆ ಎಂದರ್ಥ.

ತಮಪ್‌ಪ್ರತ್ಯಯ ಹಾಗೂ ಅಖಿಲಪದಗಳ ಪ್ರಯೋಜನವನ್ನು ಹೇಳಲು 'ಯದಿ' ಇತ್ಯಾದಿ ಗ್ರಂಥವು ಹೊರಟಿದೆ.

ತಾವು ಯಾವ ಗ್ರಂಥವನ್ನು ರಚನೆ ಮಾಡಲು ಪ್ರಾರಂಭಿಸಿದ್ದಾರೋ ಅಂಥ ಗ್ರಂಥದಿಂದ ಪ್ರತಿ-ಪಾದ್ಯನಾಗಿದ್ದಾನೆಂದು ಹೇಳುವುದು ಸ್ವವಂದ್ಯತ್ವಕ್ಕೆ ಪ್ರಯೋಜಕವಾಗಿದೆ. ಆದ್ದರಿಂದ ಬ್ರಹ್ಮಸೂತ್ರ-ಪ್ರತಿಪಾದ್ಯತ್ವೇನ ಆಚಾರ್ಯವಂದ್ಯತ್ವವನ್ನು ಏಕೆ ಹೇಳಬೇಕು ಎಂಬ ಪ್ರಶ್ನೆಗೆ 'ವ್ಯಾಚಿಖ್ಯಾಸಿತೇನ' ಎಂಬುದಾಗಿ ಉತ್ತರಿಸಿದ್ದಾರೆ. ವ್ಯಾಖ್ಯಾನಕ್ಕೆ ಪ್ರತ್ಯೇಕಪ್ರಾಮಾಣ್ಯವಿಲ್ಲದ ಕಾರಣ ತದುಪಕೃತವಾದ ವ್ಯಾಖ್ಯೇಯಪ್ರತಿಪಾದ್ಯತ್ವವೇ ವ್ಯಾಖ್ಯಾನಪ್ರತಿಪಾದ್ಯವಾಗಿದೆ ಎಂಬುದು 'ವ್ಯಾಚಿಖ್ಯಾಸಿತೇನ' ಎಂಬುದರ ಅಭಿಪ್ರಾಯ. ಹಾಗಾದರೆ ನಾರಾಯಣನು ಬ್ರಹ್ಮಸೂತ್ರಗಳಿಂದ ಹೇಗೆ ಪ್ರತಿಪಾದ್ಯನಾಗಿದ್ದಾನೆ? ಎಂಬ ಪ್ರಶ್ನೆಗೆ 'ತನ್ನಿರ್ಣೇತವ್ಯಾರ್ಥೇನ' ಎಂಬುದರಿಂದ ಉತ್ತರಿಸಿದ್ದಾರೆ.

## ಸುಧಾಪರಿಮಳಸಾರ

ನಾರಾಯಣನು ಸರ್ವೋತ್ತಮನಾಗಿರುವ ಕಾರಣ ಗ್ರಂಥಾರಂಭದಲ್ಲಿ ವಂದ್ಯನಾಗಿದ್ದಾನೆಂದು ಸಮರ್ಥನೆ ಮಾಡಲಾಯಿತು. ಇದೊಂದೇ ಕಾರಣವಲ್ಲ. ಗ್ರಂಥಪ್ರತಿಪಾದ್ಯನಾಗಿದ್ದರಿಂದಲೂ ಗ್ರಂಥಾರಂಭದಲ್ಲಿ ವಂದ್ಯನಾಗಿದ್ದಾನೆ. ಕೇವಲ ಬ್ರಹ್ಮಸೂತ್ರಗಳಿಂದಷ್ಟೇ ಪ್ರತಿಪಾದ್ಯನಲ್ಲ; ಸಮಸ್ತ -ವೇದಗಳಿಂದ ಮುಖ್ಯವಾಗಿಯೇ ಪ್ರತಿಪಾದ್ಯನಾಗಿದ್ದಾನೆ. ಅಂಥ ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳಿಂದಲೂ ಕೂಡ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಪದವರ್ಣಸ್ವರ ಇವೆಲ್ಲ-ದರ ಮುಖ್ಯಾರ್ಥ ನಾರಾಯಣನೊಬ್ಬನೇ ಹೊರತು ಬೇರಾರೂ ಅಲ್ಲ. ವೇದದ ಕೆಲವು ಭಾಗದಲ್ಲಿ ಧರ್ಮದ ವಿಚಾರ ಇರಬಹುದು, ಮುಖ್ಯಪ್ರಾಣ, ಇಂದ್ರ ಮೊದಲಾದ ದೇವತೆಗಳ ವಿಚಾರವೂ ಇರಬಹುದು. ಆದರೆ ಅವುಗಳನ್ನು ಪ್ರತಿಪಾದನೆ ಮಾಡುವುದು ವೇದದ ನಿಜವಾದ ಅಭಿಪ್ರಾಯವಲ್ಲ. ನಾರಾಯಣನನ್ನು ಪ್ರತಿಪಾದನೆ ಮಾಡುವುದೇ ವೇದದ ಮುಖ್ಯ ಉದ್ದೇಶ. ಅದಕ್ಕೆ ಪೂರಕವಾಗಿ ಅಲ್ಲಲ್ಲಿ ಧರ್ಮಾದಿಗಳ ವಿಚಾರ ದೇವತೆಗಳ ವಿಚಾರ ಪ್ರಸಕ್ತವಾಗುತ್ತದೆ.

ಐತರೇಯಭಾಷ್ಯದಲ್ಲಿ 'ತಾ ವಾ ಏತಾ ಸರ್ವಾ ಋಚಃ' ಇತ್ಯಾದಿ ಪ್ರಮಾಣಗಳಿಂದ ಸಮಗ್ರ-ವೇದದಿಂದ ವಾಯುದೇವರು ಪ್ರತಿಪಾದ್ಯರಾಗಿದ್ದಾರೆಂದು ಹೇಳಲಾಗಿದೆ. ಮುಖ್ಯಪ್ರತಿ-ಪಾದ್ಯತ್ವವು ವಾಯುದೇವರಲ್ಲಿ ಲಕ್ಷ್ಮೀದೇವಿಯಲ್ಲಿ ಯಾರಲ್ಲೂ ಕೂಡ ಇಲ್ಲ. ಈ ಎಲ್ಲಾ ವಿಷಯವನ್ನು ತಮಪ್ ಪ್ರತ್ಯಯ, ಅಖಿಲ ಹಾಗೂ ಅಪಿ ಪದಗಳು ತಿಳಿಸುತ್ತಿವೆ.

## ಪರಿಮಳದ ವೈಶಿಷ್ಟ್ಯ

* ತಮಪ್‌ಪ್ರತ್ಯಯ ಅಖಿಲಶಬ್ದ ಹಾಗೂ ಅಪಿ ಪದಗಳಿಗೆ ಸಾರ್ಥಕ್ಯವನ್ನು ಸಮರ್ಥನೆ ಮಾಡಿರುವುದು ಅಪೂರ್ವವಾಗಿದೆ.

* ಅಖಿಲಪದವು ಧರ್ಮಾದಿಗಳಲ್ಲಿ ಸಮಸ್ತವೇದಪ್ರತಿಪಾದ್ಯತ್ವವನ್ನು ನಿವಾರಣೆ ಮಾಡುತ್ತಿದೆ. ತಮಪ್‌ಪ್ರತ್ಯಯವು ಮುಖ್ಯಪ್ರತಿಪಾದ್ಯತ್ವವನ್ನು ನಿವಾರಣೆ ಮಾಡುತ್ತಿದೆ; ಅಪಿಶಬ್ದವು ಮುಖ್ಯಪ್ರಾಣ ಹಾಗೂ ಲಕ್ಷ್ಮೀದೇವಿಯರಲ್ಲಿ ಸಮಸ್ತವೇದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡುತ್ತಿದೆ.

* ಲಕ್ಷ್ಮೀಯು ವಿಷ್ಣುಸೂಕ್ತಾದಿಗಳಿಂದ ಪ್ರತಿಪಾದ್ಯಳಲ್ಲ. ವಾಯುವು ಲಕ್ಷ್ಮೀಸೂಕ್ತ, ವಿಷ್ಣುಸೂಕ್ತಗಳಿಂದ ಪ್ರತಿಪಾದ್ಯನಲ್ಲ. ಆದ್ದರಿಂದ 'ಅಖಿಲೈರಪಿ ಆಪ್ಯತಮಮ್' ಎಂಬಲ್ಲಿ ಹೇಳಿದ ಅಧಿ-ಕೃತತ್ವವು ವಾಯು ಲಕ್ಷ್ಮೀ ಯಾರಲ್ಲೂ ಕೂಡ ಇಲ್ಲ.

## ನಾರಾಯಣನಲ್ಲಿ ಇಷ್ಟತ್ವವು ಕೂಡ ಇದೆ

**ಶ್ರೀಮನ್ನ್ಯಾಯಸುಧಾ– ಇಷ್ಟತ್ವಪ್ರದರ್ಶನಂ ಸದಾ ಪ್ರಿಯತಮಂ ಮಮ ಇತಿ ॥ ಅತ್ರಾಪಿ ಪೂರ್ವವತ್ 'ಸದಾ' ಪದಸ್ಯ ತಮಪಶ್ಚ ಪ್ರಯೋಜನಮವಧೇಯ-ಮ್ ॥**

ನಾರಾಯಣನಲ್ಲಿ ವಂದ್ಯತ್ವಪ್ರಯೋಜಕವಾದ ಇಷ್ಟತ್ವವೆಂಬ ಧರ್ಮವು ಕೂಡ ಮುಖ್ಯವಾಗಿದೆ ಎಂಬುದನ್ನು ತೋರಿಸಲು 'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣ -ವನ್ನು ಹೇಳಿರುತ್ತಾರೆ. ಇಲ್ಲೂ ಕೂಡ ಹಿಂದಿನಂತೆ 'ಸದಾ' ಪದಕ್ಕೆ ಮತ್ತು 'ಪ್ರಿಯತಮಂ' ಎಂಬಲ್ಲಿರುವ ತಮಪ್‌ಪ್ರತ್ಯಯಕ್ಕೆ ಪ್ರಯೋಜನವನ್ನು ತಿಳಿಯತಕ್ಕದ್ದು.

## 'ಅತ್ರಾಪಿ ಪೂರ್ವವತ್' ಎಂಬ ಸುಧಾವಾಕ್ಯದ ವ್ಯಾಖ್ಯಾನ

ಪರಿಮಳ– ಪೂರ್ವವದಿತಿ ॥ ಪೂರ್ವತ್ರ ಅನಯೋರ್ಯತ್‌ಪ್ರಯೋಜನಮುಕ್ತಂ ತದತ್ರ ಜ್ಞೇಯಮಿತಿ ನಾರ್ಥಃ। ಕಿಂತು ಯಥಾ ಅನ್ಯಾರ್ಥತಯಾ ವೇದೈಕದೇಶಪ್ರತಿಪಾದ್ಯಸ್ಯ ಧರ್ಮಾದೇಃ ಪ್ರಾಣಾದೇಶ್ಚ ಅಧಿಕೃತತ್ವವಾರಣಾಯ 'ಆಪ್ಯತಮಮ್' ಇತಿ ತಮಪ್ ಪ್ರತ್ಯಯೋಽಖಿಲಾದಿಪದಂ ಚ ಪ್ರತ್ಯುಕ್ತಮ್ । ತತ್ರಾಪಿ ಧರ್ಮಾದೇಃ ಪ್ರಾಣಾದೇಶ್ಚ ಪ್ರಿಯತ್ವಮೇವ ನ ತು ಪ್ರಿಯತಮತ್ವಮ್ । ತದಪಿ ಧರ್ಮಾದೇರ್ಭಗವತ್ ಪ್ರತಿಪತ್ತ್ಯಂಗತ್ವದಶಾಯಾಮ್ । ಕಾಮ್ಯತಾದಶಾಯಾಂ ತು ಪ್ರಿಯತ್ವಮಪಿ ನಾಸ್ತಿ। ಪ್ರಾಣಾದೇರ್ಭಗವದಂಗತ್ವೇನೈವ ಪ್ರಿಯತ್ವಂ ನ ತು ಸ್ವತಃ। ತಥಾ ಚ ತಯೋಃ ಕದಾಚಿತ್ ಪ್ರಿಯತ್ವಮಾತ್ರೇಽಪಿ ನ ತಯೋರ್ನಮ್ಯತ್ವಪ್ರಯೋಜಕೇಷ್ಟತ್ವಮ್ । ಅನಾದ್ಯನಂತಕಾಲಮತಿಶಯೇನ ಅನನ್ಯಾರ್ಥತಯಾ ಪ್ರಿಯತ್ವರೂಪನಮ್ಯತ್ವಪ್ರಯೋಜಕಮಿಷ್ಟತ್ವಂ ನಾರಾಯಣಸ್ಯೈವ । ಅತಃ ತಸ್ಯೈವ ನತಿರಿತಿ ದ್ಯೋತನಾಯ 'ಸದಾ' ಇತಿ 'ಪ್ರಿಯತಮಮ್' ಇತಿ ಚೋಕ್ತಮಿತಿ ವ್ಯಾಖ್ಯೇಯಮಿತ್ಯರ್ಥಃ॥

'ಪೂರ್ವವತ್' ಎಂದು ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಇಲ್ಲಿ ಇದನ್ನು ತಿಳಿಯಬೇಕು. ಹಿಂದೆ ಅಖಿಲಪದ ಮತ್ತು ಅಪಿಪದಗಳಿಗೆ ಯಾವ ಪ್ರಯೋಜನವನ್ನು ಹೇಳಿದರೋ ಅದೇ ಪ್ರಯೋಜವನ್ನು ಸದಾ ಪದ ಹಾಗೂ ತಮಪ್‌ಪ್ರತ್ಯಕ್ಕೂ ಕೂಡ ಇಲ್ಲಿ ತಿಳಿಯಬೇಕು ಎಂಬುದು ಇದರ ಅರ್ಥವಲ್ಲ. ಮತ್ತೇನೆಂದರೆ, ಧರ್ಮಾದಿಗಳು ಹಾಗೂ ಮುಖ್ಯಪ್ರಾಣಾದಿಗಳು ವೇದದ ಏಕದೇಶದಿಂದಷ್ಟೇ ಪ್ರತಿಪಾದ್ಯರಾಗಿರುವ ಕಾರಣ ಅಧಿಕೃತತ್ವವೆಂಬ ವಂದ್ಯತ್ವಪ್ರಯೋಜಕಧರ್ಮಗಳು ಅವರಲ್ಲಿಲ್ಲ. ಇದನ್ನು ತಿಳಿಸಲು 'ಆಪ್ಯತಮಂ' ಎಂಬಲ್ಲಿ ತಮಪ್ ಪ್ರತ್ಯಯವನ್ನೂ ಹಾಗೂ 'ಅಖಿಲ'ಪದ 'ಅಪಿ'ಪದಗಳನ್ನು ಪ್ರಯೋಗಿಸಿದ್ದಾರೆ. ಅದರಂತೆ ಇಲ್ಲೂ ಕೂಡ ಧರ್ಮ ಮುಖ್ಯಪ್ರಾಣ ಮೊದಲಾದವರು ಪ್ರಿಯರಾಗಿದ್ದಾರೆ ಹೊರತು ಪ್ರಿಯತಮರಾಗಿಲ್ಲ. ಅದೂ ಕೂಡ ಭಗವಂತನ ಜ್ಞಾನಕ್ಕೆ ಅಂಗವಾದರೆ ಮಾತ್ರ ಪ್ರಿಯರಾಗುತ್ತಾರೆ. ಅಂಗವಾಗದೇ ಕಾಮ್ಯವೆಂದು ತಿಳಿದು ಅನುಷ್ಠಾನ ಮಾಡಿದಾಗ ಧರ್ಮ ಹಾಗೂ ಪ್ರಾಣಾದಿದೇವತೆಗಳು ಕೂಡ

ಪ್ರಿಯರಾಗುವುದಿಲ್ಲ. ಮತ್ತು ಮುಖ್ಯಪ್ರಾಣಾದಿಗಳು ಭಗವಂತನ ಪರಿವಾರರಾಗಿಯೇ ಪ್ರಿಯ-ರಾಗಿದ್ದಾರೆ. ಸ್ವತಂತ್ರರಾಗಿ ಪ್ರಿಯರಾಗಿರುವುದಿಲ್ಲ. ಆದ್ದರಿಂದ ಧರ್ಮಾದಿಗಳು ಮುಖ್ಯ-ಪ್ರಾಣಾದಿ ದೇವತೆಗಳು ಒಮ್ಮೊಮ್ಮೆ ಪ್ರಿಯರಾದರೂ ಕೂಡ ಅವರಲ್ಲಿ ವಂದ್ಯತ್ವಕ್ಕೆ ಪ್ರಯೋಜಕ-ವಾದ ಇಷ್ಟತ್ವವು ಬರುವುದಿಲ್ಲ. ಯಾರಲ್ಲಿ ಅನಾದ್ಯನಂತಕಾಲದ ತನಕ ಅತಿಶಯವಾಗಿ ಪ್ರಿಯತಮತ್ವವಿರುತ್ತದೋ ಅಂಥ ಪ್ರಿಯತಮತ್ವವೇ ವಂದ್ಯತ್ವಕ್ಕೆ ಪ್ರಯೋಜಕವಾಗುತ್ತದೆ. ಇದರಲ್ಲೇ ಇಷ್ಟತ್ವವಿರಲು ಸಾಧ್ಯ. ಇಂಥ ಇಷ್ಟತ್ವವು ನಾರಾಯಣನಿಗೆ ಮಾತ್ರ ಸಲ್ಲುತ್ತದೆ. ಉಳಿದವರಿಗೆ ಸಲ್ಲುವುದಿಲ್ಲ. ಈ ಎಲ್ಲಾ ಕಾರಣದಿಂದ ನಾರಾಯಣನನ್ನೇ ನಮಸ್ಕಾರ ಮಾಡ-ಬೇಕು. ಇದನ್ನು ತಿಳಿಸುವುದಕ್ಕಾಗಿ 'ಸದಾ' ಎಂಬ ಪದವನ್ನು ಹಾಗೂ 'ಪ್ರಿಯತಮಂ' ಎಂಬ ಪದವನ್ನು ಭಾಷ್ಯಕಾರರು ಪ್ರಯೋಗಿಸಿದ್ದಾರೆ ಎಂಬುದಾಗಿ 'ಅತ್ರಾಪಿ ಪೂರ್ವವತ್' ಎಂಬ ಟೀಕಾವಾಕ್ಯಕ್ಕೆ ಅರ್ಥಮಾಡಿಕೊಳ್ಳಬೇಕು.

ವಿಶೇಷವಿಚಾರ – ಅತ್ರಾಪಿ ಪೂರ್ವವತ್ ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ—ಅಪ್ರಧಾನವಾಗಿ ವೇದಾದಿಗಳ ಏಕದೇಶದಲ್ಲಿ ಮಾತ್ರ ಧರ್ಮಪ್ರಾಣಾದಿಗಳು ಪ್ರತಿಪಾದಿತರು. ಆದ್ದರಿಂದ ಅವರಿಗೆ ಗ್ರಂಥಪ್ರತಿಪಾದ್ಯತ್ವ ಇಲ್ಲವೆಂದು ತಿಳಿಸಲು ತಮಪ್‌ಪ್ರತ್ಯಯವನ್ನು ಅಪಿಶಬ್ದಸಹಿತವಾದ ಅಖಿಲಶಬ್ದವನ್ನು ಪ್ರಯೋಗಿಸಿದ್ದಾರೆ ಎಂದು ಸಮರ್ಥಿಸಿದೆ.

ಅದರಂತೆ ಇಲ್ಲಿ ಧರ್ಮಾದಿಗಳು ಮತ್ತು ಪ್ರಾಣಾದಿಗಳು ಪ್ರಿಯವೇ ಹೊರತು ಪ್ರಿಯತಮವಲ್ಲ, ಅದರಲ್ಲೂ ಧರ್ಮಾದಿಗಳು ಭಗವಂತನ ಪ್ರಾಪ್ತಿಗಾಗಿಯೇ ಪ್ರಿಯವಷ್ಟೇ ಹೊರತು ಸ್ವತಃ ಪ್ರಿಯವಲ್ಲ. ಆದ್ದರಿಂದ ಧರ್ಮ ಹಾಗೂ ಪ್ರಾಣರು ಪ್ರಿಯತಮರೇ ಅಲ್ಲವಾದ್ದರಿಂದ ವಂದನೀಯರಾಗುವುದಿಲ್ಲ. ಮತ್ತು ಅನಾದ್ಯನಂತಕಾಲಗಳಲ್ಲಿ ಸ್ವತಃ ಪ್ರಿಯತ್ವವೂ ಧರ್ಮಪ್ರಾಣಾದಿಗಳಿಗೆ ಬರುವುದಿಲ್ಲ. ಅನಾದಿ ಅನಂತಕಾಲದಲ್ಲಿಯೂ ಪ್ರಧಾನವಾಗಿ ಅತಿಶಯದಿಂದ ಪ್ರಿಯವಾಗಿರುವುದೇ ಪ್ರಿಯತಮತ್ವವು. ಇದೇ ನಮಸ್ಕಾರೋಪಯೋಗಿಯಾದುದು. ಈ ಇಷ್ಟತ್ವವು ನಾರಾಯಣನಿಗೆ ಮಾತ್ರ ಸಲ್ಲುತ್ತದೆ. ಈ ಕಾರಣ-ದಿಂದ ನಾರಾಯಣನೇ ವಂದ್ಯನಾಗುತ್ತಾನೆ ಎಂದು "ಸದಾ ಪ್ರಿಯತಮಂ ಮಮ" ಎಂದು ಹೇಳಿದ್ದಾರೆ. ಇಲ್ಲಿಯೂ ಕೂಡ 'ಸದಾ ಪ್ರಿಯತಮತ್ವ' ಮತ್ತು 'ಮಮ ಪ್ರಿಯತಮತ್ವ' ಎಂಬ ಎರಡು ಹೇತುಗಳು ವಿವಕ್ಷಿತವಾಗಿವೆ. 'ಸದಾ ಪ್ರಿಯತಮತ್ವವು' ನಮ್ಮ ಸ್ವರೂಪಸುಖದಲ್ಲಿ ಇದೆ. ಅದಕ್ಕೋಸ್ಕರ 'ಮಮ(ಆನಂದತೀರ್ಥರಿಗೆ) ಪ್ರಿಯತಮತ್ವ' ಎಂಬ ಇನ್ನೊಂದು ಹೇತುವನ್ನು ಹೇಳಿದ್ದಾರೆ.





## ಸದಾ ಅನನ್ಯಾರ್ಥತಯಾ ಪ್ರಿಯನಾದವನು

ವಾಕ್ಯಾರ್ಥಚಂದ್ರಿಕಾ – ಸ್ವರ್ಗಾದೇರನಿತ್ಯತ್ವೇನ ಸದಾ ಪ್ರಿಯತ್ವಾಭಾವಾದ್ ಧರ್ಮಾದೇ-ರನ್ಯಾರ್ಥತಯೈವ ಪ್ರಿಯತ್ವಾದಸ್ಯ ಪುನಃ ಸದಾऽನನ್ಯಾರ್ಥತಯಾ ಪ್ರಿಯತ್ವಾತ್ ತಥಾವಿಧಮೇವ ಚೇಷ್ಟತ್ವಮುಚ್ಯತೇ - ಇತ್ಯಾಶಯವಾನ್ ಆಹ – ಅತ್ರಾಪೀತಿ ॥

ಸ್ವರ್ಗಾದಿಗಳು ಅನಿತ್ಯವಾಗಿರುವುದರಿಂದ ಎಂದೂ ಕೂಡ ಪ್ರಿಯವಾಗಲಾರವು. ಧರ್ಮಾದಿ-ಗಳು ಮತ್ತೊಂದಕ್ಕಾಗಿಯೇ ಪ್ರಿಯಗಳಾಗಿವೆ. ಅನನ್ಯಾರ್ಥತಯಾ ಸದಾ ಪ್ರಿಯನಾಗಿರುವುದರಿಂದ ತನಗೆ ಇಷ್ಟನಾದವನು ನಾರಾಯಣನೇ ಆಗಿದ್ದಾನೆ. ಈ ಅಭಿಪ್ರಾಯದಿಂದ 'ಅತ್ರಾಪಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

## ರಸಘಟ್ಟ
## 'ಮಮ ಪ್ರಿಯತಮಂ' ಎಂದರೇನು?

ಯಾದುಪತ್ಯ – ಅತ್ರಾಪಿ ಪೂರ್ವವತ್ ಇತಿ ॥ ಇಷ್ಟತ್ವಮಾತ್ರಂ ಸ್ರಕ್ ಚಂದನಾದೌ ವ್ಯಭಿಚಾರೀ, ಅನನ್ಯಾರ್ಥತಯಾ ಇಷ್ಟತ್ವಂ ಚ ತಮಬರ್ಥಭೂತೇ ಸುಖೇ ವ್ಯಭಿಚಾರಿ; ಅತಃ – ಸದೇತಿ ॥ ವೈಷಯಿಕಸುಖಂ ಚ ನ ಸದಾ ಇಷ್ಟಮ್ ಇತಿ ಭಾವಃ । ನನ್ವೇವಮಪಿ ಋಷ್ಯಾದಿ-ಸ್ವರೂಪಸುಖೇ ವ್ಯಭಿಚಾರಃ, ಅತೋ ಮಮೇತಿ ॥ ನ ಚೈವಂ ಸದಾ ಮಮ ಪ್ರಿಯತ್ವಾತ್ ಇತ್ಯೇ-ವಾಸ್ತ್ವಿತಿ ವಾಚ್ಯಮ್; ತಥಾ ಚ ಮಮೈಕಾಂತಿನಃ ಸದಾ ಪ್ರಿಯತ್ವಾತ್, ಮಮ ಪ್ರಿಯತಮತ್ವಾತ್ ಇತಿ ಹೇತುದ್ವಯೀ ತಾತ್ಪರ್ಯಮ್ ಅತೋ ನ ವೈಯರ್ಥ್ಯಶಂಕಾ ಇತಿ; ಭಾರತ್ಯಾದಾವಪಿ ಗತತ್ವಾತ್, ಪ್ರಿಯತಮತ್ವಾತ್ ಇತ್ಯುಕ್ತೇ ಚ ನ ತ್ರ ವ್ಯಭಿಚಾರಃ, ತಸ್ಯಾ ಅನ್ಯಾರ್ಥತಯೈವ ಪ್ರಿಯತ್ವಾದಿತಿ ಧ್ಯೇಯಮ್ ।

ಇಷ್ಟತ್ವವು ಸ್ರಕ್ ಚಂದನಾದಿಗಳಲ್ಲೂ ಇದೆ. ಅದಕ್ಕಾಗಿ ತಮಪ್‌ಗ್ರಹಣವನ್ನು ಮಾಡಿದ್ದಾರೆ. ಅನನ್ಯಾರ್ಥತಯಾ ಇಷ್ಟತ್ವವು ಸ್ರಕ್ ಚಂದನಾದಿಗಳಲ್ಲಿಲ್ಲದಿದ್ದರೂ ಸುಖದಲ್ಲಿದೆ. ಅದಕ್ಕಾಗಿ ಸದಾ ಎಂಬ ವಿಶೇಷಣವನ್ನು ನೀಡಿದ್ದಾರೆ. ವೈಷಯಿಕಸುಖವು ಸದಾ ಇಷ್ಟವಾಗಿರುವುದಿಲ್ಲ. ಆದರೂ ಕೂಡ ಋಷಿಗಳ ಸ್ವರೂಪಸುಖದಲ್ಲಿ ಸದಾ ಅನನ್ಯಾರ್ಥತಯಾ ಇಷ್ಟತ್ವವು ಇರುವುದರಿಂದ ವ್ಯಭಿಚಾರವು ಬರುತ್ತದೆ. ಅದಕ್ಕಾಗಿ ಮಮ ಎಂದು ಹೇಳಿದ್ದಾರೆ. ಋಷ್ಯಾದಿಗಳಿಗೆ ತಮ್ಮ ಸ್ವರೂಪಸುಖದಲ್ಲಿ ಸದಾ ಇಷ್ಟತ್ವವು

ಇದ್ದರೂ ಕೂಡ ಋಜುಗಣಸ್ಥರಾದ ಶ್ರೀಮಧ್ವಾಚಾರ್ಯರಿಗೆ ಸ್ವರೂಪಸುಖದಲ್ಲಿ ಸದಾ ಇಷ್ಟತ್ವವು ಇರುವುದಿಲ್ಲ. 'ಮಮ ಸದಾ ಪ್ರಿಯತ್ವಾತ್' ಎಂದಷ್ಟೇ ಸಾಕು ತಮಪ್ ಪ್ರತ್ಯಯವನ್ನು ಹೇಳುವ ಅವಶ್ಯಕತೆ ಏನು?

ನನ್ನ ಭಕ್ತರಿಗೆ ನಾರಾಯಣನು ಸದಾ ಪ್ರಿಯನಾಗಿದ್ದಾನೆ. ನನಗೆ ಪ್ರಿಯತಮನಾಗಿದ್ದಾನೆ. ಹೀಗೆ ಎರಡು ಹೇತುಗಳಲ್ಲಿ ತಾತ್ಪರ್ಯವಿರುವುದರಿಂದ ವೈಯರ್ಥ್ಯಶಂಕೆಗೆ ಅವಕಾಶವಿಲ್ಲ. ಭಾರತ್ಯಾದಿಗಳಲ್ಲೂ ಕೂಡ ಇರುವುದರಿಂದ ಪ್ರಿಯತಮತ್ವಾತ್ ಎಂದು ಹೇಳಿದರೆ ವ್ಯಭಿಚಾರ ಬರುವುದಿಲ್ಲ. ಏಕೆಂದರೆ ಭಾರತ್ಯಾದಿಗಳು ಮತ್ತೊಂದು ಕಾರಣಕ್ಕಾಗಿಯೇ ಪ್ರಿಯರಾಗಿದ್ದಾರೆ. ನಾರಾಯಣನೊಬ್ಬನೇ ಯಾವುದೇ ಕಾರಣವಿಲ್ಲದೇ ಮುಖ್ಯವಾಗಿ ಪ್ರಿಯತಮನಾಗಿದ್ದಾನೆ ಎಂಬುದಾಗಿ ಪದಗಳ ಸಾರ್ಥಕ್ಯವನ್ನು ತಿಳಿಯಬೇಕು.

## 'ಸದಾ ಪ್ರಿಯತಮಮ್' ಎಂಬುದರ ವ್ಯಾಖ್ಯಾನ

**ಶ್ರೀನಿಧಿತೀರ್ಥೀಯ – ಅತ್ರಾಪಿ ಪೂರ್ವವದಿತಿ ॥ ಯದಿ ಪ್ರಿಯತ್ವಾತ್ ನಾರಾಯಣೋ ವಂದನೀಯಃ ತರ್ಹಿ ತತ ಏವ ದೇಹಾದಿಕಂ ಧರ್ಮಾದಿಕಂ ವಾ ವಂದನೀಯಂ ಸ್ಯಾತ್ । ದೇಹಾದೇಃ ಇಷ್ಟಸಾಧನತ್ವೇನ ಪ್ರಿಯತ್ವಾತ್ । ಬ್ರಹ್ಮಾದೇಶ್ಚ ಪ್ರಾಣಾದೇಶ್ಚ ಪ್ರೇರಕತ್ವೇನ ಪ್ರಿಯತ್ವಾತ್ । ಅತಃ 'ಸದಾ ಪ್ರಿಯತಮಮ್' ಇತ್ಯುಕ್ತಮ್ । ತತ್ರ ಆದ್ಯಸ್ಯ ಸದಾ ಪ್ರಿಯತ್ವಾಭಾವಾತ್ ವಂದನೀಯತ್ವಾಭಾವಃ। ದ್ವಿತೀಯಸ್ಯ 'ಪ್ರಿಯತಮತ್ವಾಭಾವಾತ್' ಇತಿ ಪೂರ್ವವದ್ ವ್ಯಾಖ್ಯೇಯಮಿತ್ಯರ್ಥಃ।**

ಒಂದು ವೇಳೆ ಪ್ರಿಯನಾಗಿರುವ ಕಾರಣ ನಾರಾಯಣನು ವಂದ್ಯನಾಗುವುದಾದರೆ ದೇಹಾದಿಗಳೂ ಧರ್ಮಾದಿಗಳೂ ವಂದ್ಯವಾಗಬೇಕಾಗುತ್ತದೆ. ದೇಹಾದಿಗಳು ಇಷ್ಟಸಾಧನವಾದ್ದರಿಂದ ಪ್ರಿಯವಾಗಿವೆ. ಬ್ರಹ್ಮಾದಿದೇವತೆಗಳು ಮುಖ್ಯಪ್ರಾಣಾದಿಗಳು ತತ್ಪ್ರೇರಕರಾದ್ದರಿಂದ ಪ್ರಿಯರಾಗಿದ್ದಾರೆ. ಆದಕ್ಕಾಗಿ ಸದಾ ಪ್ರಿಯತಮಮ್ ಎಂಬುದಾಗಿ ಹೇಳಿದ್ದಾರೆ. ದೇಹಾದಿಗಳಲ್ಲಿ ಪ್ರಿಯತ್ವವೇ ಇರುವುದಿಲ್ಲ. ಆದ್ದರಿಂದ ಅವುಗಳು ವಂದ್ಯವಾಗುವುದಿಲ್ಲ. ಧರ್ಮಪ್ರಾಣಾದಿಗಳು ಪ್ರಿಯತಮವಲ್ಲದ ಕಾರಣ ವಂದ್ಯರಾಗುವುದಿಲ್ಲ. ಹೀಗೆ ಹಿಂದಿನಂತೆ ಅರ್ಥವನ್ನು ತಿಳಿಯಬೇಕು.

## ಸುಧಾಪರಿಮಳಸಾರ

ವಂದ್ಯತ್ವಪ್ರಯೋಜಕವಾದ ಇಷ್ಟತ್ವವೂ ಕೂಡ ನಾರಾಯಣನಲ್ಲಿದೆ. ಇದನ್ನು ತಿಳಿಸಲು 'ಸದಾ





ಪ್ರಿಯತಮಂ ಮಮ' ಎಂಬ ವಿಶೇಷಣವನ್ನು ಹೇಳಿದ್ದಾರೆ. ಶ್ರೀಮದಾನಂದತೀರ್ಥರಿಗೆ ನಾರಾಯಣನು ನಿರಂತರ ಪ್ರಿಯತಮನಾಗಿದ್ದಾನೆ. ಕೆಲವು ಸಂದರ್ಭದಲ್ಲಷ್ಟೇ ಅಲ್ಲ ಅಥವಾ ಉಳಿದವರಂತೆ ಕೇವಲ ಪ್ರಿಯನೂ ಅಲ್ಲ ನಿರಂತರ ಪ್ರಿಯತಮನಾಗಿದ್ದಾನೆ. ಇದು ಶ್ರೀಮದಾಚಾರ್ಯರಲ್ಲಿ ಮಾತ್ರ ಇರಲು ಸಾಧ್ಯ . ಉಳಿದವರಲ್ಲಿ ಸ್ವರೂಪಸುಖವೇ ಮುಖ್ಯವಾದ್ದರಿಂದ ನಾರಾಯಣನಲ್ಲಿ ಸದಾ ಪ್ರಿಯತಮತ್ವವನ್ನು ಹೇಳಲು ಕಷ್ಟ. ಋಜುಗಣಸ್ಥರಾದ ಶ್ರೀಮಧ್ವಾಚಾರ್ಯರಲ್ಲಿ ಮಾತ್ರ ಇದು ಕೂಡುತ್ತದೆ.

ಧರ್ಮಪ್ರಾಣಾದಿಗಳು ಕೇವಲ ಪ್ರಿಯವೇ ಆಗುತ್ತವೆ ಹೊರತು ಪ್ರಿಯತಮ ಆಗುವುದಿಲ್ಲ. ಅದೂ ಕೂಡ ಭಗವಂತನ ಜ್ಞಾನಕ್ಕೆ ಪೂರಕವಾಗುವುದರಿಂದ ಅಥವಾ ಭಗವಂತನ ಪರಿವಾರದವರಲ್ಲಿ ಸೇರಿರುವುದರಿಂದ ಕೆಲವೊಮ್ಮೆ ಮಾತ್ರ ಪ್ರಿಯವಾಗುತ್ತವೆ. ಆದ್ದರಿಂದ ವಂದ್ಯತ್ವವು ಧರ್ಮಪ್ರಾಣಾದಿಗಳಲ್ಲಿ ಬಾರದೆ ವಿಷ್ಣುವಿನಲ್ಲಿ ಮಾತ್ರ ಬರುತ್ತದೆ. ಹೀಗೆ ವಂದ್ಯತ್ವಪ್ರಯೋಜಕವಾದ ವಿಶಿಷ್ಟತ್ವ, ಅಧಿಕೃತತ್ವ ಹಾಗೂ ಇಷ್ಟತ್ವಗಳು ನಾರಾಯಣನಲ್ಲಿವೆ ಎಂದು ಸಿದ್ಧವಾಯಿತು.

## ಪರಿಮಳದ ವೈಶಿಷ್ಟ್ಯ

* 'ಪೂರ್ವವತ್ ಸದಾ ಪದಸ್ಯ' ಎಂಬ ಸುಧಾವಾಕ್ಯವನ್ನು ನೋಡಿದಾಗ ಅಖಿಲ ಮತ್ತು ಅಪಿ ಪದಗಳಿಗಿರುವ ಪ್ರಯೋಜನವೇ ಸದಾ ಹಾಗೂ ತಮಪ್ ಪ್ರತ್ಯಯಗಳಿಗೆ ತಿಳಿಯಬೇಕೆಂದು ಅಪಾರ್ಥವಾಗುತ್ತದೆ. ಈ ಅಪಾರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡುವ ಮೂಲಕ ನಿಜವಾದ ಅರ್ಥವನ್ನು ಹೇಳಿದ್ದಾರೆ.

* ಧರ್ಮಾದಿಗಳು ಪ್ರಾಣಾದಿಗಳು ಪ್ರಿಯರಷ್ಟೇ ಹೊರತು ಪ್ರಿಯತಮರಲ್ಲ. ಅದೂ ಕೂಡ ಕೆಲವೊಮ್ಮೆ ಎಂದು ಸುಂದರವಾಗಿ ನಿರೂಪಣೆ ಮಾಡಲಾಗಿದೆ.

## ಸ್ವರೂಪನಿರ್ಧಾರಣೆಗಾಗಿ ನಾರಾಯಣನ ಲಕ್ಷಣ

**ಶ್ರೀಮನ್ನ್ಯಾಯಸುಧಾ- ಯದ್ವಾ । ನಾನಿರ್ಧಾರಿತಸ್ವರೂಪಸ್ಯ ಪ್ರಣಾಮೋ ಯುಕ್ತಃ । ನ ಚ ಅಂತರೇಣ ಲಕ್ಷಣಂ ವಸ್ತುನಿರ್ಧಾರಣಮ್ ಇತ್ಯತೋ ವಿಭವಾದನೇಕಾನಿ ನಾರಾಯಣಸ್ಯ ಲಕ್ಷಣಾನಿ ಅನೇನೋಚ್ಯಂತೇ । ತತ್ರ 'ನಿಖಿಲೇ'ತ್ಯನೇನ**

**ನಿಖಿಲಗುಣತ್ವಂ ಪೂರ್ಣಗುಣತ್ವಂ ಸ್ವತೋ ಗುಣೈಕದೇಹತ್ವಂ ಚ ಇತಿ ವಿವಕ್ಷಾ-ಭೇದೇನ ತ್ರೀಣಿ ಲಕ್ಷಣಾನ್ಯುದಿತಾನಿ ।**

ಅಥವಾ ಮತ್ತೊಂದು ರೀತಿಯಲ್ಲಿ ಮಂಗಳಶ್ಲೋಕವನ್ನು ವ್ಯಾಖ್ಯಾನ ಮಾಡಬಹುದು – ಯಾರ ಸ್ವರೂಪವು ನಿರ್ಧಾರವೇ ಆಗಿರುವುದಿಲ್ಲವೋ ಅವನನ್ನು ಕುರಿತು ನಮಸ್ಕಾರ-ಮಾಡುವುದು ಯುಕ್ತವೇ ಆಗುವುದಿಲ್ಲ. ಸ್ವರೂಪನಿರ್ಧಾರವಾಗಬೇಕೆಂದರೆ ಆ ವಸ್ತುವಿನ ಲಕ್ಷಣವನ್ನು ತಿಳಿಯಲೇ ಬೇಕು. ಪ್ರಕೃತ ನಾರಾಯಣನನ್ನು ನಮಸ್ಕಾರ ಮಾಡುತ್ತಿರುವು-ದರಿಂದ ಇವನ ಸ್ವರೂಪನಿರ್ಧಾರಣೆಗಾಗಿ ಲಕ್ಷಣವನ್ನು ಹೇಳಲು ಈ ಮಂಗಳಶ್ಲೋಕವು ಪ್ರವೃತ್ತವಾಗಿದೆ.

'ನಿಖಿಲಪೂರ್ಣಗುಣೈಕದೇಹಂ' ಎಂಬ ಒಂದೇ ಪದದಿಂದ ನಿಖಿಲಗುಣತ್ವ, ಪೂರ್ಣ-ಗುಣತ್ವ, ಸ್ವತಃ ಗುಣೈಕದೇಹತ್ವ ಎಂಬುದಾಗಿ ಮೂರು ವಿವಕ್ಷೆಗಳಿಂದ ಮೂರು ಲಕ್ಷಣ-ಗಳನ್ನು ಹೇಳಿದ್ದಾರೆ.

## ಯಾವ ಯಾವ ವಿಶೇಷಣಗಳಿಂದ ಎಷ್ಟು ಲಕ್ಷಣಗಳು

**ಶ್ರೀಮನ್ನ್ಯಾಯಸುಧಾ– 'ನಿರ್ದೋಷಮ್' ಇತ್ಯನೇನ ಏಕಮ್ । 'ಆಪ್ತ-ತಮಮ್' ಇತ್ಯನೇನ ವೇದಾದಿಮುಖ್ಯಾರ್ಥತ್ವಮ್ ಅಖಿಲವೇದಾದ್ಯರ್ಥತ್ವಂ ಚೇತಿ ದ್ವಯಮ್ । 'ಅಸ್ಯ' ಇತ್ಯನೇನ ಅಷ್ಟೌ । 'ಅಶೇಷೇ'ತ್ಯನೇನ ಮುಖ್ಯ-ವಂದ್ಯತ್ವಮುಕ್ತಮ್ ಅಶೇಷಾದ್ ವಿಶೇಷೇಣ ವಂದ್ಯಮ್ ಇತಿ ।**

'ನಿರ್ದೋಷಂ' ಎಂಬ ಪದದಿಂದ ದೋಷರಾಹಿತ್ಯವೆಂಬ ಒಂದು ಲಕ್ಷಣವನ್ನು ಹೇಳಿ-ದ್ದಾರೆ. 'ಆಪ್ತತಮಮ್' ಎಂಬುದರಿಂದ ವೇದಾದಿಮುಖ್ಯಾರ್ಥತ್ವ, ಅಖಿಲವೇದಾದ್ಯ-ರ್ಥತ್ವ ಎಂಬೆರಡು ಲಕ್ಷಣವನ್ನು ಹೇಳಿದ್ದಾರೆ. 'ಅಸ್ಯೋದ್ಭವಾದಿದಂ' ಎಂಬುದರಿಂದ ಉದ್ಭವದತ್ವ, ಸ್ಥಿತಿದತ್ವ ಮೊದಲಾದ ಎಂಟು ಲಕ್ಷಣಗಳನ್ನು ಹೇಳಿದ್ದಾರೆ. 'ಅಶೇಷ-





ವಿಶೇಷತೋಽಪಿ ವಂದ್ಯಂ' ಎಂಬುದರಿಂದ ಎಲ್ಲರಿಂದಲೂ ಮುಖ್ಯವಾಗಿ ವಂದ್ಯನಾಗಿದ್ದಾನೆಂಬ ಲಕ್ಷಣವನ್ನು ಹೇಳಿದ್ದಾರೆ.

## ಪ್ರಿಯತಮತ್ವದ ನಿರಂತರ ಅನುಭವ ಶ್ರೀಮದಾಚಾರ್ಯರಿಗೆ ಮಾತ್ರ

**ಶ್ರೀಮನ್ನ್ಯಾಯಸುಧಾ– 'ಸದಾ' ಇತ್ಯನೇನ ಪರಮಪ್ರೇಮಯೋಗ್ಯತ್ವಮ್। ತಸ್ಯ ಅನಾನುಭಾವಿಕತ್ವಾತ್ ಅಸಂಭವಮಾಶಂಕ್ಯ 'ಸದಾ ಮಮ' ಇತ್ಯುಕ್ತಮ್। ಅನ್ಯೇಷಾಮಪಿ ಜ್ಞಾನೋತ್ತರಕಾಲಮಿದಮ್ ಅನುಭಾವಿಕಂ, ಮಮ ತು ಸದಾ ಇತಿ। ಅಪಿಶಬ್ದೋ ಲಕ್ಷಣಸಮುಚ್ಚಯೇ॥**

'ಸದಾ ಮಮ ಪ್ರಿಯತಮಮ್' ಎಂಬುದರಿಂದ ಪರಮಪ್ರೇಮಯೋಗ್ಯತ್ವ ಎಂಬ ಲಕ್ಷಣವನ್ನು ಹೇಳಿದ್ದಾರೆ. ಇದರ ಅನುಭವವು ಬೇರೆ ಯಾರಿಗೂ ಕೂಡ ಇರುವುದಿಲ್ಲ. ಆದ್ದರಿಂದ ಈ ಲಕ್ಷಣವು ಅಸಂಭವದೋಷದಿಂದ ಗ್ರಸ್ತವಾಗಿದೆಯಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸಲು 'ಸದಾ' 'ಮಮ' ಎಂಬ ಎರಡು ವಿಶೇಷಣಗಳನ್ನು ನೀಡಿದ್ದಾರೆ. ಅಭಿಪ್ರಾಯವೇನೆಂದರೆ ಬೇರೆಯವರಿಗೆ ಅಪರೋಕ್ಷಜ್ಞಾನದ ಅನಂತರ 'ನಾರಾಯಣನು ಪರಮಪ್ರೇಮಾಸ್ಪದನಾಗಿದ್ದಾನೆ' ಎಂಬ ಅನುಭವವು ಬರುತ್ತದೆ. ಆದರೆ ನನಗೆ ನಿರಂತರ ಇದರ ಅನುಭವವಿದೆ ಎಂದು. 'ಅಪಿ'ಶಬ್ದವು ಈ ಎಲ್ಲಾ ಲಕ್ಷಣಗಳನ್ನು ಸಮುಚ್ಚಯ ಮಾಡುತ್ತಿದೆ.

## ಯದ್ವಾ ಎಂಬ ಪಕ್ಷಾಂತರಕ್ಕೆ ಕಾರಣನಿರೂಪಣೆ

**ಪರಿಮಳ–** ನನು ನಮ್ಯತ್ವಪ್ರಯೋಜಕವೈಶಿಷ್ಟ್ಯಸ್ಯ ಅಧಿಕೃತತ್ವಾದೇರಿವ ಏಕೇನ ವಿಶೇಷಣೇನಾಪಿ ಉಕ್ತಿಸಂಭವಾತ್ ವಿಶೇಷಣತ್ರಯೋಕ್ತಿಃ ನಿರ್ಬೀಜಾ ಇತ್ಯತ ಆಹ – ಯದ್ವಾ ಇತಿ ॥ ವೈಯರ್ಥ್ಯನಿರಾಸಾಯ ಉಕ್ತಮ್ – ವಿಭವಾದಿತಿ ॥ ಐಶ್ವರ್ಯಾಧಿಕ್ಯಾತ್ ಇತ್ಯರ್ಥಃ। ಅನೇನ = ಆದ್ಯಪದ್ಯೇನ। ಸ್ವತಃ ಇತಿ ಶ್ರೀಮುರ್ಕ್ತಯೋರ್ವ್ಯದಾಸಾಯ।





ನಮ್ಯತ್ವಪ್ರಯೋಜಕವಾದ ವೈಶಿಷ್ಟ್ಯವನ್ನು ಉಪಪಾದನೆ ಮಾಡಲು ಮೂರು ವಿಶೇಷಣಗಳನ್ನು ಹೇಳಿದ್ದಾರೆ. ಆದರೆ ಅಧಿಕೃತತ್ವ ಮತ್ತು ಇಷ್ಟತ್ವವನ್ನು ಸಮರ್ಥನೆ ಮಾಡಲು ಒಂದೊಂದೇ ವಿಶೇಷಣಗಳನ್ನು ಹೇಳಿದ್ದಾರೆ. ಹೀಗೇಕೆ? ವೈಶಿಷ್ಟ್ಯದ ಉಪಪಾದನೆಗೋಸ್ಕರ ಒಂದೇ ವಿಶೇಷಣವು ಸಾಕಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಲು 'ಯದ್ವಾ' ಎಂಬ ಪಕ್ಷಾಂತರವನ್ನು ಹೇಳುತ್ತಿದ್ದಾರೆ.

ಅನೇಕ ಲಕ್ಷಣಗಳನ್ನು ಹೇಳುವುದು ವ್ಯರ್ಥವಾಗುತ್ತದೆಂಬ ಆಶಂಕೆಯ ಪರಿಹಾರಕ್ಕೋಸ್ಕರ 'ವಿಭವಾತ್' ಎಂದು ಹೇಳಿದ್ದಾರೆ. ಅಧಿಕ ಐಶ್ವರ್ಯವೆಂದು ಇದರ ಅರ್ಥ. ಅನೇನ ಎಂಬ ಪದಕ್ಕೆ ಮೊದಲನೆಯ ಪದ್ಯದಿಂದ ಎಂದರ್ಥ.

ಗುಣೈಕದೇಹತ್ವವೆಂಬ ಧರ್ಮವು ಲಕ್ಷ್ಮೀದೇವಿಯಲ್ಲಿ ಹಾಗೂ ಮುಕ್ತರಲ್ಲೂ ಕೂಡ ಇರುತ್ತದಲ್ಲವೇ? ಎಂಬ ಆಕ್ಷೇಪದ ಪರಿಹಾರಕ್ಕಾಗಿ 'ಸ್ವತಃ' ಎಂಬ ವಿಶೇಷಣವನ್ನು ನೀಡಿದ್ದಾರೆ.

## ಅಸಂಭವಪರಿಹಾರ

**ಪರಿಮಳ– ಅಸ್ಯೇತ್ಯನೇನೇತಿ ॥ 'ಅಸ್ಯೋದ್ಭವಾದಿದಮ್' ಇತ್ಯನೇನ ಇತ್ಯರ್ಥಃ । ಸದೇತ್ಯನೇನೇತಿ ॥ 'ಸದಾ ಪ್ರಿಯತಮಂ ಮಮ' ಇತ್ಯನೇನೇತ್ಯರ್ಥಃ । 'ಸದಾ ಮಮ' ಇತಿ ಪದಯೋರ್ಲಕ್ಷಣಾಸಂಭವಪರಿಹಾರಃ ಫಲಮ್ ಇತ್ಯಾಹ – ತಸ್ಯೇತಿ ॥ ಪರಮಪ್ರೇಮಯೋಗ್ಯತ್ವಸ್ಯ ಇತ್ಯರ್ಥಃ ।**

'ಅಸ್ಯ ಇತ್ಯನೇನ' ಎಂಬುದಕ್ಕೆ 'ಅಸ್ಯೋದ್ಭವಾದಿದಂ' ಎಂಬ ವಿಶೇಷಣದಿಂದ ಎಂದರ್ಥ. 'ಸದಾ ಇತ್ಯನೇನ' ಎಂಬುದಕ್ಕೆ 'ಸದಾ ಪ್ರಿಯತಮಂ ಮಮ' ಎಂಬ ವಿಶೇಷಣದಿಂದ ಎಂದರ್ಥ. ಪ್ರಿಯತಮತ್ವ ಎಂಬ ಲಕ್ಷಣವು ಅಸಂಭವದೋಷದಿಂದ ಕೂಡಿದೆಯಲ್ಲವೇ? ಎಂಬ ಆಶಂಕೆಯ ಪರಿಹಾರಕ್ಕಾಗಿ 'ಸದಾ' ಮತ್ತು 'ಮಮ' ಎಂಬೆರಡು ಪದಗಳನ್ನು ಪ್ರಯೋಗಿಸಿದ್ದಾರೆ. ಇದನ್ನು 'ತಸ್ಯ' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ. 'ತಸ್ಯ' ಎಂಬ ಪದಕ್ಕೆ ಪರಮಪ್ರೇಮಯೋಗ್ಯನಾದವನಿಗೆ ಎಂದರ್ಥ.





## ಯಾವದ್‌ದ್ರವ್ಯಭಾವಿಲಕ್ಷಣವಿದು

ಪರಿಮಳ– ತರ್ಹಿ 'ಮಮ' ಇತ್ಯೇಕಮೇವಾಲಮ್ ಇತ್ಯತ ಆಹ – ಅನ್ಯೇಷಾಮಪಿ ಇತಿ ॥ ಅನ್ಯೇಷಾಂ ಜೀವಾನಾಂ ಜ್ಞಾನಿನಾಂ ಭಗವದಪರೋಕ್ಷಾನಂತರಂ ಭಗವತಃ ಪರಮಪ್ರೇಮಯೋಗ್ಯತ್ವಮ್ ಅನುಭವಸಿದ್ಧಮ್ । ಮಮ ತು ಅನಾದ್ಯಂತಕಾಲಮ್ । ಅತೋ ಯಾವದ್ ದ್ರವ್ಯಭಾವೀದಂ ಹರೇರ್ಲಕ್ಷಣಂ ನ ಕದಾಚಿದಾಗತಮ್ ಇತಿ ದ್ಯೋತನಾಯ 'ಸದಾ' ಇತ್ಯುಕ್ತಮಿತ್ಯರ್ಥಃ । ಪ್ರೇಮಯೋಗ್ಯತ್ವಂ ಚ ನಿರುಪಾಧಿಕೇಷ್ಟತ್ವಮ್ ॥

ಹಾಗಾದರೆ 'ಮಮ ಪ್ರಿಯತಮಮ್' ಎಂಬುದರಿಂದಲೇ ಪರಮಪ್ರೇಮಾ- ಸ್ಪದತ್ವ ಎಂಬ ಲಕ್ಷಣವು ಅನುಭವಸಿದ್ಧವಾಗಿರುವುದರಿಂದ ಅಸಂಭವದೋಷ- ಗ್ರಸ್ತವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ 'ಸದಾ' ಎಂಬ ಪದವು ವ್ಯರ್ಥವಲ್ಲವೇ? ಈ ಆಕ್ಷೇಪಕ್ಕೆ ಉತ್ತರಿಸಲು 'ಅನ್ಯೇಷಾಂ' ಎಂಬ ವಾಕ್ಯವು ಹೊರಟಿದೆ. ಬೇರೆ ಜ್ಞಾನಿಗಳಿಗೆ ಅಪರೋಕ್ಷಜ್ಞಾನ ಬಂದ ಮೇಲೆ ಪರಮಾತ್ಮನು ಪರಮಪ್ರೇಮಾಸ್ಪದನಾಗಿದ್ದಾನೆಂಬ ಅನುಭವ ಬರುತ್ತದೆ. ಆದರೆ ನನಗೆ ಮಾತ್ರ ಅನಾದ್ಯನಂತಕಾಲಗಳಲ್ಲಿ ಪರಮಾತ್ಮನೇ ಪರಮಪ್ರೇಮಾಸ್ಪದನಾಗಿರುವನೆಂಬ ಅನುಭವವು ಸಿದ್ಧವಾಗಿದೆ. ಆದ್ದರಿಂದ ನಾರಾಯಣನಲ್ಲಿರುವ ಪರಮಪ್ರೇಮಯೋಗ್ಯತ್ವವೆಂಬ ಲಕ್ಷಣವು ಆಗಂತುಕವಲ್ಲ. ಯಾವದ್ದ್ರವ್ಯಭಾವಿಯಾಗಿದೆ. (ನಿರಂತರ ಇರುವಂಥದ್ದಾಗಿದೆ). ಇದನ್ನು ತಿಳಿಸಲು 'ಸದಾ' ಎಂಬ ಪದವು ಸಾರ್ಥಕವಾಗಿದೆ. ಯಾವುದೇ ಉಪಾಧಿಗಳಿಲ್ಲದೇ ಇಷ್ಟನಾಗಿರುವುದೇ ಪರಮಪ್ರೇಮಯೋಗ್ಯತ್ವ ಎನಿಸುತ್ತದೆ.

## ನಿಖಿಲಪೂರ್ಣಗುಣೈಕದೇಹಂ ಎಂಬಲ್ಲಿ ಎಷ್ಟು ಲಕ್ಷಣ ಹೇಳಿದ್ದಾರೆ

ವಾಕ್ಯಾರ್ಥಚಂದ್ರಿಕಾ– ಏವಂ 'ನಮಾಮಿ' ಇತಿ ಕ್ರಿಯಾಸಮಭಿವ್ಯಾಹೃತದ್ವಿತೀಯಾವಿಭಕ್ತ್ಯರ್ಥನಮ್ಯತ್ವೋಪಪಾದಕತಯಾ 'ನಿಖಿಲ' ಇತ್ಯಾದೀನಿ ನಾರಾಯಣವಿಶೇಷಣಾನೀತಿ ವ್ಯಾಖ್ಯಾಯ, ಪ್ರಕೃತ್ಯರ್ಥಭೂತನಾರಾಯಣಸ್ವರೂಪನಿರ್ಧಾರಣಹೇತುಲಕ್ಷಣಪರತಯಾಽಪಿ ತಾನಿ ವ್ಯಾಖ್ಯಾತಿ – ಯದ್ವೇತಿ ॥







ಅತ್ರ ವಿಶಿಷ್ಟಸ್ಯ ಲಕ್ಷಣತ್ವೇ ನಿಖಿಲಪೂರ್ಣಪದಯೋಃ ಅನ್ಯತರವೈಯರ್ಥ್ಯಾಪಾತಾತ್, ತದ್ಗರ್ಭಲಕ್ಷಣದ್ವಯಪರತ್ವೇ ಗುಣಾನಾಂ ದೇಹವಿಶೇಷಣತ್ವೇನ ನಾರಾಯಣವಿಶೇಷಣತ್ವಾಭಾವೇನ ದೇಹಪದವೈಯರ್ಥ್ಯಶಂಕಾಽನುದಯೇಽಪಿ ಏಕಪದವೈಯರ್ಥ್ಯಾಪಾತಾದ್; ಗುಣಾನಾಂ ನಾರಾಯಣವಿಶೇಷಣತ್ವಂ, ಗುಣಪದಾವೃತ್ತಿಂ, ತೃತೀಯಲಕ್ಷಣೇ ಸ್ವಾತಂತ್ರ್ಯಂ ಚ ವಿವಕ್ಷಿತ್ವಾ ತ್ರೀಣಿ ಲಕ್ಷಣಾನಿ ಜ್ಞಾತವ್ಯಾನೀತ್ಯಾಹ – ತತ್ರೇತಿ ॥

'ನಮಾಮಿ' ಎಂಬ ಕ್ರಿಯಾಪದದಿಂದ ನಮನಕ್ರಿಯೆಯು ತಿಳಿಯುತ್ತದೆ. ಇದರಿಂದ ದ್ವಿತೀಯಾ-ವಿಭಕ್ತ್ಯರ್ಥವಾದ ಕರ್ಮತ್ವವು ಸಮಭಿವ್ಯಾಹೃತವಾಗಿದೆ. ಆದ್ದರಿಂದ ನಮನಕ್ರಿಯಾಕರ್ಮತ್ವವು ದ್ವಿತೀಯಾ-ವಿಭಕ್ತಿಯ ಅರ್ಥವೆಂದು ಹೇಳಿದಂತಾಯಿತು. ಇಂಥ ನಮನಕ್ರಿಯಾಕರ್ಮತ್ವವನ್ನು ಉಪಪಾದನೆ ಮಾಡುವುದಕ್ಕಾಗಿ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳು ನಾರಾಯಣನಲ್ಲಿ ಪ್ರಯುಕ್ತ-ವಾಗಿವೆಯೆಂದು ಇಲ್ಲಿಯ ತನಕ ವ್ಯಾಖ್ಯಾನ ಮಾಡಿದ್ದಾಯಿತು. ಪ್ರಕೃತ ಪ್ರಕೃತ್ಯರ್ಥನಾದ ನಾರಾಯಣನ ಸ್ವರೂಪನಿರ್ಧಾರಣೆ ಮಾಡಲು ಈ ವಿಶೇಷಣಗಳು ಹೇತುಲಕ್ಷಣರೂಪವಾಗಿವೆ ಎಂದು ವ್ಯಾಖ್ಯಾನಮಾಡಲು 'ಯದ್ವಾ' ಇತ್ಯಾದಿ ವಾಕ್ಯವು ಹೊರಟಿದೆ.

'ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಿಂದ ನಿಖಿಲಪೂರ್ಣಗುಣೈಕದೇಹತ್ವ ಎಂಬ ವಿಶಿಷ್ಟವಾದ ಒಂದೇ ಲಕ್ಷಣವು ವಿವಕ್ಷಿತವೆಂದು ಹೇಳಿದರೆ, ನಿಖಿಲಪದ ಮತ್ತು ಪೂರ್ಣಪದ ಇವುಗಳೆರಡರ ನಡುವೆ ಒಂದಕ್ಕೆ ವೈಯರ್ಥ್ಯವು ಬರುತ್ತದೆ. ಏಕೆಂದರೆ, ನಿಖಿಲಪದದಿಂದ ತಿಳಿಯುವ ಅರ್ಥವನ್ನೇ ಪೂರ್ಣಪದವು ಹೇಳುತ್ತಿದೆ. ಇನ್ನು 'ನಿಖಿಲಗುಣೈಕದೇಹತ್ವ' ಅಥವಾ 'ಪೂರ್ಣಗುಣೈಕದೇಹತ್ವ' ಎಂಬೆರಡು ಲಕ್ಷಣವನ್ನು ವಿವಕ್ಷಿಸಿದರೆ ಏಕಪದವು ವ್ಯರ್ಥವಾಗುತ್ತದೆ. ಏಕೆಂದರೆ ಗುಣಗಳು ದೇಹದಲ್ಲಿ ವಿಶೇಷಣವಾಗಿವೆ ನಾರಾಯಣನಲ್ಲಿ ವಿಶೇಷಣವಾಗಿಲ್ಲ. ಈ ಪಕ್ಷದಲ್ಲಿ ದೇಹವು ವಿಶೇಷ್ಯವಾಗಿರು-ವುದರಿಂದ ದೇಹಪದವು ಸಾರ್ಥಕವಾಗಬಹುದು. ಆದರೆ ಏಕಪದಕ್ಕೆ ವೈಯರ್ಥ್ಯವು ಪ್ರಾಪ್ತವಾಗುತ್ತದೆ.

ಆದ್ದರಿಂದ ಇಲ್ಲಿ ಒಟ್ಟು ಮೂರು ಬಗೆಯ ಲಕ್ಷಣವನ್ನು ವಿವಕ್ಷಿಸಬೇಕು. (1) ನಿಖಿಲಗುಣತ್ವ (2) ಪೂರ್ಣಗುಣತ್ವ (3) ಸ್ವತಃ ಗುಣೈಕದೇಹತ್ವ ಎಂದು.

ಹೀಗೆ ಮೂರು ಲಕ್ಷಣವನ್ನು ವಿವಕ್ಷಿಸಿದಾಗ ಗುಣಪದವನ್ನು ಎಲ್ಲೆಡೆಯೂ ಆವೃತ್ತಿ ಮಾಡಿಕೊಳ್ಳಬೇಕು. ಮತ್ತು ಮೂರನೆಯ ಲಕ್ಷಣದಲ್ಲಿ ಸ್ವಾತಂತ್ರ್ಯವನ್ನು ವಿವಕ್ಷಿಸಬೇಕು. ಈ ಅಭಿ-ಪ್ರಾಯದಿಂದ 'ತತ್ರ' ಇತ್ಯಾದಿ ಗ್ರಂಥವು ಹೊರಟಿದೆ.





## 'ಸದಾ' ಎಂಬ ಪದದ ವ್ಯಾಖ್ಯಾನ
## ಟೀಕೆಯಲ್ಲಿಯೂ ಪಾಠಾಂತರ

ವಾಕ್ಯಾರ್ಥಚಂದ್ರಿಕಾ– 'ಮಮ' ಇತ್ಯನೇನ ಸ್ವಂ ಪ್ರತಿ ಅನುಭವಸಿದ್ಧತ್ವೋಕ್ತಾವಪಿ 'ಏಕಸ್ಯ ಪ್ರತಿಭಾತಂ ತು ಕೃತಕಾನ್ನ ವಿಶಿಷ್ಯತೇ' ಇತ್ಯುಕ್ತರೀತ್ಯಾ ಪ್ರಾಪ್ತಾಸಂಭವಶಂಕಾನಿವೃತ್ತ್ಯರ್ಥಂ 'ಸದಾ'-ಪದಾಭಿಪ್ರಾಯಮಾಹ – ಅನ್ಯೇಷಾಮಿತಿ ॥ ಪ್ರಥಮಾಪಿಶಬ್ದಸ್ಯ ಅಭಿವ್ಯಾಪ್ತ್ಯರ್ಥತ್ವಮೇವ ಅಂಗೀಕೃತ್ಯ ದ್ವಿತೀಯೋऽಪಿಶಬ್ದ ಉಕ್ತವಕ್ಷ್ಯಮಾಣಸಮುಚ್ಚಯಾರ್ಥ ಇತ್ಯಾಹ – ಅಪೀತಿ ॥ 'ಅಪಿಶಬ್ದೌ ಲಕ್ಷಣ-ಸಮುಚ್ಚಯೇ' ಇತಿ ಪಾಠೇ ತು ಉಭಯೋರಪಿ ಲಕ್ಷಣಸಮುಚ್ಚಯಾರ್ಥತ್ವಮೇವ ಇತ್ಯರ್ಥಃ।

'ಮಮ' ಎಂಬುದರಿಂದ ತಮಗೆ ಪರಮಾತ್ಮನು ನಿರಂತರಪ್ರಿಯತಮನಾಗಿದ್ದಾನೆಂಬ ಅನುಭವ-ವಿದೆಯೆಂದು ಹೇಳಿದರು. ಆದರೆ ಇದು ಉಪಯೋಗವಿಲ್ಲ. ಏಕೆಂದರೆ 'ಏಕಸ್ಯ ಪ್ರತಿಭಾತಂ ತು ಕೃತಕಾನ್ನ ವಿಶಿಷ್ಯತೇ' 'ಒಬ್ಬನಿಗೆ ಕಂಡದ್ದು ಆರೋಪಿತವೇ ಆಗಿರುತ್ತದೆ' (ಕೃತಕ = ಕೃತ್ರಿಮ = ಆರೋಪಿತ) ಎಂಬ ಮಾತಿನಂತೆ ಸದಾ ಪ್ರಿಯತಮತ್ವವು ಅಸಂಭಾವಿತವೇ ಆಗುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡು-ವುದಕ್ಕಾಗಿ ಸದಾ ಎಂಬ ಪದದ ಅಭಿಪ್ರಾಯವನ್ನು 'ಅನ್ಯೇಷಾಂ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸು-ತ್ತಿದ್ದಾರೆ. ನನಗೊಬ್ಬನಿಗೆ ಮಾತ್ರ ಪ್ರಿಯತಮನೆಂಬ ಅನುಭವ ಇರುವುದಲ್ಲ. ಅಪರೋಕ್ಷಜ್ಞಾನೋತ್ತರ-ಕಾಲದಲ್ಲಿ ಬೇರೆಯವರಿಗೂ ಕೂಡ ಇದರ ಅನುಭವವಿದೆ. ನನಗೆ ಮಾತ್ರ ನಿರಂತರವಾಗಿದೆ ಎಂಬುದಷ್ಟೇ ಅಭಿಪ್ರಾಯ.

ಮಂಗಳಶ್ಲೋಕದಲ್ಲಿ ಎರಡು ಕಡೆ 'ಅಪಿ' ಎಂಬ ಪದವಿದೆ.

ಮೊದಲನೆಯ 'ಅಪಿ'ಶಬ್ದವು ಅಭಿವ್ಯಾಪ್ತಿ ಎಂಬರ್ಥದಲ್ಲಿದೆ. ಸಮಸ್ತವೇದಗಳಿಂದ ನಾರಾ-ಯಣನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಎಂಬುದು ಇದರ ಅರ್ಥ.

ಎರಡನೆಯ 'ಅಪಿ'ಶಬ್ದವು ಹಿಂದೆ ಹೇಳಿದ ಮುಂದೆ ಹೇಳುವ ಲಕ್ಷಣಗಳನ್ನು ಸಮುಚ್ಚಯ ಮಾಡುತ್ತಿದೆ. ಈ ಅಭಿಪ್ರಾಯದಿಂದ 'ಅಪಿಶಬ್ದಃ' ಎಂಬ ವಾಕ್ಯವು ಹೊರಟಿದೆ.

ಕೆಲವು ಪುಸ್ತಕಗಳಲ್ಲಿ 'ಅಪಿಶಬ್ದಃ ಲಕ್ಷಣಸಮುಚ್ಚಯೇ' ಎಂಬ ಪಾಠವಿಲ್ಲ. 'ಅಪಿಶಬ್ದೌ ಲಕ್ಷಣ-ಸಮುಚ್ಚಯೇ' ಎಂಬ ದ್ವಿವಚನಾಂತವಾದ ಪಾಠವಿದೆ. ಆಗ ಶ್ಲೋಕದಲ್ಲಿರುವ ಎರಡೂ ಅಪಿಶಬ್ದಗಳು ಲಕ್ಷಣಸಮುಚ್ಚಯಕ್ಕೋಸ್ಕರವೇ ಪ್ರಯುಕ್ತವಾಗಿವೆ ಎಂದು ತಿಳಿಯಬೇಕು.





## ರಸಘಟ್ಟ

ಕಾಶಿಕಾ – ಯದ್ಯಪಿ ನಾರಾಯಣೇ ನಿಖಿಲಪೂರ್ಣಗುಣತ್ವಮ್ ಅಸಂಭವಿ । ಜಡಜೀವಗುಣಾಭಾವಾತ್ । ನ ಚ ನಿಖಿಲಗುಣವತ್ತ್ವಂ ನಾಮ ಗುಣತ್ವವ್ಯಾಪಕಸಮುದಾಯತ್ವಾವಚ್ಛಿನ್ನವತ್ತ್ವಂ ಗುಣತ್ವವ್ಯಾಪಕತ್ವಂ ಚ ಗುಣವೃತ್ತಿ ಯಾವಜ್ಜಾತಿಸಮಾನಾಧಿಕರಣತ್ವರೂಪಂ ವಿವಕ್ಷಿತಮ್ । ಈಶ್ವರಗುಣಸಮುದಾಯತ್ವಸ್ಯ ಚ ಸುಖತ್ವಜ್ಞಾನತ್ವಾದಿರೂಪತಾದೃಶಯಾವಜ್ಜಾತಿಸಮಾನಾಧಿಕರಣತ್ವಾನ್ನ ದೋಷ ಇತಿ ವಾಚ್ಯಮ್ । ವ್ಯಕ್ತಿಭೇದಭಿನ್ನತಾದೃಶಯಾವಜ್ಜಾತಿಸಮಾನಾಧಿಕರಣತ್ವಸ್ಯೈವ ತತ್ರಾನುಪಪತ್ತೇಃ । ಪ್ರಾತಿಸ್ವಿಕರೂಪೇಣ ತಾವಜ್ಜಾತಿಜ್ಞಾನಾಭಾವಾತ್ ಲಕ್ಷಣಸ್ಯ ಅಸರ್ವಜ್ಞದುರ್ಜ್ಞೇಯತ್ವಾಪತ್ತೇಶ್ಚ । ತಥಾಽಪಿ ಸ್ವರೂಪತೋ ಗುಣವೃತ್ತಿಜಾತ್ಯವಚ್ಛಿನ್ನವೃತ್ತಿತ್ವಾಭಾವಾನಧಿಕರಣತ್ವರೂಪಗುಣತ್ವವ್ಯಾಪಕತ್ವಸ್ಯ ವಿವಕ್ಷಿತತ್ವಾನ್ನ ದೋಷಃ । ಈಶ್ವರೀಯಗುಣಸಮುದಾಯತ್ವೇ ಜೀವಾದಿಗತತತ್ತತ್ಸುಖಾದಿವೃತ್ತಿತ್ವಾಭಾವಸತ್ತ್ವೇಽಪಿ ಸುಖವೃತ್ತಿತ್ವಂ ನಾಸ್ತೀತ್ಯಪ್ರತ್ಯಯೇನ ಸ್ವರೂಪತಃ ಸುಖಾದ್ಯವಚ್ಛಿನ್ನವೃತ್ತಿತ್ವಾಭಾವಾನಧಿಕರಣತ್ವಸ್ಯ ಅಕ್ಷತತ್ವಾತ್ । 'ಸ್ವರೂಪತ' ಇತ್ಯಾದೇರ್ಗುಣವೃತ್ತಿಜಾತಿನಿಷ್ಠನಿರವಚ್ಛಿನ್ನಾವಚ್ಛೇದಕತಾವೃತ್ತಿತ್ವನಿಷ್ಠಪ್ರತಿಯೋಗಿತಾಕಾಭಾವಾರ್ಥಕತ್ವೇನ ತತ್ತತ್ಸುಖತ್ವಾದ್ಯವಚ್ಛಿನ್ನವೃತ್ತಿತ್ವಾಭಾವಸ್ಯ ಸುಖತ್ವನಿಷ್ಠತತ್ತಾವಚ್ಛಿನ್ನಾವಚ್ಛೇದಕತಾಕತ್ವೇ ಅಪಿ ತನ್ನಿಷ್ಠನಿರವಚ್ಛಿನ್ನಾವಚ್ಛೇದಕತಾಕತ್ವಾಭಾವೇನ ವ್ಯಾವೃತ್ತೇಃ । ವಸ್ತುತಸ್ತು ಸ್ವರೂಪತೋ ಗುಣವೃತ್ತಿಜಾತ್ಯವಚ್ಛಿನ್ನಾಭಾವಾನಧಿಕರಣತ್ವಮೇವ ಲಾಘವಾತ್ ಲಕ್ಷಣಾರ್ಥಃ । 'ಈಶ್ವರೇ ಸುಖಂ ನಾಸ್ತಿ' ಇತ್ಯಾದಿ ಪ್ರತ್ಯಯಾಭಾವೇನ ಸ್ವರೂಪತಃ ಸುಖತ್ವಾದ್ಯವಚ್ಛಿನ್ನಾಭಾವಾನಂಗೀಕಾರಾತ್ ಲಕ್ಷಣಸಮನ್ವಯಃ । ಗುಣಪದೇನ ನಿತ್ಯಗುಣಸ್ಯ ವಿವಕ್ಷಿತತ್ವಾತ್ । ನ ಅನಿತ್ಯಗುಣಮಾತ್ರವೃತ್ತ್ಯನುಮಿತ್ವಾತ್ ಅವಚ್ಛಿನ್ನಾಭಾವಸತ್ತ್ವೇಽಪಿ ಅಸಂಭವಃ । ಗುಣತ್ವಂ ಚ ಪ್ರಾಮಾಣಿಕವ್ಯವಹಾರಸಿದ್ಧೋ ದೋಷವ್ಯಾವೃತ್ತೋ ಜಾತಿವಿಶೇಷಃ । ಏವಂ ಭಗವದ್ದೇಹಸ್ಯ ನಿಖಿಲಗುಣಾತ್ಮಕತ್ವಂ ನಿರುಕ್ತಸಮುದಾಯತ್ವಾಶ್ರಯರೂಪತ್ವಮ್ । ಸ್ವರೂಪತೋ ಗುಣವೃತ್ತಿಜಾತ್ಯವಚ್ಛಿನ್ನಪ್ರತಿಯೋಗಿತಾಕಭೇದಾನಧಿಕರಣತ್ವರೂಪಂ ವಾ ವಿವಕ್ಷಿತಮ್ । ಅತಃ ತಸ್ಯ ಜಡಜೀವಗುಣಾನಾತ್ಮಕತ್ವೇಽಪಿ ನ ಕ್ಷತಿಃ ನಾಪಿ ಅಸರ್ವಜ್ಞದುರ್ಜ್ಞೇಯತ್ವಮಿತಿ ಧ್ಯೇಯಮ್ । ಪೂರ್ಣತ್ವಂ ಚ ನ ದೇಶಕಾಲಾಪರಿಚ್ಛಿನ್ನತ್ವಮ್ । ಅಪಕರ್ಷಾನಾಶ್ರಯಪರಿಮಾಣವತ್ತ್ವಾದಿರೂಪಂ ಬೋಧ್ಯಮ್ । ದೇಹವತ್ತ್ವಸ್ಯ ಸರ್ವಜೀವಸಾಧಾರಣತ್ವಾತ್ – ಗುಣೇತಿ ॥ ಗುಣದೇಹವತ್ತ್ವಸ್ಯ ಚ ಸಜ್ಜೀವಸಾಧಾರಣತ್ವಾತ್ – ಏಕೇತಿ ॥ ಗುಣೈಕದೇಹವತ್ತ್ವಸ್ಯಾಪಿ ರಮಾಯಾಮ್ ಅತಿವ್ಯಾಪ್ತೇಃ – ಸ್ವತ ಇತಿ ॥





'ನಿಖಿಲಗುಣತ್ವಂ' ಎಂಬುದಾಗಿ ನಾರಾಯಣನ ಲಕ್ಷಣವನ್ನು ಹೇಳಿದರೆ ಅಸಂಭವರೂಪದೋಷ ಬರುತ್ತದೆ. ಏಕೆಂದರೆ ಜಡದಲ್ಲಿರುವ ಗುಣವಾಗಲೀ ಜೀವನಲ್ಲಿರುವ ಗುಣವಾಗಲೀ ಈಶ್ವರನಲ್ಲಿ ಇಲ್ಲವಾದ್ದರಿಂದ 'ನಿಖಿಲಗುಣತ್ವ' ನಾರಾಯಣನಲ್ಲಿ ಬರುವುದಿಲ್ಲ. ಆದ್ದರಿಂದ ಇದನ್ನು ನಾರಾಯಣನ ಲಕ್ಷಣವೆಂದು ಹೇಗೆ ಹೇಳಿದಿರಿ?

ಈ ರೀತಿಯಾದ ಪ್ರಶ್ನೆಯನ್ನು ಪರಿಹರಿಸಲು 'ನಿಖಿಲಗುಣತ್ವ' ಎಂದರೆ 'ಗುಣತ್ವಸಾಕ್ಷಾದ್ ವ್ಯಾಪ್ಯಯಾವದ್ಧರ್ಮನಿಷ್ಠಾವಚ್ಛೇದಕತಾಕಪ್ರತಿಯೋಗಿತಾಕಾಭಾವಾನಧಿಕರಣತ್ವಂ' ಎಂದು ಪರಿಷ್ಕಾರ ಮಾಡುತ್ತೇವೆ. ಈಗ ಹಿಂದಿನ ಅಸಂಭವದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಗುಣತ್ವಸಾಕ್ಷಾದ್‌ವ್ಯಾಪ್ಯವಾದ ಯಾವಧರ್ಮವೆಂದರೆ ನಾರಾಯಣನ ಜ್ಞಾನಾನಂದಾದಿಗುಣಗಳಲ್ಲಿರುವ ಜ್ಞಾನತ್ವ ಆನಂದತ್ವಾದಿಗಳು ತನ್ನಿಷ್ಠಾವಚ್ಛೇದಕತಾ ಎಂದರೆ ಆನಂದತ್ವನಿಷ್ಠಾವಚ್ಛೇದಕತಾ, ತನ್ನಿರೂಪಕಪ್ರತಿಯೋಗಿತಾಕಾಭಾವ ಎಂದರೆ ಆನಂದೋ ನಾಸ್ತಿ ಎಂಬ ಅಭಾವ. ಅಂತಹ ಆನಂದಾಭಾವಕ್ಕೆ ಅನಧಿಕರಣನಾದವನು ನಾರಾಯಣ. ಈ ರೀತಿಯಾಗಿ ಹೇಳಿದರೂ ಅಸಂಭವದೋಷ ಬಂದೇ ಬರುತ್ತದೆ. ಯಾಕೆಂದರೆ ಜೀವನಲ್ಲಿರುವ ಗುಣಗಳು ನಾರಾಯಣನಲ್ಲಿ ಇಲ್ಲವಾದ್ದರಿಂದ ಜೀವೀಯಗುಣಾಭಾವಕ್ಕೆ ನಾರಾಯಣನು ಅಧಿ -ಕರಣನೇ ಆಗುತ್ತಾನೆ ಹೊರತು ಅನಧಿಕರಣನಾಗುವುದಿಲ್ಲ. ಹೇಗೆಂದರೆ ಈಶ್ವರನಲ್ಲಿರುವ ಅಭಾವವೆಂದರೆ ಜೀವೀಯಸುಖಾಭಾವಃ ಅದಕ್ಕೆ ಪ್ರತಿಯೋಗೀ ಜೀವೀಯ ಸುಖ. ಪ್ರತಿಯೋಗಿತಾ ಜೀವೀಯ ಸುಖದಲ್ಲಿದೆ. ಪ್ರತಿಯೋಗಿತಾವಚ್ಛೇದಕವಾದದ್ದು ಜೀವೀಯ ಸುಖತ್ವ. ಮತ್ತು 'ಅವಚ್ಛೇದಕಕೋಟಿಪ್ರವಿಷ್ಟಾನಾಮಪಿ ಅವಚ್ಛೇದಕತ್ವಂ' ಎಂಬ ನಿಯಮದಂತೆ ಕೇವಲಸುಖತ್ವವೂ ಸಹ ಅವಚ್ಛೇದಕವಾಗುತ್ತದೆ. ಈ ಸುಖತ್ವವು ಗುಣತ್ವಸಾಕ್ಷಾದ್ ವ್ಯಾಪ್ಯಧರ್ಮವೂ ಆಗಿದೆ. ಆದ್ದರಿಂದ ನೀವು ಹೇಳಿದ ಲಕ್ಷಣಕ್ಕೆ ಅಸಂಭವದೋಷ ಇದ್ದೇ ಇದೆ.

ಈ ರೀತಿಯಾದ ಆಕ್ಷೇಪ ಸರಿಯಾದದ್ದಲ್ಲ. ಗುಣತ್ವಸಾಕ್ಷಾದ್‌ವ್ಯಾಪ್ಯಯಾವದ್ಧರ್ಮನಿಷ್ಠಾವಚ್ಛೇದಕತಾದಲ್ಲಿ ನಿರವಚ್ಛಿನ್ನತ್ವ ಎಂಬ ವಿಶೇಷಣವನ್ನು ಕೊಡುತ್ತೇವೆ. ಈಗ ಹಿಂದಿನ ದೋಷ ಬರುವುದಿಲ್ಲ. ಹಿಂದೆ ತಿಳಿಸಿದ ನ್ಯಾಯದಂತೆ ಸುಖತ್ವವು ಅವಚ್ಛೇದಕವಾದರೂ ಸಹ ಸುಖತ್ವನಿಷ್ಠಾವಚ್ಛೇದಕತಾವು ನಿರವಚ್ಛಿನ್ನವಾಗಿಲ್ಲ. ಕಿಂತು ಜೀವೀಯತ್ವಾವಚ್ಛಿನ್ನವೇ ಆಗಿದೆ. ಆದ್ದರಿಂದ ಜೀವನಲ್ಲಿರುವ ಸುಖವನ್ನು ತೆಗೆದುಕೊಂಡು ಅಸಂಭವರೂಪದೋಷವನ್ನು ಹೇಳಲಿಕ್ಕೆ ಬರುವುದಿಲ್ಲ.

'ನಿಖಿಲಗುಣಪೂರ್ಣಗುಣೈಕದೇಹಂ' ಎಂಬುದರಿಂದ ವಿವಕ್ಷಾಭೇದೇನ ಮೂರು ಲಕ್ಷಣಗಳನ್ನು ತಿಳಿಯಬೇಕು 1. ನಿಖಿಲಗುಣತ್ವಂ 2. ಪೂರ್ಣಗುಣತ್ವಂ 3. ಸ್ವತೋ ಗುಣೈಕದೇಹತ್ವಂ ಎಂದು. ಈ





ಮೂರರಲ್ಲಿ 'ಸ್ವತೋ ಗುಣೈಕದೇಹತ್ವಂ' ಎಂಬಲ್ಲಿ ಗುಣೈಕದೇಹತ್ವಂ ಎಂದಷ್ಟೇ ಹೇಳಿದರೆ ರಮಾದೇವಿಯಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದಕ್ಕೋಸ್ಕರ ಸ್ವಾತಂತ್ರ್ಯವೆಂಬ ಅರ್ಥವನ್ನು ತಿಳಿಸುವ ಸ್ವತಃ ಎಂಬ ವಿಶೇಷಣವನ್ನು ಕೊಡಬೇಕು. ರಮಾದೇವಿಯಲ್ಲಿ ಇರುವ ಗುಣೈಕದೇಹತ್ವವು ಪರಮಾತ್ಮನ ಅಧೀನವಾದ್ದರಿಂದ ಯಾವುದೇ ದೋಷವಿಲ್ಲ. ಇಲ್ಲಿ ಸ್ವತಃಶಬ್ದಾರ್ಥವಾದ ಸ್ವಾತಂತ್ರ್ಯವನ್ನು ಎಲ್ಲಿ ವಿಶೇಷಣವನ್ನಾಗಿ ಕೊಡುತ್ತೀರಿ? ಧರ್ಮಿಯಲ್ಲೋ? ದೇಹದಲ್ಲೋ? ಗುಣದಲ್ಲೋ? ಧರ್ಮಿಯಲ್ಲಿ ಎಂದು ಉತ್ತರಿಸಿದರೆ ಗುಣೈಕದೇಹತ್ವಂ ಎಂಬ ವಿಶೇಷಣವೇ ವ್ಯರ್ಥವಾಗುತ್ತದೆ. ಏಕೆಂದರೆ ಕೇವಲ ಸ್ವಾತಂತ್ರ್ಯವನ್ನೇ ಲಕ್ಷಣ ಮಾಡಿದರೂ ಯಾವುದೇ ದೋಷ ಬರುವುದಿಲ್ಲ. ಇನ್ನು ಸ್ವತಃ ಶಬ್ದವು ದೇಹದಲ್ಲಿ ವಿಶೇಷಣವೆಂದು ಹೇಳಿದರೆ ಗುಣೈಕಸ್ವತೋದೇಹತ್ವಂ ಎಂದು ಲಕ್ಷಣವಾಯಿತು. ಇಲ್ಲಿಯೂ ಸ್ವತೋ ದೇಹತ್ವಂ ಎಂಬುದರಿಂದಲೇ ಲಕ್ಷ್ಮಿಯಲ್ಲಿ ಅತಿವ್ಯಾಪ್ತಿಪರಿಹಾರವಾಗುವುದರಿಂದ ಗುಣೈಕಪದವು ವ್ಯರ್ಥವಾಗುತ್ತದೆ.

ಹಾಗೆಯೇ ಮೂರನೆಯ ಪಕ್ಷದಲ್ಲಿ 'ಸ್ವತೋ ಗುಣೈಕದೇಹತ್ವಂ' ಎಂದು ಲಕ್ಷಣವಾಯಿತು. ಆದರೆ 'ಸ್ವತೋ ಗುಣತ್ವಂ' ಎಂಬುದರಿಂದಲೇ ರಮೆಯಲ್ಲಿ ಅತಿವ್ಯಾಪ್ತಿಪರಿಹಾರವಾಗುವುದರಿಂದ ಏಕದೇಹತ್ವಪದವು ವ್ಯರ್ಥವೆನಿಸುತ್ತದೆ. ಆದ್ದರಿಂದ ಸ್ವತಃಶಬ್ದವನ್ನು ಎಲ್ಲಿ ವಿಶೇಷಣವನ್ನಾಗಿ ಕೊಡುತ್ತೀರಿ?

ಈ ರೀತಿಯಾದ ಆಕ್ಷೇಪದ ಕ್ರಮವೇ ಸರಿಯಿಲ್ಲ. ಏಕೆಂದರೆ ಇಲ್ಲಿ ಗುಣೈಕದೇಹತ್ವ ಎಂದರೆ 'ಗುಣೇತರದೇಹಶೂನ್ಯತ್ವೇ ಸತಿ ದೇಹವತ್ತ್ವಮ್' ಎಂದು ಅರ್ಥ. ಇಲ್ಲಿ ಸ್ವಾತಂತ್ರ್ಯವನ್ನು ಗುಣದಲ್ಲೇ ವಿಶೇಷಣವನ್ನಾಗಿ ಕೊಡುತ್ತೇವೆ. ಈ ರೀತಿಯಾಗಿ ಹೇಳಿದಾಗ ಹಿಂದಿನ ವ್ಯರ್ಥವಿಶೇಷ್ಯತ್ವಕ್ಕೆ ಅವಕಾಶವೇ ಇಲ್ಲ. ಏಕೆಂದರೆ 'ದೇಹವತ್ತ್ವಂ' ಎಂದಷ್ಟೇ ಹೇಳಿದರೆ ಜೀವನಲ್ಲಿ ಅತಿವ್ಯಾಪ್ತಿ ಬರುತ್ತದೆ. ಗುಣೇತರದೇಹಶೂನ್ಯತ್ವವೆಂದಷ್ಟೇ ಹೇಳಿದರೆ ಘಟಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಎರಡೂ ದಳಗಳು ಸಾರ್ಥಕಗಳಾಗಿವೆ. ಇನ್ನು ಇಷ್ಟೇ ಲಕ್ಷಣ ಹೇಳಿದರೂ ಲಕ್ಷ್ಮಿಯಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದಕ್ಕಾಗಿ ಸ್ವತಃ ಎಂಬ ವಿಶೇಷಣವನ್ನು ಗುಣದಲ್ಲಿ ಕೊಡಬೇಕು. ಆಗ ಯಾವುದೇ ರೀತಿಯಾದ ದೋಷಗಳಿಗೂ ಅವಕಾಶವಿಲ್ಲ.

ಯಾದುಪತ್ಯ – ನನು ವಸ್ತುನಿರ್ಧಾರಣಸ್ಯ ಏಕೇನೈವ ಲಕ್ಷಣೇನ ಸಂಭವಾತ್ ಕಿಮನೇಕಲಕ್ಷಣೋಕ್ತ್ಯಾ ಇತ್ಯತ ಆಹ – ವಿಭವಾದಿತಿ ॥ ಲ್ಯಬ್ಲೋಪನಿಮಿತ್ತೇಯಂ ಪಂಚಮೀ, ವಿಭವಮ್ ಐಶ್ವರ್ಯಮಪೇಕ್ಷ್ಯೇತಿ ॥ 'ತಜ್ಜ್ಞಾಪನಾಯ' ಇತಿ ಯಾವತ್ । ತತಶ್ಚ ಪ್ರಸಂಗಾತ್ ನಾರಾಯಣಸ್ಯ ಐಶ್ವರ್ಯಮಪಿ ಜ್ಞಾಪಯಿತುಮ್ ಅನೇಕಲಕ್ಷಣೋಕ್ತಿರಿಯಮ್ ಇತಿ ಭಾವಃ ॥





ಪರಮಾತ್ಮನಿಗೆ ಅನೇಕಲಕ್ಷಣಗಳನ್ನು ಹೇಳುವುದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ವಿಭವಾತ್' ಎಂದು ಹೇಳಿದ್ದಾರೆ. ಅನೇಕಲಕ್ಷಣಗಳನ್ನು ಹೇಳುವುದರಿಂದ ಪರಮಾತ್ಮನಲ್ಲಿರುವ ಅಧಿಕೈಶ್ವರ್ಯ ಸ್ಪಷ್ಟವಾಗಿ ತಿಳಿಯುತ್ತದೆ. ವಿಭವಾತ್ ಎಂಬುದು ಲ್ಯಬ್‌ಲೋಪನಿಮಿತ್ತಕವಾದ ಪಂಚಮೀ-ವಿಭಕ್ತಿಯಾಗಿದೆ. ಆದ್ದರಿಂದ ಐಶ್ವರ್ಯವನ್ನು ಅಪೇಕ್ಷಿಸಿ ಎಂದರ್ಥ. ಇದರಿಂದ ಪ್ರಾಸಂಗಿಕವಾಗಿ ನಾರಾಯಣನ ಐಶ್ವರ್ಯವನ್ನು ಕೂಡ ತಿಳಿಸಲು ಅನೇಕಲಕ್ಷಣವನ್ನು ಹೇಳಿದ್ದಾರೆ ಎಂದು ತಿಳಿಯಬೇಕು. ಕ್ರಿಯಾಪದವನ್ನು ಸಮಭಿವ್ಯಾಹಾರಮಾಡಿಕೊಂಡು ದ್ವಿತೀಯಾವಿಭಕ್ತ್ಯರ್ಥವಾದ ನಮ್ಯತ್ವಕ್ಕೆ ಉಪಪಾದಕವಾಗಿ ನಿಖಿಲ ಇತ್ಯಾದಿ ವಿಶೇಷಣಗಳನ್ನು ನಾರಾಯಣನಲ್ಲಿ ಸಮರ್ಥನೆ ಮಾಡಲಾಯಿತು. ಈಗ ಪ್ರಕೃತ್ಯರ್ಥಭೂತವಾದ ನಾರಾಯಣನ ಸ್ವರೂಪನಿರ್ಧಾರಣೆಗೆ ಹೇತುಭೂತವಾದ ಲಕ್ಷಣಪರವಾಗಿ ಅದೇ ವಿಶೇಷಣಗಳನ್ನು ವ್ಯಾಖ್ಯಾನ ಮಾಡಲು 'ಯದ್ವಾ' ಇತ್ಯಾದಿ ಗ್ರಂಥವು ಹೊರಟಿದೆ.

ಆನಂದ – ನನ್ವೇಕೇನೈವ ಲಕ್ಷಣವಚನೇನೈವ ಸ್ವರೂಪನಿರ್ಧಾರಣಸಂಭವಾತ್ ಅನೇಕೇಷಾಂ ಲಕ್ಷಣಾನಾಂ ವೈಯರ್ಥ್ಯಮಿತ್ಯತ ಆಹ – ವಿಭವಾದಿತಿ ॥ ಜ್ಞಾನಾಧಿಕ್ಯಾದಿರೂಪಸಾಮರ್ಥ್ಯ-ವಿಶೇಷಾತ್ ಇತ್ಯರ್ಥಃ । ಅಲ್ಪಜ್ಞೇನ ಖಲು ಏಕಂ ಲಕ್ಷಣಮುಚ್ಯತೇ ಆಚಾರ್ಯಸ್ಯ ತು ಸರ್ವಜ್ಞತ್ವಾ-ದನೇಕಲಕ್ಷಣವಚನಂ ಯುಕ್ತಮಿತಿ ಭಾವಃ । ಅಥವಾ ನಾರಾಯಣಸ್ಯ ಏಕತ್ವಾತ್ ತಸ್ಯ ಕಥಮ್ ಅನೇಕಾನಿ ಲಕ್ಷಣಾನಿ? ಇತ್ಯತ ಉಕ್ತಮ್ – ವಿಭವಾದಿತಿ ॥ 'ಸರ್ವೋತ್ತಮತ್ವಾದಿರೂಪೈಶ್ವರ್ಯ-ವತ್ತ್ವಾತ್' ಇತ್ಯರ್ಥಃ । ತಥಾ ಚ ಮಹದೈಶ್ವರ್ಯವತ್ತ್ವಾತ್ ತಸ್ಯ ಅನೇಕಲಕ್ಷಣಾನಿ ಯುಜ್ಯಂತ ಇತಿ ಭಾವಃ । ನನು ಪ್ರಥಮವಿಶೇಷಣೇನ ನಿಖಿಲಪೂರ್ಣಗುಣೈಕದೇಹತ್ವಂ ಲಕ್ಷಣಮುಕ್ತಮ್ । ತತ್ರ 'ಪೂರ್ಣನಿಖಿಲ'ಪದಯೋರ್ವೈಯರ್ಥ್ಯಮ್ । ಪೂರ್ಣಗುಣತ್ವಸ್ಯ ನಿಖಿಲಗುಣತ್ವಸ್ಯೈವ ವಾ ಲಕ್ಷಣತ್ವಸಂಭವಾತ್ ಇತ್ಯತೋ ಯಥಾ ನ ವೈಯರ್ಥ್ಯಂ ತಥಾ ಲಕ್ಷಣಾನ್ಯಾಹ – ತತ್ರೇತಿ ॥ ಗುಣೈಕ-ದೇಹತ್ವಸ್ಯ ಲಕ್ಷ್ಮ್ಯಾಂ ಅಪಿ ಸತ್ತ್ವಾತ್ ತದರ್ಥಂ – ಸ್ವತ ಇತ್ಯುಕ್ತಮ್ । ತಸ್ಯಾಶ್ಚ ಸ್ವಾತಂತ್ರ್ಯೇಣ ಗುಣೈಕ-ದೇಹತ್ವಾಭಾವಾನ್ನ ಅತಿಪ್ರಸಂಗಃ । ನನ್ವತ್ರೈವಂ ವಿಶೇಷಣವಿಶೇಷ್ಯಭಾವೋ ನ ಪ್ರತೀಯತೇ ಇತ್ಯತ ಉಕ್ತಮ್ – ವಿವಕ್ಷಾಭೇದೇನೇತಿ ॥ 'ವಕ್ತುರಿಚ್ಛಾಭೇದೇನ' ಇತ್ಯರ್ಥಃ ।

ಒಂದೇ ಲಕ್ಷಣದಿಂದಲೇ ಸ್ವರೂಪ ನಿರ್ಧಾರ ಆಗುತ್ತದೆ. ಅನೇಕಲಕ್ಷಣಗಳನ್ನು ಹೇಳುವುದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ವಿಭವಾತ್' ಎಂದು ಉತ್ತರಿಸಿದ್ದಾರೆ. ಜ್ಞಾನಾಧಿಕ್ಯವೆಂಬ ಸಾಮರ್ಥ್ಯ-ವಿರುವುದರಿಂದ ಅನೇಕಲಕ್ಷಣಗಳನ್ನು ಹೇಳುವುದು ಯುಕ್ತವಾಗುತ್ತದೆ. ಅಲ್ಪಜ್ಞರಾದವರು ಒಂದು





ಲಕ್ಷಣವನ್ನು ಹೇಳುತ್ತಾರೆ. ಸರ್ವಜ್ಞರಾದ ಶ್ರೀಮದಾಚಾರ್ಯರು ಅನೇಕ ಲಕ್ಷಣಗಳನ್ನು ಹೇಳುವುದು ಯುಕ್ತವಾಗುತ್ತದೆ.

ಅಥವಾ ನಾರಾಯಣನು ಒಬ್ಬನೇ ಆಗಿದ್ದಾನೆ. ಅವನಿಗೆ ಅನೇಕಲಕ್ಷಣಗಳನ್ನು ಏಕೆ ಹೇಳಬೇಕು ಎಂಬ ಪ್ರಶ್ನೆಗೂ 'ವಿಭವಾತ್' ಎಂಬ ಪದವೇ ಉತ್ತರಿಸುತ್ತಿದೆ. ಸರ್ವೋತ್ತಮತ್ವಾದಿ ಐಶ್ವರ್ಯಶಾಲಿಯಾಗಿರುವುದರಿಂದ ಅನೇಕಲಕ್ಷಣಗಳನ್ನು ಹೇಳುವುದು ಅವನ ವೈಭವಕ್ಕೆ ಕಾರಣವಾಗಿವೆ. ಆದ್ದರಿಂದ ಮಹದೈಶ್ವರ್ಯ ಇರುವ ಕಾರಣ ಅನೇಕಲಕ್ಷಣವು ಯುಕ್ತವಾಗುತ್ತದೆ.

ಪ್ರಥಮಾವಿಶೇಷಣವಾಗಿರುವುದರಿಂದ ನಿಖಿಲಪೂರ್ಣಗುಣೈಕದೇಹತ್ವವನ್ನು ಲಕ್ಷಣವನ್ನಾಗಿ ಹೇಳಲಾಯಿತು. ಇದರಲ್ಲಿ ಪೂರ್ಣ ಹಾಗೂ ನಿಖಿಲಪದಗಳಿಗೆ ವೈಯರ್ಥ್ಯ ಬರುತ್ತದೆ. ಏಕೆಂದರೆ ಪೂರ್ಣಗುಣತ್ವ ಅಥವಾ ನಿಖಿಲಗುಣತ್ವವನ್ನೇ ಲಕ್ಷಣವನ್ನಾಗಿ ಹೇಳಲು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಹೇಗೆ ವೈಯರ್ಥ್ಯವು ಬರುವುದಿಲ್ಲವೋ ಹಾಗೆ ಲಕ್ಷಣವನ್ನು ತಿಳಿಯಬೇಕು ಎಂಬುದರ ಉಪಪಾದನೆಗಾಗಿ 'ತತ್ರ' ಇತ್ಯಾದಿ ವಾಕ್ಯವು ಹೊರಟಿದೆ.

ಗುಣೈಕದೇಹತ್ವವು ಲಕ್ಷ್ಮೀದೇವಿಯಲ್ಲೂ ಇದೆ. ಅದಕ್ಕಾಗಿ ಸ್ವತಃ ಎಂಬ ವಿಶೇಷಣವನ್ನು ನೀಡಿದ್ದಾರೆ. ಲಕ್ಷ್ಮೀದೇವಿಯಲ್ಲಿ ಸ್ವಾತಂತ್ರ್ಯೇಣ ಗುಣೈಕದೇಹತ್ವವು ಇಲ್ಲವಾದ ಕಾರಣ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಈ ಲಕ್ಷಣಗಳಲ್ಲಿ ವಿಶೇಷಣವಿಶೇಷ್ಯಭಾವವು ಪ್ರತೀತವಾಗುತ್ತಿಲ್ಲ ಅಲ್ಲವೇ ಎಂಬ ಪ್ರಶ್ನೆಗೆ ವಿವಕ್ಷಾಭೇದೇನ ಎಂಬುದರಿಂದ ಉತ್ತರಿಸಿದ್ದಾರೆ. ವಕ್ತೃವಿನ ಇಚ್ಛಾಭೇದೇನ ಹೀಗೆ ವಿಶೇಷಣವಿಶೇಷ್ಯಭಾವವು ಉಪಪನ್ನವಾಗುತ್ತದೆಂದು ತಿಳಿಯಬೇಕು.

## ಸುಧಾಪರಿಮಳ ಸಾರ

ಇಲ್ಲಿಯ ತನಕ ನಾರಾಯಣನಲ್ಲಿ ವಿಶಿಷ್ಟತ್ವ, ಅಧಿಕೃತತ್ವ, ಇಷ್ಟತ್ವಗಳ ಉಪಪಾದನೆಗಾಗಿ ವಿಶೇಷಣಗಳು ಸಾರ್ಥಕವಾಗಿವೆ ಎಂಬುದಾಗಿ ವಿಚಾರಮಾಡಿದ್ದಾಯಿತು. ಈಗ ಅವನನ್ನು ವಂದಿಸಬೇಕಾದರೆ ಅವನ ಸ್ವರೂಪ ನಿರ್ಧಾರವಾಗಬೇಕು. ಅಂಥ ಸ್ವರೂಪದ ನಿರ್ಧಾರಕ್ಕಾಗಿ ಲಕ್ಷಣವನ್ನು ಹೇಳಲು ಈ ಶ್ಲೋಕವು ಹೊರಟಿದೆ ಎಂಬುದನ್ನು ಸಮರ್ಥನೆ ಮಾಡುತ್ತಿದ್ದಾರೆ. ಈ ಒಂದೇ ಶ್ಲೋಕದಲ್ಲಿ ಅನೇಕ ಗುಣಗಳು ಹೇಳಲ್ಪಟ್ಟಿವೆ.

1. ನಿಖಿಲಗುಣತ್ವ, 2.ಪೂರ್ಣಗುಣತ್ವ, 3. ಸ್ವತಃ ಗುಣೈಕದೇಹತ್ವ, 4.ನಿರ್ದೋಷತ್ವ,







5.ವೇದಾದಿ ಮುಖ್ಯಾರ್ಥತ್ವ, 6.ಅಖಿಲವೇದಾದ್ಯರ್ಥತ್ವ, 7.ಉದ್ಭವದತ್ವ, 8.ಸೃಷ್ಟಿದತ್ವ, 9.ಸ್ಥಿತಿದತ್ವ, 10.ನಿಯಮನದತ್ವ, 11.ಜ್ಞಾನದತ್ವ, 12.ಅಜ್ಞಾನದತ್ವ, 13.ಬಂಧದತ್ವ, 14.ಮೋಕ್ಷದತ್ವ, 15.ಮುಖ್ಯವಂದ್ಯತ್ವ, 16.ಅಶೇಷವಂದ್ಯತ್ವ, 17.ಸದಾ ಪರಮಪ್ರೇಮ-ಯೋಗ್ಯತ್ವ ಹೀಗೆ ಅನೇಕಲಕ್ಷಣಗಳು ಈ ಶ್ಲೋಕದಲ್ಲಿ ಹೇಳಲ್ಪಟ್ಟವೆ.

ಅಪರೋಕ್ಷಜ್ಞಾನಿಗಳಿಗೂ ಪರಮಾತ್ಮನು ಪ್ರಿಯನಾಗಿದ್ದಾನೆ. ಆದರೆ ಶ್ರೀಮದಾನಂದತೀರ್ಥರಿಗೆ ನಿರಂತರ ಪರಮಪ್ರೇಮಾಸ್ಪದನಾಗಿದ್ದಾನೆ.

## ನಾರಾಯಣನ ಅನೇಕಲಕ್ಷಣಕ್ಕೆ ಪ್ರಮಾಣಗಳ ಆಧಾರ (ನಾಕನೆಯ ವ್ಯಾಖ್ಯಾನ)

**ಶ್ರೀಮನ್ನ್ಯಾಯಸುಧಾ– ಅಥವಾ 'ನಿಖಿಲ' ಇತ್ಯಾದ್ಯುಕ್ತಲಕ್ಷಣೋಪಪನ್ನತಯಾ ನಾರಾಯಣಃ ಕೇನ ಪ್ರಮಾಣೇನ ಪ್ರತಿಪತ್ತವ್ಯಃ ಇತ್ಯತಃ – ಸುವಾಕ್ಯೈಃ ಆಪ್ಯಮ್ ಇತ್ಯುಕ್ತಮ್ ।**

ಅಥವಾ ನಿಖಿಲಪೂರ್ಣಗುಣೈಕದೇಹಂ' ಎಂಬ ವಿಶೇಷಣದಿಂದ ಹಾಗೂ 'ನಿರ್ದೋ-ಷಂ' ಎಂಬ ವಿಶೇಷಣದಿಂದ ನಾರಾಯಣನ ಲಕ್ಷಣವನ್ನು ಹೇಳುತ್ತಿದ್ದಾರೆ. ನಾರಾಯಣನು ಯಾವ ಪ್ರಮಾಣದಿಂದ ತಿಳಿಯಲು ಯೋಗ್ಯನಾಗಿದ್ದಾನೆ? ಎಂಬ ಪ್ರಶ್ನೆಗೆ ಉತ್ತರವನ್ನು ನೀಡಲು 'ಸುವಾಕ್ಯೈಃ ಆಪ್ಯಮ್' ಎಂಬ ವಿಶೇಷಣವನ್ನು ನೀಡಿದ್ದಾರೆ.

## ಧರ್ಮಾದಿಗಳು ವೇದಪ್ರತಿಪಾದ್ಯವಲ್ಲವೇ?

**ಶ್ರೀಮನ್ನ್ಯಾಯಸುಧಾ– ನನು ವೇದಾದ್ಯೇಕದೇಶೇऽನ್ಯಥಾऽಪಿ ಉಚ್ಯತೇ । ನ । ತತ್ಪ್ರತೀತೇರಪರಾಮರ್ಶಪೂರ್ವಕತ್ವಾತ್ ಇತ್ಯಾಶಯೇನ 'ಅಖಿಲೈಃ' ಇತ್ಯು-ದಿತಮ್ । ತರ್ಹಿ ಧರ್ಮಾದ್ಯಸಿದ್ಧಿಃ ಸ್ಯಾತ್, ತಸ್ಯ ಪ್ರಮಾಣಾಂತರಾ-ಗೋಚರತ್ವಾತ್ ।**





ಆಕ್ಷೇಪ – ವೇದದ ಕೆಲವು ಭಾಗಗಳಲ್ಲಿ ನಾರಾಯಣನನ್ನು ಬಿಟ್ಟು ಬೇರೆ ದೇವತೆಗಳು ಸ್ತೋತ್ರವು ಕೂಡ ಕೇಳಿಸುತ್ತಿದೆಯಲ್ಲವೇ?

ಸಮಾಧಾನ - ಇದು ತಪ್ಪು. ಕೆಲವೆಡೆ ಆಪಾತತಃ ಹಾಗೆ ಬೇರೆ ದೇವತೆಗಳ ಸ್ತೋತ್ರ ಕಾಣಿಸುತ್ತದೆ. ಆದರೆ ಅದು ಸರಿಯಾಗಿ ಪರಾಮರ್ಶ ಮಾಡದೇ ಇದ್ದಾಗ ತಿಳಿಯುವ ವಿಚಾರ. ಈ ಅಭಿಪ್ರಾಯದಿಂದ 'ಅಖಿಲೈಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

ಆಕ್ಷೇಪ - ಹಾಗಾದರೆ ವೇದವು ಸಮಗ್ರವಾಗಿ ಭಗವಂತನನ್ನೇ ಪ್ರತಿಪಾದನೆ ಮಾಡುವುದಾದರೆ ಧರ್ಮಾದಿಗಳ ಸಿದ್ಧಿಯೇ ಆಗದಿರಬೇಕಾದೀತು? ಏಕೆಂದರೆ ಧರ್ಮಾದಿಗಳು ಬೇರೆ ಪ್ರಮಾಣಗಳಿಂದ ಗೋಚರವೇ ಆಗಿರುವುದಿಲ್ಲ?

## ಅಮುಖ್ಯವೃತ್ತಿಯಿಂದ ಪ್ರತಿಪಾದ್ಯವಾಗಿವೆ

**ಶ್ರೀಮನ್ನ್ಯಾಯಸುಧಾ– ಮೈವಮ್ । ಅಮುಖ್ಯಯಾ ವೃತ್ತ್ಯಾ ಧರ್ಮಾದೇ-ರಪಿ ವೇದಾದಿವೇದ್ಯತ್ವಾತ್ ಇತ್ಯಾಶಯವತಾ 'ಆಪ್ಯತಮಮ್' ಇತ್ಯಭಿಹಿತಮ್ । 'ಅಪಿ'ಶಬ್ದಃ ವಕ್ಷ್ಯಮಾಣಪ್ರಮಾಣಸಮುಚ್ಚಯಾರ್ಥಃ । ಸಕಲಜಗನ್ನಿಮಿತ್ತ-ಕಾರಣತ್ವಾದಿಹೇತುಭಿರಪಿ ಉತ್ಕಲಕ್ಷಣೋ ನಾರಾಯಣಃ ಪ್ರತ್ಯೇತವ್ಯ ಇತ್ಯಭಿ-ಪ್ರಾಯೇಣೋಕ್ತಮ್ 'ಅಸ್ಯ' ಇತಿ ॥**

ಸಮಾಧಾನ – ಇದು ತಪ್ಪು. ವೇದಾದಿಗಳು ಅಮುಖ್ಯವೃತ್ತಿಯಿಂದ ಧರ್ಮಾದಿಗಳನ್ನು ಕೂಡ ಪ್ರತಿಪಾದನೆ ಮಾಡುತ್ತವೆ. ಈ ಅಭಿಪ್ರಾಯದಿಂದ 'ಆಪ್ಯತಮಮ್' ಎಂಬುದಾಗಿ ಹೇಳಿದ್ದಾರೆ. 'ಅಪಿ' ಶಬ್ದವು ಮುಂದೆ ಹೇಳುವ ಪ್ರಮಾಣವನ್ನು ಸಮುಚ್ಚಯ ಮಾಡುತ್ತಿದೆ.

ಸಕಲಜಗನ್ನಿಮಿತ್ತಕಾರಣತ್ವ ಇತ್ಯಾದಿ ಹೇತುಗಳಿಂದಲೂ ಕೂಡ ನಾರಾಯಣನು ಗುಣಪೂರ್ಣನಾಗಿದ್ದಾನೆ ನಿರ್ದೋಷನಾಗಿದ್ದಾನೆ ಎಂದು ಸಿದ್ಧವಾಗುತ್ತದೆ. ಈ ಅಭಿ-ಪ್ರಾಯದಿಂದ 'ಅಸ್ಯೋದ್ಭವಾದಿ' ಇತ್ಯಾದಿ ವಿಶೇಷಣವನ್ನು ಹೇಳಿರುತ್ತಾರೆ.

## ಅನೇಕಲಕ್ಷಣಗಳ ಉಪಪಾದನೆಗಾಗಿ ವಿಶೇಷಣಗಳು ಸಾರ್ಥಕ

ಪರಿಮಳ– ನನು ವಿಭವಾದನೇಕಲಕ್ಷಣೋಕ್ತಾವಪಿ ಏವಂರೂಪೇಣೈವ ಲಕ್ಷಣಾನಿ ವಾಚ್ಯಾನಿ ಇತ್ಯತ್ರ ನ ಬೀಜಮಸ್ತಿ ಇತ್ಯತಃ ಸರ್ವಸ್ಯ ಉಪಯೋಗಮಾಹ – ಅಥವಾ ಇತ್ಯಾದಿನಾ ದುಃಖಾದಿದೋಷರಹಿತಶ್ಚ ಇತ್ಯಂತೇನ ॥ ತಮಪೋಽಗ್ರೇ ಪೃಥಕ್ಕೃತ್ಯಂ ವಕ್ತುಮ್ 'ಆಪ್ತಮ್' ಇತಿ ಪ್ರತೀಕೋಕ್ತಿಃ । 'ವಕ್ಷ್ಯಮಾಣಪ್ರಮಾಣೇ' ಇತ್ಯುಕ್ತಮ್ । ತದ್ವ್ಯನಕ್ತಿ – ಸಕಲೇತಿ ॥ ಆದಿಪದಾತ್ ಜಗತ್ಪಾಲಕತ್ವಸಂಹರ್ತೃತ್ವನಿಯಂತೃತ್ವಾದಯೋ ಹೇತವೋ ಗ್ರಾಹ್ಯಾಃ । ಉಕ್ತಂ ಹಿ ಭಾಗವತೇ 'ಕರ್ತೃತ್ವಾತ್ ಸಗುಣಂ ಬ್ರಹ್ಮ' ಇತಿ । ವಕ್ಷ್ಯತಿ ಚ ಭಾಷ್ಯಕಾರೋಽಪಿ ಆನಂದಮಯನಯೇ ।

'ಜನ್ಮಾದ್ಯಸ್ಯೇತಿಸೂತ್ರೇಣ ಗುಣಸರ್ವಸ್ವಸಿದ್ಧಯೇ ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಮ್ ....'

ಇತಿ ಭಾವಃ । ನಹಿ ಜಗಜ್ಜನ್ಮಾದಿಕರ್ತುಃ ದೋಷಾಃ ಸಂಭವಂತೀತಿ ಜಗತ್ಕರ್ತೃತ್ವಾದಿನಾ ಏವ ಗುಣಸರ್ವಸ್ವವತ್ ನಿರ್ದೋಷತಾಽಪಿ ಸಿದ್ಧ್ಯತೀತಿ ಭಾವೇನ 'ಉಕ್ತಲಕ್ಷಣ' ಇತ್ಯುಕ್ತಮ್ ।

ಪರಮಾತ್ಮನು ಅನೇಕವೈಭವೋಪೇತನಾಗಿದ್ದಾನೆ. ಆದ್ದರಿಂದ ಅನೇಕಲಕ್ಷಣಗಳನ್ನು ಅವನಲ್ಲಿ ಉಪಪಾದನೆ ಮಾಡಿದಿರಿ. ಆದರೂ ಕೂಡ ನೀವು ಹೇಳಿದ ರೀತಿಯಲ್ಲಿಯೇ ಲಕ್ಷಣವನ್ನು ಹೇಳಬೇಕೆಂಬುದರಲ್ಲಿ ಯಾವುದೇ ಕಾರಣವಿಲ್ಲ? ಈ ಆಕ್ಷೇಪವನ್ನು ಪರಿಹಾರ ಮಾಡಲು ಪ್ರತಿಯೊಂದು ವಿಶೇಷಣಗಳಿಗೆ ಸಾರ್ಥಕ್ಯವನ್ನು ಉಪಪಾದನೆ ಮಾಡುವುದಕ್ಕಾಗಿ 'ಅಥವಾ' ಎಂಬಲ್ಲಿಂದ ಪ್ರಾರಂಭ ಮಾಡಿ 'ದುಃಖಾದಿದೋಷರಹಿತಶ್ಚ' ಎಂಬಲ್ಲಿಯ ತನಕದ ಗ್ರಂಥವು ಹೊರಟಿದೆ.

ಆಪ್ತತಮಮ್ ಎಂಬಲ್ಲಿರುವ ತಮಪ್‌ಪ್ರತ್ಯಯದ ಸಾರ್ಥಕ್ಯವನ್ನು ಇಲ್ಲೇ ಮೂರು ಪಂಕ್ತಿಗಳ ಅನಂತರ ಹೇಳುವವರಿದ್ದಾರೆ. ಆದ್ದರಿಂದ ಇಲ್ಲಿ ಆಪ್ತಮ್ ಎಂದಷ್ಟೇ ಪ್ರತೀಕಗ್ರಹಣ





ಮಾಡಿದ್ದಾರೆ. ಅಪಿಶಬ್ದವು ಮುಂದೆ ಹೇಳುವ ಪ್ರಮಾಣವನ್ನು ಸಮುಚ್ಚಯ ಮಾಡುತ್ತಿದೆ ಎಂದು ವ್ಯಾಖ್ಯಾನ ಮಾಡಿದರು. ಆ ಪ್ರಮಾಣವನ್ನೇ 'ಸಕಲ' ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾರೆ. 'ಜಗನ್ನಿಮಿತ್ತಕಾರಣತ್ವಾದಿಹೇತುಭಿಃ' ಎಂಬಲ್ಲಿರುವ ಆದಿಪದದಿಂದ ಸಕಲಜಗತ್ಪಾಲಕತ್ವ, ಸಂಹಾರಕತ್ವ, ನಿಯಂತೃತ್ವ ಮೊದಲಾದ ಎಂಟು ಲಕ್ಷಣಗಳನ್ನು ವಿವಕ್ಷಿಸಬೇಕು.

ಇದನ್ನೇ ಭಾಗವತದಲ್ಲಿ 'ಜಗತ್ಕರ್ತೃವಾಗಿರುವುದರಿಂದ ಬ್ರಹ್ಮನು ಗುಣಪೂರ್ಣನಾಗಿದ್ದಾನೆ' ಎಂದು ಹೇಳಲಾಗಿದೆ. ಮತ್ತು ಭಾಷ್ಯಕಾರರು ಇದೇ ಶಾಸ್ತ್ರದ ಆನಂದಮಯಾಧಿಕರಣದಲ್ಲಿ ಹೀಗೆ ಹೇಳುವವರಿದ್ದಾರೆ. 'ಜನ್ಮಾದ್ಯಸ್ಯೇತಿಸೂತ್ರೇಣ ಗುಣಸರ್ವಸ್ವಸಿದ್ಧಯೇ । ಬ್ರಹ್ಮಣೋ ಲಕ್ಷಣಂ ಪ್ರೋಕ್ತಮ್ ....' ಜನ್ಮಾದ್ಯಸ್ಯ ಇತ್ಯಾದಿಸೂತ್ರದಿಂದ ಗುಣಪರಿಪೂರ್ಣತ್ವವು ಸಿದ್ಧವಾಗುವುದಕ್ಕಾಗಿ ಬ್ರಹ್ಮನ ಲಕ್ಷಣವು ಹೇಳಲ್ಪಟ್ಟಿದೆ ಎಂದು.

ಜನ್ಮಾದಿಕರ್ತೃವಿಗೆ ದೋಷಗಳು ಬರುವುದಿಲ್ಲ. ಆದ್ದರಿಂದ ಜನ್ಮಾದಿಕರ್ತೃತ್ವ ಎಂಬ ಲಕ್ಷಣ -ದಿಂದಲೇ ಗುಣಪರಿಪೂರ್ಣತ್ವವು ಹೇಗೆ ಸಿದ್ಧವಾಗುತ್ತದೋ ಅದರಂತೆ ನಿರ್ದೋಷತ್ವವೂ ಸಿದ್ಧವಾಗುತ್ತದೆ. ಈ ಅಭಿಪ್ರಾಯದಿಂದ 'ಉಕ್ತಲಕ್ಷಣಃ' ಎಂಬುದಾಗಿ ಹೇಳಿದ್ದಾರೆ.

## ನಿರ್ದೋಷತ್ವವಿಷಯದಲ್ಲೇಕೆ ವಿವೇಚನೆ ಇಲ್ಲ?

**ಗುರ್ವರ್ಥದೀಪಿಕಾ – 'ವಿಭವಾದನೇಕಾನಿ ಲಕ್ಷಣಾನಿ' ಇತ್ಯನೇನ ನಿಖಿಲಪೂರ್ಣಗುಣೈಕದೇಹತ್ವನಿರ್ದೋಷತ್ವಾದಿಗ್ರಂಥೋಕ್ತ ಸಕಲಲಕ್ಷಣಾನಿ ಸಂಗೃಹ್ಯತೇ । ಉಪಪಾದನೀಯಪ್ರಮೇಯ-ವಿಶೇಷಸದ್ಭಾವಾತ್ ನಿಖಿಲಪೂರ್ಣಗುಣೈಕದೇಹತ್ವಾದಿಕಮೇವ ವಿವೇಚಿತಮ್ । ನಿರ್ದೋಷತ್ವೇ ತು ತದಭಾವಾನ್ನ ಪೃಥಕ್ ತಸ್ಯ ವಿವೇಚನಮ್ ಇತಿ ಜ್ಞಾತವ್ಯಮ್ ।**

'ವಿಭವಾದನೇಕಾನಿ ಲಕ್ಷಣಾನಿ' ಎಂಬುದರಿಂದ ನಿಖಿಲಪೂರ್ಣಗುಣೈಕದೇಹತ್ವ, ನಿರ್ದೋಷತ್ವ ಇತ್ಯಾದಿಗ್ರಂಥದಲ್ಲಿ ಹೇಳಲ್ಪಟ್ಟ ಸಕಲ ಲಕ್ಷಣಗಳು ಸಂಗ್ರಹಿಸಲ್ಪಟ್ಟಿವೆ. ಉಪಪಾದನೆಮಾಡುವ ಪ್ರಮೇಯ-ದಲ್ಲಿ ವಿಶೇಷವಿರುವುದರಿಂದ ನಿಖಿಲಪೂರ್ಣಗುಣೈಕದೇಹತ್ವಾದಿಗಳನ್ನೇ ವಿವೇಚನೆ ಮಾಡಿದ್ದಾರೆ. ನಿರ್ದೋಷತ್ವವಿಷಯದಲ್ಲಿ ಹಾಗಿಲ್ಲದ ಕಾರಣ ಪ್ರತ್ಯೇಕವಾಗಿ ವಿವೇಚನೆ ಮಾಡಿರುವುದಿಲ್ಲ.

## ಲಕ್ಷಣವಷ್ಟೇ ಅಲ್ಲ ಪ್ರಮಾಣವನ್ನೂ ಹೇಳಿದ್ದಾರೆ

ವಾಕ್ಯಾರ್ಥಚಂದ್ರಿಕಾ – ಲಕ್ಷಣೇನ ವ್ಯಾವೃತ್ತಸ್ವರೂಪಸ್ಯ ಬುದ್ಧ್ಯಾರೂಢತ್ವೇಽಪಿ, ಮಾನಾಧೀನತ್ವಾತ್ ಮೇಯಸಿದ್ಧಿಃ, ಲಕ್ಷಣೋಕ್ತಿಮಾತ್ರಪರತ್ವಾದಪಿ ಲಕ್ಷಣಪ್ರಮಾಣೋಭಯಪರತ್ವಸ್ಯ ಜ್ಯಾಯಸ್ತ್ವಾತ್, ಉಭಯಪರತಯಾ ಶ್ಲೋಕಂ ಯೋಜಯತಿ – ಅಥವೇತಿ ॥

ಲಕ್ಷಣದಿಂದ ವ್ಯಾವೃತ್ತಸ್ವರೂಪವು ಬುದ್ಧ್ಯಾರೂಢವಾಗುತ್ತದೆ. ಪ್ರಮೇಯವು ಪ್ರಮಾಣಾಧೀನವಾಗಿದೆ. ಕೇವಲ ಲಕ್ಷಣಪರತ್ವವನ್ನು ಸಮರ್ಥನೆ ಮಾಡುವುದಕ್ಕಿಂತ ಲಕ್ಷಣ ಹಾಗೂ ಪ್ರಮಾಣ ಉಭಯ -ಪರತ್ವವನ್ನು ಸಮರ್ಥನೆ ಮಾಡುವುದು ಶ್ರೇಷ್ಠವಾಗಿದೆ. ಆದ್ದರಿಂದ ನಾರಾಯಣಮ್ ಇತ್ಯಾದಿ ಮಂಗಳಶ್ಲೋಕವನ್ನು ಲಕ್ಷಣ ಹಾಗೂ ಪ್ರಮಾಣ ಇತ್ಯಾದಿ ಉಭಯಪರವಾಗಿ ವ್ಯಾಖ್ಯಾನ ಮಾಡಲು 'ಅಥವಾ' ಇತ್ಯಾದಿ ಗ್ರಂಥವು ಹೊರಟಿದೆ.

ವಾಕ್ಯಾರ್ಥಚಂದ್ರಿಕಾ– ಅನ್ಯಥಾಽಪೀತಿ ॥ 'ನಿರ್ಗುಣತ್ವದೋಷಿತ್ವಾದಿನಾ' ಇತ್ಯರ್ಥಃ । ತರ್ಹೀತಿ ॥ ನಿಖಿಲವೇದೈರುಕ್ತಗುಣವಿಶಿಷ್ಟನಾರಾಯಣಸ್ಯೈವ ವಚನ ಇತ್ಯರ್ಥಃ।

'ಅನ್ಯಥಾಪಿ' ಎಂಬುದಕ್ಕೆ ನಿರ್ಗುಣತ್ವ, ದೋಷಿತ್ವ ಮೊದಲಾದವುಗಳಿಂದ ಎಂದರ್ಥ. 'ತರ್ಹಿ' ಎಂಬ ಪದದ ಅರ್ಥ ಹೀಗಿದೆ – ಸಮಸ್ತವೇದಗಳಿಂದ ಹಿಂದೆ ಹೇಳಲ್ಪಟ್ಟ ಗುಣವಿಶಿಷ್ಟನಾದ ನಾರಾಯಣನೇ ಪ್ರತಿಪಾದ್ಯನಾಗಿದ್ದಾನೆಂದು ಹೇಳಿದರೆ ಧರ್ಮಾದಿಗಳು ಸಿದ್ಧವೇ ಆಗದಿರಬೇಕಾದೀತು.

## ರಸಘಟ್ಟ
## 'ಅಖಿಲೈಃ ಸುವಾಕ್ಯೈಃ' ಎಂಬುದು ಲಕ್ಷಣವಲ್ಲ

ಕಂಬಾಲೂರು ರಾಮಚಂದ್ರತೀರ್ಥರು – ಅಥವಾ ಅಸ್ಮಿನ್ ಪಕ್ಷೇ 'ನಿಖಿಲೇ'ತ್ಯಾದಿಕಂ ಲಕ್ಷಣಪ್ರದರ್ಶನಪರಮ್ । 'ಸುವಾಕ್ಯೈಃ' 'ಆಪ್ಯತಮಮ್' ಇತ್ಯಾದಿಕಂ ತು ನಾರಾಯಣೇ ಪ್ರಣಾಮಪ್ರದರ್ಶನಪರಮ್ ಇತಿ ಭಾವಃ। ಅನ್ಯಥಾಽಪ್ಯುಚ್ಯತ ಇತಿ ॥ 'ನಿಖಿಲಪೂರ್ಣಗುಣೇ'ತ್ಯಾದಿ ಉಕ್ತಲಕ್ಷಣವೈಪರೀತ್ಯೇನ ವೇದಾದ್ಯೇಕದೇಶೇ ನಾರಾಯಣಃ ಪ್ರತಿಪಾದ್ಯತ ಇತಿ ಕಥಂ ವೇದೇನೋಕ್ತ-ಲಕ್ಷಣವಿಶಿಷ್ಟೋ ನಾರಾಯಣಃ ಪ್ರತಿಪತ್ತವ್ಯ ಇತಿ ಭಾವಃ । ಅಪರಾಮರ್ಶೇತಿ ॥ ವೇದೈಕದೇಶೇ ಆಪಾತತಃ ಅನ್ಯಥಾಪ್ರತೀತಾವಪಿ ಅಖಿಲವೇದವಿಚಾರೇ ಕ್ರಿಯಮಾಣೇ ಉಕ್ತಲಕ್ಷಣವಿಶಿಷ್ಟನಾರಾಯಣಃ ಪ್ರತೀಯತ ಇತಿ ವೇದೇನ ತಲ್ಲಕ್ಷಣವಿಶಿಷ್ಟನಾರಾಯಣಸಿದ್ಧಿಃ ಯುಕ್ತಾ ಇತಿ ಭಾವಃ।





ಈ ಪಕ್ಷದಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬುದು ನಾರಾಯಣನ ಲಕ್ಷಣ. ಈ ವಿಷಯದಲ್ಲಿ ಸುವಾಕ್ಯೈಃ ಅಪ್ರತಮಮ್ ಇತ್ಯಾದಿಗಳು ಹೇತುವಾಗಿವೆ. ಆದ್ದರಿಂದ ನಾರಾಯಣನ ವಿಷಯದಲ್ಲಿ ಸುವಾಕ್ಯೈಃ ಅಪ್ರತಮಮ್ ಎಂಬುದು ಪ್ರಮಾಣವನ್ನು ಪ್ರದರ್ಶನ ಮಾಡುತ್ತಿವೆ. 'ಅನ್ಯಥಾಪ್ಯುಚ್ಯತೇ' ಎಂಬುದರ ಅಭಿಪ್ರಾಯ ಹೀಗಿದೆ – ನಿಖಿಲಪೂರ್ಣಗುಣೈಕದೇಹಂ ಇತ್ಯಾದಿಯಾಗಿ ಯಾವ ಲಕ್ಷಣವು ಹೇಳಲ್ಪಟ್ಟಿದೆಯೋ ಅದಕ್ಕೆ ವಿಪರೀತವಾಗಿ ವೇದಾದ್ಯೇಕದೇಶಗಳಿಂದ ನಾರಾಯಣನು ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ವೇದದಿಂದ ನಾರಾಯಣನೇ ಸಕಲಗುಣಪರಿಪೂರ್ಣನಾಗಿದ್ದಾನೆಂದು ಹೇಗೆ ತಿಳಿಯುವುದು? ಎಂಬುದು ಇದರ ಅಭಿಪ್ರಾಯ. ಅದಕ್ಕೆ 'ಅಪರಾಮರ್ಶಪೂರ್ವಕತ್ವಾತ್' ಎಂದು ಉತ್ತರಿಸಿದ್ದಾರೆ. ವೇದೈಕದೇಶದಲ್ಲಿ ಆಪಾತತಃ ಹಾಗೆ ಅನ್ಯಥಾಪ್ರತೀತವಾದರೂ ಸಮಸ್ತವೇದವನ್ನು ವಿಚಾರಮಾಡಿದಾಗ 'ನಿಖಿಲಪೂರ್ಣಗುಣೈಕದೇಹತ್ವ' ಎಂಬ ಲಕ್ಷಣವಿಶಿಷ್ಟನಾದ ನಾರಾಯಣನೇ ಪ್ರತೀತನಾಗುತ್ತಾನೆ. ಹೀಗೆ ವೇದದಿಂದ ಗುಣೈಕದೇಹತ್ವವಿಶಿಷ್ಟನಾದ ನಾರಾಯಣನು ಸಿದ್ಧವಾಗುತ್ತಾನೆಂಬುದು ಯುಕ್ತವಾಯಿತು.

**ಕಾಶಿಕಾ – ಏಕದೇಶೇ 'ಕೇವಲೋ ನಿರ್ಗುಣಶ್ಚ' 'ಜನಿತೋಽತ ವಿಷ್ಣೋಃ' ಇತ್ಯಾದೌ । ತತ್ ಪ್ರತೀತೇಃ – ನಿರ್ಗುಣತ್ವಜನ್ಯತ್ವಾದಿ ಪ್ರತೀತೇಃ । 'ಅಪರಾಮರ್ಶಪೂರ್ವಕತ್ವಾತ್' ವಾಕ್ಯಾಂತರವಿರೋಧಾದಿ ಅವಿಚಾರಮೂಲತ್ವಾತ್ ವಿಷ್ಣೋಃ ಅಖಿಲವೇದಾದಿವೇದ್ಯತ್ವೇನ ನಿರ್ಗುಣತ್ವಾದಿಶ್ರುತೇಃ ನಿರವಕಾಶಸಗುಣತ್ವಾದಿಶ್ರುತ್ಯವಿರುದ್ಧಾರ್ಥಕತ್ವಸ್ಯೈವ ನ್ಯಾಯ್ಯತ್ವಾದಿತಿ ಭಾವಃ ।**

'ಏಕದೇಶೇ' ಎಂದರೆ 'ಕೇವಲೋ ನಿರ್ಗುಣಶ್ಚ' 'ಜನಿತೋಽತ ವಿಷ್ಣೋಃ' ಇತ್ಯಾದಿ ವೇದೈಕದೇಶದಲ್ಲಿ ಎಂದರ್ಥ. 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ನಿರ್ಗುಣತ್ವವನ್ನು ವಿಷ್ಣುವಿನಲ್ಲಿ ಹೇಳುತ್ತಿದೆ. 'ಜನಿತೋಽತ ವಿಷ್ಣೋಃ' ಎಂಬ ಶ್ರುತಿಯು ಜನ್ಯತ್ವವನ್ನು ಹೇಳುತ್ತಿದೆ. ಈ ಅರ್ಥಗಳು ಬೇರೆ ವಾಕ್ಯಗಳ ವಿರೋಧದ ಬಗ್ಗೆ ವಿಚಾರ ಮಾಡದೇ ತಿಳಿಯಲ್ಪಟ್ಟವುಗಳು. ಆದ್ದರಿಂದ ವಿಷ್ಣುವು ಅಖಿಲವೇದಪ್ರತಿಪಾದ್ಯನಾಗಿರುವುದರಿಂದ ನಿರ್ಗುಣತ್ವಶ್ರುತಿಗೆ ನಿರವಕಾಶವಾದ ಸಗುಣತ್ವಾದಿಶ್ರುತಿಗಿಂತ ಅವಿರುದ್ಧವಾದ ಅರ್ಥವನ್ನೇ ಹೇಳುವುದು ನ್ಯಾಯಸಮ್ಮತವಾಗಿದೆ ಎಂಬ ಅಭಿಪ್ರಾಯವನ್ನು ಈ ಸಂದರ್ಭದಲ್ಲಿ ತಿಳಿಯಬೇಕು.

## ಸುಧಾ-ಪರಿಮಳಸಾರ

ವೈಭವೋಪೇತನಾದ ನಾರಾಯಣನಲ್ಲಿ ಅನೇಕ ಲಕ್ಷಣಗಳನ್ನು ಹೇಳಲಾಯಿತು. ಆ ಲಕ್ಷಣಗಳಿಗೆ





ಪ್ರಮಾಣವನ್ನು ಹೇಳಲು ಇದೇ ಮಂಗಳಶ್ಲೋಕವು ಪ್ರವೃತ್ತವಾಗಿದೆ. ಮುಖ್ಯವಾಗಿ 'ನಿಖಿಲ-ಪೂರ್ಣಗುಣೈಕದೇಹಂ' ಎಂಬ ವಿಶೇಷಣದಿಂದ ಗುಣಪರಿಪೂರ್ಣತ್ವಪ್ರಮೇಯವನ್ನು ಈ ಶ್ಲೋಕದಲ್ಲಿ ಸಮರ್ಥನೆ ಮಾಡಲಾಗಿದೆ. ಅದಕ್ಕಾಗಿ 'ಆಪ್ತತಮಮ್' 'ಸುವಾಕ್ಯೈಃ' ಎಂಬುದನ್ನು ಪ್ರಮಾಣವನ್ನಾಗಿ ಉಲ್ಲೇಖ ಮಾಡಿದ್ದಾರೆ. ವಾಸ್ತವಿಕವಾಗಿ ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ನಿರ್ಗುಣತ್ವವನ್ನು, 'ಜನಿತೋಽತ ವಿಷ್ಣೋಃ' ಎಂಬ ಶ್ರುತಿಯು ಜನ್ಯತ್ವವನ್ನು ಹೇಳಿದೆ. ಹೀಗೆ ವೇದೇಕದೇಶಗಳಲ್ಲಿ ಅನ್ಯಥಾ ಪ್ರತೀತವಾಗುತ್ತದಲ್ಲವೇ? ಎಂದು ಪ್ರಶ್ನೆ ಮಾಡಬಾರದು. ಪರಾಮರ್ಶ ಮಾಡದೇ ಇದ್ದಾಗ ಹಾಗೆ ಅಪಾರ್ಥವಾಗುತ್ತದೆ. ನಿಜವಾಗಿಯೂ ಸಮಸ್ತ ವೇದಗಳಿಂದ ಗುಣಪರಿಪೂರ್ಣನಾಗಿಯೇ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆ. ಹಾಗಾದರೆ ಧರ್ಮಾಧರ್ಮಗಳ ಸಿದ್ಧಿ ಹೇಗೆ? ಎಂದು ಪ್ರಶ್ನಿಸಬಾರದು. ಅಮುಖ್ಯವೃತ್ತಿಯಿಂದ ಧರ್ಮಾದಿಗಳು ಪ್ರತಿಪಾದ್ಯವಾಗುತ್ತವೆ. ಮುಖ್ಯವೃತ್ತಿಯಿಂದಷ್ಟೇ ಪರಮಾತ್ಮನು ಪ್ರತಿಪಾದ್ಯ-ನಾಗುತ್ತಾನೆ. ಜಗತ್ಕರ್ತೃತ್ವವೆಂಬ ಕಾರಣದಿಂದ ಗುಣಪರಿಪೂರ್ಣತ್ವವಷ್ಟೇ ಸಿದ್ಧವಾಗುವುದಲ್ಲ ನಿರ್ದೋಷತ್ವವೂ ಸಿದ್ಧವಾಗುತ್ತದೆ. ಏಕೆಂದರೆ ಯಾರಲ್ಲಿ ದೋಷಗಳಿವೆಯೋ ಅವನು ಜಗತ್ತನ್ನು ನಿರ್ಮಾಣ ಮಾಡಲು ಸಮರ್ಥನಾಗುವುದಿಲ್ಲ.

## ಪರಿಮಳದ ವೈಶಿಷ್ಟ್ಯ

* ನಾರಾಯಣನು ಗುಣಪರಿಪೂರ್ಣನಾಗಿದ್ದಾನೆಂಬ ವಿಷಯದಲ್ಲಿ ಎಂಟು ಹೇತುಗಳನ್ನು ಸ್ಪಷ್ಟವಾಗಿ ಸಮರ್ಥಿಸಿದ್ದಾರೆ.

* ಕರ್ತೃತ್ವಾತ್ ಸಗುಣಂ ಬ್ರಹ್ಮ ಎಂಬ ಭಾಗವತದ ಮಾತಿಗೆ ನಿಮಿತ್ತಕಾರಣತ್ವವೆಂಬ ಹೇತುವಿನಿಂದ ಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆಂದು ವ್ಯಾಖ್ಯಾನ ಮಾಡಿದ್ದಾರೆ.

## ಜಗಜ್ಜನ್ಮಾದಿಕಾರಣತ್ವದ ಸಮರ್ಥನೆ (ಐದನೆಯ ವ್ಯಾಖ್ಯಾನ)

**ಶ್ರೀಮನ್ನ್ಯಾಯಸುಧಾ– ಯದ್ವಾ ನಾರಾಯಣಸ್ಯ ದೇಹಸದ್ಭಾವೇ ದುಃಖಾದಿ-ದೋಷಾನುಷಂಗಃ । ತದಭಾವೇ ಜ್ಞಾನಾದಿಗುಣಾಭಾವಃ । ಉಭಯಥಾಽಪಿ ಜಗಜ್ಜನ್ಮಾದಿಕಾರಣತ್ವಾಸಂಭವ ಇತ್ಯಾಶಂಕ್ಯ ಉಕ್ತಮ್ – ನಿಖಿಲಪೂರ್ಣಗುಣೈಕ-**

**ದೇಹಂ ನಿರ್ದೋಷಮ್ ಇತಿ ॥ ದೇಹವತ್ತ್ವಾತ್ ಜ್ಞಾನಾದಿಗುಣಪೂರ್ಣಃ । ತಸ್ಯಾಪಿ ನಿಖಿಲಪೂರ್ಣಗುಣಮಾತ್ರತ್ವೇನ ದುಃಖಾದಿದೋಷರಹಿತಶ್ಚ ಇತಿ ।**

ನಾರಾಯಣನಿಗೆ ದೇಹವಿದ್ದರೆ ದುಃಖಾದಿದೋಷಗಳು ಕೂಡ ಬರಬೇಕಾಗುತ್ತವೆ. ದೇಹವಿಲ್ಲವಾದರೆ ಜ್ಞಾನಾದಿಗುಣಗಳು ಕೂಡ ಬರುವುದಿಲ್ಲ. ಹೀಗೆ ದೇಹವಿದೆ ಅಥವಾ ದೇಹವಿಲ್ಲವೆಂಬ ಯಾವುದೇ ಪಕ್ಷವನ್ನು ಒಪ್ಪಿದರೂ ಕೂಡ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ? ಎಂಬ ಆಶಂಕೆಯು ಪ್ರಾಪ್ತವಾದರೆ ಅದಕ್ಕೆ ಉತ್ತರವನ್ನು ನೀಡಲು 'ನಿಖಿಲಪೂರ್ಣಗುಣೈಕದೇಹಂ' ಮತ್ತು 'ನಿರ್ದೋಷಂ' ಎಂಬ ಎರಡು ವಿಶೇಷಣಗಳನ್ನು ನೀಡಿದ್ದಾರೆ. ದೇಹವಿರುವುದರಿಂದ ಜ್ಞಾನಾದಿಗುಣಪರಿಪೂರ್ಣನಾಗಿದ್ದಾನೆ. ಆ ಗುಣಗಳು ಸಮಸ್ತವಾಗಿಯೂ ಮತ್ತು ಪೂರ್ಣವಾಗಿಯೂ ಇವೆ ಎಂದು ಹೇಳಿದ್ದರಿಂದ ಪ್ರಾಕೃತವಾದ ದೇಹವುಳ್ಳವರಿಗೆ ಯಾವ ದುಃಖಾದಿಗಳು ಬರುತ್ತವೋ ಅವು ನಾರಾಯಣನಿಗೆ ಬರುವುದಿಲ್ಲ. ಆದ್ದರಿಂದ ಗುಣಪೂರ್ಣನಾಗಿ ನಿರ್ದೋಷನಾಗಿರುವುದರಿಂದ ನಾರಾಯಣನು ಜಗಜ್ಜನ್ಮಾದಿಕಾರಣನೆಂದು ಸಿದ್ಧವಾಗುತ್ತದೆ.

## ಅಥವಾ ಜನ್ಮಾದಿಕಾರಣತ್ವವೇ ಲಕ್ಷಣ

**ಪರಿಮಳ–** ನನು ಜನ್ಮಾದಿಹೇತುತ್ವಮೇವ ಅಶರೀರಸ್ಯ ಅಯುಕ್ತಮ್ ಇತಿ ವಾದಿನಂ ಪ್ರತಿ ಕಥಂ ತತ್ಸಾಧನಮ್? ಕಿಂಚ ಜನ್ಮಾದಿಹೇತುತ್ವಮೇವ ಜನ್ಮಾದಿಸೂತ್ರೇ ಲಕ್ಷಣತ್ವೇನ ಪ್ರಸಿದ್ಧಮ್ ಇತ್ಯತಃ, ಅಸ್ತು ಇದಮೇವ ಲಕ್ಷಣಮ್ । ಏತದುಪಪಾದಕತ್ವೇನ 'ನಿಖಿಲ' ಇತ್ಯಾದಿ ಪ್ರಾಪ್ತಮ್ ಇತಿ ಭಾವೇನಾಽಹ – ಯದ್ವೇತಿ ॥

ಶರೀರ ಇಲ್ಲದವನಿಗೆ ಜನ್ಮಾದಿಕಾರಣತ್ವವೇ ಕೂಡುವುದಿಲ್ಲ ಯಾವ ವಾದಿಯು ಹೇಳುತ್ತಾನೋ ಅವನನ್ನು ಕುರಿತು ಜನ್ಮಾದಿಕಾರಣತ್ವದಿಂದ ಗುಣಪರಿಪೂರ್ಣತ್ವ ಹಾಗೂ ನಿರ್ದೋಷತ್ವಗಳನ್ನು ಹೇಗೆ ಸಾಧನೆ ಮಾಡುವುದು? ಮತ್ತು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಿಂದ





ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಲಕ್ಷಣವೆಂದು ಸಿದ್ಧವಾಗಿದೆ. ಹೀಗಿರುವಾಗ ಗುಣಪರಿಪೂರ್ಣತ್ವವು ಬ್ರಹ್ಮನ ಲಕ್ಷಣವೆಂದು ಹೇಗೆ ಸಾಧಿಸುವುದು? ಅಷ್ಟೇ ಅಲ್ಲದೆ ಜಗಜ್ಜನ್ಮಾದಿಕಾರಣತ್ವವು ಗುಣಪರಿಪೂರ್ಣತ್ವಕ್ಕೆ ಹೇತುವಾಗಿದೆ ಎಂದು ಸಾಧಿಸುವುದು ಹೇಗೆ ಯುಕ್ತವಾಗುತ್ತದೆ?

ಈ ಆಶಂಕೆಯನ್ನು ಪರಿಹಾರ ಮಾಡಲು ಜನ್ಮಾದಿಕಾರಣತ್ವವೇ ನಾರಾಯಣನ ಲಕ್ಷಣವಾಗಿದೆ. ಅದಕ್ಕೆ ಉಪಪಾದಕವಾಗಿ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳು ಇರುತ್ತವೆ. ಈ ಅಭಿಪ್ರಾಯದಿಂದ ''ಯದ್ವಾ'' ಇತ್ಯಾದಿ ಗ್ರಂಥವು ಹೊರಟಿದೆ.

ವಿಶೇಷವಿಚಾರ – 'ಜನ್ಮಾದ್ಯಸ್ಯ ಯತಃ' ಸೂತ್ರದಿಂದ ಜಗಜ್ಜನ್ಮಾದಿಕಾರಣತ್ವವೇ ನಾರಾಯಣನ ಲಕ್ಷಣವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಪ್ರಕೃತದಲ್ಲಿಯೂ ಅದನ್ನೇ ನಾರಾಯಣನ ಲಕ್ಷಣವೆಂದು ಅಂಗೀಕರಿಸಬೇಕು. ಆದರೆ ಆ ಲಕ್ಷಣವು ನಾರಾಯಣನಿಗೆ ಕೂಡುವುದಿಲ್ಲ.

ಏಕೆಂದರೆ, ನಾರಾಯಣನಿಗೆ ದೇಹವಿದೆಯೇ ಅಥವಾ ಇಲ್ಲವೇ? ಎಂದು ಪ್ರಶ್ನಿಸಿದಾಗ ದೇಹವಿದೆ ಎಂದು ಒಪ್ಪಿದರೆ, ಜಗತ್ತಿನಲ್ಲಿ ದೇಹವಿರುವವರಿಗೆ ದುಃಖಾದಿದೋಷಗಳೂ ಕಂಡಿರುವುದರಿಂದ ನಾರಾಯಣನಿಗೂ ದುಃಖಾದಿದೋಷಗಳು ಬರಬೇಕಾದೀತು. ನಾರಾಯಣನಲ್ಲಿ ದುಃಖಾದಿದೋಷಗಳನ್ನು ಅಂಗೀಕರಿಸಿದರೆ, ದುಃಖಾದಿದೋಷಯುಕ್ತರಾದ ಯಾರಿಗೂ ಜಗಜ್ಜನ್ಮಾದಿಕಾರಣತ್ವವು ಕಂಡಿಲ್ಲವಾದ್ದರಿಂದ ನಾರಾಯಣನಿಗೂ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ. ದುಃಖಾದಿದೋಷಗಳನ್ನು ದೂರವಿರಿಸಲು ನಾರಾಯಣನಿಗೆ ದೇಹವಿಲ್ಲವೆಂದು ಅಂಗೀಕರಿಸಿದರೆ, ಆಗಲೂ ನಾರಾಯಣನಿಗೆ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ. ಏಕೆಂದರೆ ಜಗತ್ತಿನಲ್ಲಿ ದೇಹವಿಲ್ಲದವರಿಗೆ ಜ್ಞಾನಾದಿಗುಣಗಳೂ ಕಂಡಿಲ್ಲ. ನಾರಾಯಣನೂ ದೇಹರಹಿತನಾದರೆ ಅವನೂ ಜ್ಞಾನಾದಿಗುಣಹೀನನಾಗಬೇಕಾದೀತು. ಜ್ಞಾನಾದಿಗುಣಹೀನನಾದವನು ಸೃಷ್ಟಿಗೆ ಕಾರಣನಾಗಲಾರ ಎಂದು ಜಗತ್ತಿನಲ್ಲಿ ಕಂಡಿದೆ. ಆದ್ದರಿಂದ ನಾರಾಯಣನೂ ಜ್ಞಾನಾದಿಗುಣಹೀನನಾದರೆ ಅವನೂ ಜಗಜ್ಜನ್ಮಾದಿಕಾರಣನಾಗಲಾರ.

ಈ ರೀತಿಯಾದ ಪ್ರಶ್ನೆಯನ್ನು ಅಂಗೀಕರಿಸಿ ಜಗಜ್ಜನ್ಮಾದಿಕಾರಣತ್ವವೇ ಲಕ್ಷಣ, ಇದನ್ನು ಸಮರ್ಥಿಸಲು 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿವಿಶೇಷಣಗಳನ್ನು ಹೇಳಿರುತ್ತಾರೆ ಎಂದು ಮಂಗಳಪದ್ಯಕ್ಕೆ ಐದನೇ ರೀತಿಯಾಗಿ ವ್ಯಾಖ್ಯಾನಿಸಿದ್ದಾರೆ.





## ಜಗಜ್ಜನ್ಮಾದಿಕಾರಣನಿಗೆ ಶರೀರವಿದೆ

ಪರಿಮಳ– ದುಃಖಾದಿದೋಷೇತಿ ॥ 'ಕರಣವಚ್ಚೇನ್ನ ಭೋಗಾದಿಭ್ಯಃ' ಇತ್ಯಾದಿನಾ ಸೂತ್ರಕೃತೈವ ಪತ್ಯುರಧಿಕರಣೇ ತಥಾ ವಕ್ಷ್ಯಮಾಣತ್ವಾತ್ ಇತಿ ಭಾವಃ । ತಸ್ಯಾಪೀತಿ ॥ 'ವಿಕರಣತ್ವಾತ್ ನೇತಿ ಚೇತ್ ತದುಕ್ತಮ್' 'ಆಹ ಚ ತನ್ಮಾತ್ರಮ್' ಇತ್ಯಾದಿಷು ಸೂತ್ರೇಷು ವಕ್ಷ್ಯಮಾಣತ್ವಾದಿತಿ ಭಾವಃ ।

'ದುಃಖಾದಿದೋಷೇತಿ' ॥ ಪತ್ಯುರಧಿಕರಣದಲ್ಲಿರುವ 'ಕರಣವಚ್ಚೇನ್ನ ಭೋಗಾದಿಭ್ಯಃ' ಮೊದಲಾದ ಸೂತ್ರಗಳಿಂದ ಸ್ವತಃ ಸೂತ್ರಕಾರರೇ ಹೀಗೆ ಹೇಳುತ್ತಾರೆ. – ದೋಷಗಳಿದ್ದರೆ ಜಗಜ್ಜನ್ಮಾದಿಕಾರಣತ್ವವು ಬರುವುದಿಲ್ಲ ಎಂದು. ಆದ್ದರಿಂದ ದುಃಖಾದಿದೋಷಸಂಬಂಧವು ಜಗಜ್ಜನ್ಮಾದಿಕಾರಣತ್ವವನ್ನು ವಿರೋಧಿಸುತ್ತದೆ. ಇದರಿಂದ 'ಅಂತವತ್ವಮ್ ಅಸರ್ವಜ್ಞತಾ ವಾ' ಎಂಬ ಸೂತ್ರದಲ್ಲಿ ಜ್ಞಾನಾದಿಗುಣಗಳು ಇಲ್ಲದಿದ್ದರೆ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ ಎಂದು ಹೇಳುತ್ತಾರೆ. ಈ ಅಭಿಪ್ರಾಯದಿಂದಲೇ 'ಉಭಯಥಾಪಿ' ಎಂದು ಹೇಳಿದ್ದು ಸಂಗತವಾಗಿದೆ. 'ವಿಕರಣತ್ವಾನ್ನೇತಿ ಚೇತ್ ತದುಕ್ತಮ್' 'ಆಹ ಚ ತನ್ಮಾತ್ರಮ್' ಇತ್ಯಾದಿ ಸೂತ್ರಗಳಲ್ಲಿ ಜ್ಞಾನಾನಂದಾತ್ಮಕವಾದ ಶರೀರವು ಪರಮಾತ್ಮನಿಗೆ ಇದೆ ಎಂದು ಹೇಳಿದ್ದಾರೆ. ಆದ್ದರಿಂದ ಜಗಜ್ಜನ್ಮಾದಿಕಾರಣತ್ವವು ಯುಕ್ತವಾಗುತ್ತದೆ.

## ಬಾಧಕಪರಿಹಾರವೂ ಕೂಡ ಆವಶ್ಯಕ

ವಾಕ್ಯಾರ್ಥಚಂದ್ರಿಕಾ– ಸಾಧಕವತ್ ಬಾಧಕಪರಿಹಾರಸ್ಯಾಪಿ ಆವಶ್ಯಕತ್ವೇನ ಲಕ್ಷಣಪ್ರಮಾಣೋಕ್ತಿಮಾತ್ರಪರತ್ವಾದಪಿ ವಿಶೇಷಣದ್ವಯಸ್ಯ ಬಾಧಕಪರಿಹಾರಾರ್ಥತ್ವಾಭ್ಯುಪಗಮೇಽರ್ಥವಿಶೇಷಲಾಭಂ ಮನ್ವಾನಃ ಪಕ್ಷಾಂತರಮಾಹ – ಯದ್ವೇತಿ ॥

ಸಾಧಕಪ್ರಮಾಣವು ಎಷ್ಟು ಮುಖ್ಯವೋ ಬಾಧಕಪರಿಹಾರವೂ ಅಷ್ಟೇ ಮುಖ್ಯ . ಈ ಉದ್ದೇಶದಿಂದ ಮಂಗಳಶ್ಲೋಕದಲ್ಲಿರುವ ವಿಶೇಷಣದ್ವಯಗಳು ಹೇಗೆ ನಾರಾಯಣನ ಲಕ್ಷಣವನ್ನು ಹಾಗೂ ಪ್ರಮಾಣವನ್ನೂ ಹೇಳುತ್ತವೋ ಅದರಂತೆ ಬಾಧಕಪರಿಹಾರವನ್ನು ಕೂಡ ಮಾಡುತ್ತವೆ. ಹೀಗೆ ಅಂಗೀಕಾರ ಮಾಡುವುದರಿಂದ ಅರ್ಥವಿಶೇಷವನ್ನು ಅಂಗೀಕರಿಸಿದಂತಾಗುತ್ತದೆ. ಈ ಅಭಿಪ್ರಾಯದಿಂದ ಮತ್ತೊಂದು ಪಕ್ಷವನ್ನು 'ಯದ್ವಾ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.





## ರಸಘಟ್ಟ

## ವಿಶೇಷಣಗಳಿಂದ ಅಸಂಭವಪರಿಹಾರ

**ಯಾದುಪತ್ಯ – ನಿಖಿಲಪೂರ್ಣಗುಣೈಕದೇಹಂ ನಿರ್ದೋಷಮ್ ಇತಿ ವಿಶೇಷಣದ್ವಯಂ ಲಕ್ಷಣಪರತಯಾ ವ್ಯಾಖ್ಯಾತಮ್; ಇದಾನೀಂ ತದಸಂಭವಪರಿಹಾರಾರ್ಥತಯಾऽಪಿ ವ್ಯಾಚಷ್ಟೇ – ಯದ್ವಾ ನಾರಾಯಣಸ್ಯ ಇತಿ ॥**

'ನಿಖಿಲಪೂರ್ಣಗುಣೈಕದೇಹಂ' 'ನಿರ್ದೋಷಮ್' ಎಂಬೆರಡು ವಿಶೇಷಣಗಳನ್ನು ನಾರಾಯಣನ ಲಕ್ಷಣಗಳೆಂದು ಹಿಂದೆ ವ್ಯಾಖ್ಯಾನ ಮಾಡಿದರು. ಈಗ ಅಸಂಭವಪರಿಹಾರಾರ್ಥಕ್ಕೋಸ್ಕರವೂ ಈ ವಿಶೇಷಣಗಳು ಸಾರ್ಥಕ ಎಂದು – 'ಯದ್ವಾ' ಇತ್ಯಾದಿ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

## 'ನಿಖಿಲಪೂರ್ಣಗುಣೈಕದೇಹಂ' ಎಂಬುದರ ವ್ಯಾಖ್ಯಾನ

**ಕಾಶೀಟಿಪ್ಪಣೀ– ನ ಚ ದೇಹಾಭಾವೇ ಜ್ಞಾನಾದಿಗುಣಾಭಾವಸ್ಯೈವ ಶಂಕಿತತಯಾ ದೇಹವತ್ತ್ವೇನ ತನ್ನಿರಾಸಮಾತ್ರಸ್ಯ ಕರ್ತವ್ಯತ್ವಾತ್ ಗುಣಪೂರ್ಣತಾಪರ್ಯಂತೋಕ್ತಿಃ ಅಸಂಗತಾ ಇತಿ ವಾಚ್ಯಮ್ । ಗುಣಾಭಾವೇ ಗುಣಪೂರ್ಣತ್ವಮ್ ಅತ್ಯಂತಾಸಂಭಾವಿತಮ್ ಇತಿ ಶಂಕಾಭಿಪ್ರಾಯಾತ್ । ಅನಾದ್ಯನಂತಾಚಿಂತ್ಯಜಗನ್ನಿರ್ಮಾಣಾದೇರ್ಗುಣಪೂರ್ಣತ್ವಮಂತರೇಣ ಅಸಂಭವಾತ್ ತತ್ಸಂಭವಾಯ ಗುಣಪೂರ್ಣತ್ವಸ್ಯ ಸಂಭವನಿಯತತ್ವಾಚ್ಚ ದೇಹಸ್ಯ ಯತ್ಕಿಂಚಿತ್ ಗುಣಾತ್ಮಕತ್ವೇ ತದ್ವಿರೋಧದೋಷಶಂಕಾಯಾ ಗುಣಸ್ಯ ಅಪೂರ್ಣತ್ವೇ ತದಪಾಯೇ ದೋಷಶಂಕಾಯಾಶ್ಚ ಆಪತ್ತೇಃ – ನಿಖಿಲಪೂರ್ಣೇತಿ ॥ ಗುಣದೇಹವತ್ ತದನ್ಯದೇಹಸ್ಯಾಪಿ ಸತ್ತ್ವೇ ತತ್ಪ್ರಯುಕ್ತದೋಷವತ್ತ್ವಾಪತ್ತೇಃ ಗುಣಮಾತ್ರತ್ವಾತ್ ಇತ್ಯೇಕಶಬ್ದಾರ್ಥ ಉಕ್ತಃ । ಗುಣೇತರದೇಹರಾಹಿತ್ಯಾತ್ ಇತಿ ಯಾವತ್ । ತಾದೃಶದೇಹಸ್ಯೈವ ದುಃಖಾದಿಪ್ರಯೋಜಕತ್ವಾದಿತಿ ಭಾವಃ । ಅತ್ರ ದುಃಖಸ್ಯೈವ ಸಾಕ್ಷಾತ್ಕರ್ತೃತ್ವೋಪಯೋಗ್ಯಾನಂದೋದ್ರೇಕವಿರೋಧಿತ್ವಾತ್ ಮುಖತೋ ಗ್ರಹಣಮಿತಿ ಮಂತವ್ಯಮ್ ॥**

ದೇಹ ಇಲ್ಲದಿದ್ದರೆ ಜ್ಞಾನಾದಿಗುಣಗಳು ಕೂಡ ಬರಲು ಸಾಧ್ಯವಿಲ್ಲ ಎಂಬುದಾಗಿ ಆಶಂಕಿಸಲಾಗಿದೆ. ಇದಕ್ಕೆ ಉತ್ತರವನ್ನು ನೀಡಲು ದೇಹವಿರುವುದರಿಂದ ಜ್ಞಾನಾದಿಗುಣಾಭಾವವು ಯುಕ್ತವಾಗುವುದಿಲ್ಲ ಎಂದರೆ ಸಾಕು. ಗುಣಪೂರ್ಣತ್ವವನ್ನು ಸಮರ್ಥನೆ ಮಾಡುವುದು ಅಸಂಗತವಾಗುತ್ತದಲ್ಲವೇ?

ಇದು ತಪ್ಪು. ಗುಣವಿಲ್ಲವೆಂಬ ಆಕ್ಷೇಪಕ್ಕೆ ಗುಣಪರಿಪೂರ್ಣತ್ವ ಬಾರದೇ ಇರಬೇಕಾದೀತು! ಎಂಬುದೇ ಆಶಂಕೆಯ ಅಭಿಪ್ರಾಯ. ಅನಾದ್ಯನಂತವಾದ ಅಚಿಂತ್ಯವಾದ ಜಗನ್ನಿರ್ಮಾಣಾದಿಗಳು ಗುಣ-ಪರಿಪೂರ್ಣತ್ವವಿಲ್ಲದೇ ಯುಕ್ತವಾಗುವುದಿಲ್ಲ. ಆದಕ್ಕಾಗಿ ಗುಣಪರಿಪೂರ್ಣತ್ವವನ್ನು ಒಪ್ಪಲೇ ಬೇಕು. ದೇಹವು ಕೆಲವೇ ಗುಣಗಳಿಂದ ಕೂಡಿದ್ದರೆ ತದ್ವಿರೋಧಶಂಕೆಯು ಪ್ರಾಪ್ತವಾಗುತ್ತದೆ. ಗುಣವು ಅಪೂರ್ಣವಾದರೆ ಅಥವಾ ಗುಣವೇ ಇಲ್ಲದೇ ಇದ್ದರೆ ದೋಷಶಂಕೆಗೆ ಅವಕಾಶವಿದೆ. ಆದಕ್ಕಾಗಿ 'ನಿಖಿಲಪೂರ್ಣಗುಣೈಕದೇಹಂ' ಎಂದಿದ್ದಾರೆ.

ನಾರಾಯಣನಿಗೆ ಗುಣದೇಹ ಹೇಗಿದೆಯೋ ಅದರಂತೆ ಬೇರೆ ದೇಹವೂ ಕೂಡ ಇರಬಹುದು. ಆಗ ತತ್ತ್ವಯುಕ್ತವಾದ ದೋಷವುಳ್ಳವನಾಗುತ್ತಾನೆ. ಆದಕ್ಕೋಸ್ಕರ ಏಕಶಬ್ದವನ್ನು ಪ್ರಯೋಗಿಸಿದ್ದಾರೆ. ನಾರಾಯಣನ ದೇಹ ಕೇವಲ ಗುಣರೂಪವೇ ಹೊರತು ದೋಷರೂಪವಲ್ಲ. ಗುಣೇತರವಾದ ದೇಹವು ಅವನಿಗಿಲ್ಲ ಎಂಬುದನ್ನು ಏಕಶಬ್ದವು ಹೇಳುತ್ತಿದೆ. ಅಂಥ ದೋಷದೇಹವಷ್ಟೇ ದುಃಖಾದಿಗಳಿಗೆ ಪ್ರಯೋ-ಜಕವಾಗಿದೆ. ಪ್ರಕೃತ ದುಃಖವೇ ಜಗತ್ಕರ್ತೃತ್ವಕ್ಕೆ ನೇರವಾಗಿ ವಿರೋಧಿಯಾಗಿದೆ. ಏಕೆಂದರೆ ಕರ್ತೃತ್ವಕ್ಕೆ ಉಪಯೋಗಿಯಾದ ಆನಂದೋದ್ರೇಕಕ್ಕೆ ವಿರೋಧಿಯಾಗಿದೆ. ಆದ್ದರಿಂದ ದುಃಖವನ್ನು ಮುಖತಃ ಗ್ರಹಣ ಮಾಡಿದ್ದಾರೆ.

## ಸುಧಾಪರಿಮಳಸಾರ

ಜನ್ಮಾದಿಕಾರಣತ್ವವೆಂಬ ಹೇತುವೇ ನಾರಾಯಣನಲ್ಲಿ ಕೂಡುವುದಿಲ್ಲ. ಏಕೆಂದರೆ ಅವನಿಗೆ ಶರೀರವೇ ಇಲ್ಲ. ಶರೀರವಿಲ್ಲದವನಿಗೆ ಜನ್ಮಾದಿಕಾರಣತ್ವವು ಹೇಗೆ ಕೂಡುತ್ತದೆ? ಜನ್ಮಾದಿ-ಕಾರಣತ್ವವೆಂಬ ಹೇತುವೇ ಕೂಡದಿದ್ದಾಗ ತನ್ಮೂಲಕವಾಗಿ ನಿಖಿಲಪೂರ್ಣಗುಣೈಕದೇಹತ್ವ-ವನ್ನು ಸಮರ್ಥಿಸಲು ಕೂಡ ಸಾಧ್ಯವಾಗುವುದಿಲ್ಲ. ಮತ್ತು ಜನ್ಮಾದ್ಯಧಿಕರಣದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವವೇ ನಾರಾಯಣನ ಲಕ್ಷಣವಾಗಲಿ. ನಿಖಿಲಪೂರ್ಣಗುಣೈಕದೇಹತ್ವವೇ ಹೇತುವಾಗಲಿ? ಈ ಪ್ರಶ್ನೆಗೆ ಉತ್ತರಿಸುವ ಮೂಲಕ ಜಗಜ್ಜನ್ಮಾದಿಕಾರಣತ್ವವನ್ನು ಸಾಧನೆ ಮಾಡುತ್ತಿದ್ದಾರೆ. ಸೂತ್ರಕಾರರು ದೋಷಗಳಿದ್ದರೆ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ-ವೆಂದು ಪತ್ಯುರಧಿಕರಣದಲ್ಲಿ ಹೇಳಿದ್ದಾರೆ. ಜ್ಞಾನಾನಂದಾದಿಗುಣಗಳು ಇಲ್ಲದಿದ್ದರೆ ಜಗತ್ಕಾ-ರಣತ್ವವು ಕೂಡುವುದಿಲ್ಲವೆಂದು 'ಅಂತವತ್ತ್ವಮ್ ಅಸರ್ವಜ್ಞತಾ ವಾ' ಎಂಬಲ್ಲಿ ಹೇಳಿದ್ದಾರೆ. ಇವೆರಡನ್ನೂ ಕೂಡಿಸಬೇಕೆಂದರೆ ಜ್ಞಾನಾನಂದಾತ್ಮಕವಾದ ಗುಣಗಳು ಪರಮಾತ್ಮನ ಶರೀರ-ವಾಗಿರುವುದರಿಂದ ಜಗತ್ಕಾರಣತ್ವವು ಯುಕ್ತವಾಗುತ್ತದೆಂದು ಒಪ್ಪಬೇಕು.





## ಪರಿಮಳದ ವೈಶಿಷ್ಟ್ಯ

* ದೇಹವಿದ್ದರೆ ದೋಷವಿರಬೇಕೆಂಬುದನ್ನು ಪತ್ಯುರಧಿಕರಣದಲ್ಲಿ ಸೂತ್ರಕಾರರು ಹೇಳಿದ್ದಾರೆ. ದೇಹವಿಲ್ಲದಿದ್ದರೆ ಗುಣಗಳು ಇರುವುದಿಲ್ಲ ಎಂಬುದನ್ನು 'ಅಂತವತ್ವ'ಸೂತ್ರದಲ್ಲಿ ಹೇಳಿದ್ದಾರೆ. ಎರಡು ರೀತಿಯಲ್ಲೂ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ ಎಂಬುದರ ಉಪಪಾದನೆ ಸುಂದರವಾಗಿದೆ.

* 'ವಿಕರಣತ್ವಾತ್ ನೇತಿ ಚೇತ್ ತದುಕ್ತಮ್' ಇತ್ಯಾದಿ ಸೂತ್ರಗಳಲ್ಲಿ ಪರಮಾತ್ಮನ ಶರೀರ ಕೇವಲ ಗುಣಾತ್ಮಕವೆಂದು ಸಮರ್ಥನೆ ಮಾಡಿದ್ದಾರೆ ಎಂಬುದರ ಉಪಪಾದನೆಯು ಅಪೂರ್ವವಾಗಿದೆ.

## ನಾರಾಯಣಶಬ್ದಾರ್ಥ (ಆರನೆಯ ವ್ಯಾಖ್ಯಾನ)

**ಶ್ರೀಮನ್ನ್ಯಾಯಸುಧಾ– ಅಥವಾ ನಾಯಂ ನಾರಾಯಣಶಬ್ದೋ ಡಿತ್ಥಾದಿಶಬ್ದ ಇವ ಭಗವತಿ ಸಾಂಕೇತಿಕೋ ಘಟಾದಿಶಬ್ದ ಇವ ವಾ ರೂಢಿಮಾತ್ರಪ್ರವೃತ್ತಃ। ಕಿಂತು ವಿಶಿಷ್ಟಗುಣಾನಪಿ ಆಚಷ್ಟ ಇತಿ ಜ್ಞಾಪಯನ್ ತದರ್ಥಮನೇನ ಕಥಯತಿ। ಏತದಪಿ ಸ್ತುತ್ಯರ್ಥಮ್ ಅವಗಂತವ್ಯಮ್।**

ಈ ನಾರಾಯಣಶಬ್ದವು ಡಿತ್ಥ ಮೊದಲಾದ ಶಬ್ದಗಳಂತೆ ಪರಮಾತ್ಮನಲ್ಲಿ ಸಾಂಕೇತಿಕವಲ್ಲ. ಘಟ ಮೊದಲಾದ ಶಬ್ದಗಳಂತೆ ಕೇವಲ ರೂಢವೂ ಅಲ್ಲ. ಮತ್ತೇನೆಂದರೆ ನಾರಾಯಣನೆಂಬ ಶಬ್ದವು ವಿಶಿಷ್ಟಗುಣಗಳನ್ನು ಕೂಡ ಹೇಳುತ್ತಿದೆ ಎಂಬುದನ್ನು ಈ ಮಂಗಳಶ್ಲೋಕದಿಂದ ಹೇಳುತ್ತಿದ್ದಾರೆ. ಈ ನಾರಾಯಣಶಬ್ದಾರ್ಥವನ್ನು ಹೀಗೆ ವಿವರಿಸುವುದು ಕೂಡ ಕೇವಲ ಸ್ತೋತ್ರಕ್ಕೋಸ್ಕರ ಎಂದು ತಿಳಿಯಬೇಕು.

## ನಾರಾಯಣನ ನಮಸ್ಕಾರವು ಅಸಂಗತವಲ್ಲ

**ಪರಿಮಳ– ನನ್ವೇವಮಸ್ತು ವಿಶೇಷಣಾನಾಮ್ ಅರ್ಥವತ್ತ್ವಂ ಯದಿ ನಾರಾಯಣ–**





ನತಿರೇವಾತ್ರ ಯುಕ್ತಾ ಸ್ಯಾತ್ । ಸೈವಾಯುಕ್ತಾ । ಬ್ರಹ್ಮತಂತ್ರಾರಂಭೇ ಬ್ರಹ್ಮನತೇರೇವ ಕಾರ್ಯತ್ವಾತ್, ಇತ್ಯತಃ

'ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಮ್ ।
ಸ ಏವ ಬ್ರಹ್ಮಶಬ್ದಾರ್ಥೋ ನಾರಾಯಣಪದೋದಿತಃ ॥' ಇತಿ ।

'ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ ।
ಗುಣಾ ನಾರಾ ಇತಿ ಜ್ಞೇಯಾಸ್ತದ್ವಾನ್ ನಾರಾಯಣಃ ಸ್ಮೃತಃ ।
ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಮ್ ॥'

ಇತಿ ಚ ವಕ್ಷ್ಯಮಾಣದಿಶಾ ಗುಣಪೂರ್ತಿವಾಚಿಬ್ರಹ್ಮಶಬ್ದಸಮಾನಾರ್ಥವಾಚಿತ್ವಾತ್ ನಾರಾಯಣಶಬ್ದಸ್ಯ ತದರ್ಥೋ ಬ್ರಹ್ಮೈವ, ಅತಃ ಬ್ರಹ್ಮತಂತ್ರಾರಂಭೇ ನಾರಾಯಣನತಿರ್ಯುಕ್ತಾ ಇತಿ ಭಾವೇನ ಪ್ರಯೋಜನಾಂತರಮಾಹ – ಅಥವೇತಿ ॥

ಎಲ್ಲಾ ವಿಶೇಷಣಗಳೂ ಸಾರ್ಥಕವೆಂದು ಸಮರ್ಥನೆ ಮಾಡಿದಿರಿ. ಇದನ್ನು ಯಾವಾಗ ಒಪ್ಪಬಹುದೆಂದರೆ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ನಾರಾಯಣನ ನಮಸ್ಕಾರವು ಯುಕ್ತವೆಂದು ಸಿದ್ಧವಾದರೆ; ಆದರೆ ಇದು ಅಯುಕ್ತವಾಗಿದೆ. ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ಬ್ರಹ್ಮನನ್ನೇ ನಮಸ್ಕಾರ ಮಾಡಬೇಕು; ಬೇರೆಯವರನ್ನು ನಮಸ್ಕಾರ ಮಾಡುವುದು ಅಸಂಗತವಾಗುತ್ತದೆ?

ಈ ಆಕ್ಷೇಪಕ್ಕೆ ಉತ್ತರ ಹೀಗೆ ತಿಳಿಯಬೇಕು.

'ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಮ್ ।
ಸ ಏವ ಬ್ರಹ್ಮಶಬ್ದಾರ್ಥೋ ನಾರಾಯಣಪದೋದಿತಃ ॥'

ಓಂಕಾರವು ಗುಣಪರಿಪೂರ್ಣತ್ವವನ್ನು ಹೇಳುತ್ತಿದೆ. ಇದು ಬ್ರಹ್ಮಶಬ್ದದ ಅರ್ಥವೇ ಆಗಿದೆ. ನಾರಾಯಣ ಪದದ ಪ್ರತಿಪಾದ್ಯವಾದ ಅರ್ಥವು ಕೂಡ ಇದೇ ಆಗಿದೆ.





'ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ ।
ಗುಣಾ ನಾರಾ ಇತಿ ಜ್ಞೇಯಾಸ್ತದ್ವತ್ ನಾರಾಯಣಃ ಸ್ಮೃತಃ ।
ಬ್ರಹ್ಮಶಬ್ದೋऽಪಿ ಹಿ ಗುಣಪೂರ್ತಿಮೇವ ವದತ್ಯಯಮ್ ॥

ದೋಷಶಬ್ದ, ಅರಶಬ್ದ, ಛಿದ್ರಶಬ್ದಗಳು ಪರ್ಯಾಯಗಳಾಗಿವೆ. ಆದ್ದರಿಂದ ನಾರಾ ಎಂದರೆ ಗುಣಗಳು ಎಂದರ್ಥ. ಅಂಥ ಗುಣಭರಿತನಾದವನೇ ನಾರಾಯಣನಾಗಿದ್ದಾನೆ. ಬ್ರಹ್ಮಶಬ್ದಾರ್ಥವು ಕೂಡ ಗುಣಪೂರ್ಣತ್ವವೇ ಆಗಿದೆ.

ಹೀಗೆ ಮುಂದೆ ಹೇಳುವ ಮೂಲಕ ಗುಣಪರಿಪೂರ್ಣತ್ವವನ್ನು ಪ್ರತಿಪಾದನೆ ಮಾಡುವ ಬ್ರಹ್ಮಶಬ್ದಕ್ಕೆ ಸಮಾನವಾದ ಅರ್ಥವನ್ನು ಹೇಳುವ ಕಾರಣ ನಾರಾಯಣಶಬ್ದದ ಅರ್ಥ ಬ್ರಹ್ಮನೇ ಆಗಿದ್ದಾನೆ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ ನಾರಾಯಣನ ನಮಸ್ಕಾರವು ಯುಕ್ತವೇ ಆಗಿದೆ. ಈ ಅಭಿಪ್ರಾಯದಿಂದ ವಿಶೇಷಣಗಳಿಗೆ ಬೇರೆ ಪ್ರಯೋಜನವನ್ನು ಹೇಳಲು 'ಅಥವಾ' ಇತ್ಯಾದಿ ಗ್ರಂಥವು ಹೊರಟಿದೆ.

ವಿಶೇಷವಿಚಾರ – ನಾರಾಯಣನನ್ನೇ ನಮಸ್ಕರಿಸುವುದು ಉಚಿತವೆಂದು ಸಿದ್ಧವಾದರೆ ಹಿಂದೆ ತಿಳಿಸಿದಂತೆ ವಿಶೇಷಣಗಳಿಗೆ ಪ್ರಯೋಜನಗಳು ಸಿದ್ಧವಾಗಬಹುದು. ಆದರೆ ನಾರಾಯಣನ ನಮಸ್ಕಾರವೇ ಅಯುಕ್ತವಾದದ್ದು. ಏಕೆಂದರೆ ಬ್ರಹ್ಮಮೀಮಾಂಸದ ಆರಂಭದಲ್ಲಿ ಬ್ರಹ್ಮನನ್ನೇ ನಮಸ್ಕರಿಸಬೇಕು ಹೊರತು ನಾರಾಯಣನನ್ನಲ್ಲ ಅಲ್ಲವೇ?

ಈ ಪ್ರಶ್ನೆ ಸರಿಯಲ್ಲ. ಯಾಕೆಂದರೆ 'ಸ ಏವ ಬ್ರಹ್ಮಶಬ್ದಾರ್ಥಃ ನಾರಾಯಣಪದೋದಿತಃ' ಎಂದು ಮುಂದೆ ತಿಳಿಸುವಂತೆ ಗುಣಪೂರ್ಣತ್ವವನ್ನು ಹೇಳುವ ಬ್ರಹ್ಮಶಬ್ದ ಹಾಗೂ ನಾರಾಯಣಶಬ್ದಗಳು ಸಮಾನಾರ್ಥಕಗಳಾಗಿವೆ. ಆದ್ದರಿಂದ ನಾರಾಯಣಶಬ್ದದ ಅರ್ಥವೇ ಬ್ರಹ್ಮನಾದ್ದರಿಂದ ಬ್ರಹ್ಮತಂತ್ರದ ಆರಂಭದಲ್ಲಿ ನಾರಾಯಣನ ನಮಸ್ಕಾರ ಅತ್ಯಂತ ಸೂಕ್ತವೇ ಆಗಿದೆ ಎಂಬುದನ್ನು ಸಮರ್ಥಿಸುವವರಾಗಿ ಮಂಗಳಪದ್ಯಕ್ಕೆ ಆರನೇ ರೀತಿಯಾದ ವ್ಯಾಖ್ಯಾನವನ್ನು ಮಾಡುತ್ತಿದ್ದಾರೆ.

ಸಾಂಕೇತಿಕಶಬ್ದವೆಂದರೆ, ''ಈ ಅರ್ಥದಲ್ಲಿ ಶಬ್ದಕ್ಕೆ ಶಕ್ತಿ ಇಲ್ಲದಿದ್ದರೂ ಈ ಶಬ್ದದಿಂದ ಈ ಅರ್ಥವನ್ನು ತಿಳಿಯಬೇಕು''(ಅಸ್ಮಾಚ್ಛಬ್ದಾದಯಮರ್ಥೋ ಬೋದ್ಧವ್ಯಃ) ಎಂಬ ಇಚ್ಛೆಯಿಂದ ನಿಯಮಿಸಲ್ಪಟ್ಟ ಶಬ್ದ ಎಂದು ಅರ್ಥ. 'ಅರವಿರುದ್ಧಾಃ ನಾರಾಃ' ಎಂಬುದಾಗಿ ಸಮಾಸ ಮಾಡಿದಾಗ 'ನ'ಕಾರವು

ವಿರೋಧಾರ್ಥಕವಾಯಿತು. ನಕಾರವನ್ನು ವಿರೋಧಾರ್ಥಕವಾಗಿ ಪರಿಗ್ರಹಿಸಿದಾಗ ಅವಿದ್ಯಾ, ಅಸುರ ಇತ್ಯಾದಿಶಬ್ದಗಳಂತೆ ನಕಾರವು ಲೋಪವಾಗಿ ನುಟ್‌ಆಗಮ ಬರುತ್ತದೆಂದು 'ನಲೋಪೋ ನಞಃ' ಇತ್ಯಾದಿ ಸೂತ್ರದಲ್ಲಿ ಹೇಳಿದ್ದಾರೆ. ಆದ ಕಾರಣ ಇಲ್ಲಿ ಅನರಾಯಣ ಎಂದೇ ರೂಪವಾಗಬೇಕು? ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ 'ನಭ್ರಾಟ್ ನಪಾನ್ನವೇದಾ ನಾಸತ್ಯಾ ನಮುಚಿನಕುಲನಖನಪುಂಸಕನಕ್ಷತ್ರ-ನಕ್ರನಾಕೇಷು ಪ್ರಕೃತ್ಯಾ' ಎಂಬ ಸೂತ್ರದಲ್ಲಿ ಸಮಾಸದಲ್ಲೂ ಕೆಲವು ಶಬ್ದಗಳಿಗೆ ನಞ್ ಲೋಪವಾಗು-ವುದಿಲ್ಲವೆಂದು ಹೇಳಿದ್ದಾರೆ. ಅದರಂತೆ ನಾರಾಯಣಶಬ್ದವೂ ಸಿದ್ಧವಾಗುತ್ತದೆ.

ಲೋಕದಲ್ಲಿ ಕೆಲವು ಶಬ್ದಗಳು ಸಾಂಕೇತಿಕಶಬ್ದಗಳಾದರೆ ಮತ್ತೆ ಕೆಲವು ಶಬ್ದಗಳು ಕೇವಲ ರೂಢ-ಗಳಾಗಿವೆ. ಈ ಶಬ್ದವು ಈ ಅರ್ಥವನ್ನು ಬೋಧಿಸಲಿ ಎಂಬ ವಕ್ತೃವಿನ ಅಭಿಪ್ರಾಯದಂತೆ ಅರ್ಥವನ್ನು ಬೋಧಿಸುವ ಶಬ್ದಗಳು ಸಾಂಕೇತಿಕಶಬ್ದಗಳು. ಡಿತ್ಥ,ದೇವದತ್ತ ಮೊದಲಾದ ಶಬ್ದಗಳು ಈ ಗುಂಪಿಗೆ ಸೇರುವ ಶಬ್ದಗಳು. ವಕ್ತೃವಿನ ಅಭಿಪ್ರಾಯವಿಲ್ಲದಿದ್ದರೂ ಹಿಂದಿನ ರೂಢಿಯಿಂದಲೇ ಅರ್ಥವನ್ನು ಬೋಧಿಸುವ ಶಬ್ದಗಳು ರೂಢಶಬ್ದಗಳು. ಘಟ, ಪಟಾದಿಶಬ್ದಗಳು ಈ ಗುಂಪಿಗೆ ಸೇರುತ್ತವೆ. ನಾರಾಯಣಶಬ್ದವು 'ಡಿತ್ಥಾ'ದಿಶಬ್ದಗಳಂತೆ ಸಾಂಕೇತಿಕವೂ ಅಲ್ಲ. ಘಟಾದಿಶಬ್ದಗಳಂತೆ ಕೇವಲ ರೂಢ ಶಬ್ದವೂ ಅಲ್ಲ. ನಾರಾಯಣಶಬ್ದವು 'ನಿಖಿಲಪೂರ್ಣಗುಣತ್ವ' ಮೊದಲಾದ ಭಗವಂತನ ಅಸಾಧಾರಣ-ಗುಣಗಳನ್ನು ಹೇಳುತ್ತವೆ ಎಂದು ತಿಳಿಸುತ್ತಾ, ನಾರಾಯಣಶಬ್ದಾರ್ಥವನ್ನು ಮೊದಲಪದ್ಯದಿಂದ ಆನಂದತೀರ್ಥರು ನಿರೂಪಿಸುತ್ತಾರೆ. ನಾರಾಯಣಶಬ್ದಾರ್ಥವನ್ನು ಅನೇಕರೀತಿ ಹೇಳುವುದೂ ಕೂಡಾ ಭಗವಂತನ ಸ್ತುತಿಗಾಗಿ ಎಂದು ತಿಳಿಯಬೇಕು.

೧. ಅರ ಎಂದರೆ ದೋಷ. ದೋಷವಿರುದ್ಧವಾದ ಗುಣಗಳೇ ನಾರಗಳು. ಆ ಗುಣಗಳಿಗೆ ಆಶ್ರಯ -ನಾದವನು. ಅಂದರೆ ಗುಣಪೂರ್ಣನಾದವನು ನಾರಾಯಣ. (ನಾರಾಣಾಂ ಅಯನಃ ನಾರಾಯಣಃ ಎಂದು ವಿಗ್ರಹವಾಕ್ಯ)

೨. ದೋಷಗಳಿಗೆ ಆಶ್ರಯನಾಗದವನು ಅಂದರೆ ನಿರ್ದೋಷನಾದವನು ನಾರಾಯಣ. (ಅರಾಣಾಂ ಅಯನಂ ನ ಭವತೀತಿ ನಾರಾಯಣಃ ಎಂದು ವಿಗ್ರಹವಾಕ್ಯ)

೩. ಉಪಕಾರವನ್ನು ಮಾಡುವುದರ ಮೂಲಕ ನರರೊಂದಿಗೆ ಸಂಬಂಧವನ್ನು ಹೊಂದಿರುವ ವೇದಗಳೇ ನಾರಗಳು. ಆ ವೇದಗಳಿಗೆ ಆಶ್ರಯನಾದವನು ಅಂದರೆ ವೇದಪ್ರತಿಪಾದ್ಯನು ನಾರಾಯಣ. (ನರಾಣಾಂ ಇಮೇ ನಾರಾಃ, ನಾರಾಣಾಂ ಅಯನಃ ನಾರಾಯಣಃ ಎಂದು ವಿಗ್ರಹವಾಕ್ಯ)





೪. ನರರಿಗೆ ಸಂಬಂಧಿಸಿದ ಸೃಷ್ಟಿ ಮೊದಲಾದದ್ದೇ ನಾರವೆನಿಸುತ್ತದೆ. ಆ ಸೃಷ್ಟ್ಯಾದಿಗಳನ್ನು ಮಾಡುವುದರ ಮೂಲಕ ಆಶ್ರಯನಾದವನು ಅಂದರೆ ನರರಿಗೆ ಸೃಷ್ಟ್ಯಾದಿಗಳನ್ನು ನೀಡುವವನು ನಾರಾಯಣ. (ನರಾಣಾಂ ಇದಂ ನಾರಂ, ನಾರಸ್ಯ ಅಯನಃ ನಾರಾಯಣಃ ಎಂದು ವಿಗ್ರಹವಾಕ್ಯ)

೫. ನರಸಮೂಹವೇ ನಾರ. ನರರ ಸಮೂಹದಿಂದ ವಂದ್ಯನಾಗುವುದರ ಮೂಲಕ ಆಶ್ರಯನಾದವನು ಅಂದರೆ ನರಸಮೂಹದಿಂದ ವಂದ್ಯನಾದವನು ನಾರಾಯಣ.(ನರಾಣಾಂ ಇದಂ ನಾರಂ, ನಾರಸ್ಯ ಅಯನಃ ನಾರಾಯಣಃ ಎಂದು ವಿಗ್ರಹವಾಕ್ಯ)

೬. ಸ್ವಾಮಿಯಾಗುವುದರ ಮೂಲಕ ನರರೊಂದಿಗೆ ಸಂಬಂಧವನ್ನು ಹೊಂದಿದ ಮುಖ್ಯವಾಯುವೇ ನಾರ. ಆ ಮುಖ್ಯಪ್ರಾಣನಿಗೆ ಹಾಗೂ ಮುಖ್ಯಪ್ರಾಣಾವತಾರರಾದ ನನಗೆ (ಆನಂದತೀರ್ಥರಿಗೆ) ಪರಮಪ್ರೇಮಾಸ್ಪದನಾಗುವುದರ ಮೂಲಕ ಆಶ್ರಯನಾದವನು ನಾರಾಯಣ. (ನರಾಣಾಂ ಅಯಂ ನಾರಃ, ನಾರಸ್ಯ ಅಯನಃ ನಾರಾಯಣಃ ಎಂದು ವಿಗ್ರಹವಾಕ್ಯ) ಹೀಗೆ ನಾರಾಯಣಶಬ್ದವು, ಮೊದಲ ಪದ್ಯದಲ್ಲಿ ಹೇಳಿರುವ ಗುಣಪೂರ್ಣತ್ವ, ನಿರ್ದೋಷತ್ವಮೊದಲಾದ ನಾರಾಯಣನ ಅಸಾಧಾರಣಧರ್ಮಗಳನ್ನು ಕ್ರಮವಾಗಿ ತಿಳಿಸುತ್ತದೆ ಎಂದು ತಿಳಿಯಬೇಕು.

## ಸಾಂಕೇತಿಕ ಮೊದಲಾದ ಶಬ್ದಾರ್ಥ

ಪರಿಮಳ– ಸಾಂಕೇತಿಕ ಇತಿ ॥ 'ಅಸ್ಮಾತ್ ಶಬ್ದಾತ್ ಅಯಮರ್ಥೋ ಬೋದ್ಧವ್ಯಃ ಇತೀಚ್ಛಯಾ ನಿಯಮಿತಃ' ಇತ್ಯರ್ಥಃ। ವಿಶಿಷ್ಟಗುಣಾನಪೀತಿ ॥ ನ ಕೇವಲಂ ರೂಢಃ ಕಿಂತು ನಿಖಿಲಪೂರ್ಣಗುಣತ್ವನಿರ್ದೋಷತ್ವಾದೀನ್ ಇತರಾಸಾಧಾರಣಾನ್ ಗುಣಾನಪಿ ಆಚಷ್ಟ ಇತ್ಯರ್ಥಃ। ತದರ್ಥಂ ನಾರಾಯಣಶಬ್ದಾರ್ಥಮ್ । ಅನೇನ = ಶ್ಲೋಕೇನ ಇತ್ಯರ್ಥಃ। ಸ್ತುತ್ಯರ್ಥಮ್ ಇತ್ಯುಪಲಕ್ಷಣಂ ಬ್ರಹ್ಮಶಬ್ದಸಮಾನಾರ್ಥತ್ವಸೂಚನಾರ್ಥಂ ಚ ಇತ್ಯಪಿ ಧ್ಯೇಯಮ್ । 'ನಿಖಿಲ' ಇತ್ಯನೇನೈವ ಬ್ರಹ್ಮಪದಸಮಾನಾರ್ಥತ್ವಲಾಭಾತ್ ಇತರನಿರುಕ್ತಿಸಾರ್ಥಕ್ಯಾಯ 'ಸ್ತುತ್ಯರ್ಥಮ್' ಇತ್ಯೇವೋಕ್ತಮ್ ।

ಸಾಂಕೇತಿಕಶಬ್ದವೆಂದರೆ ಈ ಅರ್ಥದಲ್ಲಿ ಈ ಶಬ್ದಕ್ಕೆ ಶಕ್ತಿಯಿಲ್ಲದಿದ್ದರೂ ಈ ಶಬ್ದಕ್ಕೆ ಈ ಅರ್ಥ ತಿಳಿಯಬೇಕು ಎಂಬ ಇಚ್ಛೆಯಿಂದ ನಿಯಮಿಸಲ್ಪಟ್ಟ ಶಬ್ದ ಎಂದರ್ಥ. 'ವಿಶಿಷ್ಟಗುಣಾನಪಿ





ಆಚಷ್ಟೇ' ಎಂದು ಹೇಳಿದ್ದಾರೆ. ನಾರಾಯಣಶಬ್ದವು ಕೇವಲರೂಢವಲ್ಲ. ಗುಣಪರಿಪೂರ್ಣತ್ವ ನಿರ್ದೋಷತ್ವ ಮೊದಲಾದ ಬೇರೆಯವರಲ್ಲಿ ಇಲ್ಲದ ಅಸಾಧಾರಣಗುಣಗಳನ್ನು ಕೂಡ ಹೇಳುತ್ತಿದೆ ಎಂದರ್ಥ.

'ತದರ್ಥಂ' ಎಂದರೆ ನಾರಾಯಣಶಬ್ದದ ಅರ್ಥವನ್ನು ಎಂದರ್ಥ. 'ಅನೇನ' ಎಂಬ ಪದಕ್ಕೆ ಶ್ಲೋಕದಿಂದ ಎಂದರ್ಥ. ಸ್ತುತ್ಯರ್ಥಂ ಎಂದು ಹೇಳಿರುವುದು ಉಪಲಕ್ಷಣವಾಗಿದೆ. ಬ್ರಹ್ಮಶಬ್ದಕ್ಕೆ ನಾರಾಯಣಶಬ್ದವು ಸಮಾನಾರ್ಥಕವಾಗಿದೆ ಎಂಬುದನ್ನು ಕೂಡ ಇಲ್ಲಿ ಸಂಗ್ರಹಿಸಬೇಕು. ನಿಖಿಲಪೂರ್ಣಗುಣೈಕದೇಹಂ ಎಂಬುದರಿಂದಲೇ ಬ್ರಹ್ಮಶಬ್ದದ ಸಮಾನಾರ್ಥತ್ವವು ತಿಳಿಯುತ್ತದೆ. ಆದ್ದರಿಂದ ಉಳಿದ ವಿಶೇಷಣಗಳಿಗೆ ಸಾರ್ಥಕ್ಯವು ಪ್ರಾಪ್ತವಾಗುವುದಕ್ಕಾಗಿ 'ಸ್ತುತ್ಯರ್ಥಮ್' ಎಂದು ಟೀಕೆಯಲ್ಲಿ ಹೇಳಿದ್ದಾರೆ.

## ಸಾಂಕೇತಿಕಶಬ್ದದ ನಿರ್ವಚನ

ವಾಕ್ಯಾರ್ಥಚಂದ್ರಿಕಾ– ಏವಂ ಪ್ರಕೃತ್ಯರ್ಥನಾರಾಯಣಸ್ವರೂಪನಿರ್ಧಾರಣಹೇತುಲಕ್ಷಣಾದಿಪರತಯಾ ವಿಶೇಷಣಾನಿ ವ್ಯಾಖ್ಯಾಯ ಪ್ರಕೃತ್ಯರ್ಥಕಥನಪರತಯಾಽಪಿ ತಾನಿ ವ್ಯಾಚಷ್ಟೇ – ಅಥವೇತಿ ॥ ಅರ್ಥಗತಪ್ರವೃತ್ತಿನಿಮಿತ್ತಮನಪೇಕ್ಷ್ಯ ವಕ್ತ್ರಭಿಪ್ರಾಯೇಣ ಅರ್ಥಪ್ರತ್ಯಾಯಕತ್ವಂ ಸಾಂಕೇ-ತಿಕತ್ವಮ್; ಅಖಂಡಶಕ್ತೀ ರೂಢಿಃ।

ಇಲ್ಲಿಯ ತನಕ ಪ್ರಕೃತ್ಯರ್ಥನಾದ ನಾರಾಯಣನ ಸ್ವರೂಪವನ್ನು ನಿರ್ಧಾರಮಾಡಲು ಕಾರಣವಾದ ಲಕ್ಷಣಾದಿಗಳನ್ನು ಹೇಳುವ ಮೂಲಕ ಮಂಗಳಶ್ಲೋಕದ ವಿಶೇಷಣಗಳನ್ನು ವ್ಯಾಖ್ಯಾನಮಾಡಿದ್ದಾಯಿತು. ಈಗ ಪ್ರಕೃತ್ಯರ್ಥವನ್ನು ಹೇಳುತ್ತಿವೆ ಎಂಬುದಾಗಿ ಅದೇ ವಿಶೇಷಣಗಳನ್ನು 'ಅಥವಾ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಸಾಂಕೇತಿಕತ್ವ ಎಂದರೆ ಅರ್ಥ 'ಅರ್ಥಗತಪ್ರವೃತ್ತಿನಿಮಿತ್ತಮನಪೇಕ್ಷ್ಯ ವಕ್ತ್ರಭಿಪ್ರಾಯೇಣ ಅರ್ಥಪ್ರತ್ಯಾಯಕತ್ವಂ'. 'ಅರ್ಥದಲ್ಲಿರುವ ಪ್ರವೃತ್ತಿನಿಮಿತ್ತವನ್ನು ಅಪೇಕ್ಷೆ ಪಡದೇ ವಕ್ತೃವಿನ ಅಭಿಪ್ರಾಯದಿಂದ ಅರ್ಥವನ್ನು ತಿಳಿಸುವ ಶಬ್ದವೇ ಸಾಂಕೇತಿಕ ಎಂದು ಕರೆಸಿಕೊಳ್ಳುತ್ತದೆ. ರೂಢಿ ಎಂದರೆ ಅಖಂಡಶಕ್ತಿ ಎಂದರ್ಥ.

## ರಸಘಟ್ಟ

## ಎಲ್ಲಾ ವಿಶೇಷಣಗಳೂ ನಾರಾಯಣಶಬ್ದಾರ್ಥ

ಆನಂದ – ನನು ತಥಾಪಿ ಮಹಾಯೋಗವಿದ್ವದ್‌ರೂಢಿಭ್ಯಾಂ ನಾರಾಯಣಶಬ್ದಸ್ಯ ವಿಷ್ಣುಪರತ್ವೇನ ತೇನೈವೋಕ್ತಸ್ಯ ಸರ್ವಸ್ಯಾಪ್ಯರ್ಥಸ್ಯ ವಕ್ತುಂ ಶಕ್ಯತ್ವಾತ್ ಏತೇಷಾಂ ವಿಶೇಷಣಾನಾಂ ವೈಯರ್ಥ್ಯಮ್ ಇತ್ಯತಃ, ನಾರಾಯಣಶಬ್ದಾರ್ಥಕಥನರೂಪತ್ವಾತ್ ನ ಏತೇಷಾಂ ವಿಶೇಷಣಾನಾಂ ವೈಯರ್ಥ್ಯಮಿತ್ಯಾಹ – ಅಥವೇತಿ ॥ ಏಕಸ್ಯ ಪಿತ್ರಾದೇರೇವ ಯತ್ರ ಪುತ್ರಾದಿರೂಪೇ ವಸ್ತುನಿ ಯಚ್ಛಬ್ದಪ್ರಯೋಗೇ ಸ್ವಾತಂತ್ರ್ಯಂ ತತ್ರ ತಚ್ಛಬ್ದಪ್ರಯೋಗಃ ಸಂಕೇತಃ, ಯತ್ರ ವಸ್ತುನಿ ಯಚ್ಛಬ್ದ-ಪ್ರಯೋಗೇ ಕಸ್ಯಾಪಿ ಸ್ವಾತಂತ್ರ್ಯಾಭಾವಃ ಸಾರ್ವಜನೀನಪ್ರಸಿದ್ಧಿರಿತಿ ಯಾವತ್ । ಸೈವ ರೂಢಿ-ರಿತ್ಯನಯೋರ್ಭೇದ ಇತಿ ದ್ರಷ್ಟವ್ಯಮ್ । ನನು ನಾರಾಯಣಶಬ್ದೋ ವಿಶಿಷ್ಟಗುಣಪರ ಇತ್ಯರ್ಥ-ಕಥನೇನ ಪ್ರಯೋಜನಾಭಾವಾತ್ ತದರ್ಥಕೈತದ್ವಿಶೇಷಣಾನಾಂ ವೈಯರ್ಥ್ಯಮಿತ್ಯತ ಆಹ – ಏತದಪೀತಿ ॥ ನಾರಾಯಣಶಬ್ದಸ್ಯ ವಿಶಿಷ್ಟಗುಣಪರತ್ವಕಥನಮ್ ಇತ್ಯರ್ಥಃ ॥

ನಾರಾಯಣಶಬ್ದವು ವಿಷ್ಣುಪರವೆಂದು ಸಿದ್ಧವಾಗಿದೆ. ಇದರಿಂದಲೇ ಎಲ್ಲಾ ಪ್ರಮೇಯವನ್ನು ಸಮರ್ಥಿಸಲು ಬರುತ್ತದೆ. ಉಳಿದ ವಿಶೇಷಣಗಳೇ ವ್ಯರ್ಥ? ಈ ಪ್ರಶ್ನೆಗೆ ನಾರಾಯಣಶಬ್ದಾರ್ಥವನ್ನೇ ಹೇಳಲು ಉಳಿದ ವಿಶೇಷಣಗಳು ಪ್ರಸಕ್ತವಾಗಿರುವುದರಿಂದ ವೈಯರ್ಥ್ಯದೋಷವಿಲ್ಲವೆಂಬುದನ್ನು 'ಅಥವಾ' ಇತ್ಯಾದಿ ಗ್ರಂಥವು ಪ್ರತಿಪಾದನೆ ಮಾಡುತ್ತಿದೆ.

ಸಂಕೇತಶಬ್ದ ಹಾಗೂ ರೂಢಶಬ್ದಗಳಿಗೆ ವೈಲಕ್ಷಣ್ಯ ಹೀಗಿದೆ – ತಂದೆಗೆ ಮಗನನ್ನು ಕುರಿತು ಯಾವ ಶಬ್ದವನ್ನು ಪ್ರಯೋಗ ಮಾಡಬೇಕೆಂಬುದರಲ್ಲಿ ಸ್ವಾತಂತ್ರ್ಯವಿದೆಯೋ, ಆ ಶಬ್ದದ ಪ್ರಯೋಗವನ್ನು ತಂದೆ ಮಾಡಿದರೆ ಅದು ಸಂಕೇತ ಎಂದು ಕರೆಸಿಕೊಳ್ಳುತ್ತದೆ. ಯಾವ ವಸ್ತುವಿನಲ್ಲಿ ಶಬ್ದಪ್ರಯೋಗ ಮಾಡಲು ಯಾರಿಗೂ ಕೂಡ ಸ್ವಾತಂತ್ರ್ಯವಿಲ್ಲವೋ ಅದು ರೂಢಿಯೆಂದು ಕರೆಸಿಕೊಳ್ಳುತ್ತದೆ. ನಾರಾ-ಯಣಶಬ್ದವು ವಿಶಿಷ್ಟಗುಣಗಳನ್ನು ಹೇಳುತ್ತದೆಂಬ ಅರ್ಥವನ್ನು ಹೇಳಿದ್ದರಿಂದ ಯಾವುದೇ ಪ್ರಯೋ-ಜನವಿಲ್ಲ. ಆ ನಾರಾಯಣಶಬ್ದದ ಅರ್ಥವನ್ನು ಹೇಳುವ ವಿಶೇಷಣಗಳಿಗೂ ಕೂಡ ಯಾವುದೇ ಪ್ರಯೋಜನವಿಲ್ಲ – ಈ ಆಶಂಕೆಯನ್ನು 'ಏತದಪಿ' ಎಂಬ ವಾಕ್ಯದಿಂದ ಪರಿಹರಿಸಿದ್ದಾರೆ. 'ಏತದಪಿ' ಎಂದರೆ ನಾರಾಯಣಶಬ್ದವು ವಿಶಿಷ್ಟಗುಣವನ್ನು ಹೇಳುತ್ತದೆಂಬುದೂ ಕೂಡ ಎಂದರ್ಥ.

## ಸುಧಾ-ಪರಿಮಳಸಾರ

ಇದು ಬ್ರಹ್ಮಮೀಮಾಂಸಾಶಾಸ್ತ್ರ. ಬ್ರಹ್ಮನ ಜಿಜ್ಞಾಸೆಯನ್ನು ಮಾಡಲು ಹೊರಟಿರುವ ಶಾಸ್ತ್ರ. ಪ್ರಾರಂಭದಲ್ಲಿ ಬ್ರಹ್ಮನನ್ನೇ ನಮಸ್ಕಾರ ಮಾಡುವುದು ಸಮಂಜಸವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಂಬಂಧಪಡದ ನಾರಾಯಣನನ್ನು ನಮಸ್ಕಾರ ಮಾಡುವುದು ಅಸಂಗತವಾಗುತ್ತದೆ. ಹೀಗೆ ಆಕ್ಷೇಪ ಮಾಡಿದರೆ ಬ್ರಹ್ಮ ಬೇರೆಯಲ್ಲ; ನಾರಾಯಣ ಬೇರೆಯಲ್ಲ. ಬ್ರಹ್ಮಶಬ್ದಾರ್ಥ ಬೇರೆಯಲ್ಲ; ನಾರಾಯಣಶಬ್ದಾರ್ಥ ಬೇರೆಯಲ್ಲ. ಬ್ರಹ್ಮಶಬ್ದವು ಯಾವ ಗುಣಪರಿಪೂರ್ಣತ್ವವನ್ನು ಹೇಳುತ್ತದೋ ನಾರಾಯಣಶಬ್ದವೂ ಕೂಡ ಅದನ್ನೇ ಹೇಳುತ್ತದೆ ಎಂಬ ಉತ್ತರವನ್ನು ತಿಳಿಯಬೇಕು. ಆದ್ದರಿಂದ ನಾರಾಯಣಶಬ್ದವು ದೇವದತ್ತ, ಡಿತ್ಥ ಮೊದಲಾದ ಶಬ್ದಗಳಂತೆ ಸಾಂಕೇತಿಕವಲ್ಲ; ಘಟಾದಿಶಬ್ದಗಳಂತೆ ರೂಢವೂ ಅಲ್ಲ; ಸಕಲಗುಣಪರಿಪೂರ್ಣತ್ವ, ದೋಷರಾಹಿತ್ಯ ಮೊದಲಾದ ವಿಶಿಷ್ಟಗುಣಗಳನ್ನು ಹೇಳುವ ಶಬ್ದವಾಗಿದೆ. ಮಂಗಳಶ್ಲೋಕದಲ್ಲಿರುವ ಉಳಿದೆಲ್ಲ ವಿಶೇಷಣಗಳು ಇದೇ ನಾರಾಯಣಶಬ್ದಾರ್ಥವನ್ನು ವಿವರಿಸುತ್ತಿವೆ. ಹೀಗೆ ಅನುವ್ಯಾಖ್ಯಾನಶ್ಲೋಕಕ್ಕೆ ಆರನೇ ವ್ಯಾಖ್ಯಾನವನ್ನು ತಿಳಿಯಬೇಕು.

## ಪರಿಮಳವೈಶಿಷ್ಟ್ಯ

* ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ನಾರಾಯಣನ ನಮಸ್ಕಾರವು ಅಸಂಗತವೆಂಬ ಶಂಕೆಯು ಸಂದರ್ಭೋಚಿತವಾಗಿದೆ.

* ಬ್ರಹ್ಮಶಬ್ದಾರ್ಥ ಹಾಗೂ ನಾರಾಯಣಶಬ್ದಾರ್ಥ ಒಂದೇ ಎಂಬ ಉಪಪಾದನೆ ಅತ್ಯಂತಸಂಗತವಾಗಿದೆ.

* ಅನುವ್ಯಾಖ್ಯಾನಶ್ಲೋಕದಲ್ಲಿ ನಾರಾಯಣಶಬ್ದದ ಅರ್ಥದಿಂದಲೇ ಎಲ್ಲಾ ಪ್ರಮೇಯವು ಸಿದ್ಧವಾಗುತ್ತದೆ. ಉಳಿದ ವಿಶೇಷಣಗಳು ಕೇವಲ ಸ್ತುತಿಗೋಸ್ಕರವೆಂಬ ಸಾರ್ಥಕ್ಯವನ್ನು ಸಮರ್ಥಿಸಲಾಗಿದೆ.

## ನಾರಾಯಣಶಬ್ದದ ಅರ್ಥವೇ ಉಳಿದ ವಿಶೇಷಣಗಳು

**ಶ್ರೀಮನ್ನ್ಯಾಯಸುಧಾ— ತಥಾ ಹಿ – ಅರಾ ದೋಷಾಃ, ತದ್ವಿರುದ್ಧತ್ವಾತ್ ಗುಣಾಃ ನಾರಾಃ, ತದಯನತ್ವಾತ್ ನಾರಾಯಣಃ । ಅರಾಣಾಮ್ ಅಯನಂ ನ**





**ಭವತೀತಿ ವಾ । ಉಪಕಾರಿತ್ವಾತ್ ನರಾಣಾಂ ಇಮೇ ನಾರಾಃ ವೇದಾದಯಃ ಪ್ರತಿಪಾದ್ಯತಯಾ ತದಯನತ್ವಾತ್ ವಾ । ನರಾಣಾಮ್ ಇದಂ ನಾರಮ್ ಉದ್ಧವಾದಿದಾತೃತಯಾ ತಸ್ಯ ಅಯನತ್ವಾತ್ ವಾ । ನರಸಮೂಹೋ ನಾರಂ ವಂದ್ಯತಯಾ ತದಯನತ್ವಾದ್ವಾ । ನರಾಣಾಮ್ ಅಯಮ್ ಅಧಿಪತಿಃ ನಾರೋ ಮುಖ್ಯವಾಯುಃ ಪರಮಪ್ರೇಮಾಸ್ಪದತಯಾ ತಸ್ಯ ಅಯನತ್ವಾತ್ ವಾ ಇತಿ ಯಥಾಕ್ರಮಮ್ ಅವಗಂತವ್ಯಮ್ ।**

ಅಥವಾ ನಾರಾಯಣಶಬ್ದಾರ್ಥ ಹೀಗಿದೆ – ದೋಷಗಳನ್ನು ಅರಾ ಎನ್ನುತ್ತಾರೆ. ಅರಗಳಿಗೆ ವಿರುದ್ಧವಾದವುಗಳು ಗುಣಗಳು. ನಾರಾ ಎಂದರೆ ಅರವಿರುದ್ಧವಾದ ಗುಣಗಳು ಎಂದರ್ಥ. ಇಂಥ ಗುಣಗಳಿಗೆ ಅಯನಂ = ಆಶ್ರಯನಾಗಿದ್ದಾನೆ. ಆದ್ದರಿಂದ ನಾರಾಯಣ = ಗುಣಾಶ್ರಯ.

ಅಥವಾ ಅರಾಯಣಃ ನ ಭವತೀತಿ ನಾರಾಯಣಃ ಎಂಬ ನಿಷ್ಪತ್ತಿಯಿಂದ ದೋಷಗಳಿಗೆ ಆಶ್ರಯನಾಗದವನು ನಾರಾಯಣ ಎನಿಸುತ್ತಾನೆ. ಇದರಿಂದ ನಿರ್ದೋಷತ್ವವು ತಿಳಿಯುತ್ತದೆ.

ಅಥವಾ ಉಪಕಾರಕಭಾವದಿಂದ ನರರಿಗೆ ಸಂಬಂಧಪಟ್ಟ ವೇದಗಳು ನಾರಾ ಎನಿಸುತ್ತವೆ. ಇಂಥ ವೇದಗಳಿಗೆ ಪ್ರತಿಪಾದ್ಯತ್ವಸಂಬಂಧದಿಂದ ಆಶ್ರಯನಾಗಿರುವುದರಿಂದ ನಾರಾಯಣ ಎನಿಸುತ್ತಾನೆ. ವೇದಪ್ರತಿಪಾದ್ಯನೆಂದರ್ಥ.

ನರರಿಗೆ ಸಂಬಂಧಪಟ್ಟ ಉತ್ಪತ್ತ್ಯಾದಿಗಳನ್ನು ನೀಡುವವನಾದ್ದರಿಂದ ದಾತೃಭಾವದಿಂದ ನಾರಾಯಣನು ಆಶ್ರಯನಾಗಿದ್ದಾನೆ. ಆದ್ದರಿಂದ 'ನಾರಾಯಣ' ಎಂಬ ಶಬ್ದಕ್ಕೆ ಉದ್ಭವಾದಿಗಳನ್ನು ನೀಡುವವನು ಎಂದರ್ಥ.

ಅಥವಾ ನರರ ಸಮೂಹವೇ ನಾರಾ ಎನಿಸುತ್ತದೆ. ಇಂಥ ನರಸಮೂಹಕ್ಕೆ ವಂದ್ಯತ್ವ-





ಭಾವದಿಂದ ಆಶ್ರಯನಾಗಿರುವ ಕಾರಣ ನಾರಾ ಎನಿಸುತ್ತಾನೆ. ನರಸಮೂಹದಿಂದ ವಂದ್ಯ ಎಂದಭಿಪ್ರಾಯ.

ಅಥವಾ ನರರಿಗೆ ಅಧಿಪತಿಯಾದವನು ಮುಖ್ಯಪ್ರಾಣ. ಇವನು ನಾರ ಎನಿಸುತ್ತಾನೆ. ಇಂಥ ಮುಖ್ಯಪ್ರಾಣನಿಗೆ ಪರಮಪ್ರೇಮವಿಷಯತ್ವಭಾವದಿಂದ ಆಶ್ರಯನಾಗಿರುವುದರಿಂದ ನಾರಾಯಣ ಎನಿಸುತ್ತಾನೆ. ಹೀಗೆ ಶ್ಲೋಕದಲ್ಲಿರುವ ವಿಶೇಷಣಗಳು ನಾರಾಯಣಶಬ್ದದ ಅರ್ಥವನ್ನು ಕ್ರಮವಾಗಿ ನಿರೂಪಣೆ ಮಾಡುತ್ತಿವೆ ಎಂದು ತಿಳಿಯಬೇಕು.

## ವಾಯುದೇವರಿಗೆ ನಾರಾಯಣನೊಬ್ಬನೇ ಪ್ರಿಯತಮ

ಪರಿಮಳ– 'ಅರಾಣಾಮ್ ಅಯನಂ ನ ಭವತಿ' ಇತ್ಯತ್ರ ಅರವಿರುದ್ಧಾ ನಾರಾ ಇತಿ ಪೂರ್ವತ್ರ ಚ ಅನರಾಯಣ ಇತಿ ಸ್ಯಾತ್ ಇತ್ಯಾದಿಚೋದ್ಯಂ ತು 'ದೋಷಾರಚ್ಛಿದ್ರಶಬ್ದಾನಾಮ್' ಇತ್ಯಾದಿವ್ಯಾಖ್ಯಾವಸರೇ ಅಧಿಕರಣಾಂತೇ ನಿರಸಿಷ್ಯತೇ ॥ ತಸ್ಯ ಅಯನತ್ವಾದ್ವಾ ಇತೀತಿ ॥ ಪರಮಪ್ರೇಮಾಸ್ಪದತಯಾ ವಾಯ್ವಯನೋಕ್ತ್ಯೈವ ವಾಯ್ವವತಾರತ್ವಾತ್ ಆಚಾರ್ಯಸ್ಯ 'ಮಮ ಪ್ರಿಯತಮಮ್' ಇತ್ಯೇತತ್ 'ನಾರಾಯಣಮ್' ಇತ್ಯನೇನ ಪ್ರಾಪ್ತಮೇವ ಇತಿ ಭಾವಃ ॥

'ಅರಾಣಾಮ್ ಅಯನಂ ನ ಭವತಿ' ಎಂಬುದಾಗಿ ನಾರಾಯಣಶಬ್ದಾರ್ಥವನ್ನು ನಿರೂಪಣೆ ಮಾಡಿದ್ದಾರೆ. ಹೀಗೆ ಅರ್ಥವನ್ನು ಬಿಡಿಸಿ ಹೇಳಿದರೆ ಸಮಾಸವಾದಾಗ ಅನರಾಯಣಃ ಎಂಬ ರೂಪವೇ ಆಗಬೇಕು. ನಾರಾಯಣ ಎಂಬ ರೂಪವು ಆಗುವುದಿಲ್ಲ. ಇವೇ ಮೊದಲಾದ ಆಕ್ಷೇಪವನ್ನು 'ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ' ಎಂಬ ಅನುವ್ಯಾಖ್ಯಾನಶ್ಲೋಕವನ್ನು ವಿವರಿಸುವ ಸಂದರ್ಭದಲ್ಲಿ ಈ ಅಧಿಕರಣ ಮುಗಿಯುವಾಗ ಈ ವಿಷಯವನ್ನು ನಿರಾಕರಣೆ ಮಾಡುತ್ತಾರೆ.

ಪರಮಪ್ರೇಮಾಸ್ಪದವಿಷಯತ್ವವು ಇರುವುದರಿಂದ ವಾಯುದೇವರಿಗೆ ನಾರಾಯಣನೇ ಮುಖ್ಯವಾಗಿ ಆಶ್ರಯವಾಗಿದ್ದಾನೆ. ಈ ನಾರಾಯಣಶಬ್ದಾರ್ಥವನ್ನು ಹೇಳಿದ್ದರಿಂದಲೇ ವಾಯು-





ದೇವರ ಅವತಾರರಾದ್ದರಿಂದ ಶ್ರೀಮಧ್ವಾಚಾರ್ಯರಿಗೆ ನಾರಾಯಣನು ಅತ್ಯಂತಪ್ರಿಯತಮನಾಗಿದ್ದಾನೆ ಎಂದು ಸಮರ್ಥನೆ ಮಾಡಿದಂತಾಯಿತು.

ವಿಶೇಷವಿಚಾರ – 'ಅರವಿರುದ್ಧಾಃ ನಾರಾಃ' ಎಂಬುದಾಗಿ ಸಮಾಸ ಮಾಡಿದಾಗ 'ನ'ಕಾರವು ವಿರೋಧಾರ್ಥಕವಾಯಿತು. ನಕಾರವನ್ನು ವಿರೋಧಾರ್ಥಕವಾಗಿ ಪರಿಗ್ರಹಿಸಿದಾಗ ಅವಿದ್ಯಾ, ಅಸುರ ಇತ್ಯಾದಿಶಬ್ದಗಳಂತೆ ನಕಾರವು ಲೋಪವಾಗಿ ನುಟ್ ಆಗಮ ಬರುತ್ತದೆಯೆಂದು 'ನಲೋಪೋ ನಞಃ' ಇತ್ಯಾದಿ ಸೂತ್ರದಲ್ಲಿ ಹೇಳಿದ್ದಾರೆ. ಆದ ಕಾರಣ ಇಲ್ಲಿ ಅನರಾಯಣ ಎಂದೇ ರೂಪವಾಗಬೇಕು ಎಂಬ ಪ್ರಶ್ನೆ ಸರಿಯಲ್ಲ. ಯಾಕೆಂದರೆ 'ನಭ್ರಾಟ್ ನಪಾನ್ನವೇದಾ ನಾಸತ್ಯಾ ನಮುಚಿನಕುಲನಖನಪುಂಸಕನಕ್ಷತ್ರನಕ್ರನಾಕೇಷು ಪ್ರಕೃತ್ಯಾ' ಎಂಬ ಸೂತ್ರದಲ್ಲಿ ಸಮಾಸದಲ್ಲೂ ಕೆಲವು ಶಬ್ದಗಳಿಗೆ ನಞ್‌ಲೋಪವಾಗುವುದಿಲ್ಲವೆಂದು ಹೇಳಿದ್ದಾರೆ. ಆದರಂತೆ ನಾರಾಯಣಶಬ್ದವೂ ಸಿದ್ಧವಾಗುತ್ತದೆ.

## ಸುಧಾ-ಪರಿಮಳಸಾರ

1. ಅರ ಎಂದರೆ ದೋಷ. ದೋಷವಿರುದ್ಧವಾದ ಗುಣಗಳೇ ನಾರಗಳು. ಆ ಗುಣಗಳಿಗೆ ಆಶ್ರಯನಾದವನು. ಅಂದರೆ ಗುಣಪೂರ್ಣನಾದವನು ನಾರಾಯಣ.

2. ದೋಷಗಳಿಗೆ ಆಶ್ರಯನಾಗದವನು ಅಂದರೆ ನಿರ್ದೋಷನಾದವನು ನಾರಾಯಣ.

3. ಉಪಕಾರವನ್ನು ಮಾಡುವುದರ ಮೂಲಕ ನರರೊಂದಿಗೆ ಸಂಬಂಧವನ್ನು ಹೊಂದಿರುವ ವೇದಗಳೇ ನಾರಗಳು. ಆ ವೇದಗಳಿಗೆ ಆಶ್ರಯನಾದವನು ಅಂದರೆ ವೇದಪ್ರತಿಪಾದ್ಯನು ನಾರಾಯಣ.

4. ನರರಿಗೆ ಸಂಬಂಧಿಸಿದ ಸೃಷ್ಟಿ ಮೊದಲಾದದ್ದೇ ನಾರವೆನಿಸುತ್ತದೆ. ಆ ಸೃಷ್ಟ್ಯಾದಿಗಳನ್ನು ಮಾಡುವುದರ ಮೂಲಕ ಆಶ್ರಯನಾದವನು ಅಂದರೆ ನರರಿಗೆ ಸೃಷ್ಟ್ಯಾದಿಗಳನ್ನು ನೀಡುವವನು ನಾರಾಯಣ.

5. ನರಸಮೂಹವೇ ನಾರ. ನರರ ಸಮೂಹದಿಂದ ವಂದ್ಯನಾಗುವುದರ ಮೂಲಕ ಆಶ್ರಯ-ನಾದವನು ಅಂದರೆ ನರಸಮೂಹದಿಂದ ವಂದ್ಯನಾದವನು ನಾರಾಯಣ.

6. ಸ್ವಾಮಿಯಾಗುವುದರ ಮೂಲಕ ನರರೊಂದಿಗೆ ಸಂಬಂಧವನ್ನು ಹೊಂದಿದ ಮುಖ್ಯ-ವಾಯುವೇ ನಾರ. ಆ ಮುಖ್ಯಪ್ರಾಣನಿಗೆ ಹಾಗೂ ಮುಖ್ಯಪ್ರಾಣಾವತಾರರಾದ ನನಗೆ





(ಆನಂದತೀರ್ಥರಿಗೆ) ಪರಮಪ್ರೇಮಾಸ್ಪದನಾಗುವುದರ ಮೂಲಕ ಆಶ್ರಯನಾದವನು ನಾರಾಯಣ. ಹೀಗೆ ನಾರಾಯಣಶಬ್ದವು, ಮೊದಲ ಪದ್ಯದಲ್ಲಿ ಹೇಳಿರುವ ಗುಣಪೂರ್ಣತ್ವ, ನಿರ್ದೋಷತ್ವ ಮೊದಲಾದ ನಾರಾಯಣನ ಅಸಾಧಾರಣಧರ್ಮಗಳನ್ನು ಕ್ರಮವಾಗಿ ತಿಳಿಸುತ್ತದೆ ಎಂದು ತಿಳಿಯಬೇಕು.

## ಪರಿಮಳದ ವೈಶಿಷ್ಟ್ಯ

* ಅನರಾಯಣ ಎಂದಾಗಬೇಕು. ನಾರಾಯಣ ಎಂಬ ನಿಷ್ಪತ್ತಿ ಹೇಗಾಯಿತು? ಎಂದರೆ 'ದೋಷಾರಚ್ಛಿದ್ರಶಬ್ದಾನಾಂ' ಎಂಬ ಅನುವ್ಯಾಖ್ಯಾನದ ವ್ಯಾಖ್ಯಾನದ ಸಂದರ್ಭದಲ್ಲಿ ತಿಳಿಸುತ್ತೇವೆಂದಿದ್ದು ಅತ್ಯಂತ ಸಂಗತವಾಗಿದೆ.

* ಸದಾ ಪ್ರಿಯತಮಮ್ ಎಂಬುದರಿಂದ ಶ್ರೀಮದಾಚಾರ್ಯರು ತಮ್ಮನ್ನು ವಾಯುದೇವರ ಅವತಾರರೆಂದು ಸೂಚಿಸಿದ್ದಾರೆ.

## ಮಂಗಳಶ್ಲೋಕವು ಸಂಕ್ಷೇಪಶಾಸ್ತ್ರ

**ಶ್ರೀಮನ್ನ್ಯಾಯಸುಧಾ– ಅಥವಾ ಶ್ರೋತೃಬುದ್ಧ್ಯನುಕೂಲನಾಯ ಸಕಲಶಾಸ್ತ್ರಾರ್ಥಂ ಸಂಕ್ಷೇಪತೋ ಅನೇನ ಆಚಷ್ಟೇ । ವಿದಿತಸಂಕ್ಷೇಪಾ ಹಿ ಪ್ರಪಂಚಂ ಜಿಜ್ಞಾಸವೋ ಭವಂತಿ ।**

ಅಥವಾ ಶ್ರೋತೃಗಳಿಗೆ ಶಾಸ್ತ್ರಾರ್ಥವಿಚಾರದಲ್ಲಿ ದೃಢವಾದ ಬುದ್ಧಿಯು ಉಂಟಾಗಲಿ ಎಂಬ ದೃಷ್ಟಿಯಿಂದ ಸಕಲಶಾಸ್ತ್ರಾರ್ಥವನ್ನು ಸಂಕ್ಷೇಪವಾಗಿ ಇದೇ ಅನುವ್ಯಾಖ್ಯಾನ ಶ್ಲೋಕದಿಂದ ಹೇಳುತ್ತಿದ್ದಾರೆ. ಸಂಕ್ಷೇಪವಾಗಿ ತಿಳಿದ ವಿಚಾರವನ್ನು ವಿಸ್ತಾರವಾಗಿ ತಿಳಿಯಬೇಕೆಂಬ ಕುತೂಹಲ ಮೂಡುತ್ತದೆ.

## ನಾರಾಯಣಶಬ್ದಾರ್ಥದಲ್ಲಿ ಬುದ್ಧಿಚಾತುರ್ಯ

ಪರಿಮಳ– ನನು ಬುದ್ಧಿಚಾತುರ್ಯೇಣ ನಾನಾಪ್ರಕಾರೇಣ ನಾರಾಯಣಪದಸ್ಯ







ನಿರ್ವಚನಸಂಭವೇಽಪಿ ಏವಂರೂಪೇಣೈವ ತತ್ರಾಪಿ ಏತಾವದ್ಭಿರೇವ ನಿರ್ವಚನೈಃ ನಾರಾಯಣಸ್ತುತೌ ನ ಪ್ರಬಲಹೇತುಂ ಪಶ್ಯಾಮಃ । ಶ್ರೋತೃಬುದ್ಧ್ಯಾನುಕೂಲ್ಯಾದಿಪ್ರಯೋಜಕಸ್ಯೈವ ಆದೌ ಅವಶ್ಯವಕ್ತವ್ಯತ್ವಾತ್ ಇತ್ಯತೋ ವಾ 'ವ್ಯಾಖ್ಯಾಂ ಕರೋಮಿ' ಇತಿ ವಕ್ಷ್ಯಮಾಣವರ್ತಮಾನನಿರ್ದೇಶಘಟನಾಯ ವಾ ಯೋಜನಾಂತರಮಾಹ – ಅಥವಾ ಇತಿ ॥ ಪ್ರಪಂಚಂ ಜಿಜ್ಞಾಸವ ಇತಿ ॥ 'ಸನಾಶಂಸಭಿಕ್ಷ ಉಃ' ಇತಿ ಉಪ್ರತ್ಯಯಾಂತಜಿಜ್ಞಾಸುಪದಪ್ರಯೋಗೇ 'ನ ಲೋಕಾವ್ಯಯನಿಷ್ಠಾಖಲರ್ಥತೃನಾಮ್' ಇತಿ ಷಷ್ಠೀನಿಷೇಧಾದ್ ದ್ವಿತೀಯೋಕ್ತಾ । ಪ್ರಪಂಚವಿಷಯಕಜಿಜ್ಞಾಸಾವಂತೋ ಭವಂತೀತ್ಯರ್ಥಃ ।

ಬುದ್ಧಿಚಾತುರ್ಯದಿಂದ ಅನೇಕಪ್ರಕಾರದಲ್ಲಿ ನಾರಾಯಣಶಬ್ದಾರ್ಥವನ್ನು ವಿವರಿಸಿದ್ದಾಯಿತು. ಇದನ್ನು ಒಪ್ಪೋಣ. ಆದರೆ ಈ ಅರ್ಥಗಳನ್ನೇ ಉಲ್ಲೇಖ ಮಾಡುವ ಮೂಲಕ ನಾರಾಯಣನನ್ನು ಸ್ತೋತ್ರ ಮಾಡುವುದರಲ್ಲಿ ಯಾವುದೇ ಪ್ರಬಲ ಕಾರಣ ಕಾಣಿಸುತ್ತಿಲ್ಲ. ಮತ್ತು ಪ್ರಾರಂಭದಲ್ಲಿ ಶ್ರೋತೃಗಳಿಗೆ ಬುದ್ಧಿಯ ಅನುಕೂಲವಾಗುವ ವಿಷಯವನ್ನೇ ಹೇಳಬೇಕು. ಈ ಎರಡು ಪ್ರಶ್ನೆಗೆ ಉತ್ತರವನ್ನು ಹೇಳಲು 'ಅಥವಾ' ಇತ್ಯಾದಿ ಗ್ರಂಥವು ಹೊರಟಿದೆ. ಅಥವಾ 'ವ್ಯಾಖ್ಯಾಂ ಕರೋಮಿ' ಎಂಬುದಾಗಿ ಕರೋಮಿ ಎಂಬ ವರ್ತಮಾನಪ್ರಯೋಗವನ್ನು ಉಪಪಾದನೆ ಮಾಡುವುದಕ್ಕಾಗಿಯೂ 'ಅಥವಾ' ಇತ್ಯಾದಿ ಗ್ರಂಥವು ಹೊರಟಿದೆ.

'ಸನಾಶಂಸ ಉಃ' ಎಂಬ ಪಾಣಿನಿಸೂತ್ರದಂತೆ ಉಪ್ರತ್ಯಯಾಂತವಾಗಿದೆ. ಅದರ ಪ್ರಯೋಗವಿದ್ದಾಗ 'ನ ಲೋಕಾವ್ಯಯನಿಷ್ಠಾಖಲರ್ಥತೃನಾಮ್' ಎಂಬ ಸೂತ್ರವು ಷಷ್ಠಿಯನ್ನು ನಿಷೇಧ ಮಾಡುವ ಮೂಲಕ ದ್ವಿತೀಯಾವಿಭಕ್ತಿಯನ್ನು ವಿಧಾನ ಮಾಡುತ್ತಿದೆ. ಆದ್ದರಿಂದ ಪ್ರಪಂಚಸ್ಯ ಎಂದು ಪ್ರಯೋಗ ಮಾಡದೇ 'ಪ್ರಪಂಚಂ' ಎಂಬ ದ್ವಿತೀಯಾಂತಪ್ರಯೋಗವನ್ನು ಮಾಡಿದ್ದಾರೆ.

## ಮಂಗಳಾಚರಣೆಯೇ ನೇರವಾದ ಶಾಸ್ತ್ರಾರ್ಥ

ವಾಕ್ಯಾರ್ಥಚಂದ್ರಿಕಾ– ಏವಂ ಶಾಸ್ತ್ರಾರ್ಥವ್ಯಾಖ್ಯಾನಹೇತೂಕ್ತಿಪರತಯಾ ಶ್ಲೋಕೋ ವ್ಯಾಖ್ಯಾತಃ । ಇದಾನೀಂ ತು ಶಾಸ್ತ್ರಾರ್ಥಮೇವ ಅನೇನಾಚಷ್ಟೇ ಇತ್ಯಾಹ – ಅಥವೇತಿ ॥ 'ಶ್ರೋತೃಬುದ್ಧ್ಯನುಕೂಲನಾಯ' ಇತ್ಯೇತದ್ ವಿಶದಯತಿ – ವಿದಿತೇತಿ ॥

ಈ ಅನುವ್ಯಾಖ್ಯಾನಗ್ರಂಥದಲ್ಲಿ ಮುಂದೆ ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವ್ಯಾಖ್ಯಾನ ಮಾಡುತ್ತಾರೆ. ಅದಕ್ಕೆ ಹೇತುಭೂತವಾಗಿ ಮಂಗಳಾಚರಣೆಯು ಹೊರಟಿದೆ. ಈ ಮಂಗಳಾಚರಣೆಯಲ್ಲಿ ಯಾವ ನಮ್ಮತ್ವವನ್ನು ಹೇಳಿದರೋ ಅದಕ್ಕೆ ಉಪಪಾದಕವಾಗಿ ನಾರಾಯಣನ ಸ್ವರೂಪನಿರ್ಧಾರ, ಲಕ್ಷಣಕಥನ, ನಾರಾಯಣಶಬ್ದಾರ್ಥವಿಚಾರ ಇತ್ಯಾದಿಗಳೆಲ್ಲವೂ ಪ್ರಯುಕ್ತವಾಗಿವೆ. ಹೀಗೆ ಮಂಗಳಾಚರಣೆಯ ಶ್ಲೋಕದಲ್ಲಿರುವ ಪ್ರತಿಯೊಂದು ವಿಶೇಷಣಗಳು ಪರಂಪರೆಯಿಂದ ಶಾಸ್ತ್ರಾರ್ಥವ್ಯಾಖ್ಯಾನವಾಗಿವೆ ಎಂದು ಹೇಳಿದಂತಾಯಿತು. ಪ್ರಕೃತ ಇದೇ ಮಂಗಳಾಚರಣೆಯ ಶ್ಲೋಕವು ಸಂಕ್ಷೇಪವಾಗಿ ಶಾಸ್ತ್ರಾರ್ಥವನ್ನೇ ಹೇಳುತ್ತಿದೆಯೆಂದು 'ಅಥವಾ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಶ್ರೋತೃಬುದ್ಧ್ಯನುಕೂಲನಾಯ ಎಂಬುದನ್ನೇ ಸ್ಪಷ್ಟಪಡಿಸಲು 'ವಿದಿತಸಂಕ್ಷೇಪಾ ಹಿ' ಎಂಬ ಟೀಕಾವಾಕ್ಯವು ಪ್ರವೃತ್ತವಾಗಿದೆ.

## ರಸಘಟ್ಟ
## ನಾಕು ಅಧ್ಯಾಯಾರ್ಥ

ಆನಂದ– ಶ್ರೋತೃಬುದ್ಧಿವ್ಯಾಕುಲತಾಪರಿಹಾರಾಯ ಅಧ್ಯಾಯಚತುಷ್ಟಯಪ್ರತಿಪಾದ್ಯಾರ್ಥ ಪರತ್ವೇನಾಪಿ ವಿಶೇಷಣಾನಿ ಯೋಜಯತಿ – ಅಥವಾ ಇತಿ ॥ ನನು ಸಕಲಶಾಸ್ತ್ರಾರ್ಥಸ್ಯ ಆದಾವೇವ ಕಥನೇನ ಪ್ರತಿಪಾದ್ಯಾನವಶೇಷಾತ್ ಅಗ್ರೇ ಗ್ರಂಥಕರಣಾಯೋಗ ಇತ್ಯತ ಉಕ್ತಂ – ಸಂಕ್ಷೇಪತ ಇತಿ ॥ ಅಗ್ರೇ ಪ್ರಪಂಚಸ್ಯ ಕ್ರಿಯಮಾಣತ್ವಾತ್ ನ ಪ್ರತಿಪಾದ್ಯಾನವಶೇಷ ಇತಿ ಭಾವಃ । ತರ್ಹಿ ಪ್ರಪಂಚೇನೈವ ಕಥನಮಸ್ತು, ಕಿಂ ಸಂಕ್ಷೇಪೇಣ ಕಥನೇನ ಪ್ರಯೋಜನಮ್? ಇತ್ಯತ ಆಹ – ವಿದಿತೇತಿ ॥

ಶ್ರೋತೃಬುದ್ಧಿಯಲ್ಲಿ ಕಳವಳವನ್ನು ಪರಿಹರಿಸಲು ನಾಕು ಅಧ್ಯಾಯಗಳ ಪ್ರತಿಪಾದ್ಯಾರ್ಥವನ್ನು ಮಂಗಳಶ್ಲೋಕದಲ್ಲಿರುವ ವಿಶೇಷಣಗಳಿಂದಲೇ ಯೋಜನೆ ಮಾಡಲು 'ಅಥವಾ' ಇತ್ಯಾದಿ ವಾಕ್ಯವು ಹೊರಟಿದೆ. ಸಕಲಶಾಸ್ತ್ರಾರ್ಥಗಳನ್ನು ಮೊದಲೇ ಹೇಳುವುದರಿಂದ ಮುಂದೆ ಗ್ರಂಥ ಹೊರಡುವುದು ವ್ಯರ್ಥವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಸಂಕ್ಷೇಪತಃ' ಎಂಬುದರಿಂದ ಉತ್ತರಿಸಿದ್ದಾರೆ. ಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಣೆ ಮಾಡುತ್ತಾರೆ. ಮೊದಲು ಸಂಕ್ಷೇಪವಾಗಿ ಸಂಗ್ರಹಿಸಿರುತ್ತಾರೆ. ಆದ್ದರಿಂದ ಪ್ರತಿಪಾದನೆ ಮಾಡಲು ಏನೂ ಉಳಿಯುವುದಿಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಹಾಗಾದರೆ ಸಂಕ್ಷೇಪವಾಗಿ ಏಕೆ ಹೇಳಬೇಕು? ವಿಸ್ತಾರದಿಂದಲೇ ಉದ್ದೇಶ ಸಿದ್ಧವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ವಿದಿತಸಂಕ್ಷೇಪಾ ಹಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.





## ಸುಧಾ- ಪರಿಮಳ ಸಾರ

ಶಾಸ್ತ್ರಶ್ರವಣದಲ್ಲಿ ಯಾರು ತೊಡಗುತ್ತಾರೋ ಅವರಿಗೆ ಅನುಕೂಲವಾಗಬೇಕೆಂಬ ದೃಷ್ಟಿಯಿಂದ ಸಕಲಶಾಸ್ತ್ರಾರ್ಥವನ್ನು ಸಂಕ್ಷೇಪವಾಗಿ ಹೇಳುವುದು ಸಂಪ್ರದಾಯ. ಸಾಮಾನ್ಯವಾಗಿ ಓದುಗರಿಗೆ ಗ್ರಂಥದಲ್ಲಿ ಏನಿದೆ ಎಂಬ ಕುತೂಹಲವಿರುತ್ತದೆ. ಅದಕ್ಕೆ ಗ್ರಂಥಕಾರರು ಪ್ರಾರಂಭದಲ್ಲಿ ಉತ್ತರಿಸುತ್ತಾರೆ. ಈ ದೃಷ್ಟಿಯಿಂದ ಅನುವ್ಯಾಖ್ಯಾನದ ಮಂಗಲಶ್ಲೋಕವು ಸಮಗ್ರ ಬ್ರಹ್ಮ-ಮೀಮಾಂಸಾಶಾಸ್ತ್ರದಲ್ಲಿರುವ ವಿಷಯವನ್ನು ಸಂಕ್ಷೇಪವಾಗಿ ನಿರೂಪಣೆ ಮಾಡುತ್ತಿದೆ. ಆಚಾರ್ಯರು ಮುಂದಿನ ಶ್ಲೋಕದಲ್ಲಿ 'ಅನ್ವಪಿ ವ್ಯಾಖ್ಯಾಂ ಕರೋಮಿ' ಮತ್ತೊಮ್ಮೆ ಸೂತ್ರ-ಗಳಿಗೆ ವ್ಯಾಖ್ಯಾನ ಮಾಡುತ್ತೇನೆ ಎನ್ನುತ್ತಾರೆ. ಮತ್ತೊಮ್ಮೆ ಸೂತ್ರಗಳಿಗೆ ವ್ಯಾಖ್ಯಾನ ಮಾಡುತ್ತೇನೆ ಎಂದು ಹೇಳಿದರೆ ಈಗಾಗಲೇ ಒಮ್ಮೆ ವ್ಯಾಖ್ಯಾನ ಮಾಡಿದ್ದೇನೆ ಎಂದು ಅರ್ಥ. ಅಂದರೆ ಮಂಗಳಶ್ಲೋಕದಿಂದ ಒಮ್ಮೆ ವ್ಯಾಖ್ಯಾನ ಮಾಡಿದ್ದಾಗಿದೆ ಎಂಬರ್ಥವನ್ನೇ ಹೇಳಬೇಕು. ಆದ್ದರಿಂದ ಸಂಕ್ಷೇಪ ಶಾಸ್ತ್ರಾರ್ಥವನ್ನು ಈ ಮಂಗಳಶ್ಲೋಕದಿಂದ ತಿಳಿಯುವುದು ಆಚಾರ್ಯರಿಗೆ ಸಮ್ಮತವಾಗಿದೆ. ಸಂಕ್ಷೇಪವಾಗಿ ತಿಳಿದ ಮೇಲೆ ವಿವರವಾಗಿ ತಿಳಿಯುವುದರ ಬಗ್ಗೆ ಜಿಜ್ಞಾಸೆಯು ಉಂಟಾಗುತ್ತದೆ.

## ಪರಿಮಳವೈಶಿಷ್ಟ್ಯ

* ಗ್ರಂಥಾರಂಭದಲ್ಲಿ ಸಂಕ್ಷೇಪವಾಗಿ ಶಾಸ್ತ್ರಾರ್ಥವನ್ನು ಏಕೆ ಹೇಳಬೇಕೆಂದು ಉಪಪಾದನೆ ಮಾಡಿದ್ದಾರೆ.

* 'ಅನ್ವಪಿ ವ್ಯಾಖ್ಯಾಂ ಕರೋಮಿ' ಎಂದು ಹೇಳಿದ್ದರಿಂದ ಪ್ರಥಮಶ್ಲೋಕದಲ್ಲಿ ಸಂಕ್ಷೇಪ-ಶಾಸ್ತ್ರಾರ್ಥವು ಆಚಾರ್ಯರಿಗೆ ಸಮ್ಮತವೆಂದು ತಿಳಿಸಿದ್ದಾರೆ.

* 'ಪ್ರಪಂಚಂ ಜಿಜ್ಞಾಸವಃ' ಎಂಬಲ್ಲಿ ವ್ಯಾಕರಣದ ಪ್ರಕಾರ ಸಾಧುತ್ವವನ್ನು ಸಮರ್ಥನೆ ಮಾಡಿದ್ದು ಅಪೂರ್ವವಾಗಿದೆ.

## ಮಂಗಳಶ್ಲೋಕದಲ್ಲಿ ಪ್ರಥಮಾಧ್ಯಾಯದ ಸಾರ

**ಶ್ರೀಮನ್ನ್ಯಾಯಸುಧಾ– ತತ್ರ 'ಸದಾ ವಂದ್ಯಮ್' ಇತಿ ಪ್ರಥಮ-ಸೂತ್ರಾರ್ಥೋಕ್ತಿಃ । ಮನೋವೃತ್ತೇಃ ತತ್ಪ್ರಣವತಾ ಹಿ ವಂದನಮ್ । ಜಿಜ್ಞಾಸಾಽಪಿ**

**ತದ್ವಿಶೇಷ ಏವ । ತಸ್ಯ ಜೀವಾದಿವ್ಯಾವೃತ್ತಯೇ ಯದ್ ಬ್ರಹ್ಮ ಇತ್ಯುಕ್ತಂ ತಸ್ಯಾರ್ಥಃ – ನಿಖಿಲೇತಿ ॥ ತದುಪಪಾದನಾಯ ದ್ವಿತೀಯಸೂತ್ರೇ ಲಕ್ಷಣಮ-ಭಿಹಿತಮ್ । ತದಾಹ – ಅಸ್ಯೇತಿ ॥ ತೃತೀಯಸೂತ್ರೇಣ ತತ್ರ ಶಾಸ್ತ್ರಂ ಪ್ರಮಾ-ಣಮ್ ಅಭಿಧಾಯ ತಸ್ಯ ಅಧ್ಯಾಯಶೇಷೇಣ ತದ್ವಿಷಯತಾ ಉಪಪಾದಿತಾ । ತತ್ಕಥನಮ್ – ಆಪ್ಯತಮಮ್ ಇತಿ ॥**

ಸಂಕ್ಷೇಪಶಾಸ್ತ್ರಾರ್ಥ ಹೀಗಿದೆ – 'ಸದಾ ವಂದ್ಯಮ್' ಎಂಬುದರಿಂದ ಮೊದಲನೆಯ ಸೂತ್ರದ ಅರ್ಥವನ್ನು ಹೇಳಿದ್ದಾರೆ. ಅದು ಹೀಗೆ – ಬ್ರಹ್ಮನಲ್ಲಿ ತಲ್ಲೀನವಾಗಿರುವ ಮನೋ-ವ್ಯಾಪಾರವೇ ವಂದನ ಎನಿಸುತ್ತದೆ. ಜಿಜ್ಞಾಸೆಯು ಕೂಡ ಮಾನಸವ್ಯಾಪಾರದ ವಿಶೇಷವೇ ಆಗಿದೆ. ಇಂಥ ಜಿಜ್ಞಾಸೆಯಲ್ಲಿ ಜೀವನು ವಿಷಯನಲ್ಲ ಎಂಬುದನ್ನು ತಿಳಿಸುವುದಕ್ಕಾಗಿ ಸೂತ್ರ-ದಲ್ಲಿ ಬ್ರಹ್ಮಶಬ್ದವನ್ನು ಹೇಳಿದ್ದಾರೆ. ಆ ಬ್ರಹ್ಮಶಬ್ದದ ಅರ್ಥವನ್ನೇ 'ನಿಖಿಲಪೂರ್ಣಗುಣೈಕ-ದೇಹಂ' ಎಂಬ ವಿಶೇಷಣವು ಹೇಳುತ್ತಿದೆ. ಬ್ರಹ್ಮನಲ್ಲಿ ಗುಣಪೂರ್ಣತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ಎರಡನೆಯ ಸೂತ್ರದಲ್ಲಿ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಲಕ್ಷಣವೆಂದು ಹೇಳಿದ್ದಾರೆ. ಇದನ್ನೇ 'ಅಸ್ಯೋದ್ಭವಾದಿದಂ' ಎಂಬ ವಿಶೇಷಣವು ಹೇಳುತ್ತಿದೆ. ಈ ವಿಷಯ-ದಲ್ಲಿ ಶಾಸ್ತ್ರವೇ ಪ್ರಮಾಣವಾಗಿದೆ ಎಂಬುದನ್ನು ಮೂರನೆಯ ಸೂತ್ರವು ಹೇಳುತ್ತಿದೆ. ಸಮಗ್ರಶಾಸ್ತ್ರಗಳು ಬ್ರಹ್ಮವಿಷಯಕವೇ ಆಗಿವೆ ಎಂಬುದನ್ನು ಸಂಪೂರ್ಣ ಅಧ್ಯಾಯವು ಪ್ರತಿಪಾದನೆ ಮಾಡುತ್ತಿದೆ. ಹೀಗೆ ಪ್ರಥಮಾಧ್ಯಾಯದ ಅರ್ಥವನ್ನು 'ಆಪ್ಯತಮಮ್ ಆಪ್ಯಖಿಲೈಃ ಸುವಾಕ್ಯೈಃ' ಎಂಬುದರಿಂದ ಹೇಳಿರುತ್ತಾರೆ.

## ಮೊದಲ ಮೂರುಸೂತ್ರಗಳ ಅರ್ಥ

ಪರಿಮಳ– ತತ್ರ ಶಾಸ್ತ್ರಮಿತಿ ॥ ಬ್ರಹ್ಮಶಬ್ದಾರ್ಥರೂಪಗುಣಪೂರ್ಣತ್ವೇ ತದುಪ-ಪಾದಕಜಗಜ್ಜನ್ಮಾದಿಹೇತುತ್ವಲಕ್ಷಣೇ ಚ ಇತ್ಯರ್ಥಃ । ತೇನ ಭಾಷ್ಯೇ ಆದ್ಯದ್ವಿತೀಯ-ಸೂತ್ರಾರ್ಥಯೋಃ ಮಧ್ಯೇ ತೃತೀಯಸೂತ್ರಾರ್ಥೋಕ್ತಿಃ । ಪೂರ್ವೋತ್ತರಯೋರನ್ವಯೇನ

ದ್ವಯೋರಪಿ ಶಾಸ್ತ್ರಪ್ರಮಾಣಕತ್ವಸೂಚನಾಯ ಇತ್ಯುಕ್ತಂ ಭವತಿ । ಸನ್ನ್ಯಾಯರತ್ನಾವಲೀ-ನಯಚಂದ್ರಿಕಯೋಸ್ತು 'ನಿಖಿಲ' ಇತ್ಯಾದಿವಿಶೇಷಣಚತುಷ್ಟಯಂ ಕ್ರಮಾತ್ ಅಧ್ಯಾಯ-ಚತುಷ್ಟಯಾರ್ಥೋಕ್ತಿಪರಮ್ ಇತ್ಯುಕ್ತಮ್ ।

'ತತ್ರ' ಎಂದರೆ ಬ್ರಹ್ಮಶಬ್ದಾರ್ಥವಾದ ಗುಣಪರಿಪೂರ್ಣತ್ವದಲ್ಲಿ ತದುಪಪಾದಕವಾದ ಜಗಜ್ಜನ್ಮಾದಿಕಾರಣವಾದ ಲಕ್ಷಣದಲ್ಲಿ ಎಂದರ್ಥ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ ಮೊದಲನೆಯ ಸೂತ್ರಾರ್ಥ ಗುಣಪೂರ್ಣತ್ವವಾಗಿದೆ. ಎರಡನೆಯ ಸೂತ್ರಾರ್ಥ ಜಗಜ್ಜನ್ಮಾದಿಕಾರಣತ್ವ-ವಾಗಿದೆ. ಇವೆರಡರ ನಡುವೆ ಮೂರನೆಯ ಸೂತ್ರಾರ್ಥವನ್ನು 'ಆಪ್ತತಮಮಪ್ಯಖಿಲೈಃ ಸುವಾಕ್ಯೈಃ' ಎಂದು ಹೇಳಿದ್ದಾರೆ. ಈ ಎರಡೂ ವಿಷಯದಲ್ಲಿ ಶಾಸ್ತ್ರವು ಪ್ರಮಾಣವಾಗಿದೆ ಎಂಬುದು ಇದರಿಂದ ಸೂಚಿತವಾಯಿತು. ಆದರೆ ಸನ್ನ್ಯಾಯರತ್ನಾವಲಿ ಮತ್ತು ನಯಚಂದ್ರಿಕಾ-ಗ್ರಂಥಗಳಲ್ಲಿ ಹೀಗೆ ವ್ಯಾಖ್ಯಾನ ಮಾಡಿರುವುದಿಲ್ಲ. 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ವಿಶೇಷಣಗಳು ಕ್ರಮವಾಗಿ ನಾಕೂ ಅಧ್ಯಾಯಗಳ ಅರ್ಥವನ್ನು ಹೇಳುತ್ತವೆ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

ವಿಶೇಷವಿಚಾರ – ಜಿಜ್ಞಾಸ್ಯನಾದ ಭಗವಂತ ಜೀವಾದಿಗಳಿಗಿಂತ ಭಿನ್ನನೆಂದು ತೋರಿಸಲು ಸೂತ್ರ-ಕಾರರು ಬ್ರಹ್ಮಶಬ್ದವನ್ನು ಪ್ರಯೋಗಿಸಿದ್ದಾರೆ. ಬ್ರಹ್ಮನೆಂದರೆ ಗುಣಪೂರ್ಣನಾದವನು ಎಂದರ್ಥ. ಆದನ್ನೇ ಆಚಾರ್ಯರು 'ನಿಖಿಲಪೂರ್ಣಗುಣೈಕದೇಹಂ' ಎಂದು ತಿಳಿಸಿದ್ದಾರೆ. ಬ್ರಹ್ಮನ ಗುಣಪೂರ್ಣತ್ವವನ್ನು ಉಪಪಾದಿಸಲು 'ಜನ್ಮಾದ್ಯಸ್ಯ ಯತಃ' ಎಂಬ ಎರಡನೆಯ ಸೂತ್ರದಿಂದ ಜಗಜ್ಜನ್ಮಾದಿಕಾರಣತ್ವೋಪ-ಪಾದಕವಾದ ಬ್ರಹ್ಮನ ಲಕ್ಷಣವನ್ನು ಸೂತ್ರಕಾರರು ಹೇಳಿದ್ದಾರೆ. ಆ ಲಕ್ಷಣವನ್ನೇ ಆಚಾರ್ಯರು 'ಅಸ್ಯ ಉದ್ಭವಾದಿದಂ' ಎಂದು ತಿಳಿಸಿದ್ದಾರೆ.

ಬ್ರಹ್ಮಶಬ್ದಾರ್ಥವಾದ ಗುಣಪೂರ್ಣತ್ವ ಹಾಗೂ ಅದನ್ನು ಉಪಪಾದಿಸುವ ಜಗಜ್ಜನ್ಮಾದಿಕಾರಣತ್ವ-ರೂಪವಾದ ಬ್ರಹ್ಮಲಕ್ಷಣದ ವಿಚಾರದಲ್ಲಿ ಶಾಸ್ತ್ರವೇ ಪ್ರಮಾಣವೆಂದು 'ಶಾಸ್ತ್ರಯೋನಿತ್ವಾತ್' ಎಂಬ ಮೂರನೆಯ ಸೂತ್ರದಿಂದ ತಿಳಿಸಿದ್ದಾರೆ. ವೇದಾದಿಸಕಲಶಾಸ್ತ್ರಗಳಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಉಳಿದ ಪ್ರಥಮಾಧ್ಯಾಯದಿಂದ ಸೂತ್ರಕಾರರು ನಿರೂಪಿಸಿದ್ದಾರೆ. ಆದನ್ನೇ ಆಚಾರ್ಯರು 'ಅಖಿಲೈಃ ಸುವಾಕ್ಯೈಃ ಆಪ್ತತಮಂ' ಎಂದು ತಿಳಿಸಿದ್ದಾರೆ.





ಮಂಗಳಪದ್ಯದಲ್ಲಿ ಮೊದಲ ಮೂರು ಸೂತ್ರಗಳ ಅರ್ಥಗಳನ್ನು ಹಾಗೂ ನಾಕೂ ಅಧ್ಯಾಯಗಳ ಅರ್ಥವನ್ನೂ ತಿಳಿಸಿದ್ದಾರೆ ಎಂದು ವ್ಯಾಖ್ಯಾನಿಸಿದ್ದಾಯಿತು. ಆದರೆ ಮೊದಲ ಮೂರು ಸೂತ್ರಗಳ ಅರ್ಥವನ್ನು ತಿಳಿಸುವುದು ಆಚಾರ್ಯರ ಉದ್ದೇಶವಾಗಿದ್ದರೆ ಸೂತ್ರಕ್ರಮದಲ್ಲಿಯೇ ಶ್ಲೋಕದಲ್ಲೂ ಮೂರು ವಿಶೇಷಣಗಳನ್ನು ಕ್ರಮವಾಗಿ ಹೇಳಬೇಕಿತ್ತು. ಆದರೆ ಶ್ಲೋಕದಲ್ಲಿ ಎರಡನೇ ಸೂತ್ರದ ಅರ್ಥ-ಪ್ರತಿಪಾದಕವಾದ 'ನಿಖಿಲಪೂರ್ಣ' ಎಂಬ ಪದ ಮೊದಲು ಬಂದಿದೆ. ಮೂರನೇ ಸೂತ್ರಾರ್ಥಪ್ರತಿ-ಪಾದಕವಾದ 'ಆಪ್ತತಮಮ್' ಎಂಬುದು ಅನಂತರ ಬಂದಿದೆ. ಕೊನೆಯಲ್ಲಿ ಮೊದಲನೇ ಸೂತ್ರಾರ್ಥ ಪ್ರತಿಪಾದಕವಾದ 'ಸದಾ ವಂದ್ಯಂ' ಎಂಬ ವಿಶೇಷಣವಿದೆ. ಈ ರೀತಿಯಾಗಿ ವಿಶೇಷಣಗಳಲ್ಲಿ ಕ್ರಮ-ವ್ಯತ್ಯಾಸ ಏಕೆ? ಎಂಬ ಪ್ರಶ್ನೆ ಬರುತ್ತದೆ.

ಅದಕ್ಕೆ ಉತ್ತರವನ್ನು ಹೀಗೆ ತಿಳಿಯಬೇಕು – ದ್ವಿತೀಯಸೂತ್ರದ ಅರ್ಥವೆನಿಸಿದ ಪರಮಾತ್ಮನ ಗುಣಪೂರ್ಣತ್ವ ಮೊದಲಾದ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣವಾಗಿದೆ. ಹಾಗೂ ಪ್ರಥಮಸೂತ್ರದ ಅರ್ಥವಾದ ಜಿಜ್ಞಾಸಾವಿಷಯದಲ್ಲೂ ಶಾಸ್ತ್ರವೇ ಪ್ರಮಾಣವಾಗಿದೆ. ಆದ್ದರಿಂದ ಮೊದಲನೇ ಸೂತ್ರಾರ್ಥಕ್ಕೂ ದ್ವಿತೀಯಸೂತ್ರಾರ್ಥಕ್ಕೂ ಈ ಮೂರನೆಯ ಸೂತ್ರವು ಉಪಪಾದಕವಾಗಿದೆ. ಈ ರೀತಿ -ಯಾಗಿ ಎರಡೂ ಸೂತ್ರಾರ್ಥಗಳ ಜೊತೆ ಸಂಬಂಧ ಗೊತ್ತಾಗಬೇಕೆಂದು ಎರಡು ಮತ್ತು ಒಂದನೇ ಸೂತ್ರಾರ್ಥಗಳ ಮಧ್ಯೆ ಮೂರನೆಯ ಸೂತ್ರಾರ್ಥವನ್ನು ಆಚಾರ್ಯರು ಹೇಳಿದ್ದಾರೆ.

## ವಂದನ ಎಂದರೆ ಮನೋವೃತ್ತಿಯ ಪ್ರಾವಣ್ಯ

ವಾಕ್ಯಾರ್ಥಚಂದ್ರಿಕಾ– ಮನೋವೃತ್ತೇರಿತಿ ॥ ಮನೋವೃತ್ತಿಪ್ರಾವಣ್ಯಪೂರ್ವಕ(ಕರಾದಿ)-ಕಾಯಿಕಾದಿವ್ಯಾಪಾರ ಏವ ಲೋಕೇಽಪಿ ವಂದನವ್ಯವಹಾರಾತ್ ಪ್ರಾಪ್ತಾಪ್ರಾಪ್ತವಿವೇಕೇನ ತಸ್ಯೈವ ವಂದನತ್ವಮಿತಿ ಭಾವಃ।

ಮನೋವೃತ್ತೇಃ – ಮನೋವೃತ್ತಿಪ್ರಾವಣ್ಯಪೂರ್ವಕವಾದ ಕಾಯಿಕಾದಿವ್ಯಾಪಾರವನ್ನೇ ಲೋಕ-ದಲ್ಲೂ ವಂದನ ಎಂದು ಕರೆಯಲಾಗಿದೆ. ಪ್ರಾಪ್ತಾಪ್ರಾಪ್ತವಿವೇಕದಿಂದ ಇದಕ್ಕೆ ವಂದನತ್ವವು ಯುಕ್ತವಾ-ಗುತ್ತದೆಂದು ಅಭಿಪ್ರಾಯ.

ವಿವರಣೆ – ಕೈಮುಗಿಯುವುದು, ಸಾಷ್ಟಾಂಗನಮಸ್ಕರಿಸುವುದು ಇವೆಲ್ಲವೂ ಕೂಡ ಕಾಯಿಕವಾದ ವಂದನ ಎಂದು ಕರೆಸಿಕೊಳ್ಳುತ್ತದೆ. ಈ ಕಾಯಿಕವ್ಯಾಪಾರವಿದ್ದರೆ ಸಾಲದು ಮನೋವೃತ್ತಿಪ್ರಾವಣ್ಯವು ಕೂಡ ಇರ-ಬೇಕು. ಆದ್ದರಿಂದ ಮನೋವೃತ್ತಿಪ್ರಾವಣ್ಯಪೂರ್ವಕವಾದ ಕಾಯಿಕಾದಿವ್ಯಾಪಾರವೇ ವಂದನ ಎಂದು ಕರೆಸಿ-





ಕೊಳ್ಳುತ್ತದೆ. ಇದರಲ್ಲೂ ಕೂಡ ಕಾಯಿಕಾದಿವ್ಯಾಪಾರಕ್ಕಿಂತ ಮನೋವೃತ್ತಿಪ್ರಾವಣ್ಯವೇ ಮುಖ್ಯವಾದ ವಂದನ ಎಂದು ಕರೆಸಿಕೊಳ್ಳುತ್ತದೆ. ಇದು ಪ್ರಾಪ್ತಾಪ್ರಾಪ್ತವಿವೇಕದಿಂದ ತಿಳಿಯುತ್ತದೆ. ಮನೋವೃತ್ತಿಯಲ್ಲಿ ಪ್ರಾವಣ್ಯ ಇದ್ದರೆ ಇದು ಮುಖ್ಯವಂದನ ಎನಿಸುತ್ತದೆ. ಮನೋವೃತ್ತಿಪ್ರಾವಣ್ಯ ಇಲ್ಲದೇ ಕೇವಲ ಕಾಯಿಕ-ವ್ಯಾಪಾರವಿದ್ದರೆ ಮುಖ್ಯವಂದನ ಎಂದು ಕರೆಯುವುದಿಲ್ಲ. ಆದ್ದರಿಂದ 'ಯತ್ಸತ್ವೇ ಯತ್ಪ್ರಾಪ್ತಂ ಯದಭಾವೇ ಯತ್ ನ ಪ್ರಾಪ್ಯತೇ' ಎಂಬ ಪ್ರಾಪ್ತಾಪ್ರಾಪ್ತವಿವೇಕದಿಂದ (ಅರ್ಥಾತ್ ಅನ್ವಯವ್ಯತಿರೇಕದಿಂದ) ಮನೋ-ವೃತ್ತಿಪ್ರಾವಣ್ಯವೇ ವಂದನ ಎಂದು ಕರೆಸಿಕೊಳ್ಳುತ್ತದೆ.

## ರಸಘಟ್ಟ
## ನೀನು ಈಶ, ನಾನು ದಾಸ

ವಿಟ್ಠಲಭಟ್ಟೀಯ – ಮನೋವೃತ್ತೇರಿತಿ ॥ 'ಪರಮಾತ್ಮಾ ಮಮ ಸ್ವಾಮೀ ಸರ್ವೋತ್ತಮೋ ಗುಣಪೂರ್ಣಃ ಅಹಂ ತಸ್ಯ ದಾಸಃ' ಇತಿ ಮನೋವೃತ್ತೇಃ ತತ್ಪ್ರಣವತಾ ಹಿ ವಂದನಮ್ । ಜಿಜ್ಞಾಸಾ = ವಿಚಾರಃ । ವಿಚಾರೋ ನಾಮ ಏವಂವಿಧಲಿಂಗಾದ್ ಅತ್ರ ವಿಷ್ಣೋರೇವ ಉಚ್ಯತೇ ಸ ತು ಸರ್ವ-ವಿಲಕ್ಷಣಃ ಸರ್ವಸ್ಯ ಸ್ವಾಮೀ ಇತ್ಯೇವಮಾದಿ ಯುಕ್ತ್ಯನುಸಂಧಾನಾತ್ಮಕಮನೋವೃತ್ತಿವಿಶೇಷ ಏವ। ಅತಃ 'ಸದಾ ವಂದ್ಯಮ್' ಇತಿ ಜಿಜ್ಞಾಸಾಶಬ್ದಾರ್ಥ ಇತ್ಯರ್ಥಃ । ತಸ್ಯಾಯಂ ಸಂಗ್ರಹ ಇತಿ । 'ಪ್ರಿಯ-ತಮಮ್' ಇತ್ಯನೇನ ಭಕ್ತಿಃ ಅಶೇಷಾನ್ ವಿಶೇಷಾನ್ ವಿಹಾಯ ಇತ್ಯನೇನ ವೈರಾಗ್ಯಮ್, 'ಆಪ್ಯತಮಮ್' ಇತ್ಯನೇನ ಶ್ರವಣಾದಿನಾ ಜ್ಞಾತವ್ಯತ್ವಂ ಜ್ಞಾತವ್ಯತ್ವೇನ ಚ ಸಾಕ್ಷಾತ್ಕಾರಾರ್ಥಮೇವ ವೈರಾಗ್ಯಭಕ್ತಿಶ್ರವಣಾದ್ಯುಪಾಸನಂ ಚ ಇತಿ ಜ್ಞಾಯತೇ ಇತಿ।

'ಪರಮಾತ್ಮನೇ ನೀನು ನನ್ನ ಸ್ವಾಮಿ. ಸರ್ವೋತ್ತಮನು. ಗುಣಪೂರ್ಣನೂ ಆಗಿರುವಿ. ನಾನು ನಿನ್ನ ದಾಸ' ಎಂಬ ಮನೋವೃತ್ತಿಯ ಪ್ರವಣತಾವೇ 'ವಂದನ' ಎಂದು ಕರೆಸಿಕೊಳ್ಳುತ್ತದೆ. 'ಜಿಜ್ಞಾಸಾ' ಎಂದರೆ ವಿಚಾರ ಎಂದರ್ಥ. ವಿಚಾರ ಎಂದರೆ ಇಂಥ ಲಿಂಗಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಅವನು ಸಕಲಕ್ಕೂ ಸ್ವಾಮಿಯಾಗಿದ್ದಾನೆ. ಇವೇ ಮೊದಲಾದ ಯುಕ್ತ್ಯನುಸಂಧಾನಾತ್ಮಕವಾದ ಮನೋ-ವೃತ್ತಿವಿಶೇಷವೇ ಆಗಿದೆ. ಈ ಕಾರಣದಿಂದ 'ಸದಾ ವಂದ್ಯಮ್' ಎಂಬುದರಿಂದ ಜಿಜ್ಞಾಸಾ ಶಬ್ದಾರ್ಥವು ಹೇಳಿದಂತಾಯಿತು. ಅದರ ಸಂಗ್ರಹವನ್ನು ಮಾಡಿದಂತಾಯಿತು.

'ಪ್ರಿಯತಮಮ್' ಎಂಬುದರಿಂದ ಭಕ್ತಿಯನ್ನು, 'ಅಶೇಷವಿಶೇಷತಃ' ಎಂಬುದರಿಂದ ವೈರಾಗ್ಯ-ವನ್ನು, 'ಆಪ್ಯತಮಮ್' ಎಂಬುದರಿಂದ ಶ್ರವಣಾದಿಗಳಿಂದ ಶ್ರೀಹರಿಯನ್ನು ತಿಳಿಯಬೇಕು ಎಂಬುದನ್ನು





ಹೇಳಿದ್ದಾರೆ. ಇದರಿಂದ ಸಾಕ್ಷಾತ್ಕಾರಕ್ಕೋಸ್ಕರವೇ ವೈರಾಗ್ಯ , ಭಕ್ತಿ , ಶ್ರವಣಾದಿಗಳು ಇರುತ್ತವೆಂದು ತಿಳಿಯಬೇಕು.

## ವಂದನೆಯ ಮಹತ್ವ

ಯಾದುಪತ್ಯ – ನನು ಕರಶಿರಃಸಂಯೋಗಾದೇರೇವ ವಂದನಾತ್ ಕಥಂ 'ವಂದ್ಯಮ್' ಇತ್ಯನೇನ ಪ್ರಥಮಸೂತ್ರಾರ್ಥಜಿಜ್ಞಾಸೋಕ್ತಿಃ? ಇತ್ಯತ ಆಹ ಮನೋವೃತ್ತೇರಿತಿ ॥ ತತ್ ಪ್ರಣವತಾ ಇತಿ ॥ 'ಮತ್ತಃ ತ್ವಮುತ್ಕೃಷ್ಟ' ಇತಿ ಸ್ವಾವಧಿಕಮ್ ಉತ್ಕರ್ಷವಿಷಯತಾ ಇತ್ಯರ್ಥಃ । ತತಶ್ಚ ಕರಶಿರಃಸಂಯೋಗಾದೌ ಉಕ್ತಭಗವದ್ವಿಷಯಕಮನೋವೃತ್ತಿವಿಶೇಷ ಏವ ವಂದನಮ್ । ತಚ್ಚ ಸದಾ ಕ್ರಿಯಮಾಣಮ್ ಉಪಾಸನಾರೂಪಮೇವ ಪರ್ಯವಸ್ಯತಿ । ಅತ ಏವ 'ಸದಾ' ಇತ್ಯಸ್ಯ ಅತ್ರೋತ್ತರತ್ರ ಚ ಅನ್ವಯ ಉಕ್ತ ಇತಿ ಭಾವಃ।

ವಂದನ ಎಂದರೆ 'ಕರಶಿರಃಸಂಯೋಗ' ಎಂದರ್ಥ. ಇದರಿಂದ ಪ್ರಥಮಸೂತ್ರದ ಅರ್ಥವೆನಿಸಿದ ಜಿಜ್ಞಾಸೆಯನ್ನು ಹೇಗೆ ಹೇಳಿದಂತಾಯಿತು? ಎಂಬ ಪ್ರಶ್ನೆಗೆ 'ಮನೋವೃತ್ತೇಃ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ತತ್‌ಪ್ರಣವತಾ' ಎಂದರೆ ನನಗಿಂತ ಶ್ರೀಹರಿಯು ಉತ್ಕೃಷ್ಟನಾಗಿದ್ದಾನೆಂಬ ಸ್ವಾವಧಿಕ ಉತ್ಕರ್ಷವಿಷಯಕವಾದ ಜ್ಞಾನ ಎಂದರ್ಥ. ಕರಶಿರಃಸಂಯೋಗಾದಿಗಳಲ್ಲೂ ಕೂಡ ಇಂಥ ಭಗವದ್ವಿಷಯಕಮನೋವೃತ್ತಿರೂಪ ವ್ಯಾಪಾರವೇ ಇರುತ್ತದೆ. ಇಂಥ ವಂದನೆಯನ್ನು ನಿರಂತರ ಮಾಡುತ್ತಿದ್ದರೆ ಅದೇ ಉಪಾಸನೆ ಎನಿಸಿಕೊಳ್ಳುತ್ತದೆ. ಆದ್ದರಿಂದ 'ಸದಾ' ಎಂಬುದಕ್ಕೆ ಎರಡೂ ಕಡೆ ಅನ್ವಯವನ್ನು ತಿಳಿಯಬೇಕು.

## 'ಅಧ್ಯಾಯಶೇಷೇಣ' ಎಂಬುದರ ವ್ಯಾಖ್ಯಾನ

ಕಾಶೀಟಿಪ್ಪಣಿ– ಅಧ್ಯಾಯಶೇಷೇಣೇತಿ ॥ ಚತುರ್ಥಸೂತ್ರೇಣ ಉಪಕ್ರಮಾದಿರೂಪಸಾಧಕೋಕ್ತ್ಯಾ ಪಂಚಮಸೂತ್ರೇಣ ಅವಾಚ್ಯತ್ವರೂಪಬಾಧಕನಿರಾಸೇನ ಚ ಸಾಮಾನ್ಯತ ಉತ್ತರಾಧಿಕರಣೈಶ್ಚ ಸಮನ್ವಯವಿವರಣಪರೈಃ ವಿಶೇಷತಶ್ಚ ಉಪಪಾದಿತಾ ಇತ್ಯರ್ಥಃ । ಯದ್ಯಪಿ ಆನಂದಮಯಾಧಿಕರಣಮಾರಭ್ಯೈವ ಅಧ್ಯಾಯತ್ವಾತ್ 'ಅಧ್ಯಾಯಶೇಷೇಣ' ಇತ್ಯಸಂಗತಮ್ । ತಥಾಽಪಿ ಪಂಚಾಧಿಕರಣ್ಯಾಧ್ಯಾಯಪಾದಪೀಠತ್ವೇನ ಅಧ್ಯಾಯಾದಿವ್ಯವಹಾರಮಧ್ಯಾಯಸಹಿತಶೇಷೇಣ ಇತ್ಯರ್ಥಂ ವಾಽಭಿಪ್ರೇತ್ಯ ತಥೋಕ್ತಮ್ ।





ಚತುರ್ಥಸೂತ್ರದಿಂದ ಉಪಕ್ರಮಾದಿ ಸಾಧಕಗಳನ್ನು ಶಾಸ್ತ್ರಾರ್ಥವಿಷಯದಲ್ಲಿ ಹೇಳಿದ್ದಾರೆ. ಐದ-ನೆಯ ಸೂತ್ರದಲ್ಲಿ 'ಅವಾಚ್ಯತ್ವ' ಎಂಬ ಬಾಧಕವನ್ನು ನಿರಾಕರಣೆ ಮಾಡಿದ್ದಾರೆ. ಹೀಗೆ ಸಾಮಾನ್ಯವಾಗಿ ಸಮನ್ವಯವನ್ನು ಮಾಡುತ್ತಿರುವ ಎರಡು ಅಧಿಕರಣಗಳಿಂದ ಹಾಗೂ ವಿಶೇಷವಾಗಿ ಸಮನ್ವಯ ಮಾಡಲು ಹೊರಟಿರುವ ಮುಂದಿನ ಅಧಿಕರಣಗಳಿಂದ ಎಂಬುದು 'ಅಧ್ಯಾಯಶೇಷೇಣ' ಎಂಬುದರ ಅರ್ಥವಾಗಿದೆ. ಆನಂದಮಯಾಧಿಕರಣದಿಂದ ಆರಂಭಿಸಿಯೇ ಅಧ್ಯಾಯ ಪ್ರಾರಂಭವನ್ನು ಪರಿಗಣಿ-ಸಬೇಕು. 'ಅಧ್ಯಾಯಶೇಷೇಣ' ಎಂದು ಹೇಳಿದ್ದು ಅಸಂಗತವಾಗುತ್ತದೆ. ಮತ್ತು ಇದು ಯುಕ್ತವೂ ಆಗುವುದಿಲ್ಲ. ಏಕೆಂದರೆ ಸಮನ್ವಯಾಧಿಕರಣ ಹಾಗೂ ಈಕ್ಷತ್ಯಧಿಕರಣಗಳನ್ನು ಸಂಗ್ರಹ ಮಾಡಿದಂತೆ ಆಗುವುದಿಲ್ಲ. ಆದ್ದರಿಂದ 'ಸಕಲಶಾಸ್ತ್ರಾರ್ಥಂ' ಎಂಬ ಪ್ರತಿಜ್ಞೆಗೆ ವಿರೋಧ ಬರುತ್ತದಲ್ಲವೇ?

ಇದು ತಪ್ಪು. ಏಕೆಂದರೆ ಪ್ರಾರಂಭದ ಐದು ಅಧಿಕರಣಗಳು ಅಧ್ಯಾಯದ ಪಾದಪೀಠ ಎನಿಸಿವೆ. ಆದ್ದರಿಂದ ಅಧ್ಯಾಯಪದದಿಂದ ಈ ಪಾದಪೀಠವನ್ನೂ ಕೂಡ ಪರಿಗಣಿಸಬಹುದು. ಅಥವಾ ಅಧ್ಯಾಯ-ದಿಂದ ಸಹಿತವಾದ ಉಳಿದ ಅಧಿಕರಣಗಳಿಂದ ಎಂದೂ ಅರ್ಥ ಮಾಡಬಹುದು. ಆಗ ಸಮನ್ವಯಾಧಿ-ಕರಣ ಹಾಗೂ ಈಕ್ಷತ್ಯಧಿಕರಣಗಳು ಅಧ್ಯಾಯದಿಂದ ಕೂಡಿದ ಶೇಷಭಾಗವಾಗಿದೆ ಎಂದು ಹೇಳಿದಂತಾ-ಗುತ್ತದೆ.

## ಸುಧಾ-ಪರಿಮಳ ಸಾರ

'ಸದಾ ವಂದ್ಯಮ್' ಎಂಬುದರಿಂದ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರಾರ್ಥ-ವನ್ನು ಹೇಳಿದ್ದಾರೆ. ನನಗಿಂತ ಭಗವಂತನು ಅತ್ಯಂತ ಉತ್ಕೃಷ್ಟನಾಗಿದ್ದಾನೆ ಎಂಬ ಮನೋ-ವ್ಯಾಪಾರವೇ ನಮಸ್ಕಾರ ಎನಿಸುತ್ತದೆ. ಜಿಜ್ಞಾಸೆಯು ಕೂಡ ಭಗವಂತನ ಉತ್ಕರ್ಷವನ್ನು ವಿಷಯೀಕರಿಸುವ ಮನನ ರೂಪವಾದ ಮನೋವ್ಯಾಪಾರವಿಶೇಷವೇ ಆಗಿದೆ. ಆದ್ದರಿಂದ ಜಿಜ್ಞಾಸೆಯು ನಮನವಿಶೇಷವೇ ಆಯಿತು. ಹಾಗಾಗಿ 'ಸದಾ ವಂದ್ಯಮ್' ಎಂಬ ಪದವು ನಿರಂತರ ಬ್ರಹ್ಮಜಿಜ್ಞಾಸೆ ಮಾಡಬೇಕು ಎಂಬರ್ಥವನ್ನು ಹೇಳುತ್ತಿದೆ. ಪ್ರಥಮಸೂತ್ರದಲ್ಲಿರುವ ಬ್ರಹ್ಮಶಬ್ದವು ಜಿಜ್ಞಾಸೆಗೆ ವಿಷಯನಾಗಿರುವವನು ಗುಣಪೂರ್ಣನಾಗಿದ್ದಾನೆಂದು ತಿಳಿಸುತ್ತಿದೆ. ಇದನ್ನು ಉಪಪಾದನೆ ಮಾಡಲು ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವನ್ನು ಹೇಳುವ ಎರಡನೆಯ ಸೂತ್ರ ಹೊರಟಿದೆ. ಇದೇ ವಿಷಯದಲ್ಲಿ ಶಾಸ್ತ್ರಪ್ರಮಾಣಗಳನ್ನು ಮೂರನೆಯ ಸೂತ್ರವು ಹೇಳುತ್ತಿದೆ. ಅದಕ್ಕನುಗುಣವಾಗಿ ಅನುವ್ಯಾಖ್ಯಾನಶ್ಲೋಕದಲ್ಲಿ 'ನಿಖಿಲಪೂರ್ಣ-ಗುಣೈಕದೇಹಂ' 'ಅಸ್ಯೋದ್ಭವಾದಿದಂ' 'ಅಪ್ರತಮಮಪ್ರಖಿಲೈಃ ಸುವಾಕ್ಯೈಃ' ಎಂಬ ಮೂರು





ವಿಶೇಷಣಗಳನ್ನು ಹೇಳಿದ್ದಾರೆ. ನಿಖಿಲಪೂರ್ಣಗುಣೈಕದೇಹಂ ಎಂಬುದು ಮೊದಲನೆಯ ಸೂತ್ರಾರ್ಥ. 'ಅಸ್ಯೋದ್ಭವಾದಿದಂ' ಎಂಬುದು ಎರಡನೆಯ ಸೂತ್ರಾರ್ಥ. 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬುದು ಮೂರನೆಯ ಸೂತ್ರಾರ್ಥವಾಗಿದೆ. ಪ್ರಥಮಸೂತ್ರಾರ್ಥ ಹಾಗೂ ದ್ವಿತೀಯಸೂತ್ರಾರ್ಥಗಳನ್ನು ಹೇಳುವ ಶಬ್ದಗಳ ನಡುವೆ ಮೂರನೆಯ ಸೂತ್ರಾರ್ಥವನ್ನು 'ಆಪ್ಯತಮಮಪ್ಯಖಿಲೈಸುವಾಕ್ಯೈಃ' ಎಂಬ ವಿಶೇಷಣವನ್ನು ಹೇಳಿದ್ದರಿಂದ ಹಿಂದಿನ ಮುಂದಿನ ಸೂತ್ರಾರ್ಥಗಳಲ್ಲಿ ಶಾಸ್ತ್ರವೇ ಪ್ರಮಾಣ ಎಂಬ ಪ್ರಮೇಯವು ಸೂಚಿತವಾಗಿದೆ. ಇದು ನ್ಯಾಯಸುಧೆಯಲ್ಲಿ ಮಾಡಿದ ವ್ಯಾಖ್ಯಾನ. ಆದರೆ ಸನ್ಯಾಯರತ್ನಾವಳೀ ಹಾಗೂ ನಯಚಂದ್ರಿಕಾಗಳಲ್ಲಿ 'ನಿಖಿಲಪೂರ್ಣಗುಣೈಕದೇಹಂ' ಎಂಬುದು ಪ್ರಥಮಾಧ್ಯಾಯದ ಸಾರ; 'ನಿರ್ದೋಷಂ' ಎಂಬುದು ಎರಡನೆಯ ಅಧ್ಯಾಯದ ಸಾರ, 'ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ' ಎಂಬುದು ಮೂರನೆಯ ಅಧ್ಯಾಯದ ಸಾರ, 'ಅಸ್ಯೋದ್ಭವಾದಿದಂ' ಎಂಬುದು ನಾಕನೆಯ ಅಧ್ಯಾಯದ ಸಾರ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

## ಪರಿಮಳ ವೈಶಿಷ್ಟ್ಯ –

* 'ಆಪ್ಯತಮಮ್ ಅಪ್ಯಖಿಲೈಃ ಸುವಾಕ್ಯೈಃ ಎಂಬ ತೃತೀಯಸೂತ್ರಾರ್ಥವನ್ನು ಪ್ರಥಮ ಹಾಗೂ ದ್ವಿತೀಯಸೂತ್ರಾರ್ಥಗಳ ನಡುವೆ ಹೇಳಿರುವುದಕ್ಕೆ ಮುಖ್ಯಕಾರಣವಿದೆಯೆಂದು ಉಪಪಾದನೆ ಮಾಡಲಾಗಿದೆ.

* ಸನ್ಯಾಯರತ್ನಾವಳಿ ಹಾಗೂ ನಯಚಂದ್ರಿಕಾಗಳಲ್ಲಿ ವ್ಯಾಖ್ಯಾನ ಮಾಡಿದ್ದನ್ನು ಉಲ್ಲೇಖಿಸಿ ಅಪೂರ್ವವಿಷಯವನ್ನು ತಿಳಿಸಿದ್ದಾರೆ.

## ಎರಡನೆಯ ಮೂರನೆಯ ಅಧ್ಯಾಯಗಳ ಸಾರ

**ಶ್ರೀಮನ್ನ್ಯಾಯಸುಧಾ– ಪ್ರಥಮಾಧ್ಯಾಯಾರ್ಥೇ ಶಂಕಿತದೋಷನಿರಾಸೋ ದ್ವಿತೀಯೇಽಭಿಹಿತಃ, ತಮಾಹ – ನಿರ್ದೋಷಮಿತಿ ॥**

**ಏವಂ ಬ್ರಹ್ಮಸ್ವರೂಪೇ ಸಿದ್ಧೇ ಅಧಿಕಾರಿಣಃ ತತ್ಪ್ರಸಾದಸಾಧನೋಪಾಯಭೂತತತ್ಸಾಕ್ಷಾತ್ಕಾರಜನನಾಯ ವೈರಾಗ್ಯಭಕ್ತಿಭ್ಯಾಮ್ ಅಖಿಲವೇದಾರ್ಥಶ್ರವಣಾದಿ**






**ತೃತೀಯೇ ನಿರೂಪಿತಮ್ । ತಸ್യಾಯಂ ಸಂಗ್ರಹಃ – ಅಶೇಷವಿಶೇಷತೋಽಪಿ ಪ್ರಿಯತಮಮ್ ಆಪ್ಯತಮಮ್ ಇತಿ ॥ ಲ್ಯಬ್ಲೋಪನಿಮಿತ್ತಾ ಪಂಚಮೀ । ಅಶೇಷಾನ್ ವಿಷಯವಿಶೇಷಾನ್ ವಿಹಾಯ ಜ್ಞಾತವ್ಯತಮಮ್' ಇತಿ । 'ಇಯದಾಮನನಾತ್' ಇತ್ಯಾದ್ಯರ್ಥಸೂಚನಮ್ – ಮಮೇತಿ ॥**

ಪ್ರಥಮಾಧ್ಯಾಯದಲ್ಲಿ ಸಕಲಗುಣಪರಿಪೂರ್ಣತ್ವವನ್ನು ಸಮರ್ಥಿಸಿದ್ದಾರೆ. ಈ ವಿಷಯ-ದಲ್ಲಿ ಅನೇಕ ದೋಷಗಳ ಆಶಂಕೆಯು ಪ್ರಾಪ್ತವಾಗುತ್ತದೆ. ಅವುಗಳ ನಿರಾಕರಣೆಯನ್ನು ಎರಡನೆಯ ಅಧ್ಯಾಯದಲ್ಲಿ ಮಾಡಿರುತ್ತಾರೆ. ಅದನ್ನೇ ಮಂಗಳಶ್ಲೋಕದಲ್ಲಿ 'ನಿರ್ದೋಷಂ' ಎಂಬ ವಿಶೇಷಣದಿಂದ ತಿಳಿಸಿದ್ದಾರೆ.

ಹೀಗೆ ಮೊದಲೆರಡು ಅಧ್ಯಾಯಗಳಿಂದ ಬ್ರಹ್ಮಸ್ವರೂಪವು ನಿರ್ಧಾರವಾಯಿತು. ಅನಂತರ ಅಧಿಕಾರಿಗಳಿಗೆ ಭಗವಂತನ ಪ್ರಸಾದ ಸಾಧನೋಪಾಯವೆನಿಸಿದ ಸಾಕ್ಷಾತ್ಕಾರ ಇವುಗಳ ಜನನಕ್ಕಾಗಿ ಸಾಕ್ಷಾತ್ಕಾರವು ಹುಟ್ಟಬೇಕು. ಅದಕ್ಕಾಗಿ ವೈರಾಗ್ಯ ಮತ್ತು ಭಕ್ತಿಗಳಿಂದ ಸಮಸ್ತವೇದಾರ್ಥದ ಶ್ರವಣಮನನಾದಿಗಳಲ್ಲಿ ತೊಡಗಬೇಕು. ಇದು ಮೂರನೆಯ ಅಧ್ಯಾಯದಲ್ಲಿ ನಿರೂಪಣೆ ಮಾಡಿದ ವಿಷಯ. ಇದರ ಸಂಗ್ರಹವನ್ನೇ 'ಅಶೇಷವಿಶೇಷತೋಽಪಿ ಪ್ರಿಯತಮಂ ಆಪ್ಯತಮಮ್' ಎಂಬೆರಡು ವಿಶೇಷಣಗಳಿಂದ ಮಾಡಿದ್ದಾರೆ. ಅಶೇಷವಿಶೇಷತೋಽಪಿ ಎಂಬಲ್ಲಿರುವ ಪಂಚಮೀವಿಭಕ್ತಿಯು ಲ್ಯಬ್ಲೋಪನಿಮಿತ್ತಕವಾಗಿದೆ. ಆದ್ದರಿಂದ ಅಶೇಷವಿಶೇಷವಿಷಯಗಳನ್ನೆಲ್ಲಾ ಬಿಟ್ಟು ಮುಖ್ಯವಾಗಿ ನಾರಾಯಣನೇ ತಿಳಿಯಲ್ಪಡತಕ್ಕವನು. 'ಇಯದಾಮನನಾತ್' ಎಂಬ ಸೂತ್ರದ ಅರ್ಥವನ್ನು 'ಮಮ' ಎಂಬುದರಿಂದ ಸೂಚನೆ ಮಾಡಿದ್ದಾರೆ.

## ಪ್ರಿಯತಮಮ್ ಎಂಬುದಕ್ಕೆ ಅನ್ವಯ

ಪರಿಮಳ– ನಿರ್ದೋಷಮಿತೀತಿ ॥ ಏತದಪಿ ಶಾಸ್ತ್ರಪ್ರಮಾಣಸಿದ್ಧಮ್ ಇತಿ

**ಸೂಚನಾಯ ತೃತೀಯಸೂತ್ರಾರ್ಥೋಕ್ತೇಃ ಪೂರ್ವಂ ನಿವೇಶಿತಮ್ ಇತಿ ಭಾವಃ। ಪ್ರಿಯತಮಸ್ಯೈವ ಆಪ್ತತಮತ್ವಾತ್ ಪ್ರಿಯತಮಮ್ ಇತ್ಯಸ್ಯೈವ ಆಪ್ತತಮಮ್ ಇತ್ಯರ್ಥಮುಪೇತ್ಯ ವಾ 'ಆಪ್ತತಮಮ್' ಇತ್ಯತ್ರಾಪ್ಯನುವರ್ತತ ಇತಿ ಭಾವೇನ ವಾ 'ಪ್ರಿಯತಮಮ್ ಆಪ್ತತಮಮ್' ಇತ್ಯುಕ್ತಮ್। ಅನುವೃತ್ತಿಪಕ್ಷೇ ಪ್ರಿಯತಮತ್ವಾತ್ ಜ್ಞಾತವ್ಯಮ್ ಇತಿ ಹೇತುಗರ್ಭಂ ಬೋಧ್ಯಮ್। ಮನಸಾऽऽಪ್ಯತ್ವಸ್ಯ ಜ್ಞಾತವ್ಯತ್ವಾನತಿರೇಕಾತ್।**

ದೋಷವಿದೂರತ್ವವೂ ಕೂಡ ಶಾಸ್ತ್ರಪ್ರಮಾಣದಿಂದ ಸಿದ್ಧವಾಗಿದೆ ಎಂಬುದನ್ನು ತಿಳಿಸಬೇಕು. ಆದಕ್ಕಾಗಿ 'ಆಪ್ತತಮಮ್ ಅಪ್ಯಖಿಲೈಃ ಸುವಾಕ್ಯೈಃ' ಎಂಬ ಮೂರನೆಯ ಸೂತ್ರದ ಅರ್ಥವನ್ನು ಪ್ರತಿಪಾದನೆ ಮಾಡುವ ವಿಶೇಷಣದ ಮೊದಲೇ ನಿರ್ದೋಷಂ ಎಂಬುದನ್ನು ಉಲ್ಲೇಖ ಮಾಡಿದ್ದಾರೆ.

ಯಾವುದು ಪ್ರಿಯತಮವೋ ಅದೇ ಹೊಂದಲು ಯೋಗ್ಯವಾಗಿರುತ್ತದೆ. ಆದ್ದರಿಂದ ಪ್ರಿಯತಮಂ ಎಂಬ ಶಬ್ದಕ್ಕೆ ಆಪ್ತತಮ ಎಂಬರ್ಥವನ್ನೂ ಕೂಡ ವಿವಕ್ಷಿಸಬಹುದು. ಈ ಅಭಿಪ್ರಾಯದಿಂದ 'ಪ್ರಿಯತಮಂ ಆಪ್ತತಮಂ' ಎಂದು ಹೇಳಿದ್ದಾರೆ. 'ಅಶೇಷವಿಶೇಷತೋऽಪಿ ಪ್ರಿಯತಮಂ ಆಪ್ತತಮಂ' ಎಂಬುದಾಗಿ 'ಆಪ್ತತಮಂ' ಎಂಬ ವಿಶೇಷಣವನ್ನು ಅನುವೃತ್ತಿಮಾಡಿಕೊಳ್ಳಬೇಕು. ಈ ಉದ್ದೇಶದಿಂದ 'ಪ್ರಿಯತಮಂ ಆಪ್ತತಮಂ' ಎಂದೂ ಕೂಡ ಹೇಳಿದ್ದಾರೆ. ಈ ಪಕ್ಷದಲ್ಲಿ ಪ್ರಿಯತಮನಾದ್ದರಿಂದ ಆಪ್ತತಮನಾಗಿದ್ದಾನೆ ಎಂದರೆ ಜ್ಞಾತವ್ಯನಾಗಿದ್ದಾನೆ ಎಂದರ್ಥ. ಇದು ಹೇತುಗರ್ಭವಿಶೇಷಣವಾಗಿದೆ. ಮನಸ್ಸಿನಿಂದ ಹೊಂದುವುದು ಹಾಗೂ ಅವನನ್ನು ತಿಳಿದು ಹೃದಯದಲ್ಲಿಟ್ಟುಕೊಳ್ಳುವುದು ಎರಡೂ ಒಂದೇ ಅರ್ಥ ಹೊರತು ಬೇರೆಯಲ್ಲ.

ವಿಶೇಷವಿಚಾರ – ಯಾವುದು ಅತ್ಯಂತಪ್ರಿಯವಾಗಿರುತ್ತದೋ ಅದನ್ನೇ ಪಡೆಯಲು ಇಚ್ಛಿಸುತ್ತಾರೆ. ಹಾಗಾಗಿ ಪ್ರಿಯತಮವಾದದ್ದು ಆಪ್ತತಮ ಆಗಿಯೇ ಇರುತ್ತದೆ. ಈ ಅಭಿಪ್ರಾಯದಿಂದ ಪ್ರಿಯತಮಂ ಆಪ್ತತಮಂ ಎಂದು ಹೇಳಿದ್ದಾರೆ. ಅಥವಾ ಆಪ್ತತಮಂ ಎಂಬಲ್ಲೂ ಕೂಡ ಪ್ರಿಯತಮಂ ಎಂಬುದನ್ನು ಅನುವೃತ್ತಿಮಾಡಿಕೊಳ್ಳಬೇಕು ಎಂಬ ಅಭಿಪ್ರಾಯದಿಂದ ಪ್ರಿಯತಮಮಪಿ ಆಪ್ತತಮಂ ಎಂದು

ಹೇಳಿದ್ದಾರೆ. ಅನುವೃತ್ತಿಪಕ್ಷದಲ್ಲಿ ಪ್ರಿಯತಮನಾದ್ದರಿಂದ ತಿಳಿಯಲು ಯೋಗ್ಯನಾಗಿದ್ದಾನೆ ಎಂಬುದಾಗಿ ಹೇತುಗರ್ಭವಿಶೇಷಣವನ್ನು ತಿಳಿಯಬೇಕು.

## ಭಕ್ತಿ ವೈರಾಗ್ಯಗಳು ಹೇಗೆ ಲಾಭವಾಗುತ್ತವೆ?

ಪರಿಮಳ– ನನು 'ಪ್ರಿಯತಮಮ್' ಇತ್ಯನೇನ ಭಕ್ತೇರ್ಲಾಭೇಽಪಿ 'ಅಶೇಷ' ಇತ್ಯನೇನ ಕಥಂ ವೈರಾಗ್ಯಲಾಭಃ? ಇತ್ಯತ ಆಹ – ಲ್ಯಬ್‌ಲೋಪೇತಿ ॥ ಪಂಚಮೀವಿಧಾನೇ 'ಲ್ಯಬ್ಲೋಪೇ ಕರ್ಮಣ್ಯುಪಸಂಖ್ಯಾನಮ್' ಇತಿ ವಾರ್ತಿಕೇ ಲ್ಯಬಂತಾಪ್ರಯೋಗೇ ತದರ್ಥೇ ಗಮ್ಯಮಾನೇ ಲ್ಯಬಂತಂ ಪ್ರತಿ ಕರ್ಮಕಾರಕೇ ಪಂಚಮೀ ವಾಚ್ಯಾ ಇತ್ಯುಕ್ತತ್ವಾದಿತಿ ಭಾವಃ। ತರ್ಹಿ ಈಶ್ವರಜ್ಞಾನಸ್ಯ ಸರ್ವಸದಧಿಕಾರಿತ್ವಾತ್ 'ಮಮ' ಇತಿ ವ್ಯರ್ಥಮ್, ಇತ್ಯತ ಆಹ – ಇಯದಿತಿ ॥ ಉಪಾಸನಾಪಾದೇ 'ಇಯದಾಮನನಾತ್' ಇತ್ಯಧಿಕರಣೇ ಉಪಾಸನಾಧಿಕಾರಿಣಾಮ್ ಇಯತ್ ಏತಾವನ್ಮುಖ್ಯಪ್ರಾಣಾವಧಿತ್ವಮೇವ । 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ ಇತಿ ಆಮನನಾತ್' ಇತಿ ಪ್ರಾಣಸ್ಯ ಸರ್ವಾಧಿಕಾರ್ಯುತ್ತಮತ್ವೋಕ್ತೇಃ ಗ್ರಂಥಕೃತಶ್ಚ ಪ್ರಾಣಾವತಾರತ್ವಾತ್ 'ಮಮ' ಇತಿ ಯುಕ್ತಮ್ ಇತ್ಯರ್ಥಃ। 'ಆದಿ'ಪದೇನ 'ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್' ಇತ್ಯಾದೇಃ ಪ್ರಾಣೋತ್ತಮತ್ವಪರಸ್ಯ ಪರಿಗ್ರಹಃ।

'ಪ್ರಿಯತಮಂ' ಎಂಬ ವಿಶೇಷಣದಿಂದ ಭಕ್ತಿಯು ತಿಳಿಯಲ್ಪಡುತ್ತದೆ. 'ಅಶೇಷ' ಎಂಬ ಪದದಿಂದ ವೈರಾಗ್ಯವು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ ಲ್ಯಬ್‌ಲೋಪನಿಮಿತ್ತಾ ಪಂಚಮೀ ಎಂಬುದರಿಂದ ಉತ್ತರಿಸಿದ್ದಾರೆ. 'ಲ್ಯಬ್‌ಲೋಪೇ ಕರ್ಮಣ್ಯಧಿಕರಣೇ ಚ' ಎಂಬ ವಾರ್ತಿಕದ ಪ್ರಕಾರ ಲ್ಯಬಂತಾವ್ಯಯದ ಪ್ರಯೋಗವಿಲ್ಲದೇ ಲ್ಯಪ್ ಅವ್ಯಯದ ಅರ್ಥವನ್ನು ಸೂಚಿಸಬೇಕಾದರೆ ಅವ್ಯಯದ ಕರ್ಮ ಅಧಿಕರಣದ ಕಾರಕಗಳಿಗೆ ಪಂಚಮೀ ವಿಭಕ್ತಿಯನ್ನು ಹೇಳಬೇಕು. ಈ ವಾರ್ತಿಕದಂತೆ ಇಲ್ಲಿ ಅಶೇಷವಿಶೇಷತಃ ಎಂಬುದಾಗಿ ಪಂಚಮೀ ವಿಭಕ್ತಿಯು ಪ್ರಾಪ್ತವಾಗಿದೆ. ಹಾಗಾಗಿ ವಿಹಾಯ = ಬಿಟ್ಟು ಎಂಬ ಲ್ಯಬಂತಪ್ರಯೋಗವನ್ನು ಮಾಡದಿದ್ದರೂ





ತದರ್ಥವು ಗಮ್ಯವಾಗುತ್ತಿರುವುದರಿಂದ ಲ್ಯಬಂತವನ್ನು ಕುರಿತು ಅಶೇಷವಿಶೇಷ ಎಂಬ ಪದದ ಮುಂದೆ ಪಂಚಮೀವಿಭಕ್ತಿಯು ಪ್ರಾಪ್ತವಾಗಿದೆ.

ಈಶ್ವರಜ್ಞಾನದಲ್ಲಿ ಸಕಲ ಸಜ್ಜನರಿಗೂ ಅಧಿಕಾರವಿದೆ. ಆದ್ದರಿಂದ ಮಮ ಎಂಬುದಾಗಿ ಹೇಳಿದ್ದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಇಯದಾಮನನಾತ್' ಎಂಬುದಾಗಿ ಉತ್ತರಿಸಿದ್ದಾರೆ. ಉಪಾಸನಾಪಾದದಲ್ಲಿ ಬರುವ 'ಇಯದಾಮನನಾಧಿಕರಣದಲ್ಲಿ ಉಪಾಸನಾಧಿಕಾರಿಗಳು ಮುಖ್ಯಪ್ರಾಣದೇವರವರೆಗೆ ಇದ್ದಾರೆ' ಎಂದು ಮುಖ್ಯಪ್ರಾಣದೇವರನ್ನು ಅವಧಿಯಾಗಿ ಹೇಳಿದ್ದಾರೆ. ಮತ್ತು 'ಪ್ರಾಣೋ ವಾವ ಸರ್ವೇಭ್ಯಃ ಜ್ಯಾಯಾನ್' ಎಂಬ ವಚನದಂತೆ ಸಕಲ ಉಪಾಸನಾಧಿಕಾರಿಗಳಲ್ಲಿ ಮುಖ್ಯಪ್ರಾಣನೇ ಸರ್ವೋತ್ತಮನಾಗಿದ್ದಾನೆ ಎಂದು ಹೇಳಲಾಗಿದೆ. ಹಾಗಾಗಿ ಗ್ರಂಥಕಾರರು ಮುಖ್ಯಪ್ರಾಣದೇವರ ಅವತಾರರಾಗಿರುವುದರಿಂದ ಮಮ ಎಂದು ಹೇಳಿದ್ದು ಯುಕ್ತವಾಗಿದೆ. ಮುಖ್ಯಪ್ರಾಣದೇವರಿಗೆ ಜೀವೋತ್ತಮತ್ವಪ್ರತಿಪಾದಕವಾದ 'ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್' ಮೊದಲಾದ ಸೂತ್ರಗಳನ್ನು ಆದಿಪದದಿಂದ ಸಂಗ್ರಹ ಮಾಡಬೇಕು.

ವಿಶೇಷವಿಚಾರ –'ಪ್ರಿಯತಮಮ್' ಎಂಬ ವಿಶೇಷಣದಿಂದ ಭಕ್ತಿಯು ಲಭಿಸಬಹುದು. ಆದರೆ ವೈರಾಗ್ಯವೆಂಬ ಅರ್ಥವು ಅಶೇಷವೆಂಬ ವಿಶೇಷಣದಿಂದ ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ 'ಲ್ಯಬ್ಲೋಪನಿಮಿತ್ತಾ ಪಂಚಮೀ' ಎಂದು ಉತ್ತರಿಸುತ್ತಾರೆ. 'ಲ್ಯಬ್ಲೋಪೇ ಕರ್ಮಣ್ಯಧಿಕರಣೇ ಚೋಪಸಂಖ್ಯಾನಮ್' ಎಂದು ವಾರ್ತಿಕವಿದೆ. ಅದರ ಅರ್ಥ ಲ್ಯಬಂತಾವ್ಯಯವನ್ನು ಪ್ರಯೋಗ ಮಾಡದೇ ಇದ್ದಾಗ ಅದರ ಅರ್ಥವು ತಿಳಿದು ಬರುತ್ತಿರುವಾಗ ಅದರ ಕರ್ಮಕಾರಕಕ್ಕೆ ಅಥವಾ ಅಧಿಕರಣಕಾರಕಕ್ಕೆ ಪಂಚಮೀವಿಭಕ್ತಿಯನ್ನು ಹೇಳಬೇಕು. 'ಪ್ರಾಸಾದಂ ಆರುಹ್ಯ ಪ್ರೇಕ್ಷತೇ' ಎಂಬ ಅರ್ಥದಲ್ಲಿ ಪ್ರಾಸಾದಾತ್ ಪ್ರೇಕ್ಷತೇ ಎಂಬುದಾಗಿಯೂ, 'ಆಸನೇ ಉಪವಿಶ್ಯ ಪ್ರೇಕ್ಷತೇ' ಎಂಬ ಅರ್ಥದಲ್ಲಿ ಆಸನಾತ್ ಪ್ರೇಕ್ಷತೇ ಎಂಬುದಾಗಿಯೂ ಪ್ರಯೋಗವಿದೆ. ಹಾಗೆಯೇ ಇಲ್ಲಿಯೂ ಅಶೇಷಾನ್ ವಿಷಯವಿಶೇಷಾನ್ ವಿಹಾಯ ಜ್ಞಾತವ್ಯತಮಮ್ (ಜಗತ್ತಿನಲ್ಲಿರುವ ಎಲ್ಲಾ ವಿಶೇಷವಾದ ವಸ್ತುಗಳನ್ನೂ ಬಿಟ್ಟು ಇವನನ್ನೇ ತಿಳಿಯಬೇಕು) ಎಂಬ ಅರ್ಥವು ತಿಳಿದುಬರುತ್ತಿರುವುದರಿಂದ ಅಶೇಷವಿಶೇಷತಃ ಎಂಬಲ್ಲಿ ಪಂಚಮೀವಿಭಕ್ತಿಯು ಬಂದಿದೆ.





## ಪಂಚಮೀವಿಧಾನದ ಬಗ್ಗೆ

ವಾಕ್ಯಾರ್ಥಚಂದ್ರಿಕಾ– 'ಪಂಚಮೀವಿಧಾನೇ ಲ್ಯಬ್ಲೋಪೇ ಕರ್ಮಣ್ಯಧಿಕರಣೇ ಚೋಪಸಂಖ್ಯಾನಮ್' ಇತ್ಯತೋ ಲ್ಯಬಂತಲೋಪೋಽತ್ರ ಕರ್ಮಣಿ ಪಂಚಮೀತ್ಯಾಹ – ಲ್ಯಬ್ಲೋಪೇತಿ ॥

'ಲ್ಯಬ್ಲೋಪೇ ಕರ್ಮಣ್ಯಧಿಕರಣೇ ಚ' ಇತಿ ವಾರ್ತಿಕಸ್ಯ ಅಯಮರ್ಥಃ 'ಲ್ಯಬಂತಾಪ್ರಯೋಗೇ ತದರ್ಥೇ ಗಮ್ಯಮಾನೇ ಲ್ಯಬಂತಂ ಪ್ರತಿ ಕರ್ಮಕಾರಕೇಽಧಿಕರಣಕಾರಕೇ ಚ ಪಂಚಮೀ ವಾಚ್ಯಾ' ಇತಿ । ಪ್ರಾಸಾದಾತ್ ಪ್ರೇಕ್ಷತೇ, ಆಸನಾತ್ ಪ್ರೇಕ್ಷತೇ । ಪ್ರಾಸಾದಮಾರುಹ್ಯ, ಆಸನೇ ಉಪವಿಶ್ಯ ಪ್ರೇಕ್ಷತ ಇತ್ಯರ್ಥಃ। ಶ್ವಶುರಾತ್ ಜಿಹ್ರೇತಿ ॥ ಶ್ವಶುರಂ ವೀಕ್ಷ್ಯ ಇತ್ಯರ್ಥಃ। ಗಮ್ಯಮಾನಾಪಿ ಕ್ರಿಯಾಕಾರಕವಿಭಕ್ತೀನಾಂ ನಿಮಿತ್ತಮ್ । ಕಸ್ಮಾತ್ ತ್ವಮ್ । ನದ್ಯಾಃ।

ಪಂಚಮಿಯಲ್ಲೂ ವಿಧಾನ ಮಾಡುವಾಗ 'ಲ್ಯಬ್ಲೋಪೇ ಕರ್ಮಣ್ಯಧಿಕರಣೇ ಚೋಪಸಂಖ್ಯಾನಮ್' ಎಂಬ ಸೂತ್ರದಿಂದ ಲ್ಯಬಂತಲೋಪವು ಆಗಿದೆ. ಕರ್ಮಾರ್ಥದಲ್ಲಿ ಪಂಚಮಿಯೂ ಪ್ರಾಪ್ತವಾಗಿದೆ ಎಂಬುದಾಗಿ 'ಲ್ಯಬ್ಲೋಪ' ಇತ್ಯಾದಿವಾಕ್ಯವು ಪ್ರತಿಪಾದನೆ ಮಾಡುತ್ತಿದೆ.

'ಲ್ಯಬ್ಲೋಪೇ ಕರ್ಮಣ್ಯಧಿಕರಣೇ ಚ' ಎಂಬ ವಾರ್ತಿಕಕ್ಕೆ ಹೀಗರ್ಥ. ಲ್ಯಬಂತವಾದ ಶಬ್ದವನ್ನು ಪ್ರಯೋಗ ಮಾಡದಿದ್ದರೂ ತದರ್ಥವು ಗಮ್ಯಮಾನವಾದಾಗ ಲ್ಯಬಂತವನ್ನು ಕುರಿತು ಕರ್ಮಕಾರಕದಲ್ಲಿ ಮತ್ತು ಅಧಿಕರಣಕಾರಕದಲ್ಲಿ ಪಂಚಮೀ ವ್ಯಭಕ್ತಿಯು ಬರುತ್ತದೆ. ಉದಾಹರಣೆ– ಪ್ರಾಸಾದಾತ್ ಪ್ರೇಕ್ಷತೇ, ಆಸನಾತ್ ಪ್ರೇಕ್ಷತೇ ಎಂಬುದಕ್ಕೆ ಪ್ರಾಸಾದಮಾರುಹ್ಯ ಪ್ರೇಕ್ಷತೇ, ಆಸನೇ ಉಪವಿಶ್ಯ ಪ್ರೇಕ್ಷತೇ ಎಂದರ್ಥ.

ಶ್ವಶುರಾತ್ ಜಿಹ್ರ ಎಂಬುದಕ್ಕೆ 'ಮಾವನನ್ನು ನೋಡಿ' ಎಂದರ್ಥ. ಗಮ್ಯಮಾನವಾದರೂ ಕೂಡ ಕ್ರಿಯಾಕಾರಕವಿಭಕ್ತಿಗಳಿಗೆ ನಿಮಿತ್ತತ್ವವು ಪ್ರಾಪ್ತವಾಗುತ್ತದೆ.

### ರಸಘಟ್ಟ

## 'ಅಖಿಲವೇದಾರ್ಥಶ್ರವಣಾದಿ' ಎಂಬುದರ ವ್ಯಾಖ್ಯಾನ

ಯಾದುಪತ್ಯ– ಅಖಿಲವೇದಾರ್ಥಶ್ರವಣಾದಿತಿ ॥ 'ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್' ಇತ್ಯಾದಿನಾ ಉಪಾಸನಾಪಾದೇ ಸರ್ವವೇದಾರ್ಥಶ್ರವಣಮನನನಿದಿಧ್ಯಾಸನಾನಿ





ನಿರೂಪಿತಾನಿ ಇತ್ಯರ್ಥಃ । ನನು 'ಅಶೇಷವಿಶೇಷತೋಽಪಿ ಪ್ರಿಯತಮಮ್ ಇತಿ ಭಕ್ತಿರುಕ್ತಾಽಸ್ತು । ಅಶೇಷಾತ್ ಸ್ವಾತ್ಮಾತ್ಮೀಯಸಮಸ್ತವಸ್ತುನೋ ವಿಶೇಷೇಣ ಪ್ರಿಯತಮಮ್ ಇತಿ ವೈರಾಗ್ಯೋಕ್ತಿಸ್ತು ಕಥಮಾಗತಾ ಇತ್ಯಪೇಕ್ಷಯಾಮ್ ಆಹ – ಲ್ಯಬ್ಲೋಪೇತ್ಯಾದಿನಾ ॥ 'ಲ್ಯಬ್ಲೋಪೇ ಕರ್ಮಣ್ಯಧಿಕರಣೇ ಚ ಪಂಚಮೀ ವಕ್ತವ್ಯಾ' ಇತಿ ವಾರ್ತಿಕಾದಿತಿ ಭಾವಃ ॥

'ಅಖಿಲವೇದಾರ್ಥಶ್ರವಣಾದಿ' ಎಂದು ನ್ಯಾಯಸುಧೆಯಲ್ಲಿ ಹೇಳಿದ್ದಾರೆ. 'ಸರ್ವವೇದಾಂತ-ಪ್ರತ್ಯಯಂ ಚೋದನಾದ್ಯವಿಶೇಷಾತ್' ಎಂಬ ಉಪಾಸನಾಪಾದದಲ್ಲಿರುವ ಸೂತ್ರದಲ್ಲಿ ಸರ್ವವೇದಾರ್ಥ-ವನ್ನು ಶ್ರವಣ ಮಾಡಬೇಕು, ಮನನ ಮಾಡಬೇಕು ನಿದಿಧ್ಯಾಸನ ಮಾಡಬೇಕು ಇತ್ಯಾದಿ ವಿಚಾರಗಳು ನಿರೂಪಿತವಾಗಿವೆ ಎಂದಿದರ ಅರ್ಥ. 'ಅಶೇಷವಿಶೇಷತೋಽಪಿ' ಎಂಬುದರಿಂದ ಭಕ್ತಿಯನ್ನು ಹೇಳಿ-ದಂತಾಯಿತು; ಸಕಲವಾದ ಸ್ವಾತ್ಮಾತ್ಮೀಯವಸ್ತುಗಳಿಂದ ವಿಶೇಷವಾಗಿ ಪ್ರಿಯತಮನಾಗಿದ್ದಾನೆಂಬ ವೈರಾಗ್ಯ-ವನ್ನು ಹೇಗೆ ಹೇಳಿದಂತಾಯಿತು? ಎಂಬ ಪ್ರಶ್ನೆಗೆ 'ಲ್ಯಬ್‌ಲೋಪ' ಎಂಬಿತ್ಯಾದಿಯಾಗಿ ಉತ್ತರಿಸಿದ್ದಾರೆ. 'ಲ್ಯಬ್ಲೋಪೇ ಕರ್ಮಣ್ಯಧಿಕರಣೇ ಚ ಪಂಚಮೀ ವಕ್ತವ್ಯಾ' ಎಂಬ ವಾರ್ತಿಕದಿಂದ ಎಂಬುದು ಇದರ ಅರ್ಥ.

## ಸುಧಾ-ಪರಿಮಳ ಸಾರ

'ನಿರ್ದೋಷಂ' ಎಂಬ ವಿಶೇಷಣವು ಎರಡನೇ ಅಧ್ಯಾಯದ ಪ್ರಮೇಯವನ್ನು ಸಂಗ್ರಹಿಸಿದೆ. ಇದರಿಂದ ಪ್ರಥಮಾಧ್ಯಾಯದಿಂದ ಸಿದ್ಧವಾದ ಪ್ರಮೇಯದಲ್ಲಿ ಬರುವ ಆಶಂಕೆಗಳನ್ನು ಪರಿ-ಹರಿಸಿದಂತಾಯಿತು. ಮೂರನೆಯ ಸೂತ್ರಾರ್ಥವನ್ನು ಹೇಳುವ ಮೊದಲೇ ಎರಡನೇ ಅಧ್ಯಾಯದ ಪ್ರಮೇಯವನ್ನು ಸಂಗ್ರಹ ಮಾಡಿದ್ದರಿಂದ ನಿರ್ದೋಷತ್ವದ ವಿಷಯದಲ್ಲೂ ಶಾಸ್ತ್ರಗಳೇ ಪ್ರಮಾಣವಾಗಿವೆ ಎಂಬುದನ್ನು ಸೂಚಿಸಿದ್ದಾರೆ. ಹೀಗೆ ಮೊದಲೆರಡು ಅಧ್ಯಾಯ-ಗಳಿಂದ ಬ್ರಹ್ಮಸ್ವರೂಪವು ನಿರ್ಧಾರವಾದ ಮೇಲೆ ಇಂಥ ಬ್ರಹ್ಮನನ್ನು ಯಾವ ಅಧಿಕಾರಿಯು ಹೊಂದುತ್ತಾನೋ ಅವನಿಗೆ ಭಗವಂತನ ಪ್ರಸಾದವು ಅತ್ಯಾವಶ್ಯಕ. ಅಂಥ ಪ್ರಸಾದಕ್ಕೆ ಸಾಧನಾಭೂತವಾದ ಉಪಾಯವೆಂದರೆ ಸಾಕ್ಷಾತ್ಕಾರವೇ ಆಗಿದೆ. ಈ ಸಾಕ್ಷಾತ್ಕಾರಕ್ಕಾಗಿ ವೈರಾಗ್ಯ ಮತ್ತು ಭಕ್ತಿಗಳನ್ನು ಹೊಂದಬೇಕು. ಹೀಗೆ ಸಕಲ ವೇದಾರ್ಥಗಳ ಶ್ರವಣ, ಮನನಾದಿಗಳಲ್ಲಿ ತೊಡಗಬೇಕು ಎಂದು ಮೂರನೆಯ ಅಧ್ಯಾಯದಲ್ಲಿ ನಿರೂಪಣೆ ಮಾಡಿದ್ದಾರೆ. ಅದರ ಸಂಗ್ರಹವನ್ನೇ 'ಅಶೇಷವಿಶೇಷತೋಽಪಿ' 'ಪ್ರಿಯತಮಂ' 'ಆಪ್ತತಮಂ' ಎಂದು ಹೇಳಿದ್ದಾರೆ. ಅಶೇಷವಿಶೇಷತಃ ಎಂಬಲ್ಲಿರುವ ಪಂಚಮೀ ವಿಭಕ್ತಿಯಿಂದ ಎಲ್ಲಾ ಪದಾರ್ಥಗಳನ್ನು ಬಿಟ್ಟು





ಶ್ರೀಹರಿಯನ್ನೇ ಸರ್ವೋತ್ತಮನೆಂದು ತಿಳಿಯಬೇಕು ಎಂಬರ್ಥವು ತಿಳಿಯುತ್ತದೆ. ಲ್ಯಬ್ ಲೋಪವಾಗಿರುವ ಪಂಚಮೀವಿಭಕ್ತಿಯನ್ನು ಪ್ರಯೋಗಮಾಡಿದ್ದರಿಂದ ವೈರಾಗ್ಯವು ಪ್ರಾಪ್ತವಾಯಿತು. 'ಮಮ' ಎಂಬ ವಿಶೇಷಣದಿಂದ ಮೂರನೆಯ ಅಧ್ಯಾಯದಲ್ಲಿರುವ ಇಯದಾಮನನಾತ್ ಎಂಬ ಅಧಿಕರಣದ ಪ್ರಮೇಯವನ್ನು ಸಂಗ್ರಹಿಸಿದ್ದಾರೆ.

## ಪರಿಮಳವೈಶಿಷ್ಟ್ಯ

* ಪ್ರಿಯತಮವಾದದ್ದೇ ಆಪ್ಯತಮವಾಗಿದೆ. ಆಪ್ಯತಮ ಹಾಗೂ ಪ್ರಿಯತಮಗಳು ಸಮಾನಾರ್ಥಕವಾಗಿವೆ ಎಂಬ ಉಪಪಾದನೆಯು ಅಪೂರ್ವವಾಗಿದೆ.

* ಆಪ್ಯತಮಮ್ ಎಂಬಲ್ಲೂ ಪ್ರಿಯತಮಂ ಎಂಬುದನ್ನು ಅನುವೃತ್ತಿ ಮಾಡಬೇಕು. ಆಗ ಪ್ರಿಯತಮತ್ವಾತ್ ಜ್ಞಾತವ್ಯಮ್ ಎಂಬುದಾಗಿ ಹೇತುಗರ್ಭವಿಶೇಷಣವೆಂದು ಹೇಳಿದಂತಾಗುತ್ತದೆ.

* ಅಶೇಷವಿಶೇಷತಃ ಎಂಬುದು ಲ್ಯಬ್‌ಲೋಪನಿಮಿತ್ತ ಪಂಚಮೀವಿಭಕ್ತಿಯಾಗಿದೆ. ಏತನ್ಮೂಲಕ ವೈರಾಗ್ಯವು ಪ್ರಾಪ್ತವಾಗುತ್ತದೆ.

* ಮಮ ಎಂಬ ವಿಶೇಷಣದಿಂದ ಇಯದಾಮನನಾಧಿಕರಣದ ಅರ್ಥವನ್ನು ಹೇಗೆ ಸೂಚನೆ ಮಾಡಿದ್ದಾರೆಂಬುದನ್ನು ಎರಡು ಕಾರಣಗಳಿಂದ ಸುಂದರವಾಗಿ ಉಪಪಾದನೆ ಮಾಡಿದ್ದಾರೆ.

## ಮಂಗಳಶ್ಲೋಕದಲ್ಲಿ ನಾಕನೆಯ ಅಧ್ಯಾಯದ ಸಂಗ್ರಹ

**ಶ್ರೀಮನ್ನ್ಯಾಯಸುಧಾ– ಪ್ರಸನ್ನಂ ಚ ತದ್ಯಾದೃಶಂ ಪುಮರ್ಥಂ ಪ್ರಯಚ್ಛತಿ ತತ್ ಸ್ವರೂಪನಿರೂಪಣಂ ಚತುರ್ಥೇಽಭಿಹಿತಮ್ । ತದಭಿಧಾನಮ್ – ಆಪ್ಯತಮಮ್ ಇತಿ ॥ ಆಪ್ತಿಮಾತ್ರಸ್ಯ ನಿತ್ಯಸಿದ್ಧತ್ವಾತ್ ತಮಪಾ ತಾಂ ವಿಶಿನಷ್ಟೀತಿ ॥**

ಪ್ರಸನ್ನನಾದ ಭಗವಂತನು ಅಧಿಕಾರಿಗಳಿಗೆ ಯಾವ ಪುರುಷಾರ್ಥವನ್ನು ನೀಡುತ್ತಾನೋ ಆ ಪುರುಷಾರ್ಥದ ಸ್ವರೂಪದ ನಿರೂಪಣೆಯು ನಾಕನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಅದರ ಸಂಗ್ರಹವನ್ನೇ 'ಆಪ್ಯತಮಮ್' ಎಂಬುದರಿಂದ ಮಾಡಿರುತ್ತಾರೆ. ಪರಮಾತ್ಮನ ಪ್ರಾಪ್ತಿಯು ನಿತ್ಯಸಿದ್ಧವಾಗಿದೆ. ಆದರೂ ಅದರಲ್ಲಿರುವ ವೈಶಿಷ್ಟ್ಯವನ್ನು





ತಮಪ್‌ಪ್ರತ್ಯಯದಿಂದ ತಿಳಿಸುತ್ತಿದ್ದಾರೆ. ಹೀಗೆ ವಿಶೇಷಣಗಳಿಗೆ ಪ್ರಯೋಜನವನ್ನು ತಿಳಿಯ-ಬೇಕು.

ಇಲ್ಲಿಗೆ ನ್ಯಾಯಸುಧೆಯಲ್ಲಿ ಅನುವ್ಯಾಖ್ಯಾನದ
ಮೊದಲನೆಯ ಪದ್ಯದ ವ್ಯಾಖ್ಯಾನವು ಸಮಾಪ್ತವಾಯಿತು.

## 'ಆಪ್ಯತಮಂ' ಎಂಬುದರ ವ್ಯಾಖ್ಯಾನ

**ಪರಿಮಳ– 'ಪ್ರಿಯತಮಮ್' ಇತ್ಯಸ್ಯ ಪ್ರಾಕ್ 'ಆಪ್ಯತಮಮ್' ಇತಿ ಪ್ರತಿಪದಂ ದತ್ತಮ್ । ತದೇವ ಅನುವದತಿ – ಆಪ್ಯತಮಮ್ ಇತೀತಿ ॥ ನಿತ್ಯಸಿದ್ಧತ್ವಾದಿತಿ ॥ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯಾದೇರಿತಿ ಭಾವಃ । ತಮಪಾ ಇತಿ ॥ ಅತಿಶಯಾರ್ಥಕತಮಪ್‌ಪ್ರತ್ಯಯೇನ ಶ್ವೇತದ್ವೀಪಾದಿಸ್ಥರೂಪವಿಶೇಷಪ್ರಾಪ್ತಿರೇವ ಇಹ 'ಆಪ್ತಿ'ಶಬ್ದಾರ್ಥ ಇತಿ ಭಾವೇನ ತಾಂ ಪ್ರಾಪ್ತಿಂ ವಿಶೇಷಣಯುಕ್ತಾಂ ಕರೋತಿ ಇತ್ಯರ್ಥಃ। 'ಇತಿ'ಶಬ್ದ ಆದ್ಯಪದ್ಯವ್ಯಾಖ್ಯಾಸಮಾಪ್ತೌ।**

'ಪ್ರಿಯತಮಂ' ಎಂಬುದರ ಮೊದಲು 'ಆಪ್ಯತಮಂ' ಎಂಬುದನ್ನು ವಿವಕ್ಷಿಸಬೇಕು. ಅದನ್ನೇ ಆಪ್ಯತಮಮಿತಿ ಎಂಬುದಾಗಿ ಅನುವಾದ ಮಾಡುತ್ತಿದ್ದಾರೆ. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಮುಂತಾದ ಪ್ರಮಾಣವಾಕ್ಯಗಳ ಆಧಾರದಿಂದ ಭಗವಂತನ ಪ್ರಾಪ್ತಿಯು ನಿತ್ಯಸಿದ್ಧವಾಗಿದೆ ಎಂಬುದು 'ನಿತ್ಯಸಿದ್ಧತ್ವಾತ್' ಎಂಬುದರ ಅಭಿಪ್ರಾಯ.

ತಮಪ್‌ಪ್ರತ್ಯಯವು ಅತಿಶಯಾರ್ಥದಲ್ಲಿದೆ. ಶ್ವೇತದ್ವೀಪ, ಅನಂತಾಸನ, ವೈಕುಂಠ ಮೊದ-ಲಾದವುಗಳಲ್ಲಿರುವ ರೂಪವಿಶೇಷಗಳನ್ನು ಹೊಂದುವುದೇ ಪ್ರಾಪ್ತಿ ಎಂಬ ಪದದ ಅರ್ಥ-ವಾಗಿದೆ. ಈ ಅಭಿಪ್ರಾಯದಿಂದ ಪ್ರಾಪ್ತಿಯಲ್ಲಿ ವೈಶಿಷ್ಟ್ಯವನ್ನು ತೋರಿಸಲು ಆಪ್ಯತಮಮ್ ಎಂಬಲ್ಲಿ ತಮಪ್‌ಪ್ರತ್ಯಯವನ್ನು ಹೇಳಿರುತ್ತಾರೆ. ಇತಿಶಬ್ದವು ಮೊದಲನೆಯ ಪದ್ಯದ ವ್ಯಾಖ್ಯಾನ-ವು ಸಮಾಪ್ತವಾಯಿತು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

ವಿಶೇಷವಿಚಾರ – ಪರಮಾತ್ಮನ ಸ್ವರೂಪವನ್ನು ತಿಳಿದು ಯಾವ ಅಧಿಕಾರಿಯು ಶ್ರವಣ, ಮನನ,







ನಿದಿಧ್ಯಾಸನಗಳಲ್ಲಿ ತೊಡಗುತ್ತಾನೋ ಅಂತಹವನ ವಿಷಯದಲ್ಲಿ ಭಗವಂತನು ಪ್ರಸನ್ನನಾಗುತ್ತಾನೆ. ತನ್ನ ಸಾಕ್ಷಾತ್ಕಾರವನ್ನು ನೀಡಿ ಅಂತಿಮವಾಗಿ ಮೋಕ್ಷವನ್ನೇ ದಯಪಾಲಿಸುತ್ತಾನೆ. ಇದು ನಾಕನೆಯ ಅಧ್ಯಾಯದ ಸಾರ. ಅದನ್ನು ಶ್ರೀಮದಾಚಾರ್ಯರು ಆಪ್ಯತಮಮ್ ಎಂಬುದರಿಂದ ತಿಳಿಸಿದ್ದಾರೆ. ಎಲ್ಲೆಡೆಯೂ ವ್ಯಾಪ್ತನಾದ ಭಗವಂತನ ಪ್ರಾಪ್ತಿಯು ಸಂಸಾರಾವಸ್ಥೆಯಲ್ಲಿಯೂ ಕೂಡ ಅಧಿಕಾರಿಗೆ ಇದ್ದೇ ಇರುತ್ತದೆ. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' - ಒಳಗೆ ಹೊರಗೆ ಎಲ್ಲೆಡೆಯೂ ನಾರಾಯಣನು ವ್ಯಾಪ್ತನಾಗಿದ್ದಾನೆ ಎಂಬ ಪ್ರಮಾಣಶ್ಲೋಕವು ಇದನ್ನೇ ಸ್ಪಷ್ಟಪಡಿಸುತ್ತಿದೆ. ಹೀಗಿರುವಾಗ ಅವನನ್ನು ಹೊಂದುವುದು ಎಂದರೆ ಏನರ್ಥ? ಎಂಬ ಪ್ರಶ್ನೆಗೆ ಶ್ರೀಮದಾಚಾರ್ಯರು 'ಆಪ್ಯತಮಮ್' ಎಂಬುದರಿಂದಲೇ ಉತ್ತರಿಸಿದ್ದಾರೆ. ಇಲ್ಲಿರುವ ತಮಪ್ ಪ್ರತ್ಯಯವು ಅತಿಶಯಾರ್ಥದಲ್ಲಿದೆ. ಶ್ವೇತದ್ವೀಪ, ಅನಂತಾಸನ, ವೈಕುಂಠಸ್ಥಳಗಳಲ್ಲಿರುವ ಭಗವಂತನ ಪ್ರಾಪ್ತಿಯಾಗುತ್ತದೆಂಬುದನ್ನು ಈ ಪ್ರತ್ಯಯವು ಸೂಚನೆ ಮಾಡಿದೆ.

## ಏಳು ವ್ಯಾಖ್ಯಾನಗಳ ಆನುಪೂರ್ವಿ ಅರ್ಥಪೂರ್ಣ

ವಾಕ್ಯಾರ್ಥಚಂದ್ರಿಕಾ – ಅತ್ರ ಪ್ರಥಮೇ ನತಿಸ್ತುತಿರೂಪೋಭಯವಿಧಸ್ಯಾಪಿ ಮಂಗಲಸ್ಯಾನುಷ್ಠಾನಮ್ । ದ್ವಿತೀಯಾದಿಚತುರ್ಷು ನತೇರೇವಾನುಷ್ಠಾನಮ್ । ವಿಶೇಷಣಾನಾಂ ಚ ಕಂಠೋಕ್ತನತ್ಯುಪಪಾದಕತ್ವಮ್ । ತತ್ರಾಪಿ ಪ್ರಥಮೇ ವಿಶೇಷಣಾನಾಂ ನತಿಪ್ರಯೋಜಕಧರ್ಮಕಥನಪರತ್ವಮ್। ದ್ವಿತೀಯೇ ನತಿಪ್ರಯೋಜಕಸ್ವರೂಪನಿರ್ಧಾರಣಾರ್ಥಕಲಕ್ಷಣಪರತ್ವಮ್ । ತೃತೀಯೇ ಸ್ವರೂಪನಿರ್ಧಾರಕಲಕ್ಷಣೇ ಸಾಧಕಕಥನಪರತ್ವಮ್ । ಚತುರ್ಥೇ ತನ್ನಿರ್ಧಾರಕೇ ಲಕ್ಷಣೇ ಪ್ರಮಾಣೇ ವಾ ಬಾಧಕಪರಿಹಾರಪರತ್ವಮ್ । ಷಷ್ಠೇ ತೂಭಯಪರತ್ವೇಽಪಿ ಅಸ್ಯ ಪದ್ಯಸ್ಯ ವಿಶೇಷಣಾನಾಂ ನಾರಾಯಣಪದವ್ಯಾಖ್ಯಾನದ್ವಾರಾ ಏತದ್‌ಪದ್ಯಾಭಿಪ್ರೇತಸ್ತುತ್ಯರ್ಥತ್ವಮ್ । ಸಪ್ತಮೇ ತು ಏತದ್ ಪದ್ಯತಾತ್ಪರ್ಯವಿಷಯೀಭೂತನತಿಸ್ತುತಿಪರತ್ವಾಭಾವೇಽಪಿ ಏತದ್ ಪದ್ಯೋಕ್ತನತಿವಿಶೇಷ್ಯನಾರಾಯಣವಿಶೇಷಣಾನಾಂ ನತೇರ್ಯಚ್ಛಾಸ್ತ್ರಾರ್ಥವ್ಯಾಖ್ಯಾನಾರ್ಥತ್ವಂ ತಚ್ಛಾಸ್ತ್ರಾರ್ಥಸಂಕ್ಷೇಪಕಥನಪರತ್ವಮಿತಿ ಪೂರ್ವಪೂರ್ವಪ್ರಾಬಲ್ಯಕ್ರಮಃ ಪಕ್ಷಣಾಂ ದ್ರಷ್ಟವ್ಯಃ ॥ (ಪ್ರಥಮೇ ದ್ವಿತೀಯೇ ತೃತೀಯೇ ಚತುರ್ಥೇ ಇತಿ । ದ್ವಿತೀಯೇ ತೃತೀಯೇ ಚತುರ್ಥೇ ಪಂಚಮೇ ಇತಿ ಕ್ರಮೇಣಾರ್ಥೋ ಜ್ಞೇಯಃ । ಪೂರ್ವಂ 'ದ್ವಿತೀಯಾದಿಷು ಚತುರ್ಷು' ಇತಿ ದ್ವಿತೀಯಸ್ಯ ಪ್ರಾಥಮ್ಯೋಕ್ತಿಃ)

ಮಂಗಳಶ್ಲೋಕಕ್ಕೆ ನ್ಯಾಯಸುಧಾಕಾರರು ಒಟ್ಟು ಏಳು ಬಗೆಯಲ್ಲಿ ವ್ಯಾಖ್ಯಾನ ಮಾಡಿದರು.



ತಮಪ್‌ಪ್ರತ್ಯಯದಿಂದ ತಿಳಿಸುತ್ತಿದ್ದಾರೆ. ಹೀಗೆ ವಿಶೇಷಣಗಳಿಗೆ ಪ್ರಯೋಜನವನ್ನು ತಿಳಿಯ-ಬೇಕು.

ಇಲ್ಲಿಗೆ ನ್ಯಾಯಸುಧೆಯಲ್ಲಿ ಅನುವ್ಯಾಖ್ಯಾನದ
ಮೊದಲನೆಯ ಪದ್ಯದ ವ್ಯಾಖ್ಯಾನವು ಸಮಾಪ್ತವಾಯಿತು.

## 'ಆಪ್ಯತಮಂ' ಎಂಬುದರ ವ್ಯಾಖ್ಯಾನ

ಪರಿಮಳ– 'ಪ್ರಿಯತಮಮ್' ಇತ್ಯಸ್ಯ ಪ್ರಾಕ್ 'ಆಪ್ಯತಮಮ್' ಇತಿ ಪ್ರತಿಪದಂ ದತ್ತಮ್ । ತದೇವ ಅನುವದತಿ – ಆಪ್ಯತಮಮ್ ಇತೀತಿ ॥ ನಿತ್ಯಸಿದ್ಧತ್ವಾದಿತಿ ॥ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯಾದೇರಿತಿ ಭಾವಃ । ತಮಪಾ ಇತಿ ॥ ಅತಿಶಯಾರ್ಥಕತಮಪ್‌ಪ್ರತ್ಯಯೇನ ಶ್ವೇತದ್ವೀಪಾದಿಸ್ಥರೂಪವಿಶೇಷಪ್ರಾಪ್ತಿರೇವ ಇಹ 'ಆಪ್ತಿ'ಶಬ್ದಾರ್ಥ ಇತಿ ಭಾವೇನ ತಾಂ ಪ್ರಾಪ್ತಿಂ ವಿಶೇಷಣಯುಕ್ತಾಂ ಕರೋತಿ ಇತ್ಯರ್ಥಃ। 'ಇತಿ'ಶಬ್ದ ಆದ್ಯಪದ್ಯವ್ಯಾಖ್ಯಾಸಮಾಪ್ತೌ।

'ಪ್ರಿಯತಮಂ' ಎಂಬುದರ ಮೊದಲು 'ಆಪ್ಯತಮಂ' ಎಂಬುದನ್ನು ವಿವಕ್ಷಿಸಬೇಕು. ಅದನ್ನೇ ಆಪ್ಯತಮಮಿತಿ ಎಂಬುದಾಗಿ ಅನುವಾದ ಮಾಡುತ್ತಿದ್ದಾರೆ. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಮುಂತಾದ ಪ್ರಮಾಣವಾಕ್ಯಗಳ ಆಧಾರದಿಂದ ಭಗವಂತನ ಪ್ರಾಪ್ತಿಯು ನಿತ್ಯಸಿದ್ಧವಾಗಿದೆ ಎಂಬುದು 'ನಿತ್ಯಸಿದ್ಧತ್ವಾತ್' ಎಂಬುದರ ಅಭಿಪ್ರಾಯ.

ತಮಪ್‌ಪ್ರತ್ಯಯವು ಅತಿಶಯಾರ್ಥದಲ್ಲಿದೆ. ಶ್ವೇತದ್ವೀಪ, ಅನಂತಾಸನ, ವೈಕುಂಠ ಮೊದ-ಲಾದವುಗಳಲ್ಲಿರುವ ರೂಪವಿಶೇಷಗಳನ್ನು ಹೊಂದುವುದೇ ಪ್ರಾಪ್ತಿ ಎಂಬ ಪದದ ಅರ್ಥ-ವಾಗಿದೆ. ಈ ಅಭಿಪ್ರಾಯದಿಂದ ಪ್ರಾಪ್ತಿಯಲ್ಲಿ ವೈಶಿಷ್ಟ್ಯವನ್ನು ತೋರಿಸಲು ಆಪ್ಯತಮಮ್ ಎಂಬಲ್ಲಿ ತಮಪ್‌ಪ್ರತ್ಯಯವನ್ನು ಹೇಳಿರುತ್ತಾರೆ. ಇತಿಶಬ್ದವು ಮೊದಲನೆಯ ಪದ್ಯದ ವ್ಯಾಖ್ಯಾನ-ವು ಸಮಾಪ್ತವಾಯಿತು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

ವಿಶೇಷವಿಚಾರ – ಪರಮಾತ್ಮನ ಸ್ವರೂಪವನ್ನು ತಿಳಿದು ಯಾವ ಅಧಿಕಾರಿಯು ಶ್ರವಣ, ಮನನ,





ನಿದಿಧ್ಯಾಸನಗಳಲ್ಲಿ ತೊಡಗುತ್ತಾನೋ ಅಂತಹವನ ವಿಷಯದಲ್ಲಿ ಭಗವಂತನು ಪ್ರಸನ್ನನಾಗುತ್ತಾನೆ. ತನ್ನ ಸಾಕ್ಷಾತ್ಕಾರವನ್ನು ನೀಡಿ ಅಂತಿಮವಾಗಿ ಮೋಕ್ಷವನ್ನೇ ದಯಪಾಲಿಸುತ್ತಾನೆ. ಇದು ನಾಕನೆಯ ಅಧ್ಯಾಯದ ಸಾರ. ಅದನ್ನು ಶ್ರೀಮದಾಚಾರ್ಯರು ಆಪ್ಯತಮಮ್ ಎಂಬುದರಿಂದ ತಿಳಿಸಿದ್ದಾರೆ. ಎಲ್ಲೆಡೆಯೂ ವ್ಯಾಪ್ತನಾದ ಭಗವಂತನ ಪ್ರಾಪ್ತಿಯು ಸಂಸಾರಾವಸ್ಥೆಯಲ್ಲಿಯೂ ಕೂಡ ಅಧಿಕಾರಿಗೆ ಇದ್ದೇ ಇರುತ್ತದೆ. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' - ಒಳಗೆ ಹೊರಗೆ ಎಲ್ಲೆಡೆಯೂ ನಾರಾಯಣನು ವ್ಯಾಪ್ತನಾಗಿದ್ದಾನೆ ಎಂಬ ಪ್ರಮಾಣಶ್ಲೋಕವು ಇದನ್ನೇ ಸ್ಪಷ್ಟಪಡಿಸುತ್ತಿದೆ. ಹೀಗಿರುವಾಗ ಅವನನ್ನು ಹೊಂದುವುದು ಎಂದರೆ ಏನರ್ಥ? ಎಂಬ ಪ್ರಶ್ನೆಗೆ ಶ್ರೀಮದಾಚಾರ್ಯರು 'ಆಪ್ಯತಮಮ್' ಎಂಬುದರಿಂದಲೇ ಉತ್ತರಿಸಿದ್ದಾರೆ. ಇಲ್ಲಿರುವ ತಮಪ್ ಪ್ರತ್ಯಯವು ಅತಿಶಯಾರ್ಥದಲ್ಲಿದೆ. ಶ್ವೇತದ್ವೀಪ, ಅನಂತಾಸನ, ವೈಕುಂಠಸ್ಥಳಗಳಲ್ಲಿರುವ ಭಗವಂತನ ಪ್ರಾಪ್ತಿಯಾಗುತ್ತದೆಂಬುದನ್ನು ಈ ಪ್ರತ್ಯಯವು ಸೂಚನೆ ಮಾಡಿದೆ.

## ಏಳು ವ್ಯಾಖ್ಯಾನಗಳ ಆನುಪೂರ್ವಿ ಅರ್ಥಪೂರ್ಣ

ವಾಕ್ಯಾರ್ಥಚಂದ್ರಿಕಾ – ಅತ್ರ ಪ್ರಥಮೇ ನತಿಸ್ತುತಿರೂಪೋಭಯವಿಧಸ್ಯಾಪಿ ಮಂಗಲಸ್ಯಾನುಷ್ಠಾನಮ್ । ದ್ವಿತೀಯಾದಿಚತುರ್ಷು ನತೇರೇವಾನುಷ್ಠಾನಮ್ । ವಿಶೇಷಣಾನಾಂ ಚ ಕಂಠೋಕ್ತನತ್ಯುಪಪಾದಕತ್ವಮ್ । ತತ್ರಾಪಿ ಪ್ರಥಮೇ ವಿಶೇಷಣಾನಾಂ ನತಿಪ್ರಯೋಜಕಧರ್ಮಕಥನಪರತ್ವಮ್ । ದ್ವಿತೀಯೇ ನತಿಪ್ರಯೋಜಕಸ್ವರೂಪನಿರ್ಧಾರಣಾರ್ಥಕಲಕ್ಷಣಪರತ್ವಮ್ । ತೃತೀಯೇ ಸ್ವರೂಪನಿರ್ಧಾರಕಲಕ್ಷಣೇ ಸಾಧಕಕಥನಪರತ್ವಮ್ । ಚತುರ್ಥೇ ತನ್ನಿರ್ಧಾರಕೇ ಲಕ್ಷಣೇ ಪ್ರಮಾಣೇ ವಾ ಬಾಧಕಪರಿಹಾರಪರತ್ವಮ್ । ಷಷ್ಠೇ ತೂಭಯಪರತ್ವೇಽಪಿ ಅಸ್ಯ ಪದ್ಯಸ್ಯ ವಿಶೇಷಣಾನಾಂ ನಾರಾಯಣಪದವ್ಯಾಖ್ಯಾನದ್ವಾರಾ ಏತದ್‌ಪದ್ಯಾಭಿಪ್ರೇತಸ್ತುತ್ಯರ್ಥತ್ವಮ್ । ಸಪ್ತಮೇ ತು ಏತದ್ ಪದ್ಯತಾತ್ಪರ್ಯವಿಷಯೀಭೂತನತಿಸ್ತುತಿಪರತ್ವಾಭಾವೇಽಪಿ ಏತದ್ ಪದ್ಯೋಕ್ತನತಿವಿಶೇಷ್ಯನಾರಾಯಣವಿಶೇಷಣಾನಾಂ ನತೇರ್ಯಚ್ಛಾಸ್ತ್ರಾರ್ಥವ್ಯಾಖ್ಯಾನಾರ್ಥತ್ವಂ ತಚ್ಛಾಸ್ತ್ರಾರ್ಥಸಂಕ್ಷೇಪಕಥನಪರತ್ವಮಿತಿ ಪೂರ್ವಪೂರ್ವಪ್ರಾಬಲ್ಯಕ್ರಮಃ ಪಕ್ಷಾಣಾಂ ದ್ರಷ್ಟವ್ಯಃ ॥ (ಪ್ರಥಮೇ ದ್ವಿತೀಯೇ ತೃತೀಯೇ ಚತುರ್ಥೇ ಇತಿ । ದ್ವಿತೀಯೇ ತೃತೀಯೇ ಚತುರ್ಥೇ ಪಂಚಮೇ ಇತಿ ಕ್ರಮೇಣಾರ್ಥೋ ಜ್ಞೇಯಃ । ಪೂರ್ವಂ 'ದ್ವಿತೀಯಾದಿಷು ಚತುರ್ಷು' ಇತಿ ದ್ವಿತೀಯಸ್ಯ ಪ್ರಾಥಮ್ಯೋಕ್ತಿಃ)

ಮಂಗಳಶ್ಲೋಕಕ್ಕೆ ನ್ಯಾಯಸುಧಾಕಾರರು ಒಟ್ಟು ಏಳು ಬಗೆಯಲ್ಲಿ ವ್ಯಾಖ್ಯಾನ ಮಾಡಿದರು.





ಮೊದಲನೆಯ ವ್ಯಾಖ್ಯಾನವು ನಮಸ್ಕಾರರೂಪವಾಗಿದೆ ಹಾಗೂ ಸ್ತುತಿರೂಪವಾಗಿದೆ. ಎರಡು ರೀತಿಯಲ್ಲೂ ಕೂಡ ಮಂಗಳವನ್ನು ಆಚರಣೆ ಮಾಡಿದಂತಾಯಿತು ಎಂದು ಸಮರ್ಥಿಸಲಾಯಿತು. ಎರಡು ಮೂರು ನಾಕು ಮತ್ತು ಐದನೆಯ ವ್ಯಾಖ್ಯಾನಗಳಲ್ಲಿ ನಮಸ್ಕಾರವನ್ನೇ ಅನುಷ್ಠಾನ ಮಾಡಿದಂತಾಯಿತು. ವಿಶೇಷಣಗಳು ಕಂಠತಃ ನಮಸ್ಕಾರಕ್ಕೆ ಉಪಪಾದಕಗಳಾಗಿವೆ ಎಂಬುದನ್ನು ಸಮರ್ಥನೆ ಮಾಡಲಾಯಿತು. ಇವುಗಳಲ್ಲೂ ಕೂಡ ಅವಾಂತರವ್ಯತ್ಯಾಸವಿದೆ. ಮೊದಲನೆಯ ಪಕ್ಷದಲ್ಲಿ ವಿಶೇಷಣಗಳು ನಮಸ್ಕಾರಕ್ಕೆ ಪ್ರಯೋಜಕವಾದ ಧರ್ಮಗಳನ್ನು ಹೇಳುತ್ತಿವೆ. ಎರಡನೆಯ ವ್ಯಾಖ್ಯಾನದಲ್ಲಿ ನಮಸ್ಕಾರಕ್ಕೆ ಪ್ರಯೋಜಕವಾದ ಲಕ್ಷಣಗಳನ್ನು ಹೇಳುತ್ತಿವೆ. ಮೂರನೆಯ ವ್ಯಾಖ್ಯಾನದಲ್ಲಿ ಸ್ವರೂಪನಿರ್ಧಾರಕವಾದ ಲಕ್ಷಣದಲ್ಲಿ ಸಾಧಕಪ್ರಮಾಣಗಳನ್ನು ಹೇಳಲಾಗಿದೆ. ನಾಕನೆಯ ವ್ಯಾಖ್ಯಾನದಲ್ಲಿ ಸ್ವರೂಪನಿರ್ಧಾರಕವಾದ ಲಕ್ಷಣ ಹಾಗೂ ಪ್ರಮಾಣಗಳಲ್ಲಿ ಬಾಧಕವನ್ನು ಪರಿಹಾರ ಮಾಡಲಾಗಿದೆ. ಆದ್ದರಿಂದ ಪ್ರಥಮಪಕ್ಷಕ್ಕಿಂತಲೂ ಇವು ದುರ್ಬಲವಾಗಿವೆ. ಹೀಗೆ ಎರಡರಿಂದ ಐದನೆಯ ಪಕ್ಷದ ತನಕ ವ್ಯಾಖ್ಯಾನಕ್ರಮದಲ್ಲಿ ಇರುವ ಆನುಪೂರ್ವಿಯು ಅತ್ಯಂತ ಸ್ವರಸವಾಗಿದೆ. ಇಲ್ಲಿಯವರೆಗೆ ಐದು ಬಗೆಯ ವ್ಯಾಖ್ಯಾನಗಳನ್ನು ತಿಳಿದಿದ್ದಾಯಿತು. ಇನ್ನು ಆರನೆಯ ವ್ಯಾಖ್ಯಾನವು ಉಭಯಪರವಾದರೂ ಕೂಡ ಈ ಪದ್ಯದಲ್ಲಿರುವ ಪ್ರತಿಯೊಂದು ವಿಶೇಷಣಗಳು ನಾರಾಯಣಪದವನ್ನೇ ವ್ಯಾಖ್ಯಾನ ಮಾಡುತ್ತಿವೆ. ತನ್ಮೂಲಕವಾಗಿ ಏತತ್ ಪದ್ಯದಿಂದ ಅಭಿಪ್ರೇತವಾದ ಸ್ತುತಿಪರವಾಗಿವೆ ಎಂದು ಸಮರ್ಥಿಸಲಾಗಿದೆ. ಏಳನೆಯ ವ್ಯಾಖ್ಯಾನದಲ್ಲಿ ಈ ಪದ್ಯದ ತಾತ್ಪರ್ಯವಿಷಯೀಭೂತವಾದ ನಮಸ್ಕಾರ ಹಾಗೂ ಸ್ತುತಿಗಳಲ್ಲಿ ಅಭಿಪ್ರಾಯ ಇದೆಯೆಂದು ಸಮರ್ಥನೆ ಮಾಡದಿದ್ದರೂ ಕೂಡ ಇದೇ ಪದ್ಯದಲ್ಲಿ ಹೇಳಲ್ಪಟ್ಟ ನಮಸ್ಕಾರಕ್ಕೆ ವಿಶೇಷಣನಾದ ನಾರಾಯಣನಲ್ಲಿ ಯಾವ ವಿಶೇಷಣಗಳಿವೆಯೋ ನಮಸ್ಕಾರವು ಯಾವ ಶಾಸ್ತ್ರಾರ್ಥದ ವಿಷಯಕ್ಕೋಸ್ಕರ ಸಾರ್ಥಕವಾಗಿದೆಯೋ ಅಂಥ ಶಾಸ್ತ್ರಾರ್ಥವನ್ನು ಸಂಕ್ಷೇಪವಾಗಿ ಸಂಗ್ರಹಿಸಲಾಗಿದೆ. ಹೀಗೆ ಮುಂದಿನ ಪಕ್ಷಗಳಿಗಿಂತ ಹಿಂದಿನ ಪಕ್ಷಗಳು ಪ್ರಬಲವಾಗಿವೆ. ಈ ಕ್ರಮದಲ್ಲಿ ಏಳು ಬಗೆಯ ವ್ಯಾಖ್ಯಾನಗಳು ಸ್ವರಸ ಸುಂದರವಾಗಿವೆ.

ವಿಶೇಷವಿವರಣೆ – ಮೊದಲನೆಯ ವ್ಯಾಖ್ಯಾನ – 'ನಾರಾಯಣಂ ಸನ್ನಮಾಮಿ' ಎಂಬುದಾಗಿ ನಾರಾಯಣನಿಗೆ ನಮನವನ್ನು ಮಾಡಿದ್ದಾರೆ. ಇದರಿಂದ ನತಿರೂಪವಾದ ಮಂಗಳವನ್ನು ಆಚರಣೆ ಮಾಡಿದಂತಾಯಿತು. ಉಳಿದೆಲ್ಲ ಪದಗಳು ನಾರಾಯಣನ ಪ್ರಶಂಸೆಗಾಗಿಯೇ ಪ್ರವೃತ್ತವಾಗಿವೆ ಎಂದು ಹೇಳಿದ್ದರಿಂದ ಇದೇ ಮಂಗಳಶ್ಲೋಕವು ಸ್ತುತಿರೂಪವೂ ಕೂಡ ಆಯಿತು. ಹೀಗೆ ಮೊದಲನೆಯ ವ್ಯಾಖ್ಯಾನವು ನತಿರೂಪ ಹಾಗೂ ಸ್ತುತಿರೂಪವಾದ ಮಂಗಳಾಚರಣೆಯಾಗಿದೆಯೆಂದು ಹೇಳುತ್ತಿದೆ.





ದ್ವಿತೀಯಾದಿ ನಾಕು ಪಕ್ಷಗಳು – ಎರಡನೆಯ ವ್ಯಾಖ್ಯಾನದಿಂದ ಐದನೆಯ ವ್ಯಾಖ್ಯಾನದ ತನಕ ಈ ಮಂಗಳಶ್ಲೋಕವು ನಮನರೂಪವಾದ ಮಂಗಳಾಚರಣೆಯೇ ಆಗಿದೆ. ನಮನ ಮಾಡಬೇಕೆಂದರೆ ನಮ್ಯನಾದವನ ಸ್ವರೂಪವು ನಿರ್ಧಾರವಾಗಬೇಕು. ಆ ಸ್ವರೂಪದ ನಿರ್ಧಾರಕ್ಕೋಸ್ಕರ ಲಕ್ಷಣವನ್ನು ಎರಡನೆಯ ವ್ಯಾಖ್ಯಾನದಲ್ಲಿ ಹೇಳಿದರು. ಅನಂತರ ಆ ಲಕ್ಷಣದಲ್ಲಿ ಪ್ರಮಾಣವನ್ನು ಹೇಳಿದರು. ಆ ಪ್ರಮಾಣದಲ್ಲಿ ಬಾಧಕವನ್ನು ಅನಂತರ ಪರಿಹರಿಸಿದರು. ಹೀಗೆ ಈ ನಾಕು ವ್ಯಾಖ್ಯಾನಗಳು ಒಂದು ಪಂಗಡವಾಗಿವೆ. ಇವೆಲ್ಲವೂ ಸ್ತುತಿರೂಪವಾದ ಮಂಗಳಾಚರಣೆಯು ಇರುವುದಿಲ್ಲ.

ಎರಡನೆಯ ವ್ಯಾಖ್ಯಾನ – ನತಿಗೆ ಪ್ರಯೋಜಕವಾದ ವಿಶಿಷ್ಟತ್ವ, ಇಷ್ಟತ್ವ, ಅಧಿಕೃತತ್ವ ಎಂಬ ಧರ್ಮಗಳನ್ನು ಪ್ರತಿಪಾದನೆ ಮಾಡಿದರು.

ಮೂರನೆಯ ವ್ಯಾಖ್ಯಾನ – ನತಿಗೆ ಪ್ರಯೋಜಕವಾದ ಸ್ವರೂಪವನ್ನು ನಿರ್ಧಾರ ಮಾಡಲು ನಾರಾಯಣನ ಲಕ್ಷಣವನ್ನು ಸಮರ್ಥನೆ ಮಾಡಿದರು.

ನಾಕನೆಯ ವ್ಯಾಖ್ಯಾನ – ನಾರಾಯಣನ ಸ್ವರೂಪವನ್ನು ನಿರ್ಧಾರಮಾಡುವ ಲಕ್ಷಣದಲ್ಲಿ ಸಾಧಕವನ್ನು ಹೇಳಿದರು.

ಐದನೆಯ ವ್ಯಾಖ್ಯಾನ – ಸ್ವರೂಪನಿರ್ಧಾರಕವಾದ ಲಕ್ಷಣದಲ್ಲಿ ಮತ್ತು ಪ್ರಮಾಣದಲ್ಲಿ ಯಾವ ಬಾಧಕಗಳು ಪ್ರಾಪ್ತವಾದವೋ ಅದನ್ನು ಪರಿಹಾರ ಮಾಡಲಾಗಿದೆ.

ಈ ಎರಡು ಮೂರು, ನಾಕು, ಐದನೆಯ ವ್ಯಾಖ್ಯಾನಗಳಲ್ಲಿ ಕೇವಲ ನತಿರೂಪವಾದ ಮಂಗಳಾಚರಣೆಯನ್ನಷ್ಟೇ ಅಂಗೀಕರಿಸಲಾಗಿದೆ. ಆದ್ದರಿಂದ ಮೊದಲನೆಯ ವ್ಯಾಖ್ಯಾನಕ್ಕಿಂತ ಈ ನಾಕು ವ್ಯಾಖ್ಯಾನಗಳಲ್ಲಿ ಹೀನವಾದ ದೌರ್ಬಲ್ಯವಿದೆ.

ಆರನೆಯ ವ್ಯಾಖ್ಯಾನ – ನಾರಾಯಣನನ್ನು ನಮಸ್ಕಾರ ಮಾಡುವ ಮೂಲಕ ನತಿರೂಪಕವಾದ ಮಂಗಳಾಚರಣೆಯೂ ಆಗಿದೆ. ಜೊತೆಯಲ್ಲಿ ನಾರಾಯಣಶಬ್ದಾರ್ಥವನ್ನು ನಿರ್ವಚನ ಮಾಡುವ ಮೂಲಕ ಸ್ತೋತ್ರವನ್ನು ಕೂಡ ಮಾಡಲಾಗಿದೆ. ಆದರೆ ಶ್ಲೋಕದಲ್ಲಿರುವ ವಿಶೇಷಣಗಳು ನೇರವಾಗಿ ಸ್ತುತಿರೂಪ ಆಗಿರುವುದಿಲ್ಲ. ನಾರಾಯಣ ಎಂಬ ಪದವನ್ನು ವ್ಯಾಖ್ಯಾನ ಮಾಡುವ ಮೂಲಕ ಸ್ತುತಿರೂಪವಾಗಿವೆ. ಪ್ರಥಮಪಕ್ಷದಲ್ಲಿ ಮಾತ್ರ ಎಲ್ಲಾ ವಿಶೇಷಣಗಳೂ ನೇರವಾಗಿಯೇ ಸ್ತುತಿರೂಪವಾಗಿವೆ. ಆದ್ದರಿಂದ ಆರನೆಯ ಪಕ್ಷವು ಮತ್ತಷ್ಟು ದುರ್ಬಲವಾಗಿದೆ.

ಏಳನೆಯ ವ್ಯಾಖ್ಯಾನ – ಸಮಸ್ತಶಾಸ್ತ್ರಾರ್ಥವನ್ನು ಇದೇ ಮಂಗಳಾಚರಣೆಯು ಹೇಳುತ್ತಿದೆ. 'ನಾರಾಯಣಂ





ಸನ್ನಮಾಮಿ ಎಂಬ ನತಿ ಹಾಗೂ ಸ್ತುತಿಗಳಿಗೆ ಈ ಶ್ಲೋಕದಲ್ಲಿರುವ ವಿಶೇಷಣಗಳು ಉಪಯುಕ್ತವೇ ಆಗಿರುವುದಿಲ್ಲ. ನತಿರೂಪಕ್ರಿಯೆಗೆ ವಿಶೇಷ್ಯನಾದವನು ನಾರಾಯಣನಾಗಿದ್ದಾನೆ. ಅವನಿಗೆ ವಿಶೇಷಣಗಳು ಸಮಗ್ರಶಾಸ್ತ್ರಾರ್ಥವನ್ನು ವ್ಯಾಖ್ಯಾನ ಮಾಡುತ್ತಿವೆ. ಏಳು ವ್ಯಾಖ್ಯಾನಗಳಲ್ಲಿ ಹಿಂದಿನ ಪಕ್ಷಗಳಿಗೆ ಪ್ರಾಬಲ್ಯವಿದೆ. ಮುಂದಿನ ಪಕ್ಷಗಳಿಗೆ ದೌರ್ಬಲ್ಯವಿದೆ.

## ಏಳುಪಕ್ಷಗಳಲ್ಲಿ ಉತ್ತರೋತ್ತರ ಪ್ರಾಬಲ್ಯವಿದೆ

ವಾಕ್ಯಾರ್ಥಚಂದ್ರಿಕಾ– ಯದ್ವಾ, ''ನತಿವಿಶೇಷ್ಯನಾರಾಯಣವಿಶೇಷಣಾನಾಂ ಕಂಠೋಕ್ತನತ್ಯುಪಪಾದಕತಯಾ ಸಂಭವತ್ಯೇಕವಾಕ್ಯತ್ವೇ, ನ ಕಂಠತೋಽನುಕ್ತಸ್ತುತಿಪರತಯಾ ಭಿನ್ನವಾಕ್ಯತ್ವಂ ಯುಕ್ತಮ್ ಇತಿ ಪ್ರಥಮಾಪೇಕ್ಷಯಾ ದ್ವಿತೀಯಾದೀನಾಂ ಪ್ರಾಬಲ್ಯಮ್ । ತತ್ರಾಪಿ ನತಿವಿಶೇಷ್ಯನಾರಾಯಣಧರ್ಮನಮ್ಯತ್ವಪ್ರಯೋಜಕಪರತ್ವಾಪೇಕ್ಷಯಾ ತತ್ಸ್ವರೂಪನಿರ್ಧಾರಕಲಕ್ಷಣಪರತ್ವಂ ಜ್ಯಾಯ ಇತಿ ಸರ್ವವಿಶೇಷಣಾನಾಂ ಲಕ್ಷಣಪರತ್ವಪಕ್ಷಸ್ಯ ಪ್ರಾಬಲ್ಯಮ್ । ಸ್ವರೂಪಮಾತ್ರಪ್ರದರ್ಶಕಲಕ್ಷಣಮಾತ್ರಪರತ್ವಾಪೇಕ್ಷಯಾ 'ನಿಖಿಲ' ಇತ್ಯಾದಿವಿಶೇಷಣಚತುಷ್ಟಯಸ್ಯ ಲಕ್ಷಣಪರತ್ವಮ್ ತಲ್ಲಕ್ಷಣವಿಶಿಷ್ಟೇ 'ಆಪ್ಯತಮಮ್, ಅಸ್ಯೋದ್ಭವಾದಿದಮ್' ವಿಶೇಷಣದ್ವಯಸ್ಯ ಲಕ್ಷಣವಿಶಿಷ್ಟೇ ಪ್ರಮಾಣಪರತ್ವಮ್, ಜ್ಯಾಯಃ ಇತಿ ತದುಭಯಪರತ್ವಪಕ್ಷಸ್ಯ ತತೋಽಪಿ ಪ್ರಾಬಲ್ಯಮ್, ಆದ್ಯವಿಶೇಷಣದ್ವಯಸ್ಯ ತತ್ರ ಪ್ರಾಪ್ತಬಾಧಕಪರಿಹಾರಪರತ್ವಮ್, ಇತ್ಯಭಿಪ್ರೇತ್ಯ ಪ್ರವೃತ್ತಸ್ಯ ಚತುರ್ಥಸ್ಯ ಪೂರ್ವಾಪೇಕ್ಷಯೋಪಯುಕ್ತಬಹ್ವರ್ಥಪ್ರತಿಪಾದಕತ್ವಾತ್ ತತೋಽಪಿ ಪ್ರಾಬಲ್ಯಮ್ । (ಪಂಚಮ್ಯಸ್ಯೇತ್ಯರ್ಥಃ ಪೂರ್ವವತ್) । ಏವಮಪಿ ಸ್ತುತೇಃ ಅಲಾಭಾತ್ ನಮ್ಯತ್ವೋಪಪಾದಕಸ್ವರೂಪನಿರ್ಧಾರಕಲಕ್ಷಣಪ್ರಮಾಣತದ್ಬಾಧಕಪರಿಹಾರಕತತ್ತದರ್ಥಪ್ರತಿಪಾದಕನಾರಾಯಣಪದವ್ಯಾಖ್ಯಾನೇನ ಸ್ತುತೇರಪಿ ಲಾಭಾತ್ ತತ್ಪ್ರತಿಪಾದಕಷಷ್ಠಸ್ಯ ಪೂರ್ವತೋಽಪಿ ಪ್ರಾಬಲ್ಯಮ್ । 'ನಮಾಮಿ' ಇತ್ಯಾದ್ಯುಕ್ತ್ಯೈವ ತದುಪಪಾದಕಾನಾಂ ಸರ್ವೇಷಾಮಪ್ಯಾಕ್ಷೇಪೇಣ ಲಾಭಸಂಭವೇನ ಪ್ರಪಂಚಜಿಜ್ಞಾಸೋಪಯುಕ್ತಸಂಕ್ಷಿಪ್ತಸಕಲಶಾಸ್ತ್ರಾರ್ಥಾಕಥನಪ್ರಯುಕ್ತನ್ಯೂನತಾಪರಿಹಾರಾಯ, ವಿಶೇಷಣಾನಾಂ ತತ್ಕಥನಪರತ್ವಂ ಸರ್ವತೋಽಪಿ ಜ್ಯಾಯಃ'' ಇತ್ಯಭಿಪ್ರೇತ್ಯ ಪ್ರವೃತ್ತಸ್ಯಾಂತಿಮಸ್ಯ ಸರ್ವತೋಽಪಿ ಪ್ರಾಬಲ್ಯಮಿತಿ ಪಕ್ಷಾಣಾಮುತ್ತರೋತ್ತರಪ್ರಾಬಲ್ಯಕ್ರಮೋ ದ್ರಷ್ಟವ್ಯಃ।

ಅಥವಾ ಹಿಂದಿನ ಪಕ್ಷಗಳಿಗಿಂತ ಮುಂದಿನ ಪಕ್ಷಗಳೇ ಪ್ರಬಲವಾಗಿವೆ ಎಂದೂ ಕೂಡ ತಿಳಿಯಬಹುದು – ನತಿಗೆ ನಾರಾಯಣನು ವಿಶೇಷ್ಯನಾಗಿದ್ದಾನೆ. ಇಂಥ ನಾರಾಯಣನಲ್ಲಿ ನಿಖಿಲಪೂರ್ಣಗುಣೈಕದೇಹತ್ವಾದಿಗಳು ವಿಶೇಷಣಗಳಾಗಿವೆ. ಈ ವಿಶೇಷಣಗಳು ಕಂಠತಃ ಹೇಳಲ್ಪಟ್ಟ ನತಿಯನ್ನು ಉಪ-





ಪಾದನೆ ಮಾಡುತ್ತಿವೆ ಎಂದು ಹೇಳಿದಾಗ ಸಮಸ್ತಶ್ಲೋಕಕ್ಕೆ ಏಕವಾಕ್ಯತ್ವವನ್ನು ಹೇಳಿದಂತಾಗುತ್ತದೆ. ಹೀಗೆ ದ್ವಿತೀಯಾದಿವ್ಯಾಖ್ಯಾನಗಳು ಸಮರ್ಥನೆ ಮಾಡುತ್ತಿವೆ. ಆದರೆ ಮೊದಲನೆಯ ವ್ಯಾಖ್ಯಾನದಲ್ಲಿ ವಿಶೇಷಣಗಳು ನತಿಯನ್ನು ಸಮರ್ಥನೆ ಮಾಡದೇ ಕಂಠತಃ ಅನುಕ್ತವಾದ ಸ್ತುತಿಯನ್ನು ಸಮರ್ಥನೆ ಮಾಡುತ್ತಿವೆ. ಆದ್ದರಿಂದ ಕಂಠತಃ ನತಿಯು ಹೇಳಲ್ಪಟ್ಟಿದೆ. ಕಂಠತಃ ಹೇಳದೇ ಇರುವ ಸ್ತುತಿಯನ್ನು ವಿಶೇಷಣಗಳು ಸಮರ್ಥನೆ ಮಾಡುತ್ತಿವೆ. ಹೀಗೆ ಭಿನ್ನವಾಕ್ಯತ್ವವು ಪ್ರಾಪ್ತವಾಗುತ್ತದೆ. ಏಕವಾಕ್ಯತ್ವಕ್ಕಿಂತ ಭಿನ್ನವಾಕ್ಯತ್ವವನ್ನು ಆಶ್ರಯಿಸಿದ್ದರಿಂದ ದ್ವಿತೀಯಾದಿ ಆರು ವ್ಯಾಖ್ಯಾನಗಳಿಗಿಂತ ಪ್ರಥಮವ್ಯಾಖ್ಯಾನದಲ್ಲಿ ದೌರ್ಬಲ್ಯವಿದೆ.

ಈ ದ್ವಿತೀಯಾದಿಪಕ್ಷಗಳಲ್ಲೂ ಕೂಡ ನತಿಗೆ ವಿಶೇಷ್ಯನಾದ ನಾರಾಯಣನ ಯಾವ ನಮ್ಯತ್ವವೆಂಬ ಧರ್ಮವಿದೆಯೋ ಅದಕ್ಕೆ ಪ್ರಯೋಜಕವಾದ ವಿಶಿಷ್ಟತ್ವಾದಿಗಳನ್ನು ಹೇಳುವುದಕ್ಕಿಂತ ನಾರಾಯಣನ ಸ್ವರೂಪವನ್ನು ನಿರ್ಧಾರ ಮಾಡುವ ಲಕ್ಷಣವೇ ಶ್ರೇಷ್ಠವಾಗಿದೆ. ಆದ್ದರಿಂದ ಸಕಲ ವಿಶೇಷಣಗಳು ನಾರಾಯಣನ ಲಕ್ಷಣಪರವಾಗಿವೆ ಎಂಬುದು ಅತ್ಯಂತ ಪ್ರಬಲವಾಗಿದೆ. ಸ್ವರೂಪಮಾತ್ರಪ್ರದರ್ಶಕವಾದ ಲಕ್ಷಣಮಾತ್ರಪರತ್ವವನ್ನು ಹೇಳುವುದಕ್ಕಿಂತಲೂ ಕೂಡ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ನಾಕುವಿಶೇಷಣಗಳು ಲಕ್ಷಣಪರವಾಗಿವೆ. ಅಂಥ ಲಕ್ಷಣವಿಶಿಷ್ಟನಾದವನಲ್ಲಿ 'ಆಪ್ಯತಮಮ್' ಮತ್ತು 'ಅಸ್ಮೋದ್ಭವಾದಿದಮ್' ಎಂಬೆರಡು ವಿಶೇಷಣಗಳಿಗೆ ಪ್ರಮಾಣಪರತ್ವವನ್ನು ಸಮರ್ಥನೆ ಮಾಡುವುದು ತದುಭಯಪರತ್ವಪಕ್ಷಕ್ಕಿಂತಲೂ ಕೂಡ ಪ್ರಬಲವಾಗಿದೆ. ಆದ್ದರಿಂದ ಎರಡನೆಯ ಪಕ್ಷಕ್ಕಿಂತ ಮೂರನೆಯ ಪಕ್ಷವು ಪ್ರಬಲವಾಗಿದೆ.

ಪ್ರಾರಂಭದ ಎರಡು ವಿಶೇಷಣಗಳಲ್ಲಿ ಯಾವ ಬಾಧಕವು ಪ್ರಾಪ್ತವಾಗಿದೆಯೋ ಅದನ್ನು ಪರಿಹಾರ ಮಾಡುವುದಕ್ಕಾಗಿ 'ನಿಖಿಲಪೂರ್ಣಗುಣೈಕದೇಹಂ' ಮತ್ತು 'ನಿರ್ದೋಷಂ' ಈ ಎರಡು ವಿಶೇಷಣಗಳು ಜಗಜ್ಜನ್ಮಾದಿಕಾರಣತ್ವವಿಷಯದಲ್ಲಿ ಪ್ರಾಪ್ತವಾದ ಬಾಧಕವನ್ನು ಪರಿಹರಿಸುತ್ತಿವೆ. ಆದ್ದರಿಂದ ಲಕ್ಷಣ, ಪ್ರಮಾಣ, ಬಾಧಕಪರಿಹಾರ ಇವೇ ಮೊದಲಾದ ಅನೇಕಾರ್ಥಗಳನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ನಾಕನೆಯ ಪಕ್ಷವು ಮತ್ತಷ್ಟು ಪ್ರಬಲವಾಗಿದೆ.

ಹೀಗಾದರೂ ಕೂಡ ಸ್ತೋತ್ರವು ತಿಳಿಯುವುದಿಲ್ಲವಲ್ಲವೇ? ಎಂದರೆ ನಮ್ಯತ್ವಕ್ಕೆ ಉಪಪಾದಕವಾದ ಸ್ವರೂಪವನ್ನು ನಿರ್ಧಾರ ಮಾಡುವ ಯಾವ ಲಕ್ಷಣ ಹಾಗೂ ಪ್ರಮಾಣಗಳಿವೆಯೋ ಆ ವಿಷಯದಲ್ಲಿ ಬಾಧಕವನ್ನು ಪರಿಹಾರ ಮಾಡುವ ತತ್ತದರ್ಥಪ್ರತಿಪಾದಕವಾದ ನಾರಾಯಣ ಪದದ ವ್ಯಾಖ್ಯಾನದಿಂದ ಸ್ತೋತ್ರವು ಲಾಭವಾಗುತ್ತದೆ. ಆದ್ದರಿಂದ ತತ್ಪ್ರತಿಪಾದಕವಾದ ಆರನೆಯ ವ್ಯಾಖ್ಯಾನದಲ್ಲಿ ಪ್ರತಿಯೊಂದು ಕೂಡ ಇರುವುದರಿಂದ ಹಿಂದಿನ ಎಲ್ಲಾ ಪಕ್ಷಗಳಿಗಿಂತ ಪ್ರಾಬಲ್ಯವಿದೆ.

ಪರಮಪ್ರೇಕ್ಷಾವಂತರಾದ ಆಚಾರ್ಯರು 'ನಮಾಮಿ' ಎಂದು ಹೇಳಿದ್ದರಿಂದಲೇ ನಮ್ಮಕೃತ್ಯಕ್ಕೆ ಉಪಪಾದಕವಾದ ವಿಶಿಷ್ಟತ್ವ, ಲಕ್ಷಣ, ಪ್ರಮಾಣ, ಬಾಧಕಪರಿಹಾರ ಎಲ್ಲವೂ ಕೂಡ ಲಾಭವಾಗುತ್ತವೆ. ಹೀಗೆ ಅರ್ಥಾತ್ ತಿಳಿಯುವ ಈ ವಿಷಯಗಳನ್ನು ಉಪಪಾದನೆ ಮಾಡಲು ವಿಶೇಷಣಗಳನ್ನು ಹೇಳುವ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ವಿಸ್ತಾರವಾದ ಜಿಜ್ಞಾಸೆಗೆ ಉಪಯುಕ್ತವಾದದ್ದು ಸಂಕ್ಷೇಪವಾದ ಜಿಜ್ಞಾಸೆ. ಈ ದೃಷ್ಟಿಯಿಂದ ಸಮಗ್ರಶಾಸ್ತ್ರಾರ್ಥವನ್ನು ಸಂಕ್ಷೇಪವಾಗಿ ಪ್ರಥಮಶ್ಲೋಕದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಏತನ್ಮೂಲಕ ನ್ಯೂನತಾದೋಷವನ್ನು ಪರಿಹರಿಸಿದ್ದಾರೆ. ಆದ್ದರಿಂದ ವಿಶೇಷಣಗಳಿಗೆ ಸಂಕ್ಷೇಪಶಾಸ್ತ್ರಾರ್ಥಕಥನಪರತ್ವವು ಹಿಂದಿನ ಎಲ್ಲ ಪಕ್ಷಗಳಿಗಿಂತ ಶ್ರೇಷ್ಠವಾಗಿದೆ. ಈ ಅಭಿಪ್ರಾಯದಿಂದ ಏಳನೆಯ ವ್ಯಾಖ್ಯಾನವು ಉಳಿದೆಲ್ಲ ಪಕ್ಷಗಳಿಗಿಂತ ಪ್ರಬಲವಾಗಿದೆ. ಹೀಗೆ ಹಿಂದಿನ ಪಕ್ಷಗಳಿಗಿಂತ ಮುಂದಿನ ಪಕ್ಷಗಳು ಪ್ರಬಲವಾಗಿದೆ ಎಂಬುದಾಗಿ ಉತ್ತರೋತ್ತರಪ್ರಾಬಲ್ಯವನ್ನು ತಿಳಿಯಬೇಕು. ಒಟ್ಟು ಏಳು ಬಗೆಯ ವ್ಯಾಖ್ಯಾನಗಳ ಆನುಪೂರ್ವಿಯು ಅತ್ಯಂತ ಅರ್ಥಪೂರ್ಣವಾಗಿದೆ.

## ರಸಘಟ್ಟ

## ಮಂಗಳಪದ್ಯದ ವಿಶೇಷಣಗಳಲ್ಲಿ ಆನುಪೂರ್ವಿ ವಿಚಾರ

ಕಾಶೀಟಿಪ್ಪಣಿ – ಅತ್ರ ಯದ್ಯಪಿ 'ಸದಾ ವಂದ್ಯಮ್' ಇತ್ಯಾದಿಕ್ರಮೇಣ ವಿಶೇಷಣಾಭಿಧಾನಮ್ ಉಚಿತಮ್ । ತಥಾಽಪಿ ಪರಮಮಾಂಗಲಿಕತ್ವಾತ್ ಆದೌ ನಿವೇಶಿತಸ್ಯ ನಾರಾಯಣಶಬ್ದಸ್ಯ 'ನಾರಾಯಣಂ ಮಹಾಜ್ಞೇಯಮ್' ಇತ್ಯಾದೌ ವಿಷಯಸಮರ್ಪಕತ್ವಸಿದ್ಧಯೇ ಬ್ರಹ್ಮಶಬ್ದಸಮಾನಾರ್ಥತ್ವಂ ಸೂಚಯಿತುಂ ತದನಂತರಮೇವ 'ನಿಖಿಲ' ಇತ್ಯಾದೇರಭಿಧಾನಮ್ । ತದಧೀನತ್ವಾತ್ ನಿರ್ದೋಷತ್ವಸ್ಯ ತದಾನಂತರ್ಯಮ್ । 'ನಿರ್ದೋಷತ್ವಗುಣಪೂರ್ಣತ್ವಾದಿನಾ ಏವ ವೇದಾದಿವೇದ್ಯಂ ನ ತು ದೋಷಿತ್ವಾದಿನಾ' ಇತಿ ಜ್ಞಾಪನಾಯ ತದನಂತರಮ್ 'ಆಪ್ಯತಮಮ್' ಇತ್ಯುಕ್ತಿಃ । ಜನ್ಮಾದಿಹೇತುತ್ವಸ್ಯ ತದಧೀನಸಿದ್ಧಿಕತ್ವಾತ್ ತದಾನಂತರ್ಯಮ್ । 'ಅಶೇಷವಿಶೇಷತಃ' ಇತ್ಯಸ್ಯ ಉಭಯತ್ರಾಪಿ ಪೂರ್ವೋಕ್ತರೀತ್ಯಾ ಸಂಬಂಧಸೂಚನಾಯ ತದನಂತರೋಕ್ತಿಃ । ಜಿಜ್ಞಾಸಾಯಾ ವೈರಾಗ್ಯಾನಂತರ್ಯಜ್ಞಾಪನಾಯ ತದನಂತರಂ 'ವಂದ್ಯಮ್' ಇತ್ಯುಕ್ತಮ್ । ಜಿಜ್ಞಾಸಾದಿನಾ ಚ ಭಕ್ತ್ಯಾದ್ಯತಿಶಯದ್ವಾರೈವ ಜ್ಞಾನಾದಿಸಂಪತ್ತಿರಿತಿ ಸೂಚಯಿತುಮ್ ಏತದನಂತರಂ ಪ್ರಿಯತಮತ್ವೋಕ್ತಿಃ ತದನಂತರಂ 'ಮಮ' ಇತ್ಯಭಿಧಾನಮ್ 'ಆಪ್ಯತಮಮ್' ಇತ್ಯನೇನಾಪ್ಯಸ್ಯ ಸಂಬಂಧಜ್ಞಾಪನಾರ್ಥಮ್ ಇತ್ಯವಧೇಯಮ್ । ಇತಿಶಬ್ದಃ ಪ್ರಥಮಶ್ಲೋಕವ್ಯಾಖ್ಯಾಪರಿಸಮಾಪ್ತ್ಯರ್ಥಃ ।







ನ್ಯಾಯಸುಧೆಯಲ್ಲಿ ವ್ಯಾಖ್ಯಾನ ಮಾಡಿದ ಪ್ರಕಾರ ಅನುವ್ಯಾಖ್ಯಾನ ಶ್ಲೋಕದಲ್ಲಿ 'ಸದಾ ವಂದ್ಯಂ' ಇತ್ಯಾದಿಕ್ರಮದಲ್ಲಿಯೇ ವಿಶೇಷಣಗಳನ್ನು ಹೇಳಬೇಕಾಗಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ನಾರಾಯಣಶಬ್ದವು ಪರಮಮಾಂಗಳಿಕವಾಗಿದೆ. 'ನಾರಾಯಣಂ ಮಹಾಜ್ಞೇಯಂ' ಇತ್ಯಾದಿಯಾಗಿ ಹೇಳಿದಂತೆ ವಿಷಯಸಮರ್ಪಕವೂ ಆಗಬೇಕಾಗಿದೆ. ಮತ್ತು ಬ್ರಹ್ಮಶಬ್ದಕ್ಕೆ ಸಮಾನಾರ್ಥಕವಾಗಿದೆ ಎಂಬುದನ್ನೂ ಸೂಚಿಸಬೇಕಾಗಿದೆ. ಈ ಉದ್ದೇಶದಿಂದ ಮೊದಲು ನಾರಾಯಣಶಬ್ದವನ್ನೇ ಅನುವ್ಯಾಖ್ಯಾನಕಾರರು ಉಲ್ಲೇಖ ಮಾಡಿದ್ದಾರೆ. ಇದರ ಅನಂತರ 'ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿವಿಶೇಷಣಗಳನ್ನು ನಿವೇಶ ಮಾಡಿದ್ದಾರೆ. ನಿಖಿಲಪೂರ್ಣಗುಣೈಕದೇಹತ್ವದ ಅಧೀನವಾಗಿ ನಿರ್ದೋಷತ್ವದ ವಿಚಾರವು ಪ್ರಸಕ್ತವಾಗುವುದರಿಂದ ಎರಡನೆಯ ವಿಶೇಷಣವನ್ನು 'ನಿರ್ದೋಷಂ' ಎಂಬುದಾಗಿ ಉಲ್ಲೇಖ ಮಾಡಿದ್ದಾರೆ. ನಿರ್ದೋಷತ್ವ ಹಾಗೂ ಗುಣಪೂರ್ಣತ್ವಗಳಿಂದಲೇ ವೇದಾದಿವೇದ್ಯನಾಗಿದ್ದಾನೆ ಹೊರತು ದೋಷವುಳ್ಳವನೆಂದು ವೇದಾದಿವೇದ್ಯನಾಗಿಲ್ಲ ಎಂಬುದನ್ನು ತಿಳಿಸಲು ಇವೆರಡು ವಿಶೇಷಣಗಳ ನಂತರ 'ಆಪ್ಯತಮಮ್' 'ಅಖಿಲೈಃ ಸುವಾಕ್ಯೈಃ' ಎಂಬ ವಿಶೇಷಣಗಳನ್ನು ನೀಡಿದ್ದಾರೆ. ಜನ್ಮಾದಿಹೇತುತ್ವವು ಇವುಗಳ ಅಧೀನವಾಗಿರುವುದರಿಂದ ತದಾನಂತರ್ಯವು ಯುಕ್ತವಾಗುತ್ತದೆ. 'ಅಶೇಷವಿಶೇಷತಃ' ಎಂಬುದು ಹಿಂದೆ ಹೇಳಿದ ಪ್ರಕಾರ ಎರಡೂ ಕಡೆ ಅನ್ವಯವನ್ನು ಹೊಂದುತ್ತದೆ. ಆದ್ದರಿಂದ ತದಾನಂತರ್ಯವು ಯುಕ್ತವಾಗುತ್ತದೆ. ಜಿಜ್ಞಾಸೆಯು ವೈರಾಗ್ಯದ ನಂತರವೇ ಪ್ರಾಪ್ತವಾಗುತ್ತದೆ ಎಂಬುದನ್ನು ತಿಳಿಸಲು 'ವಂದ್ಯಂ' ಎಂಬುದನ್ನು ತದನಂತರ ಹೇಳಿದ್ದಾರೆ. ಜಿಜ್ಞಾಸಾದಿಗಳಿಂದ ಭಕ್ತ್ಯತಿಶಯವು ಉಂಟಾಗಿ ತನ್ಮೂಲಕ ಅಪರೋಕ್ಷಜ್ಞಾನವು ಪ್ರಾಪ್ತವಾಗುತ್ತದೆಂದು ಸೂಚಿಸಲು 'ಪ್ರಿಯತಮಂ' ಎಂದು ತದನಂತರ ಹೇಳಿರುತ್ತಾರೆ. ಮಮ ಎಂಬುದಕ್ಕೆ ಆಪ್ಯತಮಮ್ ಎಂಬುದರ ಜೊತೆಗೂ ಅನ್ವಯವಿದೆ ಎಂಬ ಸಂಬಂಧವನ್ನು ಸೂಚಿಸಲು ಕೊನೆಯಲ್ಲಿ ಮಮ ಎಂದಿದ್ದಾರೆ. ಹೀಗೆ ಅನುವ್ಯಾಖ್ಯಾನ ಶ್ಲೋಕದಲ್ಲಿರುವ ಪ್ರತಿಯೊಂದು ವಿಶೇಷಣಗಳಲ್ಲಿ ಉಲ್ಲೇಖಿತವಾದ ಆನುಪೂರ್ವಿಯು ಅತ್ಯಂತ ಅರ್ಥಗರ್ಭಿತವಾಗಿದೆ.

## ಸುಧಾ-ಪರಿಮಳಸಾರ

ಭಕ್ತನ ವಿಷಯದಲ್ಲಿ ಪ್ರಸನ್ನನಾದ ಭಗವಂತನು ಮೋಕ್ಷವೆಂಬ ಪುರುಷಾರ್ಥವನ್ನು ನೀಡುತ್ತಾನೆ. ಅಂಥ ಮೋಕ್ಷಸ್ವರೂಪದ ನಿರೂಪಣೆಗಾಗಿ ನಾಕನೆಯ ಅಧ್ಯಾಯವು ಹೊರಟಿದೆ. ಅದನ್ನೇ ಆಪ್ಯತಮಮ್ ಎಂಬ ವಿಶೇಷಣವು ಸಂಗ್ರಹಿಸಿದೆ. ಭಗವಂತನು ಎಲ್ಲೆಡೆಯೂ ವ್ಯಾಪ್ತನಾಗಿರುವುದರಿಂದ ಅವನು ಸಂಸಾರಾವಸ್ಥೆಯಲ್ಲೂ ಪ್ರಾಪ್ಯನೇ ಆಗಿದ್ದಾನೆ. ಆದರೆ ಅನಂತಾಸನ,



ಶ್ವೇತದ್ವೀಪ, ವೈಕುಂಠ ಮೊದಲಾದ ಸ್ಥಾನಗಳಲ್ಲಿರುವ ಅವನ ರೂಪವಿಶೇಷವು ಸಂಸಾರಾವಸ್ಥೆಯಲ್ಲಿ ಪ್ರಾಪ್ಯವಾಗಿರುವುದಿಲ್ಲ. ಇಂಥ ಪ್ರಾಪ್ತಿಯನ್ನು ಹೊಂದಬೇಕು. ಆದಕ್ಕಾಗಿ ತಮಪ್ ಪ್ರತ್ಯಯವನ್ನು ಶ್ಲೋಕದಲ್ಲಿ ಉಲ್ಲೇಖ ಮಾಡಿದ್ದಾರೆ.

## ಪರಿಮಳವೈಶಿಷ್ಟ್ಯ

* ಪ್ರಿಯತಮಂ ಎಂಬ ಪದದ ಮೊದಲು ಆಪ್ಯತಮಮ್ ಎಂಬ ಪದವನ್ನು ವಿವಕ್ಷಿಸಬೇಕು.

* ಸಂಸಾರಾವಸ್ಥೆಯಲ್ಲಿ ಮಹಾವಿಷ್ಣುವು ಅಂತರ್ಯಾಮಿಯಾಗಿರುವುದರಿಂದ ಪ್ರಾಪ್ಯನೇ ಆಗಿದ್ದಾನೆ. ಆದರೆ ಶ್ವೇತದ್ವೀಪಾದಿಗಳಲ್ಲಿರುವ ರೂಪವಿಶೇಷವು ಪ್ರಾಪ್ತವಾಗಿರುವುದಿಲ್ಲ. ಆದಕ್ಕಾಗಿ ಸಾಧನೆಯನ್ನು ಮಾಡಬೇಕು ಎಂಬ ಅಪೂರ್ವವಿಷಯವನ್ನು ತಿಳಿಸಿದ್ದಾರೆ.

ಇಲ್ಲಿಗೆ ಅನುವ್ಯಾಖ್ಯಾನದ ಪ್ರಥಮಶ್ಲೋಕದ ವ್ಯಾಖ್ಯಾನವು ಸಮಾಪ್ತವಾಯಿತು
ಶ್ರೀಕೃಷ್ಣಾರ್ಪಣಮಸ್ತು

# ದ್ವಿತೀಯಶ್ಲೋಕದ ವ್ಯಾಖ್ಯಾನ ಪ್ರಾರಂಭ

## ಗುರುಗಳಿಗೆ ನಮಿಸಿ ಗ್ರಂಥ ಪ್ರಾರಂಭಿಸುವೆ

**ಅನು– ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ**
**ಜಗದ್ಗುರೂಣಾಂ ಗುರುಮಂಜಸೈವ ।**
**ವಿಶೇಷತೋ ಮೇ ಪರಮಾಖ್ಯವಿದ್ಯಾ -**
**ವ್ಯಾಖ್ಯಾಂ ಕರೋಮ್ಯಣ್ವಪಿ ಚಾಹಮೇವ ॥೨॥**

ಓ ಗುರುಗಳಾದ ವೇದವ್ಯಾಸದೇವರೇ! ತಾವು ವೇದಗಳನ್ನು ವಿಭಾಗ ಮಾಡಿದಿರಿ; ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಿರ್ಮಾಣ ಮಾಡಿರುವಿರಿ. ಜಗತ್ತಿನ ಗುರುಗಳಾದ ಬ್ರಹ್ಮಾದಿಗಳಿಗೂ ಕೂಡ ತಾವು ಗುರುಗಳಾಗಿರುವಿರಿ. ಅದರಲ್ಲೂ ವಿಶೇಷವಾಗಿ ಎನಗೆ ಗುರುಗಳಾಗಿರುವಿರಿ. ತಮಗೆ ಭಕ್ತ್ಯತಿಶಯ, ಶ್ರದ್ಧಾತಿಶಯಗಳಿಂದ ಪುನಃ ಪ್ರಣಾಮ ಮಾಡುವೆ. ಪರವಿದ್ಯೆ ಎಂದು ಕರೆಸಿಕೊಳ್ಳುವ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವ್ಯಾಖ್ಯಾನ ಮಾಡಲು ಪ್ರಾರಂಭಿಸುವೆ.

## ನಾರಾಯಣಸ್ವರೂಪರಾದ ವ್ಯಾಸರಿಗೆ ಪ್ರಣಾಮಗಳು

**ಸನ್ನ್ಯಾಯರತ್ನಾವಳೀ– ಏವಂ ಶಾಸ್ತ್ರಪ್ರತಿಪಾದ್ಯಂ ನಾರಾಯಣಂ ನಮಸ್ಕೃತ್ಯ, ಇದಾನೀಂ ತಮೇವ ಶಾಸ್ತ್ರಕರ್ತಾರಂ ವೇದವ್ಯಾಸಂ ಪ್ರಣಮತಿ ಗ್ರಂಥಾರಂಭಂ ಚ ಪ್ರತಿಜಾನೀತೇ – ತಮೇವೇತಿ ॥**

ಮೊದಲನೆಯ ಮಂಗಳಶ್ಲೋಕದಿಂದ ಶಾಸ್ತ್ರಪ್ರತಿಪಾದ್ಯನಾದ ನಾರಾಯಣನನ್ನು ನಮಿಸಿದ್ದಾಯಿತು. ಪ್ರಕೃತ ಎರಡನೆಯ ಶ್ಲೋಕದಿಂದ ಅದೇ ನಾರಾಯಣನ ಅವತಾರಸ್ವರೂಪರಾದ ಮತ್ತು ಶಾಸ್ತ್ರಕರ್ತೃಗಳಾದ ವೇದ–ವ್ಯಾಸದೇವರನ್ನು ನಮಸ್ಕಾರ ಮಾಡುತ್ತಿದ್ದಾರೆ. ಹಾಗೂ ಗ್ರಂಥಾರಂಭದ ಪ್ರತಿಜ್ಞೆಯನ್ನು ಮಾಡಲು 'ತಮೇವ' ಎಂಬುದಾಗಿ ಪದ್ಯರಚನೆ ಮಾಡಿದ್ದಾರೆ.





ವಿವರಣೆ – ಶಾಸ್ತ್ರಪ್ರತಿಪಾದ್ಯನಾದ ನಾರಾಯಣನಿಗೆ ನಮಸ್ಕಾರ ಮಾಡುವುದು ಹೇಗೆ ಕರ್ತವ್ಯವೋ ಅದರಂತೆ ಶಾಸ್ತ್ರಕರ್ತೃಗಳಿಗೆ ನಮಸ್ಕಾರ ಮಾಡುವುದು ಕೂಡ ಕರ್ತವ್ಯವಾಗಿದೆ. ಪ್ರಥಮಶ್ಲೋಕದಲ್ಲಿ ಶಾಸ್ತ್ರಪ್ರತಿಪಾದ್ಯನನ್ನು ನಮಸ್ಕಾರ ಮಾಡಿ ಈಗ ದ್ವಿತೀಯಶ್ಲೋಕದಲ್ಲಿ ಶಾಸ್ತ್ರಕರ್ತೃಗಳಾದ ವೇದವ್ಯಾಸದೇವರಿಗೆ ನಮಸ್ಕಾರ ಮಾಡುತ್ತಿದ್ದಾರೆ. ಬೇರೆಡೆ ಶಾಸ್ತ್ರಪ್ರತಿಪಾದ್ಯನೇ ಒಬ್ಬ, ಶಾಸ್ತ್ರಕರ್ತೃವೇ ಮತ್ತೊಬ್ಬ ಆಗಿರುತ್ತಾನೆ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಯಾರು ಪ್ರತಿಪಾದ್ಯನೋ ಅವನೇ ಶಾಸ್ತ್ರಕರ್ತೃವಾಗಿದ್ದಾನೆಂಬುದು ಇಲ್ಲಿಯ ವೈಶಿಷ್ಟ್ಯ . ಆದ್ದರಿಂದ ಆ ನಾರಾಯಣನ ಸ್ವರೂಪವೇ ಆದ ವೇದವ್ಯಾಸರೂಪವನ್ನು ಈಗ ನಮಸ್ಕಾರ ಮಾಡಿ ಗ್ರಂಥಾರಂಭಪ್ರತಿಜ್ಞೆಯನ್ನು ಮಾಡುತ್ತಿದ್ದಾರೆ.

## ಶ್ಲೋಕದಲ್ಲಿ ಅನ್ವಯಕ್ರಮ

**ಸನ್ನ್ಯಾಯರತ್ನಾವಳೀ– ಶಾಸ್ತ್ರಪ್ರತಿಪಾದ್ಯರೂಪೇಣ ನಮಸ್ಕೃತಸ್ಯೈವ ಶಾಸ್ತ್ರಪ್ರವಕ್ತೃರೂಪೇಣ ಪ್ರಣಾಮಃ ತತ್ ಪ್ರೀತ್ಯತಿಶಯಾರ್ಥಃ । ತಂ ಶಾಸ್ತ್ರಪ್ರಭವಂ ಪ್ರಣಮ್ಯ ಪರಮಾಖ್ಯವಿದ್ಯಾಯಾ ಬ್ರಹ್ಮಸೂತ್ರಾತ್ಮಿಕಾಯಾ ವ್ಯಾಖ್ಯಾನಮ್ ಅನ್ವಪಿ ಕರೋಮಿ ಇತ್ಯನ್ವಯಃ ।**

ಶಾಸ್ತ್ರಪ್ರತಿಪಾದ್ಯತ್ವ ಎಂಬ ಧರ್ಮಪುರಃಸರವಾಗಿ ಯಾವ ನಾರಾಯಣನಿಗೆ ನಮಸ್ಕಾರ ಮಾಡಲಾಯಿತೋ ಅದೇ ನಾರಾಯಣನಿಗೆ ಶಾಸ್ತ್ರೋಪದೇಶಕತ್ವ ಎಂಬ ಧರ್ಮದಿಂದ ನಮಸ್ಕಾರ ಮಾಡುತ್ತಿದ್ದಾರೆ. ಅವನ ಅತಿಶಯವಾದ ಪ್ರೀತಿಯನ್ನು ಪಡೆಯುವುದೇ ಇದರ ಉದ್ದೇಶವಾಗಿದೆ.

ಆ ಶಾಸ್ತ್ರಪ್ರಭವರಾದ ವೇದವ್ಯಾಸದೇವರನ್ನು ನಮಸ್ಕಾರ ಮಾಡಿ ಪರಮಾಖ್ಯವಿದ್ಯಾವ್ಯಾಖ್ಯಾಂ = ಪರವಿದ್ಯೆ ಎಂದು ಪ್ರಸಿದ್ಧವಾದ ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನವನ್ನು ಅನ್ವಪಿ = ಮತ್ತೊಮ್ಮೆ ಕರೋಮಿ = ಮಾಡುವೆನು. ಹೀಗೆ ಶ್ಲೋಕದಲ್ಲಿರುವ ಪದಗಳ ಅನ್ವಯವನ್ನು ತಿಳಿಯಬೇಕು.

ವಿವರಣೆ – ನಾರಾಯಣ ಮತ್ತು ವೇದವ್ಯಾಸರು ಅಭಿನ್ನರಾಗಿದ್ದಲ್ಲಿ ಪುನಃ ಏಕೆ ನಮಸ್ಕಾರ ಮಾಡಬೇಕು? ಎಂಬ ಪ್ರಶ್ನೆಗೆ ತತ್ಪ್ರೀತ್ಯತಿಶಯಾರ್ಥಃ ಎಂಬುದಾಗಿ ಉತ್ತರಿಸಿದ್ದಾರೆ. ಒಮ್ಮೆ ನಮಸ್ಕಾರ ಮಾಡಿ ಪುನಃ ನಮಸ್ಕಾರ ಮಾಡುವುದರಿಂದ ಅತಿಶಯವಾದ ಪ್ರೀತಿಯು ಲಭಿಸುತ್ತದೆ.

ಈ ವೇದವ್ಯಾಸದೇವರು ಶಾಸ್ತ್ರಪ್ರಭವರಾಗಿದ್ದಾರೆ. ಇಲ್ಲಿ ಶಾಸ್ತ್ರಶಬ್ದದಿಂದ ವೇದಾದಿಗಳನ್ನು ವಿವಕ್ಷಿಸಿದಾಗ ಪ್ರಭವಶಬ್ದಕ್ಕೆ ಉಪದೇಶಕರು ಎಂಬರ್ಥವನ್ನು ವಿವಕ್ಷಿಸಬೇಕು. ಮಹಾಭಾರತಾದಿಗಳನ್ನು ಶಾಸ್ತ್ರಶಬ್ದದಿಂದ ವಿವಕ್ಷಿಸಿದಾಗ ಪ್ರಭವಶಬ್ದಕ್ಕೆ ಉತ್ಪಾದಕರು ಎಂಬರ್ಥವನ್ನು ವಿವಕ್ಷಿಸಬೇಕು.





## ಪರಮಾತ್ಮನಲ್ಲಿ ಅನೇಕಕಾರಣಗಳಿಂದ ಮುಖ್ಯಗುರುತ್ವವಿದೆ

**ಸನ್ನ್ಯಾಯರತ್ನಾವಳೀ– ಅನುವ್ಯಾಖ್ಯಾಯಾ ಅನ್ಯೇನ ಕರ್ತುಮಶಕ್ಯತ್ವಾತ್ ಅಹಮೇವ ಇತ್ಯಾಹ ॥ ಅಂಜಸೈವ ॥ ಜಗದ್ಗುರೂಣಾಂ ಗುರುಮ್ ಇತಿ ಮುಖ್ಯಗುರುತ್ವಮಭಿಪ್ರೈತಿ । ಮುಖ್ಯಗುರುತ್ವಂ ಚ ಭಗವತೋ ಜನಕತ್ವೇನ ಪೋಷಕತ್ವೇನ ವಿಘ್ನನಿವಾರಕತ್ವೇನ ಚಿತ್ತಪ್ರೇರಕತಯಾ ಚ ಆಚಾರ್ಯಾದಿ-ಸಂಪಾದನದ್ವಾರಾ ಜ್ಞಾನದಾತೃತ್ವಾತ್ । ವಿಶೇಷತೋ ಮೇ ಇತಿ ಸ್ವಸ್ಯ ಸಾಕ್ಷಾದ್ಭಗವಾನ್ ವ್ಯಾಸೋ ಗುರುರಿತ್ಯಾಹ ॥2॥**

ಅನೇಕಾರ್ಥದಿಂದ ಗರ್ಭಿತವಾದ ಮತ್ತು ಗಂಭೀರವಾದ ಅನುವ್ಯಾಖ್ಯಾನದ ರಚನೆಯು ಬೇರೆ ಯಾರಿಂದಲೂ ಕೂಡ ಮಾಡಲು ಸಾಧ್ಯವಿಲ್ಲ. ಇದನ್ನು ತಿಳಿಸುವುದಕ್ಕಾಗಿ ಆಚಾರ್ಯರು ಅಹಮೇವ ಎಂದು ಹೇಳಿದ್ದಾರೆ. 'ಅಂಜಸೈವ ಗುರೂಣಾಂ ಗುರುಂ' ಎಂದು ಹೇಳಿದ್ದರಿಂದ ಮುಖ್ಯಗುರುತ್ವವು ಅಭಿಪ್ರೇತವಾಗಿದೆ. ಪರಮಾತ್ಮನಿಗೆ ಜನಕನಾದ್ದರಿಂದ, ಪೋಷಕನಾದ್ದರಿಂದ, ವಿಘ್ನಪರಿಹಾರಕನಾದ್ದರಿಂದ, ಚಿತ್ತಪ್ರೇರಕನಾದ್ದರಿಂದ ಮುಖ್ಯಗುರುತ್ವವು ಯುಕ್ತವಾಗುತ್ತದೆ. ಮತ್ತು ಆಚಾರ್ಯಾದಿಗಳ ಸಂಪಾದನದ ಮೂಲಕ ಜ್ಞಾನದಾತೃವಾಗಿ-ರುವುದರಿಂದಲೂ ಯುಕ್ತವಾಗುತ್ತದೆ. 'ವಿಶೇಷತೋ ಮೇ' ಎಂದು ಹೇಳಿದ್ದರಿಂದ ತಮಗೆ ವೇದವ್ಯಾಸದೇವರು ಸಾಕ್ಷಾತ್ತಾಗಿ ಗುರುಗಳಾಗಿದ್ದಾರೆಂದು ತಿಳಿಸಿದಂತಾಯಿತು.

ವಿವರಣೆ – ಅಹಮೇವ ಎಂಬಲ್ಲಿರುವ ಏವಕಾರವು ಅನ್ಯಯೋಗವ್ಯವಚ್ಛೇದಾರ್ಥದಲ್ಲಿ ಪ್ರಯುಕ್ತವಾಗಿದೆ. ಈ ಅನುವ್ಯಾಖ್ಯಾನವನ್ನು ಬೇರೆ ಯಾರಿಂದಲೂ ಕೂಡ ರಚನೆ ಮಾಡಲು ಸಾಧ್ಯವಿಲ್ಲ. ನಾನೊಬ್ಬನೇ ದೇವರ ಅನುಗ್ರಹದಿಂದ ಸಮರ್ಥನಾಗಿದ್ದೇನೆ ಎಂಬುದು ಇದರ ಅಭಿಪ್ರಾಯ. ಜಗದ್ಗುರೂಣಾಂ ಗುರುಮ್ ಎಂದು ಹೇಳಿದ್ದರಿಂದ ಉಳಿದೆಲ್ಲ ಗುರುಗಳಿಗಿಂತ ಮುಖ್ಯಗುರುತ್ವವು ಭಗವಂತನಲ್ಲಿದೆ ಎಂದು ಹೇಳಿದಂತಾ-ಯಿತು. ಅನೇಕ ರೀತಿಯಲ್ಲಿ ಗುರುತ್ವವು ಬರುತ್ತದೆ. ಜನಕನಾಗುವುದರಿಂದ, ರಕ್ಷಣೆ ಮಾಡುವುದರಿಂದ, ವಿಘ್ನಗಳನ್ನು ಪರಿಹಾರಮಾಡುವುದರಿಂದ, ಮನಸ್ಸನ್ನು ಪ್ರೇರಣೆ ಮಾಡುವುದರಿಂದ ಇತ್ಯಾದಿಯಾಗಿ. ಈ ಎಲ್ಲ ಬಗೆಯ ಗುರುತ್ವವೂ ಪರಮಾತ್ಮನಲ್ಲೇ ಮುಖ್ಯವಾಗಿದೆ ಎಂಬುದನ್ನು ಇದರಿಂದ ತಿಳಿಸಿದ್ದಾರೆ.

## ತಮೇವ ಶಾಸ್ತ್ರಪ್ರಭವಂ ಎಂಬ ಎರಡನೇ ಪದ್ಯಕ್ಕೆ ವ್ಯಾಖ್ಯಾನ

**ನಯಚಂದ್ರಿಕಾ– ಬಹುಮಾನವಿಷಯತ್ವಂ ಹಿ ಅಭಿಪ್ರೇಯತೇ – ತಮೇವ ಇತ್ಯಾದಿನಾ ॥ ತಾಮೇವ ಶಾಸ್ತ್ರಪ್ರತಿಪಾದ್ಯಾಮ್ ಅಭೀಷ್ಟದೇವತಾಮ್ । ಶಾಸ್ತ್ರಗುರುತ್ವೇನ ಜಗದ್‌ಗುರೂಣಾಂ ಬ್ರಹ್ಮಾದೀನಾಂ ವಿಶೇಷತಃ ಸ್ವತಃ ಸ್ವಗುರುತ್ವೇನಾಪಿ ಪ್ರಣಮ್ಯ ಗ್ರಂಥಾರಂಭಂ ಪ್ರತಿಜಾನೀತೇ ।**





**ಶಾಸ್ತ್ರಂ ಭಾವಯತೀತಿ ಶಾಸ್ತ್ರಪ್ರಭವಃ ಶಾಸ್ತ್ರಕರ್ತಾ । ಅಂಜಸೈವ ಸಮ್ಯಗೇವ ಇತ್ಯನೇನ ಸರ್ವತ್ರಾಪಿ ಮುಖ್ಯಗುರುತ್ವಂ ಪ್ರತೀಯತೇ । ಪರಮಾ ಇತ್ಯಾಖ್ಯಾ ಯಸ್ಯಾ ವಿದ್ಯಾಯಾಃ ಸಾ ಪರಮಾಖ್ಯವಿದ್ಯಾ । ಬ್ರಹ್ಮಮೀಮಾಂಸಾ ಇತ್ಯರ್ಥಃ । 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಇತಿ ಶ್ರುತೇಃ ।**

**'ಅನ್ವಪಿ ಚಾಹಮೇವ' - ಭಾಷ್ಯಕರಣಮಪಿ ಅಹಮೇವ ಚ ವ್ಯಾಖ್ಯಾಂ ಕರೋಮಿ । ಅನ್ಯಸ್ಯ ಶಕ್ತ್ಯ-ಭಾವಾತ್ ಇತಿ ಚಶಬ್ದಃ ।**

ಭಗವಂತನು ಬಹುಮಾನವಿಷಯನಾಗಿದ್ದಾನೆಂಬ ಅಭಿಪ್ರಾಯದಿಂದ ತಮೇವ ಇತ್ಯಾದಿ ಎರಡನೇ ಪದ್ಯವು ಹೊರಟಿದೆ. 'ತಮೇವ' ಎಂದರೆ ಶಾಸ್ತ್ರಪ್ರತಿಪಾದ್ಯನಾದ ಅಭೀಷ್ಟದೇವತೆಯಾದ ಆ ನಾರಾಯಣನೇ ಎಂದರ್ಥ. ಆ ಭಗವಂತನು ಶಾಸ್ತ್ರಗುರು ಎನಿಸಿದ್ದಾನೆ. ಜಗದ್ಗುರುಗಳಾದ ಬ್ರಹ್ಮಾದಿಗಳಿಗೂ ಮತ್ತು ವಿಶೇಷವಾಗಿ ತನಗೂ ಗುರುವಾಗಿರುವುದರಿಂದಲೂ ಕೂಡ ವೇದವ್ಯಾಸದೇವರಿಗೆ ಪ್ರಣಾಮ ಮಾಡಿ ಗ್ರಂಥಾರಂಭದ ಪ್ರತಿಜ್ಞೆಯನ್ನು ಮಾಡುತ್ತಿದ್ದಾರೆ.

ಶಾಸ್ತ್ರಪ್ರಭವಂ ಎಂದರೆ ಶಾಸ್ತ್ರಂ ಭಾವಯತೀತಿ ಶಾಸ್ತ್ರಪ್ರಭವಃ ಎಂಬ ನಿಷ್ಪತ್ತಿಯಿಂದ ಶಾಸ್ತ್ರವನ್ನು ನಿರ್ಮಾಣ ಮಾಡಿದವನು ಎಂದರ್ಥ. 'ಅಂಜಸೈವ' ಎಂಬ ಪದಕ್ಕೆ ಸಮ್ಯಗೇವ ಎಂದರ್ಥ. ಇದರಿಂದ ಪ್ರತಿಯೊಂದು ವಿಷಯದಲ್ಲೂ ವೇದವ್ಯಾಸದೇವರೇ ಮುಖ್ಯಗುರುವಾಗಿದ್ದಾರೆಂದು ತಿಳಿಯುತ್ತದೆ. ಪರಮಾಖ್ಯವಿದ್ಯಾ ಎಂದರೆ ಪರಮ ಇತಿ ಆಖ್ಯಾ ಯಸ್ಯಾಃ ಸಾ ಎಂಬ ನಿಷ್ಪತ್ತಿಯಿಂದ ಯಾವ ವಿದ್ಯೆಯು ಉತ್ಕೃಷ್ಟ ಎಂದು ಕರೆಸಿಕೊಳ್ಳು-ತ್ತದೋ ಅಂಥ ಬ್ರಹ್ಮಮೀಮಾಂಸಾಶಾಸ್ತ್ರ ಎಂದರ್ಥ. 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬ ಶ್ರುತಿಯು ಬ್ರಹ್ಮಮೀಮಾಂಸಾಶಾಸ್ತ್ರವನ್ನು ಪರವಿದ್ಯೆ ಎಂದು ಕರೆಯುತ್ತಿದೆ.

'ಅನ್ವಪಿ ಚಾಹಮೇವ' ಎಂಬುದರಿಂದ ಭಾಷ್ಯವನ್ನು ಬರೆದಿದ್ದರೂ ಕೂಡ ಪುನಃ ವ್ಯಾಖ್ಯಾನವನ್ನು ಮಾಡು-ತ್ತೇನೆ. ಏಕೆಂದರೆ ಬೇರೆಯವರಿಗೆ ಇದನ್ನು ಮಾಡಲು ಶಕ್ತಿ ಇಲ್ಲ ಎಂಬುದನ್ನು ಚಶಬ್ದದಿಂದ ಸೂಚಿಸಿದ್ದಾರೆ.

## ಅನುವ್ಯಾಖ್ಯಾನದ ದ್ವಿತೀಯಶ್ಲೋಕಕ್ಕೆ ಅವತಾರಿಕೆ ಮತ್ತು ಅನ್ವಯಾರ್ಥ

**ಶ್ರೀಮನ್ನ್ಯಾಯಸುಧಾ- ನಾರಾಯಣಪ್ರಣಾಮಸ್ಯೇವ ಗುರುಪ್ರಣಾಮಸ್ಯಾಪಿ ಅಭಿಮತಸಿದ್ಧ್ಯಂಗತಯಾ ಕಾರ್ಯಾರಂಭೇ ಅವಶ್ಯಮನುಷ್ಠೇಯತ್ವಾತ್ ತದಾ-ಚರಣಪುರಃಸರಂ ಬ್ರಹ್ಮಮೀಮಾಂಸಾಶಾಸ್ತ್ರವ್ಯಾಖ್ಯಾನಂ ಸಮರ್ಥಯಮಾನಃ ಪ್ರತಿಜಾನೀತೇ – ತಮೇವೇತಿ ॥ ತಮ್ = ಪೂರ್ವಪ್ರಣತಂ ನಾರಾಯಣಮೇವ ।**





**ಅನ್ವಪಿ = ಪುನರಪಿ, ಪ್ರಣಮ್ಯ = ಭಕ್ತ್ಯಾದ್ಯುಪೇತತಾಲಕ್ಷಣೇನ ಪ್ರಕರ್ಷೇಣ ನತ್ವಾ, ಅಹಂ ಪರಮಾಖ್ಯವಿದ್ಯಾಯಾ ಬ್ರಹ್ಮಮೀಮಾಂಸಾಶಾಸ್ತ್ರರೂಪಾಯಾ ವ್ಯಾಖ್ಯಾಂ ಕರೋಮಿ ಇತಿ ಸಂಬಂಧಃ। ವರ್ತಮಾನಸಾಮೀಪ್ಯಾತ್ ವರ್ತಮಾನ-ವ್ಯಪದೇಶಃ। ಸಂಕ್ಷೇಪತೋ ವ್ಯಾಖ್ಯಾನಸ್ಯ ಪ್ರಕ್ರಾಂತತ್ವಾತ್ ವಾ ॥**

ನಾರಾಯಣನ ಪ್ರಣಾಮವು ಹೇಗೆ ಅಭೀಷ್ಟಗಳನ್ನು ನೀಡುತ್ತದೋ ಅದರಂತೆ ಗುರುಗಳ ಪ್ರಣಾಮವೂ ಕೂಡ ಅಭೀಷ್ಟವನ್ನು ನೀಡುತ್ತದೆ. ಆದ್ದರಿಂದ ಗ್ರಂಥರಚನೆಯ ಪ್ರಾರಂಭದಲ್ಲಿ ನಾರಾಯಣನಮನದಂತೆ ಗುರುಪ್ರಣಾಮವನ್ನೂ ಕೂಡ ಅತ್ಯವಶ್ಯವಾಗಿ ಅನುಷ್ಠಾನ ಮಾಡಬೇಕು.

ಇದನ್ನು ಅನುವ್ಯಾಖ್ಯಾನಕರ್ತೃಗಳಾದ ಜಗದ್ಗುರು ಶ್ರೀಮಧ್ವಾಚಾರ್ಯರು ಮಾಡು-ತ್ತಿದ್ದಾರೆ. ಮತ್ತು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ತಾನು ವ್ಯಾಖ್ಯಾನ ಮಾಡುತ್ತಿದ್ದೇನೆಂದು ಪ್ರತಿಜ್ಞೆಯನ್ನೂ ಕೂಡ ಇದೇ ಶ್ಲೋಕದಲ್ಲೇ ಮಾಡುತ್ತಿದ್ದಾರೆ.

ತಮೇವ= ಹಿಂದೆ ನಮಸ್ಕಾರಮಾಡಲ್ಪಟ್ಟ ನಾರಾಯಣನನ್ನೇ ಅನ್ವಪಿ = ಮತ್ತೊಮ್ಮೆ, ಪ್ರಣಮ್ಯ = ಭಕ್ತ್ಯತಿಶಯವೇ ಮೊದಲಾದ ಗುಣಗಳಿಂದ ಕೂಡಿದ ಉತ್ಕೃಷ್ಟವಾದ ನಮಸ್ಕಾರವನ್ನು ಮಾಡಿ, ಅಹಮೇವ = ನಾನೇ(ಶ್ರೀಮದಾನಂದತೀರ್ಥರು), ಪರಮಾಖ್ಯ-ವಿದ್ಯಾವಾಖ್ಯಾಂ = ಪರವಿದ್ಯೆ ಎಂಬ ಮತ್ತೊಂದು ಹೆಸರುಳ್ಳ ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನವನ್ನು ಕರೋಮಿ = ಮಾಡುತ್ತೇನೆ. ಹೀಗೆ ಶ್ಲೋಕದಲ್ಲಿ ಅನ್ವಯಕ್ರಮವನ್ನು ತಿಳಿಯಬೇಕು. ವರ್ತಮಾನಕಾಲವು ಸಮೀಪದಲ್ಲಿರುವುದರಿಂದ ಕರೋಮಿ ಎಂಬ ವರ್ತ-ಮಾನಪ್ರಯೋಗವನ್ನು ಮಾಡಿದ್ದಾರೆ. ಅಥವಾ ಹಿಂದೆ ವ್ಯಾಖ್ಯಾನ ಮಾಡಿದಂತೆ ಪ್ರಥಮ-ಶ್ಲೋಕದಲ್ಲಿ ಸಂಕ್ಷೇಪಶಾಸ್ತ್ರಾರ್ಥವನ್ನು ಹೇಳಿರುವುದರಿಂದ ವ್ಯಾಖ್ಯಾನವು ಪ್ರಾರಂಭವಾಗಿದೆ. ಆದ್ದರಿಂದಲೂ ಕರೋಮಿ ಎಂಬ ಪ್ರಯೋಗವು ಯುಕ್ತವಾಗುತ್ತದೆ.

## 'ಕರಿಷ್ಯಾಮಿ' ಎನ್ನಬೇಕಿತ್ತೇ?

ಪರಿಮಳ– ಗುರುನತಿವ್ಯೆಯರ್ಥ್ಯಮಾಶಂಕ್ಯ ಆಹ – ನಾರಾಯಣೇತಿ ॥ ಅಭಿಮತೇತಿ ॥

'ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ...'

ಇತ್ಯುಕ್ತೇರಿತಿ ಭಾವಃ । 'ಪರಮಾಖ್ಯವಿದ್ಯಾ' ಇತ್ಯಸ್ಯ ವ್ಯರ್ಥತಾಂ ನಿರಾಹ – ಬ್ರಹ್ಮ-ಮೀಮಾಂಸಾ ಇತ್ಯಾದಿ ॥ ನನು 'ಓತತ್ತ್ವವಾಚೀ' ಇತ್ಯಾದಿನೈವ ಸೂತ್ರವ್ಯಾಖ್ಯಾನಸ್ಯ ಕರಿಷ್ಯಮಾಣತ್ವಾತ್ ತತಃ ಪೂರ್ವಗ್ರಂಥಸ್ಯ ಶಾಸ್ತ್ರಸ್ಯ ವ್ಯಾಖ್ಯೇಯತೋಪಯುಕ್ತಪ್ರಮೇಯ-ಪ್ರತಿಪಾದನಪರತ್ವಾತ್ 'ಕರಿಷ್ಯಾಮಿ' ಇತ್ಯೇವ ಪ್ರಯೋಕ್ತವ್ಯಂ ನ ತು 'ಕರೋಮಿ' ಇತಿ । ಲಡಂತಸ್ಯ 'ವರ್ತಮಾನೇ ಲಟ್' ಇತಿ ಸೂತ್ರೇಣ ಪ್ರಾರಬ್ಧಾಪರಿಸಮಾಪ್ತಿಕ್ರಿಯೋಪಲಕ್ಷಿತೇ ಕಾಲೇ ವಿವಕ್ಷಿತೇ ಲಟ್ ಭವತೀತ್ಯುಕ್ತ್ಯಾ ಭವಿಷ್ಯದರ್ಥಾವಾಚಿತ್ವಾತ್ ಇತ್ಯತ ಆಹ – ವರ್ತ-ಮಾನೇತಿ ॥ 'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ' ಇತಿ ಸೂತ್ರಾದಿತಿ ಭಾವಃ । ವರ್ತಮಾನವ್ಯಪದೇಶೇ ಹೇತ್ವಂತರಮಾಹ – ಸಂಕ್ಷೇಪತ ಇತಿ ॥ 'ಶ್ರೋತೃಬುದ್ಧ್ಯನು-ಕೂಲಾಯ ಇತ್ಯಾದಿನಾ ಪೂರ್ವಪ್ರಕಾರೇಣ' ಇತ್ಯರ್ಥಃ ।

ಗುರುಗಳ ನಮಸ್ಕಾರವು ವ್ಯರ್ಥವಲ್ಲವೇ? ಎಂಬ ಆಶಂಕೆಗೆ ಉತ್ತರಿಸಲು 'ನಾರಾಯಣ-ಪ್ರಣಾಮಸ್ಸ್ವೈವ' ಎಂಬ ವಾಕ್ಯವು ಹೊರಟಿದೆ. 'ಅಭಿಮತಸಿದ್ಧ್ಯಂಗತಯಾ' ಎಂಬುದರಿಂದ 'ಗುರುಪ್ರಣಾಮವು ಇಷ್ಟಾರ್ಥಪ್ರದವಾಗಿದೆ' ಎಂದಿದ್ದಾರೆ.

'ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥'

'ದೇವತೆಯಲ್ಲಿ ಭಕ್ತಿ ಮಾಡಿದಂತೆ ಗುರುಗಳಲ್ಲೂ ಕೂಡ ಭಕ್ತಿ ಮಾಡಬೇಕು. ಆಗ ಗುರು-ಗಳು ಉಪದೇಶಿಸಿದ ಅರ್ಥಗಳು ಸ್ಫುರಣವಾಗುತ್ತವೆ' ಎಂಬ ವಚನದಂತೆ ಗುರುಪ್ರಣಾಮವು





ಇಷ್ಟಾರ್ಥಪ್ರದವಾಗಿದೆ. 'ಬ್ರಹ್ಮಮೀಮಾಂಸಾಶಾಸ್ತ್ರರೂಪಾಯಾಃ ಪರಮಾಖ್ಯವಿದ್ಯಾಯಾಃ' ಎಂಬುದಾಗಿ ನ್ಯಾಯಸುಧಾದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಇದರಿಂದ ಮೂಲಶ್ಲೋಕದಲ್ಲಿ 'ಪರಮಾಖ್ಯವಿದ್ಯಾ' ಎಂಬ ಪದವು ವ್ಯರ್ಥವಲ್ಲವೇ? ಎಂಬ ಆಶಂಕೆಯನ್ನು ನಿರಾಕರಣೆ ಮಾಡಿದಂತಾಯಿತು.

ಈ ಶ್ಲೋಕದಲ್ಲಿ 'ಕರೋಮಿ' = ಮಾಡುತ್ತೇನೆ ಎಂಬುದಾಗಿ ವರ್ತಮಾನಕಾಲವಾಚಕ-ವಾದ ಕ್ರಿಯಾಪದದ ಪ್ರಯೋಗವನ್ನು ಮಾಡಿದ್ದು ಸರಿಯಲ್ಲ. ಏಕೆಂದರೆ 'ಓತತ್ವವಾಚೀ' ಇತ್ಯಾದಿಯಾಗಿ ಮುಂದೆ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ. ಅದಕ್ಕಿಂತ ಮೊದಲು ಸೂತ್ರ-ವ್ಯಾಖ್ಯಾನವು ಇರುವುದಿಲ್ಲ. ಕೇವಲ ವ್ಯಾಖ್ಯಾನ ಮಾಡಲು ಉಪಯುಕ್ತವಾದ ಪ್ರಮೇಯ-ಗಳನ್ನಷ್ಟೇ ಉಪಪಾದನೆ ಮಾಡುತ್ತಾರೆ. ಹೀಗಿರುವಾಗ 'ವ್ಯಾಖ್ಯಾಂ ಕರಿಷ್ಯಾಮಿ' ಎಂಬುದಾಗಿ ಭವಿಷ್ಯದರ್ಥದಲ್ಲಿರುವ ಕ್ರಿಯಾಪದವನ್ನೇ ಪ್ರಯೋಗ ಮಾಡಬೇಕಿತ್ತು. ಕರೋಮಿ ಎಂಬ ವರ್ತಮಾನವಾಚಕವಾದ ಕ್ರಿಯಾಪದವನ್ನು ಪ್ರಯೋಗ ಮಾಡಿದ್ದು ಸಾಧುವಲ್ಲ. ಕ್ರಿಯೆಯು ಪ್ರಾರಂಭವಾಗಿರಬೇಕು. ಅದು ಮುಗಿಯುವ ತನಕ ಎಷ್ಟು ಕಾಲವಿರುತ್ತದೋ ಆದನ್ನು ಉದ್ದೇ-ಶಿಸುವಾಗ ಮಾತ್ರ ಲಟ್ ಲಕಾರವನ್ನು ಪ್ರಯೋಗ ಮಾಡುವುದು ವ್ಯಾಕರಣಸೂತ್ರಕ್ಕೆ ಸಮ್ಮತ. ಹಾಗಾಗಿ ವ್ಯಾಖ್ಯಾನವೆಂಬ ಕ್ರಿಯೆಯೇ ಪ್ರಾರಂಭವಾಗಿಲ್ಲ. ಮೊದಲೇ ಕರೋಮಿ ಎಂಬ ವರ್ತಮಾನ ಕಾಲದ ಕ್ರಿಯಾಪದವು ಹೇಗೆ ಯುಕ್ತವಾಗುತ್ತದೆ. ಮುಂದೆ ಮಾಡಲ್ಪಡುವ ವ್ಯಾಖ್ಯಾನ ಕ್ರಿಯೆಯನ್ನು ಈ ವರ್ತಮಾನವಾಚಿಯಾದ ಪದವು ಪ್ರತಿಪಾದನೆ ಮಾಡುವುದಿಲ್ಲ. ಈ ಆಕ್ಷೇಪಕ್ಕೆ 'ವರ್ತಮಾನಸಾಮೀಪ್ಯಾತ್' ಎಂಬ ಸುಧಾವಾಕ್ಯದಿಂದ ಉತ್ತರಿಸುತ್ತಿದ್ದಾರೆ. ವರ್ತಮಾನಕಾಲಕ್ಕೆ ಹತ್ತಿರದಲ್ಲಿರುವ ಭೂತ ಹಾಗೂ ಭವಿಷ್ಯತ್ಕಾಲಗಳ ಅರ್ಥದಲ್ಲಿಯೂ ವರ್ತಮಾನದಂತೆ ಲಟ್‌ಪ್ರಯೋಗವು ಯುಕ್ತವಾಗುತ್ತದೆ. ಹೀಗೆ 'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ' ಎಂಬ ಸೂತ್ರವು ಹೇಳುತ್ತಿದೆ. ವರ್ತಮಾನಕಾಲವಾಚಿಯಾದ ಕರೋಮಿ ಎಂಬ ಪದಪ್ರಯೋಗ ಮಾಡಲು ಮತ್ತೊಂದು ಕಾರಣವನ್ನು 'ಸಂಕ್ಷೇಪತಃ' ಎಂಬುದಾಗಿ ಹೇಳಿದ್ದಾರೆ. 'ಶ್ರೋತೃಬುದ್ಧ್ಯನುಕೂಲನಾಯ' ಎಂಬುದಾಗಿ ಹಿಂದೆ ಹೇಳಿದ ಕ್ರಮದಂತೆ ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನವು ಪ್ರಥಮಪದ್ಯದಲ್ಲಿಯೇ ಪ್ರಾರಂಭವಾಗಿದೆ.





ವಿಶೇಷವಿಚಾರ – ನಾರಾಯಣನ ಪ್ರಣಾಮದಂತೆ ಗುರುವಿನ ಪ್ರಣಾಮವೂ ಕೂಡ ಅಭೀಷ್ಟಸಿದ್ಧಿಗೆ ಸಾಧಕ. ಆದ್ದರಿಂದ ಕಾರ್ಯದ ಪ್ರಾರಂಭದಲ್ಲಿ ಗುರುಪ್ರಣಾಮವನ್ನು ಅವಶ್ಯವಾಗಿ ಆಚರಿಸಬೇಕು. ಆನಂದತೀರ್ಥರು ಕೂಡ ಅನುವ್ಯಾಖ್ಯಾನದ ಪ್ರಾರಂಭದಲ್ಲಿ ಗುರುನಮಸ್ಕಾರಪೂರ್ವಕವಾಗಿ, ತಾವು ಮಾಡಲಿರುವ ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನವನ್ನು ಸಮರ್ಥಿಸುತ್ತಾ ಪ್ರತಿಜ್ಞಾ ಮಾಡುತ್ತಾರೆ – 'ತಮೇವೇತಿ' ಎಂದು. 'ತಂ' ಎಂದರೆ ಹಿಂದೆ ನಮಸ್ಕರಿಸಲ್ಪಟ್ಟ ನಾರಾಯಣನನ್ನೇ ಎಂದು ಅರ್ಥ.

'ಓತತ್ವವಾಚೀ ಹ್ಯೋಂಕಾರಃ..' ಎಂದು ಮುಂದೆ ಆಚಾರ್ಯರು ಸೂತ್ರವ್ಯಾಖ್ಯಾನವನ್ನು ಪ್ರಾರಂಭಿಸುತ್ತಾರೆ. ಅದಕ್ಕಿಂತ ಹಿಂದಿನ ಗ್ರಂಥದಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರವು ವ್ಯಾಖ್ಯೇಯವೆಂದು ಸಮರ್ಥಿಸುತ್ತಾರೆ. ಆದ್ದರಿಂದ 'ಕರೋಮಿ' ಎಂಬ ವರ್ತಮಾನಾರ್ಥಕಲಟ್‌ಪ್ರಯೋಗ ಸರಿಯಲ್ಲ. 'ಕರಿಷ್ಯಾಮಿ' ಎಂದು ಭವಿಷ್ಯದರ್ಥಕವಾದ ಲೃಟ್‌ಲಕಾರವನ್ನೇ ಪ್ರಯೋಗಿಸಬೇಕಾಗಿತ್ತು ಎಂಬ ಆಕ್ಷೇಪ ಸರಿಯಲ್ಲ. ಏಕೆಂದರೆ 'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ' ಎಂಬ ಪಾಣಿನೀಯ ಸೂತ್ರದಂತೆ ವರ್ತಮಾನಸಾಮೀಪ್ಯದಲ್ಲಿಯೂ ಲಟ್‌ಲಕಾರವನ್ನು ಪ್ರಯೋಗಿಸಬಹುದು. ಪ್ರಕೃತದಲ್ಲಿ ಆಚಾರ್ಯರು ಮಂಗಳವನ್ನು ಮಾಡಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವ್ಯಾಖ್ಯೇಯತ್ವವನ್ನು ಸಮರ್ಥಿಸಿದ ಕೂಡಲೇ ವ್ಯಾಖ್ಯಾನವನ್ನು ಪ್ರಾರಂಭಿಸುತ್ತಾರೆ. ಹೀಗೆ ವರ್ತಮಾನಸಾಮೀಪ್ಯವಿರುವುದರಿಂದ ವರ್ತಮಾನಾರ್ಥಕ ಲಟ್‌ಪ್ರಯೋಗ ಸರಿ. ಅಥವಾ ಹಿಂದೆ ತಿಳಿಸಿದಂತೆ ಸಂಕ್ಷಿಪ್ತವಾಗಿ ಸಕಲಶಾಸ್ತ್ರಾರ್ಥವನ್ನು ಮೊದಲ ಪದ್ಯದಿಂದ ನಿರೂಪಿಸಿರುವುದರಿಂದ ವ್ಯಾಖ್ಯಾನವನ್ನು ಈಗಾಗಲೇ ಪ್ರಾರಂಭಿಸಲಾಗಿದೆ. ಆದ್ದರಿಂದ 'ಕರೋಮಿ' ಎಂಬ ಪ್ರಯೋಗ ಸರಿ.

## ಸೂತ್ರವ್ಯಾಖ್ಯಾನದ ಪ್ರತಿಜ್ಞೆ

ವಾಕ್ಯಾರ್ಥಚಂದ್ರಿಕಾ– ದ್ವಿತೀಯಪದ್ಯಸ್ಯ ಸೂತ್ರವ್ಯಾಖ್ಯಾನತ್ವಭ್ರಾಂತಿಂ ವಾರಯನ್ನೇವ ತತ್ಪ್ರತಿ -ಪಾದ್ಯಂ ಸಹೇತುಕಮಾಹ – ನಾರಾಯಣೇತಿ ॥ ಸೂತ್ರವ್ಯಾಖ್ಯಾನಕರಣಸ್ಯ 'ಪರಮಾಖ್ಯವಿದ್ಯಾ- ವ್ಯಾಖ್ಯಾಂ ಕರೋಮಿ' ಇತಿ ಪ್ರತಿಜ್ಞಾನೇನ ಅಸಂಗತಿಶಂಕಾಂ ನಿರಾಕುರ್ವನ್ 'ಅನ್ವಪಿ' ಇತ್ಯಸ್ಯೋ- ಭಯತ್ರ ಸಂಬಂಧಮಭಿಪ್ರೇತ್ಯ ವ್ಯವಹಿತತ್ವಾತ್ ಸಂಬಂಧಂ ಚ ದರ್ಶಯತಿ – ತಮಿತ್ಯಾದಿನಾ ॥

'ತಮೇವ ಶಾಸ್ತ್ರಪ್ರಭವಂ' ಎಂಬ ಎರಡನೆಯ ಪದ್ಯದ ವ್ಯಾಖ್ಯಾನವನ್ನು ಪ್ರಾರಂಭ ಮಾಡು- ತ್ತಿದ್ದಾರೆ. ಈ ಎರಡನೆಯ ಶ್ಲೋಕವು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದೆಯೇ? ಎಂಬ ಭ್ರಾಂತಿಯನ್ನು



ಪರಿಹಾರ ಮಾಡುತ್ತಿದ್ದಾರೆ. ಮತ್ತು ಇದರಿಂದ ಪ್ರತಿಪಾದ್ಯವಾದ ವಿಷಯವನ್ನು ಹೇತುಪೂರ್ವಕವಾಗಿ ಸಮರ್ಥನೆ ಮಾಡಲು 'ನಾರಾಯಣ' ಇತ್ಯಾದಿ ಟೀಕಾವಾಕ್ಯವು ಪ್ರವೃತ್ತವಾಗಿದೆ.

ಸೂತ್ರವ್ಯಾಖ್ಯಾನವನ್ನು ಮಾಡಲು ಈ ಅನುವ್ಯಾಖ್ಯಾನ ಗ್ರಂಥವು ಹೊರಟಿದೆ. ಆದರೆ 'ಪರಮಾಖ್ಯವಿದ್ಯಾಮ್ಯಾಖ್ಯಾಂ ಕರೋಮಿ' ಎಂಬುದಾಗಿ ಇಲ್ಲಿ ಪ್ರತಿಜ್ಞೆ ಮಾಡುತ್ತಿದ್ದಾರೆ. ಪ್ರತಿಜ್ಞೆಗೂ ಕಾರ್ಯಕ್ಕೂ ಸಂಗತಿಯೇ ಇರುವುದಿಲ್ಲವಲ್ಲ? ಈ ಆಕ್ಷೇಪವನ್ನು ಪರಿಹಾರ ಮಾಡುತ್ತಿದ್ದಾರೆ. ಸೂತ್ರವೇ ಪರಮಾಖ್ಯವಿದ್ಯಾ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಅಸಂಗತಿ ಇಲ್ಲ. ಮತ್ತು 'ಅನ್ವಪಿ' ಎಂಬುದಕ್ಕೆ ಎರಡು ಕಡೆ ಸಂಬಂಧವಿದೆ ಎಂಬ ಅಭಿಪ್ರಾಯವನ್ನು ಹೊಂದಿ ವ್ಯವಹಿತವಾದ್ದರಿಂದ ಸಂಬಂಧವನ್ನು ತೋರಿಸಲು 'ತಮ್'' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

## 'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ'

ವಾಕ್ಯಾರ್ಥಚಂದ್ರಿಕಾ – ವರ್ತಮಾನೇತಿ ॥ 'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ' ಇತಿ ಸೂತ್ರೇ ಚಾತುರ್ವರ್ಣ್ಯಾದಿಸಿದ್ಧ್ಯರ್ಥಂ ಸ್ವಾರ್ಥಿಕಷ್ಯಞ್ಜ್ಞಾಪಕಃ ಷ್ಯಞಂತಃ ಸಾಮೀಪ್ಯಶಬ್ದಃ।

(ವರ್ತಮಾನಸಾಮೀಪ್ಯೇ ವರ್ತಮಾನವದ್ವಾ' ಸಮೀಪಮೇವ ಸಾಮೀಪ್ಯಮ್ । ಸ್ವಾರ್ಥೇ ಷ್ಯಞ್ । 'ವರ್ತಮಾನೇ ಲಟ್' ಇತ್ಯಾರಭ್ಯ 'ಉಣಾದಯೋ ಬಹುಲಮ್' ಇತಿ ಯಾವತ್ ಯೇನೋಪಾಧಿನಾ ಪ್ರತ್ಯಯಾ ಉಕ್ತಾಸ್ತೇ ತಥೈವ ವರ್ತಮಾನಸಮೀಪೇ ಭೂತೇ ಭವಿಷ್ಯತಿ ಚ ವಾ ಸ್ಯುಃ । ಕದಾ ಆಗತೋಽಸಿ । ಅಯಮಾಗಚ್ಛಾಮಿ । ಅಯಮಾಗತಮ್ । ಕದಾ ಗಮಿಷ್ಯಾಮಿ । ಏಷ ಗಚ್ಛಾಮಿ । ಗಮಿಷ್ಯಾಮಿ ವಾ । ಯೇನೋಪಾಧಿನೇತಿ ॥ ತಥಾ ಹಿ – ಪೂಜ್ಯಜೋಃ ಶಾನನ್ ವಿಹಿತಃ । ಸ ತಾಭ್ಯಾಮೇವ ನ ತು ಧಾತ್ವಂತರಾತ್ । ತಚ್ಛೀಲಾದಿವಿಶಿಷ್ಟೇ ಕರ್ತರ್ಯಲಂಪೂರ್ವಾತ್ ಕೃಞ ಇಷ್ಣುಜುಕ್ತಃ ಸೋಽಪಿ ತಸ್ಮಿನ್ನುಪಾಧೌ ಸತ್ಯೇವ ಇತ್ಯಾದಿ । 'ಕದಾ ಆಗತೋಽಸಿ' ಇತಿ ಭೂತಕಾಲೇನ ಪ್ರಶ್ನವಾಕ್ಯಮುದಾಹರಣೇ ಭೂತಕಾಲಾದಭಿವ್ಯಕ್ತಯೇ । ಏವಂ 'ಕದಾ ಗಮಿಷ್ಯಸಿ' ಇತ್ಯತ್ರಾಪಿ ಊಹ್ಯಮ್ । ಉದಾಹರಣಯೋಃ 'ಅಯಮ್, ಏಷ' ಇತಿ ಪದಾಭ್ಯಾಮ್ ಆಗಮನಾ-ವಿನಾಭೂತಂ ಪ್ರಸ್ವೇದಪರಿಕರಬಂಧಾದಿಯುಕ್ತಂ ತತ್ತತ್ತಿನಿರ್ದಿಶ್ಯತೇ । ಇದಾನೀಮ್ ಆಗಮನಮ್ ಇತಿ ಧ್ವನಯಿತುಂ ತೇನ, 'ಕದಾ' ಇತಿ ಪ್ರಶ್ನಂ ಪ್ರತ್ಯಾರ್ಥಿಕಮುತ್ತರಂ ಸಂಗಚ್ಛತೇ । ಸಾಮೀಪ್ಯಂ ಚ ದ್ಯೋತಿತಂ ಭವತಿ । ಆಕ್ಷೇಪೇಣ ಉಪಪತ್ತಿಮಾಶ್ರಿತ್ಯ ಪ್ರತ್ಯಾಖ್ಯಾತಮಿದಮಾಕರೇ) । ತಥಾ ಚ ವರ್ತಮಾನಸಮೀಪೇ ಭೂತೇ ಭವಿಷ್ಯತಿ ಚಾರ್ಥೇ ವರ್ತಮಾನಾದ್ಧಾತೋಃ 'ವರ್ತಮಾನೇ ಲಟ್'





ಇತ್ಯಾರಭ್ಯ ಯಾವದುಣಾದಯೋ ಬಹುಲಮ್ ಇತಿ ವಿಭಾಷಯಾ ವರ್ತಮಾನವತ್ ಪ್ರತ್ಯಯಾ ಭವಂತೀತಿ ಸೂತ್ರಾರ್ಥನಿಷ್ಪತ್ತ್ಯಾ ವರ್ತಮಾನಸಮೀಪೇ ಭವಿಷ್ಯತಿ, ಕರೋಮಿ ಇತಿ ಲಟ್ ಇತ್ಯರ್ಥಃ। ಏತಚ್ಚ ಪ್ರತಿಪತ್ತಿವಿಶೇಷಾನಾಶ್ರಯಣೇನ ಆದ್ಯಪದ್ಯಪೂರ್ವವ್ಯಾಖ್ಯಾನಷಟ್ಕಪಕ್ಷೇ । ಅನ್ಯಥಾ 'ಗಚ್ಛಾಮಿ' ಇತ್ಯಾದೇಃ ವರ್ತಮಾನಾರ್ಥತ್ವೇಽಪಿ ಕಾಲಾಂತರಸ್ಯ ಪ್ರಶ್ನವಾಕ್ಯಬಲಲಭ್ಯತ್ವೇನ ವಾಕ್ಯ-ಕಾಲಸ್ಯ ಪದಸಂಸ್ಕಾರೇಽನುಪಯೋಗೇನ ನ ತತ್ರ ವರ್ತಮಾನವತ್ ಪ್ರತ್ಯಯಾ ಇತಿ ವಿಶೇಷಪ್ರತಿ-ಪತ್ತಾರಂ ಪ್ರತಿ ಏತತ್ ಸಮಾಧಾನಸ್ಯಾಸಂಭವಾತ್ । ನ ಚ ಪ್ರಕೃತೇ ತಾದೃಶಪ್ರಶ್ನವಾಕ್ಯಸ್ಯಾಭಾವಾನ್ನ ತದ್ಬಲೇನ ಕಾಲಾಂತರಲಾಭ ಇತಿ ವಾಚ್ಯಮ್, ಅತ್ರಾಪಿ ಪ್ರಶ್ನವಾಕ್ಯಾಹರಣಸ್ಯ ವಕ್ತರಿ ಆವಶ್ಯಕತ್ವಾದಿತಿ ದ್ರಷ್ಟವ್ಯಮ್ । ಅಂತಿಮವ್ಯಾಖ್ಯಾನಾನುರೋಧೇನಾಹ – ಸಂಕ್ಷೇಪತ ಇತಿ ॥ ಪ್ರಕ್ರಾಂತತ್ವಾದಿತಿ ॥ 'ಪ್ರಾರಬ್ಧತ್ವಾತ್' ಇತ್ಯರ್ಥಃ।

'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ' ಎಂಬ ಸೂತ್ರದಲ್ಲಿ ವರ್ತಮಾನಕಾಲವು ಸಮೀಪದಲ್ಲಿದ್ದಾಗಲೂ ಕೂಡ ವರ್ತಮಾನಕ್ರಿಯಾವಾಚಕವಾದ ಪದಗಳಿಗೆ ಯಾವ ಪ್ರತ್ಯಯಗಳು ಬರುತ್ತವೋ ಆ ಎಲ್ಲಾ ಪ್ರತ್ಯಯಗಳೂ ಬರುತ್ತವೆಂದು ಹೇಳುತ್ತಿದ್ದಾರೆ. ಈ ಸೂತ್ರದಲ್ಲಿ ಸಾಮೀಪ್ಯಶಬ್ದವು ಸ್ವಾರ್ಥದಲ್ಲಿರುವ ಷ್ಯಙ್‌ಪ್ರತ್ಯಯಾಂತವಾಗಿದೆ. ಇಲ್ಲಿ ಸಮೀಪವೇ ಸಾಮೀಪ್ಯ ಎಂದು ಕರೆಯಲ್ಪಟ್ಟಿದೆ. ಸ್ವಾರ್ಥದಲ್ಲಿ ಷ್ಯಙ್‌ಪ್ರತ್ಯಯವು ಬಂದಿದೆ. 'ಚತ್ವಾರಃ ವರ್ಣಾಃ ಏವ ಚಾತುರ್ವರ್ಣ್ಯ' ಎಂದು ಕರೆಸಿ-ಕೊಳ್ಳುವಂತೆ ಇಲ್ಲೂ ಕೂಡ ಸಮೀಪವೇ ಸಾಮೀಪ್ಯ ಎಂದು ಕರೆಸಿಕೊಳ್ಳುತ್ತವೆ.

ಆದ್ದರಿಂದ ವರ್ತಮಾನಕಾಲವು ಸಮೀಪದಲ್ಲಿರುವ ಭೂತ ಹಾಗೂ ಭವಿಷ್ಯದರ್ಥಗಳಲ್ಲೂ ವರ್ತಮಾನವಾಚಕವಾದ ಧಾತುಗಳಿಗೆ ವರ್ತಮಾನೇ ಲಟ್ ಎಂಬ ಸೂತ್ರದಿಂದ ಪ್ರಾರಂಭ ಮಾಡಿ 'ಉಣಾದಯೋ ಬಹುಲಮ್' ಎಂಬ ಸೂತ್ರದ ತನಕ ಪ್ರತ್ಯಯಗಳು ವರ್ತಮಾನಕಾಲದಂತೆ ವಿಕಲ್ಪವಾಗಿ ಬರುತ್ತವೆ. ಇದನ್ನೂ ಕೂಡ ಪ್ರತಿಪತ್ತಿವಿಶೇಷವನ್ನು ಆಶ್ರಯಿಸದೇ ಇರುವುದರಿಂದ ಒಟ್ಟು ಏಳು ವ್ಯಾಖ್ಯಾನಗಳಲ್ಲಿ ಮೊದಲನೆಯ ಆರು ವ್ಯಾಖ್ಯಾನಗಳಲ್ಲಿ ಮಾತ್ರ ವಿವಕ್ಷಿಸಬೇಕು. ಇಲ್ಲದಿದ್ದರೆ 'ಗಚ್ಛಾಮಿ' ಎಂಬುದು ವರ್ತಮಾನಾರ್ಥಕವಾಗಿದ್ದರೂ ಕೂಡ ಕಾಲಾಂತರವು ಪ್ರಶ್ನವಾಕ್ಯಬಲದಿಂದಲೇ ಲಭ್ಯವಾಗುತ್ತದೆ. ವಾಕ್ಯಕಾಲಕ್ಕೆ ಪದಸಂಸ್ಕಾರದಲ್ಲಿ ಯಾವುದೇ ಉಪಯೋಗವಿಲ್ಲದ್ದರಿಂದ ಅಲ್ಲಿ ವರ್ತ-ಮಾನದಂತೆ ಪ್ರತ್ಯಯಗಳು ಬರಲು ಸಾಧ್ಯವಿಲ್ಲ. ಹೀಗೆ ವಿಶೇಷಪ್ರತಿಪತ್ತೃವನ್ನು ಕುರಿತು ಈ ಸಮಾಧಾನವು ಅಸಂಭಾವಿತವಾಗುತ್ತದೆ. ಪ್ರಕೃತದಲ್ಲಿ ಅಂಥ ಪ್ರಶ್ನವಾಕ್ಯವು ಇಲ್ಲದ ಕಾರಣ ಅದರ ಆಧಾರದಿಂದ ಕಾಲಾಂತರವು ಲಾಭವಾಗುತ್ತದೆಂದು ಹೇಳಬಾರದು. ಇಲ್ಲೂ ಕೂಡ ಪ್ರಶ್ನವಾಕ್ಯದ

ಆಹರಣವು ವಕ್ಯವಿನಲ್ಲಿ ಆವಶ್ಯಕವಾಗಿದೆ ಎಂದು ತಿಳಿಯಬೇಕು. ಕೊನೆಯ ವ್ಯಾಖ್ಯಾನಕ್ಕೆ ಅನುಸಾರಿಯಾಗಿ 'ಸಂಕ್ಷೇಪತಃ' ಎಂಬ ಟೀಕಾವಾಕ್ಯವು ಹೊರಟಿದೆ. 'ಪ್ರಕ್ರಾಂತತ್ವಾತ್' ಎಂದರೆ 'ಪ್ರಾರಂಭ ಮಾಡಿರುವುದು' ಎಂದರ್ಥ.

## ರಸಘಟ್ಟ
## ನಾರಾಯಣಪ್ರಣಾಮ, ಗುರುಪ್ರಣಾಮಗಳು
## ಪ್ರತ್ಯೇಕ ಕಾರಣಗಳು

ಆನಂದ – ನನ್ವಾದ್ಯಪದ್ಯೇನ ನಾರಾಯಣವಂದನಸ್ಯ ಕೃತತ್ವಾತ್ ಪುನಃ ಅನೇನಾಪಿ ಪದ್ಯೇನ ವಂದನೇ ಪೌನರುಕ್ತ್ಯಮ್ । ಯದಿ ಚ ಬಹುಶೋ ವಂದನಸ್ಯ ಫಲವಿಶೇಷಸಿದ್ಧ್ಯಂಗತ್ವಾತ್ ಪುನರ್ವಂದನಮಿತಿ । ತರ್ಹಿ ಪ್ರಥಮಪದ್ಯ ಏವ ಬಹುಶೋ 'ನಮಾಮಿ' ಇತಿ ಪ್ರಯೋಕ್ತವ್ಯ ಇತ್ಯತಃ ತತ್ ಪ್ರತಿಪಾದ್ಯಮಾಹ – ನಾರಾಯಣೇತಿ ॥ ಅತ್ರ ಪದ್ಯೇ ಪೂರ್ವಾರ್ಧೇನ ಗುರುಪ್ರಣಾಮಃ । 'ವ್ಯಾಖ್ಯಾಂ ಕರೋಮಿ' ಇತ್ಯನೇನ ಮೀಮಾಂಸಾಶಾಸ್ತ್ರವ್ಯಾಖ್ಯಾನಪ್ರತಿಜ್ಞಾ । 'ವ್ಯಾಖ್ಯಾಮ್ ಅನ್ವಪಿ' ಇತ್ಯನೇನ ತತ್ಸಮರ್ಥನಮಿತಿ ವಿವೇಕಃ । ನನು ಗುರುಪ್ರಣಾಮೋ ನ ಕರ್ತವ್ಯಃ ಪ್ರಯೋಜನಾಭಾವೇನ ವೈಯರ್ಥ್ಯಾತ್ ಇತ್ಯತ ಉಕ್ತಮ್ – ನಾರಾಯಣಪ್ರಣಾಮಸ್ಯೇವ ಗುರುಪ್ರಣಾಮಸ್ಯಾಪಿ ಅಭಿಮತಸಿದ್ಧ್ಯಂಗತಯಾ ಕಾರ್ಯಾರಂಭೇ ಅವಶ್ಯಮನುಷ್ಠೇಯತ್ವಾತ್ ಇತಿ ॥ ನನು ನಾರಾಯಣಪ್ರಣಾಮಗುರುಪ್ರಣಾಮಯೋಃ ಅಭಿಮತಸಿದ್ಧೌ ಪ್ರತ್ಯೇಕಂ ವಾ ಕಾರಣತ್ವಂ ಸಮುಚ್ಚಯೇನ ವಾ । ಅಥ ವಿಕಲ್ಪೇನ । ನಾದ್ಯಃ । ತಥಾ ಸತಿ ನಾರಾಯಣಪ್ರಣಾಮಮಾತ್ರೇಣ ಗುರುಪ್ರಣಾಮಮಾತ್ರೇಣ ವಾ ಅಭಿಮತಸಿದ್ಧ್ಯಾಪತ್ತೇಃ । ನ ದ್ವಿತೀಯಃ । ತಥಾತ್ವೇ ನಾರಾಯಣಪ್ರಣಾಮಮಾತ್ರೇಣ ಅಭಿಮತಸಿದ್ಧಿರ್ನ ಸ್ಯಾತ್ । ನ ತೃತೀಯಃ । ಗುರುಪ್ರಣಾಮಸ್ಯ ಆವಶ್ಯಕತ್ವಾಭಾವೇನ ಗ್ರಂಥಾರಂಭೇ ನಿಯಮತಃ ತದನುಷ್ಠಾನಂ ನ ಸ್ಯಾತ್ । ತಥಾ ಚ ಕಥಮೇತದಿತಿ । ಮೈವಮ್ । ದಂಡಚಕ್ರಾದಿವತ್ ಪ್ರತ್ಯೇಕಮೇವ ತಯೋಃ ಕಾರಣತ್ವಾಂಗೀಕಾರಾತ್ । ಯಥಾ ದಂಡಚಕ್ರಯೋಃ ದಂಡತ್ವೇನ ದಂಡಸ್ಯ ಚಕ್ರತ್ವೇನ ಚಕ್ರಸ್ಯ ಘಟಂ ಪ್ರತಿ ಪ್ರತ್ಯೇಕಂ ಕಾರಣತ್ವೇಽಪಿ ನ ದಂಡಮಾತ್ರೇಣ ಚಕ್ರಮಾತ್ರೇಣ ಘಟೋತ್ಪತ್ತಿಃ, ತಥಾ ಪ್ರಕೃತೇಽಪಿ ನಾರಾಯಣಪ್ರಣಾಮತ್ವೇನ ನಾರಾಯಣಪ್ರಣಾಮಸ್ಯ ಗುರುಪ್ರಣಾಮತ್ವೇನ ಗುರುಪ್ರಣಾಮಸ್ಯ ಕಾರಣತ್ವೇಽಪಿ ನ ಅನ್ಯತರಮಾತ್ರೇಣ ಅಭಿಮತಸಿದ್ಧಿರಿತಿ ಉಭಯೋರಪಿ ಆವಶ್ಯಕತ್ವಮ್ ಇತಿ ನ ಕಶ್ಚಿದ್ದೋಷಃ ।





ಮೊದಲನೆಯ ಮಂಗಳಶ್ಲೋಕದಿಂದ ನಾರಾಯಣನ ನಮಸ್ಕಾರವನ್ನು ಮಾಡಿದ್ದಾಯಿತು. ಪುನಃ ಎರಡನೆಯ ಈ ಶ್ಲೋಕದಿಂದ ನಮಸ್ಕಾರವನ್ನು ಮಾಡಿದರೆ ಪುನರುಕ್ತಿ ಬರುತ್ತದೆ. ಒಂದು ವೇಳೆ ಅನೇಕಬಾರಿ ಮಾಡುವ ನಮಸ್ಕಾರವು ಫಲವಿಶೇಷಸಿದ್ಧಿಗೆ ಅಂಗವಾಗಿದೆ. ಆದ್ದರಿಂದ ಪುನಃ ಮಾಡುವ ನಮಸ್ಕಾರವು ವ್ಯರ್ಥವಲ್ಲ ಎಂದು ಉತ್ತರಿಸಿದರೆ ಮೊದಲನೆಯ ಪದ್ಯದಲ್ಲಿ ಬಹುಶಃ ನಮಾಮಿ ಎಂದು ಪ್ರಯೋಗ ಮಾಡಬಹುದಿತ್ತು. ಅದರಿಂದಲೇ ಅನೇಕಬಾರಿ ನಮಿಸಿದಂತಾಗುತ್ತದೆ. ಈ ಶ್ಲೋಕದಲ್ಲಿ ಪ್ರತ್ಯೇಕವಾಗಿ ನಮಸ್ಕಾರಮಾಡುವ ಅವಶ್ಯಕತೆಯಿಲ್ಲ. ಈ ಪ್ರಶ್ನೆಗೆ ಉತ್ತರಿಸಲು 'ನಾರಾಯಣಪ್ರಣಾಮಸ್ಯೈವ' ಇತ್ಯಾದಿ ಗ್ರಂಥವು ಹೊರಟಿದೆ. ಶ್ಲೋಕದಲ್ಲಿ ಪೂರ್ವಾರ್ಧದಿಂದ ಗುರುಪ್ರಣಾಮವನ್ನು ಮಾಡಿರುತ್ತಾರೆ. ಉತ್ತರಾರ್ಧದಿಂದ 'ವ್ಯಾಖ್ಯಾಂ ಕರೋಮಿ' ಎಂಬುದಾಗಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವ್ಯಾಖ್ಯಾನ ಮಾಡುತ್ತೇನೆಂಬ ಪ್ರತಿಜ್ಞೆಯನ್ನು ಮಾಡಿರುತ್ತಾರೆ. 'ವ್ಯಾಖ್ಯಾಮ್ ಅನ್ವಪಿ' ಎಂಬುದಾಗಿ ಇದನ್ನೇ ಸಮರ್ಥನೆ ಮಾಡಿರುತ್ತಾರೆ.

ಗುರುಗಳ ಪ್ರಣಾಮವನ್ನು ಮಾಡಬೇಕಾಗಿಲ್ಲ. ಏಕೆಂದರೆ ಗುರುಗಳ ಪ್ರಣಾಮಕ್ಕೆ ಯಾವುದೇ ಬಗೆಯ ಪ್ರಯೋಜನವಿಲ್ಲದ ಕಾರಣ ವ್ಯರ್ಥವಾಗಿದೆಯಲ್ಲವೇ? ಈ ಪ್ರಶ್ನೆಗೆ 'ನಾರಾಯಣಪ್ರಣಾಮಸ್ಯೈವ ಗುರುಪ್ರಣಾಮಸ್ಯಾಪಿ ಅಭಿಮತಸಿದ್ಧ್ಯಂಗತಯಾ ಕಾರ್ಯಾರಂಭೇ ಅವಶ್ಯಮನುಷ್ಠೇಯತ್ವಾತ್ ಇತಿ' ಎಂಬುದಾಗಿ ಉತ್ತರಿಸಿದ್ದಾರೆ.

ನಾರಾಯಣಪ್ರಣಾಮ ಹಾಗೂ ಗುರುಪ್ರಣಾಮಗಳು ಪ್ರತ್ಯೇಕವಾಗಿ ಅಭೀಷ್ಟಗಳಿಗೆ ಕಾರಣವೋ ಅಥವಾ ಸಮುಚ್ಚಿತವಾಗಿ ಕಾರಣಗಳೋ? ಅಥವಾ ವಿಕಲ್ಪದಿಂದ ಕಾರಣಗಳೋ? ಮೊದಲನೆಯ ಪಕ್ಷ ತಪ್ಪು. ಪ್ರತ್ಯೇಕವಾಗಿ ಕಾರಣವಾಗುವುದಾದರೆ ನಾರಾಯಣಪ್ರಣಾಮಮಾತ್ರದಿಂದ ಅಭೀಷ್ಟವು ಸಿದ್ಧವಾಗುತ್ತದೆ; ಗುರುಪ್ರಣಾಮವು ಬೇಡ. ಅಥವಾ ಗುರುಪ್ರಣಾಮದಿಂದ ಅಭೀಷ್ಟವು ಸಿದ್ಧವಾಗುತ್ತದೆ; ನಾರಾಯಣಪ್ರಣಾಮವು ಬೇಡ. ಎರಡನೆಯ ಪಕ್ಷವು ಕೂಡ ತಪ್ಪು. ಸಮುಚ್ಚಿತವಾಗಿಯೇ ಕಾರಣವಾಗುವುದಾದರೆ ಕೇವಲ ನಾರಾಯಣಪ್ರಣಾಮದಿಂದ ಅಭೀಷ್ಟಸಿದ್ಧಿಯು ಆಗದಿರಬೇಕಾದೀತು! ವಿಕಲ್ಪದ ಮೂಲಕ ಯಾವುದಾದರೂ ಒಂದು ಅಭೀಷ್ಟಪ್ರದವಾಗುತ್ತದೆಂಬ ಮೂರನೆಯ ಪಕ್ಷವೂ ತಪ್ಪು. ಹಾಗಾದರೆ ಗುರುಪ್ರಣಾಮವನ್ನು ಗ್ರಂಥಾರಂಭದಲ್ಲಿ ನಿಯಮೇನ ಅನುಷ್ಠಾನ ಮಾಡಬೇಕಾಗಿಲ್ಲ. ಆದ್ದರಿಂದ ಅನುವ್ಯಾಖ್ಯಾನಕಾರರು ಮೊದಲು ನಾರಾಯಣನ ಪ್ರಣಾಮವನ್ನು ಮಾಡಿ ಅನಂತರ ಗುರುಪ್ರಣಾಮವನ್ನು ಮಾಡಿದ್ದು ವ್ಯರ್ಥವಲ್ಲವೇ?

ಸಮಾಧಾನ – ಮೇಲಿನ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ನಾರಾಯಣಪ್ರಣಾಮ ಹಾಗೂ ಗುರುಪ್ರಣಾಮಾದಿಗಳು ದಂಡಚಕ್ರಾದಿಗಳಂತೆ ಪ್ರತ್ಯೇಕವಾಗಿಯೇ ಕಾರಣ ಎನಿಸುತ್ತವೆ. ಹೇಗೆ





ಘಟವನ್ನು ಕುರಿತು ದಂಡವು ದಂಡತ್ವೇನ ರೂಪೇಣ ಕಾರಣವಾಗುತ್ತದೆ. ಚಕ್ರವು ಚಕ್ರತ್ವೇನ ರೂಪೇಣ ಪ್ರತ್ಯೇಕವಾಗಿಯೇ ಕಾರಣವಾಗುತ್ತದೆ. ಆದರೂ ಕೂಡ ಕೇವಲ ದಂಡದಿಂದ ಘಟೋತ್ಪತ್ತಿಯಾಗುವುದಿಲ್ಲ; ಕೇವಲ ಚಕ್ರದಿಂದಲೂ ಕೂಡ ಘಟೋತ್ಪತ್ತಿ ಆಗುವುದಿಲ್ಲವೋ ಅದರಂತೆ ಪ್ರಕೃತದಲ್ಲೂ ಅಭೀಷ್ಟಸಿದ್ಧಿಗೆ ನಾರಾಯಣಪ್ರಣಾಮ ಹಾಗೂ ಗುರುಪ್ರಣಾಮಗಳು ಪ್ರತ್ಯೇಕವಾಗಿ ಕಾರಣ ಎನಿಸುತ್ತವೆ. ಅಭೀಷ್ಟಸಿದ್ಧಿಯಾಗಲು ಎರಡನ್ನೂ ಅನುಷ್ಠಾನ ಮಾಡಲೇಬೇಕು. ನಾರಾಯಣಪ್ರಣಾಮವು ನಾರಾಯಣಪ್ರಣಾಮತ್ವೇನ ರೂಪೇಣ ಗುರುಪ್ರಣಾಮವು ಗುರುಪ್ರಣಾಮತ್ವೇನ ರೂಪೇಣ ಕಾರಣವಾದರೂ ಕೂಡ ಎರಡರಲ್ಲಿ ಒಂದು ಮಾತ್ರ ಸಾಕು ಎಂದು ಹೇಳಬಾರದು. ಹಾಗಾಗಿ ಯಾವುದೇ ದೋಷಕ್ಕೂ ಅವಕಾಶವಿಲ್ಲ.

## 'ಕರೋಮಿ' ಎಂಬ ಲಟ್‌ಲಕಾರಪ್ರಯೋಗದ ಬಗ್ಗೆ ವಿಮರ್ಶೆ

ಕಾಶೀಟಿಪ್ಪಣೀ– ಸಂಕ್ಷೇಪತ ಇತಿ ॥ ನ ಚ ಸಂಕ್ಷೇಪತೋ ವ್ಯಾಖ್ಯಾನಸ್ಯ ಅತೀತತ್ವಾತ್ ಕಥಂ ವರ್ತಮಾನತ್ವಮ್? ಇತಿ ವಾಚ್ಯಮ್ । ಯತೋ 'ವರ್ತಮಾನೇ ಲಟ್' ಇತಿ ಸೂತ್ರೇ ಲಟ್ ಪ್ರಯೋಗಕ್ಷಣ ಏವ ನ ವರ್ತಮಾನಪದಾರ್ಥಃ ಕಿಂತು ಆರಬ್ಧಾಪರಿಸಮಾಪ್ತಪ್ರಕೃತಕ್ರಿಯೋಪಲಕ್ಷಿತೋ ಲಟ್‌ಪ್ರಯೋಗಾಧಿಕರಣಕಾಲಃ । ತಥಾ ಚ ವ್ಯಾಖ್ಯಾನಕ್ರಿಯಾಯಾ ಆದ್ಯಕ್ಷಣಾದಾಸಮಾಪ್ತಿ ಸರ್ವಸ್ಯಾಪಿ ಕಾಲಸ್ಯ ತಥಾತ್ವಸಂಭವಾತ್ ನ ದೋಷಃ । ಯದ್ಯಪಿ ಸೂಕ್ಷ್ಮಕಾಲಪ್ರವಾಹಾತಿರಿಕ್ತಸ್ಥೂಲಕಾಲಾನಭ್ಯುಪಗಮೇ ಲಟ್‌ಪ್ರಯೋಗಾಧಿಕರಣತ್ವಂ ತದಂತರ್ಗತಸೂಕ್ಷ್ಮಕಾಲಸ್ಯೈವ ಇತಿ ನ ತದ್ ವೃತ್ತಿತ್ವಂ ವ್ಯಾಖ್ಯಾನಕೃತೇರಸ್ತಿ । ತಥಾಪಿ ಕ್ಷಣದಿನಮಾಸವರ್ಷತ್ವಾದ್ಯುಪಾಧೀನಾಂ ಪ್ರವಾಹಧರ್ಮಾಣಾಮಾವಶ್ಯಕತ್ವೇನ ಲಟ್‌ಪ್ರಯೋಗಾಧಿಕರಣತಾವಚ್ಛೇದಕತಾದೃಶೋಪಾಧಿ ವಿಶೇಷಾವಚ್ಛಿನ್ನಕಾಲೇ ತತ್ಕೃತಿಸತ್ತ್ವಾತ್ ನ ದೋಷಃ । ವಸ್ತುತಸ್ತು ಲಟ್‌ಪ್ರಯೋಗಾಧಿಕರಣಕಾಲ ಏವ ಲಡರ್ಥಃ । ತಸ್ಯ ಚ ಸ್ವವೃತ್ತಿತ್ವಾನಧಿಕರಣಪ್ರಾಗಭಾವಪ್ರತಿಯೋಗಿತ್ವಸ್ವವೃತ್ತಿತ್ವಾನಧಿಕರಣಧ್ವಂಸಪ್ರತಿಯೋಗಿಪ್ರಕೃತಕ್ರಿಯಾಸಮಾನಕರ್ತೃಕತ್ವೋಭಯಸಂಬಂಧೇನ ಕ್ರಿಯಾಯಾಮ್ ಅನ್ವಯಃ । ಲಟ್ ಪ್ರಯೋಗಾಧಿಕರಣಕಾಲ ಏವ ಸ್ವಪದಾರ್ಥಃ । ತದ್ವೃತ್ತಿತ್ವಾನಧಿಕರಣಪ್ರಾಗಭಾವಪ್ರತಿಯೋಗಿತ್ವಂ ತದ್‌ವೃತ್ತಿತ್ವಾನಧಿಕರಣಧ್ವಂಸಪ್ರತಿಯೋಗ್ಯಂತ್ಯಕೃತಿಸಮಾನಕರ್ತೃಕತ್ವಂ ಚಾದ್ಯಕೃತೇರಸ್ತಿ ಇತ್ಯುಕ್ತೋಭಯಸಂಬಂಧೇನ ತಾದೃಶಕಾಲವಿಶಿಷ್ಟತ್ವಸ್ಯ ತಾದೃಶಕೃತಿರೂಪಕ್ರಿಯಾಯಾಮ್ ಅಕ್ಷತತ್ವಾತ್ ನೋಕ್ತಾನುಪಪತ್ತಿಃ । ಕಾರ್ಯಾರಂಭಾತ್ ಪೂರ್ವಂ ಕಾರ್ಯನಿಷ್ಪತ್ತೇರುತ್ತರಂ ಚ ಕರೋತಿ



ಇತ್ಯಾದಿಲಟ್‌ಪ್ರಯೋಗವಾರಣಾಯ ಸಂಬಂಧದ್ವಯನಿವೇಶಃ । ಅಧಿಕಮ್ ಅನ್ಯತ್ರಾನುಸಂಧೇಯಮ್ ।

ಸಂಕ್ಷೇಪವ್ಯಾಖ್ಯಾನವು ಹಿಂದೆ ಆಗಿದೆ. ವಿಸ್ತಾರವ್ಯಾಖ್ಯಾನವು ಮುಂದೆ ಆಗುತ್ತದೆ. ಆದ್ದರಿಂದ ಕರೋಮಿ ಎಂಬ ವರ್ತಮಾನಪ್ರಯೋಗವು ಹೇಗೆ ಸರಿಯಾಗುತ್ತದೆ? ಎಂಬ ಪ್ರಶ್ನೆ ಎರಡನೇ ಪಕ್ಷದಲ್ಲಿ ಬರುತ್ತದೆಂದು ಆಕ್ಷೇಪಿಸಬಾರದು. ''ವರ್ತಮಾನೇ ಲಟ್'' ಎಂಬ ಸೂತ್ರವು ಕೇವಲ ಒಂದು ಕ್ಷಣವನ್ನು ಮಾತ್ರ ವರ್ತಮಾನಕಾಲವೆಂದು ಪರಿಗಣಿಸಿಲ್ಲ. ಕಿಂತು ಆರಂಭದಿಂದ ಪರಿಸಮಾಪ್ತಿಯ ಪರ್ಯಂತ ಉಂಟಾಗುವ ಕ್ರಿಯೆಯಿಂದ ಉಪಲಕ್ಷಿತವಾದ ಕಾಲವನ್ನೇ ವರ್ತಮಾನವೆಂದು ಪರಿಗಣಿಸಿದೆ. ಆದ್ದರಿಂದ ವರ್ತಮಾನಕಾಲವು ವಕ್ತೃವಿನ ವಿವಕ್ಷೆಗೆ ಅನುಸಾರಿಯಾಗಿ ಇರುತ್ತದೆ. ಒಂದು ವೇಳೆ ಪ್ರಕೃತವಾದ ಸೂಕ್ಷ್ಮಕಾಲವನ್ನೇ ವರ್ತಮಾನವೆಂದು ಪರಿಗಣಿಸಿದರೆ ಆ ಒಂದು ಕ್ಷಣದಲ್ಲೇ ಅತೀತವಾದ ಭಾವಿಯಾದ ಅನೇಕ ಸೂಕ್ಷ್ಮಕಾಲಗಳು ಇರುವುದರಿಂದ ವರ್ತಮಾನಕಾಲವನ್ನು ತಿಳಿಯುವುದೇ ಅಸಾಧ್ಯವಾಗುವುದು. ಅದಕ್ಕೋಸ್ಕರ ವಕ್ತೃವಿವಕ್ಷೆಯನ್ನನುಸರಿಸಿ ಕ್ಷಣ, ದಿನ, ಮಾಸ, ವರ್ಷ ಎಂಬ ಉಪಾಧಿಗಳನ್ನೇ ವರ್ತಮಾನವೆಂದು ಪರಿಗಣಿಸಬೇಕು.

ಹಾಗಾದರೆ ಲಟ್‌ಪ್ರಯೋಗಕ್ಕೆ ಅಧಿಕರಣವಾದ ಕಾಲವನ್ನೇ ಲಡರ್ಥವೆಂದು ಹೇಳಿದ್ದಾರಲ್ಲ? ಎಂದರೆ ಅದನ್ನು ಪರಿಷ್ಕಾರ ಮಾಡುತ್ತೇವೆ. 'ಸ್ವವೃತ್ತಿತ್ವಾನಧಿಕರಣಪ್ರಾಗಭಾವಪ್ರತಿಯೋಗಿತ್ವ ಸ್ವವೃತ್ತಿತ್ವಾನಧಿಕರಣಧ್ವಂಸಪ್ರತಿಯೋಗಿಪ್ರಕೃತಕ್ರಿಯಾಸಮಾನಕರ್ತೃಕತ್ವೋಭಯಸಂಬಂಧೇನ ಲಟ್‌ಪ್ರಯೋಗಾಧಿಕರಣಕಾಲವಿಶಿಷ್ಟಕ್ರಿಯೆಯೇ ವರ್ತಮಾನಕ್ರಿಯೆ ಎನಿಸುತ್ತದೆ' ಎಂದು. ಇದರ ಸಮನ್ವಯವನ್ನು ಹೀಗೆ ತಿಳಿಯಬೇಕು— ಸ್ವಂ = ಲಟ್‌ಪ್ರಯೋಗಾಧಿಕರಣವಾದ ಕಾಲ. ಆಗ ಗತಕ್ರಿಯೆಯ ಪ್ರಾಗಭಾವವು ಇಲ್ಲ. ಆದ್ದರಿಂದ ಸ್ವವೃತ್ತಿತ್ವಾನಧಿಕರಣಪ್ರಾಗಭಾವ ಎಂದರೆ ಭೂತಕಾಲದಲ್ಲಿ ನಡೆದ ಸಂಕ್ಷೇಪವ್ಯಾಖ್ಯಾಕ್ರಿಯಾಪ್ರಾಗಭಾವ. ಅದಕ್ಕೆ ಪ್ರತಿಯೋಗಿಯಾದದ್ದು ಸಂಕ್ಷೇಪವ್ಯಾಖ್ಯಾಕ್ರಿಯಾ. ಅದೇ ರೀತಿಯಾಗಿ ಸ್ವಂ = ಲಟ್‌ಪ್ರಯೋಗಾಧಿಕರಣಕಾಲ. ಅಲ್ಲಿ ಭಾವಿವ್ಯಾಖ್ಯಾಕ್ರಿಯೆಯ ಧ್ವಂಸವು ಇಲ್ಲ. ಆದ್ದರಿಂದ ಸ್ವವೃತ್ತಿತ್ವಾನಧಿಕರಣಧ್ವಂಸ ಎಂದರೆ ಮುಂದಿನ ಕಾಲದಲ್ಲಿ ನಡೆಯುವ ವಿಸ್ತಾರವ್ಯಾಖ್ಯಾಕ್ರಿಯಾಧ್ವಂಸ. ಅದಕ್ಕೆ ಪ್ರತಿಯೋಗಿಯಾದದ್ದು ಭವಿಷ್ಯತ್ಕಾಲೀನವಿಸ್ತಾರವ್ಯಾಖ್ಯಾಕ್ರಿಯಾ. ತತ್ಸಮಾನಕರ್ತೃಕತ್ವವು ಸಂಕ್ಷೇಪವ್ಯಾಖ್ಯಾಕ್ರಿಯೆಯಲ್ಲಿ ಇದೆ. ಈ ರೀತಿಯಾಗಿ ಈ ಎರಡು ಸಂಬಂಧಗಳಿಂದ ಲಟ್‌ಪ್ರಯೋಗಾಧಿಕರಣಕಾಲವಿಶಿಷ್ಟವಾದದ್ದು ವ್ಯಾಖ್ಯಾರೂಪವಾದ ಕ್ರಿಯೆ. ಆದ್ದರಿಂದ ಯಾವುದೇ ಅನುಪಪತ್ತಿ ಇರುವುದಿಲ್ಲ. ಇಲ್ಲಿ ಮೊದಲನೆ ವಿಶೇಷಣವನ್ನು ಕೊಡದಿದ್ದರೆ, ಕಾರ್ಯವನ್ನು ಪ್ರಾರಂಭಿಸುವುದಕ್ಕಿಂತ ಮೊದಲು





'ಕರೋಮಿ' ಎಂದು ಪ್ರಯೋಗಿಸಬೇಕಾದೀತು. ಯಾಕೆಂದರೆ ಸ್ವಂ = ಲಟ್‌ಪ್ರಯೋಗಾಧಿಕರಣಕಾಲ, ತದನಧಿಕರಣಧ್ವಂಸ ಎಂದರೆ ಭಾವಿಕ್ರಿಯಾಧ್ವಂಸ, ತತ್ಪ್ರತಿಯೋಗಿಪ್ರಕೃತಕ್ರಿಯಾ ಎಂದರೆ ಭಾವಿಗ್ರಂಥ-ಕ್ರಿಯಾ.

ತತ್ಸಮಾನಕರ್ತೃಕತ್ವವು ಭವಿಷ್ಯತ್ಕಾಲದಲ್ಲೇ ಇರುವ ಇನ್ನೊಂದು ಕ್ರಿಯೆಯಲ್ಲಿ ಬರುತ್ತದೆ. ಅದಕ್ಕೋಸ್ಕರ ಮೊದಲನೆ ವಿಶೇಷಣವನ್ನು ಕೊಡಬೇಕು. ಈಗ ದೋಷ ಬರುವುದಿಲ್ಲ. ಕಾರ್ಯವೇ ಇನ್ನೂ ಪ್ರಾರಂಭವಾಗಿಲ್ಲವಾದ್ದರಿಂದ ಸ್ವವೃತ್ತಿತ್ವಾಧಿಕರಣಪ್ರಾಗಭಾವಪ್ರತಿಯೋಗಿತ್ವವೇ ಬರುತ್ತದೆ. ಹೊರತು ಸ್ವವೃತ್ತಿತ್ವಾನಧಿಕರಣಪ್ರಾಗಭಾವಪ್ರತಿಯೋಗಿತ್ವವು ಬರುವುದಿಲ್ಲ.

ಇದೇ ರೀತಿಯಾಗಿ ಗ್ರಂಥಸಮಾಪ್ತಿಯ ಅನಂತರದಲ್ಲಿ 'ಕರೋಮಿ' ಎಂಬ ಪ್ರಯೋಗವನ್ನು ಪರಿಹರಿಸಲು ಎರಡನೇ ದಳವನ್ನು ಕೊಡಬೇಕು. ಈ ದೋಷವನ್ನು ಮತ್ತು ಅದರ ಪರಿಹಾರವನ್ನು ಹಿಂದಿನಂತೆ ತಿಳಿದುಕೊಳ್ಳಬೇಕು.

## ಸುಧಾ-ಪರಿಮಳಸಾರ

'ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥'

ದೇವತೆಯಲ್ಲಿ ಹೇಗೆ ಭಕ್ತಿಯನ್ನು ಮಾಡುತ್ತೇವೋ ಅದರಂತೆ ಗುರುಗಳಲ್ಲೂ ಮಾಡಬೇಕು. ಆಗ ಮಾತ್ರ ಗುರುಗಳು ಹೇಳಿಕೊಟ್ಟ ಅರ್ಥವು ಸ್ಫುರಣವಾಗುತ್ತವೆ. ಅವರ ಅನುಗ್ರಹ-ವಿಶೇಷವಿದ್ದಾಗ ಅವರು ಹೇಳದ ಅರ್ಥವೂ ಕೂಡ ಸ್ಫುರಣವಾಗುತ್ತವೆ. ಈ ವಿಷಯವನ್ನು ನಮಗೆ ತಿಳಿಸುವುದಕ್ಕಾಗಿ ಶ್ರೀಮಧ್ವಾಚಾರ್ಯರು ಪ್ರಾರಂಭದ ಶ್ಲೋಕದಲ್ಲಿ ದೇವತೆಯಾದ ನಾರಾಯಣನ ವಂದನೆಯನ್ನು ಮಾಡಿ, ಈಗ ಗುರುಗಳಿಗೆ ಪ್ರಣಾಮವನ್ನು ಮಾಡುತ್ತಿದ್ದಾರೆ. ಗ್ರಂಥಾರಂಭದಲ್ಲಿ ಗುರುಗಳ ನಮಸ್ಕಾರವು ಅತ್ಯಾವಶ್ಯಕ. ಅವರ ಅನುಗ್ರಹವು ಆಗದಿದ್ದರೆ ತತ್ವಜ್ಞಾನದ ಸಂಪಾದನೆಯೇ ಆಗುವುದಿಲ್ಲ. ಆದ್ದರಿಂದ ತತ್ವಜ್ಞಾನವೆಂಬ ಅಭೀಷ್ಟವು ಸಿದ್ಧವಾಗಬೇಕೆಂದರೆ ಗ್ರಂಥಾರಂಭದಲ್ಲಿ ಅವಶ್ಯವಾಗಿ ಗುರುಪ್ರಣಾಮವನ್ನು ಮಾಡಬೇಕು. ಆದ್ದರಿಂದ ಗುರುಪ್ರಣಾಮವನ್ನು ಮಾಡಿ ತಾವು ಮಾಡುತ್ತಿರುವ ಗ್ರಂಥಪ್ರತಿಜ್ಞೆಯನ್ನು ಮಾಡು-ತ್ತಿದ್ದಾರೆ.





ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ
ಜಗದ್ಗುರೂಣಾಂ ಗುರುಮಂಜಸೈವ ।
ವಿಶೇಷತೋ ಮೇ ಪರಮಾಖ್ಯವಿದ್ಯಾ-
ವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ ॥

ಗುರುಗಳಾದ ವೇದವ್ಯಾಸದೇವರೇ! ತಾವು ವೇದಗಳನ್ನು ವಿಭಾಗ ಮಾಡಿದಿರಿ; ಬ್ರಹ್ಮ-ಮೀಮಾಂಸಾಶಾಸ್ತ್ರವನ್ನು ನಿರ್ಮಾಣ ಮಾಡಿರುವಿರಿ. ಜಗತ್ತಿನ ಗುರುಗಳಾದ ಬ್ರಹ್ಮಾದಿಗಳಿಗೂ ಕೂಡ ತಾವು ಗುರುಗಳಾಗಿರುವಿರಿ. ಅದರಲ್ಲೂ ವಿಶೇಷವಾಗಿ ಎನಗೆ ಗುರುವಾಗಿರುವಿರಿ. ಗುರುಗಳಾದ ತಮಗೆ ಭಕ್ತ್ಯತಿಶಯ, ಶ್ರದ್ಧಾತಿಶಯಗಳಿಂದ ಪುನಃ ಪ್ರಣಾಮ ಮಾಡುವೆ. ಪರ-ವಿದ್ಯಾ ಎಂದು ಕರೆಸಿಕೊಳ್ಳುವ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವ್ಯಾಖ್ಯಾನ ಮಾಡಲು ಪ್ರಾರಂಭಿ-ಸುವೆ.

ಬ್ರಹ್ಮಮೀಮಾಂಸಾಶಾಸ್ತ್ರದ ವ್ಯಾಖ್ಯಾನವು ಇನ್ನೂ ಪ್ರಾರಂಭವೇ ಆಗಿಲ್ಲ. ಹೀಗಿರುವಾಗ 'ಕರೋಮಿ = ವ್ಯಾಖ್ಯಾನವನ್ನು ಮಾಡುತ್ತಿದ್ದೇನೆ' ಎಂಬ ಪ್ರಯೋಗವನ್ನು ಹೇಗೆ ಮಾಡಿದರು?

ಈ ಪ್ರಶ್ನೆಗೆ ಎರಡು ರೀತಿಯಲ್ಲಿ ಉತ್ತರ ತಿಳಿಯಬಹುದು.

1. ವರ್ತಮಾನಕಾಲವು ಸಮೀಪದಲ್ಲಿದ್ದಾಗ ವರ್ತಮಾನಪ್ರಯೋಗವನ್ನು ಮಾಡಬಹುದು.

2. ಈಗಾಗಲೇ ಪ್ರಥಮಶ್ಲೋಕದಲ್ಲಿ ಸಂಕ್ಷೇಪವಾಗಿ ಶಾಸ್ತ್ರಾರ್ಥವನ್ನು ಹೇಳಿರುವುದರಿಂದ ವ್ಯಾಖ್ಯಾನವು ಪ್ರಾರಂಭವಾಗಿದೆ. ಆದ್ದರಿಂದಲೂ ವರ್ತಮಾನಪ್ರಯೋಗವು ಯುಕ್ತವಾಗು-ತ್ತದೆ.

## ಪರಿಮಳದ ವೈಶಿಷ್ಟ್ಯ

* ಗುರುನಮಸ್ಕಾರವು ಅವಶ್ಯವಾಗಿ ಅನುಷ್ಠೇಯ ಎಂಬುದನ್ನು ತಿಳಿಸಲು 'ಯಸ್ಯ ದೇವೇ ಪರಾ ಭಕ್ತಿಃ' ಎಂಬ ಪ್ರಮಾಣಶ್ಲೋಕವನ್ನು ಉದಾಹರಿಸಿದ್ದಾರೆ.

* ಕರೋಮಿ ಎಂಬ ವರ್ತಮಾನಪ್ರಯೋಗವನ್ನು ಉಪಪಾದನೆ ಮಾಡಲು ವ್ಯಾಕ-ರಣಸೂತ್ರಗಳನ್ನು ಉಲ್ಲೇಖ ಮಾಡಿದ್ದಾರೆ.






## ನಾರಾಯಣಾವತಾರರಾದ ವೇದವ್ಯಾಸದೇವರಲ್ಲಿ ಗುರುತ್ವಸಮರ್ಥನೆ

**ಶ್ರೀಮನ್ನ್ಯಾಯಸುಧಾ– ನನು ಪ್ರಣತಸ್ಯ ಪುನಃ ಪ್ರಣಾಮಃ ಕಿಮರ್ಥಃ? ನಹಿ 'ಪ್ರಣಾಮಾವೃತ್ತಿಃ ವಿಘ್ನವಿಘಾತಾದಿಹೇತುಃ' ಇತ್ಯತ್ರ ನಿಯಾಮಕಮಸ್ತಿ । ಭಾವೇ ವಾ ಪೂರ್ವಶ್ಲೋಕ ಏವ ಬಹುಶಃ ಸನ್ನಮಾಮಿ ಇತಿ ವಕ್ತವ್ಯಮ್ । ಮೈವಮ್ । ಗುರುತ್ವೇನ ಅತ್ರ ಪ್ರಣಾಮಾಚರಣಾತ್ ।**

ಪ್ರಣಾಮ ಮಾಡಿದ ನಾರಾಯಣನಿಗೆ ಪುನಃ ಪ್ರಣಾಮ ಮಾಡುವುದು ಯಾವ ಪ್ರಯೋಜನಕ್ಕಾಗಿ? ಅನೇಕ ಬಾರಿ ಪ್ರಣಾಮ ಮಾಡುವುದರಿಂದ ವಿಘ್ನವಿಘಾತಾದಿಗಳು ಉಂಟಾಗುತ್ತವೆ ಎಂದು ಉತ್ತರಿಸಬೇಕು. ಆದರೆ ಈ ವಿಷಯದಲ್ಲಿ ನಿಯಾಮಕಪ್ರಮಾಣವಿಲ್ಲ. ಹಾಗೇನಾದರೂ ಪ್ರಮಾಣಗಳಿದ್ದರೂ ಕೂಡ ಹಿಂದಿನ ಶ್ಲೋಕದಲ್ಲಿ 'ಬಹುಶಃ ಸನ್ನಮಾಮಿ' ಎಂದು ಹೇಳಿದರೆ ಸಾಕು. ಪ್ರತ್ಯೇಕವಾಗಿ ಮತ್ತೊಂದು ಶ್ಲೋಕದಿಂದ ನಮಸ್ಕಾರ ಮಾಡುವ ಅವಶ್ಯಕತೆ ಇಲ್ಲ? ಹೀಗೆ ಆಶಂಕೆ ಮಾಡಬಾರದು. ಗುರುತ್ವಪ್ರಯುಕ್ತವಾಗಿ ನಾರಾಯಣನನ್ನು ಇಲ್ಲಿ ಪ್ರಣಾಮ ಮಾಡುತ್ತಿದ್ದಾರೆ.

## ವಿಶ್ವಗುರುಗಳು ವೇದವ್ಯಾಸರು

**ಶ್ರೀಮನ್ನ್ಯಾಯಸುಧಾ– ಕಥಂ ನಾರಾಯಣಸ್ಯ ಗುರುತ್ವಮ್? ಇತ್ಯತ ಆಹ – ಶಾಸ್ತ್ರಪ್ರಭವಮ್ ಇತಿ ॥ ಗುರುಶಬ್ದೇನ ಪ್ರಕೃತತ್ವಾತ್ ಬ್ರಹ್ಮಮೀಮಾಂಸಾಶಾಸ್ತ್ರಂ ವೇದಾದಿಕಂ ಚೋಚ್ಯತೇ । ಪ್ರಭವತಿ ಉತ್ಪದ್ಯತೇ ಪ್ರಥಮಮುಪಲಭ್ಯತೇ ವಾ ಯಸ್ಮಾತ್ ಸಃ ಪ್ರಭವಃ । ಯಥಾಸಂಭವಂ ಶಾಸ್ತ್ರಸ್ಯ ಪ್ರಭವಃ ಶಾಸ್ತ್ರಪ್ರಭವಃ, ತಮ್ । 'ಯೋ ಹಿ ಯಚ್ಛಾಸ್ತ್ರೇ ಪ್ರವರ್ತತೇ ತಸ್ಯ ತತ್ಪ್ರಭವೋ ಗುರುಃ' ಇತಿ ಪ್ರಸಿದ್ಧಮೇವ ।**





ನಾರಾಯಣನು ಹೇಗೆ ಗುರುವಾಗುತ್ತಾನೆ? ಎಂಬ ಪ್ರಶ್ನೆಗೆ 'ಶಾಸ್ತ್ರಪ್ರಭವಂ' ಎಂಬ ವಿಶೇಷಣದಿಂದ ಉತ್ತರಿಸಿದ್ದಾರೆ. ಶಾಸ್ತ್ರಶಬ್ದವು ಪ್ರಕೃತವಾದ ಬ್ರಹ್ಮಮೀಮಾಂಸಾಶಾಸ್ತ್ರ ಹಾಗೂ ವೇದ ಮೊದಲಾದವುಗಳನ್ನು ಹೇಳುತ್ತಿದೆ. ಯಾರಿಂದ ಯಾವುದು ಮೊದಲು ತಿಳಿಯುತ್ತದೋ ಅಥವಾ ಹುಟ್ಟುತ್ತದೋ ಅದಕ್ಕೆ ಅವನು ಪ್ರಭವ = ಪ್ರಥಮಪ್ರವರ್ತಕ, ಅಥವಾ ಉತ್ಪಾದಕ ಎಂದು ಕರೆಸಿಕೊಳ್ಳುತ್ತಾನೆ. ವೇದವ್ಯಾಸದೇವರು ವೇದಗಳಿಗೆ ಪ್ರವರ್ತಕ -ರಾಗಿದ್ದಾರೆ. ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಉತ್ಪಾದಕರಾಗಿದ್ದಾರೆ. ಆದ್ದರಿಂದ ಪ್ರಭವ ಎಂದು ಕರೆಸಿಕೊಳ್ಳುತ್ತಾರೆ. ಅಂತಹವರನ್ನು ನಮಸ್ಕಾರ ಮಾಡುತ್ತೇನೆ ಎಂದನ್ವಯ. ವೇದವ್ಯಾಸ-ದೇವರು ಶಾಸ್ತ್ರಪ್ರವರ್ತಕರಾಗಿದ್ದರಿಂದ ಗುರುಗಳಾಗಿದ್ದಾರೆ ಎಂಬುದು ಪ್ರಸಿದ್ಧವೇ ಆಗಿದೆ.

## ಗುರುವಷ್ಟೇ ಅಲ್ಲ; ಮುಖ್ಯಗುರು

**ಶ್ರೀಮನ್ನ್ಯಾಯಸುಧಾ– ಪ್ರಕೃತಶಾಸ್ತ್ರಸಂಪ್ರದಾಯಪ್ರವರ್ತಕತ್ವಾತ್ ಚ ನಾರಾ-ಯಣಸ್ಯ ಗುರುತ್ವಮ್ ಇತ್ಯಾಹ – ಜಗದ್ಗುರೂಣಾಮ್ ಇತಿ ॥ ಜಗತ ಏತಚ್ಛಾಸ್ತ್ರ-ಪ್ರವಕ್ತ್ರೂಣಾಂ ಬ್ರಹ್ಮಾದೀನಾಮ್ ಅಂಜಸಾ ಮುಖ್ಯತಯಾ ನ ತು ವಯೋಽಧಿ-ಕತ್ವಾದಿಮಾತ್ರೇಣ ಗುರುಮ್ । 'ಅಸ್ಯ ಶಾಸ್ತ್ರಸ್ಯ ಪ್ರವಕ್ತಾರಮ್' ಇತಿ ಯಾವತ್ ।**

ಪ್ರಕೃತವಾದ ಬ್ರಹ್ಮಮೀಮಾಂಸಾಶಾಸ್ತ್ರದ ಸಂಪ್ರದಾಯಪ್ರವರ್ತಕರಾಗಿದ್ದಾರೆ. ಆದ್ದ-ರಿಂದ ನಾರಾಯಣನ ಅವತಾರರೂಪರಾದ ವೇದವ್ಯಾಸದೇವರು ಗುರುಗಳಾಗಿದ್ದಾರೆಂಬ ಅಭಿಪ್ರಾಯದಿಂದ 'ಜಗದ್ಗುರೂಣಾಂ ಗುರುಮಂಜಸೈವ' ಎಂಬುದಾಗಿ ತಿಳಿಸಿದ್ದಾರೆ. ಜಗತ್ತಿಗೆ ಗುರುಗಳಾದ ಏತಚ್ಛಾಸ್ತ್ರೋಪದೇಶಕರಾದ ಬ್ರಹ್ಮಾದಿಗಳಿಗೆ ಅಂಜಸಾ = ಮುಖ್ಯ-ವಾಗಿಯೇ ಹೊರತು ಕೇವಲ ವಯೋನಿಮಿತ್ತಕವಾಗಿ ಅಲ್ಲ; ಗುರುಂ = ಈ ಶಾಸ್ತ್ರವನ್ನು ಉಪದೇಶಮಾಡುವ ವೇದವ್ಯಾಸದೇವರನ್ನು ಎಂದರ್ಥ.

## ಪ್ರಭವಶಬ್ದದ ನಿಷ್ಪತ್ತಿ

**ಪರಿಮಳ– ಪ್ರಕೃತತ್ವಾತ್ ಇತಿ ॥ 'ಸುವಾಕ್ಯೈಃ' ಇತ್ಯನೇನ ಇತಿ ಭಾವಃ । ಪೌರುಷೇಯಾನುರೋಧೇನ ಆಹ – ಉತ್ಪದ್ಯತ ಇತಿ ॥ ಅನಾದಿವೇದಾಭಿಪ್ರಾಯೇಣಾಹ – ಪ್ರಥಮಮಿತಿ ॥ 'ಋದೋರಪ್' ಇತಿ ಸೂತ್ರೇ ಋವರ್ಣಾಂತಾದುವರ್ಣಾಂತಾಚ್ಚಾಪ್ ಪ್ರತ್ಯಯೋ ಭವತಿ ಕರ್ತೃಭಿನ್ನಕಾರಕ ಇತ್ಯುಕ್ತೇರಿತಿ ಭಾವಃ । 'ಭುವಃ ಪ್ರಭವಃ' ಇತಿ ಪಂಚಮೀವಿಧಾನಾತ್ 'ಯಸ್ಮಾತ್' ಇತ್ಯುಕ್ತಮ್ । ಕಥಂ ಗುರುತ್ವಮ್ ಇತ್ಯಸ್ಯ ಕಥಮನೇನ ನಿರಾಸಃ? ಇತ್ಯತ ಆಹ – ಯೋ ಹೀತಿ ॥**

'ಪ್ರಕೃತತ್ವಾತ್' ಎಂದು ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಅಖಿಲೈಃ ಸುವಾಕ್ಯೈಃ ಎಂಬುದಾಗಿ ಈ ಹಿಂದೆ ಮೊದಲನೆಯ ಮಂಗಳಶ್ಲೋಕದಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರ ಹಾಗೂ ವೇದಾದಿಗಳು ಪ್ರಸಕ್ತವಾಗಿವೆ ಎಂಬುದು ಇದರ ಅಭಿಪ್ರಾಯ.

ಪೌರುಷೇಯಶಾಸ್ತ್ರಕ್ಕೆ ಅನುಗುಣವಾಗಿ 'ಉತ್ಪದ್ಯತೇ' ಎಂದು ಹೇಳಿದ್ದಾರೆ. ಅನಾದಿಯಾದ ವೇದದ ಅಭಿಪ್ರಾಯದಿಂದ 'ಪ್ರಥಮಂ ಉಪಲಭ್ಯತೇ' ಮೊದಲು ಉಪದೇಶಿಸಲ್ಪಡುತ್ತದೆ ಎಂದು ಹೇಳಿದ್ದಾರೆ.

'ಋದೋರಪ್' ಎಂಬ ಪಾಣಿನಿಸೂತ್ರದಲ್ಲಿ ಕರ್ತೃಭಿನ್ನವಾದ ಕಾರಕವು ವಿವಕ್ಷಿತವಾಗಿದ್ದಾಗ 'ಋ' ಮತ್ತು 'ಉ' ವರ್ಣಗಳು ಕೊನೆಯಲ್ಲಿರುವ ಶಬ್ದಗಳಿಗೆ 'ಅಪ್' ಎಂಬ ಪ್ರತ್ಯಯವು ಬರುತ್ತದೆ ಎಂದು ಹೇಳಲಾಗಿದೆ. ಅದರ ಪ್ರಕಾರ ಇಲ್ಲಿ ಪ್ರಭವ ಎಂಬ ರೂಪವು ನಿಷ್ಪನ್ನವಾಗುತ್ತದೆ. 'ಭುವಃ ಪ್ರಭವಃ' ಎಂಬ ಪಾಣಿನೀ ಸೂತ್ರದಲ್ಲಿ ಪಂಚಮೀ ವಿಭಕ್ತಿಯನ್ನು ವಿಧಾನ ಮಾಡಿರುವುದರಿಂದ ಯಸ್ಮಾತ್ ಎಂಬುದಾಗಿ ಅದರ ಅರ್ಥವನ್ನು ಹೇಳಿದ್ದಾರೆ.

ನಾರಾಯಣನು ಹೇಗೆ ಗುರುವಾಗಿದ್ದಾನೆ? ಎಂಬ ಸಂಶಯವನ್ನು 'ಯೋ ಹಿ' ಎಂಬ ವಾಕ್ಯದಿಂದ ಪರಿಹರಿಸಿದ್ದಾರೆ.




# ಗುರುಗಳಿಗೂ ಗುರು ಜಗದ್ಗುರು

**ಪರಿಮಳ**– ಜಗತಃ = ಸಾಧುವರ್ಗಸ್ಯ । 'ಮಾನಸ್ತೇನೇಭ್ಯಃ' ಇತ್ಯಾದೇಃ । 'ಗುರೂಣಾಮ್' ಇತ್ಯಸ್ಯಾರ್ಥಃ – ಏತತ್ ಶಾಸ್ತ್ರಪ್ರವಕ್ತೄಣಾಮ್ ಇತಿ ॥ ಉಕ್ತಂ ಹಿ ದಶಮತಾತ್ಪರ್ಯೇ – 'ಗುರುರ್ಬ್ರಹ್ಮಾऽಸ್ಯ ಜಗತೋ ದೈವಂ ವಿಷ್ಣುಃ' ಇತ್ಯಾದಿ । ವಕ್ಷ್ಯತಿ ಚ ಅತ್ರಾಪಿ ಉಪಾಸನಾಪಾದೇ 'ಗುರೋರ್ಬ್ರಹ್ಮಾऽಖಿಲಾನಾಂ ಚ' ಇತ್ಯಾದಿ । 'ಕರ್ತೃಕರ್ಮಣೋಃ ಕೃತಿ' ಇತಿ ಕರ್ಮಣೀ ಷಷ್ಠೀ । ಗುರುಮ್ ಇತ್ಯಸ್ಯಾರ್ಥಃ – ಅಸ್ಯೇತಿ ॥ ಪ್ರಾಗುಕ್ತಪೌರುಷೇಯಾಪೌರುಷೇಯಗ್ರಂಥಸ್ಯ ಇತ್ಯರ್ಥಃ।

'ಜಗತಃ' ಎಂಬ ಪದಕ್ಕೆ 'ಸಾಧುವರ್ಗ' ಎಂದರ್ಥ. 'ಮಾನಸ್ತೇನೇಭ್ಯಃ' ಇತ್ಯಾದಿ ಶ್ರುತಿಗಳಲ್ಲಿ ಅಯೋಗ್ಯರಿಗೆ ಉಪದೇಶ ಮಾಡಬಾರದೆಂದು ನಿಷೇಧ ಮಾಡಲ್ಪಟ್ಟಿದೆ. 'ಗುರೂಣಾಂ' ಎಂದರೆ ಈ ಶಾಸ್ತ್ರವನ್ನು ಉಪದೇಶ ಮಾಡುವವರಿಗೆ ಎಂದರ್ಥ. ಭಾಗವತದ ದಶಮಸ್ಕಂಧದ ತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ. 'ಗುರುರ್ಬ್ರಹ್ಮಾऽಸ್ಯ ಜಗತೋ ದೈವಂ ವಿಷ್ಣುಃ' – ಚತುರ್ಮುಖಬ್ರಹ್ಮನು ಗುರು ಎನಿಸಿದ್ದಾನೆ. ಮಹಾವಿಷ್ಣುವು ಸರ್ವೋತ್ತಮದೇವತೆ ಎನಿಸಿದ್ದಾನೆ ಎಂದು. ಇಂಥ ಚತುರ್ಮುಖಾದಿಗುರುಗಳಿಗೂ ಕೂಡ ಇವನು ಗುರುವಾಗಿದ್ದಾನೆ ಎಂದು ತಿಳಿಯಬೇಕು. ಮತ್ತು ಬ್ರಹ್ಮಮೀಮಾಂಸಾಶಾಸ್ತ್ರದ ಉಪಾಸನಾಪಾದದಲ್ಲಿ 'ಗುರುರ್ಬ್ರಹ್ಮಾऽಖಿಲಾನಾಂ ಚ' 'ಪ್ರತಿಯೊಬ್ಬರಿಗೂ ಕೂಡ ಚತುರ್ಮುಖಬ್ರಹ್ಮನು ಗುರುವಾಗಿದ್ದಾನೆ' ಎಂದು ಹೇಳುವವರಿದ್ದಾರೆ.

'ಕರ್ತೃಕರ್ಮಣೋಃ ಕೃತಿಃ' ಎಂಬ ಸೂತ್ರದ ಪ್ರಕಾರ ಕೃತ್‌ಪ್ರತ್ಯಯಾಂತವಾದ ಶಬ್ದಗಳಿದ್ದರೆ ಕರ್ತ್ರರ್ಥದಲ್ಲಿ ಮತ್ತು ಕರ್ಮಾರ್ಥದಲ್ಲಿ ಷಷ್ಠೀ ವಿಭಕ್ತಿಯು ಬರುತ್ತದೆ ಎಂದು ಹೇಳಲಾಗಿದೆ. ಈ ನಿಯಮದ ಪ್ರಕಾರ 'ಗುರೂಣಾಂ' ಎಂಬಲ್ಲಿರುವ ಷಷ್ಠೀವಿಭಕ್ತಿಯು ಕರ್ಮಾರ್ಥದಲ್ಲಿದೆ ಎಂದು ತಿಳಿಯಬೇಕು. ಗುರುಂ ಎಂಬುದರ ಅರ್ಥವನ್ನೇ 'ಅಸ್ಯ ಶಾಸ್ತ್ರಪ್ರವಕ್ತಾರಂ' ಎಂದು ಹೇಳಿದ್ದಾರೆ. ಪೌರುಷೇಯಗ್ರಂಥ ಹಾಗೂ ಅಪೌರುಷೇಯಗ್ರಂಥಗಳ ಉಪದೇಶಕರು ಎಂದು ಇದರ ಅರ್ಥ.







# ಗುರುತ್ವವೊಂದೇ ಪ್ರಣಾಮಪ್ರಯೋಜಕ

ವಾಕ್ಯಾರ್ಥಚಂದ್ರಿಕಾ – ಅತ್ರ 'ಶಾಸ್ತ್ರಪ್ರಭವಮ್' ಇತ್ಯಾದಿ ವಿಶೇಷಣಾನಾಂ ಪ್ರಣಾಮ-ಪ್ರಯೋಜಕತ್ವಂ ಪ್ರತೀಯಮಾನಂ ಸಾಕ್ಷಾನ್ನ ಸಂಭವತೀತಿ ಗುರುತ್ವಮುಖೇನೈವ ತತ್ ಇತ್ಯಭಿಪ್ರೇತ್ಯ ಗುರುತ್ವವಿವಕ್ಷಾಯಾ ಆವಶ್ಯಕತ್ವಂ ದರ್ಶಯಿತುಂ ಶಂಕಾಮುತ್ಥಾಪಯತಿ – ನನ್ವಿತಿ ॥ ನನು 'ಶ್ರೇಯಾಂಸಿ ಬಹುವಿಘ್ನಾನಿ' ಇತ್ಯತೋ ವಿಘ್ನಾನಾಂ ಬಹುತ್ವಾದ್ ವಿಘ್ನಸಮಸಂಖ್ಯಮಂಗಲಸ್ಯೈವ ಅಭಿಮತ-ಸಿದ್ಧ್ಯಂಗತ್ವಾತ್ ತದಾವೃತ್ತಿರ್ಯುಕ್ತಾ ಇತ್ಯತ ಆಹ – ಭಾವೇ ವೇತಿ ॥ ಪ್ರಕೃತತ್ವಾದಿತಿ ॥ 'ಅಖಿಲೈಃ ಸುವಾಕ್ಯೈಃ' ಇತ್ಯನೇನ ಇತ್ಯರ್ಥಃ। ಉಭಯತ್ರ ಉಭಯಾನ್ವಯಭ್ರಾಂತಿಂ ನಿವಾರಯತಿ – ಯಥಾ-ಸಂಭವಮಿತಿ ॥ ಅತ್ರ 'ಪ್ರವರ್ತತೇ' ಇತ್ಯುಕ್ತ್ವಾ ಪ್ರವೃತ್ತಿರ್ವಕ್ಷ್ಯಮಾಣರೀತ್ಯಾ ಪುರುಷಾರ್ಥಸಾಧನೇ-ಚ್ಛಾಪ್ರಯತ್ನಲಕ್ಷಣಾ ದ್ರಷ್ಟವ್ಯಾ ಅತೋ ನ ಕಶ್ಚಿತ್ ಕ್ಷುದ್ರೋಪದ್ರವಃ।

ಈ ಶ್ಲೋಕದಲ್ಲಿ ಶಾಸ್ತ್ರಪ್ರಭವತ್ವ ಮೊದಲಾದ ವಿಶೇಷಣಗಳೆಲ್ಲವೂ ಪ್ರಣಾಮಕ್ಕೆ ಪ್ರಯೋಜಕ-ವಾಗಿವೆ ಎಂಬುದಾಗಿ ಭ್ರಾಂತಿ ಬರುತ್ತದೆ. ಆದರೆ ಪ್ರಣಾಮಕ್ಕೆ ಗುರುತ್ವವೊಂದೇ ಪ್ರಯೋಜಕವಾಗಿದೆ. ಆ ಗುರುತ್ವಕ್ಕೆ ಈ ಶಾಸ್ತ್ರಪ್ರಭವತ್ವಾದಿಗಳು ಪ್ರಯೋಜಕವಾಗಿವೆ. ಆದರೆ ಶ್ಲೋಕದಲ್ಲಿ 'ನನಗೆ ಗುರು-ವಾಗಿದ್ದಾರೆ' ಎಂಬುದಾಗಿ ಹೇಳಿಯೇ ಇಲ್ಲ. ಆದರೂ ಕೂಡ ಈ ಗುರುತ್ವವನ್ನು ಅವಶ್ಯವಾಗಿ ವಿವಕ್ಷಿಸ-ಬೇಕು ಎಂಬುದನ್ನು ತೋರಿಸುವುದಕ್ಕಾಗಿ ಮೊದಲು ಆಶಂಕೆಯನ್ನು ಉತ್ಥಾಪನೆ ಮಾಡಲು 'ನನು' ಇತ್ಯಾದಿ ಗ್ರಂಥವು ಪ್ರವೃತ್ತವಾಗಿದೆ.

'ಶ್ರೇಯಾಂಸಿ ಬಹುವಿಘ್ನಾನಿ' ಎಂಬ ಮಾತಿನಂತೆ ಬಹುವಿಘ್ನಗಳಿರುವುದರಿಂದ ಆ ವಿಘ್ನಗಳ ಸಂಖ್ಯೆಗೆ ಅನುಗುಣವಾಗಿಯೇ ಮಂಗಳಗಳನ್ನು ಆಚರಿಸಬೇಕು. ಆಗ ಮಾತ್ರ ಅಭಿಮತವು ಸಿದ್ಧವಾಗು-ತ್ತದೆ. ಆದ್ದರಿಂದ ಅನೇಕಬಾರಿ ಮಂಗಳವನ್ನು ಆಚರಣೆ ಮಾಡಿರುವುದು ಯುಕ್ತವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಭಾವೇ ವಾ' ಎಂಬ ಟೀಕಾವಾಕ್ಯದಿಂದ ಉತ್ತರಿಸುತ್ತಿದ್ದಾರೆ.

'ಪ್ರಕೃತತ್ವಾತ್' ಎಂಬುದಕ್ಕೆ ಅಖಿಲೈಃ ಸುವಾಕ್ಯೈಃ ಎಂಬುದರಿಂದ ಪ್ರಕೃತವಾಗಿರುವುದರಿಂದ ಎಂದರ್ಥ. 'ಪ್ರಭವತಿ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಎರಡು ಬಗೆಯ ಅನ್ವಯವು ವೇದ ಹಾಗೂ ಪುರಾಣಗಳೆಲ್ಲರಡು ಕಡೆ ಅನ್ವಯ ಹೊಂದುತ್ತದೆಂಬ ಭ್ರಾಂತಿಯನ್ನು ನಿವಾರಣೆ ಮಾಡಲು 'ಯಥಾ ಸಂಭವಂ' ಎಂಬ ವಾಕ್ಯವು ಹೊರಟಿದೆ. ವೇದದ ವಿಷಯದಲ್ಲಿ 'ಪ್ರಥಮಮ್ ಉಪಲಭ್ಯತೇ' ಎಂಬುದನ್ನು ಮಾತ್ರ ಅನ್ವಯ ಮಾಡಬೇಕು. ಪೌರುಷೇಯಗ್ರಂಥಗಳಲ್ಲಿ 'ಪ್ರಥಮಮ್ ಉತ್ಪದ್ಯತೇ' ಎಂಬುದನ್ನು ಮಾತ್ರ ಅನ್ವಯ ಮಾಡಬೇಕು.







ನಾವು ಯಾವ ವೇದವನ್ನು ಅಥವಾ ಪೌರುಷೇಯಗ್ರಂಥವನ್ನು ಓದುತ್ತೇವೋ ಅದಕ್ಕೆ ಪ್ರವರ್ತಕರು ವೇದವ್ಯಾಸದೇವರಾಗಿದ್ದಾರೆ. ಆದ್ದರಿಂದ ಅವರೇ ಗುರುಗಳಾಗಿದ್ದಾರೆಂದು ಮೂಲದಲ್ಲಿ ಹೇಳಿದ್ದಾರೆ. ಇಲ್ಲಿ ಪ್ರವರ್ತತೇ ಎಂಬ ಪದ ಪ್ರಯೋಗದ ಅಭಿಪ್ರಾಯ ಹೀಗಿದೆ – ಇದೇ ಜಿಜ್ಞಾಸಾಧಿಕರಣದಲ್ಲಿ ಮುಂದೆ ಟೀಕಾರಾಯರು ಪ್ರವೃತ್ತಿ ಎಂದರೆ ಪುರುಷಾರ್ಥಸಾಧನವಾದ ಇಚ್ಛೆ ಮತ್ತು ಪ್ರಯತ್ನಗಳನ್ನಷ್ಟೇ ವಿವಕ್ಷಿಸಬೇಕು ಎಂದು ಹೇಳುತ್ತಾರೆ. ಅದನ್ನೇ ಇಲ್ಲಿ ವಿವಕ್ಷಿಸಬೇಕಾಗಿರುವುದರಿಂದ ಯಾವುದೇ ಕ್ಷುದ್ರೋಪದ್ರವಗಳಿಗೆ ಅವಕಾಶವಿಲ್ಲ.

## ರಸಘಟ್ಟ
## 'ಶಾಸ್ತ್ರ' ಎಂದರೇನು?

ಕಾಶೀಟಿಪ್ಪಣೀ – ಪ್ರಕೃತತ್ವಾದಿತಿ ॥ 'ಸುವಾಕ್ಯೈಃ' ಇತ್ಯನೇನ ಪ್ರಕೃತತ್ವಾತ್ ಇತ್ಯರ್ಥಃ । ಯದ್ಯಪಿ ಪ್ರಕ್ರಮಾನುಸಾರೇಣ ವೇದಾದಿಕಮ್ ಆದೌ ಗ್ರಾಹ್ಯಮ್ । ತಥಾऽಪಿ 'ಸಕೃದುಕ್ತಶಾಸ್ತ್ರಪದಾತ್ ವೇದಾದಿಪ್ರತೀತೌ ನ ಪೌರ್ವಾಪರ್ಯಮ್' ಇತಿ ಜ್ಞಾಪನಾಯ ಬ್ರಹ್ಮಮೀಮಾಂಸಾಶಾಸ್ತ್ರಮ್ ಆದೌ ಗೃಹೀತಮ್ । ಯದ್ವಾ– ಪ್ರಕೃತತ್ವಾತ್ ಇತ್ಯಸ್ಯ ವ್ಯಾಖ್ಯಾಸಿತತ್ವೇನ ತನ್ಮೂಲತ್ವೇನ ಚ ಬುದ್ಧಿಸನ್ನಿಹಿತತ್ವಾತ್ ಇತ್ಯರ್ಥಃ। ಬುದ್ಧಿಸನ್ನಿಧಾನಕ್ರಮೇಣ ಚ ಸೂತ್ರಶ್ರುತಿಪುರಾಣಾದಿಗ್ರಹಣಮ್ ಇತಿ ಧ್ಯೇಯಮ್ । ಯದ್ಯಪಿ ಉತ್ಪನ್ನತ್ವಸ್ಯ ವೇದವ್ಯಾವೃತತ್ತ್ವೇऽಪಿ ಪ್ರಥಮೋಪಲಬ್ಧತ್ವಂ ವೇದಸೂತ್ರಾದಿಸಾಧಾರಣಮ್ । ತಥಾऽಪಿ ಸೂತ್ರಾದಿಕಂ ಪ್ರತಿ ಕರ್ತೃತ್ವಮಪಿ ಗುರುತ್ವಪ್ರಯೋಜಕಮಿತಿ ಜ್ಞಾಪಯಿತುಮ್ 'ಉತ್ಪದ್ಯತೇ' ಇತ್ಯುಕ್ತಮ್ । ಅತ ಏವ 'ವೇದಾದಿ' ಇತಿ, ಆದಿಪದಗ್ರಾಹ್ಯಸ್ಮೃತ್ಯಾದಿ-ಸಂಗ್ರಹಾಯ 'ಯಥಾಸಂಭವಮ್' ಇತ್ಯುಕ್ತಮ್ । ಅನ್ಯಥಾ 'ಯಥಾಕ್ರಮಮ್' ಇತ್ಯವಕ್ಷ್ಯತ್ । ಶಾಸ್ತ್ರಸ್ಯ ಪ್ರಥಮೋಪಲಂಭಃ ಶ್ರವಣರೂಪಃ।

ಶಾಸ್ತ್ರಪ್ರಭವಶಬ್ದಕ್ಕೆ ಎರಡರ್ಥ. 1. ಮೊದಲು ದೊರೆಯುತ್ತದೆ. 2. ಮೊದಲು ಉತ್ಪನ್ನವಾಗುತ್ತದೆ ಎಂದು. ಅನಾದಿಯಾದ ವೇದಗಳಿಗೆ ಉತ್ಪತ್ತಿಯಿಲ್ಲದ ಕಾರಣ ಪ್ರಥಮಂ ಉಪಲಭ್ಯತೇ - ಮೊದಲು ದೊರೆಯುತ್ತದೆ ಅಥವಾ ಮೊದಲು ಉಪದೇಶಿಸಲ್ಪಡುತ್ತದೆ ಎಂಬರ್ಥವನ್ನು ವಿವಕ್ಷಿಸಬೇಕು. ಬ್ರಹ್ಮಮೀಮಾಂಸಾಶಾಸ್ತ್ರವು ಪೌರುಷೇಯವಾಗಿರುವುದರಿಂದ ಮೊದಲು ರಚಿತವಾಗಿದೆ ಎಂಬರ್ಥವನ್ನು ವಿವಕ್ಷಿಸಬೇಕು. ವೇದ ಹಾಗೂ ಬ್ರಹ್ಮಸೂತ್ರಗಳಲ್ಲಿ ಅಪೌರುಷೇಯವಾದ ವೇದವನ್ನೇ ಮೊದಲು ಉಲ್ಲೇಖ ಮಾಡಿ ಅನಂತರ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಉಲ್ಲೇಖ ಮಾಡಬೇಕಿತ್ತು. ಆದರೆ ನ್ಯಾಯ-





ಸುಧೆಯಲ್ಲಿ 'ಬ್ರಹ್ಮಮೀಮಾಂಸಾಶಾಸ್ತ್ರಂ ವೇದಾದಿಕಂ ಚ ಉಚ್ಯತೇ' ಎಂಬುದಾಗಿ ವಿಪರೀತಕ್ರಮದಲ್ಲಿ ಉಲ್ಲೇಖ ಮಾಡಿದ್ದಾರೆ. ಇದು ಏಕೆ?

ವೇದ ಹಾಗೂ ಬ್ರಹ್ಮಸೂತ್ರಗಳೆರಡೂ ಶಾಸ್ತ್ರ ಎನಿಸಿವೆ. ಇವುಗಳಿಂದ ತತ್ತ್ವಜ್ಞಾನ ಬರುವುದರಲ್ಲಿ ಪೌರ್ವಾಪರ್ಯವಿಲ್ಲ. ಇದನ್ನು ತಿಳಿಸಲು ಬ್ರಹ್ಮಸೂತ್ರವನ್ನು ಮೊದಲು ಪರಿಗ್ರಹ ಮಾಡಿದ್ದಾರೆ. ಅಥವಾ ವ್ಯಾಖ್ಯಾನ ಮಾಡಬೇಕೆಂದು ಗ್ರಂಥಕಾರರು ಪ್ರತಿಜ್ಞೆ ಮಾಡುತ್ತಿರುವುದರಿಂದ ಮೊದಲು ಬ್ರಹ್ಮಸೂತ್ರಗಳೇ ಭಾಷ್ಯಕಾರರ ಬುದ್ಧಿಯಲ್ಲಿ ಆರೂಢವಾಗುತ್ತವೆಂಬ ಅಭಿಪ್ರಾಯದಿಂದಲೂ 'ಬ್ರಹ್ಮಮೀಮಾಂಸಾಶಾಸ್ತ್ರಂ' ಎಂಬ ಪದವನ್ನು ಮೊದಲು ಉಲ್ಲೇಖ ಮಾಡಿದ್ದಾರೆ. ಇಷ್ಟು ಪ್ರಕೃತ ಎಂಬ ಶಬ್ದದ ಅರ್ಥವಾಗುತ್ತದೆ. ಪ್ರಥಮಂ ಉಪಲಭ್ಯತೇ = ಮೊದಲು ದೊರೆಯುತ್ತದೆ ಇದು ವೇದ ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರ ಎರಡರಲ್ಲೂ ಕೂಡ ಸಮಾನವಾಗಿದೆ. ಈ ಅರ್ಥದಿಂದಲೇ ವೇದ ಹಾಗೂ ಬ್ರಹ್ಮಸೂತ್ರಗಳೆರಡರಲ್ಲಿಯೂ ಶಾಸ್ತ್ರಪ್ರಭವಪ್ರಣೀತತ್ವವು ಸಮನ್ವಯವಾಗುತ್ತದೆ. ಆದರೂ ಕೂಡ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಕುರಿತು ಕರ್ತೃಗಳಾಗಿದ್ದಾರೆ ಎಂಬುದನ್ನು ತಿಳಿಸಿದ್ದು ಗುರುತ್ವಕ್ಕೆ ಜ್ಞಾಪಕವಾಗಿದೆ. ಆದ್ದರಿಂದ ಉತ್ಪದ್ಯತೇ' ಎಂಬುದಾಗಿ ಪ್ರಭವಶಬ್ದಕ್ಕೆ ಅರ್ಥವನ್ನು ಹೇಳಿರುತ್ತಾರೆ. ಈ ಅಭಿಪ್ರಾಯದಿಂದಲೇ ವೇದಾದಿ ಎಂಬಲ್ಲಿರುವ ಆದಿಪದದಿಂದ ತಿಳಿಯಲ್ಪಡುವ ಸ್ಮೃತಿ ಮೊದಲಾದವುಗಳನ್ನು ಶಾಸ್ತ್ರಶಬ್ದದಿಂದ ಸಂಗ್ರಹಮಾಡುವುದಕ್ಕಾಗಿ 'ಯಥಾಸಂಭವಂ' ಎಂಬ ಪದಪ್ರಯೋಗ ಮಾಡಿದ್ದಾರೆ. ಇಲ್ಲದಿದ್ದರೆ 'ಯಥಾಕ್ರಮಂ' ಎಂಬ ಪದಪ್ರಯೋಗವನ್ನು ಮಾಡುತ್ತಿದ್ದರು. ಶಾಸ್ತ್ರವು ಮೊದಲು ಉಪಲಬ್ಧವಾಗುತ್ತದೆ ಎಂದರೆ ಉಪದೇಶದ ಮೂಲಕ ಅದರ ಶ್ರವಣವಾಗುತ್ತದೆಂಬುದು ಇದರ ಅಭಿಪ್ರಾಯ.

## 'ಶಾಸ್ತ್ರಪ್ರಭವ' ಶಬ್ದದ ವ್ಯಾಖ್ಯಾನ

ಆನಂದ – 'ವಿಘ್ನವಿಘಾತಾದಿ' ಇತ್ಯತ್ರ ಆದಿಶಬ್ದೇನ ಸಮಾಪ್ತಿಪ್ರಚಯಗಮನಪರಿಗ್ರಹಃ । ನನು ಬಹೂನಾಂ ವಿಘ್ನಾನಾಮ್ ಏಕಪ್ರಣಾಮೇನ ನಿವೃತ್ತ್ಯಸಂಭವಾತ್ ವಿಘ್ನಸಮಸಂಖ್ಯಮಂಗಲತ್ವಮೇವ ಪ್ರಣಾಮಾವೃತ್ತೇಃ ವಿಘ್ನವಿಘಾತಾದಿಹೇತುತ್ವೇ ನಿಯಾಮಕಮ್? ಇತ್ಯತ ಆಹ – ಭಾವೇ ವಾ ಇತಿ ॥

ಶಾಸ್ತ್ರಶಬ್ದಸ್ಯ ಸಾಮಾನ್ಯಾಕಾರೇಣ ಪ್ರಯುಕ್ತತ್ವಾತ್ ಕಿಮತ್ರ ಶಾಸ್ತ್ರಶಬ್ದೇನ ಗೃಹೀತಮ್? ಇತ್ಯತ ಆಹ – ಶಾಸ್ತ್ರಶಬ್ದೇನ ಇತಿ ॥ 'ಪ್ರಕೃತತ್ವಾತ್' ಇತಿ 'ಸುವಾಕ್ಯೈಃ' ಇತ್ಯರ್ಥಃ । ಯದ್ವಾ

ವ್ಯಾಚಿಖ್ಯಾಸಿತತ್ವೇನ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ತನ್ನಿರ್ಣೇಯತ್ವೇನ ವೇದಾದೇಶ್ಚ ಬುದ್ಧಿಸನ್ನಿಹಿತತ್ವ-ರೂಪಪ್ರಕೃತತ್ವಾತ್ ಇತ್ಯರ್ಥಃ।

ನನು 'ಪ್ರಭವಮ್' ಇತ್ಯತ್ರ 'ಪ್ರಭವನಂ ಪ್ರಭವಃ' ಇತಿ ಭಾವಸಾಧನತ್ವಂ ವಾಶ್ರೀಯತೇ। 'ಪ್ರಭವತೀತಿ ಪ್ರಭವಃ' ಇತಿ ಕರ್ತ್ರ್ಯಸಾಧನತ್ವಂ ವಾ। ನಾದ್ಯಃ। ತಥಾ ಸತಿ 'ಶಾಸ್ತ್ರಸ್ಯ ಪ್ರಭವೋ ಯಸ್ಮಾತ್' ಇತಿ ವ್ಯಧಿಕರಣೋ ಬಹುವ್ರೀಹಿಃ ಸ್ಯಾತ್। ತಥಾ ಚ ನ ವೃತ್ತಿಪದಾರ್ಥಪ್ರಾಧಾನ್ಯಮ್। ದ್ವಿತೀಯೇಽಪಿ 'ಶಾಸ್ತ್ರಂ ಪ್ರಭವೋ ಯಸ್ಮಾತ್' ಇತಿ ಬಹುವ್ರೀಹಿಃ ಸ್ಯಾದಿತಿ ವೃತ್ತಿಪದಾರ್ಥಪ್ರಾಧಾನ್ಯ-ಪ್ರಾಪ್ತಿರೇವ। ಕಿಂಚ ಪ್ರಭವಶಬ್ದೇನ ಉತ್ಪತ್ತಿರುಪಲಬ್ಧಿರ್ವಾ। ನಾದ್ಯಃ। ವೇದಾದೇರಪೌರು-ಷೇಯತ್ವೇನ ತದುತ್ಪಾದಕತ್ವಾಸಂಭವಾತ್। ನ ದ್ವಿತೀಯಃ। ಬ್ರಹ್ಮಮೀಮಾಂಸಾಯಾಃ ಪ್ರಥಮಮ್ ಅಭಾವೇನ ತದುಪಲಬ್ಧಿರ್ನ ಸಂಭವತಿ ಇತ್ಯತಃ ತದ್ ವ್ಯಾಚಷ್ಟೇ – ಪ್ರಭವತೀತಿ ॥ ಉತ್ಪತ್ತೇರ್ವೇದೇ ಉಪಲಬ್ಧೇ ಬ್ರಹ್ಮಮೀಮಾಂಸಾಯಾಮ್ ಅಸಂಭವಾತ್ ಆಹ – ಯಥಾಸಂಭವಮಿತಿ ॥

ವಿಘ್ನವಿಘಾತಾದಿ ಎಂಬಲ್ಲಿರುವ ಆದಿಶಬ್ದದಿಂದ ಸಮಾಪ್ತಿ ಮತ್ತು ಗ್ರಂಥದ ಕೀರ್ತಿ ಇವುಗಳನ್ನು ಕೂಡ ವಿವಕ್ಷಿಸಬೇಕು. ಅನೇಕ ವಿಘ್ನಗಳಿದ್ದಾಗ ಒಂದೇ ಪ್ರಣಾಮದಿಂದ ಪರಿಹರಿಸಲು ಸಾಧ್ಯವಾಗು-ವುದಿಲ್ಲ. ವಿಘ್ನಗಳು ಎಷ್ಟು ಸಂಖ್ಯೆಯಲ್ಲಿರುತ್ತವೋ ಅಷ್ಟೇ ಸಂಖ್ಯೆಯಲ್ಲಿ ಮಂಗಳಗಳನ್ನು ಆಚರಣೆ ಮಾಡಬೇಕು. ಆದ್ದರಿಂದ ಅನೇಕಬಾರಿ ಪ್ರಣಾಮ ಮಾಡಲು ವಿಘ್ನವಿಘಾತಾದಿಗಳಿಗೆ ಹೇತುವಾಗಲು ನಿಯಾಮಕವಾಗಿದೆ. ಈ ಪ್ರಶ್ನೆಗೆ 'ಭಾವೇ ವಾ' ಎಂಬುದಾಗಿ ಉತ್ತರಿಸುತ್ತಿದ್ದಾರೆ.

'ಶಾಸ್ತ್ರ'ಶಬ್ದಕ್ಕೆ ಪ್ರಕೃತ ಯಾವ ಅರ್ಥವನ್ನು ಸ್ವೀಕರಿಸಿದ್ದೀರಿ? ಎಂಬ ಪ್ರಶ್ನೆಗೆ 'ಶಾಸ್ತ್ರಶಬ್ದೇನ' ಎಂಬುದಾಗಿ ಉತ್ತರಿಸಿದ್ದಾರೆ. ಪ್ರಕೃತತ್ವಾತ್ ಎಂದರೆ 'ಅಖಿಲೈಃ ಸುವಾಕ್ಯೈಃ ಎಂಬಲ್ಲಿ ಪ್ರಕೃತವಾದ' ಎಂದರ್ಥ. ಅಥವಾ ಯಾವ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವ್ಯಾಖ್ಯಾನ ಮಾಡಲು ಹೊರಟದ್ದಾರೋ ಅಂಥ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ನಿರ್ಣೇಯವಾದ ವೇದಾದಿಗಳು ಬುದ್ಧಿಸನ್ನಿಹಿತವಾದ್ದರಿಂದ ಪ್ರಕೃತ-ವಾಗಿವೆ ಎಂದೂ ಕೂಡ ಪ್ರಕೃತತ್ವಾತ್ ಎಂಬುದಕ್ಕೆ ಅರ್ಥವನ್ನು ತಿಳಿಯಬೇಕು.

'ತಮೇವ ಶಾಸ್ತ್ರಪ್ರಭವಂ' ಎಂಬಲ್ಲಿ ಪ್ರಭವನಂ ಇತಿ ಪ್ರಭವಃ ಎಂಬುದಾಗಿ ಭಾವಸಾಧನತ್ವವನ್ನು ಆಶ್ರಯಿಸುತ್ತೀರೋ; ಅಥವಾ ಪ್ರಭವತೀತಿ ಪ್ರಭವಃ ಎಂಬುದಾಗಿ ಕರ್ತ್ರ್ಯಸಾಧನತ್ವವನ್ನು ಅಪೇಕ್ಷಿಸು-ತ್ತೀರೋ. ಮೊದಲನೆಯ ಪಕ್ಷ ತಪ್ಪು. ಹಾಗಾದರೆ ಶಾಸ್ತ್ರಸ್ಯ ಪ್ರಭವಃ ಯಸ್ಮಾತ್ ಎಂಬುದಾಗಿ ವ್ಯಧಿ-ಕರಣಬಹುವ್ರೀಹಿಯನ್ನು ಮಾಡಬೇಕು. ಆಗ ವೃತ್ತಿಪದಾರ್ಥಪ್ರಾಧಾನ್ಯವನ್ನು ಹೇಳಿದಂತಾಗುವುದಿಲ್ಲ.





ಎರಡನೆಯ ಪಕ್ಷದಲ್ಲೂ ಕೂಡ ಶಾಸ್ತ್ರಂ ಪ್ರಭವಃ ಯಸ್ಮಾತ್ ಎಂಬುದಾಗಿ ಬಹುವ್ರೀಹಿ ಮಾಡಬೇಕು. ಆಗಲೂ ಕೂಡ ವೃತ್ತಿಪದಾರ್ಥಪ್ರಾಧಾನ್ಯವು ಪ್ರಾಪ್ತವಾಗುವುದಿಲ್ಲ. ಮತ್ತು ಪ್ರಭವ ಶಬ್ದಕ್ಕೆ ಉತ್ಪತ್ತಿ ಎಂದರ್ಥವೋ ಅಥವಾ ಉಪಲಬ್ಧಿ ಎಂದೋ? ಉತ್ಪತ್ತಿಯೆಂಬ ಅರ್ಥವನ್ನು ವಿವಕ್ಷಿಸಿದರೆ ಅಪೌರುಷೇಯವಾದ ವೇದದಲ್ಲಿ ಇದು ಕೂಡುವುದಿಲ್ಲ. ಉಪಲಬ್ಧಿ ಎಂಬ ಅರ್ಥವನ್ನು ವಿವಕ್ಷಿಸಿದರೆ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಪ್ರಥಮೋಪಲಬ್ಧಿಯು ಯುಕ್ತವಾಗುವುದಿಲ್ಲ. ಈ ಪ್ರಶ್ನೆಗೆ 'ಪ್ರಭವತಿ' ಇತ್ಯಾದಿಯಾಗಿ ಉತ್ತರಿಸಿದ್ದಾರೆ. ವೇದದಲ್ಲಿ ಉತ್ಪತ್ತಿಯೂ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಉಪಲಬ್ಧಿಯೂ ಅಸಂಭಾವಿತವಾದ್ದರಿಂದ 'ಯಥಾಸಂಭವಂ' ಎಂಬ ಪದದಿಂದ ಉತ್ತರಿಸಿದ್ದಾರೆ.

## 'ಶಾಸ್ತ್ರಪ್ರಭವ' ಎಂಬಲ್ಲಿ ಬಹುವ್ರೀಹಿಸಮಾಸ

ವಾಕ್ಯಾರ್ಥರತ್ನಮಾಲಾ– ಪ್ರಭವಶಬ್ದೇ ಹಿ 'ಋದೋರಬ್' ಇತ್ಯನೇನ ಋವರ್ಣಾಂತ-ಉವರ್ಣಾಂತೇಭ್ಯೋಽಪ್ಪ್ರತ್ಯಯವಿಧಾಯಕೇನ ಉವರ್ಣಾಂತಭೂಧಾತೋಃ ಅಪ್ ಪ್ರತ್ಯಯ ಇತಿ ವಾಚ್ಯಮ್ । ಸ ಚ 'ಪ್ರಭವತೀತಿ ಪ್ರಭವಃ' ಇತಿ ನ ಕರ್ತರಿ ಅಕರ್ತರಿ ಇತ್ಯನುವೃತ್ತ್ಯಾ ಕರ್ತರಿ ತದಪ್ರಾಪ್ತೇಃ । ನಾಪಿ 'ಪ್ರಭವನಂ ಪ್ರಭವಃ' ಇತಿಭಾವೋ ಬಾದರಾಯಣಸ್ಯ ಶಾಸ್ತ್ರಪ್ರಭವನತ್ವಾಭಾವಾತ್ । ತಸ್ಮಾತ್ 'ಶಾಸ್ತ್ರಸ್ಯ ಪ್ರಭವನಂ ಯಸ್ಮಾತ್' ಇತಿ ಬಹುವ್ರೀಹಿರಾಶ್ರಯಣೀಯಃ, ತದಾ ವ್ಯಧಿಕರಣಬಹುವ್ರೀಹಿರುಪಪಾದನಸಾಪೇಕ್ಷೋಽಂಗೀಕಾರ್ಯಃ । ಜಘನ್ಯಶ್ಚೇತಿ ಮನಸಿ ಕೃತ್ವಾ ನಿರ್ದೋಷಪಕ್ಷಮಾಹ – ಪ್ರಭವತಿ ಉತ್ಪದ್ಯತೇ ಇತ್ಯಾದಿ ॥ ಅತ್ರ 'ಅಸ್ಮಾತ್' ಇತಿ ಅಪಾದಾನನಿರ್ದೇಶಾತ್ ಅಪಾದಾನೇಽಪ್ಪ್ರತ್ಯಯಃ ॥

ಋದೋರಬ್(3-3-57) ಎಂಬುದು ಪಾಣಿನಿಯ ಸೂತ್ರ. 'ಋವರ್ಣಾಂತಾತ್ ಉವರ್ಣಾಂತಾಚ್ಚ ಅಪ್' ಕರಃ ಗರಃ, ಯವಃ, ಲವಃ, ಸ್ತವಃ, ಪವಃ – ಪ್ರಕೃತ ಪ್ರಭವ ಶಬ್ದದ ಮೇಲೆ 'ಋದೋರಪ್' ಎಂಬ ಸೂತ್ರದಿಂದ ಅಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಋವರ್ಣ ಅಥವಾ ಉವರ್ಣವು ಕೊನೆಯಲ್ಲಿದ್ದರೆ ಅಪ್ ಪ್ರತ್ಯಯವು ಬರುತ್ತದೆಂದು ಈ ಸೂತ್ರವು ಹೇಳುತ್ತಿರುವುದರಿಂದ ಪ್ರಕೃತ ಭೂಧಾತುವು ಉವರ್ಣಾಂತವಾಗಿದೆ. ಅದರ ಮೇಲೆ ಅಪ್ ಬಂದರೆ ಭೂ+ಅ ಎಂದಾಗುತ್ತದೆ. ಅನಂತರ ಗುಣ ಮತ್ತು ಅವಾದೇಶಗಳು ಬಂದರೆ ಪ್ರಭವಃ ಎಂಬ ರೂಪವು ನಿಷ್ಪನ್ನವಾಗುತ್ತದೆ. ಇಲ್ಲಿ ಪ್ರಭವತೀತಿ ಪ್ರಭವಃ ಎಂಬುದಾಗಿ ಕರ್ತ್ರರ್ಥವನ್ನು ವಿವಕ್ಷಿಸಬಾರದು. ಏಕೆಂದರೆ ಅಕರ್ತರಿ ಎಂಬುದು ಈ ಸೂತ್ರದಲ್ಲಿ ಪ್ರಾಪ್ತವಾಗುವುದರಿಂದ ಕರ್ತ್ರರ್ಥದಲ್ಲಿ ಅಪ್ ಪ್ರತ್ಯಯವು ಪ್ರಾಪ್ತವಾಗುವುದಿಲ್ಲ.





'ಪ್ರಭವನಮೇವ ಪ್ರಭವಃ' ಎಂಬುದಾಗಿ ಭಾವಾರ್ಥದಲ್ಲೂ ಕೂಡ ಪ್ರಭವಶಬ್ದವನ್ನು ವಿವಕ್ಷಿಸಬಾರದು. ಏಕೆಂದರೆ ವೇದವ್ಯಾಸದೇವರೇ ಶಾಸ್ತ್ರಪ್ರಭವ ಎಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಯಾವ ವೇದವ್ಯಾಸದೇವರಿಂದ ಶಾಸ್ತ್ರಗಳು ಉತ್ಪನ್ನವಾಗಿವೆಯೋ ಅಥವಾ ಉಪಲಬ್ಧವಾಗಿವೆಯೋ ಅಂಥ ವೇದವ್ಯಾಸದೇವರು ಶಾಸ್ತ್ರಪ್ರಭವ ಎನಿಸಿದ್ದಾರೆ ಎಂದು ಬಹುವ್ರೀಹಿಯನ್ನು ಆಶ್ರಯಿಸಬೇಕು. ಆಗ ಇದು ವ್ಯಧಿಕರಣಬಹುವ್ರೀಹಿ ಆಗುತ್ತದೆ. ಮತ್ತು ಬಹುವ್ರೀಹಿಸಮಾಸವು ಜಘನ್ಯವಾದ್ದರಿಂದ ಕೂಡಲೇ ಮನಸ್ಸಿನಲ್ಲಿ ಇದರ ಅರ್ಥವು ಸ್ಪಷ್ಟವಾಗಿ ತಿಳಿಯುವುದಿಲ್ಲ. ಈ ಉದ್ದೇಶದಿಂದ ಗ್ರಂಥದಲ್ಲಿ ಪ್ರಭವತಿ ಉತ್ಪದ್ಯತೇ ಇತ್ಯಾದಿಯಾಗಿ ಶಾಸ್ತ್ರಪ್ರಭವ ಶಬ್ದದ ಅರ್ಥವನ್ನು ವಿವರಣೆ ಮಾಡಿದ್ದಾರೆ. 'ಪ್ರಥಮಂ ಉಪಲಭ್ಯತೇ ಯಸ್ಮಾತ್ ಸಃ ಪ್ರಭವಃ ಅಥವಾ ಪ್ರಥಮಂ ಉತ್ಪದ್ಯತೇ ಯಸ್ಮಾತ್ ಸಃ ಪ್ರಭವಃ' ಎಂಬುದಾಗಿ ವಿಗ್ರಹವನ್ನು ಮಾಡಿದ್ದಾರೆ. 'ಭುವಃ ಪ್ರಭವಃ' ಎಂಬ ಸೂತ್ರದ ಪ್ರಕಾರ ಪ್ರಭವಶಬ್ದಕ್ಕೆ ಅಪಾದಾನಸಂಜ್ಞೆಯು ಪ್ರಾಪ್ತವಾಗುತ್ತದೆ. ಅನಂತರ ಅಪಾದಾನಾರ್ಥದಲ್ಲಿ ಅಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಅನಂತರ 'ಅಪಾದಾನೇ ಪಂಚಮೀ' ಎಂಬ ಸೂತ್ರದಿಂದ ಪಂಚಮೀ ವಿಭಕ್ತಿಯು ಬರುವುದರಿಂದ ಯಸ್ಮಾತ್ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ.

## ಸುಧಾ-ಪರಿಮಳಸಾರ

ವೇದವ್ಯಾಸದೇವರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾರೆ. ವೇದಾದಿಗಳನ್ನು ವಿಭಾಗ ಮಾಡಿ ಉಪದೇಶಪರಂಪರೆಯನ್ನು ಮುಂದುವರೆಸಿದ್ದಾರೆ. ಆದ್ದರಿಂದ ಇವರನ್ನು ಶಾಸ್ತ್ರಪ್ರಭವ ಎನ್ನುತ್ತಾರೆ. ಮತ್ತು ಶಾಸ್ತ್ರಸಂಪ್ರದಾಯಪ್ರವರ್ತಕರಾಗಿರುವುದರಿಂದ ನಾರಾಯಣದೇವರೇ ಶ್ರೀಮಧ್ವಾಚಾರ್ಯರಿಗೆ ಗುರುಗಳಾಗಿದ್ದಾರೆ. ಸಮಸ್ತಜಗತ್ತಿಗೆ ಗುರುಗಳೆನಿಸಿದ ಬ್ರಹ್ಮಾದಿದೇವತೆಗಳಿಗೂ ಕೂಡ ಗುರುಗಳಾದವರು ಶ್ರೀವೇದವ್ಯಾಸದೇವರು. ಇವರನ್ನು ಭಕ್ತಿಯಿಂದ ನಮಸ್ಕಾರ ಮಾಡಿ ಅನುವ್ಯಾಖ್ಯಾನ ಎಂಬ ಗ್ರಂಥವನ್ನು ರಚನೆ ಮಾಡಲು ಪ್ರಾರಂಭಿಸುತ್ತೇನೆ ಎಂಬುದಾಗಿ ಶ್ರೀಮದಾಚಾರ್ಯರು ಗ್ರಂಥಾರಂಭದಲ್ಲಿ ಪ್ರತಿಜ್ಞೆ ಮಾಡಿರುವರು.

ಸಮಸ್ತ ಜಗತ್ತಿಗೆ ಗುರುಗಳೆಂದರೆ ಸಜ್ಜನರ ಪ್ರಪಂಚಕ್ಕೆ ಮಾತ್ರ ಗುರುಗಳೆಂದು ತಿಳಿಯಬೇಕು. ದುಷ್ಟರಿಗೆ ಅಥವಾ ನಿತ್ಯಸಂಸಾರಿಗಳಿಗೆ ಇವರು ಗುರುಗಳಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು.

## ಪರಿಮಳವೈಶಿಷ್ಟ್ಯ

* ಶಾಸ್ತ್ರಪ್ರಭವಂ ಎಂಬುದಕ್ಕೆ ವ್ಯಾಕರಣದ ಪ್ರಕಾರ ನಿಷ್ಪತ್ತಿಯನ್ನು ತಿಳಿಸಿದ್ದು ಅಪೂರ್ವವಾಗಿದೆ. ಜಗತ್‌ಶಬ್ದಕ್ಕೆ ಸಜ್ಜನಪ್ರಪಂಚ ಎಂಬ ಅರ್ಥವನ್ನು ಮಾಡಿರುವುದು ಅತ್ಯಂತ ಅಪೂರ್ವವಾಗಿದೆ.

* ಗುರುಗಳೆಂದರೆ ಚತುರ್ಮುಖಬ್ರಹ್ಮದೇವರು; ದೇವರೆಂದರೆ ಮಹಾವಿಷ್ಣು ಎಂಬುದನ್ನು ಪ್ರಮಾಣಪುರಃಸರವಾಗಿ ತಿಳಿಸಿದ್ದಾರೆ.

## ಸಾಕ್ಷಾದುಪದೇಶಕರಾದ ಗುರುಗಳಿಗೆ ಸಾಷ್ಟಾಂಗ ನಮಸ್ಕಾರ

**ಶ್ರೀಮನ್ನ್ಯಾಯಸುಧಾ– ಪ್ರಕಾರಾಂತರೇಣ ಗುರುತ್ವಂ ನಾರಾಯಣಸ್ಯ ಸಮರ್ಥಯತೇ । ವಿಶೇಷತ ಇತಿ ॥ 'ಗುರುಮ್' ಇತಿ ವರ್ತತೇ । 'ವಿಶೇಷತಃ' ಇತಿ ಸಾಕ್ಷಾತ್ ಉಪದೇಷ್ಟೃತ್ವೇನ ನತು ಜಗತ ಇವ ಪರಂಪರಯಾ । ಅತ್ರ ಯದಿ 'ಶಾಸ್ತ್ರಪ್ರಭವಮ್' ಇತ್ಯಾದ್ಯೇವ ಉಚ್ಯೇತ ತದಾ ಪೃಥಕ್‌ಪ್ರಣಾಮೇನ ದೇವತಾಯಾ ಗುರೋಶ್ಚ ಪಾರ್ಥಕ್ಯಶಂಕಾ ಸ್ಯಾತ್ । ತದರ್ಥಮ್ 'ತಮೇವ' ಇತ್ಯುಕ್ತಮ್ । ನ ಚೈವಂ ಪೃಥಕ್ ಪ್ರಣಾಮಾನುಪಪತ್ತಿಃ । ನಿಮಿತ್ತದ್ವಯಸಮಾವೇಶೇ ನೈಮಿತ್ತಿಕವಿಲೋಪನಿಯಮಾಭಾವಾತ್ ।**

ಮತ್ತೊಂದು ಕ್ರಮದಿಂದ ನಾರಾಯಣನಲ್ಲಿ ಗುರುತ್ವವನ್ನು ಸಮರ್ಥನೆ ಮಾಡಲು 'ವಿಶೇಷತಃ' ಎಂಬ ಪದಪ್ರಯೋಗವನ್ನು ಮಾಡಿದ್ದಾರೆ. ಗುರುಮ್ ಎಂಬ ಪದವನ್ನು ಇಲ್ಲಿಯೂ ಕೂಡ ಅನ್ವಯ ಮಾಡಿಕೊಳ್ಳಬೇಕು. 'ವಿಶೇಷತಃ' ಎಂಬ ಪದಕ್ಕೆ ಸಾಕ್ಷಾತ್ತಾಗಿ ಉಪದೇಶಕನಾಗಿರುವುದರಿಂದ ಎಂದರ್ಥ. ಜಗತ್ತಿಗೆ ಹೇಗೋ ಹಾಗೆ ಪರಂಪರಾಸಂಬಂಧ -ದಿಂದ ನನಗೆ ಉಪದೇಶಕನಲ್ಲ ಎಂದಭಿಪ್ರಾಯ.

ಇಲ್ಲಿ ಶಾಸ್ತ್ರಪ್ರಭವಂ ಎಂದಷ್ಟೇ ಹೇಳಿದರೆ ಗುರುದೇವತೆಗಳನ್ನು ಬೇರೆ ಬೇರೆಯಾಗಿ ನಮಸ್ಕಾರ ಮಾಡಿರುವ ಕಾರಣ 'ದೇವತೆಯೇ ಬೇರೆ ಗುರುವೇ ಬೇರೆ' ಎಂಬ ಸಂಶಯವು

ಬರುತ್ತದೆ. ಆದಕ್ಕೋಸ್ಕರ 'ತಮೇವ' ಎಂಬ ಪದವನ್ನು ಪ್ರಯೋಗ ಮಾಡಿದ್ದಾರೆ. ಹಾಗಿದ್ದರೆ ಪ್ರತ್ಯೇಕವಾಗಿ ಏಕೆ ನಮಸ್ಕಾರ ಮಾಡಬೇಕು? ಎಂದು ಪ್ರಶ್ನಿಸಬಾರದು. ಎರಡು ನಿಮಿತ್ತಗಳಿದ್ದಾಗ ನೈಮಿತ್ತಿಕವಾದದ್ದು ಲೋಪವಾಗಬೇಕೆಂಬ ನಿಯಮವಿರುವುದಿಲ್ಲ.

## ಮಧ್ವವಿಜಯದ ಆಧಾರ

ಪರಿಮಳ– ಸಾಕ್ಷಾದುಪದೇಷ್ಟೃತ್ವೇನೇತಿ ॥ ತಥಾಚೋಕ್ತಂ ಮಧ್ವವಿಜಯೇ –

'ಇತಿಹಾಸಸುಂದರಪುರಾಣಸೂತ್ರಸತ್ಕ್ರಿಯಪಂಚರಾತ್ರನಿಜಭಾವಸಂಯುತಮ್ ।
ಅಶೃಣೋದನಂತಹೃದನಂತತೋಽಚಿರಾತ್ ...'

ಇತ್ಯಾದಿ । ಪರಂಪರಯಾ = ಬ್ರಹ್ಮಾದಿದ್ವಾರಾ ।

'ಸಾಕ್ಷಾದುಪದೇಷ್ಟೃತ್ವೇನ' ಎಂಬುದಾಗಿ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಇದನ್ನೇ ಮಧ್ವವಿಜಯದಲ್ಲಿ –

'ಇತಿಹಾಸಸುಂದರಪುರಾಣಸೂತ್ರಸತ್ಕ್ರಿಯಪಂಚರಾತ್ರನಿಜಭಾವಸಂಯುತಮ್ ।
ಅಶೃಣೋದನಂತಹೃದನಂತತೋಽಚಿರಾತ್ ಪರಮಾರ್ಥಮಪ್ಯಗಣಿತಾಗಮಾವಲೇಃ'

ಇತಿಹಾಸ, ಪುರಾಣ, ಬ್ರಹ್ಮಸೂತ್ರ, ಪಂಚರಾತ್ರ ಮೊದಲಾದವುಗಳ ನಿಜವಾದ ಅಭಿಪ್ರಾಯವನ್ನು ಸಾಕ್ಷಾತ್ ನಾರಾಯಣದೇವರಿಂದ ಪೂರ್ಣಪ್ರಜ್ಞರು ಶ್ರವಣ ಮಾಡಿದರು ಎಂಬುದಾಗಿ ಮಧ್ವವಿಜಯದ ಎಂಟನೆಯ ಸರ್ಗದಲ್ಲಿ ನಾರಾಯಣಪಂಡಿತರು ವರ್ಣನೆ ಮಾಡಿದ್ದಾರೆ. ಆದ್ದರಿಂದ ಮಧ್ವಾಚಾರ್ಯರಿಗೆ ನಾರಾಯಣನು ಸಾಕ್ಷಾದುಪದೇಶಕನಾಗಿದ್ದಾನೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. 'ಪರಂಪರಯಾ' ಎಂದರೆ ಬ್ರಹ್ಮಾದಿಗಳ ಮೂಲಕ ಎಂದರ್ಥ.

## ವಿವಕ್ಷಾಭೇದದಿಂದ ಒಬ್ಬನನ್ನೇ ಅನೇಕಬಾರಿ ನಮಿಸಬಹುದೇ?

ಪರಿಮಳ– ಗುರುತ್ವೇನಾತ್ರ ಪುನರ್ನತಿಃ ಇತಿ ಪೂರ್ವಂ ಸಮಾಧಾನೇ ಉಕ್ತೇಽಪಿ ಲೋಕೇ ಕ್ವಚಿದೇಕತ್ರ ಪಿತೃತ್ವಸ್ಯೋಕ್ತರೂಪಗುರುತ್ವಸ್ಯ ಚ ಸತ್ತ್ವೇಽಪಿ ತದುಭಯನಿಮಿತ್ತಕ-

ನತ್ಯಾದಿಕ್ರಿಯಾಽಽವೃತ್ತೇರದರ್ಶನಾತ್ ಶಂಕತೇ – ನ ಚೇತಿ ॥ ಅನ್ಯಥಾ 'ಪಿತೃತ್ವಸ್ವಾಮಿತ್ವಾದಿನಿಮಿತ್ತಾಪಿ ನತಿಃ ಕಾರ್ಯಾ' ಇತಿ ಶಂಕಾಭಿಪ್ರಾಯಃ ।

ಗುರುತ್ವಪ್ರಯುಕ್ತವಾಗಿ ಇಲ್ಲಿ ನಾರಾಯಣನನ್ನು ಪ್ರತ್ಯೇಕವಾಗಿ ನಮಸ್ಕಾರ ಮಾಡಿರುತ್ತಾರೆ ಎಂಬ ಸಮಾಧಾನವನ್ನು ಈ ಹಿಂದೆಯೇ ಹೇಳಿದ್ದಾರೆ. ಆದರೆ ಲೋಕದಲ್ಲಿ ಕೆಲವೆಡೆ ಪಿತೃತ್ವ ಹಾಗೂ ಗುರುತ್ವ ಮೊದಲಾದ ಧರ್ಮಗಳು ಒಬ್ಬನೇ ವ್ಯಕ್ತಿಯಲ್ಲಿ ಸೇರಿದ್ದರೂ ಕೂಡ ಈ ಎರಡು ಧರ್ಮಗಳ ನಿಮಿತ್ತವಾಗಿ ನಮಸ್ಕಾರವೆಂಬ ಕ್ರಿಯೆಯು ಪ್ರತ್ಯೇಕವಾಗಿ ಆಚರಿಸುವ ರೂಢಿಯು ಇರುವುದಿಲ್ಲ. ಆದ್ದರಿಂದ ನಾರಾಯಣನನ್ನು ಒಮ್ಮೆ ನಮಸ್ಕಾರ ಮಾಡಿದ ಮೇಲೆ ಗುರುತ್ವನಿಮಿತ್ತವಾಗಿ ಪ್ರತ್ಯೇಕವಾಗಿ ಏಕೆ ನಮಸ್ಕಾರ ಮಾಡಬೇಕು? ಈ ಆಶಂಕೆಯನ್ನು ಪರಿಹರಿಸಲು 'ನಚೈವಂ' ಇತ್ಯಾದಿ ವಾಕ್ಯವು ಹೊರಟಿದೆ. ಹಾಗೆ ಗುರುತ್ವ, ದೇವತ್ವ ನಿಮಿತ್ತಗಳಿಂದ ಪ್ರತ್ಯೇಕವಾಗಿ ನಮಸ್ಕಾರ ಮಾಡುವುದಾದರೆ ಇನ್ನೂ ಪಿತೃತ್ವ, ಸ್ವಾಮಿತ್ವ ಮೊದಲಾದ ಅನೇಕ ನಿಮಿತ್ತಗಳಿರುವುದರಿಂದ ಆಯಾ ನಿಮಿತ್ತಗಳಿಗೆ ಅನುಸಾರವಾಗಿ ಇನ್ನೂ ಅನೇಕ ನಮಸ್ಕಾರಗಳನ್ನು ಮಾಡಬೇಕಾದೀತು! ಎಂಬುದು ಆಶಂಕೆಯ ಅಭಿಪ್ರಾಯ.

## ಅತಿಶಯಪ್ರೀತಿಗಾಗಿ ನಮಿಸಬಹುದು

ಪರಿಮಳ– ಪರಿಹಾರಸ್ತು ತು, ಸತ್ಯಮೇವಮ್, ತಥಾಪಿ ಕ್ವಚಿತ್ ಸತ್ರಾದೌ ಋತ್ವಿಕ್ತ್ವಯಜಮಾನತ್ವೋಭಯನಿಮಿತ್ತಕಕ್ರಿಯಾನುಷ್ಠಾನಸ್ಯಾಪಿ ದೃಷ್ಟೇಃ, ತಥಾ ಜ್ಯೋತಿರಾಕಾಶಾದಿಶಬ್ದೇಷ್ವಪಿ ಅನ್ಯತ್ರಪ್ರಸಿದ್ಧತ್ವಾದ್ಯನೇಕನಿಮಿತ್ತಕವಿಚಾರಕ್ರಿಯಾಯಾಶ್ಚ ದೃಷ್ಟೇಃ ದರ್ಶೇಷ್ಟಿನಾಮ್ ಆಗ್ನೇಯಾದೀನಾಂ ತಿಸೃಣಾಮೇಕಕಾಲೇ ಸಮಾವೇಶೇನ ತನ್ನಿಮಿತ್ತಕಾನಾಂ ಪ್ರಯಾಜಾನಾಂ ಸಕೃದನುಷ್ಠಾನೇಽಪಿ ದರ್ಶ ಏವ ಸಾಂತ್ಸರಿಕಪ್ರಾಪ್ತೌ ದಾರ್ಶಿಕಸ್ಯ ಸಾಂವತ್ಸರಿಕಸ್ಯ ಚ ಶ್ರಾದ್ಧಸ್ಯ ಕರಣವತ್ ಅಭ್ಯರ್ಹಿತತ್ವಾತ್ ದೇವತಾತ್ವಗುರುತ್ವರೂಪನಿಮಿತ್ತದ್ವಯಸಮಾವೇಶೇಽಪಿ ನೈಮಿತ್ತಕಸ್ಯ ನಮನಸ್ಯ ತತ್ಪ್ರೀತ್ಯತಿಶಯಾರ್ಥಂ ಪುನರನುಷ್ಠಾನೋಪಪತ್ತೇಃ ಇತಿ ಭಾವಃ ।

ಈ ಆಶಂಕೆಗೆ ಪರಿಹಾರವನ್ನು ಹೀಗೆ ತಿಳಿಯಬೇಕು – ನೀವು ಹೇಳಿದ್ದು ಸರಿ; ಆದರೂ ಕೂಡ ಸತ್ರಾದಿಗಳಲ್ಲಿ ಋತ್ವಿಜ ಹಾಗೂ ಯಜಮಾನ ಒಬ್ಬನೇ ಆಗಿರುವಾಗ ಇಬ್ಬರ ನಿಮಿತ್ತ-ಗಳನ್ನೂ ಅನುಸರಿಸಿ ಋತ್ವಿಜ, ಹಾಗೂ ಯಜಮಾನ ಇವರಿಬ್ಬರ ಕಾರ್ಯವನ್ನು ಒಬ್ಬನೇ ಮಾಡುವುದು ಕಂಡಿದೆ. ಶಾಸ್ತ್ರದಲ್ಲೂ ಕೂಡ ಹಾಗೆಯೇ ವಿಧಾನ ಮಾಡಿದ್ದಾರೆ. ಅದರಂತೆ ಜ್ಯೋತಿ, ಆಕಾಶಃ ಮೊದಲಾದ ವೈದಿಕಶಬ್ದಗಳಲ್ಲಿ ಅನ್ಯತ್ರಪ್ರಸಿದ್ಧತ್ವ, ಉಭಯತ್ರಪ್ರಸಿದ್ಧತ್ವ, ಅನ್ಯತ್ರೈವ ಪ್ರಸಿದ್ಧತ್ವ ಇತ್ಯಾದಿ ಅನೇಕ ನಿಮಿತ್ತಗಳು ಇವೆ. ಈ ನಿಮಿತ್ತಗಳನ್ನು ಅನುಸರಿಸಿ ಪ್ರಥಮಪಾದದಲ್ಲಿ ಸಮನ್ವಯಮಾಡಿದ ಶಬ್ದವನ್ನೇ ಪುನಃ ತೃತೀಯಪಾದ ಹಾಗೂ ಚತುರ್ಥ-ಪಾದಗಳಲ್ಲಿ ಸಮನ್ವಯವನ್ನು ಮಾಡಿರುತ್ತಾರೆ. ಇದರಂತೆ ದರ್ಶ, ಇಷ್ಟಿ, ಆಗ್ನೇಯ ಮೊದಲಾದ ಮೂರುಯಾಗಗಳನ್ನೂ ಒಂದೇ ಕಾಲದಲ್ಲಿ ಆಚರಿಸುವ ಪ್ರಸಂಗ ಬರುತ್ತದೆ. ಆಗ ಇವುಗಳ ನಿಮಿತ್ತದಿಂದ ಆಚರಿಸಬೇಕಾದ ಪ್ರಯಾಜ ಮೊದಲಾದ ಯಾಗಗಳನ್ನು ಒಮ್ಮೆ ಮಾತ್ರ ಅನು-ಷ್ಠಾನ ಮಾಡುತ್ತಾರೆ. ಆದರೆ ದರ್ಶದಲ್ಲಿಯೇ ಸಾಂವತ್ಸರಿಕಶ್ರಾದ್ಧವನ್ನು ಬೇರೆ ಬೇರೆಯಾಗಿ ಅನುಷ್ಠಾನ ಮಾಡುವುದು ಶಾಸ್ತ್ರ ಹಾಗೂ ಶಿಷ್ಟಾಚಾರಕ್ಕೆ ಸಮ್ಮತವಾಗಿರುತ್ತದೆ. ಅದರಂತೆ ಪ್ರಕೃತ ಬಹಳ ಮುಖ್ಯವಾದ್ದರಿಂದ ದೇವತಾತ್ವ, ಗುರುತ್ವ ಎಂಬೆರೆಡು ನಿಮಿತ್ತಗಳನ್ನು ಆಶ್ರಯಿಸಿದ್ದಾರೆ. ಈ ಎರಡು ನಿಮಿತ್ತಗಳೂ ಒಬ್ಬನೇ ವ್ಯಕ್ತಿಯಲ್ಲಿ ಸಮಾವಿಷ್ಟವಾಗಿದ್ದರೂ ನೈಮಿತ್ತಿಕವಾದ ನಮನ-ಕ್ರಿಯೆಯು ನಾರಾಯಣನ ಪ್ರೀತಿಗೋಸ್ಕರ ಪುನಃ ಅನುಷ್ಠಾನ ಮಾಡಲ್ಪಟ್ಟಿದೆ.

ವಿಶೇಷವಿಚಾರ— ಗುರುತ್ವ ಹಾಗೂ ದೇವತಾತ್ವ ಈ ಎರಡು ನಿಮಿತ್ತಗಳಿಂದ ನೈಮಿತ್ತಿಕವಾದ ಪ್ರಣಾಮವನ್ನು ಆನಂದತೀರ್ಥರು ಎರಡು ಬಾರಿ ಮಾಡಿದ್ದಾರೆ. ಆದರೆ ಗುರುತ್ವ ದೇವತಾತ್ವರೂಪವಾದ ನಿಮಿತ್ತಗಳೆರಡೂ ನಾರಾಯಣನೊಬ್ಬನಲ್ಲಿಯೇ ಸಮಾವೇಶಗೊಂಡಿವೆ. ಆದ್ದರಿಂದ ನೈಮಿತ್ತಿಕವಾದ ನಾರಾಯಣಪ್ರಣಾಮವನ್ನು ಒಂದು ಬಾರಿ ಮಾತ್ರ ಮಾಡಿದರೆ ಸಾಕು. ಎರಡನೇ ಬಾರಿ ಪ್ರಣಾಮ ಮಾಡಬೇಕಾಗಿಲ್ಲ. ಲೋಕದಲ್ಲಿ ಮಗನಿಗೆ ತಂದೆಯೇ ಗುರುವಾಗಿದ್ದಾಗ ಮಗನು ತಂದೆಗೆ ತಂದೆ-ಯೆಂದೂ ಗುರುವೆಂದೂ ಎರಡು ಸಲ ನಮಸ್ಕಾರ ಮಾಡುವುದಿಲ್ಲ. ಆದ್ದರಿಂದ ಆಚಾರ್ಯರು ಈ ರೀತಿ ಎರಡು ಬಾರಿ ನಮಸ್ಕಾರ ಮಾಡಿದ್ದು ಏಕೆ?

ಈ ರೀತಿಯಾದ ಪ್ರಶ್ನೆಗೆ ನಿಮಿತ್ತದ್ವಯಸಮಾವೇಶದಿಂದ ನೈಮಿತ್ತಿಕಕಾರ್ಯದ್ವಯಗಳಿಗೆ ವಿಲೋಪ -ನಿಯಮವಿಲ್ಲ ಎಂದು ಉತ್ತರಿಸುತ್ತಿದ್ದಾರೆ.

ಸತ್ರವನ್ನು ಆಚರಿಸುವಾಗ ಯಜಮಾನನೇ ಋತ್ವಿಕ್ ಆಗುತ್ತಾನೆ. ಈ ಸಂದರ್ಭದಲ್ಲಿ ಯಜಮಾನ ಮಾಡಬೇಕಾದ ಸಂಕಲ್ಪಾದಿಗಳನ್ನು ಋತ್ವಿಜನು ಮಾಡಬೇಕಾದ ಅನುಷ್ಠಾನಾದಿಗಳನ್ನು ಒಬ್ಬನೇ ಮಾಡುತ್ತಾನೆ. ಋತ್ವಿಕ್ತ್ವ ಯಜಮಾನತ್ವ ಎಂಬೆರಡು ನಿಮಿತ್ತಗಳು ಒಬ್ಬನೇ ವ್ಯಕ್ತಿಯಲ್ಲಿ ಸಮಾವೇಶಗೊಂಡಿವೆ. ಅಂದರೆ ಯಜಮಾನ ಮಾಡಬೇಕಾದ ಹಾಗೂ ಋತ್ವಿಕ್‌ನು ಮಾಡಬೇಕಾದ ನೈಮಿತ್ತಿಕವಾದ ಕ್ರಿಯೆಗಳಲ್ಲಿ ಲೋಪಮಾಡಬಾರದು. ಋತ್ವಿಜನು ಮಾಡಬೇಕಾದ ಅನುಷ್ಠಾನವನ್ನು ಮಾಡಬೇಕು. ಯಜಮಾನನು ಮಾಡಬೇಕಾದ ಅನುಷ್ಠಾನವನ್ನು ಕೂಡ ಮಾಡಬೇಕು.

ಎರಡನೆಯ ಉದಾಹರಣೆ – ಜ್ಯೋತಿಃ, ಆಕಾಶಃ ಇತ್ಯಾದಿ ಶಬ್ದಗಳನ್ನು ಅನ್ಯತ್ರಪ್ರಸಿದ್ಧ ಎಂಬುದಾಗಿ ವಿವಕ್ಷಿಸಿ ಪ್ರಥಮಪಾದದಲ್ಲಿ ಸಮನ್ವಯ ಮಾಡಿದ್ದಾರೆ. ಇವೇ ಶಬ್ದಗಳು ಉಭಯತ್ರಪ್ರಸಿದ್ಧವಾದವುಗಳೆಂದು ವಿವಕ್ಷಿಸಿ ಮೂರನೆಯ ಪಾದದಲ್ಲೂ ಸಮನ್ವಯ ಮಾಡಿದ್ದಾರೆ. ಅನ್ಯತ್ರೈವಪ್ರಸಿದ್ಧವಾದವುಗಳೆಂಬ ದೃಷ್ಟಿಯಿಂದ ನಾಲ್ಕನೆಯ ಪಾದದಲ್ಲಿ ಸಮನ್ವಯ ಮಾಡಿದ್ದಾರೆ. ಹೀಗೆ ಅನ್ಯತ್ರಪ್ರಸಿದ್ಧತ್ವ ಹಾಗೂ ಉಭಯತ್ರಪ್ರಸಿದ್ಧತ್ವ ಎಂಬೆರಡು ನಿಮಿತ್ತಗಳು ಜ್ಯೋತಿಃ ಹಾಗೂ ಆಕಾಶಃ ಎಂಬ ಶಬ್ದಗಳಲ್ಲಿ ಸಮಾವೇಶಗೊಂಡಿವೆ. ಅಂದ ಮಾತ್ರಕ್ಕೆ ಪ್ರಥಮಪಾದದಲ್ಲಿ ಹಾಗೂ ಮೂರನೆಯ ಪಾದದಲ್ಲಿ ಎರಡೂ ಕಡೆ ಸಮನ್ವಯ ಮಾಡಬೇಕೆಂಬ ಕ್ರಿಯೆಗೆ ಲೋಪಮಾಡಬಾರದು. ಪ್ರಥಮಪಾದದಲ್ಲಿ ಸಮನ್ವಯ ಮಾಡಿದ್ದರೂ ಪುನಃ ಮೂರನೆಯ ಪಾದದಲ್ಲಿ ಸಮನ್ವಯ ಮಾಡಲೇಬೇಕು.

ಮೂರನೆಯ ಉದಾಹರಣೆ – ಶ್ರಾದ್ಧವನ್ನು ಅಮಾವಾಸ್ಯಾನಿಮಿತ್ತವಾಗಿಯೂ ಆಚರಿಸುತ್ತಾರೆ, ಸಾಂವತ್ಸರಿಕತಿಥಿನಿಮಿತ್ತವಾಗಿಯೂ ಆಚರಿಸುತ್ತಾರೆ. ಸಾಂವತ್ಸರಿಕತಿಥಿಯು ಅಮಾವಾಸ್ಯೆಯೇ ಆಗಿದ್ದರೆ ಆ ದಿನದಂದು ನಿಮಿತ್ತಗಳೆರಡೂ ಸಮಾವೇಶಗೊಳ್ಳುತ್ತವೆ. ಆದರೂ ನೈಮಿತ್ತಿಕವಾದ ಶ್ರಾದ್ಧವನ್ನು ಆ ದಿವಸ ಅಮಾವಾಸ್ಯಾ ನಿಮಿತ್ತವಾಗಿ ಮತ್ತು ಸಾಂವತ್ಸರಿಕತಿಥಿನಿಮಿತ್ತವಾಗಿ ಎರಡು ಬಾರಿ ಆಚರಿಸಲೇಬೇಕು.

## ಲೋಕಸಿದ್ಧವಾದ ದೃಷ್ಟಾಂತಪ್ರದರ್ಶನ

ಗುರ್ವರ್ಥದೀಪಿಕಾ – ನಿಮಿತ್ತದ್ವಯಸಮಾವೇಶೇ ನೈಮಿತ್ತಿಕವಿಲೋಪನಿಯಮಾಭಾವಾತ್ ಇತ್ಯತ್ರ ಉದಯತಿ ಸೂರ್ಯೇ ಉದಿತತ್ವಂ ತೇಜೋರೂಪತ್ವಂ ಚೇತಿ ನಿಮಿತ್ತದ್ವಯಂ ಚಾಸ್ತಿ । ತತ್ರ ಸಂಧ್ಯಾವಂದನಾದಿನೈಮಿತ್ತಿಕಕಾರ್ಯಾಯ ವಂದಕಃ ಪುರುಷಃ ಉದಿತತ್ವಮಾತ್ರಂ ಪುರಸ್ಕುರುತೇ । ಘಟಾದ್ಯರ್ಥಪ್ರಕಾಶನಾಖ್ಯನೈಮಿತ್ತಿಕಕಾರ್ಯಾಯ ಕ್ವಚಿತ್ ತೇಜೋರೂಪತ್ವಮಪಿ ಅನುಸರತಿ ।





ತನ್ನಿಮಿತ್ತಕಕಾರ್ಯಸ್ಯ ಸರ್ವಥಾ ವಿಲೋಪೋ ನ । ಏವಂ ಲೋಕಶಿಕ್ಷಾಯೈ ಗುರುನಮಸ್ಕಾರಾಖ್ಯ-ನೈಮಿತ್ತಿಕಕಾರ್ಯಾಯ ಕ್ವಚಿತ್ ಗುರುತ್ವಸ್ಯ ಅನುಸರಣಂ ಯುಕ್ತಮೇವ – ಇತಿ ಭಾವಃ।

'ನಿಮಿತ್ತದ್ವಯಸಮಾವೇಶೇ ನೈಮಿತ್ತಿಕವಿಲೋಪನಿಯಮಾಭಾವಾತ್' ಎಂಬುದಾಗಿ ನ್ಯಾಯ-ಸುಧೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಯಬೇಕು. ಸೂರ್ಯೋದಯವಾದಾಗ ಉದಿತತ್ವ ಹಾಗೂ ತೇಜೋರೂಪತ್ವ ಎಂಬೆರಡು ನಿಮಿತ್ತಗಳು ಒಬ್ಬನೇ ಸೂರ್ಯನಲ್ಲಿವೆ. ಸಂಧ್ಯಾ-ವಂದನೆ ಮೊದಲಾದ ನೈಮಿತ್ತಿಕಕಾರ್ಯಗಳಿಗೆ ಸಂಧ್ಯಾವಂದನೆ ಮಾಡುವ ಪುರುಷನು ಉದಿತತ್ವವೆಂಬ ನಿಮಿತ್ತವನ್ನಷ್ಟೇ ವಿವಕ್ಷಿಸುತ್ತಾನೆ. ಘಟಪಟಾದಿಗಳನ್ನು ಕಾಣಲು ತೇಜೋರೂಪತ್ವ ಎಂಬ ನಿಮಿತ್ತವನ್ನು ಅನುಸರಿಸುತ್ತಾನೆ. ಹೀಗೆ ಒಬ್ಬನೇ ಸೂರ್ಯನಲ್ಲಿ ಎರಡು ನಿಮಿತ್ತಗಳಿದ್ದರೂ ಕೂಡ ನೈಮಿತ್ತಿಕಕಾರ್ಯ-ಗಳಲ್ಲಿ ಲೋಪವಾಗುವುದಿಲ್ಲ. ಅದರಂತೆ ಲೋಕಶಿಕ್ಷಣೆಗೋಸ್ಕರ ಗುರುನಮಸ್ಕಾರ ಎಂಬ ನೈಮಿತ್ತಿಕ-ಕಾರ್ಯಕ್ಕಾಗಿ ನಾರಾಯಣನನ್ನು ಗುರುತ್ವೇನ ಪುನಃ ಪ್ರಣಾಮ ಮಾಡಿದ್ದು ಯುಕ್ತವೇ ಆಗಿದೆ.

## ದೃಷ್ಟಾಂತಕ್ಕಾಗಿ ಎರಡು ಪೂರ್ವಮೀಮಾಂಸಾನ್ಯಾಯಗಳು

ವಾಕ್ಯಾರ್ಥಚಂದ್ರಿಕಾ – ಸಂಪ್ರದಾಯಪ್ರವರ್ತಕತ್ವಂ ಯಥೈತದ್ ವಿಶೇಷಣಲಬ್ಧಂ ತಥಾಽಽಹ – ಜಗತ ಇತ್ಯಾದಿನಾ ॥ ನಿಮಿತ್ತಸಮಾವೇಶ ಇತಿ ॥ 'ತತ್ರ ವಿಪ್ರತಿಷೇಧಾತ್ ವಿಕಲ್ಪಃ ಸ್ಯಾತ್' ಇತಿ ಷಷ್ಠಾಧಿಕರಣೇ ಪ್ರತಿಹರ್ತುರುದ್ಗಾತ್ರೋರ್ಯುಗಪದಪಚ್ಛೇದೇ ಪ್ರತಿಹರ್ತ್ರಪಚ್ಛೇದ-ನಿಮಿತ್ತಕಸರ್ವವೇತಸದಾನಸ್ಯ ಉದ್ಗಾತ್ರೋಪಚ್ಛೇದನಿಮಿತ್ತಕಸ್ಯ ಅದಕ್ಷಿಣತದ್ಯಜ್ಞಸಮಾಪ್ಯನಂತರಾ-ನುಷ್ಠೀಯಮಾನಪುನರ್ಯಾಗೇ ಪೂರ್ವದೇಯದಾನಸ್ಯ ಚೈಕಸ್ಮಿನ್ನೇವ ಪ್ರಯೋಗೇ ವಿರುದ್ಧತಯಾ ಅಸಂಭವಾತ್ ಉದ್ಗಾತ್ರಪಚ್ಛೇದನಿಮಿತ್ತಕಪುನರ್ಯಾಗೇ ಸರ್ವವೇತಸದಾನೇನ ಉಭಯಸಂಭವೇ-ಽಪಿ ಪ್ರಯೋಗಾಂತರೇ ಕ್ರಿಯಮಾಣೇ ಪ್ರಾಯಶ್ಚಿತ್ತನಿಮಿತ್ತವತ್ ಪ್ರಯೋಗಸಾದ್ಗುಣ್ಯಾಸಂಭವೇನ ಅಶಕ್ಯತಯಾ ವಿಕಲ್ಪೋಕ್ತಾವಪಿ

'ಪ್ರತ್ಯಕ್ಷೋಪದೇಶಾಚ್ಚಮಸಿನಾಮವ್ಯಕ್ತಃ ಶೇಷೇ' ಇತಿ ತೃತೀಯಾಧಿಕರಣೇ ಸಮಾಖ್ಯಾಯಾ ವಷಟ್ಕಾರಸ್ಯ ಹೋಮಾಭಿಷವಯೋಶ್ಚ ಇತ್ಯೇಷಾಂ ಭಕ್ಷನಿಮಿತ್ತಾನಾಂ ಸಮವಾಯೇಽವಯವಶಶ್ಚ ಸರ್ವೈರ್ಭಕ್ಷ್ಯಃ ಪ್ರತಿಪತ್ತಿಸಂಭವೇನ ಬಾಧಾಯೋಗಾತ್ ಸಮುಚ್ಚಯ ಏವ ಇತ್ಯಾಶ್ರಿತತ್ವಾತ್ ಜೀವನಾದಿನಿಮಿತ್ತೈಕ್ಯೇಽಪಿ ತದಾವೃತ್ತಿಮಾತ್ರೇಣ ನೈಮಿತ್ತಿಕದರ್ಶಪೂರ್ಣಮಾಸಾದ್ಯಾವೃತ್ತೇಃ 'ತೇಷಾಮೌತ್ಪತ್ತಿಕತ್ವಾದಾಗಮೇನ ಪ್ರವರ್ತೇತ' ಇತಿ ಷಷ್ಠಾಧಿಕರಣೇ ಪ್ರತಿಪಾದಿತತ್ವೇನ ನಿಮಿತ್ತ-





ಭೇದೇ ನೈಮಿತ್ತಿಕಸಮುಚ್ಚಯಸ್ಯ ಕೈಮುತ್ಯಸಿದ್ಧತ್ವಾಚ್ಚ ಪ್ರಕೃತೇಽಪಿ ಉಭಯಸಂಭವೇನ ಸಮುಚ್ಚಯೋ ಯುಕ್ತ ಇತ್ಯಾಶಯಃ ॥

ಶ್ರೀವೇದವ್ಯಾಸದೇವರು ಹೇಗೆ ಸಂಪ್ರದಾಯಪ್ರವರ್ತಕರಾಗಿದ್ದಾರೆಂಬುದನ್ನು ವಿಶೇಷಣದ ಬಲದಿಂದ ತಿಳಿಯುತ್ತದೆಂಬುದನ್ನು 'ಜಗತಃ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ನಿಮಿತ್ತಸಮಾವೇಶೇ' ಎಂಬ ವಾಕ್ಯದ ಅಭಿಪ್ರಾಯವನ್ನು ಉದಾಹರಣಪೂರ್ವಕವಾಗಿ ಹೀಗೆ ತಿಳಿಯಬೇಕು. 'ತತ್ರ ವಿಪ್ರತಿಷೇಧಾತ್ ವಿಕಲ್ಪಃ ಸ್ಯಾತ್' ಎಂಬ ಪೂರ್ವಮೀಮಾಂಸೆಯ ಆರನೆಯ ಅಧಿಕರಣದಲ್ಲಿ ಹೀಗೆ ವಿಚಾರ ಮಾಡಿದ್ದಾರೆ. ಪ್ರತಿಹರ್ತೃ ಹಾಗೂ ಉದ್ಗಾತೃ ಇಬ್ಬರ ಅಪಚ್ಛೇದವು ಏಕಕಾಲದಲ್ಲಿ ಆಗುತ್ತದೆ. ಪ್ರತಿಹರ್ತೃವಿನ ಅಪಚ್ಛೇದವಾದರೆ ತನ್ನಿಮಿತ್ತಕವಾಗಿ ಸರ್ವಸ್ವದಾನವನ್ನು ಪ್ರಾಯಶ್ಚಿತ್ತರೂಪದಲ್ಲಿ ಮಾಡಬೇಕು. ಉದ್ಗಾತೃ ಅಪಚ್ಛೇದವಾದರೆ ತನ್ನಿಮಿತ್ತಕವಾಗಿ ಆ ಯಾಗವನ್ನು ದಕ್ಷಿಣೆಯಿಲ್ಲದೇ ಸಮಾಪ್ತಿಗೊಳಿಸಿ ಪುನಃ ಮತ್ತೊಂದು ಯಾಗವನ್ನು ಅನುಷ್ಠಾನ ಮಾಡಿ ಹಿಂದಿನ ಯಾಗದಲ್ಲಿ ಕೊಡಬೇಕಾದ ದ್ವಾದಶಶತರೂಪ್ಯಕಗಳನ್ನು ಪ್ರಾಯಶ್ಚಿತ್ತರೂಪದಲ್ಲಿ ಕೊಡಬೇಕು. ಇಬ್ಬರ ಅಪಚ್ಛೇದವು ಒಟ್ಟಿಗೆ ಆದಾಗ ಒಂದೇ ಪ್ರಯೋಗದಲ್ಲಿ ಇವೆರಡು ವಿರುದ್ಧವಾದ್ದರಿಂದ ಅಸಂಭಾವಿತವಾಗಿವೆ. ಉದ್ಗಾತ್ರಪಚ್ಛೇದದ ನಿಮಿತ್ತದಿಂದ ಆಚರಿಸುವ ಮತ್ತೊಂದು ಯಾಗದಲ್ಲೇ ಸರ್ವಸ್ವದಾನವನ್ನು ಮಾಡಿದಾಗ ಎರಡನ್ನೂ ಕೂಡ ಒಟ್ಟಿಗೆ ಅನುಷ್ಠಾನ ಮಾಡಿದಂತಾಗುತ್ತದೆ. ಆದರೆ ಮತ್ತೊಂದು ಯಾಗದಲ್ಲಿ ಮಾಡಲ್ಪಡುವ ಪ್ರಾಯಶ್ಚಿತ್ತನಿಮಿತ್ತದಂತೆ ಸರ್ವಸ್ವದಾನಕ್ಕೆ ಪ್ರಯೋಗದ ಸಾದ್ಗುಣ್ಯವು ಸಿದ್ಧವಾಗುವುದಿಲ್ಲ. ಆದ್ದರಿಂದ ವಿಕಲ್ಪಪಕ್ಷವನ್ನು ಜೈಮಿನಿ ಋಷಿಗಳು ಆಶ್ರಯಿಸಿದ್ದಾರೆ.

'ವಿಪ್ರತಿಷೇಧಾತ್ ವಿಕಲ್ಪಃ ಸ್ಯಾತ್' ಎಂಬ ಅಧಿಕರಣದಲ್ಲಿ ಜೈಮಿನ್ಯಾಚಾರ್ಯರು ವಿಕಲ್ಪವನ್ನು ಆಶ್ರಯಿಸಿದ್ದರಿಂದಲೂ ಕೂಡ ಮತ್ತೊಂದು ಅಧಿಕರಣದಲ್ಲಿ ಸಮುಚ್ಚಯಪಕ್ಷವನ್ನು ಆಶ್ರಯಿಸಿದ್ದಾರೆ. 'ಪ್ರತ್ಯಕ್ಷೋಪದೇಶಾಚ್ಚಮಸಿನಾಮವ್ಯಕ್ತಃ ಶೇಷೇ' ಎಂಬ ತೃತೀಯಾಧ್ಯಾಯದ ಐದನೆಯ ಪಾದದಲ್ಲಿ ಬರುವ ಅಧಿಕರಣದಲ್ಲಿ ಹೀಗೆ ಸಮರ್ಥಿಸಲಾಗಿದೆ. ಸೋಮಭಕ್ಷಣಕ್ಕೆ ಸಮಾಖ್ಯಾ, ವಷಟ್ಕಾರ, ಹೋಮಾಭಿಷವ ಈ ಮೂರು ನಿಮಿತ್ತಗಳಿವೆ. ಈ ಮೂರೂ ಕೂಡ ಒಂದೇ ಕಡೆ ಸೇರಿದಾಗ ಒಂದೊಂದು ಭಾಗವನ್ನು ಎಲ್ಲರೂ ಕೂಡ ಸೇರಿ ಭಕ್ಷಣ ಮಾಡಬಹುದು. (ಅವಯವಶಶ್ಚ = ಒಂದೊಂದು ಭಾಗವನ್ನೂ; ಪ್ರತಿಪತ್ತಿಸಂಭವೇನ = ಉಳಿದ ಭಾಗವನ್ನು ಯಥಾಕಥಂಚಿತ್ ಉಪಯೋಗ ಮಾಡಿಕೊಳ್ಳಬಹುದಾದ್ದರಿಂದ). ಒಂದಕ್ಕೆ ಬಾಧವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಸಮುಚ್ಚಯಪಕ್ಷವನ್ನೇ ಆಶ್ರಯಿಸಬೇಕು.





ಜೀವನ ಇತ್ಯಾದಿ ನಿಮಿತ್ತಗಳಲ್ಲಿ ಐಕ್ಯವಿದ್ದರೂ ಕೂಡ ಜೀವನದ ಆವೃತ್ತಿಮಾತ್ರದಿಂದ ನೈಮಿತ್ತಿಕ-ವಾದ ದರ್ಶಪೂರ್ಣಮಾಸಯಾಗಗಳಲ್ಲಿ ಆವೃತ್ತಿ ಇರುವುದು ಕಂಡಿದೆ. ಇದನ್ನು 'ತೇಷಾಮೌತ್ಪತ್ತಿಕತ್ವಾತ್ ಆಗಮೇನ ಪ್ರವರ್ತೇತ' ಎಂಬ ಆರನೆಯ ಅಧ್ಯಾಯದ ಅಧಿಕರಣದಲ್ಲಿ ಪ್ರತಿಪಾದಿಸಿದ್ದಾರೆ. ಹೀಗೆ ನಿಮಿತ್ತದ ಆವೃತ್ತಿಯಿಂದಲೇ ನೈಮಿತ್ತಿಕದ ಆವೃತ್ತಿಯು ಸಿದ್ಧವಾಗುತ್ತಿರುವಾಗ ನಿಮಿತ್ತಭೇದವಿದ್ದಾಗ ನೈಮಿತ್ತಿಕದ ಸಮುಚ್ಚಯವು ಕೈಮುತ್ಯದಿಂದಲೇ ಸಿದ್ಧವಾಯಿತು.

ಪ್ರಕೃತದಲ್ಲಿ ದೇವತಾತ್ವ ಹಾಗೂ ಗುರುತ್ವ ಎಂಬ ಎರಡು ನಿಮಿತ್ತಗಳಿದ್ದರೂ ಕೂಡ ನೈಮಿತ್ತಿಕ-ವಾದ ಪ್ರಣಾಮದಲ್ಲಿ ವಿಲೋಪವನ್ನು ಮಾಡಬೇಕಾಗಿಲ್ಲ. ಸಮುಚ್ಚಯವನ್ನು ಆಶ್ರಯಿಸಬಹುದು. ಆದ್ದರಿಂದ ದೇವತಾತ್ವೇನ ಪ್ರಣತನಾದ ನಾರಾಯಣನು ಗುರುತ್ವೇನ ಈಗ ಪ್ರಣತನಾಗುತ್ತಿದ್ದಾನೆ. ಇದ-ರಲ್ಲಿ ಯಾವುದೇ ಬಾಧಕವಿಲ್ಲ. ಇಷ್ಟು 'ನಿಮಿತ್ತದ್ವಯಸಮಾವೇಶೇ' ಇತ್ಯಾದಿ ಟೀಕಾವಾಕ್ಯದ ಅಭಿಪ್ರಾಯ -ವಾಗಿದೆ.

ವಿಶೇಷವಿವರಣೆ– ಜಗದ್ಗುರುಗಳಿಗೂ ಕೂಡ ಗುರುವಾಗಿದ್ದಾನೆಂದು ಹೇಳಿದ ಮಾತ್ರಕ್ಕೆ ಸಂಪ್ರದಾಯ-ಪ್ರವರ್ತಕತ್ವವು ಹೇಗೆ ತಿಳಿಯುತ್ತದೆ? ಎಂದರೆ ಸಮಸ್ತಜಗತ್ತಿಗೆ ಬ್ರಹ್ಮಾದಿ ದೇವತೆಗಳು ಗುರುಗಳಾಗಿದ್ದಾರೆ. ಅವರಿಗೂ ಕೂಡ ಗುರುವಾಗಿರುವುದರಿಂದ ಸಂಪ್ರದಾಯಪ್ರವರ್ತಕನಾಗಿದ್ದಾನೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ ಎಂಬ ಉತ್ತರವನ್ನು 'ಜಗತಃ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

'ನಿಮಿತ್ತಸಮಾವೇಶೇ' ಎಂಬ ಟೀಕಾವಾಕ್ಯದಲ್ಲಿ ಪೂರ್ವಮೀಮಾಂಸೆಯ ಈ ದೃಷ್ಟಾಂತವನ್ನು ತಿಳಿಯಬೇಕು – ಪ್ರತಿಹರ್ತೃ ಹಾಗೂ ಉದ್ಗಾತೃ ಇಬ್ಬರ ಅಪಚ್ಛೇದವು ಏಕ ಕಾಲದಲ್ಲಿಯೇ ಆಗುತ್ತದೆ. ಇಂಥ ಸಂದರ್ಭ-ದಲ್ಲಿ ಒಂದೇ ಪ್ರಯೋಗದಲ್ಲಿ ಎರಡು ಪ್ರಾಯಶ್ಚಿತ್ತಗಳು ಒಟ್ಟಿಗೆ ಸಾಧ್ಯವಿಲ್ಲ. ಪ್ರತಿಹರ್ತೃ ಅಪಚ್ಛೇದಕ್ಕೆ ಸರ್ವವೇತಸದಾನವೇ ಪ್ರಾಯಶ್ಚಿತ್ತವಾಗಿದೆ. ಉದ್ಗಾತೃ ಅಪಚ್ಛೇದಕ್ಕೆ ಯಾವ ಯಾಗವನ್ನು ಮಾಡಲು ಪ್ರಾರಂಭಿಸಿದ್ದಾನೋ ಅದನ್ನು ದಕ್ಷಿಣೆ ಕೊಡದೇ ಮುಗಿಸಿ ಇನ್ನೊಂದು ಯಾಗವನ್ನು ಆಚರಣೆ ಮಾಡಿ ಅದರಲ್ಲಿ ಹಿಂದಿನ ಯಾಗದಲ್ಲಿ ಕೊಡಬೇಕಾದ ದಕ್ಷಿಣೆಯನ್ನು ಕೊಡಬೇಕು ಎಂಬ ಪ್ರಾಯಶ್ಚಿತ್ತವನ್ನು ಹೇಳಿದ್ದಾರೆ. ಈ ಎರಡೂ ಪ್ರಾಯಶ್ಚಿತ್ತಗಳನ್ನು ಒಂದೇ ಪ್ರಯೋಗದಲ್ಲಿ ಮಾಡಲು ಸಾಧ್ಯವೇ ಇಲ್ಲ. ಏಕೆಂದರೆ ಎರಡೂ ಕೂಡ ಪರಸ್ಪರ ವಿರುದ್ಧವಾಗಿವೆ. ಉದ್ಗಾತೃ ಅಪಚ್ಛೇದವಾದಾಗ ಸಾವಿರದ ಇನ್ನೂರು ರೂಗಳನ್ನು ಪ್ರಾಯಶ್ಚಿತ್ತರೂಪದಲ್ಲಿ ಕೊಡಬೇಕು. ಈಗ ಎರಡನೆಯ ಯಾಗದಲ್ಲಿ ಹಿಂದಿನ ಯಾಗದಲ್ಲಿ ಕೊಡಬೇಕಾದ್ದನ್ನು ಕೊಡಬೇಕೆಂದು ಹೇಳಿದಾಗ ಪ್ರತಿಹರ್ತೃವಿನ ಅಪಚ್ಛೇದಪ್ರಯುಕ್ತವಾದ ಸರ್ವಸ್ವವನ್ನು ದಾನ ಮಾಡಬೇಕೆಂದೋ ಅಥವಾ ಉದ್ಗಾತೃ ಅಪಚ್ಛೇದನಿಮಿತ್ತಕವಾದ ಸಾವಿರದ ಇನ್ನೂರು ರೂಗಳನ್ನು





ಕೊಡಬೇಕೆಂದೋ ಎಂಬ ಸಂಶಯವು ಬರುತ್ತದೆ. ಸರ್ವಸ್ವವನ್ನು ಕೊಡಬೇಕೆಂದು ಹೇಳಿದರೆ ಪ್ರತಿಹರ್ತ್ರು ಅಪಚ್ಛೇದ ಪ್ರಯುಕ್ತವಾದ ಪ್ರಾಯಶ್ಚಿತ್ತವನ್ನು ಮಾಡಿದಂತೆ ಆಗುತ್ತದೆ. ಉದ್ಗಾತೃ ಅಪಚ್ಛೇದನಿಮಿತ್ತಕವಾದ ಪ್ರಾಯಶ್ಚಿತ್ತವನ್ನು ಕೂಡ ಮಾಡಿದಂತಾಗುತ್ತದೆ. ಪೂರ್ವಪ್ರಯೋಗದಲ್ಲಿ ನೈಮಿತ್ತಿಕದ್ವಯಗಳ ಸಮಾವೇಶ ಆಗದೇ ಇದ್ದರೂ ಕೂಡ ಪ್ರಯೋಗಾಂತರದಲ್ಲಿ ನೈಮಿತ್ತಿಕದ್ವಯಗಳ ಸಮಾವೇಶ ಆಗುತ್ತದೆ.

ಪ್ರಯೋಗಾಂತರದಲ್ಲೂ ಕೂಡ ನೈಮಿತ್ತಿಕದ್ವಯಸಮಾವೇಶವು ಸಾಧ್ಯವಿಲ್ಲ. ಏಕೆಂದರೆ, ನಿಮಿತ್ತವಿದ್ದರೆ ಪ್ರಾಯಶ್ಚಿತ್ತವನ್ನು ಆಚರಣೆ ಮಾಡಬೇಕು. ಪ್ರಯೋಗಾಂತರದಲ್ಲಿ ನಿಮಿತ್ತವೇ ಇಲ್ಲ. ಪೂರ್ವಪ್ರಯೋಗ-ದಲ್ಲಷ್ಟೇ ನಿಮಿತ್ತವಿದೆ. ಏಕೆಂದರೆ ಪ್ರತಿಹರ್ತ್ರುವಿನ ಅಪಚ್ಛೇದವು ಪ್ರಯೋಗಾಂತರದಲ್ಲಿ ಆಗಿರುವುದಿಲ್ಲ. ಪೂರ್ವಪ್ರಯೋಗದಲ್ಲಿ ಪ್ರತಿಹರ್ತ್ರುವಿನ ಅಪಚ್ಛೇದವಾಗಿದೆ. ತನ್ನಿಮಿತ್ತವಾಗಿ ಸರ್ವಸ್ವದಾನವನ್ನು ಕೂಡ ಮಾಡಿದ್ದಾಗಿದೆ. ಪ್ರಯೋಗಾಂತರದಲ್ಲಿ ಸಾದ್ಗುಣ್ಯವೇ ಇದೆ. ವೈಗುಣ್ಯವು ಇರುವುದಿಲ್ಲ. ಆದ್ದರಿಂದ ಅಲ್ಲಿ ಪ್ರತಿಹರ್ತ್ರು ಅಪಚ್ಛೇದನಿಮಿತ್ತಕವಾಗ ಸರ್ವಸ್ವದಾನ ಮಾಡುವ ಅವಶ್ಯಕತೆ ಇರುವುದಿಲ್ಲ. ನಿಮಿತ್ತವಿದ್ದಲ್ಲೇ ಪ್ರಾಯಶ್ಚಿತ್ತ ಮಾಡಬೇಕು. ಪ್ರತಿಹರ್ತ್ರಪಚ್ಛೇದವೆಂಬ ನಿಮಿತ್ತವು ಪೂರ್ವಪ್ರಯೋಗದಲ್ಲಿದೆ. ಅಲ್ಲಿಯೇ ಸರ್ವಸ್ವದಾನವನ್ನು ಮಾಡಬೇಕು. ಪ್ರಯೋಗಾಂತರದಲ್ಲಿ ಪ್ರಾಯಶ್ಚಿತ್ತಮಾಡಿದರೆ ವೈಯಧಿಕರಣ್ಯವು ಬರು-ತ್ತದೆ ಎಂಬುದು ಸಿದ್ಧಾಂತದ ಅಭಿಪ್ರಾಯ.

ಪ್ರಯೋಗಾಂತರದಲ್ಲಿ ಎರಡು ನಿಮಿತ್ತಗಳ ಸಮಾವೇಶವಾದಾಗ ವಿಕಲ್ಪವನ್ನೇ ಆಶ್ರಯಿಸಬೇಕೆಂಬುದು ಸಿದ್ಧಾಂತ. ಸರ್ವಸ್ವದಾನವನ್ನು ಮಾಡಬಹುದು. ಅಥವಾ ಪ್ರಯೋಗಾಂತರದಲ್ಲಿ ದ್ವಾದಶಶತರೂಪ್ಯಕಗಳನ್ನು ಕೊಡಬಹುದು. ಹೀಗೆ ನೈಮಿತ್ತಿಕದಲ್ಲಿ ವಿಕಲ್ಪವನ್ನೇ ಆಶ್ರಯಿಸಬೇಕು. ಸಮುಚ್ಚಯವನ್ನು ಆಶ್ರಯಿಸಬಾರ-ದೆಂದು ಜೈಮಿನ್ಯಾಚಾರ್ಯರು 'ತತ್ರ ವಿಪ್ರತಿಷೇಧಾತ್ ವಿಕಲ್ಪಃ ಸ್ಯಾತ್' ಎಂಬ ಸೂತ್ರದಲ್ಲಿ ಪ್ರತಿಪಾದನೆ ಮಾಡಿದ್ದಾರೆ.

'ಪ್ರತ್ಯಕ್ಷೋಪದೇಶಾಚ್ಚಮಸಿನಾಮವ್ಯಕ್ತಃ ಶೇಷೇ' ಎಂಬುದು ಮೂರನೆಯ ಅಧ್ಯಾಯದ ಐದನೇ ಪಾದದ ಹನ್ನೊಂದನೆಯ ಅಧಿಕರಣವಾಗಿದೆ. ತೃತೀಯಾಧಿಕರಣೇ ಎಂಬ ಮಾತಿಗೆ ತೃತೀಯಾಧ್ಯಾಯದ ಹನ್ನೊಂದನೆಯ ಅಧಿಕರಣದಲ್ಲಿ ಎಂದರ್ಥ. ಚಮಸಭಕ್ಷಣದ ಬಗ್ಗೆ ಸುಮಾರು ಐದಾರು ಅಧಿಕರಣಗಳಲ್ಲಿ ಜೈಮಿನ್ಯಾಚಾರ್ಯರು ವಿಚಾರ ಮಾಡುತ್ತಿದ್ದಾರೆ. ಚಮಸಭಕ್ಷಣಕ್ಕೆ ಸಮಾಖ್ಯಾ, ವಷಟ್ಕಾರ, ಹಾಗೂ ಹೋಮಾಭಿಷವ ಈ ಮೂರು ನಿಮಿತ್ತಗಳನ್ನು ಶ್ರುತಿಯಲ್ಲಿ ಹೇಳಲಾಗಿದೆ. ಇಲ್ಲಿ ನಿರ್ಣೀತಸಮಾನೋಕ್ತಿಃ ಸಮಾಖ್ಯಾ ಎಂಬುದನ್ನು ವಿವಕ್ಷಿಸಬಾರದು. ತರ್ಕತಾಂಡವದಲ್ಲಿ ಹೇಳಿದಂತೆ 'ಯೌಗಿಕೀಸಂಜ್ಞಾ ಸಮಾಖ್ಯಾ' ಎಂಬುದಾಗಿ ಮೀಮಾಂಸಕರು ಹೇಳುವ ಸಮಾಖ್ಯಾಲಕ್ಷಣವನ್ನು ವಿವಕ್ಷಿಸಬೇಕು. ಯೌಗಿಕವಾದ ಶಬ್ದವನ್ನೇ ಮೀಮಾಂಸಕರು ಸಮಾಖ್ಯಾ ಎನ್ನುತ್ತಾರೆ. ಚಮಸಭಕ್ಷಣವನ್ನು ವಿಧಾನಮಾಡುವ ಸಂದರ್ಭದಲ್ಲಿ ಆ

ಚಮಸಕ್ಕೆ ಯೌಗಿಕವಾದ ಹೆಸರನ್ನು ಹೇಳಿದ್ದಾರೆ. 'ಪ್ರೈತುಃ ಚಮಸಃ' ಎಂಬ ವಾಕ್ಯದಲ್ಲಿ 'ಹೋತುಃ ಚಮಸಃ' 'ಯಜಮಾನಸ್ಯ ಚಮಸಃ' 'ಉದ್ಗಾತೄಣಾಂ ಚಮಸಃ' ಇತ್ಯಾದಿಯಾಗಿ ಷಷ್ಠ್ಯಂತವಾಗಿ ಚಮಸಃ ಎಂಬುದನ್ನು ಸರ್ವತ್ರ ಅನುಗತವನ್ನಾಗಿ ಹೇಳಿದ್ದರಿಂದ ಇದು ಯೌಗಿಕಸಂಜ್ಞೆ ಎನಿಸುತ್ತದೆ. ಅಥವಾ ಸೋಮಗ್ರಹಕ್ಕೋಸ್ಕರ ಯಾವ ಪಾತ್ರೆಯನ್ನು ಉಪಯೋಗಿಸಲಾಗುತ್ತದೋ ಅದನ್ನೇ ಚಮಸ ಎನ್ನುತ್ತಾರೆ. ಈ ಶಬ್ದವು ರೂಢವಾದ ಶಬ್ದವಲ್ಲ. 'ಚಮ್ಯತೇ = ಭಕ್ಷ್ಯತೇ ಹೋತ್ರಾದಿಭಿಃ ಅಸ್ಮಿನ್ ಇತಿ ಚಮಸಃ' 'ಯಾವ ಪಾತ್ರೆಯಲ್ಲಿ ಇರುವ ಸೋಮರಸವನ್ನು ಹೋತ್ರಾದಿಗಳು ಭಕ್ಷಣ ಮಾಡುತ್ತಾರೋ ಆ ಪಾತ್ರೆಯನ್ನು ಚಮಸ' ಎಂದು ಕರೆಯುತ್ತಾರೆ. ಹೀಗೆ ಚಮಸ ಎಂಬ ಶಬ್ದವೇ ಯೌಗಿಕವಾಗಿದೆ. ಇಲ್ಲಿ ಕೇವಲ ಚಮಸ ಎಂದು ಹೇಳದೇ ಹೋತುಃ ಚಮಸ ಇತ್ಯಾದಿಯಾಗಿ ಹೇಳಿದ್ದಾರೆ. ಇಲ್ಲಿರುವ ಷಷ್ಠೀವಿಭಕ್ತಿಗೆ ಸ್ವಸ್ವಾಮಿಭಾವ-ಸಂಬಂಧವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಹೋಮಸಾಧನಗಳೆಲ್ಲವೂ ಕೂಡ ಯಜಮಾನನ ಅಧೀನ -ವಾಗಿವೆ ಹೊರತು ಹೋತೃ ಉದ್ಗಾತ್ರಾದಿಗಳ ಅಧೀನವಾಗಿರುವುದಿಲ್ಲ. ರೂಢವಾದ ಶಬ್ದವೆಂದು ಪರಿ-ಗಣಿಸಿದರೆ ಮಾತ್ರ ಈ ಸ್ವಸ್ವಾಮಿಭಾವಸಂಬಂಧವು ಕೂಡುವುದಿಲ್ಲ ಎಂಬ ಅನುಪಪತ್ತಿಯು ಪ್ರಾಪ್ತವಾಗು-ತ್ತದೆ. ಯೌಗಿಕವಾದ ಶಬ್ದವೆಂದು ಹೇಳಿದರೆ ಮಾತ್ರ ಷಷ್ಠೀವಿಭಕ್ತಿಯಿಂದ ಸ್ವಸ್ವಾಮಿಭಾವರೂಪವಾದ ಸಂಬಂಧವನ್ನು ತಿಳಿಯಲು ಸಾಧ್ಯವಾಗುತ್ತದೆ. ಯೌಗಿಕಸಂಜ್ಞೆಯಾದ್ದರಿಂದಲೇ ಹೋತೃ, ಪ್ರತಿಹರ್ತೃ, ಉದ್ಗಾತೃ ಮೊದಲಾದವರೆಲ್ಲರಿಗೂ ಚಮಸಭಕ್ಷಣವು ಸಿದ್ಧವಾಗುತ್ತದೆ. ಹೀಗೆ ಸಮಾಖ್ಯಾಬಲದಿಂದ ಚಮಸ -ಭಕ್ಷಣವನ್ನು ಪೂರ್ವಾಧಿಕರಣದಲ್ಲಿ ಸಾಧನೆ ಮಾಡಲಾಗಿದೆ.

ವಷಟ್ಕಾರವೂ ಕೂಡ ಚಮಸಭಕ್ಷಣಕ್ಕೆ ನಿಮಿತ್ತವಾಗಿದೆ. 'ಯಾರು ವಷಟ್ಕಾರವನ್ನು ಮಾಡುತ್ತಾರೋ ಮೊದಲು ಅವನೇ ಸೋಮಭಕ್ಷಣವನ್ನು ಮಾಡಬೇಕು' ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಹೋಮದ ಮಧ್ಯದಲ್ಲಿ ಯಾರು ವಷಟ್ ಎಂಬ ಶಬ್ದಪ್ರಯೋಗವನ್ನು ಮಾಡುತ್ತಾನೋ ಅವನೇ ವಷಟ್ಕಾರನಾಗಿದ್ದಾನೆ. ಇವನು ಸೋಮಭಕ್ಷಣವನ್ನು ಮಾಡಬೇಕೆಂದು ಪ್ರತ್ಯಕ್ಷಶ್ರುತಿಯೇ ಇದೆ. ಯಾರು ಹೋತೃವೋ ಅವನೇ ವಷಟ್ಕಾರನಾಗಿದ್ದಾನೆ. ಈ ಹೋತೃವಿಗೆ ಚಮಸಭಕ್ಷಣವು ಹಿಂದೆಯೇ ಸಿದ್ಧವಾಗಿದೆ. ಪುನಃ ವಷಟ್ಕಾರನಿಗೆ ಚಮಸಭಕ್ಷಣವನ್ನು ವಿಧಾನ ಮಾಡಿದ್ದರಿಂದ ಹೋತೃ ಎರಡು ಬಾರಿ ಚಮಸಭಕ್ಷಣವನ್ನು ಮಾಡಬೇಕೆಂದು ತಿಳಿಯುತ್ತದೆ. ಎರಡು ನಿಮಿತ್ತಗಳಿಂದ ಎರಡು ಸೋಮಭಕ್ಷಣಗಳು ಹೋತೃವಿಗೆ ಇದರಿಂದ ಸಿದ್ಧವಾಯಿತು.

ಹೋಮಾಭಿಷವವು ಭಕ್ಷಣಕ್ಕೆ ನಿಮಿತ್ತವಾಗಿದೆ. ಹೋಮ ಮತ್ತು ಅಭಿಷವಗಳು ನಿಮಿತ್ತವಾಗಿವೆ ಎಂಬುದು ಇದರ ಅರ್ಥ. ಅಭಿಷವ ಎಂದರೆ ಗ್ರಾವ(ಕಲ್ಲು)ಗಳಿಂದ ಸೋಮಲತೆಯನ್ನು ಕುಟ್ಟಿ ರಸವನ್ನು ತೆಗೆಯುತ್ತಾರೆ. ಇದನ್ನು ಯಜ್ಞದಲ್ಲಿ ಆಹುತಿಯನ್ನಾಗಿ ನೀಡುತ್ತಾರೆ. ಆಹವನೀಯಾಗ್ನಿಯಲ್ಲಿ ಸೋಮರಸವನ್ನು ಹೋಮಿಸಿ ಪಶ್ಚಿಮದಲ್ಲಿರುವ ಯಜ್ಞಮಂಟಪದಲ್ಲಿ ಋತ್ವಿಜರು ಕುಳಿತಿರುವ ಕಡೆ ಆ ಸೋಮರಸವನ್ನು ನೀಡಬೇಕು.





ಹವಿರ್ಧಾನ ಎಂಬ ಬಂಡಿಯಲ್ಲಿ ಇರುವ ಸೋಮಲತೆಯನ್ನು ಕಲ್ಲುಗಳಿಂದ ಕುಟ್ಟಿ ರಸವನ್ನು ತೆಗೆದು ಆಹವನೀಯ ಎಂಬ ಅಗ್ನಿಯಲ್ಲಿ ಹೋಮಮಾಡಿ, ಪಶ್ಚಿಮದಲ್ಲಿರುವ ಯಜ್ಞಮಂಟಪದಲ್ಲಿ ಕುಳಿತಿರುವ ಋತ್ವಿಜರಿಗೆ ಸೋಮರಸವನ್ನು ಕೊಡಬೇಕೆಂದು ಶ್ರುತಿಯು ಹೇಳುತ್ತಿದೆ. ಇಲ್ಲಿ 'ಗ್ರಾವಭಿಃ ಅಭಿಷುತ್ಯ' ಎಂದು ಹೇಳಿ, 'ಆಹವನೀಯೇ ಹುತ್ವಾ' ಎಂದು ಹೇಳಿ ಅನಂತರ 'ಭಕ್ಷಯಿತ್ವಾ' ಎಂಬುದಾಗಿ ಭಕ್ಷಣವನ್ನು ಶ್ರುತಿಯು ಹೇಳುತ್ತಿದೆ. ಇಲ್ಲಿ ಹೋಮ ಮತ್ತು ಅಭಿಷವಗಳು ಪ್ರತ್ಯೇಕವಾಗಿ ನಿಮಿತ್ತಗಳಾಗಿರುವುದಿಲ್ಲ. ಯಾರು ಅಭಿಷವವನ್ನು ಮಾಡಿ ಹೋಮವನ್ನೂ ಕೂಡ ಮಾಡುತ್ತಾರೋ ಅಂಥ ಅಧ್ವರ್ಯು ಮೊದಲಾದವರಿಗೆ ಮಾತ್ರ ಸೋಮಭಕ್ಷಣಕ್ಕೆ ಅಧಿಕಾರವಿರುತ್ತದೆ. ಉನ್ನೇತಾ ಎಂಬುವನು ಕೇವಲ ಅಭಿಷವ-ವನ್ನು ಮಾಡಲು ಮಾತ್ರ ಅಧಿಕಾರಿಯಾಗಿದ್ದಾನೆ. ಅವನಿಗೆ ಸೋಮಭಕ್ಷಣದಲ್ಲಿ ಅರ್ಹತೆ ಇರುವುದಿಲ್ಲ. ಹೀಗೆ ಸಮಾಖ್ಯಾ ವಷಟ್ಕಾರಗಳಂತೆ ಹೋಮಾಭಿಷವವೂ ಕೂಡ ಸೋಮಭಕ್ಷಣಕ್ಕೆ ನಿಮಿತ್ತವೆಂದು ಸಿದ್ಧವಾಯಿತು.

ತೃತೀಯಾಧ್ಯಾಯದ ಐದನೇ ಪಾದದ ಹನ್ನೊಂದನೆಯ ಅಧಿಕರಣದಲ್ಲಿ ಹೀಗೆ ವಿಚಾರ ಮಾಡುತ್ತಿದ್ದಾರೆ – ಮೂರು ನಿಮಿತ್ತಪ್ರಯುಕ್ತವಾಗಿ ಭಕ್ಷಣವನ್ನು ಮಾಡಬೇಕೋ ಅಥವಾ ಒಂದರಿಂದ ಮತ್ತೊಂದನ್ನು ಬಾಧಿಸಬೇಕೋ?. ಸೋಮರಸವನ್ನು ಸ್ವಲ್ಪ ಮಾತ್ರ ಹೋಮಿಸಬೇಕು ಎಂದು ಹೇಳಿದ್ದರಿಂದ ಸೋಮರಸವು ಕೊನೆಯಲ್ಲಿ ಉಳಿದಿದೆ ಎಂದು ಅರ್ಥಾತ್ ಸಿದ್ಧವಾಗುತ್ತದೆ. ಉಳಿದಿರುವ ಈ ಸೋಮರಸದ ಪ್ರತಿಪತ್ತಿ-ಗೋಸ್ಕರವೇ ಭಕ್ಷಣವನ್ನು ಹೇಳಲಾಗಿದೆ. 'ಶೇಷಸ್ಯ ಪ್ರತಿಪತ್ತಿಃ' ಎಂಬುದನ್ನು ಕೂಡಿಸಲು ಯಾರಾದರೂ ಒಬ್ಬರು ಭಕ್ಷಣ ಮಾಡಿದರೆ ಸಾಕು; ಎಲ್ಲರೂ ಕೂಡ ಭಕ್ಷಣ ಮಾಡುವ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಸಮಾಖ್ಯಾಪ್ರಯುಕ್ತವಾದ ಭಕ್ಷಣವು ನಿರವಕಾಶವಾದ್ದರಿಂದ ಪ್ರಬಲವಾಗಿದೆ. 'ಹೋತುಶ್ಚಮಸಃ' ಇತ್ಯಾದಿಯಾಗಿ ಷಷ್ಠೀವಿಭಕ್ತಿಯು ಉಪಪನ್ನವಾಗಬೇಕೆಂದರೆ ಹೋತ್ರಾದಿಗಳು ಭಕ್ಷಣ ಮಾಡಲೇಬೇಕು. ಸ್ವಸ್ವಾಮಿಭಾವಸಂಬಂಧವನ್ನಂತೂ ಷಷ್ಠೀವಿಭಕ್ತಿಗೆ ಹೇಳಲು ಸಾಧ್ಯವೇ ಇಲ್ಲ. ಹೋತ್ರಾದಿಗಳಿಂದ ಭಕ್ಷಣ ಮಾಡಲ್ಪಡುವಿಕೆ ಎಂಬರ್ಥವನ್ನೇ ಷಷ್ಠೀವಿಭಕ್ತಿಗೆ ಹೇಳಬೇಕು. ಭಕ್ಷ್ಯಭಕ್ಷಭಾವ ಎಂಬ ಸಂಬಂಧವನ್ನೇ ವಿವಕ್ಷಿಸಬೇಕು. ಹೀಗೆ ನಿರವಕಾಶಸಮಾಖ್ಯಾಬಲದಿಂದ ಯಾವ ಭಕ್ಷಣವು ಪ್ರಾಪ್ತವಾಗಿದೆಯೋ ಅದರಿಂದ ವಷಟ್ಕಾರನಿಮಿತ್ತಕವಾದ ಭಕ್ಷಣ ಹಾಗೂ ಹೋಮಾಭಿಷವನಿಮಿತ್ತಕವಾದ ಭಕ್ಷಣವು ಸಾವಕಾಶವೆಂದು ಸಿದ್ಧವಾಗುತ್ತದೆ. ನಿರವಕಾಶವಾದ ಸಮಾಖ್ಯಾನಿಮಿತ್ತಕವಾದ ಭಕ್ಷಣದಿಂದ ಸಾವಕಾಶವಾದ ಉಳಿದೆರಡು ಭಕ್ಷಣಗಳನ್ನು ಬಾಧಿಸಬೇಕು. ನಿಮಿತ್ತದ್ವಯ ಪ್ರಾಪ್ತವಾದ ಭಕ್ಷಣವನ್ನು ಬಾಧಿಸಿ ಏಕ ನಿಮಿತ್ತಕವಾದ ಭಕ್ಷಣವನ್ನೇ ಸಮರ್ಥಿಸಬೇಕು. ಇಷ್ಟು ಪೂರ್ವಪಕ್ಷ.

ಸಿದ್ಧಾಂತ – ಸಮಾಖ್ಯಾನಿಮಿತ್ತಕವಾದ ಭಕ್ಷಣವು ನಿರವಕಾಶವಾದಂತೆ ವಷಟ್ಕಾರ ನಿಮಿತ್ತಕವಾದ ಮತ್ತು







ಹೋಮಾಭಿಷವನಿಮಿತ್ತಕವಾದ ಭಕ್ಷಣಗಳು ಪ್ರತ್ಯಕ್ಷಶ್ರುತಿಯಿಂದ ಸಿದ್ಧವಾಗಿವೆ. ನಿರವಕಾಶವಾದ ಸಮಾಖ್ಯಾ-ಕ್ಕಿಂತ ಪ್ರತ್ಯಕ್ಷವಚನವು ಅತ್ಯಂತ ಪ್ರಬಲವಾಗಿದೆ. ಸಮಾಖ್ಯೆಯು ನಿರವಕಾಶವಾದ್ದರಿಂದ ಪ್ರಬಲವಾಗಿದೆ. ಶ್ರುತಿಯು ತಾತ್ಪರ್ಯಲಿಂಗಗಳಲ್ಲಿ ಶ್ರೇಷ್ಠವಾದ್ದರಿಂದ ಪ್ರಬಲವಾಗಿದೆ. ಹೀಗೆ ಎರಡೂ ಕೂಡ ಪ್ರಬಲವಾಗಿ-ರುವುದರಿಂದ ಯಾವುದೊಂದನ್ನೂ ಕೂಡ ಬಾಧಿಸಲು ಸಾಧ್ಯವಿಲ್ಲ. ಆದ್ದರಿಂದ ಸಮುಚ್ಚಯಪಕ್ಷವನ್ನೇ ಆಶ್ರಯಿಸಬೇಕು. ಸಮಾಖ್ಯಾನಿಮಿತ್ತಕವಾದ ವಷಟ್ಕಾರನಿಮಿತ್ತಕವಾದ ಮತ್ತು ಹೋಮಾಭಿಷವನಿಮಿತ್ತಕ-ವಾದ ಭಕ್ಷಣವನ್ನು ಆಚರಿಸಬೇಕು. ಆದ್ದರಿಂದ ಸಮಾಖ್ಯಾನಿಮಿತ್ತಕವಾದ ಭಕ್ಷಣವನ್ನು ಅನೇಕರು ಮಾಡು-ತ್ತಾರೆ. ವಷಟ್ಕಾರ ನಿಮಿತ್ತಕವಾದ ಭಕ್ಷಣವನ್ನು ಪುನಃ ಹೋತೃವು ಮಾಡುತ್ತಾನೆ. ಹೋಮಾಭಿಷವ ನಿಮಿತ್ತಕ-ವಾದ ಭಕ್ಷಣವನ್ನು ಅಧ್ವರ್ಯುವು ಮಾಡುತ್ತಾನೆ.

ಹೀಗೆ ಜೈಮಿನ್ಯಾಚಾರ್ಯರು ಅನೇಕ ನಿಮಿತ್ತಗಳು ಏಕತ್ರ ಸಮಾವೇಶವಾದಾಗ ನೈಮಿತ್ತಿಕದಲ್ಲಿ ವಿಕಲ್ಪವನ್ನು ಆಶ್ರಯಿಸಬೇಕೆಂದು ಪೂರ್ವಪಕ್ಷ ಮಾಡಿಕೊಂಡು ನೈಮಿತ್ತಿಕದಲ್ಲಿ ಸಮುಚ್ಚಯಪಕ್ಷವನ್ನೇ ಸಿದ್ಧಾಂತ ಮಾಡಿದ್ದಾರೆ. ಪ್ರಕೃತ ಪರಮಾತ್ಮನಲ್ಲಿ ಗುರುತ್ವವೂ ಇದೆ ದೇವತಾತ್ವವೂ ಇದೆ. ಈ ಎರಡು ನಿಮಿತ್ತಗಳೂ ಒಬ್ಬನಲ್ಲಿ ಸೇರಿರುವುದರಿಂದ ಪ್ರಣಾಮಮಾಡಿದ ಪರಮಾತ್ಮನಿಗೆ ಪುನಃ ಪ್ರಣಾಮಮಾಡಿದ್ದು ಯುಕ್ತವೇ ಆಗಿದೆ. ಅಪಚ್ಛೇದನ್ಯಾಯದಲ್ಲಿ ಜೈಮಿನ್ಯಾಚಾರ್ಯರು ವಿಕಲ್ಪಪಕ್ಷವನ್ನು ಆಶ್ರಯಿಸಿದ್ದಾರೆ. ಸೋಮಭಕ್ಷಣ-ಪ್ರಕರಣದಲ್ಲಿ ಸಮುಚ್ಚಯಪಕ್ಷವನ್ನು ಆಶ್ರಯಿಸಿದ್ದಾರೆ. ಇದರಿಂದ ನಿಮಿತ್ತದ್ವಯಸಮಾವೇಶವಿದ್ದಾಗ ನೈಮಿತ್ತಿಕಕ್ಕೆ ಲೋಪವನ್ನು ಮಾಡಬೇಕೆಂಬುದರಲ್ಲಿ ನಿಯಮವಿಲ್ಲ ಎಂಬುದು ಸಿದ್ಧವಾಯಿತು. ಲೋಪ-ನಿಯಮ ಇಲ್ಲದ ಕಾರಣ ದೇವತಾತ್ವನಿಮಿತ್ತಕವಾದ ನಮಸ್ಕಾರ ಹಾಗೂ ಗುರುತ್ವನಿಮಿತ್ತಕವಾದ ನಮಸ್ಕಾರ ಮಾಡುವುದರಲ್ಲಿ ತಪ್ಪಿಲ್ಲ ಎಂಬುದು ಸಿದ್ಧವಾಯಿತು.

'ಯಾವಜ್ಜೀವಂ ಅಗ್ನಿಹೋತ್ರಂ ಜುಹೋತಿ' ಎಂಬುದಾಗಿ ದರ್ಶಪೂರ್ಣಮಾಸಯಾಗವನ್ನು ಆಚರಿಸಲು ಜೀವನವೇ ನಿಮಿತ್ತವಾಗಿದೆ. ಅಮಾವಾಸ್ಯೆ ಹಾಗೂ ಹುಣ್ಣಿಮೆ ತಿಥಿಗಳಲ್ಲಿ ಜೀವನ ಎಂಬ ನಿಮಿತ್ತವಿದ್ದಾಗ ದರ್ಶಪೂರ್ಣಮಾಸ ಯಾಗಗಳನ್ನು ಆಚರಣೆ ಮಾಡಲೇಬೇಕು. ಈ ಜೀವನ ಎಂಬ ನಿಮಿತ್ತದಲ್ಲಿ ಭೇದ-ವಿರುವುದಿಲ್ಲ. ಕೇವಲ ಆವೃತ್ತಿ ಇರುತ್ತದೆ. ಈ ಆವೃತ್ತಿಮಾತ್ರದಿಂದಲೇ ದರ್ಶಪೂರ್ಣಮಾಸ ಯಾಗಗಳಲ್ಲೂ ಕೂಡ ಆವೃತ್ತಿಯು ಇರುತ್ತದೆಂದು ಜೈಮಿನ್ಯಾಚಾರ್ಯರು ಸಮರ್ಥನೆ ಮಾಡಿದ್ದಾರೆ. ಹೀಗೆ ನಿಮಿತ್ತವು ಒಂದೇ ಆಗಿದ್ದರೂ ಕೂಡ ನಿಮಿತ್ತದ ಆವೃತ್ತಿಮಾತ್ರದಿಂದ ನೈಮಿತ್ತಿಕದ ಆವೃತ್ತಿಯನ್ನು ಹೇಳಿರುವುದರಿಂದ ಭಿನ್ನವಾದ ನಿಮಿತ್ತದ್ವಯಗಳು ಇರುವಾಗ ನೈಮಿತ್ತಿಕದ ಆವೃತ್ತಿಯು ಕೈಮುತ್ಯನ್ಯಾಯದಿಂದಲೇ ಸಿದ್ಧವಾಗು-ತ್ತದೆ. ಇದರಂತೆ ಪ್ರಕೃತದಲ್ಲಿ ದೇವತಾತ್ವ ಹಾಗೂ ಗುರುತ್ವ ಎಂಬ ಎರಡು ನಿಮಿತ್ತಗಳಿರುವುದರಿಂದ ನೈಮಿತ್ತಿಕಭೇದವು ಕೈಮುತ್ಯನ್ಯಾಯದಿಂದಲೇ ಸಿದ್ಧವಾಗುತ್ತದೆ.



## ರಸಘಟ್ಟ
## ಈ ಉತ್ತರ ಹಿಂದೆ ಹೇಳಿಲ್ಲ

ಕಾಶೀ– ಯದ್ಯಪಿ ಗುರುತ್ವೇನ ಅತ್ರ ಪ್ರಣಾಮಾಚರಣಾತ್ ಇತ್ಯುಕ್ತಮ್ । ತಥಾಽಪಿ ತತ್ರ ವಿಶಿಷ್ಟತ್ವಾದಿನಾ ದೇವತಾಪ್ರಣಾಮಸ್ಯ ಕೃತತ್ವಾತ್ ನಿಮಿತ್ತಾಂತರಾಭಾವಾತ್ ನ ಪುನಃ ಪ್ರಣಾಮೋ ಯುಕ್ತಃ ಇತ್ಯಾಶಂಕೈವ ನಿರಾಕೃತಾ । ಇಹ ತು ವಿಶಿಷ್ಟಾಧಿಕೃತೇಷ್ಟತ್ವೈಃ ಸಹ ಗುರುತ್ವಸ್ಯಾಪಿ ಏಕತ್ರ ಸಮಾವೇಶೇ ವಿಶಿಷ್ಟತ್ವಾದಿನಿಮಿತ್ತಕಪ್ರಣಾಮತ್ರಯಮ್ ಅಕೃತ್ವಾ ಗುರುತ್ವನಿಮಿತ್ತಕಪ್ರಣಾಮಸ್ಯೈವ ಪೃಥಕ್ಕರಣೇ ಕರಣಾಭಾವಃ । ಉಕ್ತರೀತ್ಯಾ ಗುರುತ್ವಾನುಸಂಧಾನಸ್ಯಾವಶ್ಯಕತ್ವೇಽಪಿ ಪೂರ್ವಶ್ಲೋಕ ಏವ 'ಗುರುಮ್' ಇತಿ ವಿಶೇಷಣದಾನಂ ಯುಕ್ತಮ್ ಇತ್ಯಾಶಂಕಾ ನಿರಾಕ್ರಿಯತ ಇತ್ಯದೋಷಃ ।

ಗುರುತ್ವವೆಂಬ ನಿಮಿತ್ತದಿಂದ ಪ್ರತ್ಯೇಕವಾಗಿ ನಮಸ್ಕಾರ ಮಾಡಲಾಗುತ್ತಿದೆ ಎಂದು ಈ ಹಿಂದೆಯೇ ಹೇಳಿದ್ದಾಗಿದೆ. ಆದರೂ ಕೂಡ ಹಿಂದೆ ವಿಶಿಷ್ಟತ್ವಾದಿ ನಿಮಿತ್ತದಿಂದ ದೇವತಾಪ್ರಣಾಮವನ್ನು ಮಾಡಲಾಗಿದೆ. ಅಲ್ಲಿ ಬೇರೆ ನಿಮಿತ್ತವನ್ನು ಆಶ್ರಯಿಸಿಲ್ಲ. ಬೇರೆ ನಿಮಿತ್ತವಿಲ್ಲದಿದ್ದಾಗ ಪುನಃ ಇಲ್ಲಿ ನಮಸ್ಕಾರ ಮಾಡುವುದು ಯುಕ್ತವಲ್ಲ ಎಂಬ ಆಶಂಕೆಯನ್ನೇ ಅಲ್ಲಿ ನಿರಾಕರಣೆ ಮಾಡಲಾಗಿದೆ. ಪ್ರಕೃತ ವಿಶಿಷ್ಟತ್ವ ಅಧಿಕೃತತ್ವ ಇಷ್ಟತ್ವ ಎಂಬ ಮೂರು ನಿಮಿತ್ತಗಳ ಜೊತೆ ಗುರುತ್ವವೆಂಬ ನಿಮಿತ್ತವೂ ಕೂಡ ಸಮಾವೇಶಗೊಳ್ಳುತ್ತದೆ. ಹೇಗೆ ವಿಶಿಷ್ಟತ್ವಾದಿ ನಿಮಿತ್ತಗಳು ಪ್ರತ್ಯೇಕವಾಗಿದ್ದರೂ ಮೂರು ಪ್ರಣಾಮಗಳನ್ನು ಪ್ರತ್ಯೇಕವಾಗಿ ಮಾಡಿರುವುದಿಲ್ಲವೋ ಅದರಂತೆ ಗುರುತ್ವನಿಮಿತ್ತಕವಾಗಿಯೂ ಪ್ರತ್ಯೇಕವಾಗಿ ಪ್ರಣಾಮ ಮಾಡುವ ಅವಶ್ಯಕತೆ ಇಲ್ಲ. ಈ ಹಿಂದೆ ಹೇಳಿದಂತೆ ಗುರುತ್ವಾನುಸಂಧಾನವು ಗ್ರಂಥಾರಂಭದಲ್ಲಿ ಅತ್ಯಾವಶ್ಯಕ ಎಂದು ಒಪ್ಪಿದರೂ ಕೂಡ ಪೂರ್ವಶ್ಲೋಕದಲ್ಲಿ 'ಗುರುಂ' ಎಂಬ ವಿಶೇಷಣವನ್ನು ನೀಡಿದ್ದರೆ ಸಾಕಾಗುತ್ತಿತ್ತು. ಈ ಆಶಂಕೆಯನ್ನು ಪ್ರಕೃತ ನಿರಾಕರಣೆ ಮಾಡುತ್ತಿದ್ದಾರೆ. ಹಾಗಾಗಿ ಹಿಂದೆ ಹೇಳಿದ್ದನ್ನೇ ಪುನಃ ಹೇಳಿದಂತಾಗಲಿಲ್ಲ.

## ಪ್ರತ್ಯೇಕನಮನ ತಪ್ಪಲ್ಲ; ವಿಕಲ್ಪದ ಮೂಲಕ ಸಮರ್ಥನೆ

ಕಾಶೀ– ಅಯಂ ಭಾವಃ । ಕಿಂ ಗುರುದೈವತ್ಯೈಕ್ಯೇ ಪೃಥಕ್‌ಪ್ರಣಾಮಸ್ಯ ನಿಷಿದ್ಧತ್ವಾತ್ ಅನುಪಪತ್ತಿರಾಶಂಕತೇ । ಕಿಂವಾ ವಿರೋಧಾತ್ । ಉತ ಏಕಸ್ಯೈವ ಉಭಯಪ್ರಣಾಮತ್ವೇನ ತತ ಏವೋಭಯಫಲಸಿದ್ಧೇರ್ವೈಯರ್ಥ್ಯಾತ್ । ನಾದ್ಯಃ । ನಿಷೇಧಕಪ್ರಮಾಣಾಭಾವಾತ್ । ನ ದ್ವಿತೀಯಃ । ಅವಿರೋಧಾತ್ । ನಾಂತ್ಯಃ । ವಿಶೇಷಾನುಗ್ರಹಾರ್ಥತ್ವಾತ್ । ಜ್ಯೋತಿಷ್ಟೋಮೇ ಪ್ರತಿಹರ್ತ್ರು-





ದ್ಗಾತ್ರೋಃ ಯುಗಪತ್ ಅಪಚ್ಛೇದೇ ತನ್ನಿಮಿತ್ತಯೋಃ ಸರ್ವಸ್ವದಾನದಾಕ್ಷಿಣ್ಯಯೋಃ ಏಕಪ್ರಯೋಗೇ ವಿರೋಧೇನ ವಿಕಲ್ಪಾಶ್ರಯಣಾತ್ ತತ್ರ ನೈಮಿತ್ತಿಕವಿಲೋಪ ಏವಾಸ್ತಿ ಅತೋ ನಿಯಮಗ್ರಹಣಮ್ । ಕ್ವಚಿದ್ ವಿರೋಧಿನಾ ನೈಮಿತ್ತಕವಿಲೋಪೋಽಪಿ ಸತ್ರಯಾಗಾದೌ ಋತ್ವಿಕ್ತ್ವಯಜಮಾನತ್ವಾದ್ಯುಭಯನಿಮಿತ್ತಿಕಕರ್ಮಾನುಷ್ಠಾನದರ್ಶನೇನ ತದ್ವಿಲೋಪನಿಯಮಾಸಿದ್ಧೇರಿತಿ ಭಾವಃ।

ಗುರು ಹಾಗೂ ದೇವತೆಗಳಲ್ಲಿ ಐಕ್ಯವಿದ್ದರೆ ಪ್ರತ್ಯೇಕಪ್ರಣಾಮ ಮಾಡುವುದು ನಿಷಿದ್ಧವೆಂದೋ ಅಥವಾ ವಿರೋಧವೆಂದೋ ಅಥವಾ ಒಬ್ಬನಿಗೇ ನಮಸ್ಕಾರ ಮಾಡುವುದು ಇಬ್ಬರಿಗೂ ಸಂಬಂಧಪಡುತ್ತದೆಂಬ ಅಭಿಪ್ರಾಯದಿಂದಲೋ? ಮೊದಲನೆಯ ಪಕ್ಷ ತಪ್ಪು. ಗುರು ಹಾಗೂ ದೇವತೆಗಳು ಒಬ್ಬನೇ ಆಗಿದ್ದಾಗ ಪ್ರತ್ಯೇಕ ನಮಸ್ಕಾರ ಮಾಡಬಾರದೆನ್ನಲು ಯಾವುದೇ ನಿಷೇಧಪ್ರಮಾಣ ಇರುವುದಿಲ್ಲ. ಎರಡನೆಯ ಪಕ್ಷ ಕೂಡ ತಪ್ಪು. ಏಕೆಂದರೆ ದೇವತೆಗೆ ನಮಸ್ಕಾರ ಮಾಡಿದ ಮೇಲೆ ಗುರುಗಳಿಗೆ ನಮಸ್ಕಾರ ಮಾಡುವುದು ವಿರುದ್ಧವಾಗುವುದಿಲ್ಲ. ಮೂರನೆಯ ಪಕ್ಷವೂ ಕೂಡ ತಪ್ಪು. ಏಕೆಂದರೆ ವಿಶೇಷಾನುಗ್ರಹವೆಂಬ ಫಲವಿರುವುದರಿಂದ ಪ್ರತ್ಯೇಕವಾಗಿ ನಮಸ್ಕಾರ ಮಾಡುವುದು ಯುಕ್ತವೇ ಆಗುತ್ತದೆ.

ಜ್ಯೋತಿಷ್ಟೋಮಯಾಗದಲ್ಲಿ ಪ್ರತಿಹರ್ತೃ ಉದ್ಗಾತೃ ಇಬ್ಬರಿಗೂ ಅಪಚ್ಛೇದವಾದರೆ (ಕಚ್ಚೆ ಬಿಚ್ಚಿದರೆ) ತನ್ನಿಮಿತ್ತಕವಾಗಿ 'ಸರ್ವಸ್ವದಾನ ಮಾಡಬೇಕು' 'ದಕ್ಷಿಣೆ ಕೊಡಬಾರದು' ಎಂಬೆರಡು ಕ್ರಿಯೆಗಳು ಒಂದೇ ಪ್ರಯೋಗದಲ್ಲಿ ವಿರುದ್ಧವಾಗುತ್ತದೆ. ಅಂತಹ ಸಂದರ್ಭದಲ್ಲಿ ವಿಕಲ್ಪವನ್ನು ಆಶ್ರಯಿಸಿ, ನೈಮಿತ್ತಿಕವಿಲೋಪವನ್ನು ಮಾಡುವುದು ಕಂಡಿದೆಯಲ್ಲವೇ ಎಂಬ ಪ್ರಶ್ನೆಗೆ ನಿಯಮಪದವನ್ನು ಉಲ್ಲೇಖ ಮಾಡಿದ್ದಾರೆ. ಕೆಲವೊಮ್ಮೆ ವಿರೋಧವಿದ್ದಾಗ ನೈಮಿತ್ತಿಕವನ್ನು ವಿಲೋಪ ಮಾಡುವ ಪ್ರಸಂಗ ಬರುವುದು. ಆದರೆ ಸತ್ರಯಾಗಾದಿಗಳಲ್ಲಿ ಋತ್ವಿಕ್ತ್ವ ಹಾಗೂ ಯಜಮಾನತ್ವವೆಂಬ ಉಭಯನಿಮಿತ್ತಕವಾಗಿ ಕರ್ಮಾನುಷ್ಠಾನಮಾಡುವುದು ಸಿದ್ಧವಾಗಿರುವುದರಿಂದ ನೈಮಿತ್ತಿಕಲೋಪವನ್ನು ಮಾಡಲೇಬೇಕೆಂಬ ನಿಯಮವು ಅಸಿದ್ಧವಾಗುತ್ತದೆ.

## ಸುಧಾಪರಿಮಳಸಾರ

ಶ್ರೀಮಧ್ವಾಚಾರ್ಯರು ನಾರಾಯಣದೇವರಿಂದ ನೇರವಾಗಿ ಎಲ್ಲಾ ಶಾಸ್ತ್ರಗಳನ್ನೂ ಉಪದೇಶ ಪಡೆದುಕೊಂಡಿದ್ದಾರೆ. ಈ ವಿಷಯವನ್ನು –





ಇತಿಹಾಸಸುಂದರಪುರಾಣಸೂತ್ರಸತ್ಕ್ರಿಯಪಂಚರಾತ್ರನಿಜಭಾವಸಂಯುತಮ್ ।
ಅಶ್ವಗೋದನಂತಹೃದನಂತತೋಽಚಿರಾತ್ ಪರಮಾರ್ಥಮಪ್ಯಗಣತಾಗಮಾವಲೇಃ' –

ಎಂಬ ಮಧ್ವವಿಜಯಶ್ಲೋಕವು ಸಮರ್ಥನೆ ಮಾಡುತ್ತಿದೆ. ಆದ್ದರಿಂದ ಜಗತ್ತಿಗೆ ಹೇಗೆ ಗುರು-ಪರಂಪರೆಯ ಮೂಲಕ ಭಗವಂತನು ಗುರುವಾಗಿದ್ದಾನೋ ಅದರಂತೆ ನನಗೆ ಗುರುವಾಗಿಲ್ಲ; ಆದರೆ ಸಾಕ್ಷಾತ್ತಾಗಿಯೇ ಗುರುವಾಗಿದ್ದಾನೆ ಎಂಬ ವಿಷಯವನ್ನು 'ವಿಶೇಷತಃ' ಎಂಬ ಪದ-ಪ್ರಯೋಗವನ್ನು ಮಾಡುವುದರ ಮೂಲಕ ತಿಳಿಸುತ್ತಿದ್ದಾರೆ. ಅನುವ್ಯಾಖ್ಯಾನಶ್ಲೋಕದಲ್ಲಿ 'ತಮೇವ' ಎಂದು ಹೇಳದಿದ್ದರೆ ದೇವತೆಯೇ ಬೇರೆ ಗುರುವೇ ಬೇರೆ ಎಂಬ ಸಂಶಯ ಬರು-ತ್ತಿತ್ತು. ಆದ್ದರಿಂದ ಯಾರು ದೇವತೆಯೋ ಅವನೇ ಎನಗೆ ಗುರುವಾಗಿದ್ದಾನೆಂಬುದನ್ನು 'ತಮೇವ' ಎಂಬುದಾಗಿ ಆಚಾರ್ಯರು ತಿಳಿಸಿದ್ದಾರೆ. ಲೋಕದಲ್ಲಿ ಮಗನಿಗೆ ತಂದೆಯೇ ಗುರುವಾಗಿದ್ದಾಗ ಎರಡು ನಿಮಿತ್ತದಿಂದ ಮಗನು ತಂದೆಗೆ ನಮಸ್ಕರಿಸುವುದು ಕಾಣಿಸುತ್ತಿಲ್ಲ. ಅದರಂತೆ ಮಧ್ವಾಚಾರ್ಯರೂ ಕೂಡ ಒಂದು ಬಾರಿ ನಮಸ್ಕಾರ ಮಾಡಿದರೆ ಸಾಕು; ಎರಡು ಬಾರಿ ನಮಸ್ಕಾರ ಏಕೆ ಮಾಡಬೇಕು? ಎಂಬ ಪ್ರಶ್ನೆ ಬರುತ್ತದೆ. ಲೋಕದಲ್ಲಿ ಮಗನು ಎರಡು ಬಾರಿ ನಮಸ್ಕಾರ ಮಾಡದೇ ಇರಬಹುದು; ಆದರೆ ಎಲ್ಲಾ ಕಡೆ ಎರಡು ನಿಮಿತ್ತಗಳು ಒಟ್ಟಿಗೇ ಸೇರಿದಾಗ ಆ ನಿಮಿತ್ತಗಳ ಎರಡು ಕಾರ್ಯಗಳನ್ನು ಬಿಡುವ ಕ್ರಮ ಕಂಡಿಲ್ಲ. ಆದ್ದರಿಂದ ಪ್ರಕೃತ ಗುರುತ್ವ, ದೇವತಾತ್ವವೆಂಬ ಎರಡು ನಿಮಿತ್ತಗಳ ಸಮಾವೇಶವಿರುವುದರಿಂದ ಅನುಗ್ರಹಾತಿ-ಶಯಕ್ಕಾಗಿ ಆಚಾರ್ಯರು ಎರಡು ಬಾರಿ ನಮಸ್ಕಾರವನ್ನು ಮಾಡಿರುತ್ತಾರೆ.

## ಪರಿಮಳದ ವೈಶಿಷ್ಟ್ಯ

* ಮಧ್ವಾಚಾರ್ಯರಿಗೆ ನಾರಾಯಣನು ಸಾಕ್ಷಾತ್ ಗುರುವಾಗಿದ್ದಾನೆಂಬುದನ್ನು ತಿಳಿಸಲು –
ಇತಿಹಾಸಸುಂದರಪುರಾಣಸೂತ್ರಸತ್ಕ್ರಿಯಪಂಚರಾತ್ರನಿಜಭಾವಸಂಯುತಮ್ ।
ಅಶ್ವಗೋದನಂತಹೃದನಂತತೋಽಚಿರಾತ್ ಪರಮಾರ್ಥಮಪ್ಯಗಣತಾಗಮಾವಲೇಃ'
ಮಧ್ವವಿಜಯಶ್ಲೋಕದ ಉದಾಹರಣೆ ಮಾಡಿದ್ದಾರೆ.

* ಲೋಕದಲ್ಲಿ ತಂದೆಯೇ ಗುರುವಾಗಿದ್ದಾಗ ಎರಡು ನಮಸ್ಕಾರಗಳು ಕಾಣಿಸುತ್ತಿಲ್ಲ. ಅದ-ರಂತೆ ವಿವಕ್ಷಿಸಬಹುದಲ್ಲವೇ? ಎಂಬ ಅನುಭವಾರೂಢವಾದ ಪ್ರಶ್ನೆಯನ್ನು ಮಾಡಿ ಉತ್ತರಿಸಿರು-ತ್ತಾರೆ.





* ಗುರುತ್ವನಿಮಿತ್ತವಾಗಿ ಪ್ರತ್ಯೇಕವಾಗಿ ನಮಸ್ಕರಿಸುವುದಾದರೆ ಪಿತೃತ್ವ, ಸ್ವಾಮಿತ್ವಾದಿಗಳಿಗೂ ಪ್ರತ್ಯೇಕ ನಮಸ್ಕಾರ ಮಾಡಲಿ? ಎಂಬುದಾಗಿ ಆಶಂಕೆಯನ್ನು ತೋರಿಸಿದ್ದಾರೆ.

* ಎರಡು ನಿಮಿತ್ತಗಳೂ ಒಂದೇ ಪದಾರ್ಥದಲ್ಲಿದ್ದಾಗ ನೈಮಿತ್ತಿಕಗಳಲ್ಲಿ ಲೋಪ ಮಾಡಬಾರದೆಂಬ ನಿಯಮಕ್ಕೆ ಪೂರ್ವಮೀಮಾಂಸೆಯ ದೃಷ್ಟಾಂತ, ಲೌಕಿಕದೃಷ್ಟಾಂತ, ಹಾಗೂ ಶಾಸ್ತ್ರೀಯದೃಷ್ಟಾಂತಗಳನ್ನು ನೀಡಿದ್ದು ಅಪೂರ್ವವಾಗಿದೆ.

## 'ಜಗದ್ಗುರೂಣಾಮ್' ಎನ್ನಲು ಕಾರಣ

**ಶ್ರೀಮನ್ನ್ಯಾಯಸುಧಾ– ಶಿಷ್ಯಶಿಕ್ಷಾಯೈ ಚ ಏತದ್ ಗ್ರಂಥೇ ನಿವೇಶನಮ್ । ಶಿಷ್ಯಾಣಾಂ ಚ ಅಸ್ತಿ ಗುರುದೇವತಾಭೇದಃ । ತದಪೇಕ್ಷಯೈವ ಜಗದ್ಗುರೂಣಾಮ್ ಇತ್ಯುಕ್ತಮ್ । ಅನ್ಯಥಾ 'ವಿಶೇಷತೋ ಮೇ' ಇತ್ಯುಕ್ತಮಯುಕ್ತಂ ಸ್ಯಾತ್ ॥**

ಶಿಷ್ಯರಿಗೆ ಶಿಕ್ಷಣ ನೀಡುವುದಕ್ಕಾಗಿ ತಾವು ಮಾಡಿದ ಮಂಗಳಾಚರಣೆಯನ್ನು ಗ್ರಂಥದಲ್ಲಿ ನಿವೇಶ ಮಾಡಿದ್ದಾರೆ. ಶಿಷ್ಯರಿಗೆ ಗುರುವೇ ಬೇರೆ ದೇವತೆಯೇ ಬೇರೆಯಾಗಿರುತ್ತಾರೆ. ಇದನ್ನು ತಿಳಿಸುವ ಉದ್ದೇಶದಿಂದ 'ಜಗದ್ಗುರೂಣಾಂ' ಎಂದು ಹೇಳಿದ್ದಾರೆ. ಇಲ್ಲದಿದ್ದರೆ 'ವಿಶೇಷತಃ ಮೇ' ಎಂದು ಹೇಳಿದ್ದು ಅಯುಕ್ತವಾಗುತ್ತಿತ್ತು.

## ಅಂತರಂಗದ ಸಾಧನೆ ಪ್ರಕಟಪಡಿಸಬೇಕೇ?

ಪರಿಮಳ– ತರ್ಹಿ ಮನಸ್ಯೆವ ಕಾರ್ಯಂ, ಕಿಂ ಗ್ರಂಥೇ ನಿಬಂಧನೇನ? ಇತ್ಯತ, ಆಹ – ಶಿಷ್ಯೇತಿ ॥ ಗ್ರಂಥೇ ತನ್ನಿವೇಶನಂ ಚ ಶಿಷ್ಯಶಿಕ್ಷಾರ್ಥಮ್ । 'ಅಸ್ಮಾಭಿರಪಿ ದೇವತಾನತಿರ್ಗುರುನತಿಶ್ಚ ಕಾರ್ಯಾ' ಇತ್ಯೇವಂ ಶಿಷ್ಯಾಣಾಂ ಬುದ್ಧ್ಯುತ್ಪಾದನದ್ವಾರಾ ತದನುಷ್ಠಾಯ । 'ಯದ್ಯದಾಚರತಿ ಶ್ರೇಷ್ಠಃ' ಇತ್ಯಾದೇಃ ।

ಹಾಗಾದರೆ ಮಂಗಳವನ್ನು ಆಚರಣೆ ಮಾಡಿರಿ; ಆದರೆ ಮನಸ್ಸಿನಲ್ಲೇ ಮಾಡಿದರೆ ಸಾಕು. ಗ್ರಂಥದಲ್ಲೇಕೆ ಅದನ್ನು ಉಲ್ಲೇಖ ಮಾಡಬೇಕು? ಈ ಪ್ರಶ್ನೆಗೆ 'ಶಿಷ್ಯಶಿಕ್ಷಾಯೈ' ಎಂಬ ವಾಕ್ಯದಿಂದ





ಉತ್ತರಿಸುತ್ತಿದ್ದಾರೆ. ಗ್ರಂಥದಲ್ಲಿ ತಾವು ಮಾಡಿರುವ ಮಂಗಳಾಚರಣೆಯನ್ನು ನಿವೇಶ ಮಾಡಿರುವುದು ಕೇವಲ ಶಿಷ್ಯರ ಶಿಕ್ಷಣೆಗೋಸ್ಕರ ಎಂದು ತಿಳಿಯಬೇಕು. 'ದೇವತಾನಮಸ್ಕಾರ ಹಾಗೂ ಗುರುಗಳ ನಮಸ್ಕಾರವನ್ನು ನಾವು ಕೂಡ ಮಾಡಬೇಕು' ಎಂಬ ಭಾವನೆ ಶಿಷ್ಯರಲ್ಲಿ ಮೂಡಬೇಕು. ಏತನ್ಮೂಲಕ ಮಂಗಳವನ್ನು ಶಿಷ್ಯರು ಆಚರಣೆ ಮಾಡಬೇಕು. ಅದಕ್ಕೋಸ್ಕರ ಗ್ರಂಥಕಾರರು ಮಂಗಳಾಚರಣೆಯನ್ನು ನಿಬಂಧನೆ ಮಾಡಿದ್ದಾರೆ. 'ಯದ್ಯದಾಚರತಿ ಶ್ರೇಷ್ಠಃ' ಎಂಬ ಗೀತಾವಚನದಂತೆ ಉತ್ತಮರಾದವರು ಯಾವುದನ್ನು ಆಚರಣೆ ಮಾಡುತ್ತಾರೋ ಅದನ್ನೇ ಅಧಮರಾದವರು ಕೂಡ ಆಚರಿಸುತ್ತಾರೆ.

## ಶಿಷ್ಯರಿಗೆ ಸ್ಫೂರ್ತಿಗಾಗಿ ಪ್ರಕಟಪಡಿಸಬೇಕು

**ಪರಿಮಳ– ನನ್ವಸ್ತು ತೇಷಾಮಪಿ ದೇವತಾನತಿರೇವ ತಸ್ಯಾ ಏವ ಗುರುತ್ವಾತ್ ಇತ್ಯತ ಆಹ – ಶಿಷ್ಯಾಣಾಂ ಚೇತಿ ॥ 'ಶಿಷ್ಯಾಣಾಂ ಗುರುದೇವತಾಭೇದಾತ್ ತೈಃ ಪೃಥಙ್ನತಿಃ ಕಾರ್ಯಾ ಇತಿ ಶಿಷ್ಯಶಿಕ್ಷಾರ್ಥಮೇತತ್ ನಿವೇಶನಮ್' ಇತಿ ಕಥಂ ಜ್ಞಾತವ್ಯಮ್? ಇತ್ಯತ ಆಹ – ತದಪೇಕ್ಷಯೈವ ಇತಿ ॥ ಶಿಷ್ಯಾಣಾಂ ಗುರುದೇವತಾಭೇದಾಪೇಕ್ಷಯೈವ ಇತ್ಯರ್ಥಃ।**

ಶಿಷ್ಯರಿಗೂ ಕೂಡ ಕೇವಲ ದೇವತಾನಮಸ್ಕಾರವಷ್ಟೇ ಸಾಕು. ಏಕೆಂದರೆ ದೇವತೆಯಾದ ಭಗವಂತನೇ ಅವರಿಗೂ ಕೂಡ ಗುರುವಾಗಿದ್ದಾನಲ್ಲವೇ? ಈ ಪ್ರಶ್ನೆಗೆ 'ಶಿಷ್ಯಾಣಾಂ ಚ' ಎಂಬುದರಿಂದ ಉತ್ತರಿಸಿದ್ದಾರೆ. ಶಿಷ್ಯರಿಗೆ ಗುರುಗಳೇ ಬೇರೆ, ದೇವತೆಯೇ ಬೇರೆ. ಆದ್ದರಿಂದ ಅವರು ಪ್ರತ್ಯೇಕವಾಗಿ ಗುರುಗಳಿಗೆ ನಮಸ್ಕಾರ ಮಾಡಬೇಕು. ಈ ಒಂದು ಶಿಕ್ಷಣೆಗೋಸ್ಕರ ಆಚಾರ್ಯರು ಗುರುನಮಸ್ಕಾರವನ್ನು ಪ್ರತ್ಯೇಕವಾಗಿ ನಿವೇಶಮಾಡಿದ್ದಾರೆ ಎಂದು ತಿಳಿಯಬೇಕು. ಆಚಾರ್ಯರಿಗೆ ಈ ಅಭಿಪ್ರಾಯವಿದೆ ಎಂಬುದು ನಮಗೆ ಹೇಗೆ ಗೊತ್ತಾಗುತ್ತದೆ? ಎಂಬ ಪ್ರಶ್ನೆಗೆ 'ತದಪೇಕ್ಷಯೈವ' ಎಂಬುದಾಗಿ ಉತ್ತರಿಸಿದ್ದಾರೆ. 'ಶಿಷ್ಯರಿಗೆ ಗುರುಗಳೇ ಬೇರೆ ದೇವತೆಯೇ ಬೇರೆಯಾಗಿರುತ್ತಾರೆ. ಇದರ ದೃಷ್ಟಿಯಿಂದ' ಎಂಬುದು 'ತದಪೇಕ್ಷಯೈವ' ಎಂಬ ಪದದ ಅರ್ಥವಾಗಿರುತ್ತದೆ.

## 'ವಿಶೇಷತಃ' ಎಂಬ ಪದಕ್ಕೆ ವ್ಯಾಖ್ಯಾನ

ಪರಿಮಳ– 'ಜಗದ್ಗುರೂಣಾಂ ಗುರುಮ್' ಇತ್ಯುಕ್ತಾವಪಿ ಜಗತ್ಪ್ರತಿ ಸಾಕ್ಷಾದ್ಗುರುತ್ವಂ ಕಿಂ ನ ಸ್ಯಾತ್? ಇತ್ಯತ ಆಹ – ಅನ್ಯಥಾ ಇತಿ ॥ ಸಾಕ್ಷಾದಪಿ ಗುರುತ್ವೇ, ವಿಶೇಷತಃ ಸಾಕ್ಷಾತ್ ಮೇ ಗುರುಮ್ ಇತ್ಯೇತದಯುಕ್ತಂ ಸ್ಯಾತ್ । ಸಾಕ್ಷಾತ್ತ್ವಬೋಧಕಸ್ಯ ವಿಶೇಷತಃ ಇತಿ ಪದಸ್ಯ ವ್ಯಾವರ್ತ್ಯಾಭಾವಾತ್ ।

'ಮೇ ಗುರುಮ್' ಇತ್ಯೇತಾವತೈವ ಸಿದ್ಧತ್ವಾತ್ । ತೇನ ಜ್ಞಾಯತೇ 'ಜಗಚ್ಛಬ್ದಿತ-ಶಿಷ್ಯಾಣಾಂ ಬ್ರಹ್ಮಾದಯೋ ಗುರುವಃ ದೇವತಾ ತು ನಾರಾಯಣಃ' ಇತಿ ಶಿಷ್ಯಾಣಾಂ ಗುರು-ದೇವತಾಭೇದಜ್ಞಾಪನಮ್ ಅಸ್ಯ ಫಲಮ್ । ತೇನ ಚ ತೈಃ ಪೃಥಕ್ ನತಿಃ ಕಾರ್ಯಾ ಇತಿ ಶಿಕ್ಷಾರ್ಥಮೇವ ನಿವೇಶನಮ್ ಇತಿ ॥

'ಜಗದ್ಗುರೂಣಾಂ ಗುರುಮ್' ಎಂದು ಹೇಳಿದರೂ ಕೂಡ ನಾರಾಯಣನು ಜಗತ್ತಿಗೆ ನೇರವಾಗಿ ಏಕೆ ಗುರುವಾಗಿರಬಾರದು? ಎಂಬ ಪ್ರಶ್ನೆಗೆ 'ಅನ್ಯಥಾ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಜಗತ್ತಿಗೆ ನಾರಾಯಣನು ಸಾಕ್ಷಾತ್ತಾಗಿ ಗುರುವಾಗಿದ್ದರೆ 'ವಿಶೇಷತಃ ಸಾಕ್ಷಾನ್ಮೇ ಗುರುಮ್' - 'ವಿಶೇಷತಃ ನಾರಾಯಣನು ನನಗೆ ಗುರುವಾಗಿದ್ದಾನೆ' ಎಂದು ಹೇಳಿದ್ದು ಅಯುಕ್ತವಾಗುತ್ತಿತ್ತು. ಸಾಕ್ಷಾತ್ತಾಗಿ ಗುರುವಾಗಿದ್ದಾನೆಂಬುದನ್ನು 'ವಿಶೇಷತಃ' ಎಂಬ ಪದವು ಹೇಳುತ್ತಿದೆ. ಈ ಒಂದು ಅರ್ಥವನ್ನು ಬಿಟ್ಟು ಬೇರೆ ಪ್ರಯೋಜನವೇ ಆ ಪದಕ್ಕೆ ಇರುವುದಿಲ್ಲ.

'ಮೇ ಗುರುಮ್' ಎಂದು ಹೇಳುವುದರಿಂದಲೇ ಜಗತ್ತಿನಂತೆ ತಮಗೂ ಕೂಡ ಸಾಕ್ಷಾತ್ ಗುರುವಾಗಿದ್ದಾನೆಂದು ಸಿದ್ಧವಾಗುತ್ತಿತ್ತು. ಜಗತ್ತು ಎಂದರೆ ಶಿಷ್ಯರು ಎಂದರ್ಥ. ಅವರಿಗೆ ಬ್ರಹ್ಮಾದಿಗಳೇ ಗುರುಗಳಾಗಿದ್ದಾರೆ. ದೇವತೆಯು ಮಾತ್ರ ನಾರಾಯಣನಾಗಿದ್ದಾನೆ. ಹೀಗೆ ಶಿಷ್ಯರಿಗೆ ಗುರುಗಳೇ ಬೇರೆ ದೇವತೆಯೇ ಬೇರೆ ಎಂಬುದನ್ನು ತಿಳಿಸುವುದೇ ಮುಖ್ಯ ಉದ್ದೇಶವಾಗಿದೆ. ಅದಕ್ಕಾಗಿ ತಾವು ಮಾಡಿದ ಪೃಥಕ್ಪ್ರಣಾಮವನ್ನು ಶಿಷ್ಯಶಿಕ್ಷಣೆಗೋಸ್ಕರ ಗ್ರಂಥದಲ್ಲಿ ಉಲ್ಲೇಖ ಮಾಡಿದ್ದಾರೆ.

## ಪುನಃ ಪ್ರಣಾಮಕ್ಕೆ ಮತ್ತೊಂದು ಹೇತು.

**ವಾಕ್ಯಾರ್ಥಚಂದ್ರಿಕಾ – ಏವಂ ಗುರುದೇವತ್ಯೈಕ್ಯೇಽಪಿ ಪೃಥಕ್ ಪ್ರಣಾಮಮುಪಪಾದ್ಯ, ಇದಾನೀಂ ಶಿಷ್ಯಾಣಾಂ ಗುರುದೇವತಾಭೇದಾದ್ ಗ್ರಂಥೇ ನಿವೇಶನಸ್ಯ ಚ ತಚ್ಛಿಕ್ಷೈಕಪ್ರಯೋಜನಕತ್ವಾತ್ ಯುಕ್ತಂ ಪೃಥಕ್ ಗುರುಪ್ರಣಾಮಸ್ಯ ನಿವೇಶನಮ್ ಇತ್ಯಾಹ – ಶಿಷ್ಯೇತಿ ॥ ಅತ್ರ ಶಿಷ್ಯಾಣಾಂ ಗುರುದೇವತಾಭೇದವಿವಕ್ಷಾಯಾಂ ಭಾಷ್ಯಕಾರೀಯಂ ಜ್ಞಾಪಕಮಾಹ – ತದಿತಿ ॥ 'ಜಗದ್ಗುರೂಣಾಮ್' ಇತ್ಯುಕ್ತಂ ಸಂಪ್ರದಾಯಪ್ರವರ್ತಕತ್ವಂ ಶಿಷ್ಯಾನಪೇಕ್ಷ್ಯೈವ ನ ಸ್ವಾತ್ಮಾನಮ್ ಇತ್ಯತ್ರಾಪಿ ತದೀಯಂ ನಿಯಾಮಕಮಾಹ – ಅನ್ಯಥೇತಿ ॥**

ಗುರು ಹಾಗೂ ದೇವತೆಯಲ್ಲಿ ಐಕ್ಯವಿದ್ದರೂ ಕೂಡ ಪ್ರತ್ಯೇಕವಾಗಿ ಪ್ರಣಾಮವು ಉಪಪನ್ನವಾಗುತ್ತದೆಂದು ಸಮರ್ಥಿಸಿದ್ದಾಯಿತು. ಈಗ ಶಿಷ್ಯರ ವಿಷಯದಲ್ಲಿ ಗುರುವೇ ಬೇರೆ ದೇವತೆಯೇ ಬೇರೆ. ಆದ್ದರಿಂದಲೂ ಕೂಡ ಗ್ರಂಥದಲ್ಲಿ ಪ್ರತ್ಯೇಕವಾಗಿ ಪ್ರಣಾಮದ ನಿವೇಶನವನ್ನು ಮಾಡಿದ್ದು ಯುಕ್ತವಾಗುತ್ತದೆ. ಶಿಷ್ಯಶಿಕ್ಷಣವೇ ಎಂಬುದೇ ಇದರ ಪ್ರಯೋಜನ ಎಂಬುದನ್ನು 'ಶಿಷ್ಯ' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

ಶಿಷ್ಯರಿಗೆ ಗುರು ಹಾಗೂ ದೇವತೆಗಳಲ್ಲಿ ಭೇದವಿರುತ್ತದೆ ಎಂಬ ವಿವಕ್ಷೆಯು ಭಾಷ್ಯಕಾರರಿಗೆ ಇದೆ ಎಂಬ ವಿಷಯದಲ್ಲಿ ಜ್ಞಾಪಕವನ್ನು 'ತತ್' ಇತ್ಯಾದಿ ಟೀಕೆಯಿಂದ ಸಮರ್ಥಿಸುತ್ತಿದ್ದಾರೆ. 'ಜಗದ್ಗುರೂಣಾಮ್' ಎಂಬುದರಿಂದ ಸಂಪ್ರದಾಯಪ್ರವರ್ತಕತ್ವವನ್ನು ತಿಳಿಸಿದ್ದಾರೆ. ಇದನ್ನೂ ಕೂಡ ಶಿಷ್ಯರ ಅಪೇಕ್ಷೆಯಿಂದಲೇ ಹೇಳಿದ್ದು. ತಮ್ಮ ದೃಷ್ಟಿಯಿಂದಲ್ಲ. ಈ ವಿಷಯದಲ್ಲೂ ಕೂಡ ನಿಯಾಮಕಪ್ರಮಾಣವನ್ನು 'ಅನ್ಯಥಾ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

## ರಸಘಟ್ಟ
## ಶಿಷ್ಯರಿಗಾಗಿ ಈ ಮಂಗಳಾಚರಣೆ

**ಕುಂಡಲಗಿರಿ – ನನ್ವಸ್ತು ಭಾಷ್ಯಕಾರಸ್ಯ ಗುರುದೇವತಯೋರಭೇದೇಽಪಿ ಗುರುತ್ವನಿಮಿತ್ತಕಂ ಪುನರ್ನಮನಂ ತಸ್ಯ ಗ್ರಂಥೇ ನಿವೇಶನಂ ಕಿಮರ್ಥಮ್? ಇತ್ಯತ ಆಹ – ಶಿಷ್ಯೇತಿ ॥ ಗುರುದೇವತಯೋರಭೇದಸ್ತು ಮಮೈವ, ನ ತು ಶಿಷ್ಯಾಣಾಮ್ । ತೇಷಾಂ ಬ್ರಹ್ಮಾದಯೋ ಗುರವಃ । ದೇವತಾ ತು ಭಗವಾನ್ನಾರಾಯಣ ಏವ, ಅತಃ ತೇಷಾಂ ದೇವತಾಪ್ರಣಾಮೇನ ನ ಗುರುಪ್ರಣಾಮಶ್ಚರಿತಾರ್ಥಃ । ಕಿಂತು ಗುರುಪ್ರಣಾಮಃ ಪೃಥಗನುಷ್ಠೇಯಃ ಇತಿ ಶಿಕ್ಷಣಾಯ ಇತ್ಯರ್ಥಃ ।**

ಭಾಷ್ಯಕಾರರಿಗೆ ಗುರು ಹಾಗೂ ದೇವತೆ ಒಬ್ಬನೇ ಆಗಿರುವುದರಿಂದ ಗುರುತ್ವನಿಮಿತ್ತಕವಾದ ಪ್ರತ್ಯೇಕವಾದ ನಮಸ್ಕಾರವು ಇರಲಿ. ಆದರೆ ಅದನ್ನೇಕೆ ಗ್ರಂಥದಲ್ಲಿ ನಿವೇಶಮಾಡಬೇಕು? ಎಂಬ ಪ್ರಶ್ನೆಗೆ 'ಶಿಷ್ಯಶಿಕ್ಷಾಯೈ' ಎಂಬುದಾಗಿ ಉತ್ತರಿಸಿದ್ದಾರೆ. ಗುರು ಹಾಗೂ ದೇವತೆಗಳಲ್ಲಿ ಅಭೇದವು ನನಗೆ ಮಾತ್ರ. ಶಿಷ್ಯರಿಗಲ್ಲ. ಶಿಷ್ಯರಿಗೆ ಬ್ರಹ್ಮಾದಿ ದೇವತೆಗಳೇ ಗುರುಗಳಾಗಿದ್ದಾರೆ. ಭಗವನ್ನಾರಾಯಣನು ದೇವತೆಯಾಗಿದ್ದಾನೆ. ಆದ್ದರಿಂದ ಅವರು ಕೇವಲ ದೇವತಾಪ್ರಣಾಮದಿಂದ ಗುರುಪ್ರಣಾಮವನ್ನು ಮಾಡಿದಂತಾಗುವುದಿಲ್ಲ. ಪ್ರತ್ಯೇಕವಾಗಿ ಗುರುಪ್ರಣಾಮವನ್ನು ಮಾಡಲೇಬೇಕು. ಹೀಗೆ ಶಿಷ್ಯರಿಗೆ ಶಿಕ್ಷಣ ಮಾಡುವುದಕ್ಕಾಗಿ ಭಾಷ್ಯಕಾರರು 'ತಮೇವ ಶಾಸ್ತ್ರಪ್ರಭವಂ' ಎಂಬ ಶ್ಲೋಕದಿಂದ ಗುರುನಮಸ್ಕಾರವನ್ನು ಮಾಡುತ್ತಿದ್ದಾರೆ.

## ಯಾದುಪತ್ಯ ಹಾಗೂ ಪರಿಮಳದ ಅಭಿಪ್ರಾಯ

**ಕಾಶಿಕಾ – ಯಾದುಪತ್ಯೇ ತು "ನನು ಶಿಷ್ಯಾಣಾಮಿವ ಸ್ವಸ್ಯಾಪಿ ಜಗದ್ಗುರೂಣಾಮ್ ಇತ್ಯನೇನ ಗುರುದೇವತಾಭೇದ ಉಕ್ತಃ । ಸ್ವಸ್ಯಾಪಿ ಜಗದಂತಃಪಾತಿತ್ವಾತ್ । ತಥಾ ಚ ವಿಶೇಷತೋ ಮೇ ಇತ್ಯನೇನ ವಿರೋಧ ಇತ್ಯತ ಆಹ ತದಪೇಕ್ಷಯಾ ಇತಿ ॥ ಶಿಷ್ಯಾಪೇಕ್ಷಯೈವ ಇತ್ಯರ್ಥಃ। ಅನ್ಯಥಾ ಜಗಚ್ಛಬ್ದೇನ ಸ್ವಸ್ಯಾಪಿ ಗ್ರಹಣೇ" ಇತಿ ವ್ಯಾಖ್ಯಾತಮ್ । ಪರಿಮಳೇ ತು "ಗುರುದೇವತಾಭೇದಾಪೇಕ್ಷಯಾ ಇತ್ಯಯುಕ್ತಮ್ । 'ಜಗದ್ಗುರೂಣಾಂ ಗುರುಮ್' ಇತ್ಯುಕ್ತಾವಪಿ ಜಗತ್ತ್ರಿ ಸಾಕ್ಷಾದ್ ಗುರುತ್ವಾನಿವಾರಣಾತ್ ಇತ್ಯತ ಆಹ – ಅನ್ಯಥೇತಿ ॥ ಸಾಕ್ಷಾದಪಿ ಗುರುತ್ವೇ ಇತ್ಯರ್ಥಃ" ಇತಿ ವ್ಯಾಖ್ಯಾತಮ್ ।**

'ತದಪೇಕ್ಷಯಾ' ಎಂಬ ಪದಕ್ಕೆ ಯಾದುಪತ್ಯದಲ್ಲಿ ಶಿಷ್ಯರ ಅಪೇಕ್ಷೆಯಿಂದ ಎಂಬರ್ಥವನ್ನು ಬರೆದಿದ್ದಾರೆ. ಪರಿಮಳದಲ್ಲಿ ಶಿಷ್ಯರಿಗೆ ಗುರು ಹಾಗೂ ದೇವತೆಗಳಲ್ಲಿ ಭೇದವಿದೆ ಅದರ ಅಪೇಕ್ಷೆಯಿದೆ ಎಂಬರ್ಥವನ್ನು ಬರೆದಿದ್ದಾರೆ. ಯಾದುಪತ್ಯದ ಅಭಿಪ್ರಾಯ ಹೀಗಿದೆ – ಶಿಷ್ಯರಂತೆ ತಮಗೂ ಕೂಡ ಗುರು ಹಾಗೂ ದೇವತೆಗಳಲ್ಲಿ ಭೇದವಿದೆ ಎಂಬುದು ಜಗದ್ಗುರೂಣಾಂ ಎಂಬುದರಿಂದ ತಿಳಿಯುತ್ತದೆ. ಏಕೆಂದರೆ ಜಗತ್ತಿನಲ್ಲಿ ತಾವೂ ಕೂಡ ಸೇರಿದ್ದಾರೆ. ಆದರೆ 'ವಿಶೇಷತೋ ಮೇ' ಎಂಬ ವಾಕ್ಯದಿಂದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಯು ಬಂದರೆ 'ತದಪೇಕ್ಷಯಾ' ಎಂಬುದಾಗಿ ಉತ್ತರಿಸಿದ್ದಾರೆ. ಶಿಷ್ಯರ ಅಪೇಕ್ಷೆಯಿಂದ ಜಗದ್ಗುರೂಣಾಂ ಎಂದು ಹೇಳಿದ್ದಾರೆ ಹೊರತು ತಮ್ಮ ದೃಷ್ಟಿಯಿಂದಲ್ಲ. ಅನ್ಯಥಾ ಎಂಬ ಪದಕ್ಕೆ ಜಗಚ್ಛಬ್ದದಿಂದ ತಮ್ಮನ್ನೂ ಕೂಡ ವಿವಕ್ಷಿಸುವುದಾದರೆ ವಿಶೇಷತೋ ಮೇ ಎಂಬ





ಪದದಿಂದ ವಿರೋಧ ಬರುತ್ತದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಪರಿಮಳದಲ್ಲಿ 'ತದಪೇಕ್ಷಯಾ' ಎಂಬ ಪದಕ್ಕೆ ಗುರು ಹಾಗೂ ದೇವತೆಗಳಲ್ಲಿ ಭೇದವಿರುತ್ತದೆ. ಇದರ ಅಪೇಕ್ಷೆಯಿಂದ ಎಂದು ವ್ಯಾಖ್ಯಾನ ಮಾಡಿದ್ದಾರೆ. ಜಗದ್ಗುರೂಣಾಂ ಗುರುಂ ಎಂದು ಹೇಳಿದ್ದರೂ ಕೂಡ ಜಗತ್ತಿಗೆ ಸಾಕ್ಷಾತ್ತಾಗಿ ಗುರು ಏಕಾಗಿರಬಾರದು? ಎಂಬ ಪ್ರಶ್ನೆಗೆ 'ಅನ್ಯಥಾ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಒಂದು ವೇಳೆ ನೇರ-ವಾಗಿಯೇ ನಾರಾಯಣನು ಜಗತ್ತಿಗೆ ಗುರುವಾಗಿದ್ದಾನೆ ಎಂದಾದರೆ 'ವಿಶೇಷತೋ ಮೇ ಗುರುಮ್' ಎಂದು ಹೇಳಿದ್ದು ಅಯುಕ್ತವಾಗುತ್ತಿತ್ತು ಎಂಬುದು ಪರಿಮಳದ ಅಭಿಪ್ರಾಯ. ಹೀಗೆ ತದಪೇಕ್ಷಯಾ ಎಂಬ ವಾಕ್ಯಕ್ಕೆ ಅನ್ಯಥಾ ಎಂಬ ವಾಕ್ಯಕ್ಕೆ ಯಾದುಪತ್ಯದಲ್ಲಿ ಮತ್ತು ಪರಿಮಳಗ್ರಂಥದಲ್ಲಿ ಬೇರೆ ಬೇರೆ ರೀತಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

## ಮಂಗಳಾಚರಣೆ ಮಾಡಲು ಸಾಧ್ಯವೇ?
## (ಒಂದು ವಿಮರ್ಶೆ)

'ಮಂಗಳಮಾಚರಣಮ್' ಎಂದರೆ ಮಂಗಳದ ಅನುಷ್ಠಾನ ಎಂದರ್ಥ. ಕಾಯಿಕವಾಗಿ ವಾಚನಿಕವಾಗಿ ಅಥವಾ ಮಾನಸಿಕವಾಗಿ ಮಾಡುವ ವ್ಯಾಪಾರವಿಶೇಷವೇ ಅನುಷ್ಠಾನವಾಗಿದೆ. ಇಂತಹ ನಮಸ್ಕಾರರೂಪವಾದ ಅನುಷ್ಠಾನವನ್ನು ಯಾವುದೇ ಗ್ರಂಥಕಾರರು ಗ್ರಂಥದ ಮೊದಲು ಮಾಡಿರುತ್ತಾರೆ. ಅನಂತರ ತಾವು ಮಾಡಿದ ಮಂಗಳವನ್ನು ಗ್ರಂಥದ ಪ್ರಾರಂಭದಲ್ಲಿ ಉಲ್ಲೇಖಿ-ಸುತ್ತಾರೆ. ಈಗ ಗ್ರಂಥಾರಂಭದಲ್ಲಿ ನಮಗೆ ಕಾಣಿಸುತ್ತಿರುವ 'ನಿಖಿಲಪೂರ್ಣ' ಇತ್ಯಾದಿ ಶ್ಲೋಕಗಳು ಮಂಗಳಾಚರಣೆಯಾಗಲು ಸಾಧ್ಯವಿಲ್ಲ. ಕೇವಲ ಮಂಗಳಾಚರಣೆಯ ಉಲ್ಲೇಖವೆಂದು ಹೇಳಬೇಕು.

ಮತ್ತು ಮಂಗಳಾಚರಣೆಯ ಉಲ್ಲೇಖವು ಮಂಗಳಕ್ಕೆ ಸಹಕಾರಿಯೂ ಆಗುವುದಿಲ್ಲ. ಹಾಗಾಗಿದ್ದಲ್ಲಿ ಮಂಗಳದ ಉಲ್ಲೇಖವು ಮಂಗಳದ್ವಾರಾ ಸಮಾಪ್ತಿಗೆ ಕಾರಣವೆಂದು ಹೇಳಬಹುದಿತ್ತು. ಮತ್ತು ಸಾಕ್ಷಾತ್ತಾಗಿಯೂ ಸಹ ಸಮಾಪ್ತಿಗೆ ಕಾರಣವಾಗುವುದಿಲ್ಲ. ಹೀಗಿರಬೇಕಾದರೆ ಮಂಗಳದ ಉಲ್ಲೇಖವು ಗ್ರಂಥಾರಂಭದಲ್ಲಿ ಏಕೆ?

ಈ ಪ್ರಶ್ನೆಗೆ ಉತ್ತರ ಹೀಗಿದೆ – ಗ್ರಂಥಾರಂಭದಲ್ಲಿ ಶಿಷ್ಯರು ಮಂಗಳವನ್ನು ಆಚರಿಸಬೇಕೆಂದು ತಿಳಿಸಲು ಉಲ್ಲೇಖಿಸಬೇಕು. ಏಕೆಂದರೆ -

ಯಾವತ್ಕೀರ್ತಿರ್ಮನುಷ್ಯಾಣಾಂ ಪುಣ್ಯಲೋಕೇಷು ಗೀಯತೇ ।
ತಾವದ್ವರ್ಷಸಹಸ್ರಾಣಿ ಪುಣ್ಯಲೋಕೇ ಮಹೀಯತೇ ॥





ಸಜ್ಜನನು ಉತ್ತಮಕೀರ್ತಿಯನ್ನು ಸಂಪಾದಿಸಬೇಕು. ಎಷ್ಟು ವರ್ಷ ಸತ್‌ಕೀರ್ತಿ ಇರುತ್ತದೋ, ಅಷ್ಟು ವರ್ಷಗಳ ಕಾಲ ಪುಣ್ಯಲೋಕದಲ್ಲಿ ಸನ್ಮಾನಿತನಾಗುತ್ತಾನೆ. ಸುಖಶಾಲಿ ಆಗುತ್ತಾನೆ.

ಗ್ರಂಥವು ಶಿಷ್ಯರಿಂದಷ್ಟೇ ಪ್ರಚಾರವಾಗಲು ಸಾಧ್ಯ. ಶಿಷ್ಯರು ಗ್ರಂಥದ ಆರಂಭದಲ್ಲಿ ಮಂಗಳವನ್ನು ಆಚರಿಸದಿದ್ದಲ್ಲಿ ಗ್ರಂಥದ ಅಧ್ಯಯನ ಪರಿಪೂರ್ಣವಾಗುವುದಿಲ್ಲ. ಅಧ್ಯಯನವೇ ನಡೆಯದಿದ್ದಲ್ಲಿ ಅಧ್ಯಾಪನವೂ ನಡೆಯದು. ಆದ್ದರಿಂದ ಗ್ರಂಥಾರಂಭದಲ್ಲಿ ಶಿಷ್ಯರು ಮಂಗಳವನ್ನು ಅತ್ಯವಶ್ಯವಾಗಿ ಆಚರಿಸಬೇಕು. ಹೀಗೆ ಶಿಕ್ಷಣ ನೀಡದಿದ್ದರೆ ಶಿಷ್ಯರಿಗೆ ಮಂಗಳ ಮಾಡಬೇಕೆಂದು ತಿಳಿಯುವುದಿಲ್ಲ.

ಆದ್ದರಿಂದ ಸಮಾಪ್ತಿಗೆ ಮಂಗಳದ ಉಲ್ಲೇಖವು ಕಾರಣವಾಗದಿದ್ದರೂ, ಶಿಷ್ಯರ ಶಿಕ್ಷಣೆಗೋಸ್ಕರ ಸಾರ್ಥಕವಾಗುತ್ತದೆ.

ಈ ವಿಚಾರವನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಕೆಲವರಿಗೆ ವಿಘ್ನವೇ ಬಾರದಿರಬಹುದು. ಅಥವಾ ಎಲ್ಲಾ ಕಾಲದಲ್ಲಿಯೂ ವಿಘ್ನವಿಲ್ಲದಿರಬಹುದು. ಆದರೆ ಬಹುವಿಧವಾದ ವಿಘ್ನಗಳ ಮಧ್ಯೆ ಒಂದಲ್ಲ ಒಂದು ವಿಘ್ನ ಇದ್ದೇ ಇರುತ್ತದೆ. ವಿಘ್ನವಿಲ್ಲದೆ ಗ್ರಂಥಾಧ್ಯಯನವು ಪರಿಪೂರ್ಣವಾಗಬೇಕಾದರೆ ಶಿಷ್ಯರು ಗ್ರಂಥಾರಂಭದಲ್ಲಿ ಅತ್ಯವಶ್ಯವಾಗಿ ಮಂಗಳಾಚರಣೆಯನ್ನು ಮಾಡಲೇಬೇಕಾಗುತ್ತದೆ. ಶಿಷ್ಯರಿಗೆ ಇದನ್ನು ತಿಳಿಸಬೇಕಾದರೆ ಹಿರಿಯರು ಮೊದಲು ತಾವು ಮಂಗಳವನ್ನು ಮಾಡಿ ಅದರ ಉಲ್ಲೇಖವನ್ನು ಮಾಡಬೇಕು. ಶಿಷ್ಯರು ಅದನ್ನು ನೋಡಿ ಮಂಗಳವನ್ನು ಆಚರಿಸುತ್ತಾರೆ. ಆದ್ದರಿಂದ ಗ್ರಂಥದ ಆರಂಭದಲ್ಲಿ ಶಿಷ್ಯಶಿಕ್ಷಣೆಗಷ್ಟೇ ಮಂಗಳದ ಉಲ್ಲೇಖ.

ಹೀಗೆ ಮಂಗಳವನ್ನು ಉಲ್ಲೇಖಿಸುವುದು ಶಿಷ್ಯರ ಶಿಕ್ಷಣೆಗೋಸ್ಕರವೆಂದು ಸಿದ್ಧವಾಯಿತು. ಅಂತಹ ಮಂಗಳದ ಉಲ್ಲೇಖವು ಮಂಗಳಾಚರಣೆ ಎನ್ನಲು ಸಾಧ್ಯವಿಲ್ಲ. ಹೀಗಿರಬೇಕಾದರೆ ಮಂಗಳದ ಉಲ್ಲೇಖವನ್ನು ಮಂಗಳಾಚರಣೆಯೆಂದು ಗ್ರಂಥಕಾರರು ಹೇಗೆ ಕರೆದರು? ಈ ಆಕ್ಷೇಪಕ್ಕೆ

## ವಿದ್ಯಾಧೀಶತೀರ್ಥರು ಹೇಳುವ ಪರಿಹಾರ - ಮಂಗಳಾಚರಣೆಯಂತೆ ಮಂಗಳನಿಬಂಧನವೂ ವಿಘ್ನಪರಿಹಾರಕ (ಶ್ರೀವಿದ್ಯಾಧೀಶತೀರ್ಥರು)

ಗ್ರಂಥಾರಂಭದಲ್ಲಿರುವ ಮಂಗಳದ ಉಲ್ಲೇಖವು ಮಂಗಳಾಚರಣೆ ಅಲ್ಲ. ಅದು ಕೇವಲ ಶಿಷ್ಯರ ಶಿಕ್ಷಣೆಗೋಸ್ಕರ ಇರುವ ಮಂಗಳಾಚರಣೆಯ ಉಲ್ಲೇಖವೆಂಬುದು ಸತ್ಯ. ಆದರೂ ಸಹ





ಮಂಗಳದ ಉಲ್ಲೇಖಕ್ಕೆ ಶಿಷ್ಯಶಿಕ್ಷಣೆಯಷ್ಟೇ ಪ್ರಯೋಜನವಲ್ಲ. ಶಿಷ್ಯರಿಗೆ ತಿಳಿಸುವುದಕ್ಕಾಗಿ ಮಂಗಳ-ವನ್ನು ಉಲ್ಲೇಖಿಸುವ ಅವಶ್ಯಕತೆಯಿಲ್ಲ. ಹೇಗೆಂದರೆ ಕಾಯಿಕವಾದ ಅಥವಾ ಮಾನಸಿಕವಾದ ಅಥವಾ ಸ್ತೋತ್ರಪಾರಾಯಣಾದಿರೂಪವಾದ ಮಂಗಳವನ್ನು ಆಚರಿಸಬೇಕೆಂದು ಯಾರೂ ಹೇಳಿ-ರುವುದಿಲ್ಲ. ಆದರೂ ಸಹ ಇಷ್ಟಸಿದ್ಧಿಗೋಸ್ಕರ ಶಿಷ್ಯರೇ ಅದನ್ನು ತಿಳಿದು ಅನುಷ್ಠಾನ ಮಾಡುತ್ತಾರೆ. ಅದರಂತೆ ಗ್ರಂಥಾಧ್ಯಯನವನ್ನು ಸಂಪೂರ್ಣ ಮಾಡಬೇಕೆಂಬ ಅಪೇಕ್ಷೆಯು ಯಾವ ಶಿಷ್ಯರಿಗಿರು-ತ್ತದೋ, ಅಂತಹವರು ಭಗವಂತನನ್ನು ಪ್ರಾರ್ಥಿಸಿ ವಿಘ್ನಗಳನ್ನು ಪರಿಹರಿಸಿಕೊಳ್ಳುತ್ತಾರೆ. ಆದರ ಶಿಕ್ಷಣೆಯ ಅವಶ್ಯಕತೆ ಇರುವುದಿಲ್ಲ. ಅಷ್ಟೇ ಅಲ್ಲದೆ ಹಿಂದಿನ ಗ್ರಂಥಕಾರರಾದ ವ್ಯಾಸಶುಕಾದಿಗಳೆಲ್ಲರೂ ಮಂಗಳದ ಉಲ್ಲೇಖವನ್ನು ಗ್ರಂಥದಲ್ಲಿ ಮಾಡಿರುತ್ತಾರೆ. ಅದನ್ನು ನೋಡಿಯೇ ಗ್ರಂಥಾರಂಭದಲ್ಲಿ ಅವಶ್ಯವಾಗಿ ಮಂಗಳವನ್ನು ಆಚರಿಸಬೇಕೆಂದು ಶಿಷ್ಯರು ತಿಳಿಯುತ್ತಾರೆ. ಶಿಷ್ಯರಿಗೆ ತಿಳಿಸುವದಕ್ಕಾಗಿ ಈ ಗ್ರಂಥಗಳಲ್ಲಿ ಮಂಗಳವನ್ನು ಉಲ್ಲೇಖಿಸಬೇಕಾಗಿಲ್ಲ. ಆದರೂ ಸಹ ಜ್ಞಾನಿಗಳೆಲ್ಲರೂ ಅವಶ್ಯವಾಗಿ ಮಂಗಳವನ್ನು ಉಲ್ಲೇಖಿಸುತ್ತಾರೆ. ಇದರಿಂದ ಏನು ತಿಳಿಯುತ್ತದೆ? ಎಂದರೆ ಮಂಗಳದ ಆಚರಣೆ-ಯಂತೆ ಮಂಗಳದ ಉಲ್ಲೇಖವೂ ಸಹ ವಿಘ್ನನಿವಾರಕವಾಗಿದೆ. ವಿಘ್ನಗಳು ಬಹಳವಿರಬಹುದೆಂದು ಗ್ರಂಥಕಾರರು ಮಂಗಳಾಚರಣೆಯನ್ನು ಅದರ ನಿಬಂಧನೆಯನ್ನೂ ಅವಶ್ಯ ಮಾಡುತ್ತಾರೆ.

ವಿಘ್ನಪರಿಹಾರಕ್ಕಾಗಿ ಭಗವಂತನಿಗೆ ಭಕ್ತಿಯಿಂದ ನಮಸ್ಕರಿಸಲಾಗುತ್ತದೆ. ಪುನಃ ಬಾಯಿ-ಯಿಂದ 'ನಮಃ' ಎಂದು ಉಚ್ಚರಿಸಲಾಗುತ್ತದೆ. ಪುನಃ ಅದನ್ನೇ ಲಿಪಿಯಿಂದ ಉಲ್ಲೇಖಿಸಲಾಗುತ್ತದೆ. ಹೀಗೆ ಅನೇಕ ವಿಧವಾದ ಮಂಗಳಗಳು ವಿಘ್ನಪರಿಹಾರಕಗಳೇ ಆಗಿವೆ. ಆದ್ದರಿಂದ ಸ್ತೋತ್ರ-ಪಠನರೂಪವಾಗಿ ಮೊದಲು ಮಂಗಳವನ್ನು ಆಚರಿಸುತ್ತಾರೆ. ಆದರೆ ವಿಘ್ನಪ್ರಾಚುರ್ಯದ ಭಯ-ದಿಂದ ಪುನಃ ಕಾಯಿಕವಾದ ಸಾಷ್ಟಾಂಗ ನಮಸ್ಕಾರದಿಂದ ಮಂಗಳವನ್ನು ಆಚರಿಸುತ್ತಾರೆ. ಇನ್ನೂ ಅನೇಕ ವಿಘ್ನಗಳಿರಬಹುದೆಂದು ಮಂಗಳದ ಉಲ್ಲೇಖದ ಮೂಲಕ ಮಂಗಳವನ್ನು ಆಚರಿಸುತ್ತಾರೆ. ಆದ್ದರಿಂದ ಮಂಗಳದ ಉಪನಿಬಂಧನಕ್ಕೆ ಶಿಷ್ಯಶಿಕ್ಷಣೆಮಾತ್ರ ಪ್ರಯೋಜನವಲ್ಲ. ವಿಘ್ನಪರಿಹಾರವೂ ಪ್ರಯೋಜನವಾಗಿದೆ.

ಹಾಗಾದರೆ ಗ್ರಂಥಕಾರರು ಹೇಳಿದ ಶಿಷ್ಯಶಿಕ್ಷಣೆಗೋಸ್ಕರ ಮಂಗಳ ಎಂಬ ಮಾತಿಗೆ ಏನು ಅರ್ಥ? ಎಂದರೆ ಶಿಷ್ಯಶಿಕ್ಷಣೆಯೂ ಇದರಿಂದಾಗುತ್ತದೆ ಎಂದಷ್ಟೇ ಅರ್ಥ. ಶಿಷ್ಯಶಿಕ್ಷಣೆಯು ಆನು-ಷಂಗಿಕವಾದ ಪ್ರಯೋಜನ. ಅಂದರೆ 'ಬೇರೆ ಯಾವುದಕ್ಕೊ ಮಾಡಿದ್ದು ಮತ್ತೊಂದಕ್ಕೆ ಪ್ರಯೋಜನ-ವಾಗಿದೆ' ಎಂದರ್ಥ. ಉದಾ :- ಕೆರೆಯ ನೀರನ್ನು ಗದ್ದೆಗೆ ಕಳಿಸಲು ಕಾಲುವೆಯನ್ನು ಮಾಡಿರುತ್ತಾರೆ.







ಆದರೆ ದಾರಿಹೋಕರು ಕಾಲುವೆಯ ನೀರನ್ನು ಕುಡಿಯಲು ಉಪಯೋಗಿಸುತ್ತಾರೆ. (ಅನ್ಯಾರ್ಥಮಪಿ ಕೃತಸ್ಯ ಲೋಕೇऽನ್ಯಾರ್ಥತ್ವದರ್ಶನಾತ್) ಅದೇ ರೀತಿಯಾಗಿ ಪ್ರಕೃತದಲ್ಲಿ ವಿಘ್ನಪರಿಹಾರಕ್ಕಾಗಿ ಮಂಗಳದ (ಉಪನಿಬಂಧನ) ಉಲ್ಲೇಖವಿರುತ್ತದೆ. ಇದರಿಂದ ಶಿಷ್ಯಶಿಕ್ಷಣಾದಿಪ್ರಯೋಜನಾಂತರ-ಗಳೂ ಸಿದ್ಧಿಸುತ್ತವೆ.

ಆದ್ದರಿಂದ ಮಂಗಳದ ಉಲ್ಲೇಖವು ಮಂಗಳಮಯವಾದ್ದರಿಂದ ಮಂಗಳಾಚರಣೆ ಎಂದೇ ಕರೆಸಿಕೊಳ್ಳುತ್ತದೆ. ಗ್ರಂಥಕಾರರು 'ಮಂಗಳಮಾಚರತಿ' ಎಂದು ಹೇಳಿದ್ದು ಎಲ್ಲ ರೀತಿಯಿಂದ ಸಮಂಜಸವಾಗುತ್ತದೆ. 'ಆಚರಣ'ಶಬ್ದಕ್ಕೆ ಗೌಣಾರ್ಥ ಮಾಡುವ ಅವಶ್ಯಕತೆಯು ಇರುವುದಿಲ್ಲ.

* ತಾತ್ಪರ್ಯಚಂದ್ರಿಕೆಯ ಗುರುರಾಜೀಯ ಟಿಪ್ಪಣಿಯ ಆಧಾರದಲ್ಲಿ ಈ ವಿಮರ್ಶೆ ಮಾಡಲಾಗಿದೆ.

## ಸುಧಾಪರಿಮಳಸಾರ

ಕೇವಲ ಶಿಷ್ಯರ ಶಿಕ್ಷಣೆಗೋಸ್ಕರ ಮಂಗಳಾಚರಣೆಯನ್ನು ಉಲ್ಲೇಖ ಮಾಡಿದ್ದಾರೆ. ಪ್ರತಿಯೊಬ್ಬ ಶಿಷ್ಯರಿಗೂ ನಾರಾಯಣನೇ ದೇವತೆಯಾಗಿದ್ದಾನೆ. ಬ್ರಹ್ಮಾದಿದೇವತೆಗಳು ಗುರುಗಳಾಗಿದ್ದಾರೆ. ಆದ್ದರಿಂದ ದೇವತೆಯೇ ಬೇರೆ ಗುರುಗಳೇ ಬೇರೆ. ಗ್ರಂಥಾರಂಭದಲ್ಲಿ ದೇವತೆಗೆ ನಮಸ್ಕಾರ ಮಾಡುವುದು ಎಷ್ಟು ಮುಖ್ಯವೋ ಗುರುಗಳಿಗೆ ನಮಸ್ಕಾರ ಮಾಡುವುದೂ ಅಷ್ಟೇ ಮುಖ್ಯ . ಇದನ್ನು ತಿಳಿಸುವುದಕ್ಕಾಗಿ ಪ್ರತ್ಯೇಕವಾಗಿ ಗುರುನಮಸ್ಕಾರದ ಉಲ್ಲೇಖವನ್ನು ಆಚಾರ್ಯರು ಮಾಡಿರುತ್ತಾರೆ.

## ಪರಿಮಳದ ವೈಶಿಷ್ಟ್ಯ

* ಮಂಗಳಾಚರಣೆ ಬೇರೆ ಅದರ ನಿಬಂಧನೆ ಬೇರೆ. ಮಂಗಳಾಚರಣೆ ಆವಶ್ಯಕ; ನಿಬಂಧನವು ಅನಾವಶ್ಯಕ ಎಂಬ ಪ್ರಶ್ನೆಗೆ ಉತ್ತರಿಸಲಾಗಿದೆ.

* ಯದ್ಯದಾಚರತಿಶ್ರೇಷ್ಠಃ ಎಂಬ ಗೀತಾವಚನಕ್ಕನುಸಾರಿಯಾಗಿ ಮಂಗಳಾಚರಣೆ-ಯನ್ನು ಮಾಡಲಾಗಿದೆ ಎಂಬುದರ ಉಪಪಾದನೆ ಅಪೂರ್ವವಾಗಿದೆ.

* ಶಿಷ್ಯರಿಗೆ ಗುರುಗಳೇ ಬೇರೆ ದೇವತೆಯೇ ಬೇರೆ ಇದನ್ನು ವಿಶೇಷತೋ ಮೇ ಎಂಬ ಪದವು ತಿಳಿಸುತ್ತಿದೆ.

* ಜಗತ್ತಿನಲ್ಲಿರುವ ಎಲ್ಲಾ ಶಿಷ್ಯರಿಗೂ ನಾರಾಯಣನು ಗುರುವಾಗಲು ಸಾಧ್ಯವಿಲ್ಲ. ಮಧ್ವಾಚಾರ್ಯರಿಗೆ ಮಾತ್ರ ನಾರಾಯಣನು ಗುರುವಾಗಲು ಸಾಧ್ಯ .

## ಬ್ರಹ್ಮಸೂತ್ರಗಳು ವ್ಯಾಖ್ಯೇಯಗಳೇ?

**ಶ್ರೀಮನ್ನ್ಯಾಯಸುಧಾ- ಸ್ಯಾದೇತತ್ । 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿಕಂ ಗ್ರಂಥಂ ವ್ಯಾಖ್ಯಾತುಮಯಂ ದೇವತಾದಿಪ್ರಣಾಮಃ । ನ ಚಾಯಂ ವ್ಯಾಖ್ಯಾತವ್ಯಃ । ಅರ್ಥವಿವಕ್ಷಾಪೂರ್ವಕಮ್ ಅಸ್ಯೈವ ಪೌರುಷೇಯವಾಕ್ಯಸ್ಯ ವ್ಯಾಖ್ಯಾತವ್ಯತ್ವಾತ್ । ನ ಹಿ ಮಾತೃಕಾಮಾತ್ರವ್ಯಾಖ್ಯಾನೇ ಪ್ರೇಕ್ಷಾವಾನ್ ಪ್ರವರ್ತತೇ । ನ ಚಾಸ್ಯ ಅರ್ಥವಿವಕ್ಷಾಪೂರ್ವಕತ್ವೇ ಮಾನಮಸ್ತಿ । ಪ್ರಣಯನಮಾತ್ರಸ್ಯ ವ್ಯಭಿಚಾರಿತ್ವಾತ್ । ಪ್ರೇಕ್ಷಾವತ್ ಪ್ರಣಯನಸ್ಯ ಚ ಅನಿಶ್ಚಯಾತ್ । ನಿಶ್ಚಯೇ ವಾ ವಿಷಹರಮಂತ್ರಸ್ಯೇವ ಜಪಾದಿನಾ ಅಭ್ಯುದಯಸಿದ್ಧಯೇ ನಿರ್ಮಾಣೋಪಪತ್ತೇಃ। ಗೃಹೀತಸಂಗತೇರರ್ಥಪ್ರತಿಭಾಸೋ ಹಿ ವಿಷಹರಮಂತ್ರೇಽಪಿ ಸಮಾನಃ ।**

ಇದು ಇರಲಿ. 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿಗ್ರಂಥವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ದೇವತಾನಮಸ್ಕಾರ ಹಾಗೂ ಗುರುನಮಸ್ಕಾರವನ್ನು ಆಚಾರ್ಯರು ಮಾಡಿದ್ದಾರೆ. ಆದರೆ ಈ ಗ್ರಂಥವು ವ್ಯಾಖ್ಯಾನಕ್ಕೆ ಅರ್ಹವೇ ಆಗಿರುವುದಿಲ್ಲ. ಯಾವ ಪೌರುಷೇಯವಾಕ್ಯವೂ ಅರ್ಥವನ್ನು ವಿವಕ್ಷಿಸುವ ಮೂಲಕ ಪ್ರವೃತ್ತವಾಗಿರುತ್ತದೋ ಅದುಮಾತ್ರ ವ್ಯಾಖ್ಯಾನಕ್ಕೆ ಅರ್ಹವಾಗಿರುತ್ತದೆ. ಕೇವಲ ಅಕಾರಾದಿ ಅಕ್ಷರಗಳನ್ನು ವ್ಯಾಖ್ಯಾನ ಮಾಡಲು ಪ್ರೇಕ್ಷಾವಂತನಾದವನು ಪ್ರವೃತ್ತಿ ಮಾಡಲಾರ. ಈ ಗ್ರಂಥವು ಗ್ರಂಥಕಾರನ ಅರ್ಥವಿವಕ್ಷೆಯಿಂದ ಕೂಡಿದೆ ಎನ್ನಲು ಯಾವುದೇ ಪ್ರಮಾಣವಿಲ್ಲ. ರಚಿತವಾಗಿರುವುದರಿಂದಲೇ ಅರ್ಥವಿವಕ್ಷಾಪೂರ್ವಕವಾಗಿದೆ ಎಂಬುದು ವ್ಯಭಿಚರಿತವಾಗಿದೆ. ಏಕೆಂದರೆ, ಎಷ್ಟೋ ಗ್ರಂಥಗಳಲ್ಲಿ ಅರ್ಥವಿವಕ್ಷೆಯಿಲ್ಲದಿದ್ದರೂ ರಚನೆ ಮಾಡಿರುವುದು ಕಾಣಿಸುತ್ತಿದೆ. ಇನ್ನು ಪ್ರೇಕ್ಷಾ-





ವಂತರಿಂದ ರಚಿತವಾದ ಕಾರಣ ಅರ್ಥವಿವಕ್ಷಾಪೂರ್ವಕವಾಗಿದೆ ಎಂದು ಹೇಳಬೇಕು. ಆದರೆ ಇದಿನ್ನೂ ಕೂಡ ನಿಶ್ಚಯವಾಗಿಲ್ಲ. ಜ್ಞಾನಿರಚಿತವಾಗಿದೆಯೆಂದು ನಿಶ್ಚಯವಾದರೂ ಕೂಡ ಅರ್ಥವಿವಕ್ಷಾಪೂರ್ವಕವಾಗಿದೆ ಎಂದು ನಿರ್ಣಯಿಸುವುದು ಕಷ್ಟ. ಏಕೆಂದರೆ, ವಿಷಹರಮಂತ್ರಾದಿಗಳಂತೆ ಜಪ ಮುಂತಾದವುಗಳ ಮೂಲಕ ಅಭ್ಯುದಯಸಿದ್ಧಿಗಾಗಿ ಈ ಗ್ರಂಥವನ್ನು ನಿರ್ಮಾಣ ಮಾಡಿರಬಹುದು. ಶಕ್ತಿಜ್ಞಾನ ಇರುವ ವ್ಯುತ್ಪನ್ನರಿಗೆ ಅರ್ಥಜ್ಞಾನ-ವಾಗುತ್ತದೆ ಎಂದು ಹೇಳಬೇಕು. ಇದೂ ಕೂಡ ವಿಷಹರಮಂತ್ರದಲ್ಲಿ ಸಮಾನವಾಗಿದೆ.

## 'ಪರಮಾಖ್ಯವಿದ್ಯಾ' ಎಂಬ ಪದಕ್ಕೆ ಅವತಾರಿಕೆ

ಪರಿಮಳ– 'ಪರಮಾಖ್ಯವಿದ್ಯಾ' ಇತ್ಯೇತದವತಾರಯಿತುಮಾಹ – ಸ್ಯಾದೇತದಿತಿ ॥ 'ವಿದ್ಯಾ'ಶಬ್ದಸ್ಯ ವ್ಯಾವರ್ತ್ಯಮಾಹ – ಅರ್ಥವಿವಕ್ಷೇತಿ ॥ ಮಾತೃಕೇತಿ ॥ 'ಕಖಗಘಙ' ಇತ್ಯಾದಿವರ್ಣಮಾತ್ರೇತ್ಯರ್ಥಃ । ವ್ಯಾಪ್ತಮುಪಪಾದ್ಯ ಉಪನಯನಮಾಹ – ನ ಚಾಸ್ಯೇತಿ ॥ 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಗ್ರಂಥಸ್ಯ - ಇತ್ಯರ್ಥಃ।

ಅನುವ್ಯಾಖ್ಯಾನಶ್ಲೋಕದಲ್ಲಿ 'ಪರಮಾಖ್ಯವಿದ್ಯಾ' ಎಂಬ ಪದವನ್ನು ಏಕೆ ಉಲ್ಲೇಖ ಮಾಡಿದ್ದಾರೆ? ಎಂಬುದನ್ನು ತಿಳಿಸಬೇಕಾಗಿದೆ. ಅದಕ್ಕೆ ಅವತಾರಿಕೆಯನ್ನು 'ಸ್ಯಾದೇತತ್' ಎಂಬ ಗ್ರಂಥದಿಂದ ನಿರೂಪಣೆ ಮಾಡಿದ್ದಾರೆ. ಇಲ್ಲಿರುವ 'ವಿದ್ಯಾ' ಎಂಬ ಶಬ್ದವು ಯಾವ ಆಕ್ಷೇಪವನ್ನು ಪರಿಹರಿಸುತ್ತದೋ ಅದನ್ನು 'ಅರ್ಥವಿವಕ್ಷಾಪೂರ್ವಕಸ್ಯೈವ' ಎಂಬ ಗ್ರಂಥದಿಂದ ಉಪಪಾದನೆ ಮಾಡುತ್ತಿದ್ದಾರೆ.

'ಮಾತೃಕಾಮಾತ್ರವ್ಯಾಖ್ಯಾನೇ' ಎಂಬಲ್ಲಿ 'ಮಾತೃಕಾ' ಎಂಬ ಪದಕ್ಕೆ ಕ,ಖ,ಗ,ಘ,ಙ ಇವೇ ಮೊದಲಾದ ವರ್ಣಮಾಲೆಗಳು ಎಂದರ್ಥ. ವ್ಯಾಪ್ತಿಯನ್ನು ಉಪಪಾದನೆ ಮಾಡಿದ್ದಾಯಿತು. ಈಗ ಉಪನಯವನ್ನು 'ನ ಚಾಸ್ಯ' ಎಂಬ ವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ. 'ಅಸ್ಯ' ಎಂಬ ಪದಕ್ಕೆ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ರೂಪವಾದ ಗ್ರಂಥಕ್ಕೆ ಎಂದರ್ಥ.

## ಅನುಮಾನಪ್ರಯೋಗದಿಂದ ಆಕ್ಷೇಪ

ಪರಿಮಳ– ತಥಾ ಚ ಪ್ರಯೋಗಃ । 'ಅಥಾತಃ' ಇತ್ಯಾದಿ ಗ್ರಂಥೋ ನ ವ್ಯಾಖ್ಯೇಯಃ । ಅರ್ಥವಿವಕ್ಷಾಪೂರ್ವಕತ್ವಾಭಾವಾತ್ । ಮಾತೃಕಾಕ್ಷರಮಾತ್ರಸಂದರ್ಭವತ್ । 'ಯೋ ವ್ಯಾಖ್ಯೇಯಃ, ಸಃ ಅರ್ಥವಿವಕ್ಷಾಪೂರ್ವಕಃ' ಇತಿ ವ್ಯತಿರೇಕವ್ಯಾಪ್ತೌ ಕಾವ್ಯಾದಿದೃಷ್ಟಾಂತಃ । ನ ಚ ಹೇತುರಸಿದ್ಧಃ । 'ವಿಮತೋ ಗ್ರಂಥಃ ಅರ್ಥವಿವಕ್ಷಾಶೂನ್ಯಃ ಅರ್ಥವಿವಕ್ಷಾವತ್ತ್ವ-ಸಾಧಕಮಾನಹೀನತ್ವಾತ್' ಇತಿ ।

'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಗ್ರಂಥವು ವ್ಯಾಖ್ಯಾನಕ್ಕೆ ಯೋಗ್ಯವಾಗಿಲ್ಲ. ಏಕೆಂದರೆ ಇದು ಅರ್ಥವಿವಕ್ಷಾ ಪೂರ್ವಕವಾಗಿಲ್ಲ. ಹೇಗೆ ಕ,ಖ,ಗ,ಘ,ಙ ಇತ್ಯಾದಿ ವರ್ಣ-ಮಾತ್ರೆಗಳು ಅರ್ಥವಿವಕ್ಷಾಪೂರ್ವಕವಾಗಿಲ್ಲವೋ ಅದರಂತೆ. ಯಾವುದು ವ್ಯಾಖ್ಯಾನಮಾಡಲು ಅರ್ಹವಾಗಿದೆಯೋ ಅದು ಅರ್ಥವಿವಕ್ಷಾಪೂರ್ವಕವಾಗಿದೆ. ಹೀಗೆ ವ್ಯತಿರೇಕವ್ಯಾಪ್ತಿಯಲ್ಲಿ ಕಾವ್ಯ ಮೊದಲಾದವುಗಳು ದೃಷ್ಟಾಂತವಾಗಿವೆ.

ಈ ಅನುಮಾನದಲ್ಲಿ ಅರ್ಥವನ್ನು ಹೇಳುವ ಉದ್ದೇಶವು ಇರುವುದಿಲ್ಲ ಎಂಬ ಹೇತುವು ಅಸಿದ್ಧವಾಗಿದೆ ಎಂದು ಹೇಳಬಾರದು. ಏಕೆಂದರೆ, ಈ ಹೇತುವು ಶಾಸ್ತ್ರಗ್ರಂಥದಲ್ಲಿ ಅಸಿದ್ಧ-ವಾಗಿರುವುದಿಲ್ಲ. ಈ ಗ್ರಂಥವು ಅರ್ಥವನ್ನು ಹೇಳುವ ಉದ್ದೇಶಪೂರ್ವಕವಾಗಿರುವುದಿಲ್ಲ. ಏಕೆಂದರೆ, ಹೀಗೆ ಅರ್ಥವಿವಕ್ಷೆ ಇದೆ ಎಂದು ತಿಳಿಸುವ ಯಾವುದೇ ಸಾಧಕಪ್ರಮಾಣವಿರು-ವುದಿಲ್ಲ.

ವಿಶೇಷವಿಚಾರ– ಶ್ರೀಮದಾನಂದತೀರ್ಥರು ಶ್ಲೋಕದಲ್ಲಿ ಬ್ರಹ್ಮಸೂತ್ರಗಳನ್ನು 'ಪರಮಾಖ್ಯವಿದ್ಯಾ' ಎಂದು ಹೆಸರಿಸಿದ್ದಾರೆ. ಅದಕ್ಕೆ ಕಾರಣವನ್ನು ತಿಳಿಸುವ ಉದ್ದೇಶದಿಂದ ಅವತರಣಿಕಾರೂಪವಾಗಿ 'ಸ್ಯಾದೇತತ್' ಎಂಬ ವಾಕ್ಯಗಳು ಹೊರಟಿವೆ. ಅನುಮಾನವನ್ನು ಹೀಗೆ ತಿಳಿಯಬೇಕು – 'ಅಯಂ ಗ್ರಂಥಃ ನ ವ್ಯಾಖ್ಯಾತವ್ಯಃ ಅರ್ಥವಿವಕ್ಷಾಪೂರ್ವಕತ್ವಾಭಾವಾತ್ ಮಾತೃಕಾದಿವತ್' ಎಂದು. ಏಕೆಂದರೆ ಅರ್ಥ-ವಿವಕ್ಷೆಯನ್ನೊಳಗೊಂಡ ಕಾವ್ಯಾದಿಗಳು ಮಾತ್ರ ವ್ಯಾಖ್ಯಾನಕ್ಕೆ ಅರ್ಹವಾಗಿವೆ. ಹೊರತು ಅರ್ಥವಿವಕ್ಷೆ-ಯನ್ನೊಳಗೊಳ್ಳದ 'ಕಚಟತಪ' ಮೊದಲಾದ ಅಕ್ಷರಗಳು ವ್ಯಾಖ್ಯಾನಕ್ಕೆ ಅರ್ಹವಾಗಿಲ್ಲ. ಈ ಅನು-





ಮಾನದಲ್ಲಿ ಹೇತ್ವಸಿದ್ಧಿಯನ್ನು ಆಶಂಕಿಸಿದರೆ 'ವಿಮತೋ ಗ್ರಂಥಃ ಅರ್ಥವಿವಕ್ಷಾಶೂನ್ಯಃ ತತ್ಸಾಧಕ-ಪ್ರಮಾಣಾಭಾವಾತ್' ಅರ್ಥವಿವಕ್ಷೆ ಗ್ರಂಥಕಾರರಿಗೆ ಇದೆಯೆನ್ನುವುದಕ್ಕೆ ಪ್ರಮಾಣವಿಲ್ಲ.

## ಮೂರು ಹೇತುಗಳು ಅರ್ಥವಿವಕ್ಷೆಗೆ ಸಾಧಕವಲ್ಲ

ಪರಿಮಳ– ನನು ಮಾನಾಭಾವೋಽಸಿದ್ಧಃ । ಪ್ರಣೇತತ್ವಸ್ಯ ವಾ ಪ್ರೇಕ್ಷಾವತ್ ಪ್ರಣೇತತ್ವಸ್ಯ ವಾ ವ್ಯುತ್ಪನ್ನಪ್ರತೀಯಮಾನಾರ್ಥಕತ್ವಸ್ಯ ವಾ ಮಾನತ್ವಾತ್ ಇತ್ಯತಃ ಕ್ರಮೇಣ ನಿರಾಹ – ಪ್ರಣಯನೇತ್ಯಾದಿನಾ ॥ ಹೇತೋರಪ್ರಯೋಜಕತ್ವಮಾಹ – ನಿಶ್ಚಯೇ ವೇತಿ ॥ ವಿಷಹರಮಂತ್ರೇ ವರ್ಣಮಾಲಾಮಾತ್ರಪಾಠೇನ ಕಾರ್ಯಕರತ್ವಸ್ಯ ಲೋಕೇ ಪ್ರಸಿದ್ಧೇರಿತಿ ಭಾವಃ।

ಪ್ರಮಾಣವಿರುವುದರಿಂದ ಪ್ರಮಾಣವಿಲ್ಲವೆಂಬ ಹೇತುವು ಅಸಿದ್ಧವಾಗುತ್ತದೆ. (1) ರಚಿತ-ವಾಗಿದೆ (2) ಪ್ರೇಕ್ಷಾವಂತರಿಂದ ರಚಿತವಾಗಿದೆ (3) ವ್ಯುತ್ಪತ್ತಿಯುಳ್ಳವರಿಗೆ ಇದರಲ್ಲಿ ಅರ್ಥವು ಪ್ರತೀತವಾಗುತ್ತದೆ. ಹೀಗೆ ಮೂರು ಯುಕ್ತಿಗಳನ್ನು ಹೇಳಬಹುದಲ್ಲವೇ? ಎಂದರೆ ಇವುಗಳಿಂದ ಅರ್ಥವಿವಕ್ಷೆಯನ್ನು ಸಾಧಿಸಲು ಆಗುವುದಿಲ್ಲವೆಂದು 'ಪ್ರಣಯನಮಾತ್ರಸ್ಯ' ಇತ್ಯಾದಿವಾಕ್ಯದಿಂದ ಕ್ರಮವಾಗಿ ನಿರಾಕರಣೆ ಮಾಡುತ್ತಿದ್ದಾರೆ. ಹೇತುವಿಗೆ ಅಪ್ರಯೋಜಕತ್ವವನ್ನು 'ನಿಶ್ಚಯೇ ವಾ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ವಿಷಹರಮಂತ್ರದಲ್ಲಿ ಅರ್ಥವಿಲ್ಲದ ಕೇವಲ ಅಕ್ಷರ-ಗಳಿವೆ. ಅವುಗಳ ಪಾಠದಿಂದ ಕೆಲಸವಾಗುವುದು ಲೋಕದಲ್ಲಿ ಕಂಡಿದೆ ಎಂದರ್ಥ.

ವಿವರಣೆ – ಪ್ರಮಾಣವಿರುವುದರಿಂದ ಅನುಮಾನಕ್ಕೆ ಹೇತ್ವಸಿದ್ಧಿಬರುತ್ತದೆಂದು ಆಕ್ಷೇಪ ಮಾಡಿದರೆ ಅದನ್ನು ಪರಿಹರಿಸಲು ಪ್ರಶ್ನಿಸುತ್ತಿದ್ದಾರೆ. 'ಅರ್ಥವಿವಕ್ಷಾವತ್ತ್ವಸಾಧಕಮಾನಹೀನತ್ವಾತ್' ಎಂಬ ಹೇತುವಿನ ಅಭಿಪ್ರಾಯವೇನು? ಅರ್ಥವಿವಕ್ಷಾಸಾಧಕವಾದ ಪ್ರಮಾಣಪ್ರಣೇತತ್ವವೋ, ಪ್ರೇಕ್ಷಾವತ್ ಪ್ರಣೇತತ್ವವೋ, ವ್ಯುತ್ಪನ್ನಪ್ರತೀಯಮಾನಾರ್ಥಕತ್ವವೋ? ಈ ಮೂರನ್ನೂ 'ಪ್ರಣಯನಮಾತ್ರಸ್ಯ' ಎಂಬ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಬ್ರಹ್ಮಮೀಮಾಂಸಾಶಾಸ್ತ್ರವು ಅರ್ಥವಿವಕ್ಷಾಪೂರ್ವಕವಾಗಿದೆ ಎಂಬುದಕ್ಕೆ ಪ್ರಣೇತತ್ವವು ಹೇತುವೋ, ಪ್ರೇಕ್ಷಾವತ್ ಪ್ರಣೇತತ್ವವೋ ಅಥವಾ ವ್ಯುತ್ಪನ್ನಪ್ರತೀಯಮಾನಾರ್ಥಕತ್ವವು ಹೇತುವೋ ಎಂಬುದು ವಿಕಲ್ಪದ ಅಭಿಪ್ರಾಯ. ಕೇವಲ ಪ್ರಣೇತತ್ವವು ಹೇತುವೆಂದು ಹೇಳಿದರೆ ಶುಕ-ವಾಕ್ಯ, ಬಾಲವಾಕ್ಯಾದಿಗಳಲ್ಲಿ ಪ್ರಣೇತತ್ವವಿದೆ. ಆದರೆ ಅರ್ಥವಿವಕ್ಷಾಪೂರ್ವಕತ್ವವು ಇರುವುದಿಲ್ಲ.





ಆದ್ದರಿಂದ ವ್ಯಭಿಚಾರದೋಷವು ಪ್ರಾಪ್ತವಾಗುತ್ತದೆ. ಪ್ರೇಕ್ಷಾವತ್‌ಪ್ರಣೀತತ್ವವು ಹೇತುವೆಂದು ಹೇಳಿದರೆ ಇದು ನಿಶ್ಚಯವೇ ಆಗಿಲ್ಲ. ಈ ಬ್ರಹ್ಮಮೀಮಾಂಸಾಶಾಸ್ತ್ರವು ಪ್ರೇಕ್ಷಾವಂತರಿಂದ ರಚಿತವಾಗಿದೆ ಎಂದು ನಿಶ್ಚಯವಾಗಿಲ್ಲ ಎಂದರ್ಥ. ಹಾಗೇನಾದರೂ ಕೆಲವರಿಗೆ ನಿಶ್ಚಯವಾಗಿದ್ದರೆ ಕೇವಲ ಅಭ್ಯುದಯ-ಕ್ಕೋಸ್ಕರ ಇದನ್ನು ನಿರ್ಮಾಣ ಮಾಡಿರಬಹುದು. ಅರ್ಥವಿವಕ್ಷಾಪೂರ್ವಕವಾಗಿ ನಿರ್ಮಾಣ ಮಾಡಿರ-ಬೇಕಾಗಿಲ್ಲ. ಆದ್ದರಿಂದ ಪ್ರೇಕ್ಷಾವತ್ ಪ್ರಣೀತತ್ವವೆಂಬ ಹೇತುವಿರಲಿ. ಅರ್ಥವಿವಕ್ಷಾಪೂರ್ವಕತ್ವ ಸಾಧ್ಯವು ಇರುವುದು ಬೇಡ ಎಂಬುದಾಗಿ ಅಪ್ರಯೋಜಕಾಶಂಕೆಯು ಪ್ರಾಪ್ತವಾಗುತ್ತದೆ. ಇನ್ನು ವ್ಯುತ್ಪನ್ನನಾದವನಿಗೆ ಅರ್ಥವು ಪ್ರತೀತವಾಗುತ್ತಿರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಅರ್ಥವಿವಕ್ಷಾಪೂರ್ವಕವಾಗಿದೆ ಎಂಬುದಾಗಿ ಮೂರನೆಯ ಅನುಮಾನವನ್ನು ಪ್ರಯೋಗಮಾಡಬೇಕು. ಅದೂ ಕೂಡ ಸರಿಯಲ್ಲ. ಏಕೆಂದರೆ ವಿಷಪರಿಹಾರಕವಾದ ಮಂತ್ರದಲ್ಲಿ ಕೂಡ ಶಕ್ತಿಜ್ಞಾನವಿರುವ ವ್ಯುತ್ಪನ್ನನಿಗೆ ಅರ್ಥವು ಗೋಚರವೇ ಆಗುತ್ತಿದೆ. ಅದೂ ಕೂಡ ಅರ್ಥವಿವಕ್ಷಾಪೂರ್ವಕವಾಗಿದೆಯೆಂದು ಅಂಗೀಕಾರ ಮಾಡಬೇಕಾದೀತು.

## ಟೀಕೆಯ ಕಠಿಣಪದಾರ್ಥ

ಗುರ್ವರ್ಥದೀಪಿಕಾ – ಅರ್ಥವಿವಕ್ಷಾಪೂರ್ವಕಸ್ಯ ಇತ್ಯತ್ರ ಬಹುತರಗಹನಾರ್ಥವಿವಕ್ಷಾ-ಪೂರ್ವಕಸ್ಯ ಇತ್ಯರ್ಥಃ । ಪ್ರಣಯನಮಾತ್ರಸ್ಯ ವ್ಯಭಿಚಾರಿತ್ವಾತ್ ಇತ್ಯಸ್ಯ ಶುಕಬಾಲವಾಕ್ಯೇ ವ್ಯಭಿಚಾರಿತ್ವಾತ್ ಇತ್ಯರ್ಥಃ। 'ಗೃಹೀತಸಂಗತೇರರ್ಥಪ್ರತಿಭಾಸಃ' ಇತ್ಯತ್ರ ಯತ್ಕಿಂಚಿದರ್ಥಪ್ರತಿಭಾಸೇ ಇತ್ಯರ್ಥಃ।

'ಅರ್ಥವಿವಕ್ಷಾಪೂರ್ವಕಸ್ಯ' ಎಂಬಲ್ಲಿ ಬಹುತರವಾದ ಗಹನಾರ್ಥವಿವಕ್ಷಾಪೂರ್ವಕವಾಗಿರುವ ಎಂದರ್ಥ. 'ಪ್ರಣಯನಮಾತ್ರಸ್ಯ ವ್ಯಭಿಚಾರಿತ್ವಾತ್' ಎಂಬುದಕ್ಕೆ ಶುಕವಾಕ್ಯ ಹಾಗೂ ಬಾಲವಾಕ್ಯದಲ್ಲಿ ವ್ಯಭಿಚಾರವಿರುವುದರಿಂದ ಎಂದರ್ಥ. 'ಗೃಹೀತಸಂಗತೇರರ್ಥಪ್ರತಿಭಾಸಃ' ಎಂಬಲ್ಲಿ ಯತ್ಕಿಂಚಿದರ್ಥ-ಪ್ರತಿಭಾಸವು ಎಂದರ್ಥ.

## ಟೀಕೆಯಲ್ಲಿ ಪೌರುಷೇಯವಾಕ್ಯಸ್ಯ ಎಂಬ ಪದದ ಸಾರ್ಥಕ್ಯಚಿಂತನೆ

ವಾಕ್ಯಾರ್ಥಚಂದ್ರಿಕಾ – 'ವ್ಯಾಖ್ಯಾಂ ಸಮರ್ಥಯಮಾನಃ' ಇತ್ಯುಕ್ತಂ 'ಪರಮಾಖ್ಯವಿದ್ಯಾ' ಇತ್ಯಂಶಸ್ಯ ವ್ಯಾಖ್ಯಾಸಮರ್ಥನರೂಪತ್ವಂ ಘಟಯಿತುಂ ತನ್ನಿವರ್ತ್ಯ ಆಶಂಕಾಮುತ್ಥಾಪಯತಿ –





ಸ್ಯಾದೇತದಿತಿ ॥ 'ನಾಯಂ ಗ್ರಂಥೋ ವ್ಯಾಖ್ಯಾತವ್ಯಃ ಅರ್ಥಾವಬೋಧೋದ್ದೇಶಶೂನ್ಯತ್ವಾತ್ ಮಾತೃಕಾದಿವತ್' ಇತಿ ವಿವಕ್ಷಿತಾನುಮಾನೇ ವೇದವತ್ ಅಸ್ಯಾಪಿ ಅರ್ಥಾವಬೋಧೋದ್ದೇಶ್ಯಕತ್ವಾತ್ ಅಸಿದ್ಧಿಃ ಇತ್ಯಾಶಂಕಾಯಾಂ ವೇದಸ್ಯ ಫಲವದರ್ಥಾವಬೋಧಪರ್ಯಂತಸ್ವಾಧ್ಯಾಯಾಧ್ಯಯವಿಧಿನಾ ಅರ್ಥಾವಬೋಧೋದ್ದೇಶ್ಯಕತ್ವಸಿದ್ಧಾವಪಿ ಪೌರುಷೇಯೇ ಅರ್ಥಾವಬೋಧೋದ್ದೇಶ್ಯಕತ್ವತದಭಾವಯೋಃ ಮನ್ವಾದಿಗ್ರಂಥಮಾತೃಕಾಮಾತ್ರಯೋಃ ದೃಷ್ಟತ್ವೇನ ನಾತ್ರ ವೇದವದರ್ಥಾವಬೋಧೋದ್ದೇಶ್ಯಕತ್ವಸಿದ್ಧಿಃ ಇತ್ಯಭಿಪ್ರಾಯೇಣ ಉತ್ತರವಾಕ್ಯೋಕ್ತಸ್ಯ 'ಪೌರುಷೇಯವಾಕ್ಯ' ಇತ್ಯಂಶಸ್ಯ ಸಮರ್ಥನಾಯ ಚ ಪ್ರಸಕ್ತಿಮಾಹ – ಅಥಾತ ಇತಿ ॥

'ವ್ಯಾಖ್ಯಾಂ ಸಮರ್ಥಯಮಾನಃ' ಎಂದು ಈ ಹಿಂದೆ ಹೇಳಿದರು. 'ಪರಮಾಖ್ಯವಿದ್ಯಾ' ಎಂಬ ಅಂಶವೇ ಬ್ರಹ್ಮಮೀಮಾಂಸಾಶಾಸ್ತ್ರವು ವ್ಯಾಖ್ಯಾನಕ್ಕೆ ಅರ್ಹವಾಗಿದೆ ಎಂಬುದರ ಸಮರ್ಥನಾರೂಪವಾಗಿದೆ. ಇದನ್ನು ಘಟನೆ ಮಾಡುವ ಮೂಲಕ ಇದರಿಂದ ನಿವರ್ತ್ಯವಾಗುವ ಆಶಂಕೆಯನ್ನು 'ಸ್ಯಾದೇತತ್' ಎಂಬುದರಿಂದ ತೋರಿಸುತ್ತಿದ್ದಾರೆ.

'ಅಯಂ ಗ್ರಂಥಃ ನ ವ್ಯಾಖ್ಯಾತವ್ಯಃ ಅರ್ಥಾವಬೋಧೋದ್ದೇಶ್ಯಶೂನ್ಯತ್ವಾತ್ ಮಾತೃಕಾದಿವತ್' ಎಂಬ ವಿವಕ್ಷಿತವಾದ ಅನುಮಾನದಿಂದ ಈ ಗ್ರಂಥವು ವ್ಯಾಖ್ಯಾನಕ್ಕೆ ಅರ್ಹವಲ್ಲ ಎಂದು ತಿಳಿಯುತ್ತದೆ. ಈ ಅನುಮಾನದಲ್ಲಿ ವೇದದಂತೆ ಈ ಗ್ರಂಥಕ್ಕೂ ಕೂಡ ಅರ್ಥಾವಬೋಧೋದ್ದೇಶ್ಯತ್ವವು ಇರುವುದರಿಂದ ಅಸಿದ್ಧಿ ಬರುತ್ತದಲ್ಲವೇ ಎಂದು ಆಶಂಕಿಸಿದರೆ ವೇದವು ಅರ್ಥಾವಬೋಧಪರ್ಯಂತವಾದ ಸ್ವಾಧ್ಯಾಯಾಧ್ಯಯನವಿಧಿಯಿಂದ ಅರ್ಥಾವಬೋಧೋದ್ದೇಶ್ಯವುಳ್ಳದ್ದಾಗಿದೆ ಎಂದು ಸಿದ್ಧವಾಗಿದೆ. ಆದರೆ ಪೌರುಷೇಯವಾದ ಗ್ರಂಥದಲ್ಲಿ ಇದು ಸಿದ್ಧವಾಗುವುದಿಲ್ಲ. ಮನ್ವಾದಿಗ್ರಂಥಗಳಲ್ಲಿ ಅರ್ಥಾವಬೋಧೋದ್ದೇಶ್ಯವಿದೆ. ಮಾತೃಕಾದಿ ಮಾತ್ರಗಳಲ್ಲಿ ಅರ್ಥಾವಬೋಧೋದ್ದೇಶ್ಯವು ಇರುವುದಿಲ್ಲ ಎಂದು ಕಂಡಿದೆ. ಪ್ರಕೃತ ಬ್ರಹ್ಮಮೀಮಾಂಸಾಶಾಸ್ತ್ರವು ಪೌರುಷೇಯವಾಗಿರುವುದರಿಂದ ವೇದದಂತೆ ಅರ್ಥಾವಬೋಧೋದ್ದೇಶ್ಯವುಳ್ಳದ್ದಲ್ಲ. ಈ ಅಭಿಪ್ರಾಯದಿಂದ ಮುಂದಿನ ವಾಕ್ಯದಲ್ಲಿ ಹೇಳಲ್ಪಟ್ಟ 'ಪೌರುಷೇಯವಾಕ್ಯೇ' ಎಂಬಂಶವನ್ನು ಸಮರ್ಥನೆ ಮಾಡುವುದಕ್ಕಾಗಿ 'ಅಥಾತಃ' ಎಂಬುದರಿಂದ ಪ್ರಸಕ್ತಿಯನ್ನು ಹೇಳುತ್ತಿದ್ದಾರೆ.

ವಿವರಣೆ – 'ವ್ಯಾಖ್ಯಾಂ ಸಮರ್ಥಯಮಾನಃ' ಎಂಬುದಾಗಿ ಬ್ರಹ್ಮಮೀಮಾಂಸಾಶಾಸ್ತ್ರವು ವ್ಯಾಖ್ಯಾನ ಮಾಡಲು ಅರ್ಹವಾಗಿದೆಯೆಂದು ಹೇಳಿದರು. ಅದರ ಸಮರ್ಥನಾರೂಪವೇ ಪರಮಾಖ್ಯವಿದ್ಯಾ ಎಂಬುದಾಗಿದೆ. ಇದು ಹೇಗೆ ಎಂಬುದನ್ನು ತೋರಿಸುವ ಮೂಲಕ ತನ್ನಿವರ್ತ್ಯವಾದ ಆಶಂಕೆಯನ್ನು 'ಸ್ಯಾದೇತತ್' ಎಂಬುದರಿಂದ ಉತ್ಥಾಪನೆ ಮಾಡಿದ್ದಾರೆ.

'ಅಯಂ ಗ್ರಂಥಃ ನ ವ್ಯಾಖ್ಯಾತವ್ಯಃ ಅರ್ಥಾವಬೋಧಶೂನ್ಯತ್ವಾತ್' ಎಂಬ ಅನುಮಾನದಿಂದ ಈ ಗ್ರಂಥವು ವ್ಯಾಖ್ಯಾನ ಮಾಡಲು ಅರ್ಹವಲ್ಲ ಎಂದು ಸಾಧಿಸಲಾಗಿದೆ. ಆದರೆ ಅಪೌರುಷೇಯವಾದ ವೇದದಲ್ಲಿ ಅರ್ಥವಿವಕ್ಷೆಯು ಇಲ್ಲದಿದ್ದರೂ ಕೂಡ ಅರ್ಥಾವಬೋಧೋದ್ದೇಶ್ಯಕತ್ವವು ಇರುತ್ತದೆ. ಏಕೆಂದರೆ ಶಬ್ದ-ಪ್ರಯೋಗ ಮಾಡುವುದೇ ಮತ್ತೊಬ್ಬರಿಗೆ ಅರ್ಥವಾಗಲಿ ಎಂಬ ಉದ್ದೇಶದಿಂದ. ಇದು ವೇದದಲ್ಲೂ ಕೂಡ ಇದೆ ಎಂಬುದಾಗಿ ವಾಕ್ಯಾರ್ಥಚಂದ್ರಿಕಾಕಾರರು ವಿವಕ್ಷಿಸಿದ್ದಾರೆ. ಆದರೆ ಬೇರೆ ವ್ಯಾಖ್ಯಾನಕಾರರು ಅರ್ಥಾವ-ಬೋಧೋದ್ದೇಶ್ಯಕತ್ವವನ್ನು ಕೂಡ ವೇದದಲ್ಲಿ ಅಂಗೀಕರಿಸಿಲ್ಲ. ಯಾದುಪತ್ಯದಲ್ಲಿ ಹೀಗಿದೆ – 'ಬ್ರಹ್ಮಸೂತ್ರಂ ನ ವ್ಯಾಖ್ಯಾತವ್ಯಂ ಅರ್ಥವಿವಕ್ಷಾಪೂರ್ವಕತ್ವಾಭಾವಾತ್' ಈ ಅನುಮಾನದಲ್ಲಿ ಯಾವ ಹೇತುವಿದೆಯೋ ಆ ಅರ್ಥವಿವಕ್ಷಾಪೂರ್ವಕತ್ವಾಭಾವವು ವೇದದಲ್ಲಿ ಇದೆ. ಆದರೆ ವ್ಯಾಖ್ಯಾತವ್ಯವೇ ಆಗಿರುವುದರಿಂದ ಸಾಧ್ಯವು ಬರಲಿಲ್ಲ. ಆದ್ದರಿಂದ ವ್ಯಭಿಚಾರ ಬರುತ್ತದೆ. ಇದರ ಪರಿಹಾರಕ್ಕಾಗಿ ಹೇತುವಿನಲ್ಲಿ 'ಪೌರುಷೇಯತ್ವೇ ಸತಿ' ಎಂಬ ವಿಶೇಷಣವನ್ನು ಹೇಳಬೇಕು. ಆದ್ದರಿಂದ ಟೀಕೆಯಲ್ಲಿ ಪೌರುಷೇಯಸ್ಯ ಎಂದು ಹೇಳಿರುವುದು ವ್ಯಭಿಚಾರಪರಿಹಾರಕ್ಕಾಗಿ. ಹೇತುವಿನಲ್ಲಿ ಪೌರುಷೇಯತ್ವವೆಂಬ ವಿಶೇಷಣವನ್ನು ತಿಳಿಸಬೇಕೆಂಬ ಉದ್ದೇಶ-ದಿಂದ. ಆದರೆ ವಾಕ್ಯಾರ್ಥಚಂದ್ರಿಕಾಕಾರರ ಪ್ರಕಾರ ಅನುಮಾನದ ಸ್ವರೂಪ ಹೀಗಿದೆ – 'ಬ್ರಹ್ಮಸೂತ್ರಂ ನ ವ್ಯಾಖ್ಯಾತವ್ಯಂ ಅರ್ಥಾವಬೋಧೋದ್ದೇಶ್ಯಶೂನ್ಯತ್ವಾತ್ ಮಾತೃಕಾಮಾಲಾವತ್' ಎಂದು. ಇಲ್ಲಿ ಪೌರುಷೇಯತ್ವೇ ಸತಿ ಎಂಬ ವಿಶೇಷಣದ ಅನಿವಾರ್ಯತೆ ಇರುವುದಿಲ್ಲ. ಆದರೆ ಟೀಕೆಯಲ್ಲಿ ಪೌರುಷೇ-ಯಸ್ಯ ಎಂದೇಕೆ ಹೇಳಿದ್ದಾರೆಂದರೆ 'ವೇದವತ್ ಅಸ್ಯಾಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸಮಗ್ರವೇದಕ್ಕೆ ಅರ್ಥಾವಬೋಧೋದ್ದೇಶ್ಯವು ಇರುತ್ತದೆ. ಇದು ಹೇಗೆ ಸಿದ್ಧವಾಯಿತೆಂದರೆ 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ವೇದಾಧ್ಯಯನವನ್ನು ವಿಧಿಸುವ ವಾಕ್ಯವಿದೆ. ಇದು ಅರ್ಥಜ್ಞಾನಕ್ಕೋಸ್ಕರವೇ ಅಧ್ಯಯನವನ್ನು ವಿಧಾನ ಮಾಡುತ್ತಿದೆ. ಇದರಿಂದ ಸಮಸ್ತವೇದಕ್ಕೆ ಅರ್ಥಾವಬೋಧೋದ್ದೇಶ್ಯವಿದೆ ಎಂಬುದು ಸಿದ್ಧವಾಯಿತು. ಹೀಗೆ ಸ್ವಾಧ್ಯಾಯಾಧ್ಯನವಿಧಿಯ ಬಲದಿಂದ ಅಪೌರುಷೇಯವಾದ ವೇದಕ್ಕೆ ಅರ್ಥಾವಬೋಧೋದ್ದೇಶ್ಯಕತ್ವವು ಸಿದ್ಧವಾದರೂ ಕೂಡ ಪೌರುಷೇಯಗ್ರಂಥಗಳಲ್ಲಿ ಕೆಲವೊಂದೆಡೆ ಅರ್ಥಾವಬೋಧೋದ್ದೇಶ್ಯತ್ವವು ಇರುತ್ತದೆ. ಇನ್ನು ಕೆಲವೆಡೆ ಇರುವುದಿಲ್ಲ. ಪ್ರಕೃತ ಬ್ರಹ್ಮಸೂತ್ರವು ಪೌರುಷೇಯಗ್ರಂಥವಾಗಿರುವುದರಿಂದ ವೇದದಂತೆ ಅರ್ಥಾವಬೋಧೋದ್ದೇಶ್ಯಕತ್ವವು ಸಿದ್ಧವಾಗುವುದಿಲ್ಲ. ಇದನ್ನು ತಿಳಿಸುವುದಕ್ಕಾಗಿ ಟೀಕೆಯಲ್ಲಿ 'ಪೌರುಷೇಯಸ್ಯ' ಎಂದು ಹೇಳಿದ್ದಾರೆ.

## ಯಾದುಪತ್ಯದಲ್ಲಿ ಹೇಳಿದ್ದು ಅಸಾಧುವೇ?

ವಾಕ್ಯಾರ್ಥಚಂದ್ರಿಕಾ – ಅಯಮಿತಿ ॥ ಪ್ರಕೃತಃ ಪೌರುಷೇಯ ಇತ್ಯರ್ಥಃ । ಅರ್ಥವಿವಕ್ಷಾ-ಪೂರ್ವಕತ್ವಂ ಚ ಅರ್ಥಾವಬೋಧೋದ್ದೇಶ್ಯಕತ್ವಂ ವೇದಾದಿಸಾಧಾರಣಮಭಿಮತಂ, ನ ತು

ತದ್ವ್ಯಾವೃತ್ತಂ ವಕ್ತೃವಿವಕ್ಷಾಪೂರ್ವಕತ್ವಮ್ । ಪರಿಹಾರಗ್ರಂಥಾನಾನುಗುಣ್ಯಾಪತ್ತೇಃ । ಅತ್ರ ವ್ಯತಿರೇಕ ದೃಷ್ಟಾಂತೋ ಮನ್ವಾದಿಗ್ರಂಥೋಽಭಿಮತಃ । ವಿಪಕ್ಷೇ ಬಾಧಕಮುಖೇನ ಅನ್ವಯದೃಷ್ಟಾಂತಮಾಹ – ನ ಹೀತಿ ॥ ಹೇತ್ವಸಿದ್ಧಿಂ ಪರಿಹರತಿ – ನ ಚೇತಿ ॥ ವ್ಯಭಿಚರಿತತ್ವಾದಿತಿ ॥ 'ವರ್ಣಸಮಾಮ್ನಾಯರೂಪೇ ಮಾತೃಕಾಮಾತ್ರೇ' ಇತಿ ಶೇಷಃ । ಅನಿಶ್ಚಯಾದಿತಿ ॥ ತಥಾ ಚ ಸಂದಿಗ್ಧಾಸಿದ್ಧಿರಿತಿ ಭಾವಃ ।

'ಅಯಮ್' ಎಂದರೆ ಪ್ರಕೃತವಾದ ಪೌರುಷೇಯಗ್ರಂಥ ಎಂದರ್ಥ. ಅರ್ಥವಿವಕ್ಷಾಪೂರ್ವಕತ್ವ ಎಂದರೆ ಅರ್ಥಾವಬೋಧೋದ್ದೇಶ್ಯಕತ್ವ ಎಂದರ್ಥ. ಇದು ವೇದದಲ್ಲೂ ಕೂಡ ಸಾಧಾರಣವಾಗಿದೆ ಎಂದು ಅಭಿಮತವಾಗಿದೆ. ವೇದದಿಂದ ವ್ಯಾವೃತ್ತವಾದ ವಕ್ತೃವಿವಕ್ಷಾಪೂರ್ವಕತ್ವವನ್ನು ಅರ್ಥವಿವಕ್ಷಾಪೂರ್ವಕತ್ವ ಎಂಬ ಶಬ್ದದ ಅರ್ಥವೆಂದು ಹೇಳಬಾರದು. ಆಗ ಪರಿಹಾರಗ್ರಂಥಕ್ಕೆ ಅನಾನುಗುಣ್ಯದೋಷವು ಪ್ರಾಪ್ತವಾಗುತ್ತದೆ. ಇಲ್ಲಿ ಮನ್ವಾದಿಗ್ರಂಥಗಳು ವ್ಯತಿರೇಕದೃಷ್ಟಾಂತ ಎನಿಸಿವೆ. ವಿಪಕ್ಷದಲ್ಲಿ ಬಾಧಕ ಹೇಳುವ ಮೂಲಕ ಅನ್ವಯದೃಷ್ಟಾಂತವನ್ನು 'ನಹಿ' ಇತ್ಯಾದಿ ವಾಕ್ಯದಿಂದ ತಿಳಿಸಿದ್ದಾರೆ. ಹೇತ್ವಸಿದ್ಧಿಯನ್ನು ಪರಿಹರಿಸಲು 'ನಚ' ಇತ್ಯಾದಿಗ್ರಂಥವು ಪ್ರವೃತ್ತವಾಗಿದೆ. 'ವ್ಯಭಿಚರಿತತ್ವಾತ್' ಎಂಬಲ್ಲಿ ವರ್ಣಸಮಾಮ್ನಾಯರೂಪವಾದ ಮಾತೃಕಾ ಮಾತ್ರದಲ್ಲಿ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಅನಿಶ್ಚಯಾತ್' ಎಂದು ಹೇಳುವುದರಿಂದ ಸಂದಿಗ್ಧಾಸಿದ್ಧಿಯು ಬರುತ್ತದೆಂದು ಹೇಳಬೇಕು.

ವಿವರಣೆ – ಪ್ರಕೃತವಾದ ಬ್ರಹ್ಮಮೀಮಾಂಸಾಶಾಸ್ತ್ರವೆಂಬ ಪೌರುಷೇಯಗ್ರಂಥವು ವ್ಯಾಖ್ಯಾನಕ್ಕೆ ಯೋಗ್ಯವಾಗಿಲ್ಲ ಎಂಬುದು 'ಅಯಂ' ಎಂಬ ವಾಕ್ಯದ ಅಭಿಪ್ರಾಯ. ಯಾದುಪತ್ಯದಲ್ಲಿ ಅರ್ಥವಿವಕ್ಷಾಪೂರ್ವಕತ್ವ ಎಂದರೆ, ಸ್ವತಂತ್ರವಕ್ತೃನಿಷ್ಠವಿವಕ್ಷಾಪೂರ್ವಕತ್ವ ಎಂಬರ್ಥವನ್ನು ಹೇಳಿದ್ದಾರೆ. ಆದರೆ ಇದು ವಾಕ್ಯಾರ್ಥಚಂದ್ರಿಕಾಕಾರರಿಗೆ ಸಮ್ಮತವಲ್ಲ. ಪೌರುಷೇಯಗ್ರಂಥ ಹಾಗೂ ಅಪೌರುಷೇಯಗ್ರಂಥದಲ್ಲಿ ಸಾಧಾರಣವಾದ ಅರ್ಥವಿವಕ್ಷಾಪೂರ್ವಕತ್ವವನ್ನೇ ಹೇಳಬೇಕೆಂಬುದು ಇವರ ಅಭಿಪ್ರಾಯ. ವಕ್ತೃವಿವಕ್ಷಾಪೂರ್ವಕತ್ವವು ವೇದದಲ್ಲಿ ಇರುವುದಿಲ್ಲ. ಆಗ ಮುಂದೆ ಮಾಡುವ ಪರಿಹಾರಗ್ರಂಥದ ಆನುಗುಣ್ಯವು ಪ್ರಾಪ್ತವಾಗುವುದಿಲ್ಲ. ಆದ್ದರಿಂದ ವೇದದಲ್ಲೂ ಸಾಧಾರಣವಾದ ಅರ್ಥಾವಬೋಧೋದ್ದೇಶ್ಯಕತ್ವವನ್ನೇ ಅರ್ಥವಿವಕ್ಷಾಪೂರ್ವಕತ್ವವೆಂದು ಹೇಳಬೇಕು. 'ಅಯಮಭಿಸಂಧಿಃ' ಇತ್ಯಾದಿ ಮುಂದಿನ ಪರಿಹಾರಗ್ರಂಥದಲ್ಲಿ ವಿದ್ಯಾಶಬ್ದದಿಂದ ಅರ್ಥವಿವಕ್ಷಾಪೂರ್ವಕತ್ವ ಹಾಗೂ ಯಾಥಾರ್ಥ್ಯ ಎಂಬುದು ಎರಡೂ ಕೂಡ ತಿಳಿಯುತ್ತದೆಂದು ಹೇಳುತ್ತಾರೆ. ಅದೇ ವಿದ್ಯಾಶಬ್ದವನ್ನು ವೇದದಲ್ಲೂ ಕೂಡ ಪ್ರಯೋಗ ಮಾಡುತ್ತಾರೆ.

ಹಾಗಾದರೆ ಯಾದುಪತ್ಯ ಹಾಗೂ ಸತ್ಯವ್ರತರ ವ್ಯಾಖ್ಯಾನವು ಅಯುಕ್ತವಾಯಿತೇ ಎಂದು ಪ್ರಶ್ನೆ ಬರುತ್ತದೆ. ವಿಚಾರ ಮಾಡಿದರೆ ಅವರ ಪ್ರಕಾರವೂ ಕೂಡ ಇದನ್ನು ಕೂಡಿಸಬಹುದು – ಪರಿಹಾರಗ್ರಂಥದಲ್ಲೂ ಕೂಡ





ವಿದ್ಯಾಶಬ್ದವಾಚ್ಯವಾಗಿರುವುದರಿಂದ ಅರ್ಥವಿವಕ್ಷಾಪೂರ್ವಕವಾಗಿದೆ ಎಂದಷ್ಟೇ ಹೇಳಬಾರದು. ಪೌರುಷೇಯತ್ವೇ ಸತಿ ಎಂಬುದಾಗಿ ಅಲ್ಲಿಯೂ ಕೂಡ ಹೇಳಬೇಕು. 'ಬ್ರಹ್ಮಸೂತ್ರಾಣಿ ಅರ್ಥವಿವಕ್ಷಾಪೂರ್ವಕಾಣಿ ಪೌರುಷೇಯತ್ವೇ ಸತಿ ವಿದ್ಯಾಶಬ್ದವಾಚ್ಯತ್ವಾತ್' ಎಂದು ಪೌರುಷೇಯತ್ವವನ್ನು ವಿಶೇಷಣವನ್ನಾಗಿ ಹೇಳಿದಾಗ ವೇದದಲ್ಲಿ ವ್ಯಭಿಚಾರವು ಪರಿಹಾರವಾಗುತ್ತದೆ. ಹೀಗೆ ಎರಡೂ ವ್ಯಾಖ್ಯಾನಗಳ ವಿರೋಧವನ್ನು ಪರಿಹಾರ ಮಾಡಬೇಕು.

'ಯತ್ರ ವ್ಯಾಖ್ಯೇಯತ್ವಂ ತತ್ರ ಅರ್ಥಾವಬೋಧೋದ್ದೇಶ್ಯಕತ್ವಮ್' ಎಂಬ ವ್ಯತಿರೇಕವ್ಯಾಪ್ತಿಗೆ ಮನ್ವಾದಿ-ಗ್ರಂಥಗಳೇ ದೃಷ್ಟಾಂತವಾಗಿವೆ. 'ಯತ್ರ ಅರ್ಥಾವಬೋಧೋದ್ದೇಶ್ಯಕತ್ವಾಭಾವಃ ತತ್ರ ವ್ಯಾಖ್ಯಾತವ್ಯತ್ವಾ-ಭಾವಃ' ಎಂಬ ಅನ್ವಯವ್ಯಾಪ್ತಿಗೆ ಮಾತೃಕಾದಿಗಳು ದೃಷ್ಟಾಂತವಾಗಿವೆ.

ಬ್ರಹ್ಮಸೂತ್ರಗಳಿಗೆ ಅರ್ಥಾವಬೋಧೋದ್ದೇಶ್ಯಕತ್ವವು ಇಲ್ಲದ ಕಾರಣ ಹೇತ್ವಸಿದ್ಧಿ ಬರುತ್ತದೆ. ಏಕೆಂದರೆ ಪ್ರಮಾಣವಿಲ್ಲ ಎಂಬುದಾಗಿ 'ನಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಪ್ರಣಯನಮಾತ್ರವು ವರ್ಣ-ಸಮಾಮ್ನಾಯರೂಪವಾದ ಮಾತೃಕಾಮಾತ್ರ ದಲ್ಲೂ ಕೂಡ ಇರುತ್ತದೆ. ಆದರೆ ಅರ್ಥವಿವಕ್ಷಾಪೂರ್ವಕತ್ವವು ಇರುವುದಿಲ್ಲ. 'ಕಚಟಪತಾನಾಂ ಜಬಗಡದತ್ವಾತ್' ಎಂಬಲ್ಲಿ ಪ್ರಣಯನವು ಇದೆ ಆದರೆ ಅರ್ಥ-ವಿವಕ್ಷಾಪೂರ್ವಕತ್ವವು ಇರುವುದಿಲ್ಲ. ಪ್ರೇಕ್ಷಾವತ್ವೇ ಸತಿ ಎಂಬ ವಿಶೇಷಣವನ್ನು ನೀಡಿದರೆ ಅದಿನ್ನೂ ನಿಶ್ಚಯವಾಗಿಲ್ಲ. ಆದ್ದರಿಂದ ಸಂದಿಗ್ಧಾಸಿದ್ಧಿಯು ಪ್ರಾಪ್ತವಾಗುತ್ತದೆ.

## ವ್ಯಭಿಚಾರದ ಜೊತೆ ಅನ್ಯಥಾಸಿದ್ಧಿಯೂ ಇದೆ

ವಾಕ್ಯಾರ್ಥಚಂದ್ರಿಕಾ– ನನು

'.................. ಭಗವಾನ್ ಪುರುಷೋತ್ತಮಃ ।

ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್ ॥

ಇತ್ಯಾದ್ಯಾಗಮಾದೇವ ಪ್ರಣೇತುಃ ಪ್ರೇಕ್ಷಾವತ್ತ್ವನಿಶ್ಚಯ ಇತ್ಯತೋ ವಿಶಿಷ್ಟಹೇತೋರಪಿ ಪ್ರೇಕ್ಷಾವತ್ಪ್ರಣೀತೇಽರ್ಥಾವಬೋಧೋದ್ದೇಶಶೂನ್ಯೇ ವಿಷಹರಮಂತ್ರೇ ವ್ಯಭಿಚಾರಃ । ತದ್ವದೇವ ಚ ಪ್ರಕೃತಸಾಧ್ಯಾಭಾವೇಽಪಿ ಜಪಾದಿನಾಽಭ್ಯುದಯಸಿದ್ಧಯೇ ಪ್ರೇಕ್ಷಾವತ್ ಪ್ರಣಯನೋಪಪತ್ತೇಃ ಅನ್ಯಥಾಸಿದ್ಧಿಶ್ಚ ಇತ್ಯಾಶಯೇನಾಹ – ನಿಶ್ಚಯೇ ವೇತಿ ॥

ನನು ಹೇತ್ವಂತರಸಂಭವೇಽಪಿ ಪ್ರಕೃತಗ್ರಂಥಾದರ್ಥಾವಭಾಸಾದೇವ ತಸ್ಯಾರ್ಥಾವ-ಬೋಧೋದ್ದೇಶ್ಯಕತ್ವಸಿದ್ಧಿರಿತ್ಯತೋ ಅಗೃಹೀತಸಂಗತೇರರ್ಥಾವಭಾಸಾಭಾವಾದ್ ಗೃಹೀತಸಂಗತೇ-

ರರ್ಥಾವಭಾಸಸ್ಯ ಸಮವೇತಾರ್ಥಾಪ್ರತಿಪಾದಕತ್ವೇನ ಅರ್ಥಾವಬೋಧೋದ್ದೇಶ್ಯಕತ್ವಶೂನ್ಯತಯಾ ಉಭಯಸಂಪ್ರತಿಪನ್ನೇ ವಿಷಹರಮಂತ್ರೇऽಪಿ ಸತ್ತ್ವೇನ ಪೂರ್ವೋಕ್ತದೋಷದ್ವಯಾನತಿವೃತ್ತೇಃ, ಇತ್ಯಾಶಯೇನಾಹ – ಗೃಹೀತಸಂಗತೇರಿತಿ ॥

'ಭಗವಾನ್ ಪುರುಷೋತ್ತಮಃ । ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್' 'ಷಡ್ಗುಣೈಶ್ವರ್ಯಸಂಪನ್ನನಾದ ಪುರುಷೋತ್ತಮನು ಸತ್ಯವತಿ ಹಾಗೂ ಪರಾಶರರಲ್ಲಿ ಅವತರಿಸಿದನು ಎಂಬ ಆಗಮದಿಂದ ಬ್ರಹ್ಮಸೂತ್ರಪ್ರಣೇತೃವು ಪ್ರೇಕ್ಷಾವಂತನಾಗಿದ್ದಾನೆಂದು ನಿಶ್ಚಯವಾಗುತ್ತದಲ್ಲವೇ? ಎಂದರೆ ಈ ವಿಶಿಷ್ಟಹೇತುವಿಗೂ ಕೂಡ ವ್ಯಭಿಚಾರಬರುತ್ತದೆ. ಕೇವಲ ಪ್ರಣೀತತ್ವವೆಂದು ಹೇಳದೇ ಪ್ರೇಕ್ಷಾವತ್ವೇ ಸತಿ ಪ್ರಣೀತತ್ವಂ ಎಂದು ನೀವು ಹೇಳಿದಿರಿ. ಇದಕ್ಕೆ ವಿಷಹರಮಂತ್ರದಲ್ಲಿ ವ್ಯಭಿಚಾರ ಬರುತ್ತದೆ. ವಿಷಹರಮಂತ್ರವನ್ನು ಪ್ರೇಕ್ಷಾವಂತನೇ ಹೇಳುತ್ತಾನೆ.

ಅದರಂತೆ ಪ್ರಕೃತ ಸಾಧ್ಯವಿಲ್ಲದಿದ್ದರೂ ಕೂಡ ಜಪಾದಿಗಳಿಂದ ಅಭ್ಯುದಯಸಿದ್ಧಿಗೋಸ್ಕರ ಪ್ರೇಕ್ಷಾವತ್ ಪ್ರಣಯನವು ಉಪಪನ್ನವಾಗುತ್ತದೆ. ಆದ್ದರಿಂದ ಅನ್ಯಥಾಸಿದ್ಧಿಯು ಕೂಡ ಬರುತ್ತದೆಂಬುದನ್ನು 'ನಿಶ್ಚಯ ಏವ' ಎಂಬ ವಾಕ್ಯದಿಂದ ತಿಳಿಸಿದ್ದಾರೆ. ಹೀಗೆ 'ಪ್ರೇಕ್ಷಾವತ್ ಪ್ರಣೀತತ್ವಾತ್' ಎಂಬ ಹೇತುವಿಗೆ ವ್ಯಭಿಚಾರವಷ್ಟೇ ಅಲ್ಲದೇ ಅನ್ಯಥಾಸಿದ್ಧಿಯೂ ಬರುತ್ತದೆಂದು ತಿಳಿಯಬೇಕು.

ಹೇತ್ವಂತರವು ಯುಕ್ತವಾಗುವುದಾದರೂ ಕೂಡ ಪ್ರಕೃತ ಗ್ರಂಥದಿಂದ ಅರ್ಥಾವಭಾಸದಿಂದಲೇ ಅರ್ಥಾವಬೋಧೋದ್ದೇಶ್ಯಕತ್ವವು ಸಿದ್ಧವಾಗುತ್ತದೆ. 'ಬ್ರಹ್ಮಸೂತ್ರಾಣಿ ಅರ್ಥಾವಬೋಧೋದ್ದೇಶ್ಯಕಾನಿ ಪ್ರತಿಭಾಸಮಾನ ಅರ್ಥವತ್ವಾತ್' ಎಂದು. ಹೀಗೆ ಹೇಳಿದರೆ ಅಗೃಹೀತಸಂಗತಿಯುಳ್ಳ ನಮಗೆ ಪ್ರತಿಭಾಸಮಾನವಾದ ಅರ್ಥವುಳ್ಳದ್ದಲ್ಲ. ಗೃಹೀತಸಂಗತಿಗೆ ಪ್ರತಿಭಾಸಮಾನಾರ್ಥವುಳ್ಳದ್ದಾಗಿದೆಯೆಂದು ಹೇಳಿದರೆ ಯಥಾಪ್ರಕಾರವಾಗಿ ವಿಷಹರಮಂತ್ರದಲ್ಲಿಯೇ ವ್ಯಭಿಚಾರವು ಬರುತ್ತದೆ. ಗೃಹೀತಸಂಗತಿಗೆ ಪ್ರತಿಭಾಸಮಾನವಾದ ಅರ್ಥವು ಇದ್ದೇ ಇರುತ್ತದೆ. ಆದರೆ ಅರ್ಥಾವಬೋಧೋದ್ದೇಶ್ಯಕತ್ವವು ಇರುವುದಿಲ್ಲ. ಹೀಗೆ ವ್ಯಭಿಚಾರ ಹಾಗೂ ಅನ್ಯಥಾಸಿದ್ಧಿಗಳೆಂಬ ಹಿಂದಿನ ಎರಡು ದೋಷಗಳು ಬಂದೇ ಬರುತ್ತವೆ.

ಈ ಅಭಿಪ್ರಾಯದಿಂದ 'ಗೃಹಿತಸಂಗತೇಃ' ಇತ್ಯಾದಿ ಗ್ರಂಥವು ಹೊರಟಿದೆ.





## ರಸಘಟ್ಟ
## ವ್ಯತಿರೇಕವ್ಯಾಪ್ತಿಯ ಪರಿಷ್ಕಾರ

ಕಾಶೀ– ನ ವ್ಯಾಖ್ಯಾತವ್ಯಃ = ನ ಪ್ರೇಕ್ಷಾಪೂರ್ವಕವ್ಯಾಖ್ಯಾನವಿಷಯಃ । 'ಅರ್ಥವಿವಕ್ಷಾಪೂರ್ವಕತ್ವಾಭಾವೇ ಸತಿ ಪೌರುಷೇಯತ್ವಾತ್' ಇತಿ ಶೇಷಃ । ಶ್ರುತಿಸ್ಮೃತ್ಯೋಃ ವ್ಯಭಿಚಾರವಾರಣಾಯ ವಿಶೇಷಸತ್ಯಂತಯೋರ್ನಿವೇಶಃ । ಅತ್ರ ವ್ಯತಿರೇಕಸ್ಯ ಅನ್ವಯಸಾಧಕತ್ವಾತ್ ವ್ಯತಿರೇಕವ್ಯಾಪ್ತಿಮ್ ಆದೌ ಆಹ – ಅರ್ಥೇತಿ ॥ ಪೌರುಷೇಯಗ್ರಹಣಾತ್ ಅಪೌರುಷೇಯಸ್ಯ ಅರ್ಥವಿವಕ್ಷಾಪೂರ್ವಕತ್ವರಹಿತಸ್ಯಾಪಿ ವ್ಯಾಖ್ಯಾತವ್ಯತ್ವಂ ಲಭ್ಯತೇ । ತಥಾ ಚ ವ್ಯಾಖ್ಯಾತವ್ಯತ್ವವತಿ ಸ್ಮೃತ್ಯಾದೌ ವಿಶೇಷಣಾಭಾವೇನ ವೇದೇ ಚ ವಿಶೇಷ್ಯಾಭಾವೇನ ವಿಶಿಷ್ಟಾಭಾವಸತ್ವಾದ್ ವ್ಯತಿರೇಕಸಿದ್ಧಿರಿತಿ ಭಾವಃ । ಅನ್ವಯವ್ಯಾಪ್ತಿಮಾಹ – ನ ಹೀತಿ ॥ ಅರ್ಥವಿವಕ್ಷಯಾ ಅಪ್ರಯೋಜಕತ್ವೇ ಮಾತೃಕಾಮಾತ್ರವ್ಯಾಖ್ಯಾನಾಪತ್ತಿರಿತಿ ಭಾವಃ ।

ವಾಕ್ಯಾರ್ಥಚಂದ್ರಿಕಾಯಾಂ ತು "ಅವ್ಯಾಖ್ಯೇಯತ್ವೇ ಅರ್ಥವಿವಕ್ಷಾಪೂರ್ವಕತ್ವಾಭಾವ ಏವ ಹೇತುಃ । ಅರ್ಥವಿವಕ್ಷಾಪೂರ್ವಕತ್ವಂ ಚ ಅರ್ಥಾವಬೋಧೋದ್ದೇಶ್ಯಕತ್ವಂ ವೇದಸಾಧಾರಣಮಭಿಮತಂ ನ ತು ತದ್‌ವ್ಯಾವೃತ್ತಂ ವಕ್ತೃವಿವಕ್ಷಾಪೂರ್ವಕತ್ವರೂಪಂ ಪರಿಹಾರಗ್ರಂಥಾನಾನುಗುಣ್ಯಾತ್ । 'ಅರ್ಥೇ'ತ್ಯಾದಿನಾ ಚ ಸ್ಮೃತಿಮಾತೃಕಾಮಾತ್ರರೂಪೌ ವ್ಯತಿರೇಕಾನ್ವಯದೃಷ್ಟಾಂತೌ ದರ್ಶಿತೌ" ಇತ್ಯುಕ್ತಮ್ । ಹೇತೌ ವಿಶೇಷ್ಯಭಾಗಸ್ಯ 'ಗ್ರಂಥ'ಪದೇನೈವ ಸಿದ್ಧತ್ವಾತ್ ವಿಶೇಷಣಾಸಿದ್ಧಿಮೇವ ಪರಿಹರತಿ – ನ ಚೇತಿ ॥

ನ ವ್ಯಾಖ್ಯಾತವ್ಯಃ = ಅಯಂ ನ ಪ್ರೇಕ್ಷಾಪೂರ್ವಕವ್ಯಾಖ್ಯಾನವಿಷಯಃ, ಅರ್ಥವಿವಕ್ಷಾಪೂರ್ವಕತ್ವೇ ಸತಿ ಪೌರುಷೇಯತ್ವಾತ್ ಎಂಬುದಾಗಿ ಅನುಮಾನಕ್ರಮವನ್ನು ತಿಳಿಯಬೇಕು. ಈ ಅನುಮಾನದಲ್ಲಿ ಪೌರುಷೇಯತ್ವ ಎಂಬ ವಿಶೇಷ್ಯವನ್ನು ಹೇಳದೇ ಅರ್ಥವಿವಕ್ಷಾಪೂರ್ವಕತ್ವಾಭಾವಾತ್ ಎಂದಷ್ಟೇ ಹೇಳಿದರೆ ವೇದದಲ್ಲಿ ವ್ಯಭಿಚಾರ ಬರುತ್ತದೆ. ಅದಕ್ಕಾಗಿ ಪೌರುಷೇಯತ್ವಾತ್ ಎಂಬ ವಿಶೇಷ್ಯದಳವನ್ನು ನೀಡಬೇಕು. ಪೌರುಷೇಯತ್ವಾತ್ ಎಂಬ ವಿಶೇಷ್ಯದಳವನ್ನಷ್ಟೇ ನೀಡಿದರೆ ಸ್ಮೃತಿವಾಕ್ಯದಲ್ಲಿ ವ್ಯಭಿಚಾರ ಬರುತ್ತದೆ. ಅದಕ್ಕೋಸ್ಕರ ಅರ್ಥವಿವಕ್ಷಾಪೂರ್ವಕತ್ವಾಭಾವ ಎಂಬ ವಿಶೇಷಣವನ್ನು ನೀಡಬೇಕು. ಈ ಅನುಮಾನದಲ್ಲಿ ಮೊದಲು ವ್ಯತಿರೇಕವ್ಯಾಪ್ತಿಯನ್ನು ಹೇಳುತ್ತಿದ್ದಾರೆ. ಈ ವ್ಯತಿರೇಕವ್ಯಾಪ್ತಿಯು ಅನ್ವಯವ್ಯಾಪ್ತಿಗೆ ಸಾಧಕವಾಗಿರುವ ಕಾರಣ ಮೊದಲೇ ಇದನ್ನು ಹೇಳಿದ್ದಾರೆ – 'ಅರ್ಥವಿವಕ್ಷಾ-





ಪೂರ್ವಕತ್ವ' ಇತ್ಯಾದಿ ವಾಕ್ಯದಿಂದ. ಯಃ ವ್ಯಾಖ್ಯೇಯಃ ಸಃ ಅರ್ಥವಿವಕ್ಷಾಪೂರ್ವಕಃ ಎಂಬುದು ಇಲ್ಲಿರುವ ವ್ಯತಿರೇಕವ್ಯಾಪ್ತಿ. ಈ ಅನುಮಾನದಲ್ಲಿ ಪೌರುಷೇಯತ್ವವನ್ನು ವಿವಕ್ಷಿಸಿರುವುದರಿಂದ ಅಪೌರುಷೇಯವಾದ ವೇದವು ಅರ್ಥವಿವಕ್ಷಾಪೂರ್ವಕತ್ವರಹಿತವಾದರೂ ವ್ಯಾಖ್ಯಾನ ಮಾಡಲು ಅರ್ಹವಾಗಿದೆ ಎಂದು ತಿಳಿಯಬೇಕು. ಆದ್ದರಿಂದ ವ್ಯಾಖ್ಯಾನಕ್ಕೆ ಅರ್ಹವಾದ ಸ್ಮೃತ್ಯಾದಿಗಳಲ್ಲಿ ವಿಶೇಷಣ -ವಿಲ್ಲದ ಕಾರಣ ಅರ್ಥವಿವಕ್ಷಾಪೂರ್ವಕತ್ವಾಭಾವವಿಶಿಷ್ಟಪೌರುಷೇಯತ್ವಾಭಾವವೆಂಬ ವಿಶಿಷ್ಟಾಭಾವವು ಪ್ರಾಪ್ತವಾಗುತ್ತದೆ. ವ್ಯಾಖ್ಯಾನಕ್ಕೆ ಅರ್ಹವಾದ ವೇದದಲ್ಲಿ ಪೌರುಷೇಯತ್ವವೆಂಬ ವಿಶೇಷ್ಯವು ಇಲ್ಲದ ಕಾರಣ ಅರ್ಥವಿವಕ್ಷಾಪೂರ್ವಕತ್ವಾಭಾವವಿಶಿಷ್ಟಪೌರುಷೇಯತ್ವಾಭಾವ ಎಂಬ ವಿಶಿಷ್ಟಾಭಾವವು ಪ್ರಾಪ್ತವಾಗುತ್ತದೆ. ಹೀಗೆ ಶ್ರುತಿ ಹಾಗೂ ಸ್ಮೃತಿಗಳಲ್ಲಿ ವಿಶಿಷ್ಟಾಭಾವರೂಪವಾದ ಹೇತುವು ಬರುತ್ತದೆಂದು ತಿಳಿಯಬೇಕು. ಆದ್ದರಿಂದ 'ಯಃ ವ್ಯಾಖ್ಯೇಯಃ ಸಃ ಅರ್ಥವಿವಕ್ಷಾಪೂರ್ವಕತ್ವಾಭಾವವಿಶಿಷ್ಟಪೌರು-ಷೇಯತ್ವಾಭಾವವಾನ್' ಎಂಬುದಾಗಿ ಸ್ಪಷ್ಟವಾಗಿ ವ್ಯತಿರೇಕವ್ಯಾಪ್ತಿಯನ್ನು ಹೇಳಿದಂತಾಯಿತು. ಹೀಗೆ ವ್ಯತಿರೇಕವ್ಯಾಪ್ತಿಯ ಮೂಲಕ ಅನ್ವಯವ್ಯಾಪ್ತಿಯನ್ನು 'ನ ಹಿ' ಇತ್ಯಾದಿವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಅರ್ಥವಿವಕ್ಷಾಪೂರ್ವಕತ್ವವೆಂಬ ಹೇತುವು ಅಪ್ರಯೋಜಕವಾದರೆ ಅಕಾರಾದಿ ಮಾತೃಕೆಗಳನ್ನೂ ಕೂಡ ವ್ಯಾಖ್ಯಾನ ಮಾಡಬೇಕಾಗುತ್ತದೆ.

ವಾಕ್ಯಾರ್ಥಚಂದ್ರಿಕಾದಲ್ಲಿ ವ್ಯಾಖ್ಯಾನಮಾಡಬಾರದೆನ್ನಲು ಅರ್ಥವಿವಕ್ಷಾಪೂರ್ವಕತ್ವಾಭಾವವೇ ಹೇತುವಾಗಿದೆಯೆಂದು ಹೇಳಿದ್ದಾರೆ. ಅರ್ಥವಿವಕ್ಷಾಪೂರ್ವಕತ್ವ ಎಂದರೆ ಅರ್ಥವನ್ನು ತಿಳಿಸುವ ಉದ್ದೇಶ ಇರುವಿಕೆ ಎಂದರ್ಥ. ಇದು ವೇದದಲ್ಲೂಕೂಡ ಸಾಧಾರಣವಾಗಿವೆ. ವೇದದಿಂದ ವ್ಯಾವೃತ್ತವಾದ ವಕ್ತ್ರ-ವಿವಕ್ಷಾಪೂರ್ವಕತ್ವವನ್ನು ವಿವಕ್ಷಿಸಬಾರದು. ಈ ಅರ್ಥವನ್ನು ಪರಿಹಾರಗ್ರಂಥಕ್ಕೆ ಅನುಗುಣವಾಗಿ ತಿಳಿಯಬೇಕು. 'ಅರ್ಥ' ಇತ್ಯಾದಿಗ್ರಂಥದಿಂದ ಸ್ಮೃತಿಯು ವ್ಯತಿರೇಕದೃಷ್ಟಾಂತವಾಗಿದೆ. ಮಾತೃಕಾ ರೂಪ-ಗಳು ಅನ್ವಯದೃಷ್ಟಾಂತವಾಗಿವೆ – ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

## ಸುಧಾಪರಿಮಳಸಾರ

'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಆಚಾರ್ಯರು ವ್ಯಾಖ್ಯಾನ ಮಾಡಲು ಹೊರಟಿದ್ದಾರೆ. ಆದರೆ ಯಾವುದೇ ಗ್ರಂಥವನ್ನು ವ್ಯಾಖ್ಯಾನ ಮಾಡಬೇಕಾದರೆ ಆ ಗ್ರಂಥವು ಅರ್ಥವಿವಕ್ಷಾಪೂರ್ವಕವಾಗಿರಬೇಕು. ಗ್ರಂಥವನ್ನು ರಚನೆ ಮಾಡಿದವನು ವಿಶೇಷ-ವಾದ ಮತ್ತು ಗಹನವಾದ ಅರ್ಥಗಳಿರುವಂತೆ ಆ ಗ್ರಂಥವನ್ನು ರಚನೆ ಮಾಡಿರಬೇಕು. ಕ, ಖ, ಗ, ಘ, ಙ ಇತ್ಯಾದಿ ವರ್ಣಮಾಲೆಯನ್ನು ಯಾರೂ ಕೂಡ ವ್ಯಾಖ್ಯಾನ ಮಾಡುವುದಿಲ್ಲ.

ಬಾಲಕರ ವಾಕ್ಯ, ಗಿಳಿ ವಾಕ್ಯಗಳನ್ನು ವ್ಯಾಖ್ಯಾನ ಮಾಡಲು ಯಾರೂ ಪ್ರವೃತ್ತರಾಗುವುದಿಲ್ಲ. ಆದ್ದರಿಂದ ಅರ್ಥವಿವಕ್ಷಾಪೂರ್ವಕವಾಗಿದ್ದರಷ್ಟೇ ವ್ಯಾಖ್ಯಾನಕ್ಕೆ ಅರ್ಹವಾಗುತ್ತದೆ. ಬ್ರಹ್ಮ-ಮೀಮಾಂಸಾಶಾಸ್ತ್ರವು ಹಾಗೆ ಅರ್ಥವಿವಕ್ಷಾಪೂರ್ವಕವಾಗಿದೆಯೆನ್ನಲು ಪ್ರಮಾಣವಿಲ್ಲ. ಕೇವಲ ಬರೆದಿದ್ದಾರೆಂಬ ಕಾರಣದಿಂದ ವ್ಯಾಖ್ಯಾನ ಮಾಡಬಾರದು. ಪ್ರೇಕ್ಷಾವಂತರು ಬರೆದಿದ್ದಾ-ರೆಂಬುದು ಇನ್ನೂ ನಿಶ್ಚಯವಾಗಿಲ್ಲ. ಒಂದು ವೇಳೆ ವೇದವ್ಯಾಸರು ಪ್ರೇಕ್ಷಾವಂತರೆಂದು ನಿಶ್ಚಯವಾಗಿದ್ದರೂ ಕೂಡ ಕೇವಲ ಜಪಪಾರಾಯಣಾದಿಗಳಿಗೋಸ್ಕರ ಈ ಗ್ರಂಥವನ್ನು ರಚನೆ ಮಾಡಿರಬಹುದು. ಆದ್ದರಿಂದ ಆಚಾರ್ಯರು ಈ ಗ್ರಂಥವನ್ನು ಏಕೆ ವ್ಯಾಖ್ಯಾನ ಮಾಡಲು ಹೊರಟಿದ್ದಾರೆ?

## ಪರಿಮಳವೈಶಿಷ್ಟ್ಯ

* ಈ ಗ್ರಂಥವು ವ್ಯಾಖ್ಯಾನಕ್ಕೆ ಅರ್ಹವಲ್ಲ ಎನ್ನಲು ಸ್ಪಷ್ಟವಾಗಿ ಅನುಮಾನವನ್ನು ತೋರಿಸಿ ವ್ಯತಿರೇಕವ್ಯಾಪ್ತಿಯನ್ನು ಕಾವ್ಯಾದಿಗಳಲ್ಲಿ ಹೇಳಿರುತ್ತಾರೆ.

* ಅನುಮಾನದಲ್ಲಿ ಹೇತ್ವಸಿದ್ಧಿಯು ಪ್ರಾಪ್ತವಾದರೆ ಮತ್ತೊಂದು ಅನುಮಾನಪ್ರಯೋಗ ಮಾಡುವ ಮೂಲಕ ಹೇತುವನ್ನು ಸಮರ್ಥನೆ ಮಾಡಿದ್ದಾರೆ. ಪುನಃ ಈ ಅನುಮಾನವೂ ಕೂಡ ಹೇತ್ವಸಿದ್ಧಿಯಿಂದ ಕೂಡಿದೆ ಎಂದು ಆಕ್ಷೇಪ ಮಾಡಿದರೆ ಮತ್ತೊಂದು ಅನುಮಾನದಿಂದ ಎರಡನೆಯ ಅನುಮಾನವು ನಿರ್ದುಷ್ಟವೆಂದು ಸಮರ್ಥಿಸಿದ್ದಾರೆ.

## ವ್ಯಾಖ್ಯಾನಕ್ಕೆ ಯಾವುದು ಯೋಗ್ಯ?

**ಶ್ರೀಮನ್ನ್ಯಾಯಸುಧಾ– ನ ಚ ಅರ್ಥವಿವಕ್ಷಾಮಾತ್ರೇಣ ಉಪಾದೇಯ-ತಯಾ ವ್ಯಾಖ್ಯಾನಂ ಯುಕ್ತಮ್ । ವಿಪ್ರಲಂಭಕಾದಿವಾಕ್ಯವ್ಯಾಖ್ಯಾನಪ್ರಸಂಗಾತ್ । ಕಿಂ ನಾಮ ಯಾಥಾರ್ಥ್ಯೇ ಚ ಸತಿ । ನ ಚಾಸ್ಯ ಯಾಥಾರ್ಥ್ಯೇ ಮಾನಮಸ್ತಿ ।**

'ಅರ್ಥವನ್ನು ವಿವಕ್ಷಿಸುವ ಮೂಲಕ ರಚಿತವಾಗಿದೆ' ಎಂದು ಹೇಳುವ ಕಾರಣದಿಂದ-ಷ್ಟೇ ಉಪಾದೇಯವೆಂದು ಅಂಗೀಕರಿಸಿ ಬ್ರಹ್ಮಸೂತ್ರಗಳನ್ನು ವ್ಯಾಖ್ಯಾನ ಮಾಡುವುದು ಯುಕ್ತವಾಗುವುದಿಲ್ಲ. ಮೋಸಗಾರನ ಮಾತೂ ಕೂಡ ಅರ್ಥವಿವಕ್ಷಾಪೂರ್ವಕ-





ವಾಗಿಯೇ ಇರುತ್ತದೆ. ಅದನ್ನೂ ಕೂಡ ವ್ಯಾಖ್ಯಾನ ಮಾಡಬೇಕಾಗುತ್ತದೆ. ಆದ್ದರಿಂದ ಯಾವುದು ಯಥಾರ್ಥವಾಗಿದ್ದು ಅರ್ಥವಿವಕ್ಷಾಪೂರ್ವಕವಾಗಿರುತ್ತದೋ ಅದನ್ನು ಮಾತ್ರ ವ್ಯಾಖ್ಯಾನ ಮಾಡಬೇಕು. ಪ್ರಕೃತ ಬ್ರಹ್ಮಸೂತ್ರಗಳಲ್ಲಿ ಅಂಥ ಯಾಥಾರ್ಥ್ಯವಿದೆ ಎನ್ನಲು ಯಾವುದೇ ಪ್ರಮಾಣವಿಲ್ಲ.

**ಶ್ರೀಮನ್ನ್ಯಾಯಸುಧಾ– ತದ್ಭಾವೇಽಪಿ ತಥಾವಿಧವಾಕ್ಯಾಂತರಪರಿತ್ಯಾಗೇನ ಅಸ್ಯೈವ ವ್ಯಾಖ್ಯಾನೇ ಕಾರಣಂ ವಕ್ತವ್ಯಮ್ ಇತ್ಯಾಶಂಕಾನಿರಾಸಾಯ 'ಪರಮಾಖ್ಯವಿದ್ಯಾ' ಇತ್ಯುಕ್ತಮ್ ।**

ಒಂದು ವೇಳೆ ಬ್ರಹ್ಮಸೂತ್ರಗಳಲ್ಲಿ ಯಾಥಾರ್ಥ್ಯವಿದ್ದರೂ ಕೂಡ ಅಂಥ ವಾಕ್ಯಾಂತರಗಳು ಬೇಕಾದಷ್ಟು ಇವೆ. ಅವುಗಳನ್ನೆಲ್ಲಾ ಬಿಟ್ಟು ಈ ಗ್ರಂಥವನ್ನೇ ವ್ಯಾಖ್ಯಾನ ಮಾಡಲು ಕಾರಣವಿಲ್ಲ. ಈ ಆಶಂಕೆಯನ್ನು ಪರಿಹರಿಸಲು ಆಚಾರ್ಯರು 'ಪರಮಾಖ್ಯವಿದ್ಯಾ' ಎಂಬ ವಿಶೇಷಣವನ್ನು ನೀಡಿರುತ್ತಾರೆ.

## ವಿದ್ಯಾ ಪದದಿಂದ ಪರಿಹಾರವಾಗುವ ಮತ್ತೊಂದು ಪೂರ್ವಪಕ್ಷ

**ಪರಿಮಳ– ವಿದ್ಯಾಪದಸ್ಯ ವ್ಯಾವರ್ತ್ಯನಂತರಂ ಚಾಹ – ನ ಚೇತಿ ॥ ಕಿಂ ಚ ಇತಿ ಚಾರ್ಥಃ । ಖ್ಯಾತ್ಯರ್ಥಮ್ ಅಪ್ರಮಾಣತ್ವೇನ ನಿಶ್ಚಿತಬೌದ್ಧಾದಿಗ್ರಂಥವ್ಯಾಖ್ಯಾನದರ್ಶನೇನ ವ್ಯಭಿಚಾರನಿರಾಸಾಯ 'ಉಪಾದೇಯತಯಾ' ಇತ್ಯುಕ್ತಮ್ । 'ಪುರುಷಾರ್ಥಹೇತುತಯಾ' ಇತ್ಯರ್ಥಃ ।**

'ಪರಮಾಖ್ಯವಿದ್ಯಾ' ಎಂಬಲ್ಲಿರುವ 'ವಿದ್ಯಾ' ಎಂಬ ಪದದಿಂದ ಪರಿಹಾರವಾಗುವ ಮತ್ತೊಂದು ಪೂರ್ವಪಕ್ಷವನ್ನು 'ನ ಚ' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ. ನಚ ಎಂಬಲ್ಲಿರುವ ಚಶಬ್ದವು ಕಿಂಚ ಎಂಬರ್ಥದಲ್ಲಿ ಪ್ರವೃತ್ತವಾಗಿದೆ. ಅಪ್ರಮಾಣವೆಂದು ನಿಶ್ಚಯವಿದ್ದರೂ ಕೂಡ ಕೇವಲ ಕೀರ್ತಿಗೋಸ್ಕರ ಬೌದ್ಧಾದಿಗ್ರಂಥಗಳನ್ನು ವ್ಯಾಖ್ಯಾನ ಮಾಡು-





ವುದು ಲೋಕದಲ್ಲಿ ಕಂಡಿದೆ. ಈ ಕಾರಣದಿಂದ ಕೇವಲ ಅರ್ಥವಿವಕ್ಷಾಪೂರ್ವಕತ್ವವು ವ್ಯಭಿಚರಿತವಾಗಿದೆ. ಇದನ್ನು ಪರಿಹಾರಮಾಡಲು 'ಉಪಾದೇಯತಯಾ' ಎಂಬ ವಿಶೇಷಣವನ್ನು ನೀಡಿದ್ದಾರೆ. ಪುರುಷಾರ್ಥಕ್ಕೆ ಉಪಯೋಗಿಯಾಗಿಗೆ ಎಂಬ ಭಾವನೆಯಿಂದ ಎಂಬುದು ಇದರ ಅರ್ಥ. ಬೌದ್ಧಾದಿಗ್ರಂಥಗಳು ಪುರುಷಾರ್ಥಕ್ಕೆ ಉಪಯೋಗಿಯಾಗಿವೆ ಎಂಬ ಭಾವನೆಯಿಂದ ಯಾರೂ ಕೂಡ ವ್ಯಾಖ್ಯಾನ ಮಾಡುವುದಿಲ್ಲ. ಹಾಗಾಗಿ ಪುರುಷಾರ್ಥೋಪಯೋಗಿಯಾದ ಅರ್ಥವಿವಕ್ಷಾಪೂರ್ವಕತ್ವ ಎಂಬ ಹೇತುವೇ ಬೌದ್ಧಾದಿಗ್ರಂಥಗಳಲ್ಲಿ ಇಲ್ಲದ ಕಾರಣ ವ್ಯಭಿಚಾರ-ದೋಷವು ಬರುವುದಿಲ್ಲ.

## ಹೇತ್ವಸಿದ್ಧಿಪರಿಹಾರಕ್ಕಾಗಿ ಮತ್ತೊಂದು ಅನುಮಾನ

ಪರಿಮಳ– 'ನ ಚಾಸ್ಯ' ಇತ್ಯುಪನಯಃ । ಅತ್ರಾಪಿ ಪ್ರಯೋಗೌ । 'ವಿಮತಂ ನೋಪಾದೇಯತಯಾ ವ್ಯಾಖ್ಯೇಯಮ್ । ಅಯಥಾರ್ಥಜ್ಞಾನಜನಕತ್ವಾತ್ ವಿಪ್ರ-ಲಂಭಾದಿವಾಕ್ಯವತ್' ಇತಿ । ನ ಚಾಸಿದ್ಧೋ ಹೇತುಃ । 'ವಿಮತಂ ನ ಯಥಾರ್ಥಮ್, ಯಾಥಾರ್ಥ್ಯನಿರ್ಣಾಯಕಮಾನಶೂನ್ಯತ್ವಾತ್ ವಿಪ್ರಲಂಭಾದಿವಾಕ್ಯವತ್' ಇತಿ ।

'ನ ಚಾಸ್ಯ' ಎಂಬ ವಾಕ್ಯದಿಂದ ಉಪನಯವನ್ನು ಹೇಳಿದ್ದಾರೆ. ಇಲ್ಲಿ ಅನುಮಾನಪ್ರಯೋಗ ಹೀಗಿದೆ – 'ವಿಮತಂ ನೋಪಾದೇಯತಯಾ ವ್ಯಾಖ್ಯೇಯಮ್ । ಅಯಥಾರ್ಥಜ್ಞಾನಜನಕ-ತ್ವಾತ್ ವಿಪ್ರಲಂಭಾದಿವಾಕ್ಯವತ್' ಎಂದು. ಇಲ್ಲಿರುವ ಅಯಥಾರ್ಥಜ್ಞಾನಜನಕತ್ವವೆಂಬ ಹೇತುವು ಅಸಿದ್ಧವೆನ್ನಬಾರದು. 'ವಿಮತಂ ನ ಯಥಾರ್ಥಮ್, ಯಾಥಾರ್ಥ್ಯನಿರ್ಣಾಯಕ-ಮಾನಶೂನ್ಯತ್ವಾತ್ ವಿಪ್ರಲಂಭಾದಿವಾಕ್ಯವತ್' ಎಂಬ ಅನುಮಾನದಿಂದ ಅಯಥಾರ್ಥಜ್ಞಾನ-ಜನಕತ್ವವು ಸಿದ್ಧವಾಗುತ್ತದೆ.

## ಪರಮಾಖ್ಯಪದದ ವ್ಯಾಖ್ಯಾನ

ಪರಿಮಳ– 'ಪರಮಾಖ್ಯ'ಪದವ್ಯಾವರ್ತ್ಯಮಾಹ – ತದ್ಭಾವೇಽಪೀತಿ ॥ 'ಯಾಥಾರ್ಥ್ಯ-ಭಾವೇಽಪಿ' ಇತ್ಯರ್ಥಃ ।





'ಪರಮಾಖ್ಯಾ' ಎಂಬ ಪದದಿಂದ ಪರಿಹಾರವಾಗುವ ಆಕ್ಷೇಪವನ್ನು 'ತದ್ಭಾವೇಽಪಿ' ಎಂಬ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ. ಯಥಾರ್ಥಜ್ಞಾನವನ್ನು ಹುಟ್ಟಿಸುವುದಿದ್ದರೂ ಕೂಡ ಎಂಬುದು ಇದರ ಅರ್ಥ.

ವಿಶೇಷವಿಚಾರ – ಪುರುಷಾರ್ಥೋಪಯೋಗಿಯಾಗಿದೆ ಎಂಬ ಭಾವನೆಯಿಂದ ವ್ಯಾಖ್ಯಾನ ಮಾಡಬೇಕು. ಇದೇ ಸಾಧಕಲಿಂಗವಾಗುತ್ತದೆ. ಈ ಹೇತುವು ಬೌದ್ಧಾದಿಗ್ರಂಥಗಳಲ್ಲಿ ಸಿದ್ಧವಾಗಿರುವುದಿಲ್ಲ ಎಂಬುದು ಉಪನಯವಾಕ್ಯವಾಗಿದೆ. ಈ ಮೂಲದಲ್ಲಿ ಅನುಮಾನಪ್ರಯೋಗವನ್ನು ಹೀಗೆ ಹೇಳಿದಂತಾಯಿತು. 'ವಿಮತಂ ನೋಪಾದೇಯತಯಾ ವ್ಯಾಖ್ಯೇಯಮ್ । ಅಯಥಾರ್ಥಜ್ಞಾನಜನಕತ್ವಾತ್ ವಿಪ್ರಲಂಭಾದಿವಾಕ್ಯವತ್' ವಂಚಕರ ಮಾತುಗಳು ಹೇಗೆ ಅಯಥಾರ್ಥಜ್ಞಾನಜನಕವಾಗಿವೆ ಮತ್ತು ವ್ಯಾಖ್ಯಾನ ಮಾಡಲು ಅನರ್ಹವಾಗಿವೆಯೋ ಅದರಂತೆ ಬ್ರಹ್ಮಸೂತ್ರವೂ ಕೂಡ ಅಯಥಾರ್ಥಜ್ಞಾನಜನಕವಾಗಿರುವುದರಿಂದ ವ್ಯಾಖ್ಯಾನ ಮಾಡಲು ಯೋಗ್ಯವಲ್ಲ. ಈ ಅನುಮಾನದಲ್ಲಿ ಅಯಥಾರ್ಥಜ್ಞಾನಜನಕತ್ವವೆಂಬ ಹೇತುವೇ ಅಸಿದ್ಧವಾಗಿದೆಯೆಂದು ಹೇಳಬಾರದು. 'ವಿಮತಂ ನ ಯಥಾರ್ಥಂ ಯಾಥಾರ್ಥ್ಯನಿರ್ಣಾಯಕಮಾನಶೂನ್ಯತ್ವಾತ್' ಎಂಬ ಅನುಮಾನದಿಂದ ಬ್ರಹ್ಮಸೂತ್ರಗಳು ಯಥಾರ್ಥ-ವಾಗಿವೆ ಎಂದು ನಿರ್ಣಯಿಸಲು ಯಾವುದೇ ಪ್ರಮಾಣವಿಲ್ಲ. ಆದ್ದರಿಂದ ಯಥಾರ್ಥಗಳಲ್ಲಿ ಎಂಬುದಾಗಿ ಮತ್ತೊಂದು ಅನುಮಾನದಿಂದ ಹೇತುವನ್ನು ಸಾಧನೆ ಮಾಡಲಾಗುತ್ತದೆ.

ವಾಕ್ಯಾರ್ಥಚಂದ್ರಿಕಾ – ಏವಂ 'ವಿದ್ಯಾ'ಶಬ್ದಾರ್ಥತಯಾ ಅಭಿಮತಯಥಾರ್ಥಜ್ಞಾನಸಾಧನಾಂತರ್ಗತ-ಅರ್ಥಜ್ಞಾನಸಾಧನತಾಂಶನಿವರ್ತ್ಯಾಂ ಶಂಕಾಮ್ ಉತ್ಥಾಪ್ಯ, ಬ್ರಹ್ಮಸೂತ್ರೇಭ್ಯಃ ಉಪಯುಕ್ತಾರ್ಥಪ್ರತಿಭಾಸನೇನ ವಿಷಹರಮಂತ್ರವೈಷಮ್ಯಾತ್ 'ಪುನಸ್ತಸ್ಯಾರ್ಥವಿತ್ತಯೇ' ಇತ್ಯಾದ್ಯಾಗಮಾಚ್ಚ ಅರ್ಥಾವಬೋಧೋದ್ದೇಶಕತಾಸಿದ್ಧಿಃ ಇತ್ಯಾಶಂಕಾಯಾಂ, ತಥಾಪಿ ಸಿದ್ಧಾಂತ್ಯಭಿಮತಮ್ ಉಪಾದೇಯತಯಾ ವ್ಯಾಖ್ಯಾನಂ ತತ್ಪ್ರಯೋಜಕಾಭಾವಾನ್ನ ಸಂಭವತೀತ್ಯೇವಂರೂಪಾಂ ವಿದ್ಯಾಶಬ್ದಾರ್ಥಾಂತರ್ಗತಯಥಾರ್ಥಾಂಶನಿವರ್ತ್ಯಾಂ ಶಂಕಾಮ್ ಉತ್ಥಾಪಯತಿ – ನ ಚೇತಿ ॥

'ವಿದ್ಯಾ' ಶಬ್ದಕ್ಕೆ ಯಥಾರ್ಥಜ್ಞಾನಸಾಧನ ಎಂದರ್ಥ, ಇದರಲ್ಲಿ 'ಅರ್ಥಜ್ಞಾನ' ಎಂಬಂಶದಿಂದ ಪರಿಹಾರವಾಗುವ ಶಂಕೆಯನ್ನು ಮೊದಲು ತೋರಿಸಿದ್ದಾರೆ. ಅನಂತರ 'ಯಥಾರ್ಥ' ಎಂಬಂಶದಿಂದ ಪರಿಹಾರವಾಗುವ ಅಂಶವನ್ನು ''ನಚ'' ಇತ್ಯಾದಿ ವಾಕ್ಯದಿಂದ ತೋರಿಸಿದ್ದಾರೆ.





## ರಸಘಟ್ಟ

**ಯಾದುಪತ್ಯ – 'ತುಷ್ಯತು' ಇತಿ ನ್ಯಾಯೇನ ಆಹ – ನ ಚ ಅರ್ಥವಿವಕ್ಷಾಪೂರ್ವಕತ್ವೇತಿ ॥**

'ತುಷ್ಯತು ದುರ್ಜನಃ' ಇತಿ ನ್ಯಾಯದಿಂದ ಆಕ್ಷೇಪಪೂರ್ವಕವಾಗಿ 'ಅರ್ಥವಿವಕ್ಷಾಪೂರ್ವಕತ್ವ-ಮಾತ್ರೇಣ' ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ.

## ಅರ್ಥವಿವಕ್ಷೆ ಇದೆಯೆಂಬ ನಿಶ್ಚಯವಿದೆ

**ಆನಂದಃ – ನನು ಬ್ರಹ್ಮಾದಿಭಿಃ ಪ್ರಾರ್ಥನಾಯಾಂ ಕೃತಾಯಾಮ್ ಅಸ್ಯ ಪ್ರಣೀತತ್ವಾತ್ ಅರ್ಥವಿವಕ್ಷಾಪೂರ್ವಕತ್ವಂ ನಿಶ್ಚೀಯತೇ ಇತ್ಯಾಶಂಕ್ಯ ನಿಷೇಧತಿ – ನ ಚೇತಿ ॥ ಉಪಾದೇಯತಯಾ ಇತಿ ॥ 'ಏತದರ್ಥಜ್ಞಾನಂ ಮಮ ಹಿತಸಾಧನಮ್' ಇತಿ ಬುದ್ಧ್ಯಾ ಸ್ವೀಕಾರೇಣ – ಇತ್ಯರ್ಥಃ ।**

ಬ್ರಹ್ಮಾದಿಗಳೆಲ್ಲರೂ ಪ್ರಾರ್ಥನೆ ಮಾಡಿ ಈ ಬ್ರಹ್ಮಸೂತ್ರವನ್ನು ರಚನೆ ಮಾಡಿರುವ ಕಾರಣ ಅರ್ಥವಿವಕ್ಷಾಪೂರ್ವಕವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಅರ್ಥವಿವಕ್ಷಾಪೂರ್ವಕತ್ವವನ್ನು ನಿಶ್ಚಯ ಮಾಡಿಕೊಂಡು 'ನ ಚ' ಇತ್ಯಾದಿಯಾಗಿ ಆಕ್ಷೇಪ ಮಾಡುತ್ತಿದ್ದಾರೆ. ಉಪಾದೇಯತಯಾ ಎಂಬುದಕ್ಕೆ 'ಈ ಪದಾರ್ಥದ ಜ್ಞಾನವು ನನ್ನ ಹಿತಕ್ಕೆ ಸಾಧನವಾಗಿದೆ ಎಂಬ ಬುದ್ಧಿಯಿಂದ ಒಪ್ಪಿಕೊಂಡು' ಎಂದರ್ಥ.

## ಸುಧಾ -ಪರಿಮಳಸಾರ

ಬ್ರಹ್ಮಸೂತ್ರಗಳು ಅರ್ಥವಿವಕ್ಷಾಪೂರ್ವಕವಾಗಿ ರಚಿತವಾಗಿವೆಯೆಂದು ಒಪ್ಪೋಣ. ಅಂದ-ಮಾತ್ರಕ್ಕೆ ಪುರುಷಾರ್ಥಹೇತು ಎಂಬ ಭಾವನೆಯಿಂದ ವ್ಯಾಖ್ಯಾನಮಾಡುವುದು ಸರಿಯಲ್ಲ. ಹಾಗಾದಲ್ಲಿ ಮೋಸಗಾರನ ಮಾತೂ ಕೂಡ ಅರ್ಥವಿವಕ್ಷಾಪೂರ್ವಕವಾಗಿಯೇ ಇರುವುದರಿಂದ ಅದನ್ನು ವ್ಯಾಖ್ಯಾನ ಮಾಡಬೇಕಾದ ಪ್ರಸಂಗ ಬರುತ್ತದೆ. ಇನ್ನು ಯಾವುದು ಯಥಾರ್ಥ-ವಾಗಿದ್ದು ಅರ್ಥವಿವಕ್ಷಾಪೂರ್ವಕವಾಗಿದೆಯೋ ಅದನ್ನು ಮಾತ್ರ ವ್ಯಾಖ್ಯಾನಮಾಡಬೇಕೆಂದು ಅಂಗೀಕರಿಸಿದರೆ ವಿಪ್ರಲಂಭಕವಾಕ್ಯವು ಯಥಾರ್ಥವಾಗಿಲ್ಲದ ಕಾರಣ ವ್ಯಾಖ್ಯಾನಕ್ಕೆ ಯೋಗ್ಯ-ವಾಗುವುದಿಲ್ಲ ಎಂಬ ವಾದವೂ ಕೂಡ ತಪ್ಪು. ಬ್ರಹ್ಮಸೂತ್ರಗಳು ಯಥಾರ್ಥವಾಗಿವೆ ಎನ್ನುವುದರಲ್ಲಿ ಯಾವುದೇ ಪ್ರಮಾಣವಿಲ್ಲ. ಒಂದು ವೇಳೆ ಯಥಾರ್ಥವೆಂದು ಒಪ್ಪಿದರೂ ಕೂಡ ಅನೇಕ ಯಥಾರ್ಥವಾಕ್ಯಗಳಿರುವಾಗ ಅವುಗಳನ್ನೆಲ್ಲಾ ಬಿಟ್ಟು ಬ್ರಹ್ಮಸೂತ್ರಗಳನ್ನೇ





ವ್ಯಾಖ್ಯಾನ ಮಾಡಲು ಏನು ಕಾರಣ? ಈ ಪ್ರಶ್ನೆಗೆ ಉತ್ತರವನ್ನು ನೀಡುವುದಕ್ಕಾಗಿ 'ಪರಮಾಖ್ಯ-ವಿದ್ಯಾ' ಎಂಬ ಪ್ರಯೋಗವನ್ನು ಮಾಡಿರುತ್ತಾರೆ.

## 'ಪರಮಾಖ್ಯವಿದ್ಯಾ' ಎಂಬುದರ ವ್ಯಾಖ್ಯಾನ

**ಶ್ರೀಮನ್ನ್ಯಾಯಸುಧಾ– ಅಯಮಭಿಸಂಧಿಃ । ಅಸ್ತಿ ತಾವದಸ್ಮಿನ್ ಗ್ರಂಥೇ 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' ಇತ್ಯಾದೌ ಪರವಿದ್ಯಾಖ್ಯಾ । ತತ್ರ ವಿದ್ಯಾಶಬ್ದೇನ ಅರ್ಥವಿವಕ್ಷಾ ಯಾಥಾರ್ಥ್ಯಂ ಚ ಅಸ್ಯಾವಗಮ್ಯತೇ । ಯಥಾರ್ಥ-ಜ್ಞಾನತತ್ಸಾಧನಯೋಃ 'ವಿದ್ಯಾ'ಶಬ್ದಸ್ಯ ಯೋಗರೂಢಿಭ್ಯಾಂ ಪ್ರವೃತ್ತತ್ವಾತ್ । 'ಸಂಜ್ಞಾಯಾಂ ಸಮಜನಿಷದ' ಇತ್ಯತ್ರ ಸಂಜ್ಞಾಯಾಮ್ ಇತ್ಯನುವೃತ್ತೇಃ । ಪರಶಬ್ದೇನ ಚ ಯಥಾರ್ಥಾದ್ವಾಕ್ಯಾಂತರಾತ್ ಉತ್ಕರ್ಷಃ । ತದೇವಮ್ 'ಆಗಮೇ-ನಾಸ್ಯ ಸರ್ವೋತ್ತಮಪ್ರಾಮಾಣ್ಯಪ್ರತೀತೇಃ ಗಹನಾರ್ಥತ್ವಾಚ್ಚ ಉಪಪನ್ನ-ಮನ್ಯಪರಿತ್ಯಾಗೇನಾಸ್ಯೈವ ವ್ಯಾಖ್ಯಾನಮ್' ಇತಿ ॥**

'ಪರಮಾಖ್ಯವಿದ್ಯಾ' ಇತ್ಯಾದಿ ಅನುವ್ಯಾಖ್ಯಾನದ ಅಭಿಪ್ರಾಯ ಹೀಗಿದೆ – 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವ ಅಪರಾ ಚ' ಇತ್ಯಾದಿ ಆಥರ್ವಣಶ್ರುತಿಯಲ್ಲಿ ಬ್ರಹ್ಮ-ಮೀಮಾಂಸಾಶಾಸ್ತ್ರವನ್ನು 'ಪರವಿದ್ಯಾ' ಎಂದು ಕರೆಯಲಾಗಿದೆ. ಇಲ್ಲಿ ವಿದ್ಯಾಶಬ್ದದಿಂದ ಈ ಗ್ರಂಥವು ಅರ್ಥವಿವಕ್ಷಾಪೂರ್ವಕವಾಗಿದೆ ಮತ್ತು ಯಥಾರ್ಥವಾಗಿದೆ ಎಂದು ತಿಳಿಯುತ್ತದೆ. ಏಕೆಂದರೆ, ಯಥಾರ್ಥಜ್ಞಾನ ಹಾಗೂ ಯಥಾರ್ಥಜ್ಞಾನಸಾಧನ ಈ ಎರಡೂ ಅರ್ಥಗಳಲ್ಲಿ ವಿದ್ಯಾಶಬ್ದವು ಯೋಗರೂಢಿಗಳಿಂದ ಪ್ರವೃತ್ತವಾಗಿದೆ. 'ಸಂಜ್ಞಾಯಾಂ ಸಮಜನಿಷದ' ಇತ್ಯಾದಿ ಸೂತ್ರದಲ್ಲಿ ಸಂಜ್ಞಾಯಾಂ ಎಂಬುದು ಅನುವೃತ್ತವಾಗುತ್ತದೆ. ಮತ್ತು ಪರಶಬ್ದದಿಂದ ಯಥಾರ್ಥಜ್ಞಾನಸಾಧನಗಳಾದ ಬೇರೆ ವಾಕ್ಯಗಳಿಗಿಂತ ವೈಶಿಷ್ಟ್ಯವನ್ನು ಈ ಶಾಸ್ತ್ರಕ್ಕೆ ತಿಳಿಸ-ಲಾಗಿದೆ. ಹೀಗೆ ಆಗಮದಿಂದಲೇ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸರ್ವೋತ್ತಮಪ್ರಾಮಾ-ಣ್ಯವು ತಿಳಿದು ಬರುತ್ತದೆ. ಮತ್ತು ಗಹನಾರ್ಥವುಳ್ಳದ್ದಾಗಿದೆ ಎಂದೂ ಕೂಡ ಸ್ಪಷ್ಟವಾಗು-

ತ್ತದೆ. ಹಾಗಾಗಿ ಯಥಾರ್ಥವಾದ ಬೇರೆ ವಾಕ್ಯಗಳನ್ನು ಬಿಟ್ಟು ಇದೇ ಗ್ರಂಥವನ್ನು ವ್ಯಾಖ್ಯಾನ ಮಾಡಲು ಆಚಾರ್ಯರು ಪ್ರವೃತ್ತರಾಗಿದ್ದಾರೆ.

ವಿವರಣೆ – 'ಪರಮಾಖ್ಯವಿದ್ಯಾ....' ಎಂಬುದರ ಅಭಿಪ್ರಾಯ ಹೀಗಿದೆ—ಆಥರ್ವಣಾದಿ ಉಪನಿಷತ್ತುಗಳಲ್ಲಿ 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' ಎಂಬುದಾಗಿ ಪ್ರಕೃತವಾದ ಬ್ರಹ್ಮಸೂತ್ರಗಳನ್ನು ಪರವಿದ್ಯೆ ಎಂದು ಕರೆದಿದ್ದಾರೆ.

ಬ್ರಹ್ಮಸೂತ್ರಗಳನ್ನು 'ವಿದ್ಯೆ' ಎಂದು ಕರೆದದ್ದರಿಂದಲೇ ಅವು ಅರ್ಥವಿವಕ್ಷಾಪೂರ್ವಕವಾಗಿವೆ ಎಂದೂ ಯಥಾರ್ಥವಾಗಿವೆ ಎಂದೂ ತಿಳಿಯುತ್ತದೆ. ಏಕೆಂದರೆ 'ವೇದನಂ ವಿದ್ಯಾ' (ಜ್ಞಾನವು ವಿದ್ಯೆ) ಎಂದು ಯೋಗದಿಂದಲೂ, 'ವಿದ್ಯಯಾ ಅಮೃತಂ ಅಶ್ನುತೇ' (ಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾನೆ) ಇತ್ಯಾದಿಸ್ಥಳಗಳಲ್ಲಿ ರೂಢಿಯಿಂದಲೂ ವಿದ್ಯಾಶಬ್ದವು ಯಥಾರ್ಥಜ್ಞಾನದಲ್ಲಿ ಪ್ರವೃತ್ತವಾಗಿದೆ. 'ವೇದ್ಯತೇ ಅರ್ಥಃ ಅನಯಾ ಇತಿ ವಿದ್ಯಾ'(ಯಾವುದರಿಂದ ವಸ್ತುವು ತಿಳಿಯುತ್ತದೆಯೋ ಅದು ವಿದ್ಯೆ) ಎಂದು ಯೋಗದಿಂದ 'ಸಾ ವಿದ್ಯಾ ತನ್ಮತಿರ್ಯಯಾ' ಇತ್ಯಾದಿಸ್ಥಳಗಳಲ್ಲಿ ರೂಢಿಯಿಂದಲೂ ವಿದ್ಯಾಶಬ್ದವು ಯಥಾರ್ಥಜ್ಞಾನಸಾಧನದಲ್ಲಿ ಪ್ರವೃತ್ತವಾಗಿದೆ.

ವಿದ್ಯಾಶಬ್ದವು ಯಥಾರ್ಥಜ್ಞಾನ ಹಾಗೂ ಯಥಾರ್ಥಜ್ಞಾನಸಾಧನದಲ್ಲಿ ಪ್ರವೃತ್ತವಾಗಿದೆ ಎಂಬುದನ್ನು 'ಸಂಜ್ಞಾಯಾಂ ಸಮಜನಿಷದ...' ಎಂಬ ಪಾಣಿನೀಯಸೂತ್ರವು ತಿಳಿಸುತ್ತದೆ. ಈ ಸೂತ್ರಕ್ಕೆ 'ಭಾವೇ' ಎಂಬ ಅಧಿಕಾರಸೂತ್ರವನ್ನು ಹಾಗೆಯೇ 'ಅಕರ್ತರಿ ಚ ಕಾರಕೇ ಸಂಜ್ಞಾಯಾಂ' ಎಂಬ ಸೂತ್ರವನ್ನು ಅನುವೃತ್ತಿ ಮಾಡಿಕೊಳ್ಳಲಾಗಿದೆ. 'ಪರವಿದ್ಯಾ' ಎಂಬಲ್ಲಿರುವ 'ಪರ'ಶಬ್ದವು ಯಥಾರ್ಥವಾದ ಬೇರೆ ವಾಕ್ಯಗಳಿಗಿಂತಲೂ ಬ್ರಹ್ಮಸೂತ್ರಗಳಲ್ಲಿರುವ ಉತ್ಕೃಷ್ಟತ್ವವನ್ನು ಸೂಚಿಸುತ್ತದೆ. ಹೀಗೆ 'ದ್ವೇ ವಿದ್ಯೇ....' ಇತ್ಯಾದಿ ಆಗಮದಿಂದ ಬ್ರಹ್ಮಸೂತ್ರಗಳು ಸರ್ವೋತ್ತಮಪ್ರಮಾಣವೆಂದು ಪ್ರತೀತವಾಗಿವೆ. ಹಾಗೆಯೇ ಗಹನವಾದ ಅಭಿಪ್ರಾಯವನ್ನು ಬ್ರಹ್ಮಸೂತ್ರಗಳು ಒಳಗೊಂಡಿವೆ. ಆದ್ದರಿಂದ ಯಥಾರ್ಥವಾದ ಬೇರೆ ವಾಕ್ಯಗಳನ್ನು ಬಿಟ್ಟು ಈ ಗ್ರಂಥಕ್ಕೇ ವ್ಯಾಖ್ಯಾನ ಮಾಡಲು ಆನಂದತೀರ್ಥರು ಉದ್ಯುಕ್ತರಾಗಿದ್ದಾರೆ.

## ಹಿಂದಿನ ಮೂರು ಆಕ್ಷೇಪಗಳಿಗೆ ಉತ್ತರ

ಪರಿಮಳ– ಕಥಮ್ ಅನೇನೋಕ್ತಶಂಕಾನಿರಾಸಃ? ಇತ್ಯತ ಆಹ – ಅಯಮಭಿಸಂಧಿ-





ರಿತಿ ॥ ಆದ್ಯಂ ಶಂಕಾದ್ವಯಂ ತಾವತ್ ನಿರಾಹ – ಅಸ್ತೀತ್ಯಾದಿನಾ ॥ ಅಸ್ಮಿನ್ ಗ್ರಂಥೇ ॥ 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಬ್ರಹ್ಮಮೀಮಾಂಸಾತ್ಮಕಗ್ರಂಥೇ । ವಿಷಯಸಪ್ತಮೀ-ಯಮ್ । ಇತ್ಯಾದೌ ॥ 'ಆಥರ್ವಣಾದಿ ಉಪನಿಷದಿ ಬ್ರಹ್ಮಸೂತ್ರಸಂದರ್ಭವಾಚಿತಯಾ ಪರವಿದ್ಯಾಪದಪ್ರಯೋಗಃ ಶ್ರೂಯತೇ' ಇತ್ಯರ್ಥಃ । 'ಪರವಿದ್ಯಾ'ಶಬ್ದಸ್ಯ ಬ್ರಹ್ಮಸೂತ್ರ-ವಾಚಿತ್ವಮ್ ಅಗ್ರೇ ವ್ಯಕ್ತಮ್ । ಅಸ್ಯೇತಿ ॥ 'ವ್ಯಾಖ್ಯೇಯಗ್ರಂಥಸ್ಯ' ಇತ್ಯರ್ಥಃ । ಕಥಮ್? ಇತ್ಯತ ಆಹ – ಯಥಾರ್ಥೇತಿ ॥

'ಪರಮಾಖ್ಯವಿದ್ಯಾ' ಎಂಬುದರಿಂದ ಹಿಂದೆ ತೋರಿಸಿರುವ ಮೂರು ಆಕ್ಷೇಪಗಳು ಹೇಗೆ ಪರಿಹಾರವಾಗುತ್ತವೆ ಎಂಬ ಪ್ರಶ್ನೆಗೆ 'ಅಯಮಭಿಸಂಧಿಃ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಪ್ರಾರಂಭದ ಎರಡು ಆಕ್ಷೇಪಗಳನ್ನು 'ಅಸ್ತಿ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. 'ಅಸ್ಮಿನ್ ಗ್ರಂಥೇ' ಎಂಬುದಕ್ಕೆ ಅಥಾತೋ ಬ್ರಹ್ಮಜಿಜ್ಞಾಸಾ ಇತ್ಯಾದಿ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಎಂದರ್ಥ. ಇಲ್ಲಿರುವ ಸಪ್ತಮೀ ವಿಭಕ್ತಿಯು ವಿಷಯಸಪ್ತಮಿ ಆಗಿದೆ. ಈ ಗ್ರಂಥದ ವಿಷಯದಲ್ಲಿ ಎಂಬರ್ಥವು ಇದರಿಂದ ದೊರೆಯುತ್ತದೆ. 'ಇತ್ಯಾದೌ' ಎಂದರೆ ಆಥರ್ವಣೋಪನಿಷತ್ತಿನಲ್ಲಿ ಎಂದರ್ಥ. ಬ್ರಹ್ಮಸೂತ್ರವನ್ನು ಹೇಳುವ ಸಂದರ್ಭದಲ್ಲಿ ಪರವಿದ್ಯಾ ಎಂಬ ಪದಪ್ರಯೋಗವನ್ನು ಉಪನಿಷತ್ತು ಮಾಡಿದೆ. ಪರವಿದ್ಯಾ ಎಂಬ ಶಬ್ದವು ಬ್ರಹ್ಮಸೂತ್ರವನ್ನೇ ಹೇಳುತ್ತದೆಂಬುದು ಮುಂದೆ ಸ್ಪಷ್ಟವಾಗುತ್ತದೆ. 'ಅಸ್ಯ' ಎಂಬ ಪದಕ್ಕೆ 'ವ್ಯಾಖ್ಯೇಯವೆನಿಸಿದ ಈ ಗ್ರಂಥಕ್ಕೆ' ಎಂದರ್ಥ.

ವಿವರಣೆ - ಹಿಂದೆ ಮೂರು ಆಕ್ಷೇಪವನ್ನು ಮಾಡಲಾಯಿತು. (೧) ಬ್ರಹ್ಮಮೀಮಾಂಸಾಶಾಸ್ತ್ರವು ಅರ್ಥವಿವಕ್ಷಾಪೂರ್ವಕವಾಗಿದೆ ಎನ್ನಲು ಪ್ರಮಾಣವೇ ಇಲ್ಲ. (೨) ಅರ್ಥವಿವಕ್ಷಾಪೂರ್ವಕವಾದರೂ ಕೂಡ ಯಥಾರ್ಥಜ್ಞಾನಜನಕವಾಗಿದೆ ಎನ್ನಲು ಪ್ರಮಾಣವಿಲ್ಲ. (೩) ಯಥಾರ್ಥಜ್ಞಾನಜನಕವಾಗಿದೆ ಎನ್ನಲು ಪ್ರಮಾಣವಿದ್ದರೂ ಕೂಡ ಬೇರೆ ವಾಕ್ಯಗಳನ್ನು ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನೇ ವ್ಯಾಖ್ಯಾನ ಮಾಡಲು ಕಾರಣವಿಲ್ಲ. ಈ ಮೂರು ಆಕ್ಷೇಪಗಳಲ್ಲಿ ಪ್ರಾರಂಭದ ಎರಡು ಆಶಂಕೆಗಳನ್ನು 'ಅಸ್ತಿ ತಾವತ್ ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ಆಥರ್ವಣ ಮೊದಲಾದ ಉಪನಿಷತ್ತುಗಳಲ್ಲಿ ಬ್ರಹ್ಮಸೂತ್ರವನ್ನು ಪರವಿದ್ಯಾ ಎಂದು ಕರೆದಿದ್ದಾರೆ. ಬ್ರಹ್ಮಸೂತ್ರಗಳನ್ನು ಪರವಿದ್ಯೆಯೆಂದು ಮುಂದೆ ಪ್ರತಿಪಾದಿಸುತ್ತಾರೆ.





ಈ ಉಪನಿಷತ್ತಿನಲ್ಲಿರುವ ವಿದ್ಯಾಶಬ್ದಕ್ಕೆ ಯೋಗರೂಢಿಗಳಿಂದ ಜ್ಞಾನ ಹಾಗೂ ಜ್ಞಾನಸಾಧನ ಎಂಬ ಅರ್ಥಗಳು ಸಿದ್ಧಿಸುತ್ತವೆ ಎಂದು ಸುಧಾದಲ್ಲಿ ಹೇಳಲಾಗಿದೆ. ಆದರೆ ಯಥಾರ್ಥಜ್ಞಾನಸಾಧನೇ ವಿದ್ಯಾಶಬ್ದಸ್ಯ ಎಂದಷ್ಟೇ (ವಿದ್ಯಾಶಬ್ದವು ಯೋಗರೂಢಿಗಳಿಂದ ಜ್ಞಾನಸಾಧನವೆಂಬ ಅರ್ಥವುಳ್ಳದ್ದಾಗಿದೆ.) ಹೇಳಿದರೆ ಸಾಕಾಗುತ್ತಿತ್ತು. ಆದರೆ ಇಷ್ಟೇ ಪ್ರಯೋಗಿಸಿದ್ದರೆ ವಿದ್ಯಾಶಬ್ದಕ್ಕೆ ಯಥಾರ್ಥಜ್ಞಾನ ಎಂಬ ಅರ್ಥದಲ್ಲಿ ಯೋಗರೂಢಿಗಳು ಇಲ್ಲವೆಂಬ ಸಂಶಯ ಬರುತ್ತಿತ್ತು. ಅದನ್ನು ನಿವಾರಣೆ ಮಾಡುವುದಕ್ಕೋಸ್ಕರ ವಿದ್ಯಾಶಬ್ದಕ್ಕೆ 'ಜ್ಞಾನ' ಎಂಬ ಅರ್ಥದಲ್ಲಿ ಯೋಗ ಹಾಗೂ ರೂಢಿಗಳಿವೆ ಮತ್ತು 'ಜ್ಞಾನಸಾಧನ' ಎಂಬ ಅರ್ಥದಲ್ಲಿಯೂ ಯೋಗ ಮತ್ತು ರೂಢಿಗಳಿವೆ ಎಂದು ಹೇಳಿರುತ್ತಾರೆ.

## 'ಯಥಾರ್ಥಜ್ಞಾನತತ್ಸಾಧನಯೋಃ' ಎಂಬ ಟೀಕೆಗೆ ಎರಡು ಬಗೆಯ ವ್ಯಾಖ್ಯಾನ

ಪರಿಮಳ– ಯದ್ಯಪಿ 'ಯಥಾರ್ಥಜ್ಞಾನಸಾಧನೇ ವಿದ್ಯಾಶಬ್ದಸ್ಯ' ಇತ್ಯೇವಾತ್ರ ಪ್ರಕೃತಸಂಗತತ್ವಾತ್ ವಕ್ತವ್ಯಮ್ ಅಥಾಪಿ ಜ್ಞಾನಸಾಧನಮಾತ್ರೋಕ್ತೌ ಜ್ಞಾನಸ್ಯ ವಿದ್ಯಾಶಬ್ದಾರ್ಥತ್ವಂ ನೇತಿ ಸ್ಯಾತ್ । ತಥಾ ಚ 'ವಿದ್ಯೈವ ತು ನಿರ್ಧಾರಣಾತ್' 'ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್' ಇತಿ ಸೂತ್ರೇ 'ವಿದ್ಯಾಯಾಽಮೃತಮಶ್ನುತೇ' ಇತ್ಯಾದಿ ಶ್ರುತೌ ಚ ವಿದ್ಯಾಪದಪ್ರಯೋಗೋ ಜ್ಞಾನೇ ಗೌಣ ಇತಿ ಶಂಕಾ ಸ್ಯಾತ್ ಸಾ ಮಾಭೂತ್ ಇತ್ಯೇತದರ್ಥಂ 'ಜ್ಞಾನ'ಪದಮಪಿ ಉಪಾತ್ತಮ್ । 'ಜ್ಞಾನ ಇವ' ಇತಿ ದೃಷ್ಟಾಂತತ್ವೇನ ವಾ ಜ್ಞಾನೇತ್ಯುಕ್ತಿಃ ।

ವಾಸ್ತವಿಕವಾಗಿ 'ಯಥಾರ್ಥಜ್ಞಾನಸಾಧನೇ ವಿದ್ಯಾಶಬ್ದಸ್ಯ' ಎಂದಷ್ಟೇ ಹೇಳಬೇಕು. ಏಕೆಂದರೆ ಈ ಶಾಸ್ತ್ರವು ಯಥಾರ್ಥಜ್ಞಾನಸಾಧನವಾಗಿದೆ. ಆದ್ದರಿಂದ ಯಥಾರ್ಥಜ್ಞಾನ ಎಂಬಂಶವು ಹೇಳುವುದು ಸಂಗತವಾಗುವುದಿಲ್ಲ.

ಹೌದು. ಆದರೂ ಕೂಡ ಜ್ಞಾನಸಾಧನವೆಂದಷ್ಟೇ ಹೇಳಿದರೆ ವಿದ್ಯಾಶಬ್ದಕ್ಕೆ ಜ್ಞಾನವೆಂಬ ಅರ್ಥವು ಮುಖ್ಯವಾಗಿದೆ ಎಂದು ಹೇಳಿದಂತಾಗುವುದಿಲ್ಲ. ಆಗ 'ವಿದ್ಯೈವ ತು ನಿರ್ಧಾರಣಾತ್' 'ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್' ಇವೇ ಮೊದಲಾದ ಸೂತ್ರಗಳಲ್ಲಿ 'ವಿದ್ಯಯಾಽ-

ಮೃತಮಶ್ನುತೇ' ಇವೇ ಮೊದಲಾದ ಶ್ರುತಿಗಳಲ್ಲೂ ಕೂಡ ವಿದ್ಯಾ ಎಂಬ ಪದವನ್ನು ಜ್ಞಾನಾರ್ಥದಲ್ಲಿ ಗೌಣವಾಗಿ ಪ್ರಯೋಗಿಸಲಾಗಿದೆ ಎಂಬ ಆಶಂಕೆಯು ಪ್ರಾಪ್ತವಾಗುತ್ತಿತ್ತು. ಈ ಆಶಂಕೆಯು ಬರಬಾರದೆಂಬ ಉದ್ದೇಶದಿಂದ ವಿದ್ಯಾಶಬ್ದಕ್ಕೆ ಯಥಾರ್ಥಜ್ಞಾನ ಎಂಬರ್ಥವೂ ಕೂಡ ಮುಖ್ಯವಾಗಿಯೇ ಇದೆ ಎಂಬುದನ್ನು ತಿಳಿಸುವುದಕ್ಕಾಗಿ ಜ್ಞಾನಪದವನ್ನೂ ಕೂಡ ಪ್ರಯೋಗಿಸಿದ್ದಾರೆ. ಈಗ ವಿದ್ಯಾಶಬ್ದಕ್ಕೆ ಜ್ಞಾನಸಾಧನ ಎಂಬರ್ಥವು ಮುಖ್ಯವಾಗಿರುವಂತೆ ಯಥಾರ್ಥಜ್ಞಾನ ಎಂಬರ್ಥವೂ ಕೂಡ ಮುಖ್ಯವಾಗಿಯೇ ಇದೆ. ಎರಡೂ ಅರ್ಥದಲ್ಲಿ ಯೋಗರೂಢಿಗಳು ಇವೆ ಎಂಬುದನ್ನು ತಿಳಿಸಿದಂತಾಯಿತು. ಆದ್ದರಿಂದ ಟೀಕೆಯಲ್ಲಿ 'ಯಥಾರ್ಥಜ್ಞಾನತತ್ಸಾಧನಯೋಃ' ಎಂಬುದಾಗಿ ಹೇಳಿದ್ದು ಅರ್ಥಪೂರ್ಣವಾಗಿದೆ.

ಅಥವಾ ಜ್ಞಾನ ಎಂಬುದು ದೃಷ್ಟಾಂತವಾಗಿದೆ ಎಂದು ತಿಳಿಸುವುದಕ್ಕಾಗಿಯೂ ಜ್ಞಾನ ಎಂಬ ಪದವನ್ನು ಪ್ರಯೋಗಿಸಿದ್ದಾರೆ.

ವಿವರಣೆ – 'ದ್ವೇ ವಿದ್ಯೇ ವೇದಿತವ್ಯೇ' ಎಂಬ ಶ್ರುತಿಯಲ್ಲಿರುವ ವಿದ್ಯಾ ಎಂಬ ಶಬ್ದಕ್ಕೆ ಯಥಾರ್ಥಜ್ಞಾನ ಹಾಗೂ ತತ್ಸಾಧನ ಎಂಬೆರಡು ಅರ್ಥಗಳು ಯೋಗ ಹಾಗೂ ರೂಢಿಯ ಬಲದಿಂದ ಪ್ರಾಪ್ತವಾಗುತ್ತವೆ. ಈ ವಿಷಯವನ್ನು ಟೀಕೆಯಲ್ಲಿ 'ಯಥಾರ್ಥಜ್ಞಾನ ತತ್ಸಾಧನಯೋಃ ವಿದ್ಯಾಶಬ್ದಸ್ಯ ಯೋಗರೂಢಿಭ್ಯಾಂ ಪ್ರವೃತ್ತತ್ವಾತ್' ಎಂಬ ವಾಕ್ಯದಿಂದ ತಿಳಿಸಿದ್ದಾರೆ. ಈ ಗ್ರಂಥವು ಯಥಾರ್ಥ-ಜ್ಞಾನವಲ್ಲ. ಯಥಾರ್ಥಜ್ಞಾನಕ್ಕೆ ಸಾಧನವಾಗಿದೆ. ಹೀಗಿರುವಾಗ ಯಥಾರ್ಥಜ್ಞಾನದಲ್ಲೂ ವಿದ್ಯಾ ಎಂಬ ಶಬ್ದವು ಯೋಗರೂಢಿಗಳಿಂದ ಪ್ರವೃತ್ತವಾಗುತ್ತದೆ ಎಂಬುದಾಗಿ ಟೀಕೆಯಲ್ಲಿ ಏಕೆ ಹೇಳಬೇಕು. ಕೇವಲ 'ಯಥಾರ್ಥಜ್ಞಾನಸಾಧನೇ ವಿದ್ಯಾಶಬ್ದಸ್ಯ ಯೋಗರೂಢಿಭ್ಯಾಮ್ ಪ್ರವೃತ್ತತ್ವಾತ್' ಎಂದಷ್ಟೇ ಹೇಳಿದ್ದರೆ ಸಾಕಿತ್ತು?

ಈ ಪ್ರಶ್ನೆಗೆ ಎರಡು ರೀತಿಯಲ್ಲಿ ಉತ್ತರವನ್ನು ತಿಳಿಯಬಹುದು.

೧. ಒಂದು ವೇಳೆ ಯಥಾರ್ಥಜ್ಞಾನದ ಸಾಧನದಲ್ಲಿ ವಿದ್ಯಾಶಬ್ದವು ಯೋಗ ಹಾಗೂ ರೂಢಿಗಳಿಂದ ಮುಖ್ಯಾರ್ಥವನ್ನು ಹೊಂದಿದೆ ಎಂದಷ್ಟೇ ಹೇಳಿದರೆ ಯಥಾರ್ಥಜ್ಞಾನ ಎಂಬರ್ಥವು ಮುಖ್ಯವಲ್ಲ. ಗೌಣವಾಗಿದೆ ಎಂಬ ಅಪಾರ್ಥವಾಗುತ್ತಿತ್ತು. ಆಗ ವಿದ್ಯೈವ ತು ನಿರ್ಧಾರಣಾತ್ ಇತ್ಯಾದಿ ಸೂತ್ರಗಳಲ್ಲಿ ಜ್ಞಾನಾರ್ಥದಲ್ಲಿ ಪ್ರಯೋಗಿಸಲ್ಪಟ್ಟ ವಿದ್ಯಾಶಬ್ದವು ಕೂಡ ಗೌಣವೆಂದೇ ಹೇಳಿದಂತಾಗುತ್ತಿತ್ತು. ಅದಕ್ಕಾಗಿ ಯಥಾರ್ಥಜ್ಞಾನತತ್ಸಾಧನಯೋಃ ಎಂಬ ಪದಪ್ರಯೋಗವನ್ನು ಟೀಕೆಯಲ್ಲಿ ಮಾಡಿದ್ದಾರೆ.





೨. ಅಥವಾ ಯಥಾರ್ಥಜ್ಞಾನವೆಂಬ ಅರ್ಥದಲ್ಲಿ ವಿದ್ಯಾಶಬ್ದವು ಯೋಗ ಹಾಗೂ ರೂಢಿಗಳಿಂದ ಹೇಗೆ ಮುಖ್ಯವಾಗಿದೆಯೋ ಅದರಂತೆ ಯಥಾರ್ಥಜ್ಞಾನಸಾಧನವೆಂಬ ಅರ್ಥದಲ್ಲೂ ಕೂಡ ವಿದ್ಯಾಶಬ್ದವು ಯೋಗ ಹಾಗೂ ರೂಢಿಗಳಿಂದ ಮುಖ್ಯವಾಗಿದೆ. ಹೀಗೆ ದೃಷ್ಟಾಂತವನ್ನು ತಿಳಿಸುವುದಕ್ಕಾಗಿಯೂ ಯಥಾರ್ಥಜ್ಞಾನ ಎಂಬ ಪದಪ್ರಯೋಗವನ್ನು ಟೀಕೆಯಲ್ಲಿ ಮಾಡಿದ್ದಾರೆ.

## ವ್ಯಾಕರಣದ ಪ್ರಕಾರ ವಿದ್ಯಾಶಬ್ದಕ್ಕೆ ಜ್ಞಾನ ಎಂದಷ್ಟೇ ಅರ್ಥವೇ?

**ಪರಿಮಳ– ಯೋಗರೂಢಿಭ್ಯಾಮ್ ಇತಿ ॥ ನನು 'ವ್ರಜಯಜೋರ್ಭಾವೇ ಕ್ಯಪ್' ಇತಿ ಸೂತ್ರೇಣ ಭಾವೇ ಕ್ಯಪ್ ವಿಹಿತಃ। ಅತ್ರ ಚ ಪೂರ್ವಸ್ಮಾತ್ 'ಭಾವೇ' ಇತ್ಯನುವರ್ತಮಾನೇ ಪುನಃ ಭಾವಗ್ರಹಣಂ ಭಾವ ಏವ ವ್ರಜಯಜೋರ್ಯಥಾ ಕ್ಯಪ್ಸ್ಯಾನ್ನ ತು 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಇತ್ಯಸ್ಯಾಪಿ ಅನುವರ್ತಮಾನತ್ವಾತ್ ಕರ್ತೃವ್ಯತಿರಿಕ್ತಕಾರಕೇಽಪಿ ಸ್ಯಾತ್ ಇತ್ಯೇತದರ್ಥಮ್ । ತಥಾ ಚ 'ವ್ರಜ್ಯಾ' 'ಇಜ್ಯಾ' ಇತಿವತ್ 'ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್ಶೀಙ್‌ಭೃಞಿಣಃ' ಇತ್ಯುತ್ತರಸೂತ್ರೇ ತಸ್ಯೈವ ಕ್ಯಪೋಽನುವರ್ತಮಾನತ್ವಾತ್ ಭಾವ ಏವ ಕ್ಯಬ್ ಇತಿ ವಿದ್ಯಾಶಬ್ದೋ ಜ್ಞಾನ ಏವ ಮುಖ್ಯ ಇತಿ ಪ್ರಾಪ್ನೋತೀತಿ ಚೇತ್**

'ಯೋಗರೂಢಿಭ್ಯಾಂ ಪ್ರವೃತ್ತತ್ವಾತ್' ಎಂಬ ಟೀಕೆಯ ವಾಕ್ಯಕ್ಕೆ ಮುಂದಿನ ವಿಷಯಗಳನ್ನು ತಿಳಿಯಬೇಕು.

ಆಕ್ಷೇಪ – 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಿಂದ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಈ ಸೂತ್ರದಲ್ಲಿ ಹಿಂದೆ ಪ್ರಸಕ್ತವಾದ ಭಾವೇ ಎಂಬ ಸೂತ್ರದಿಂದ ಭಾವೇ ಎಂಬುದು ಅನುವೃತ್ತವಾಗುತ್ತದೆ. ಪುನಃ ಭಾವಗ್ರಹಣವನ್ನು ಈ ಸೂತ್ರದಲ್ಲಿ ಮಾಡಿದ್ದರಿಂದ ಭಾವಾರ್ಥದಲ್ಲಷ್ಟೇ ವ್ರಜ ಹಾಗೂ ಯಜ ಧಾತುಗಳಿಗೆ ಕ್ಯಪ್‌ಪ್ರತ್ಯಯವು ಪ್ರಾಪ್ತವಾಗುತ್ತದೆಂಬ ಅರ್ಥವು ತಿಳಿಯುತ್ತದೆ. ಭಾವಾರ್ಥದಲ್ಲಿ ಹೇಗೆ ಕ್ಯಪ್‌ಪ್ರತ್ಯಯವು ಬರುತ್ತದೋ ಅದರಂತೆ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬುದು ಅನುವೃತ್ತವಾಗುವುದಿಲ್ಲ. ಆದ್ದರಿಂದ ಕರ್ತೃವ್ಯತಿರಿಕ್ತಕಾರಕದಲ್ಲೂ ಕೂಡ ಕ್ಯಪ್‌ಪ್ರತ್ಯಯವು ಬರಲಿ ಎಂಬ ಶಂಕೆಯು

ಪ್ರಾಪ್ತವಾಗುವುದಿಲ್ಲ. ಹಾಗಾಗಿ ವ್ರಜ್ಯಾ ಇಜ್ಯಾ ಎಂಬ ಪ್ರಯೋಗಗಳಂತೆ "ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್‌ಶೀಙ್‌ಭೃಞಿಣಃ' ಎಂಬ ಮುಂದಿನ ಸೂತ್ರದಲ್ಲೂ ಕೂಡ ಅದೇ ಕ್ಯಪ್‌ಪ್ರತ್ಯಯವು ಅನುವೃತ್ತವಾಗುತ್ತದೆ. ಆದ್ದರಿಂದ ಭಾವಾರ್ಥದಲ್ಲಷ್ಟೇ ಕ್ಯಪ್ ಪ್ರತ್ಯಯವು ಬರುತ್ತದೆ. ಆದ್ದರಿಂದ ವಿದ್ಯಾಶಬ್ದವು ಜ್ಞಾನದಲ್ಲಷ್ಟೇ ಮುಖ್ಯಾರ್ಥವುಳ್ಳದ್ದಾಗುತ್ತದೆ. ಜ್ಞಾನಸಾಧನ ಎಂಬರ್ಥದಲ್ಲಿ ಮುಖ್ಯಾರ್ಥವುಳ್ಳದ್ದಾಗುವುದಿಲ್ಲ. ಹೀಗಿರುವಾಗ ಜ್ಞಾನ-ಸಾಧನಾರ್ಥದಲ್ಲೂ ಯೋಗರೂಢಿಗಳಿಂದ ವಿದ್ಯಾಶಬ್ದವು ಪ್ರವೃತ್ತವಾಗುತ್ತದೆಂದು ಟೀಕೆಯಲ್ಲಿ ಹೇಗೆ ಹೇಳಿದರು?

ವಿವರಣೆ – ವಿದ್ಯಾ ಎಂಬ ಶಬ್ದವನ್ನು ವ್ಯಾಕರಣದಲ್ಲಿ ಜ್ಞಾನಾರ್ಥದಲ್ಲಷ್ಟೇ ಪ್ರಯೋಗಿಸಲಾಗುತ್ತದೆ. ವಿದ್ಯಾಶಬ್ದದ ನಿಷ್ಪತ್ತಿಯೇ ಜ್ಞಾನಾರ್ಥದಲ್ಲಿದೆ. ಜ್ಞಾನಸಾಧನ ಎಂಬರ್ಥದಲ್ಲಿ ವಿದ್ಯಾಶಬ್ದದ ನಿಷ್ಪತ್ತಿಯನ್ನು ಹೇಳಿಲ್ಲವೆಂದು ಈಗ ಆಕ್ಷೇಪ ಮಾಡಲಾಗಿದೆ. ಅದು ಹೀಗೆ –

ಭಾವೇ (೩-೩-೧೮) ಎಂಬ ಸೂತ್ರವು ಮೂರನೆಯ ಅಧ್ಯಾಯದ ಮೂರನೆ ಪಾದದ ಹದಿನೆಂಟನೆಯ ಸೂತ್ರವಾಗಿದೆ. ಈ ಸೂತ್ರದಲ್ಲಿ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ವಿಧಿಸಲಾಗಿದೆ. ಇದರ ಮುಂದಿನ ಸೂತ್ರವೇ ಅಕರ್ತರಿಚ ಕಾರಕೇ ಸಂಜ್ಞಾಯಾಮ್ (೩-೩-೧೯) ಎಂಬುದು. ಈ ಸೂತ್ರದಲ್ಲಿ ಕರ್ತೃಭಿನ್ನವಾದ ಕರ್ಮ ಮೊದಲಾದ ಕಾರಕಾರ್ಥಗಳಲ್ಲಿಯೂ ಕ್ಯಪ್ ಪ್ರತ್ಯಯವನ್ನು ಹೇಳಬೇಕೆಂದು ವಿಧಿಸಲಾಗಿದೆ. ಈ ಎರಡು ಸೂತ್ರಗಳು ಅಧಿಕಾರಸೂತ್ರ ಎನಿಸುತ್ತವೆ. 'ಕೃತ್ಯಲ್ಯುಟೋ ಬಹುಲಮ್' (೩-೩-೧೧೩) ಎಂಬ ಸೂತ್ರದ ತನಕ ಈ ಎರಡು ಸೂತ್ರಗಳಲ್ಲಿ ಹೇಳಿದ್ದು ಸಂಬಂಧ-ಪಡುತ್ತವೆ. ಪ್ರಕೃತ ವಿದ್ಯಾ ಎಂಬ ಶಬ್ದದ ನಿಷ್ಪತ್ತಿಯು "ಸಂಜ್ಞಾಯಾಂ ಸಮಜನಿಷದನಿಪತಮನ-ವಿದಷುಞ್‌ಶೀಙ್‌ಭೃಞಿಣಃ' (೩-೩-೯೯) ಎಂಬ ಸೂತ್ರದಿಂದ ಆಗುತ್ತದೆ. ಆದ್ದರಿಂದ ಭಾವೇ ಹಾಗೂ ಅಕರ್ತರಿ ಚ ಎಂಬೆರಡು ಸೂತ್ರಗಳು ೧೧೩ನೇ ಸೂತ್ರದ ತನಕ ಅಧಿಕಾರ ಸೂತ್ರಗಳೆನಿಸಿದ್ದರಿಂದ ಅದರೊಳಗೆ ಸೇರಿದ ಸಂಜ್ಞಾಯಾಮ್ ಎಂಬ ಸೂತ್ರಕ್ಕೂ ಕೂಡ ಸಂಬಂಧ ಪಡುತ್ತವೆ. ಹಾಗಾಗಿ ಭಾವೇ ಎಂಬ ಸೂತ್ರದ ಪ್ರಕಾರ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವು ಬಂದು ಜ್ಞಾನ ಎಂಬ ಅರ್ಥವು ದೊರೆಯುತ್ತದೆ. ಅಕರ್ತರಿ ಚ ಕಾರಕೇ ಇತ್ಯಾದಿ ಸೂತ್ರದಿಂದ ಕರ್ತೃಭಿನ್ನಕಾರಕಾದ್ಯರ್ಥಗಳು ಅನು-ವೃತ್ತವಾಗುವ ಮೂಲಕ ಜ್ಞಾನಸಾಧನ ಎಂಬರ್ಥದಲ್ಲಿ ಕ್ಯಪ್‌ಪ್ರತ್ಯಯವು ಸಂಜ್ಞಾಯಾಂ ಇತ್ಯಾದಿ ಸೂತ್ರದಿಂದ ಪ್ರಾಪ್ತವಾಗಿ ಜ್ಞಾನಸಾಧನ ಎಂಬರ್ಥವು ಪ್ರಾಪ್ತವಾಗುತ್ತದೆ. ಇಷ್ಟು ವಸ್ತುಸ್ಥಿತಿ.





ಆಕ್ಷೇಪ – 'ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್‌ಶೀಙ್‌ಭೃಞ್ಣಃ' ಎಂಬ ಸೂತ್ರದಲ್ಲಿ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸೂತ್ರದ ಅನುವೃತ್ತಿಯು ಪ್ರಾಪ್ತವಾಗುವುದಿಲ್ಲ. ಏಕೆಂದರೆ, ಈ ಸೂತ್ರದ ಹಿಂದೆ ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರವು ಪ್ರಾಪ್ತವಾಗಿದೆ. ವ್ರಜ ಯಜ ಇವುಗಳಿಗೆ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ಬರುತ್ತದೆಂಬುದು ಈ ಸೂತ್ರದ ಅರ್ಥ. ಹಾಗಾಗಿ ವ್ರಜ್ಯಾ , ಯಜ್ಯಾ ಇತ್ಯಾದಿ ಪ್ರಯೋಗಗಳು ನಿಷ್ಪನ್ನವಾಗುತ್ತವೆ. ಹದಿನೆಂಟನೆಯ ಸೂತ್ರದಿಂದ ಭಾವೇ ಎಂಬುದು ಅನುವೃತ್ತವಾಗುತ್ತಿದ್ದರೂ ಕೂಡ ಪುನಃ ಭಾವೇ ಎಂಬ ಪದವನ್ನು ಪ್ರಯೋಗ ಮಾಡಿದ್ದಕ್ಕೆ ಕಾರಣ ಹೀಗಿದೆ – ವ್ರಜ, ಯಜ ಇವುಗಳಿಗೆ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆ. ಕರ್ತೃಭಿನ್ನ ಕಾರಕಾದ್ಯರ್ಥಗಳಲ್ಲಿ ಕ್ಯಪ್ ಪ್ರತ್ಯಯವು ಬರುವುದಿಲ್ಲ. ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ಎಂಬ ಸೂತ್ರಶೇಷವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬಾರದು. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿ ಭಾವೇ ಎಂಬುದು ಅನುವೃತ್ತವಾಗುತ್ತಿದ್ದರೂ ಕೂಡ ಪುನಃ ಭಾವೇ ಎಂಬುದನ್ನು ಪ್ರಯೋಗ ಮಾಡಿದ್ದಾರೆ. ಆದ್ದರಿಂದ ವ್ರಜ್ಯಾ ಯಜ್ಯಾ ಮೊದಲಾದ ಕ್ಯಬಂತಪ್ರಯೋಗಗಳು ಭಾವಾರ್ಥಗಳಲ್ಲೇ ಇರುತ್ತವೆ ಹೊರತು ಕರ್ತೃಭಿನ್ನಕಾರಕಗಳಲ್ಲಿ ಇರುವುದಿಲ್ಲ.

ಇದೇ ಸೂತ್ರದಂತೆ ''ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್‌ಶೀಙ್‌ಭೃಞ್ಣಃ' ಎಂಬ ಮುಂದಿನ ಸೂತ್ರದಲ್ಲೂ ಕೂಡ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯದ ವಿಧಾನವನ್ನು ತಿಳಿಯಬೇಕು. ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದ ಭಾವಾರ್ಥದ ಕ್ಯಪ್‌ಪ್ರತ್ಯಯವೇ ಮುಂದಿನ ಸೂತ್ರದಲ್ಲೂ ಅನುವೃತ್ತವಾಗುತ್ತದೆ. ಆದ್ದರಿಂದ ಜ್ಞಾನಸಾಧನ ಎಂಬರ್ಥದಲ್ಲಿ ವಿದ್ಯಾಶಬ್ದಪ್ರಯೋಗವು ಅಯುಕ್ತ-ವಾಗುತ್ತದೆ.

'ಸಂಜ್ಞಾಯಾಂ ಸಮಜನಿಷದ' ಇತ್ಯಾದಿ ಸೂತ್ರದ ಬಗ್ಗೆ ಹೀಗೆ ತಿಳಿಯಬೇಕು– ಸಂಜ್ಞಾರ್ಥದಲ್ಲಿ ಸಂ ಉಪಸರ್ಗಪೂರ್ವಕ ಅಜ ಧಾತು, ನಿ ಉಪಸರ್ಗ ಪೂರ್ವಕ ಷದ್ ಧಾತು, ನಿ ಉಪಸರ್ಗಪೂರ್ವಕ ಪತ್, ಮನ್‌ಧಾತು, ವಿದ್ ಧಾತು, ಷುಞ್ ಧಾತು, ಶೀಙ್ ಧಾತು, ಇಣ್ ಧಾತು ಇವುಗಳಿಗೆ ಕ್ಯಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಹಿಂದಿನ ಸೂತ್ರದಿಂದ ಕ್ಯಪ್ ಎಂಬುದನ್ನು ಈ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಹಾಗಾಗಿ ಹಿಂದಿನ ಸೂತ್ರದ ಪ್ರಕಾರ ಭಾವಾರ್ಥದಲ್ಲಷ್ಟೇ ಕ್ಯಪ್‌ಪ್ರತ್ಯಯವು ಬರುತ್ತದೆ. ಪ್ರಕೃತ ವಿದ್‌ಧಾತುವಿಗೆ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ಬಂದರೆ ವಿದ್ಯಾ ಎಂಬ ನಿಷ್ಪತ್ತಿಯು ಆಗುತ್ತದೆ. ಕ್ಯಪ್ ಎಂಬ ಪ್ರತ್ಯಯದಲ್ಲಿ 'ಲಶಕ್ವತದ್ಧಿತೇ' ಎಂಬ ಸೂತ್ರದಿಂದ ಕಕಾರವು ಇತ್ ಸಂಜ್ಞೆಯನ್ನು ಹೊಂದುತ್ತದೆ, ಪ್ ಎಂಬುದು ಹಲಂತ್ಯಮ್ ಎಂಬ ಸೂತ್ರದಿಂದ ಇತ್ ಸಂಜ್ಞೆಯನ್ನು

ಪ್ರಾಪ್ತವಾಗುವುದಿಲ್ಲ. ಹಾಗಾಗಿ ವ್ರಜ್ಯಾ ಇಜ್ಯಾ ಎಂಬ ಪ್ರಯೋಗಗಳಂತೆ "ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್‌ಶೀಙ್‌ಭೃಞಿಣಃ' ಎಂಬ ಮುಂದಿನ ಸೂತ್ರದಲ್ಲೂ ಕೂಡ ಅದೇ ಕ್ಯಪ್‌ಪ್ರತ್ಯಯವು ಅನುವೃತ್ತವಾಗುತ್ತದೆ. ಆದ್ದರಿಂದ ಭಾವಾರ್ಥದಲ್ಲಷ್ಟೇ ಕ್ಯಪ್ ಪ್ರತ್ಯಯವು ಬರುತ್ತದೆ. ಆದ್ದರಿಂದ ವಿದ್ಯಾಶಬ್ದವು ಜ್ಞಾನದಲ್ಲಷ್ಟೇ ಮುಖ್ಯಾರ್ಥವುಳ್ಳದ್ದಾಗುತ್ತದೆ. ಜ್ಞಾನಸಾಧನ ಎಂಬರ್ಥದಲ್ಲಿ ಮುಖ್ಯಾರ್ಥವುಳ್ಳದ್ದಾಗುವುದಿಲ್ಲ. ಹೀಗಿರುವಾಗ ಜ್ಞಾನ-ಸಾಧನಾರ್ಥದಲ್ಲೂ ಯೋಗರೂಢಿಗಳಿಂದ ವಿದ್ಯಾಶಬ್ದವು ಪ್ರವೃತ್ತವಾಗುತ್ತದೆಂದು ಟೀಕೆಯಲ್ಲಿ ಹೇಗೆ ಹೇಳಿದರು?

ವಿವರಣೆ – ವಿದ್ಯಾ ಎಂಬ ಶಬ್ದವನ್ನು ವ್ಯಾಕರಣದಲ್ಲಿ ಜ್ಞಾನಾರ್ಥದಲ್ಲಷ್ಟೇ ಪ್ರಯೋಗಿಸಲಾಗುತ್ತದೆ. ವಿದ್ಯಾಶಬ್ದದ ನಿಷ್ಪತ್ತಿಯೇ ಜ್ಞಾನಾರ್ಥದಲ್ಲಿದೆ. ಜ್ಞಾನಸಾಧನ ಎಂಬರ್ಥದಲ್ಲಿ ವಿದ್ಯಾಶಬ್ದದ ನಿಷ್ಪತ್ತಿಯನ್ನು ಹೇಳಿಲ್ಲವೆಂದು ಈಗ ಆಕ್ಷೇಪ ಮಾಡಲಾಗಿದೆ. ಅದು ಹೀಗೆ –

ಭಾವೇ (೩-೩-೧೮) ಎಂಬ ಸೂತ್ರವು ಮೂರನೆಯ ಅಧ್ಯಾಯದ ಮೂರನೆ ಪಾದದ ಹದಿನೆಂಟನೆಯ ಸೂತ್ರವಾಗಿದೆ. ಈ ಸೂತ್ರದಲ್ಲಿ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ವಿಧಿಸಲಾಗಿದೆ. ಇದರ ಮುಂದಿನ ಸೂತ್ರವೇ ಅಕರ್ತರಿಚ ಕಾರಕೇ ಸಂಜ್ಞಾಯಾಮ್ (೩-೩-೧೯) ಎಂಬುದು. ಈ ಸೂತ್ರದಲ್ಲಿ ಕರ್ತೃಭಿನ್ನವಾದ ಕರ್ಮ ಮೊದಲಾದ ಕಾರಕಾರ್ಥಗಳಲ್ಲಿಯೂ ಕ್ಯಪ್ ಪ್ರತ್ಯಯವನ್ನು ಹೇಳಬೇಕೆಂದು ವಿಧಿಸಲಾಗಿದೆ. ಈ ಎರಡು ಸೂತ್ರಗಳು ಅಧಿಕಾರಸೂತ್ರ ಎನಿಸುತ್ತವೆ. 'ಕೃತ್ಯಲ್ಯುಟೋ ಬಹುಲಮ್' (೩-೩-೧೧೩) ಎಂಬ ಸೂತ್ರದ ತನಕ ಈ ಎರಡು ಸೂತ್ರಗಳಲ್ಲಿ ಹೇಳಿದ್ದು ಸಂಬಂಧ-ಪಡುತ್ತವೆ. ಪ್ರಕೃತ ವಿದ್ಯಾ ಎಂಬ ಶಬ್ದದ ನಿಷ್ಪತ್ತಿಯು "ಸಂಜ್ಞಾಯಾಂ ಸಮಜನಿಷದನಿಪತಮನ-ವಿದಷುಞ್‌ಶೀಙ್‌ಭೃಞಿಣಃ' (೩-೩-೯೯) ಎಂಬ ಸೂತ್ರದಿಂದ ಆಗುತ್ತದೆ. ಆದ್ದರಿಂದ ಭಾವೇ ಹಾಗೂ ಅಕರ್ತರಿ ಚ ಎಂಬೆರಡು ಸೂತ್ರಗಳು ೧೧೩ನೇ ಸೂತ್ರದ ತನಕ ಅಧಿಕಾರ ಸೂತ್ರಗಳೆನಿಸಿದ್ದರಿಂದ ಅದರೊಳಗೆ ಸೇರಿದ ಸಂಜ್ಞಾಯಾಮ್ ಎಂಬ ಸೂತ್ರಕ್ಕೂ ಕೂಡ ಸಂಬಂಧ ಪಡುತ್ತವೆ. ಹಾಗಾಗಿ ಭಾವೇ ಎಂಬ ಸೂತ್ರದ ಪ್ರಕಾರ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವು ಬಂದು ಜ್ಞಾನ ಎಂಬ ಅರ್ಥವು ದೊರೆಯುತ್ತದೆ. ಅಕರ್ತರಿ ಚ ಕಾರಕೇ ಇತ್ಯಾದಿ ಸೂತ್ರದಿಂದ ಕರ್ತೃಭಿನ್ನಕಾರಕಾದ್ಯರ್ಥಗಳು ಅನು-ವೃತ್ತವಾಗುವ ಮೂಲಕ ಜ್ಞಾನಸಾಧನ ಎಂಬರ್ಥದಲ್ಲಿ ಕ್ಯಪ್‌ಪ್ರತ್ಯಯವು ಸಂಜ್ಞಾಯಾಂ ಇತ್ಯಾದಿ ಸೂತ್ರದಿಂದ ಪ್ರಾಪ್ತವಾಗಿ ಜ್ಞಾನಸಾಧನ ಎಂಬರ್ಥವು ಪ್ರಾಪ್ತವಾಗುತ್ತದೆ. ಇಷ್ಟು ವಸ್ತುಸ್ಥಿತಿ.





ಆಕ್ಷೇಪ – 'ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್‌ಶೀಙ್‌ಭೃಞಿಣಃ' ಎಂಬ ಸೂತ್ರದಲ್ಲಿ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸೂತ್ರದ ಅನುವೃತ್ತಿಯು ಪ್ರಾಪ್ತವಾಗುವುದಿಲ್ಲ. ಏಕೆಂದರೆ, ಈ ಸೂತ್ರದ ಹಿಂದೆ ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರವು ಪ್ರಾಪ್ತವಾಗಿದೆ. ವ್ರಜ ಯಜ ಇವುಗಳಿಗೆ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ಬರುತ್ತದೆಂಬುದು ಈ ಸೂತ್ರದ ಅರ್ಥ. ಹಾಗಾಗಿ ವ್ರಜ್ಯಾ , ಯಜ್ಯಾ ಇತ್ಯಾದಿ ಪ್ರಯೋಗಗಳು ನಿಷ್ಪನ್ನವಾಗುತ್ತವೆ. ಹದಿನೆಂಟನೆಯ ಸೂತ್ರದಿಂದ ಭಾವೇ ಎಂಬುದು ಅನುವೃತ್ತವಾಗುತ್ತಿದ್ದರೂ ಕೂಡ ಪುನಃ ಭಾವೇ ಎಂಬ ಪದವನ್ನು ಪ್ರಯೋಗ ಮಾಡಿದ್ದಕ್ಕೆ ಕಾರಣ ಹೀಗಿದೆ – ವ್ರಜ, ಯಜ ಇವುಗಳಿಗೆ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆ. ಕರ್ತೃಭಿನ್ನ ಕಾರಕಾದ್ಯರ್ಥಗಳಲ್ಲಿ ಕ್ಯಪ್ ಪ್ರತ್ಯಯವು ಬರುವುದಿಲ್ಲ. ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ಎಂಬ ಸೂತ್ರಶೇಷವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬಾರದು. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿ ಭಾವೇ ಎಂಬುದು ಅನುವೃತ್ತವಾಗುತ್ತಿದ್ದರೂ ಕೂಡ ಪುನಃ ಭಾವೇ ಎಂಬುದನ್ನು ಪ್ರಯೋಗ ಮಾಡಿದ್ದಾರೆ. ಆದ್ದರಿಂದ ವ್ರಜ್ಯಾ ಯಜ್ಯಾ ಮೊದಲಾದ ಕ್ಯಬಂತಪ್ರಯೋಗಗಳು ಭಾವಾರ್ಥಗಳಲ್ಲೇ ಇರುತ್ತವೆ ಹೊರತು ಕರ್ತೃಭಿನ್ನಕಾರಕಗಳಲ್ಲಿ ಇರುವುದಿಲ್ಲ.

ಇದೇ ಸೂತ್ರದಂತೆ ''ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್‌ಶೀಙ್‌ಭೃಞಿಣಃ' ಎಂಬ ಮುಂದಿನ ಸೂತ್ರದಲ್ಲೂ ಕೂಡ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯದ ವಿಧಾನವನ್ನು ತಿಳಿಯಬೇಕು. ಹಿಂದಿನ ಸೂತ್ರದಲ್ಲಿ ಪ್ರಸಕ್ತವಾದ ಭಾವಾರ್ಥದ ಕ್ಯಪ್‌ಪ್ರತ್ಯಯವೇ ಮುಂದಿನ ಸೂತ್ರದಲ್ಲೂ ಅನುವೃತ್ತವಾಗುತ್ತದೆ. ಆದ್ದರಿಂದ ಜ್ಞಾನಸಾಧನ ಎಂಬರ್ಥದಲ್ಲಿ ವಿದ್ಯಾಶಬ್ದಪ್ರಯೋಗವು ಅಯುಕ್ತವಾಗುತ್ತದೆ.

'ಸಂಜ್ಞಾಯಾಂ ಸಮಜನಿಷದ' ಇತ್ಯಾದಿ ಸೂತ್ರದ ಬಗ್ಗೆ ಹೀಗೆ ತಿಳಿಯಬೇಕು– ಸಂಜ್ಞಾರ್ಥದಲ್ಲಿ ಸಂ ಉಪಸರ್ಗಪೂರ್ವಕ ಅಜ ಧಾತು, ನಿ ಉಪಸರ್ಗ ಪೂರ್ವಕ ಷದ್ ಧಾತು, ನಿ ಉಪಸರ್ಗಪೂರ್ವಕ ಪತ್, ಮನ್‌ಧಾತು, ವಿದ್ ಧಾತು, ಷುಞ್ ಧಾತು, ಶೀಙ್ ಧಾತು, ಇಣ್ ಧಾತು ಇವುಗಳಿಗೆ ಕ್ಯಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಹಿಂದಿನ ಸೂತ್ರದಿಂದ ಕ್ಯಪ್ ಎಂಬುದನ್ನು ಈ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಹಾಗಾಗಿ ಹಿಂದಿನ ಸೂತ್ರದ ಪ್ರಕಾರ ಭಾವಾರ್ಥದಲ್ಲಷ್ಟೇ ಕ್ಯಪ್‌ಪ್ರತ್ಯಯವು ಬರುತ್ತದೆ. ಪ್ರಕೃತ ವಿದ್‌ಧಾತುವಿಗೆ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ಬಂದರೆ ವಿದ್ಯಾ ಎಂಬ ನಿಷ್ಪತ್ತಿಯು ಆಗುತ್ತದೆ. ಕ್ಯಪ್ ಎಂಬ ಪ್ರತ್ಯಯದಲ್ಲಿ 'ಲಶಕ್ವತದ್ಧಿತೇ' ಎಂಬ ಸೂತ್ರದಿಂದ ಕಕಾರವು ಇತ್ ಸಂಜ್ಞೆಯನ್ನು ಹೊಂದುತ್ತದೆ, ಪ್ ಎಂಬುದು ಹಲಂತ್ಯಮ್ ಎಂಬ ಸೂತ್ರದಿಂದ ಇತ್ ಸಂಜ್ಞೆಯನ್ನು





ಹೊಂದುತ್ತದೆ. ಆಗ ವಿದ್+ಯ = ವಿದ್ಯಾ ಎಂಬ ರೂಪವು ನಿಷ್ಪನ್ನವಾಗುತ್ತದೆ. ಇದೇ ಸೂತ್ರದಿಂದ ವಿದ್ಯಾ ಎಂಬ ಸೂತ್ರದಿಂದ ಸಮಜ್ಯಾ = ಸಭೆ, ನಿಷದ್ಯಾ = ಅಂಗಡಿ, ನಿಪತ್ಯಾ = ಭೂಮಿ, ಮನ್ಯಾ = ಗಲಪಾರ್ಶ್ವದಲ್ಲಿರುವ ಶಿರಸ್ಸು, ಸುತ್ಯಾ, ಶಯ್ಯಾ , ಭೃತ್ಯಾ ಇತ್ಯಾದಿ ರೂಪಗಳು ನಿಷ್ಪನ್ನವಾಗುತ್ತವೆ.

## ಭಾವಾರ್ಥದಲ್ಲಿ ಮಾತ್ರ ವಿದ್ಯಾಶಬ್ದದ ಪ್ರಯೋಗವಲ್ಲ

ಪರಿಮಳ– ಮೈವಮ್ । 'ವ್ರಜಯಜೋರ್ಭಾವೇ ಕ್ಯಪ್' ಇತ್ಯತ್ರೋಕ್ತಂ ಭಾವ-ಗ್ರಹಣಂ 'ಸಂಜ್ಞಾಯಾಂ ಸಮಜ' ಇತಿ ಸೂತ್ರೇ ನಾನುವರ್ತತೇ। ಕ್ಯಬೇವಾನುವರ್ತತ ಇತಿ ವೃತ್ತಾದ್ ಉಕ್ತತ್ವೇನ ತತಃ ಪೂರ್ವಂ ದೂರೇ ಸಾಮಾನ್ಯತೋಽಧಿಕೃತಸ್ಯ ಭಾವ ಇತ್ಯಸ್ಯ ಅಕರ್ತರಿ ಚೇತಿ ಸೂತ್ರಸ್ಯ ಚ 'ಕೃತ್ಯಲ್ಯುಟೋ ಬಹುಲಮ್' ಇತ್ಯೇತತ್ಪರ್ಯಂತಮನು-ವರ್ತನೇನ ಸಮಜನಿಷದೇತಿ ಸೂತ್ರೇಽಪಿ ಸಂಬಂಧೇನ 'ಭಾವೇ ಕರ್ತ್ರಭಿನ್ನೇ ಕಾರಕೇ ಚ ಸಂಜ್ಞಾಯಾಂ ವಿಷಯೇ ಕ್ಯಪ್‌ಪ್ರತ್ಯಯೋ ಭವತಿ' ಇತ್ಯುಕ್ತತ್ವೇನ ವೇದನಮ್ ಇತ್ಯರ್ಥೇ ಚ ವಿದೇಃ ಕ್ಯಪಿ ಸತಿ 'ಲಶಕ್ವತದ್ಧಿತೇ' ಇತಿ ಕಕಾರಸ್ಯ 'ಹಲಂತ್ಯಮಿತಿ' ಪಕಾರಸ್ಯ ಚ ಇತ್ ಸಂಜ್ಞಾಯಾಂ ಲೋಪೇ 'ಪುಗಂತಲಘೂಪದಸ್ಯ ಚ' ಇತಿ ಗುಣಸ್ಯ 'ಕ್ಙಿತಿ ಚ' ಇತಿ ನಿಷೇಧೇ ಸ್ತ್ರೀಪ್ರತ್ಯಯೇ ಟಾಪಿ ಸತಿ ವಿದ್ಯೇತಿರೂಪನಿಷ್ಪತ್ತೇಃ ವಿದ್ಯಾಶಬ್ದೇ 'ಅಕರ್ತರಿ' ಇತ್ಯುಕ್ತೇಃ ಯೋಗಸ್ಯ 'ಸಂಜ್ಞಾಯಾಮ್' ಇತ್ಯುಕ್ತೇಃ ರೂಢೇಶ್ಚೋಕ್ತತ್ವಾದಿತಿ ಭಾವಃ।

ಇದು ತಪ್ಪು. 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಲ್ಲಿ ಯಾವ ಭಾವ-ಗ್ರಹಣವನ್ನು ಮಾಡಿದ್ದಾರೋ ಇದು ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರದಲ್ಲಿ ಅನುವೃತ್ತವಾಗುವುದಿಲ್ಲ. ಕ್ಯಪ್‌ಪ್ರತ್ಯಯವಷ್ಟೇ ಅನುವೃತ್ತವಾಗುತ್ತದೆ. ಈ ವಿಷಯವನ್ನು ಕಾಶಿಕಾವೃತ್ತಿಯಲ್ಲಿ ಹೇಳಲಾಗಿದೆ. ಹಾಗಾಗಿ ಬಹಳ ಹಿಂದೆ ಸಾಮಾನ್ಯತಃ ಅಧಿಕಾರವೆನಿಸಿದ 'ಭಾವೇ' ಎಂಬ ಸೂತ್ರವು ಮತ್ತು 'ಅಕರ್ತರಿ ಚ' ಎಂಬ ಸೂತ್ರದ ಭಾಗವು 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಅನುವೃತ್ತವಾಗುತ್ತದೆ ಪ್ರಕೃತ 'ಸಮಜನಿಷದ' ಎಂಬ ಸೂತ್ರದಲ್ಲೂ ಕೂಡ ಅನುವೃತ್ತವಾಗುತ್ತದೆ. ಆದ್ದರಿಂದ ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನವಾದ ಕಾರಕಾರ್ಥದಲ್ಲಿ ಸಂಜ್ಞೆಯು ಗಮ್ಯಮಾನವಾಗಿದ್ದರೆ ಕ್ಯಪ್‌ಪ್ರತ್ಯಯವು ಪ್ರಾಪ್ತವಾಗುತ್ತದೆಂಬುದು

'ಸಂಜ್ಞಾಯಾಂ' ಇತ್ಯಾದಿ ಸೂತ್ರದ ಅಭಿಪ್ರಾಯವಾಗಿದೆ. ಹಾಗಾಗಿ ವೇದನಂ (= ತಿಳಿಯುವಿಕೆ) ಎಂಬರ್ಥದಲ್ಲಿ ವಿದ್ ಧಾತುವಿಗೆ ಕ್ಯಪ್‌ಪ್ರತ್ಯಯವು ಬಂದರೆ 'ಲಶಕ್ವತದ್ಧಿತೇ' ಎಂಬ ಸೂತ್ರದಿಂದ ಕಕಾರವು ಹಲಂತ್ಯಮ್ ಎಂಬ ಸೂತ್ರದಿಂದ ಪಕಾರವು ಇತ್‌ಸಂಜ್ಞೆಯನ್ನು ಹೊಂದುತ್ತದೆ. ಹೀಗೆ ಇವೆರೆಡು ಅಕ್ಷರಗಳು ಲೋಪವಾದ ಮೇಲೆ 'ಪುಗಂತಲಘೂಪದಸ್ಯ' ಎಂಬ ಸೂತ್ರದಿಂದ ಗುಣವು ಬಂದು 'ಕ್ಕಿಙಿತಿ ಚ' ಎಂಬ ಸೂತ್ರದಿಂದ ನಿಷೇಧವಿರುವ ಕಾರಣ ಸ್ತ್ರೀಪ್ರತ್ಯಯವು ಬಂದು ಟಾಪ್‌ಪ್ರತ್ಯವು ಬಂದರೆ 'ವಿದ್ಯಾ' ಎಂಬ ರೂಪವು ನಿಷ್ಪನ್ನವಾಗುತ್ತದೆ. ವಿದ್ಯಾಶಬ್ದದಲ್ಲಿ 'ಅಕರ್ತರಿ ಚ' ಎಂಬುದಾಗಿ ಹೇಳಿದ್ದರಿಂದ ಯೋಗವು, 'ಸಂಜ್ಞಾಯಾಂ' ಎಂದು ಹೇಳಿದ್ದರಿಂದ ರೂಢಿಯು ಹೇಳಿದಂತಾಯಿತು.

ವಿವರಣೆ – 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರಕ್ಕೆ ಕಾಶಿಕಾವೃತ್ತಿಯಲ್ಲಿ 'ಭಾವೇ ಇತಿ ನ ಸ್ಮರ್ಯತೇ' ಎಂದು ಬರೆಯಲಾಗಿದೆ. ಅಂದರೆ ಹಿಂದಿನ ಸೂತ್ರದಿಂದ 'ಭಾವೇ' ಎಂಬುದು ಈ ಸೂತ್ರದಲ್ಲಿ ಅನುವೃತ್ತವಾಗುವುದಿಲ್ಲ ಎಂದರ್ಥ. ಹಾಗಾಗಿ ಹಿಂದಿನ ಸೂತ್ರದಿಂದ ಕ್ಯಪ್ ಪ್ರತ್ಯಯವಷ್ಟೇ ಅನುವೃತ್ತವಾಗುತ್ತದೆ. ಆದ್ದರಿಂದ ಸಾಮಾನ್ಯವಾಗಿ ಅಧಿಕೃತವಾಗಿರುವ 'ಭಾವೇ' ಎಂಬ ಸೂತ್ರದಲ್ಲಿರುವ 'ಭಾವೇ' ಎಂಬುದು 'ಅಕರ್ತರಿ ಚ ಕಾರಕೇ' ಎಂಬುದು 'ಕೃತ್ಯಲ್ಯುಟೋ ಬಹುಲಮ್' ಎಂಬಲ್ಲಿಯ ತನಕ ಅನುವೃತ್ತವಾಗುವುದರಿಂದ 'ಸಂಜ್ಞಾಯಾಂ ಸಮಜನಿಷದ' ಇತ್ಯಾದಿ ಸೂತ್ರದಲ್ಲೂ ಅನುವೃತ್ತವಾಗುತ್ತವೆ. ಹಾಗಾಗಿ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ಬರುವಂತೆ ಕರ್ತೃಭಿನ್ನ ಕಾರಕಾರ್ಥದಲ್ಲೂ ಕೂಡ ಕ್ಯಪ್‌ಪ್ರತ್ಯವು ಬರುತ್ತದೆ. ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ಬಂದರೆ ಜ್ಞಾನ ಎಂಬರ್ಥವು ದೊರೆಯುತ್ತದೆ. ಕರ್ತೃಭಿನ್ನಕಾರಕಾರ್ಥದಲ್ಲಿ ಕ್ಯಪ್ ಪ್ರತ್ಯಯವು ಬಂದರೆ ಜ್ಞಾನಸಾಧನ ಎಂಬರ್ಥವು ದೊರೆಯುತ್ತದೆ.

ಒಂದು ವೇಳೆ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಲ್ಲಿರುವ ಭಾವೇ ಎಂಬುದು ಅನುವೃತ್ತವಾಗಿದ್ದಲ್ಲಿ ಹಿಂದಿನ ಸೂತ್ರದಲ್ಲಿ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯವು ಪ್ರಾಪ್ತವಾಗುತ್ತಿತ್ತು. ಇದನ್ನು ತಿಳಿಸಲು 'ಭಾವೇ' ಎಂಬ ಪದಗ್ರಹಣವನ್ನು ಮಾಡಿದ್ದಾರೆ. ಆದ್ದರಿಂದ ಈ ಸೂತ್ರದಲ್ಲೂ ಕೂಡ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯವು ಬರುತ್ತದೆಂಬ ಅರ್ಥವು ದೊರೆಯುತ್ತಿತ್ತು. ಯಾವಾಗ ಹಿಂದಿನ ಸೂತ್ರದಿಂದ 'ಭಾವೇ' ಎಂಬುದನ್ನು ಅನುವೃತ್ತಿ ಮಾಡಬಾರದು ಎಂದು ವೃತ್ತಿಯಲ್ಲಿ ಹೇಳಲಾಯಿತೋ ಅದೇ ಕಾರಣದಿಂದ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯವನ್ನು ಮಾಡಬೇಕಾಗಿಲ್ಲ.

ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನಕಾರಕಾರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ಮಾಡಬೇಕೆಂಬುದು ಸ್ಪಷ್ಟವಾಯಿತು.

## ಟೀಕಾವಾಕ್ಯ ಬಹಳ ಗಹನ

ಪರಿಮಳ– ಅತ ಏವ ಏತಾವಂತಮಭಿಪ್ರಾಯಂ ದ್ಯೋತಯಿತುಂ ಸಮಜನಿಷದ ಇತ್ಯತ್ರ ಸಂಜ್ಞಾಯಾಮ್ ಇತ್ಯನುವೃತ್ತೇಃ ಇತ್ಯುಕ್ತಮ್ । 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಇತ್ಯಸ್ಯ ಅನುವೃತ್ತೇರಿತ್ಯರ್ಥಃ । ತೇನ ತತ್ಸಹನಿವಿಷ್ಟಭಾವಪದಾನುವೃತ್ತಿರಪಿ ಸೂಚಿತಾ । ಅನ್ಯಥಾ 'ಸಂಜ್ಞಾಯಾಮ್ ಸಮಜ' ಇತಿ ಸೂತ್ರ ಏವ ಸಂಜ್ಞಾಯಾಮ್ ಇತ್ಯಸ್ಯ ಸತ್ತ್ವಾದನುವೃತ್ತೇರಿತ್ಯುಕ್ತಿರಯುಕ್ತಾ ಸ್ಯಾತ್ । ಸಂಜ್ಞಾಯಾಮ್ ಇತ್ಯನುವೃತ್ತೇರಿತ್ಯುಕ್ತೌ ತು ಅನ್ಯಥಾನುಪಪತ್ತ್ಯಾ ಏಕದೇಶದ್ವಾರಾ 'ಅಕರ್ತರಿ ಚ' ಇತಿ ಸೂತ್ರಸ್ಮರಣೇನ ತಸ್ಯೈವ ಅನುವೃತ್ತಿಂ ಜ್ಞಾಪ್ಯಂತೀತ್ಯಭಿಪ್ರಾಯಃ ।

ಆದ್ದರಿಂದಲೇ ಇಷ್ಟು ಅಭಿಪ್ರಾಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಟೀಕೆಯಲ್ಲಿ 'ಸಂಜ್ಞಾಯಾಂ ಸಮಜನಿಷದ ಇತ್ಯತ್ರ ಸಂಜ್ಞಾಯಾಮ್ ಇತ್ಯನುವೃತ್ತೇಃ' ಎಂಬುದಾಗಿ ಹೇಳಿದ್ದಾರೆ. 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬುದರ ಅನುವೃತ್ತಿ ಆಗುತ್ತದೆಂಬುದು ಇದರ ಅರ್ಥ. ಹೀಗೆ ಹೇಳಿದ್ದರಿಂದ ಇದರ ಜೊತೆ ಹೇಳಲ್ಪಟ್ಟ ಭಾವಪದದ ಅನುವೃತ್ತಿಯನ್ನು ಕೂಡ ಸೂಚನೆ ಮಾಡಿದಂತಾಯಿತು. ಇಲ್ಲದಿದ್ದರೆ 'ಸಂಜ್ಞಾಯಾಮ್ ಸಮಜ' ಎಂಬೀ ಸೂತ್ರದಲ್ಲಿಯೇ ಸಂಜ್ಞಾ ಎಂಬ ಶಬ್ದವಿರುವುದರಿಂದ ಅದನ್ನು ಅನುವೃತ್ತಿಮಾಡುವ ಅವಶ್ಯಕತೆ ಇರಲಿಲ್ಲ. 'ಸಂಜ್ಞಾಯಾಮ್ ಇತ್ಯನುವೃತ್ತೇಃ' ಎಂದು ಹೇಳಿದ್ದರಿಂದ ಅನ್ಯಥಾನುಪಪತ್ತಿಯಿಂದ ಏಕದೇಶದ ಮೂಲಕ 'ಅಕರ್ತರಿ ಚ' ಎಂಬ ಸೂತ್ರದ ಸ್ಮರಣೆ ಆಗುತ್ತದೆ. ಅದನ್ನೇ ಅನುವೃತ್ತಿಮಾಡಬೇಕೆಂಬ ಅರ್ಥವು ತಿಳಿಯುತ್ತದೆ ಎಂದಭಿಪ್ರಾಯ.

ವಿವರಣೆ – ಟೀಕೆಯಲ್ಲಿ 'ಸಂಜ್ಞಾಯಾಂ ಸಮಜನಿಷದ ಇತ್ಯತ್ರ ಸಂಜ್ಞಾಯಾಮ್ ಇತ್ಯನುವೃತ್ತೇಃ' ಎಂಬುದಾಗಿ ಹೇಳಿದ್ದಾರೆ. ವಾಸ್ತವಿಕವಾಗಿ 'ಸಂಜ್ಞಾಯಾಮ್ ಸಮಜನಿಷದ' ಎಂಬ ಸೂತ್ರದಲ್ಲೂ ಕೂಡ ಸಂಜ್ಞಾ ಎಂಬ ಶಬ್ದವು ಇರುವುದರಿಂದ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ಎಂಬ ೧೯ನೆಯ





ಸೂತ್ರದಿಂದ ಸಂಜ್ಞಾಯಾಂ ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳುವ ಅವಶ್ಯಕತೆ ಇಲ್ಲ. ಹಾಗೆ ಅನುವೃತ್ತಿಮಾಡಿಕೊಂಡರೆ ವ್ಯರ್ಥವೇ ಆಗುತ್ತದೆ. ಆದರೆ ಟೀಕೆಯಲ್ಲಿ 'ಸಂಜ್ಞಾಯಾಮ್' ಇತ್ಯನುವೃತ್ತೇಃ' ಎಂದು ಹೇಳಿದ್ದಾರೆ. ಇದು ಏಕೆ?

ಈ ಪ್ರಶ್ನೆಗೆ ಉತ್ತರವನ್ನು ಹೇಳುತ್ತಿದ್ದಾರೆ. 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಲ್ಲಿ 'ಸಂಜ್ಞಾಯಾಮ್' ಎಂಬುದನ್ನು ಬಿಟ್ಟು 'ಅಕರ್ತರಿ ಚ ಕಾರಕೇ' ಎಂಬುದನ್ನೇ ಅನುವೃತ್ತಿ ಮಾಡಿಕೊಳ್ಳಬೇಕು. ಹೀಗೆ ಮಾಡದಿದ್ದರೆ ಕರ್ತೃಭಿನ್ನಕಾರಕಾದ್ಯರ್ಥದಲ್ಲಿ ಎಂಬರ್ಥವೇ ದೊರೆಯುವುದಿಲ್ಲ. ಮತ್ತು ಸಂಜ್ಞಾಯಾಮ್ ಎಂಬ ಪದಗ್ರಹಣವು ಕೂಡ ವ್ಯರ್ಥವಾಗುತ್ತದೆ. ಆದ್ದರಿಂದ ಟೀಕೆಯಲ್ಲಿ ಸೂತ್ರದ ಏಕದೇಶಗ್ರಹಣವನ್ನಷ್ಟೇ ಮಾಡಿದ್ದಾರೆ. ತನ್ಮೂಲಕ ಅಕರ್ತರಿ ಚ ಎಂಬ ಸೂತ್ರವನ್ನು ನೆನಪು ಮಾಡಿದ್ದಾರೆ. ಸಂಜ್ಞಾಯಾಮ್ ಎಂದು ಹೇಳಿದ ಮಾತ್ರಕ್ಕೆ ಅಕರ್ತರಿ ಚ ಎಂಬ ಸೂತ್ರದಲ್ಲಿನ ಸಂಜ್ಞಾಯಾಮ್ ಎಂಬುದನ್ನೂ ಅನುವೃತ್ತಿಮಾಡಿಕೊಳ್ಳಬೇಕೆಂದು ತಿಳಿಯಬಾರದು. 'ಅಕರ್ತರಿ ಚ ಕಾರಕೇ' ಎಂಬುದಷ್ಟೇ ಅನುವೃತ್ತವಾಗುತ್ತದೆಂಬುದು ಟೀಕಾರಾಯರ ಅಭಿಪ್ರಾಯ.

## ನಿಜಕ್ಕೂ ಸಂಜ್ಞಾಪದದ ಅನುವೃತ್ತಿ ಬೇಕೇ?

**ಪರಿಮಳ– ನನು ಚ ಅಕರ್ತರೀತ್ಯತಃ ಸಂಜ್ಞಾಪದೇ ಅನುವರ್ತಮಾನೇಽಪಿ ಇಹ ಸಂಜ್ಞಾಗ್ರಹಣಂ ಕಿಮರ್ಥಮಿತಿ ಚೇತ್ ಉಚ್ಯತೇ । 'ಅಕರ್ತರಿ ಚ' ಇತ್ಯತ್ರೋಪಾತ್ತಂ ಸಂಜ್ಞಾಪದಮವ್ಯಾವರ್ತಕಮ್ । ಚಶಬ್ದಸ್ಯ ಸಂಜ್ಞಾಯಾಂ ಚ ಇತ್ಯತ್ರ ಅನ್ವಯೇನ ಸಂಜ್ಞಾಯಾಮಸಂಜ್ಞಾಯಾಂ ಚ ಇತಿ ವ್ಯಾಖ್ಯಾನಾತ್ । ಏವಂ ತರ್ಹಿ ತತ್ರತ್ಯ ಸಂಜ್ಞಾಪದಾನುವೃತ್ತಿಃ ಕಿಮರ್ಥಮುಕ್ತಮಿತಿ ಚೇತ್**

ಆಕ್ಷೇಪ – ಅಕರ್ತರಿ ಚ ಕಾರಕೇ ಎಂಬ ಸೂತ್ರದಿಂದ ಸಂಜ್ಞಾ ಎಂಬ ಪದವನ್ನು ಅನುವೃತ್ತಿ ಮಾಡುವುದಾದರೆ 'ಸಮಜನಿಷದ' ಎಂಬ ಸೂತ್ರದಲ್ಲಿ ಸಂಜ್ಞಾ ಎಂಬ ಪದಗ್ರಹಣವನ್ನು ಮಾಡಿರುವುದು ಏಕೆ?

ಉತ್ತರ – 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಲ್ಲಿರುವ ಸಂಜ್ಞಾಪದವು ವ್ಯಾವರ್ತಕವಾಗಿಲ್ಲ. ಏಕೆಂದರೆ, ಅಕರ್ತರಿ ಚ ಎಂಬ ಸೂತ್ರದಲ್ಲಿರುವ ಚಶಬ್ದವು





ಸಂಜ್ಞಾಯಾಂ ಎಂಬ ಪದದಲ್ಲಿ ಅನ್ವಯವನ್ನು ಹೊಂದುತ್ತದೆ. ಆದ್ದರಿಂದ 'ಸಂಜ್ಞಾಯಾಂ ಅಸಂಜ್ಞಾಯಾಂ ಚ; ರೂಢಿಯಲ್ಲಿ ಹಾಗೂ ರೂಢಿಯಿಲ್ಲದ ಸ್ಥಳದಲ್ಲಿ' ಎಂಬುದಾಗಿ ವ್ಯಾಖ್ಯಾನವನ್ನು ಮಾಡಿರುತ್ತಾರೆ.

ಹಾಗಾದರೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಲ್ಲಿರುವ ಸಂಜ್ಞಾಪದವನ್ನು ಸಮಜನಿಷದ ಎಂಬ ಸೂತ್ರದಲ್ಲಿ ಏಕೆ ಅನುವೃತ್ತಿ ಮಾಡಬೇಕು.

## 'ಸಂಜ್ಞಾಯಾಂ ಇತ್ಯನುವೃತ್ತೇಃ' ಎಂದೇಕೆ ಹೇಳಿದರು?

ಪರಿಮಳ– ನ । ತತ್ ಸೂತ್ರಸ್ಯೈವ ಅತ್ರಾನುವೃತ್ತ್ಯರ್ಥತ್ವಾತ್ ಇತ್ಯುಕ್ತತ್ವಾತ್ । ತರ್ಹಿ ಯಥಾರ್ಥಜ್ಞಾನಸಾಧನೇ ವಿದ್ಯಾಶಬ್ದಸ್ಯ ರೂಢಿರ್ನ ಜ್ಞಾಪಿತಾ ಸ್ಯಾದಿತಿ ಚೇನ್ನ । 'ಸಮಜನಿಷದ' ಇತಿ ಸೂತ್ರಸ್ಥಸಂಜ್ಞಾಪದಸ್ಯೈವ ರೂಢಿಜ್ಞಾಪಕತ್ವಾತ್ । ಅತ ಏವ ಸಮಜನಿಷದ ಇತ್ಯತ್ರ ಪ್ರತಿಪದಂ ಸಂಜ್ಞಾಯಾಮ್ ಇತ್ಯನುವೃತ್ತೇರನುಷಂಗಾತ್ ಇತ್ಯಪ್ಯರ್ಥ ಇತ್ಯಾಸ್ತಾಂ ತಾವತ್ ।

ಮೇಲಿನ ಪ್ರಶ್ನೆ ತಪ್ಪು. ಏಕೆಂದರೆ 'ಅಕರ್ತರಿ ಚ ಕಾರಕೇ' ಎಂಬ ಸೂತ್ರದ ಅನುವೃತ್ತಿಯನ್ನೇ ಇಲ್ಲಿ ವಿವಕ್ಷಿಸಬೇಕು ಎಂಬುದಾಗಿ ಈಗಾಗಲೇ ಉತ್ತರಿಸಿದ್ದಾಗಿದೆ. ಹಾಗಾದರೆ ಯಥಾರ್ಥಜ್ಞಾನಸಾಧನ ಎಂಬರ್ಥದಲ್ಲಿ ವಿದ್ಯಾಶಬ್ದಕ್ಕೆ ರೂಢಿ ಇದೆ ಎಂದು ತಿಳಿಸಿದಂತೆ ಆಗುವುದಿಲ್ಲವಲ್ಲ? ಎಂಬುದಾಗಿ ಶಂಕಿಸಬಾರದು. ಏಕೆಂದರೆ ಸಮಜನಿಷದ ಎಂಬ ಸೂತ್ರದಲ್ಲಿರುವ ಸಂಜ್ಞಾಪದವೇ ರೂಢಿ ಜ್ಞಾಪಕವಾಗುತ್ತದೆ. ಆದ್ದರಿಂದ ಸಮಜನಿಷದ ಎಂಬ ಸೂತ್ರದಲ್ಲಿರುವ ಸಮಜ, ನಿಷದ ಇತ್ಯಾದಿ ಎಲ್ಲ ಪದಗಳಲ್ಲಿಯೂ ಸಂಜ್ಞಾ ಎಂಬುದು ಅನುವೃತ್ತವಾಗುತ್ತದೆ ಎಂಬ ಅರ್ಥವನ್ನು ಹೇಳಲಾಗಿದೆ. ಈ ವಿಷಯವನ್ನು ಇಲ್ಲಿಗೆ ಮುಗಿಸೋಣ. ಹೆಚ್ಚು ವಿಸ್ತಾರ ಮಾಡುವುದು ಬೇಡ.

ವಿವರಣೆ – ಟೀಕೆಯಲ್ಲಿ ಸಂಜ್ಞಾಯಾಮ್ ಸಮಜನಿಷದ ಇತ್ಯತ್ರ ಸಂಜ್ಞಾಯಾಂ ಇತ್ಯನುವೃತ್ತೇಃ - ಎಂಬುದಾಗಿ ಹೇಳಿದ್ದಾರೆ. ಈ ವಾಕ್ಯವನ್ನು ನೋಡಿದಾಗ 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರದಲ್ಲಿ 'ಅಕರ್ತರಿ ಚ ಕಾರಕೇ ಸಂಜ್ಞಾಯಾಂ' ಎಂಬ ಸೂತ್ರದಲ್ಲಿರುವ ಸಂಜ್ಞಾಯಾಂ ಎಂಬ ಪದವನ್ನು





ಅನುವೃತ್ತಿ ಮಾಡಿಕೊಳ್ಳಬೇಕೆಂಬ ಅರ್ಥವು ಆಪಾತತಃ ತೋರುತ್ತದೆ. ಆದರೆ ಅಕರ್ತರಿ ಚ ಎಂಬ ಸೂತ್ರದಲ್ಲಿರುವ ಸಂಜ್ಞಾಯಾಂ ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳುವುದರೀದ ಯಾವುದೇ ಪ್ರಯೋಜನವಿಲ್ಲ. ಆ ಸೂತ್ರದಲ್ಲಿರುವ ಸಂಜ್ಞಾಪದವು ವ್ಯಾವರ್ತಕವಾಗಿಲ್ಲ. ಆದ್ದರಿಂದಲೇ ರೂಢಿ ಹಾಗೂ ರೂಢಿಭಿನ್ನಾರ್ಥವನ್ನು ವಿವಕ್ಷಿಸಬೇಕೆಂದು ಅಲ್ಲಿ ಹೇಳಲಾಗಿದೆ. ಇಂಥ ಸಂಜ್ಞಾಯಾಂ ಎಂಬ ಪದವನ್ನು ಸಂಜ್ಞಾಯಾಂ ಸಮಜನಿಷದ ಎಂಬಲ್ಲಿ ಅನುವೃತ್ತಿಮಾಡಿಕೊಳ್ಳುವುದರಿಂದ ಯಾವುದೇ ಪ್ರಯೋಜನವಿಲ್ಲ. ಹೀಗಿರುವಾಗ ಟೀಕೆಯಲ್ಲಿ 'ಸಂಜ್ಞಾಯಾಂ ಇತ್ಯನುವೃತ್ತೇಃ' ಎಂದು ಹೇಗೆ ಹೇಳಿದರು?

ಉತ್ತರ – ಟೀಕೆಯ ಅಭಿಪ್ರಾಯ 'ಅಕರ್ತರಿ ಚ' ಇತ್ಯಾದಿ ಸೂತ್ರದಲ್ಲಿರುವ ಸಂಜ್ಞಾಯಾಂ ಎಂಬ ಪದವನ್ನು ಅನುವೃತ್ತಿಮಾಡಿಕೊಳ್ಳಬೇಕೆಂಬುದಲ್ಲ. ಸಂಜ್ಞಾಯಾಂ ಎಂಬ ಪದವನ್ನು ಬಿಟ್ಟು ಅಕರ್ತರಿ ಚ ಕಾರಕೇ ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕೆಂಬುದೇ ಆಗಿದೆ. ಸಂಜ್ಞಾಯಾಂ ಅನುವೃತ್ತೇಃ ಎಂಬುದಾಗಿ ಹೇಳಿರುವುದು ಕೇವಲ ಸೂತ್ರವನ್ನು ನೆನಪು ಮಾಡುವುದಕ್ಕಾಗಿ ಮಾತ್ರ. ಸೂತ್ರದ ಏಕದೇಶಗ್ರಹಣದಿಂದ ಉಳಿದ ಸೂತ್ರಭಾಗದ ಅನುವೃತ್ತಿಯನ್ನು ಇಲ್ಲಿ ವಿವಕ್ಷಿಸಬೇಕು. ಆದ್ದರಿಂದ ಸಮಜನಿಷದ ಎಂಬ ಸೂತ್ರದಲ್ಲಿರುವ ಸಂಜ್ಞಾಪದವೇ ರೂಢಿಜ್ಞಾಪಕವಾಗಿದೆ. ಇದು ಅವ್ಯಾವರ್ತಕವಾದ ಪದವಲ್ಲ. ಆದ್ದರಿಂದಲೇ ಈ ಸೂತ್ರದಲ್ಲಿರುವ ಪ್ರತಿಯೊಂದು ಪದಗಳ ಜೊತೆ ಸಂಜ್ಞಾಯಾಂ ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡಿದ್ದಾರೆ.

## ಅದೃಶ್ಯತ್ವಾಧಿಕರಣದ ಚಂದ್ರಿಕೆಯನ್ನು ಓದಿರಿ

ಪರಿಮಳ– 'ಸಂಜ್ಞಾಯಾಂ ಸಮಜನಿಷದೇತ್ಯುಕ್ತೇಃ' ಇತ್ಯೇವ ಕ್ವಚಿತ್ ಪಾಠಃ। ತದಾ ತು ನ ಕ್ಲೇಶಃ । ಅರ್ಥವಿಶೇಷಾಲಾಭಃ । ಸಮರ್ಥಿತಂ ಚ ಜ್ಞಾನತತ್ಸಾಧನಯೋರ್ಮುಖ್ಯತ್ವಂ ವಿದ್ಯಾಶಬ್ದಸ್ಯ ಅದೃಶ್ಯತ್ವನಯಚಂದ್ರಿಕಾಯಾಮ್ ।

ತದ್ಭಾವೇಽಪಿ ಇತ್ಯಾದಿನಾ ಕೃತಂ ಚೋದ್ಯಂ ನಿರಾಹ – ಪರಶಬ್ದೇನೇತಿ ॥ ಉತ್ಕರ್ಷಃ = ಆಧಿಕ್ಯಮ್ । ಆಗಮೇನೇತಿ ॥ 'ದ್ವೇ ವಿದ್ಯೇ ವೇದಿತವ್ಯೇ' ಇತಿ ಪ್ರಾಗುಕ್ತವಾಕ್ಯೇನ ಇತ್ಯರ್ಥಃ। ಅಸ್ಯ = ಬ್ರಹ್ಮತಂತ್ರಾದಿಶಾಸ್ತ್ರಸ್ಯ ।

ಕೆಲವು ಪುಸ್ತಕಗಳಲ್ಲಿ 'ಸಂಜ್ಞಾಯಾಂ ಸಮಜನಿಷದ ಇತ್ಯುಕ್ತೇಃ' ಎಂಬ ಪಾಠವೇ ಕಾಣಿಸುತ್ತದೆ. ಈ ಪಕ್ಷದಲ್ಲಿ ಯಾವುದೇ ಕ್ಲೇಶವಿಲ್ಲ. ಯಾವುದೇ ಅರ್ಥವಿಶೇಷವೂ ಕೂಡ ಲಭ್ಯವಾಗುವುದಿಲ್ಲ. ವಿದ್ಯಾಶಬ್ದವು ಮುಖ್ಯವೃತ್ತಿಯಿಂದ ಯಥಾರ್ಥಜ್ಞಾನ ಹಾಗೂ ತತ್ಸಾಧನದಲ್ಲಿ ಪ್ರಯೋಗಿಸಲ್ಪಡುತ್ತದೆಂಬ ವಿಷಯದಲ್ಲಿ ಹೆಚ್ಚಿನ ವಿಚಾರವನ್ನು ಅದೃಶ್ಯತ್ವಾಧಿಕರಣದ ತಾತ್ಪರ್ಯ-ಚಂದ್ರಿಕೆಯಲ್ಲಿ ನೋಡಿ ತಿಳಿದುಕೊಳ್ಳಬೇಕು.

'ತದ್ಭಾವೇಽಪಿ' ಇತ್ಯಾದಿ ಗ್ರಂಥದಿಂದ ಮಾಡಲ್ಪಟ್ಟ ಪೂರ್ವಪಕ್ಷವನ್ನು 'ಪರಶಬ್ದೇನ' ಎಂಬ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಉತ್ಕರ್ಷಶಬ್ದಕ್ಕೆ ಆಧಿಕ್ಯ ಎಂದರ್ಥ.

'ಆಗಮೇನ' ಎಂದರೆ 'ದ್ವೇವಿದ್ಯೇ ವೇದಿತವ್ಯೇ ಎಂಬ ಹಿಂದೆ ಹೇಳಲ್ಪಟ್ಟ ವಾಕ್ಯದಿಂದ' ಎಂದರ್ಥ.

'ಅಸ್ಯ' ಎಂಬ ಪದಕ್ಕೆ 'ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ' ಎಂದರ್ಥ.

ವಿವರಣೆ - ಕೆಲವು ಪುಸ್ತಕಗಳಲ್ಲಿ 'ಸಂಜ್ಞಾಯಾಮ್ ಇತ್ಯನುವೃತ್ತೇಃ' ಎಂಬ ಪಾಠವೇ ಕಾಣಿಸುವುದಿಲ್ಲ. ಈ ಪಕ್ಷದಲ್ಲಿ ಅಕರ್ತರಿ ಚ ಕಾರಕೇ ಎಂಬ ಸೂತ್ರದಲ್ಲಿರುವ ಸಂಜ್ಞಾಯಾಮ್ ಎಂಬ ಪದವನ್ನು ಮಾತ್ರ ಅನುವೃತ್ತಿಮಾಡಿಕೊಳ್ಳಬೇಕೆಂಬ ಆಶಂಕೆಯು ಕೂಡ ಪ್ರಾಪ್ತವಾಗುವುದಿಲ್ಲ.

## ತಾತ್ಪರ್ಯಚಂದ್ರಿಕಾದಲ್ಲಿ ವಿದ್ಯಾಶಬ್ದಾರ್ಥ

ವಸ್ತುತಃ ವಿದ್ಯಾಶಬ್ದವನ್ನು ಜ್ಞಾನವೆಂಬರ್ಥದಲ್ಲಿಯೇ ಉಪಯೋಗಿಸಬೇಕು. ಏಕೆಂದರೆ ''ವ್ರಜಯಜೋರ್ಭಾವೇ ಕ್ಯಪ್'' ಎಂಬ ಸೂತ್ರದಿಂದ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ವಿಧಾನ ಮಾಡಲ್ಪಟ್ಟಿದೆ. ಆದ್ದರಿಂದ ವಿದ್‌ಧಾತುವಿಗೆ ಕ್ಯಪ್ ಪ್ರತ್ಯಯ ಬಂದು ವಿದ್ಯಾ ಎಂಬ ಶಬ್ದವು ಭಾವಾರ್ಥದಲ್ಲಿ ನಿಷ್ಪನ್ನವಾಗಿದೆ. ಆದರೂ ಸಹ 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರದಲ್ಲಿ 'ಭಾವ ಇತಿ ನ ಸ್ವರ್ಯತೇ' ಭಾವ ಎಂಬುದು ಅನುವೃತ್ತವಾಗುವುದಿಲ್ಲ ಎಂದು ಹೇಳಿರುವುದರಿಂದ 'ಸಮಜ್ಯಂತಿ ತಸ್ಯಾಮಿತಿ ಸಮಜ್ಯಾ' 'ನಿಷೀದಂತಿ ತಸ್ಯಾಮಿತಿ ನಿಷದ್ಯಾ' ಎಂಬುದಾಗಿ ಸಮಜ್ಯಾದಿ ಶಬ್ದಗಳಿಗೆ ಭಾವಾರ್ಥತ್ವವು ಇರುವುದಿಲ್ಲವೆಂದು ಹೇಳಿದ್ದರಿಂದಲೂ ಕ್ಯಬಂತವಾದರೂ ಸಹ (ಭಾವಾರ್ಥಕವಾದರೂ) ವಿದ್ಯಾಶಬ್ದವನ್ನೂ ಜ್ಞಾನಕರಣ ಎಂಬ ಮುಖ್ಯಾರ್ಥದಲ್ಲಿ ಪ್ರಯೋಗಿಸಬಹುದು.





## ತಾತ್ಪರ್ಯಚಂದ್ರಿಕೆಯ ವ್ಯಾಖ್ಯಾನವೆನಿಸಿದ ಪ್ರಕಾಶಟಿಪ್ಪಣಿಯಲ್ಲಿ ವಿದ್ಯಾಶಬ್ದಾರ್ಥ

ಆಕ್ಷೇಪ - ವಿದ್ಯಾಶಬ್ದವು ಜ್ಞಾನವೆಂಬರ್ಥದಲ್ಲಿಯೇ ಸಾಧುವಾಗುತ್ತದೆ. ಏಕೆಂದರೆ ''ವ್ರಜಯಜೋರ್ಭಾವೇ ಕ್ಯಪ್'' ಎಂಬ ಹಿಂದಿನ ಸೂತ್ರದಿಂದ 'ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್ ಶೀಙ್‌ಭೃಞಿಣಃ' ಎಂಬ ಮುಂದಿನ ಸೂತ್ರದಲ್ಲಿ ಭಾವಾರ್ಥಕದಲ್ಲಿರುವ 'ಕ್ಯಪ್' ಪ್ರತ್ಯಯವು ಅನುವೃತ್ತವಾಗುತ್ತದೆ. ಭಾವಾರ್ಥದಲ್ಲಿ ವಿದ್ ಧಾತುವಿಗೆ 'ಕ್ಯಪ್' ಪ್ರತ್ಯಯ ಬಂದು ವಿದ್ಯಾಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಜ್ಞಾನವೆಂಬರ್ಥವನ್ನೇ ಹೇಳಬೇಕು. ಇದನ್ನೇ

'ತತ್ಪ್ರಾಪ್ತಿಹೇತುಜ್ಞಾನಂ ಚ ಕರ್ಮ ಚೋಕ್ತಂ ಮಹಾಮುನೇ ।
ಆಗಮೋತ್ಥಂ ವಿವೇಕಾಚ್ಚ ದ್ವಿಧಾ ಜ್ಞಾನಂ ತಥೋಚ್ಯತೇ ॥'

ಎಂಬುದಾಗಿ ಪರಾಶರರ ಮಾತಿನಲ್ಲಿ ಜ್ಞಾನವೆಂಬರ್ಥದಲ್ಲಿ ವಿದ್ಯಾಶಬ್ದವನ್ನು ಪ್ರಯೋಗಿಸಿದ್ದು ಕಾಣಿಸುತ್ತಿದೆ. ಆದ್ದರಿಂದ ಪರವಿದ್ಯಾ ಹಾಗೂ ಅಪರವಿದ್ಯಾ ಎಂಬಲ್ಲಿರುವ ವಿದ್ಯಾಶಬ್ದಕ್ಕೆ ಜ್ಞಾನವೆಂದೇ ಅರ್ಥ.

ಸಮಾಧಾನ - 'ವ್ರಜಯಜೋರ್ಭಾವೇ' ಎಂಬ ಹಿಂದಿನ ಸೂತ್ರದಿಂದ ಭಾವ ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡಿದ್ದಲ್ಲಿ ಜ್ಞಾನವೆಂಬರ್ಥವನ್ನು ಮಾತ್ರ ವಿದ್ಯಾಶಬ್ದಕ್ಕೆ ವಿವಕ್ಷಿಸಬಹುದಿತ್ತು. ಆದರೆ ವ್ಯವಹಿತವಾದ 'ಭಾವೇ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಲ್ಲಿರುವ 'ಭಾವೇ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಲಾಗಿದೆ. ಏಕೆಂದರೆ ಈ ಸೂತ್ರವು 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಎಲ್ಲಾ ಸೂತ್ರಗಳಲ್ಲಿಯೂ ಅನುವೃತ್ತವಾಗುತ್ತದೆ. ಆದ್ದರಿಂದ ವಿದ್ಯಾಶಬ್ದಕ್ಕೆ ಕೇವಲ ಜ್ಞಾನವೆಂಬರ್ಥವನ್ನು ಹೇಳಲು ಸಾಧ್ಯವಿಲ್ಲ.

ಆದ್ದರಿಂದ ಇಲ್ಲಿ 'ಭಾವೇ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಿಂದಲೇ 'ಭಾವೇ' ಎಂಬ ಪದವು ಅನುವೃತ್ತವಾಗುತ್ತದೆ. ಹೀಗಿದ್ದರೂ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿ ಪುನಃ ಭಾವೇ ಎಂದೇಕೆ ಹೇಳಿದರು ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. 'ವ್ಯರ್ಥಮಪಿ ಕಂಚಿದರ್ಥಂ ಜ್ಞಾಪಯತಿ' ಎಂಬ ನಿಯಮದ ಪ್ರಕಾರ ಏನೋ ಒಂದು ಸಾರ್ಥಕ್ಯವನ್ನು ತಿಳಿಸುವುದಕ್ಕಾಗಿ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿ ಭಾವೇ ಎಂಬ ಪದವನ್ನು ಪ್ರಯೋಗಿಸಲಾಗಿದೆ.





ಆದೇನೆಂದರೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬಲ್ಲಿ ಹೇಳಲಾದ ಕರ್ತೃಭಿನ್ನವಾದ ಕಾರಕಗಳಲ್ಲಿ ಎಂಬುದನ್ನು ವ್ಯಾವರ್ತ್ಯ ಮಾಡುವುದಕ್ಕಾಗಿ; ಕೇವಲ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆಂದು ತಿಳಿಸುವುದಕ್ಕಾಗಿ ಪುನಃ 'ಭಾವೇ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಅನುವೃತ್ತಿಯಿಂದ ಸಿದ್ಧವಾಗುತ್ತಿದ್ದರೂ ಪುನಃ 'ಭಾವೇ' ಎಂದು ಹೇಳಿದ್ದರಿಂದ ಕ್ಯಪ್ ಪ್ರತ್ಯಯವು ಕೇವಲ ಭಾವಾರ್ಥದಲ್ಲಿ ಬರುತ್ತದೆಂಬ ಪ್ರಯೋಜನವನ್ನು ಸೂತ್ರಕಾರನು ವಿವಕ್ಷಿಸಿದ್ದಾನೆಂದು ತಿಳಿಯಬೇಕು.

ಪ್ರಕೃತ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿರುವ ಭಾವಪದವನ್ನು 'ಸಂಜ್ಞಾಯಾಂ ಸಮಜನಿಷದ'' ಎಂಬ ಸೂತ್ರದಲ್ಲಿ ಅನುವೃತ್ತಿಮಾಡಿಕೊಂಡಿದ್ದರೆ ವಿದ್ಯಾಶಬ್ದವು ಜ್ಞಾನವೆಂಬರ್ಥದಲ್ಲಿಯೇ ಮುಖ್ಯವಾಗಿ ಪ್ರಯುಕ್ತವಾಗುತ್ತಿತ್ತು.

ಆದರೆ 'ಭಾವೇ' ಎಂಬ ಪದವನ್ನು 'ವ್ರಜಯಜೋರ್ಭಾವೇ' ಎಂಬ ಸೂತ್ರದಿಂದ ಅನುವೃತ್ತಿ ಮಾಡಿಕೊಂಡಿಲ್ಲ. ಏಕೆಂದರೆ 'ನ ಸ್ವರ್ಯತೇ' ಎಂದರೆ ಸ್ವರಿತಸ್ವರದಲ್ಲಿ 'ವ್ರಜಯಜೋರ್ಭಾವೇ' ಎಂಬಲ್ಲಿರುವ 'ಭಾವೇ' ಎಂಬ ಪದವನ್ನು ಉಚ್ಚಾರ ಮಾಡಿಲ್ಲ. ಆದ್ದರಿಂದ ಅದನ್ನು ಅನುವೃತ್ತಿ ಮಾಡಿಕೊಳ್ಳಲು ಸಾಧ್ಯವಿಲ್ಲ ಎಂದು ಹೇಳಿದ್ದರಿಂದ 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರದಲ್ಲಿ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿರುವ 'ಕ್ಯಪ್' ಎಂಬ ಪ್ರತ್ಯಯವನ್ನೇ ಅನುವೃತ್ತಿ ಮಾಡಿಕೊಳ್ಳಬೇಕು ಹೊರತು 'ಅಕರ್ತರಿ ಚ ಕಾರಕೇ' ಎಂಬುದನ್ನು ವ್ಯಾವೃತ್ತಿ ಮಾಡುವ 'ಭಾವೇ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬಾರದು.

ಯಾವುದಾದರೂ ಪದವನ್ನು ಪಾಣಿನಿಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕಾದರೆ ಅಂತಹ ಪದವನ್ನು ಸೂತ್ರಕಾರನು ಸ್ವರಿತಸ್ವರದಲ್ಲಿ ಉಚ್ಚರಿಸಿರುತ್ತಾನೆ. ಆದ್ದರಿಂದಲೇ ''ಸ್ವರಿತೇನಾಧಿಕಾರಃ'' ಸ್ವರಿತಸ್ವರದಲ್ಲಿ ಉಚ್ಚರಿಸಲ್ಪಟ್ಟದ್ದು ಅಧಿಕಾರಸೂತ್ರವಾಗುತ್ತದೆಂದು ಪಾಣಿನಿಯೇ ಹೇಳಿದ್ದಾನೆ. 'ಭಾವೇ' ಎಂಬುದು ಹಾಗೂ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬುದು ಸ್ವರಿತಸ್ವರದಲ್ಲಿ ಉಚ್ಚರಿಸಲ್ಪಟ್ಟಿಲ್ಲ. ಆದ್ದರಿಂದ 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಎಲ್ಲೆಡೆಯೂ 'ಭಾವೇ' ಎಂಬುದೂ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬುದೂ ಅನುವೃತ್ತವಾಗುತ್ತದೆ. ಇದರಿಂದ ಭಾವಾರ್ಥದಲ್ಲಿ ಮತ್ತು ಕರ್ತೃವ್ಯತಿರಿಕ್ತವಾದ ಕಾರಕದಲ್ಲಿ 'ಕ್ಯಪ್' ಪ್ರತ್ಯಯವನ್ನು 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರವು ವಿಧಾನ ಮಾಡುತ್ತಿದೆ ಎಂದು ಹೇಳಿದಂತಾಗುತ್ತದೆ. ಅಂದರೆ 'ಕ್ಯಪ್'





ಪ್ರತ್ಯಯವು ಭಾವಾರ್ಥದಲ್ಲಿಯೂ ಬರುತ್ತದೆ. ಹಾಗೂ ಕರ್ತೃವ್ಯತಿರಿಕ್ತವಾದ, ಕರಣ, ಅಧಿಕರಣ, ಕರ್ಮ ಮೊದಲಾದ ಅರ್ಥಗಳಲ್ಲಿಯೂ 'ಕ್ಯಪ್' ಪ್ರತ್ಯಯವು ಬರುತ್ತದೆಂದು ಹೇಳಿದಂತಾಯಿತು. ಆದ್ದರಿಂದ ವಿದ್ಯಾಶಬ್ದವು ಜ್ಞಾನವೆಂಬರ್ಥವನ್ನು ಹೇಳುವಂತೆ ಜ್ಞಾನಕರಣ ಎಂಬರ್ಥವನ್ನೂ ಸಹ ಮುಖ್ಯವಾಗಿಯೇ ಹೇಳುತ್ತದೆ.

ಇದೇ ವಿಷಯವನ್ನು ಪ್ರಕ್ರಿಯಾಪ್ರಸಾದವೆಂಬ ವ್ಯಾಕರಣ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ - ''ಅನಂತರಭಾವಗ್ರಹಣಂ ನ ಸ್ವರ್ಯತೇ । ತೇನ ಭಾವಾದಾವರ್ಥೇ'' ಅನಂತರವಿರುವ ಭಾವಶಬ್ದವು ಸ್ವರಿತಸ್ವರದಲ್ಲಿ ಉಚ್ಚರಿಸಲ್ಪಟ್ಟಿಲ್ಲ. ಆದ್ದರಿಂದ ಭಾವಾದ್ಯರ್ಥಗಳಲ್ಲಿಯೇ 'ಕ್ಯಪ್' ಪ್ರತ್ಯಯವು ಬರುತ್ತದೆ ಎಂದು. ಆದ್ದರಿಂದಲೇ ನ್ಯಾಯಸುಧೆಯ ಜಿಜ್ಞಾಸಾಧಿಕರಣದಲ್ಲಿಯೂ ''ಯಥಾರ್ಥಜ್ಞಾನತತ್ಸಾಧನಯೋರ್ವಿದ್ಯಾಶಬ್ದಸ್ಯ ಯೋಗರೂಢಿಭ್ಯಾಂ ಪ್ರವೃತ್ತತ್ವಾತ್'' ಎಂದು ಹೇಳಲಾಗಿದೆ.

## ವಿದ್ಯೆ ಎಂದರೇನು?

ಗುರ್ವರ್ಥದೀಪಿಕಾ – 'ವಿದ ಜ್ಞಾನೇ' ಇತಿ ಧಾತುವ್ಯಾಖ್ಯಾನರೀತ್ಯಾ ಮಿಥ್ಯಾಜ್ಞಾನತತ್ವಜ್ಞಾನಸಾಧಾರಣಜ್ಞಾನಮಾತ್ರೇ ವಿದ್ಯಾಶಬ್ದಪ್ರಸಕ್ತೌ ಸತ್ಯಾಂ ಸಾರ್ವತ್ರಿಕಯೋಗಮಾತ್ರಲಭ್ಯಪ್ರಯೋಗವ್ಯುದಾಸಾಯ 'ಸಂಜ್ಞಾಯಾಮ್' ಇತಿ ರೂಢ್ಯಪರಪರ್ಯಾಯಸಂಜ್ಞಾಪದೇನ ತದೇಕದೇಶಂ ಗೃಹ್ಣತಾ ಪಾಣಿನಿನೈವ 'ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯಃ' ಇತಿ ನ್ಯಾಯೇನ ಮುಖ್ಯೇ ತತ್ವಜ್ಞಾನೇ ತತ್ಸಾಧನೇ ಚ ವಿದ್ಯಾಪದಸ್ಯ ರೂಢಿರನುಶಿಷ್ಟಾ ಇತಿ ಭಾವೇನೋಕ್ತಮ್ – ಯಥಾರ್ಥಜ್ಞಾನೇತಿ ॥

'ನದೀತೀರೇ ಪಂಚಫಲಾನಿ ಸಂತಿ' ಇತಿ ಯತ್ಕಿಂಚಿದ್ ಯಥಾರ್ಥಜ್ಞಾನತತ್ಸಾಧನವಾಕ್ಯೇ ವಿದ್ಯಾಶಬ್ದಸ್ಯಾಪ್ರಯೋಗೇನ ವೇದಾದೌ ವಿದ್ಯಾಶಬ್ದಪ್ರಯೋಗೇನ ಚ ಯಥಾರ್ಥಜ್ಞಾನತತ್ಸಾಧನಪ್ರಬಂಧವಿಶೇಷಯೋರಿತ್ಯರ್ಥಃ । ತದೇವ ಸೂತ್ರಮ್ ಏಕದೇಶಗ್ರಹಣೇನ ಸ್ಮಾರಯತಿ – ಸಮಜನಿಷದೇತಿ ॥ 'ಸಂಜ್ಞಾಯಾಂ ಸಮಜ- ನಿಷದ- ನಿಪತ- ಮನ- ವಿದ- ಷುಞ್- ಶೀಙ್- ಭೃಞಿಣಃ' ಇತಿ ಸೂತ್ರೇ ಸಂಜ್ಞಾಯಾಮಿತಿ ಆದೌ ಉದಿತರೂಢ್ಯರ್ಥಪದಸ್ಯ ಸಮಜ- ನಿಷದ- ನಿಪತ- ಮನ- ವಿದಾದಿ ಸಕಲಧಾತುಷ್ವಪಿ ಅನುವರ್ತನಾತ್ ಕ್ಯಪ್‌ಪ್ರತ್ಯಯೇ ಚ ಕೃತೇ ಸಮಜ್ಯಾ, ನಿಷದ್ಯಾ ಇತಿ ಪದವತ್ ವಿದ್ಯೇತಿ ಪದಂ ಯಥಾರ್ಥಜ್ಞಾನೇ ತತ್ಸಾಧನೇ ಚ ಯೋಗರೂಢಿಭ್ಯಾಂ ಪ್ರವೃತ್ತಮಿತ್ಯರ್ಥಃ





ತೈಸ್ತೈರ್ವಾದಿಭಿಃ ಸ್ವಸ್ವಕೃತದುರ್ವಿದ್ಯಾಸ್ವಪಿ ವಿದ್ಯಾಪ್ರಯೋಗೋಽಭಿಮಾನಮಾತ್ರಾದೇವ ಕ್ರಿಯತೇ ನ ತ್ವನುಶಾಸನಬಲಾತ್ ಇತಿ ಭಾವಃ ॥

'ವಿದ ಜ್ಞಾನೇ' ಎಂಬ ಧಾತುವ್ಯಾಖ್ಯಾನದ ಪ್ರಕಾರ ಮಿಥ್ಯಾಜ್ಞಾನ ಹಾಗೂ ತತ್ವಜ್ಞಾನಗಳಲ್ಲಿ ಸಾಧಾರಣವಾದ ಜ್ಞಾನ ಎಂಬರ್ಥದಲ್ಲಷ್ಟೇ ವಿದ್ಯಾಶಬ್ದವು ನಿಷ್ಪನ್ನವಾಗುತ್ತದೆ. ಹೀಗಿರುವಾಗ ಎಲ್ಲೆಡೆಯೂ ಕೇವಲ ಯೋಗದಿಂದ ಲಭ್ಯವಾದ ಪ್ರಯೋಗವನ್ನು ನಿರಾಕರಣೆ ಮಾಡುವ ಮೂಲಕ 'ಸಂಜ್ಞಾಯಾಂ' ಎಂಬುದಾಗಿ ರೂಢಿ ಎಂಬರ್ಥವನ್ನು ಹೇಳುವ ಸಂಜ್ಞಾಪದದಿಂದ ತದೇಕದೇಶವನ್ನು ಸ್ವೀಕರಿಸುವ ಪಾಣಿನಿಯಿಂದಲೇ 'ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯಃ' ಎಂಬ ನ್ಯಾಯದ ಮೂಲಕ ತತ್ವಜ್ಞಾನ ಹಾಗೂ ತತ್ವಜ್ಞಾನಕ್ಕೆ ಸಾಧನ ಈ ಎರಡೂ ಅರ್ಥಗಳಲ್ಲಿ ವಿದ್ಯಾಶಬ್ದಕ್ಕೆ ರೂಢಿಯನ್ನು ಅಂಗೀಕರಿಸಲಾಗಿದೆ. ಈ ಅಭಿಪ್ರಾಯದಿಂದ 'ಯಥಾರ್ಥಜ್ಞಾನ' ಇತ್ಯಾದಿ ವಾಕ್ಯವು ಹೊರಟಿದೆ.

'ನದೀ ತೀರೇ ಪಂಚಫಲಾನಿ ಸಂತಿ' ಎಂಬ ವಾಕ್ಯದಲ್ಲಿ ವಿದ್ಯಾಶಬ್ದದ ಪ್ರಯೋಗವು ಇಲ್ಲ. ವೇದಾದಿಗಳಲ್ಲಿ ವಿದ್ಯಾಶಬ್ದದ ಪ್ರಯೋಗವಿದೆ. ಆ ಕಾರಣದಿಂದ ಯಥಾರ್ಥಜ್ಞಾನ ಹಾಗೂ ತತ್ಸಾಧನ-ವಿಶೇಷಗಳಲ್ಲಿ ಎಂಬರ್ಥವನ್ನು ಹೇಳಲಾಗಿದೆ. ಅದನ್ನೇ ಏಕದೇಶಗ್ರಹಣದಿಂದ ಸೂತ್ರವನ್ನು 'ಸಮಜ-ನಿಷದ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

'ಸಂಜ್ಞಾಯಾಂ ಸಮಜ- ನಿಷದ- ನಿಪತ- ಮನ- ವಿದ- ಷುಞ್- ಶೀಙ್- ಭೃಞಿಣಃ' ಎಂಬ ಸೂತ್ರದಲ್ಲಿ ರೂಢ್ಯರ್ಥವನ್ನು ಹೇಳುವ ಸಂಜ್ಞಾಯಾಂ ಎಂಬ ಪದಕ್ಕೆ ಸಮಜ- ನಿಷದ- ನಿಪತ- ಮನ- ವಿದ- ಮೊದಲಾದ ಎಲ್ಲಾ ಧಾತುಗಳಲ್ಲೂ ಪ್ರತ್ಯೇಕವಾಗಿ ಅನ್ವಯವಿದೆ. ಆದ್ದರಿಂದ ಈ ಧಾತುಗಳಿಗೆ ಕ್ಯಪ್‌ಪ್ರತ್ಯಯವು ಪ್ರಾಪ್ತವಾದರೆ ಸಮಜ್ಯಾ , ನಿಷದ್ಯಾ ಇತ್ಯಾದಿ ಪ್ರಯೋಗಗಳಂತೆ ವಿದ್ಯಾ ಎಂಬ ಪದವು ಯಥಾರ್ಥಜ್ಞಾನ ಹಾಗೂ ತತ್ಸಾಧನದಲ್ಲಿ ಯೋಗರೂಢಿಗಳಿಂದ ಪ್ರವೃತ್ತವಾಗುತ್ತದೆ. ಆಯಾ ವಾದಿಗಳು ತಮ್ಮಿಂದ ರಚಿತವಾದ ದುರ್ವಿದ್ಯೆಗಳಲ್ಲೂ ವಿದ್ಯಾಪದಪ್ರಯೋಗವನ್ನು ಕೇವಲ ಅಭಿಮಾನದಿಂದಷ್ಟೇ ಮಾಡುತ್ತಾರೆ. ಆ ವಿಷಯದಲ್ಲಿ ಯಾವುದೇ ಅನುಶಾಸನಗಳು ಇರುವುದಿಲ್ಲ.

## ಆಖ್ಯಾ ಎಂಬ ಪದವನ್ನೇಕೆ ಬಳಸಿದ್ದಾರೆ?

ವಾಕ್ಯಾರ್ಥಚಂದ್ರಿಕಾ – ನನ್ವನೇನಾರ್ಥವಿವಕ್ಷಾಪೂರ್ವಕತ್ವಾದೌ ನ ಕಿಮಪಿ ಮಾನ-ಮುಕ್ತಮ್, ಇತಿ ಕಥಮನೇನೋಕ್ತಶಂಕಾಪರಿಹಾರಃ? ಇತ್ಯತ ಆಖ್ಯಾಪದಸೂಚಿತಂ ಮಾನ-ಮುದಾಹೃತ್ಯ ತದುಪಪಾದಯಿತುಮಾಹ – ಅಯಮಿತಿ ॥





ಅರ್ಥವಿವಕ್ಷಾಪೂರ್ವಕತ್ವಾದಿಗಳ ವಿಷಯದಲ್ಲಿ ಯಾವುದೇ ಪ್ರಮಾಣವನ್ನು ಹೇಳಿದಂತಾಗಲಿಲ್ಲ. ಆದ್ದರಿಂದ ಅರ್ಥವಿವಕ್ಷಾಪೂರ್ವಕತ್ವಾದಿಗಳಿಲ್ಲ ಎಂಬ ಹಿಂದಿನ ಆಶಂಕೆಗಳಿಗೆ ಪರಿಹಾರವನ್ನು ಹೇಗೆ ಮಾಡಿದಂತಾಯಿತು? ಈ ಪ್ರಶ್ನೆಗೆ 'ಆಖ್ಯಾ' ಎಂಬ ಪದದಿಂದ ಸೂಚಿತವಾದ ಪ್ರಮಾಣವನ್ನು ಉದಾಹರಿಸುವ ಮೂಲಕ ಉತ್ತರಿಸುತ್ತಿದ್ದಾರೆ. ಇದರ ಉಪಪಾದನೆಗಾಗಿಯೇ 'ಅಯಮಭಿಸಂಧಿಃ' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ - ಪ್ರಶ್ನೆ – ಬೇರೆ ಗ್ರಂಥಗಳನ್ನು ಪರಿತ್ಯಾಗ ಮಾಡಿ ಬ್ರಹ್ಮಸೂತ್ರಗಳನ್ನೇ ವ್ಯಾಖ್ಯಾನ ಮಾಡಲು ಯಾವುದೇ ಕಾರಣಗಳಿಲ್ಲ. ಏಕೆಂದರೆ ಬ್ರಹ್ಮಸೂತ್ರಗಳಲ್ಲಿ ಅರ್ಥವಿವಕ್ಷಾಪೂರ್ವಕತ್ವವು ಇರುವುದಿಲ್ಲ. ಪ್ರಾಮಾಣ್ಯವೂ ಕೂಡ ಇರುವುದಿಲ್ಲ. ಈ ಆಕ್ಷೇಪವನ್ನು ಹಿಂದೆ ಮಾಡಲಾಯಿತು. ಇದಕ್ಕೆ ಪರಮಾಖ್ಯ-ವಿದ್ಯಾಮ್ವ್ಯಾಖ್ಯಾಂ ಕರೋಮಿ ಎಂಬ ಆಚಾರ್ಯರ ಮಾತಿನಿಂದ ಉತ್ತರ ನೀಡಿದಂತೆ ಆಗುವುದಿಲ್ಲ. ಈ ಮಾತಿನಿಂದ ಅರ್ಥವಿವಕ್ಷಾಪೂರ್ವಕತ್ವವನ್ನಾಗಲೀ ಪ್ರಾಮಾಣ್ಯವನ್ನಾಗಲೀ ಹೇಳಿದಂತೆ ಆಗುವುದಿಲ್ಲ. ಆದ್ದರಿಂದ ಹಿಂದಿನ ಆಕ್ಷೇಪವು ಹಾಗೇ ಉಳಿಯತಲ್ಲವೇ?

ಉತ್ತರ – ಪರಮಾಖ್ಯವಿದ್ಯಾ ಎಂಬಲ್ಲಿರುವ ಆಖ್ಯಾ ಎಂಬ ಪದದಿಂದಲೇ ಮೇಲಿನ ಪ್ರಶ್ನೆಗೆ ಉತ್ತರಿಸಿದ್ದಾರೆ. ಪರಮಾ ಎಂಬ ಹೆಸರುಳ್ಳ ವಿದ್ಯೆಯನ್ನು ನಾನು ವ್ಯಾಖ್ಯಾನ ಮಾಡುತ್ತಿದ್ದೇನೆಂದು ಆಚಾರ್ಯರು ಹೇಳುತ್ತಿದ್ದಾರೆ. ಆಥರ್ವಣೋಪನಿಷತ್ತಿನಲ್ಲಿ ಬ್ರಹ್ಮಸೂತ್ರಗಳಿಗೆ ಪರವಿದ್ಯಾ ಎಂಬ ಶಬ್ದಪ್ರಯೋಗವನ್ನು ಮಾಡಿದ್ದಾರೆ. ಈ ಮಾತಿನಿಂದ ಮೇಲಿನ ಪ್ರಶ್ನೆಗೆ ಉತ್ತರವನ್ನು ನೀಡಿದಂತಾಯಿತು. ಇದರ ಉಪಪಾದನೆಗಾಗಿಯೇ 'ಅಯಮಭಿಸಂಧಿಃ' ಎಂಬ ಸುಧಾಗ್ರಂಥವು ಹೊರಟಿದೆ.

## ಯೋಗ ಹಾಗೂ ರೂಢಿಗಳಿಂದ ತಿಳಿಯುವ ವಿದ್ಯಾಶಬ್ದಾರ್ಥ

ನನು ಜ್ಞಾನಾರ್ಥಕವಿದೇರ್ಭಾವೇ ಕ್ಯಪಿ ನಿಷ್ಪನ್ನವಿದ್ಯಾಶಬ್ದಸ್ಯ ಜ್ಞಾನಗಮಕತ್ವೇಽಪಿ ನಾರ್ಥವಿವಕ್ಷಾಯಾಥಾರ್ಥ್ಯಗಮಕತ್ವಮ್ ಇತ್ಯತೋ ವಿದ್ಯಾಶಬ್ದಸ್ಯ ಭಾವಕರಣಸಾಧನತಯಾ ಯೋಗೇನ ಜ್ಞಾನಸ್ಯೇವ ತತ್ಸಾಧನತ್ವಸ್ಯ ರೂಢ್ಯಾ ಯಾಥಾರ್ಥ್ಯಸ್ಯ ಚ ಲಾಭಾದ್ ಉಭಯಗಮಕತ್ವಂ ಯುಕ್ತಮ್ ಇತ್ಯಭಿಪ್ರೇತ್ಯ, ಆಹ – ಯಥಾರ್ಥೇತಿ ॥

ಜ್ಞಾನಾರ್ಥಕವಾದ ವಿದ್ ಧಾತುವಿಗೆ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ಪ್ರಾಪ್ತವಾದಾಗ ವಿದ್ಯಾ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಇದಕ್ಕೆ ಜ್ಞಾನ ಎಂದಷ್ಟೇ ಅರ್ಥ. ಆದ್ದರಿಂದ ಅರ್ಥವಿವಕ್ಷಾಪೂರ್ವಕತ್ವ ಮತ್ತು ಯಾಥಾರ್ಥ್ಯಗಳನ್ನು ಈ ವಿದ್ಯಾಶಬ್ದದಿಂದ ಹೇಗೆ ತಿಳಿಯಲು ಸಾಧ್ಯ ?





ವಿದ್ಯಾಶಬ್ದಕ್ಕೆ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವು ಬರುವಂತೆ ಕರಣಾರ್ಥದಲ್ಲೂ ಬರುತ್ತದೆ. ಆಗ ಯೋಗದಿಂದಲೇ ಜ್ಞಾನ ಹಾಗೂ ಜ್ಞಾನಸಾಧನತ್ವ ಎಂಬೆರಡು ಅರ್ಥಗಳು ತಿಳಿಯುತ್ತವೆ. ರೂಢಿಯ ಬಲದಿಂದ ಯಾಥಾರ್ಥ್ಯವು ತಿಳಿಯುತ್ತದೆ. ಹೀಗೆ ವಿದ್ಯಾ ಎಂಬ ಶಬ್ದದಿಂದ ಯಾಥಾರ್ಥ್ಯ ಹಾಗೂ ಅರ್ಥ -ವಿವಕ್ಷಾಪೂರ್ವಕತ್ವವು ತಿಳಿಯುತ್ತದೆಂಬ ಅಭಿಪ್ರಾಯದಿಂದ 'ಯಾಥಾರ್ಥ್ಯ' ಇತ್ಯಾದಿ ಟೀಕಾವಾಕ್ಯವು ಪ್ರವೃತ್ತವಾಗಿದೆ.

ವಿಶೇಷವಿಚಾರ - ಪರವಿದ್ಯಾಖ್ಯಂ ಎಂಬಲ್ಲಿ ಪರ ಎಂಬ ಶಬ್ದದಿಂದ ಈ ಶಾಸ್ತ್ರಕ್ಕೆ ಇತರ ಗ್ರಂಥಗಳಿಗಿಂತ ಉತ್ಕರ್ಷವು ತಿಳಿಯುತ್ತದೆ. ವಿದ್ಯಾ ಎಂಬ ಶಬ್ದದಿಂದ ಯಾಥಾರ್ಥ್ಯ ಹಾಗೂ ಅರ್ಥವಿವಕ್ಷಾಪೂರ್ವಕತ್ವ ಈ ಎರಡು ಧರ್ಮಗಳು ತಿಳಿಯುತ್ತವೆ. ಪ್ರಕೃತ ಪರಶಬ್ದದಿಂದ ತಿಳಿಯುವ ಉತ್ಕರ್ಷವನ್ನು ಅನಂತರ ವಿಚಾರ ಮಾಡೋಣ. ಈಗ ವಿದ್ಯಾಶಬ್ದದಿಂದ ತಿಳಿಯುವ ಪ್ರಮೇಯವನ್ನು ವಿಚಾರ ಮಾಡುತ್ತಿದ್ದಾರೆ.

ಪ್ರಶ್ನೆ – 'ವಿದ ಜ್ಞಾನೇ' ಎಂಬ ಧಾತುವಿನಿಂದ ಜ್ಞಾನಾರ್ಥದಲ್ಲಿ ವಿದ್‌ಶಬ್ದವು ಪ್ರಯುಕ್ತವಾಗಿದೆ. ಇದಕ್ಕೆ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ಮಾಡಿದಾಗ ಜ್ಞಾನ ಎಂಬಷ್ಟೇ ಅರ್ಥವು ತಿಳಿಯುತ್ತದೆ. ಯಥಾರ್ಥ-ಜ್ಞಾನ ಎಂಬರ್ಥವಾಗಲೀ ಅರ್ಥವಿವಕ್ಷಾಪೂರ್ವಕತ್ವ ಎಂಬರ್ಥವಾಗಲೀ ತಿಳಿಯುವುದಿಲ್ಲ. ಇಷ್ಟೇ ಅಲ್ಲದೇ ಯಥಾರ್ಥಜ್ಞಾನಕ್ಕೆ ಸಾಧನವಾಗಿದೆ ಎಂಬರ್ಥವು ಕೂಡ ತಿಳಿಯುವುದಿಲ್ಲ?

ಉತ್ತರ – ವಿದ್ ಧಾತುವಿಗೆ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯವು ಪ್ರಾಪ್ತವಾಗುವುದಲ್ಲ ಕರಣಾ-ರ್ಥದಲ್ಲೂ ಕೂಡ ಕ್ಯಪ್‌ಪ್ರತ್ಯಯವು ಪ್ರಾಪ್ತವಾಗುತ್ತದೆ. ಆಗ ಯೋಗದ ಬಲದಿಂದ ಜ್ಞಾನ ಹಾಗೂ ಜ್ಞಾನಸಾಧನ ಎಂಬೆರಡು ಅರ್ಥಗಳು ತಿಳಿಯುತ್ತವೆ. ರೂಢಿಯಿಂದ ಯಥಾರ್ಥಜ್ಞಾನ ಹಾಗೂ ಯಥಾರ್ಥ -ಜ್ಞಾನಸಾಧನ ಎಂಬೆರಡು ಅರ್ಥಗಳು ತಿಳಿಯುತ್ತವೆ.

## 'ಸಂಜ್ಞಾಯಾಂ ಸಮಜನಿಷದ' ಇತ್ಯಾದಿ ಪಾಣಿನಿಸೂತ್ರಕ್ಕೆ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ – ನನು 'ಸಂಜ್ಞಾಯಾಮ್ ಸಮಜನಿಷದ' ಇತಿ ಸೂತ್ರೇ 'ವ್ರಜ-ಯಜೋರ್ಭಾವೇ ಕ್ಯಪ್' ಇತ್ಯತೋ ಭಾವಗ್ರಹಣಾನುವೃತ್ತೌ ತದ್ಭಾವಗ್ರಹಣಸ್ಯ 'ಭಾವೇಽ-ನುಪಸರ್ಗಸ್ಯ' ಇತ್ಯಾದಾವಿವ 'ಅಕರ್ತರಿ ಚ ಕಾರಕೇ' ಇತ್ಯೇತನ್ನಿವೃತ್ತ್ಯರ್ಥತಯಾ ತತ್ಸಾಧನಾಲಾಭ ಏವ । ನ ಚಾತ್ರ ಸೂತ್ರೇ 'ಭಾವೇ' ಇತಿ ನ ಸ್ಮರ್ಯತೇ ಇತಿ ವೃತ್ತಿಕೃತೋಕ್ತತ್ವಾತ್ ನ ತದ್ಭಾವಾಧಿಕಾರ ಇತಿ ವಾಚ್ಯಮ್, ಅತ್ರ ತದಧಿಕಾರಾಭಾವಜ್ಞಾಪಕಾಭಾವಾತ್, 'ಸ್ತ್ರಿಯಾಂ ಭಾವಾಧಿಕಾರೋಽಸ್ತಿ ।

ತೇನ ಭಾರ್ಯಾ ಪ್ರಸಿದ್ಧ್ಯತಿ' ಇತ್ಯುಕ್ತವಿರೋಧಾಚ್ಚ ಭಾವಾಧಿಕಾರಸ್ಯ ಆವಶ್ಯಕತ್ವಾತ್ । ತದಧಿಕಾರಾಭಾವೇನ ಜ್ಞಾನಸಾಧನಲಾಭೇಽಪಿ ರೂಢಿಜ್ಞಾಪಕಾಭಾವೇನ ಯಾಥಾರ್ಥ್ಯಲಾಭ ಏವ ಇತ್ಯತಃ 'ಸಂಜ್ಞಾಯಾಂ ಸಮಜ' ಇತಿ ಸೂತ್ರೇ 'ಸಂಜ್ಞಾಯಾಮ್' ಇತ್ಯುಕ್ತತ್ವಾದ್ ಯಸ್ಮಿನ್ನರ್ಥೇ ಉತ್ಪದ್ಯಮಾನೇನ ಕ್ಯಪಾ ಸಂಜ್ಞಾ ಗಮ್ಯತೇ ತಸ್ಮಿನ್ನರ್ಥೇ ಕ್ಯಪ್ ಭವತೀತಿ ಸೂತ್ರಾರ್ಥನಿಷ್ಪತ್ತ್ಯಾ ಸಂಜ್ಞಾಗ್ರಹಣಬಲೇನೈವ ಭಾವಾಧಿಕಾರಾಭಾವಸ್ಯ ಜ್ಞಾಪಿತತ್ವಾತ್ । ಭೃಞಶ್ಚ ಭಾವ ಏವೋತ್ಪದ್ಯಮಾನೇನ ಕ್ಯಪಾ ಸಂಜ್ಞಾ ಗಮ್ಯತ ಇತಿ ಭೃತ್ಯಾಶಬ್ದವಾಚ್ಯತ್ವೇನ ವ್ಯಾಪಾರರೂಪಭಾವಾಧಿಕಾರಸ್ಯ 'ಸ್ತ್ರಿಯಾಂ ಭಾವಾಧಿಕಾರೋಽಸ್ತಿ' ಇತ್ಯನೇನ ಉಕ್ತಾವಪಿ ತೇನ ಸ್ವರಿತತ್ವನಿಬಂಧನಶಾಸ್ತ್ರೀಯಾಧಿಕಾರಾನುಕ್ತ್ಯಾ ತದ್ವಿರೋಧಾಭಾವಾತ್ ಸಂಜ್ಞಾಗ್ರಹಣೇನೈವ ರೂಢೇರಪಿ ಜ್ಞಾಪಿತತ್ವೇನ ಜ್ಞಾನಾರ್ಥಕವಿದೇಶ್ಚ ಯಥಾರ್ಥಜ್ಞಾನರೂಪಭಾವೇ ತತ್ಸಾಧನೇ ಚ ವಿಹಿತೇನ ಕ್ಯಪಾ ಸಂಜ್ಞಾ ಗಮ್ಯತ ಇತಿ ಯುಕ್ತಂ ತದುಭಯಗಮಕತ್ವಂ ವಿದ್ಯಾಶಬ್ದಸ್ಯೇತ್ಯಾಹ – ಸಮಜನಿಷದೇತ್ಯತ್ರ ಸಂಜ್ಞಾಯಾಮಿತ್ಯುಕ್ತೇಃ, ಇತಿ ॥

'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರದಲ್ಲಿ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಿಂದ ಭಾವಗ್ರಹಣವು ಅನುವೃತ್ತವಾಗುತ್ತದೆ. ಆಗ ಭಾವಗ್ರಹಣಕ್ಕೆ 'ಭಾವೇ ಅನುಪಸರ್ಗಸ್ಯ' ಎಂಬಲ್ಲಿ ಹೇಗೆ 'ಅಕರ್ತರಿಚ ಕಾರಕೇ' ಎಂಬುದರ ನಿವೃತ್ತಿಯು ಪ್ರಯೋಜನವೋ ಅದರಂತೆ ಪ್ರಯೋಜನವನ್ನು ಹೇಳಬೇಕು. ಆಗ ವಿದ್ಯಾಶಬ್ದಕ್ಕೆ ಜ್ಞಾನ ಎಂಬರ್ಥವಷ್ಟೇ ತಿಳಿಯುತ್ತದೆ. ಜ್ಞಾನಸಾಧನ ಎಂಬರ್ಥವು ಲಾಭವಾಗುವುದಿಲ್ಲ.

ಈ ಸೂತ್ರದ ಕಾಶಿಕಾವೃತ್ತಿಯಲ್ಲಿ 'ಭಾವೇ ಇತಿ ನ ಸ್ಮರ್ಯತೇ' - 'ಭಾವೇ ಎಂಬುದನ್ನು ಅನುವೃತ್ತಿ ಮಾಡಬೇಕಾಗಿಲ್ಲ ಎಂದು ಹೇಳಲಾಗಿದೆ. ಆದ್ದರಿಂದ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಲ್ಲಿ ಇರುವ ಭಾವೇ ಎಂಬುದು ಎಲ್ಲೆಡೆಯೂ ಅನುವೃತ್ತವಾಗುವುದಿಲ್ಲ ಅಲ್ಲವೇ?

ಹೀಗೆ ಪ್ರಶ್ನಿಸಬಾರದು. ಈ ಸೂತ್ರವು ಅಧಿಕಾರವಲ್ಲ ಎನ್ನಲು ಯಾವುದೇ ಜ್ಞಾಪಕವಿಲ್ಲ. 'ಸ್ತ್ರಿಯಾಂ ಭಾವೋಧಿಕಾರೋಽಸ್ತಿ ತೇನ ಭಾರ್ಯಾ ಪ್ರಸಿದ್ಧ್ಯತಿ' 'ಸ್ತ್ರೀಲಿಂಗದಲ್ಲಿ ಭಾವಾಧಿಕಾರವಿದೆ. ಆದ್ದರಿಂದ ಭಾರ್ಯಾ ಎಂಬ ಶಬ್ದವು ಪ್ರಸಿದ್ಧವಾಗಿದೆ' ಎಂಬ ವೈಯಾಕರಣರ ಮಾತಿಗೆ ವಿರೋಧ ಬರುತ್ತದೆ. ಆದ್ದರಿಂದ ಭಾವಾಧಿಕಾರವನ್ನು ಅವಶ್ಯವಾಗಿ ಅಂಗೀಕಾರ ಮಾಡಬೇಕು. ಭಾವೇ ಎಂಬುದು ಅಧಿಕಾರವಲ್ಲದ ಕಾರಣ ವಿದ್ಯಾಶಬ್ದಕ್ಕೆ ಜ್ಞಾನಸಾಧನ ಎಂಬರ್ಥವು ಲಭಿಸಿದರೂ ಕೂಡ ರೂಢಿ ಜ್ಞಾಪಕವಾದದ್ದು ಯಾವುದೂ ಇಲ್ಲದ ಕಾರಣ ಯಾಥಾರ್ಥ್ಯ ಎಂಬರ್ಥವು ಲಾಭವಾಗುವುದಿಲ್ಲ.




ಇಲ್ಲಿಯ ತನಕ ಮಾಡಿದ ಈ ಆಕ್ಷೇಪವು ಅಯುಕ್ತವಾಗಿದೆ. ಏಕೆಂದರೆ 'ಸಂಜ್ಞಾಯಾಂ ಸಮಜ-ನಿಷದ' ಇತ್ಯಾದಿ ಸೂತ್ರದಲ್ಲಿ ಸಂಜ್ಞಾಯಾಂ ಎಂದು ಹೇಳಿದ್ದೇ ಭಾವಾಧಿಕಾರವನ್ನು ವಿವಕ್ಷಿಸಬಾರದು ಎಂದು ತಿಳಿಸುವುದಕ್ಕಾಗಿ. ಯಾವ ಅರ್ಥದಲ್ಲಿ ಕ್ಯಪ್ ಪ್ರತ್ಯಯವು ವಿಹಿತವಾಗುತ್ತದೊ ಅದು ಸಂಜ್ಞೆಯಾಗಿರುತ್ತದೆ. ಅದೇ ಅರ್ಥದಲ್ಲೇ ಕ್ಯಪ್‌ಪ್ರತ್ಯಯವು ಬರುತ್ತದೆ ಎಂದು ಸೂತ್ರಾರ್ಥವನ್ನು ಹೇಳಿದಂತಾಗುತ್ತದೆ. ಅದು ಭಾವಾರ್ಥವೇ ಆಗಿರಲಿ ಕರ್ತೃಭಿನ್ನವಾದ ಇತರ ಕಾರಕಾದ್ಯರ್ಥವೇ ಆಗಿರಲಿ ಸಂಜ್ಞೆಯಾಗಿದ್ದರೆ ಸಾಕು ಕ್ಯಪ್‌ಪ್ರತ್ಯಯವು ಬರುತ್ತದೆ ಎಂಬುದು ಸೂತ್ರದ ಅಭಿಪ್ರಾಯ. ಆದ್ದರಿಂದ ಭೃತ್ಯಾಶಬ್ದವಾಚ್ಯತ್ವೇನ ವ್ಯಾಪಾರವೆಂಬ ಭಾವಾಧಿಕಾರಕ್ಕೆ ಸ್ತ್ರೀವಾಚಕಶಬ್ದಗಳಲ್ಲಿ ಭಾವಾಧಿಕಾರವಿದೆ ಎಂದು ಹೇಳಿದ್ದರೂ ಕೂಡ ಸ್ವರಿತತ್ವ ನಿಬಂಧನವಾದ ಶಾಸ್ತ್ರೀಯವಾದ ಅಧಿಕಾರದಲ್ಲಿ ಇದಕ್ಕೆ ಪ್ರಸಕ್ತಿಯು ಇರುವುದಿಲ್ಲ. ಆದ್ದರಿಂದ 'ಸ್ತ್ರಿಯಾಂ ಭಾವಾಧಿಕಾರೋಽಸ್ತಿ' ಎಂಬ ವೈಯಾಕರಣರ ಮಾತಿಗೆ ವಿರೋಧವು ಬರುವುದಿಲ್ಲ. ಏಕೆಂದರೆ ಸೂತ್ರದಲ್ಲಿ ಸಂಜ್ಞಾ ಎಂಬ ಪದದಿಂದಲೇ ರೂಢಿಯನ್ನು ಕೂಡ ಜ್ಞಾಪನೆ ಮಾಡಲಾಗಿದೆ. ಹೀಗೆ ವಿದ್ ಧಾತುವಿಗೆ ಜ್ಞಾನ ಎಂಬರ್ಥದಲ್ಲಿ ಹಾಗೂ ಜ್ಞಾನಸಾಧನ ಎಂಬರ್ಥದಲ್ಲಿ ಕ್ಯಪ್ ಪ್ರತ್ಯಯವು ವಿಹಿತವಾಗಿದೆ. ಆದ್ದರಿಂದ ವಿದ್ಯಾಶಬ್ದಕ್ಕೆ ಜ್ಞಾನ ಹಾಗೂ ಜ್ಞಾನಸಾಧನ ಎಂಬೆರಡರ್ಥಗಳು ಯುಕ್ತವಾಗುತ್ತದೆಂಬುದನ್ನು 'ಸಂಜ್ಞಾಯಾಂ ಸಮಜನಿಷದ ಇತ್ಯುಕ್ತೇಃ' ಎಂಬ ಟೀಕಾವಾಕ್ಯದಿಂದ ಹೇಳಿರುತ್ತಾರೆ.

ವಿವರಣೆ – 'ಸಂಜ್ಞಾಯಾಮಿತ್ಯನುವೃತ್ತೇಃ' ಎಂಬ ಪಾಠವನ್ನು ಪರಿಮಳ ಹಾಗೂ ಯಾದುಪತ್ಯಗಳಲ್ಲಿ ಸ್ವೀಕರಿಸಿ ಅರ್ಥವನ್ನು ಹೇಳಿದರು. 'ಸಂಜ್ಞಾಯಾಂ ಸಮಜನಿಷದ ಇತ್ಯುಕ್ತೇಃ' ಎಂಬ ಪಾಠವೂ ಕೂಡ ಇದೆ ಎಂಬುದಾಗಿ ಪಾಠಾಂತರವನ್ನು ಕೂಡ ಅಂಗೀಕಾರ ಮಾಡಿದರು. ಆದರೆ ಶ್ರೀವಿದ್ಯಾಧೀಶತೀರ್ಥರು 'ಸಮಜನಿಷದ ಇತ್ಯತ್ರ ಸಂಜ್ಞಾಯಾಂ ಇತ್ಯುಕ್ತೇಃ' ಎಂಬ ಪಾಠವನ್ನೇ ಸ್ವೀಕರಿಸಿ ವ್ಯಾಖ್ಯಾನ ಮಾಡುತ್ತಿ-ದ್ದಾರೆ.

ಪ್ರಶ್ನೆ– ಸಂಜ್ಞಾಯಾಂ ಸಮಜನಿಷದ ಇತ್ಯಾದಿ ಸೂತ್ರದಲ್ಲಿ ವ್ರಜಯಜೋರ್ಭಾವೇ ಕ್ಯಪ್ ಎಂಬ ಹಿಂದಿನ ಸೂತ್ರದಿಂದ ಭಾವೇ ಎಂಬುದು ಮತ್ತು ಕ್ಯಪ್ ಎಂಬುದು ಅನುವೃತ್ತವಾಗುತ್ತಿದೆ. ಸಂಜ್ಞಾಯಾಂ ಎಂಬ ಸೂತ್ರದಲ್ಲಿ ಈ ಧಾತುಗಳಿಗೆ ಎಂದಷ್ಟೇ ಹೇಳಿದ್ದಾರೆ. ಯಾವುದೇ ಪ್ರತ್ಯಯವನ್ನು ವಿಧಾನ ಮಾಡಿರುವುದಿಲ್ಲ. ಆದ್ದರಿಂದ ಹಿಂದಿನ ಸೂತ್ರದಿಂದ ಭಾವೇ ಮತ್ತು ಕ್ಯಪ್ ಎಂಬುದನ್ನು ಅನುವೃತ್ತಿ ಮಾಡಿದಾಗ ಭಾವಾರ್ಥ-ದಲ್ಲಿ ಕ್ಯಪ್ ಪ್ರತ್ಯಯವು ಬರುತ್ತದೆ ಎಂದು ಹೇಳಿದಂತಾಯಿತು. ಆಗ ಜ್ಞಾನ ಎಂಬರ್ಥವೇ ಲಾಭವಾಗು-ತ್ತದೆ. ಜ್ಞಾನಸಾಧನ ಎಂಬರ್ಥವು ಲಾಭವಾಗುವುದಿಲ್ಲ. ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರದಲ್ಲಿ ಭಾವಗ್ರಹಣವನ್ನು ಏಕೆ ಮಾಡಿದ್ದಾರೆ ಎಂದರೆ ಅಕರ್ತರಿಚ ಕಾರಕೇ ಸಂಜ್ಞಾಯಾಂ ಎಂಬುದನ್ನು ನಿವೃತ್ತಿ



ಮಾಡುವುದಕ್ಕಾಗಿ ಭಾವಗ್ರಹಣವನ್ನು ಮಾಡಿದ್ದಾರೆ. ಅದೇ ಭಾವಗ್ರಹಣವನ್ನು ಸಂಜ್ಞಾಯಾಂ ಎಂಬ ಸೂತ್ರದಲ್ಲೂ ಕೂಡ ವಿವಕ್ಷಿಸಿದರೆ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬುದು ಈ ಸೂತ್ರದಲ್ಲೂ ಕೂಡ ಪ್ರವೃತ್ತವಾಗುವುದಿಲ್ಲ ಎಂದು ಹೇಳಿದಂತಾಯಿತು. ಉದಾಹರಣೆ - ಭಾವೇ ಅನುಪಸರ್ಗಸ್ಯ ಎಂಬ ಸೂತ್ರ-ದಲ್ಲಿ ಇರುವ ಭಾವಗ್ರಹಣವನ್ನು ಅಕರ್ತರಿಚ ಕಾರಕೇ ಎಂಬುದರ ನಿವೃತ್ತಿಗೋಸ್ಕರ ಮಾಡಲಾಗಿದೆಯೋ ಅದರಂತೆ ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರದಲ್ಲಿ ಮಾಡಿದ ಭಾವಗ್ರಹಣವೂ ಕೂಡ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ಎಂಬುದರ ವ್ಯಾವೃತ್ತಿಗೋಸ್ಕರ ಎಂದು ತಿಳಿಯಬೇಕು. ಆದ್ದರಿಂದ ವ್ರಜ-ಯಜೋರ್ಭಾವೇ ಕ್ಯಪ್ ಎಂಬ ಸೂತ್ರದಿಂದ ಭಾವಶಬ್ದದ ಅನುವೃತ್ತಿಯನ್ನು ಮಾಡಿದರೆ ಕರ್ತೃಭಿನ್ನ-ಕಾರಕದಲ್ಲಿ ಕ್ಯಪ್‌ಪ್ರತ್ಯಯವು ಬರುತ್ತದೆಂದು ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಕರಣಕಾರಕದಲ್ಲಿ ಕ್ಯಪ್‌ಪ್ರತ್ಯಯವನ್ನೇ ಹೇಳಲು ಸಾಧ್ಯವಾಗುವುದಿಲ್ಲ.

ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರದಲ್ಲಿ ಭಾವೇ ಎಂಬುದು ಸಂಜ್ಞಾಯಾಂ ಎಂಬ ಸೂತ್ರದಲ್ಲಿ ಅನುವೃತ್ತವಾಗುವುದೇ ಇಲ್ಲ; ಕೇವಲ ಕ್ಯಪ್ ಎಂಬುದಷ್ಟೇ ಅನುವೃತ್ತವಾಗುತ್ತದೆ. ಹೀಗೆ ವೃತ್ತಿಕಾರರು ಹೇಳಿರುವುದರಿಂದ ಇದು ಹೇಗೆ ಭಾವಾಧಿಕಾರವಾಗುತ್ತದೆ?

ಹೀಗೆ ಪ್ರಶ್ನಿಸಬಾರದು. ವೃತ್ತಿಕಾರರು ಹಾಗೆ ಹೇಳಿದ್ದರೂ ಕೂಡ ಸೂತ್ರಕಾರರಿಗೆ ಇದು ಸಮ್ಮತವಾಗಿದೆ ಎನ್ನಲು ಯಾವುದೇ ಜ್ಞಾಪಕವೇ ಇರುವುದಿಲ್ಲ. ಮತ್ತು 'ಸ್ತ್ರಿಯಾಂ ಭಾವಾಧಿಕಾರೋಸ್ತಿ ತೇನ ಭಾರ್ಯಾ ಪ್ರಸಿಧ್ಯತಿ'. ಸ್ತ್ರೀಲಿಂಗದ ಶಬ್ದಗಳಲ್ಲಿ ಭಾವಾಧಿಕಾರವನ್ನು ವಿವಕ್ಷಿಸಬೇಕು. ಇದರಿಂದ ಭಾರ್ಯಾ ಎಂಬ ಪದವು ನಿಷ್ಪನ್ನವಾಗುತ್ತದೆ ಎಂಬ ವೈಯಾಕರಣರ ಮಾತಿಗೆ ವಿರೋಧವು ಬರುವುದರಿಂದ ಭಾವಾಧಿ ಕಾರವನ್ನು ಅವಶ್ಯವಾಗಿ ಅಂಗೀಕಾರ ಮಾಡಬೇಕು. ಸಮಜನಿಷದ ಇತ್ಯಾದಿ ಸೂತ್ರದಲ್ಲಿ ಭೃಞ್ ಧಾತುವು ಕೂಡ ಸೇರಿದೆ. ಇದಕ್ಕೆ ಣ್ಯತ್‌ಪ್ರತ್ಯಯವು ಪ್ರಾಪ್ತವಾಗಿ ಭಾರ್ಯಾ ಎಂಬ ರೂಪವು ನಿಷ್ಪನ್ನವಾಗಿದೆ. ಮತ್ತು ಹೀಗೆ ಸ್ತ್ರೀಲಿಂಗದ ಶಬ್ದಗಳಲ್ಲಿ ಕ್ಯಪ್‌ಪ್ರತ್ಯಯವನ್ನು ವಿಧಾನ ಮಾಡುತ್ತಿರುವುದರಿಂದ ಭಾವಾಧಿಕಾರವನ್ನು ವಿವಕ್ಷಿಸಬೇಕೆಂಬುದು ಪಾಣಿನಿಗೆ ಸಮ್ಮತವಾಗಿದೆ. ಒಂದು ವೇಳೆ ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರದಿಂದ ಕ್ಯಪ್ ಎಂಬುದಷ್ಟೇ ಅನುವೃತ್ತವಾಗುತ್ತದೆ. ಭಾವೇ ಎಂಬುದು ಅನುವೃತ್ತವಾಗುವುದಿಲ್ಲ ಎಂದು ಹೇಳಿ ವಿದ್ಯಾಶಬ್ದಕ್ಕೆ ಜ್ಞಾನಸಾಧನ ಎಂಬರ್ಥವನ್ನು ವಿವಕ್ಷಿಸುವುದಾದರೂ ಕೂಡ ಯಾಥಾರ್ಥ್ಯ ಎಂಬರ್ಥವು ತಿಳಿಯುವುದೇ ಇಲ್ಲ. ಎಂದರೆ ರೂಢಿಯಿಂದಷ್ಟೇ ಯಾಥಾರ್ಥ್ಯವು ಲಾಭವಾಗಬೇಕು. ರೂಢಿ ಜ್ಞಾಪಕ-ವಾದದ್ದು ಯಾವುದೂ ಇಲ್ಲದ ಕಾರಣ ವಿದ್ಯಾಶಬ್ದದಿಂದ ಯಾಥಾರ್ಥ್ಯವು ತಿಳಿಯುವುದಿಲ್ಲವಲ್ಲವೇ?

ಉತ್ತರ – ಸೂತ್ರದಲ್ಲಿ ಧಾತುಗಳನ್ನಷ್ಟೇ ನಿರ್ದೇಶ ಮಾಡದೇ ಸಂಜ್ಞಾಯಾಂ ಎಂಬ ಪದವನ್ನು ನಿರ್ದೇಶ ಮಾಡಿದ್ದಾರೆ. ಆದ್ದರಿಂದ ಕೇವಲ ಧಾತುಗಳಿವೆ ಎಂಬ ಕಾರಣದಿಂದ ಕ್ಯಪ್ ಪ್ರತ್ಯಯವನ್ನು ವಿಧಾನ





ಮಾಡಬಾರದು. ಯಾವ ಪದಾರ್ಥವನ್ನು ಉದ್ದೇಶಿಸಿ ಪ್ರತ್ಯಯವನ್ನು ವಿಧಾನ ಮಾಡಬೇಕೋ ಆ ಪ್ರತ್ಯಯ-ದಿಂದ ಆ ಶಬ್ದವು ನಿಷ್ಪನ್ನವಾದಾಗ ಸಂಜ್ಞೆ ಎಂದು ತಿಳಿಯಬೇಕು. ಆ ಸಂದರ್ಭದಲ್ಲಿ ಮಾತ್ರ ಕ್ಯಪ್ ಪ್ರತ್ಯಯ-ವನ್ನು ಹೇಳಬೇಕು. ಸಂಜ್ಞೆ ಆಗದಿದ್ದಾಗ ಕ್ಯಪ್ ಪ್ರತ್ಯಯವನ್ನು ಹೇಳಬಾರದು. ಯಸ್ಮಿನ್ನರ್ಥೇ = ಪ್ರಕೃತಿ-ಪ್ರತ್ಯಯಸಮಭಿವ್ಯಾಹಾರದಿಂದ ಯಾವ ಸಮಗ್ರಶಬ್ದವು ನಿಷ್ಪನ್ನವಾಗುತ್ತದೋ ಅಂಥ ಸಮಗ್ರಶಬ್ದದಿಂದ ಯಾವ ವ್ಯಕ್ತಿರೂಪವಾದ ಅರ್ಥವು ತಿಳಿಯುತ್ತದೋ ಅಂಥ ಅರ್ಥದಲ್ಲಿ ವಿವಕ್ಷಿಸುವಂಥ ಕ್ಯಪ್ ಪ್ರತ್ಯಯದಿಂದ ಸಂಜ್ಞೆಯು ತಿಳಿಯುತ್ತಿರುವಾಗ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆಂಬುದು ಸೂತ್ರದ ಅಭಿಪ್ರಾಯ. ಸೂತ್ರದಲ್ಲಿ ಸಂಜ್ಞಾ ಎಂಬ ಶಬ್ದಪ್ರಯೋಗದಿಂದ ರೂಢಿಯು ಲಾಭವಾಯಿತು. ಆದ್ದರಿಂದ ಯಾಥಾರ್ಥ್ಯ ಎಂಬ ಅರ್ಥವು ವಿದ್ಯಾಶಬ್ದಕ್ಕೆ ಲಾಭವಾಯಿತು. ಸಂಜ್ಞಾ ಎಂಬ ಪದಗ್ರಹಣದಿಂದ ಇದೊಂದೇ ಪ್ರಯೋಜನವು ಇರುವುದಲ್ಲ. ಹಿಂದಿನ ಸೂತ್ರದಿಂದ ಭಾವೇ ಎಂಬುದು ಅನುವೃತ್ತವಾಗು-ವುದಿಲ್ಲ ಎಂಬುದು ಕೂಡ ತಿಳಿಯುತ್ತದೆ. ಏಕೆಂದರೆ ವೃತ್ತಿಕಾರರು ಹೇಳಿದರೂ ಕೂಡ ಸೂತ್ರಕಾರರು ಯಾವುದೇ ಜ್ಞಾಪಕವನ್ನು ಹೇಳಿಲ್ಲವೆಂಬ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಸೂತ್ರಕಾರರು ಸಂಜ್ಞಾಯಾಂ ಎಂದು ಪ್ರಯೋಗ ಮಾಡಿರುವುದೇ ಜ್ಞಾಪಕವಾಗಿದೆ. ಇದರ ಬಲದಿಂದ ಭಾವೇ ಎಂಬುದು ಅನುವೃತ್ತ-ವಾಗುವುದಿಲ್ಲ ಎಂದು ತಿಳಿಯುತ್ತದೆ. ಅದು ಹೀಗೆ – ಸಮಜನಿಷದ ಇತ್ಯಾದಿ ಧಾತುಗಳ ಮಧ್ಯದಲ್ಲಿ ಭೃಞ್ ಎಂಬ ಧಾತುವೊಂದಿದೆ. ಈ ಧಾತುವಿಗೆ ಕ್ಯಪ್ಪ್ರತ್ಯಯವನ್ನು ವಿಧಾನ ಮಾಡಲಾಗುತ್ತದೆ. ಆಗ ಭೃತ್ಯಾ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಭಾವಾರ್ಥದಲ್ಲಷ್ಟೇ ಭೃತ್ಯಾ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಭೃತ್ಯಾ ಎಂಬ ಶಬ್ದವು ಭಾವಾರ್ಥದಲ್ಲೇ ಪ್ರಯೋಗಿಸಲ್ಪಡುತ್ತದೆ. ಕರ್ಮಾರ್ಥದಲ್ಲಿ ಪ್ರಯೋಗಿಸಲ್ಪಡುವುದಿಲ್ಲ. ಪತಿಯಿಂದ ಯಾರು ಪೋಷಣೆ ಮಾಡಲ್ಪಡುತ್ತಾಳೋ ಅವಳು ಭಾರ್ಯಾ ಎಂದು ಕರೆಸಿಕೊಳ್ಳುತ್ತಾಳೆ. ಪೋಷಣ ಮಾಡಲ್ಪಡುತ್ತಾಳೆಂಬ ಕರ್ಮಾರ್ಥದಲ್ಲಿ ಣ್ಯತ್ ಣ್ಯತ್ ಪ್ರತ್ಯಯವನ್ನು ವಿವಕ್ಷಿಸಿ ಭಾರ್ಯಾ ಎಂಬ ಶಬ್ದನಿಷ್ಪತ್ತಿಯನ್ನು ಮಾಡಬೇಕು. ಭಾವಾರ್ಥದಲ್ಲಿ ವ್ಯವಹಾರವನ್ನು ಮಾಡಬೇಕಾದರೆ ಭೃತ್ಯಾ ಎನ್ನಬೇಕೇ ಹೊರತು ಭಾರ್ಯಾ ಎಂದು ಹೇಳಬಾರದು. ಪ್ರಕೃತ ಭೃತ್ಯಾ ಎಂಬ ಶಬ್ದಕ್ಕೆ ಕಿಂಕರಳು ಎಂಬರ್ಥವನ್ನು ಇಲ್ಲಿ ವಿವಕ್ಷಿಸಬಾರದು. ಭರಣರೂಪವಾದ ವ್ಯಾಪಾರವುಳ್ಳವಳು ಎಂದಷ್ಟೇ ಅರ್ಥ. ಈ ಅರ್ಥದಲ್ಲಿ ಭೃತ್ಯಾ ಎಂಬ ಶಬ್ದವು ಬರುತ್ತದೆ. ಭಾರ್ಯಾ ಎಂಬ ಶಬ್ದವು ಬರುವುದಿಲ್ಲ. ಆದ್ದರಿಂದ 'ಸ್ತ್ರಿಯಾಂ ಭಾವಾಧಿಕಾರೋಽಸ್ತಿ ತೇನ ಭಾಯಾ.' ಪ್ರಸಿದ್ಧ್ಯತಿ' ಎಂಬ ವೈಯಾಕರಣರ ಮಾತು ಹೊರಟಿದೆ. ಪಾಣಿನಿಯು ಯಾವ ಪದವನ್ನು ಸ್ವರಿತಸ್ವರದಲ್ಲಿ ಉಚ್ಚಾರ ಮಾಡಿರುತ್ತಾನೋ ಅದಕ್ಕೆ ಅನುವೃತ್ತಿ ಇರುತ್ತದೆಂದು ವೈಯಾಕರಣರು ಅಂಗೀ-ಕರಿಸಿದ ನಿಯಮ. ಪ್ರಕೃತ ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರದಲ್ಲಿ ಭಾವೇ ಎಂಬುದು ಸ್ವರಿತಸ್ವರದಲ್ಲಿದೆ. ಹೀಗೆ ಸ್ವರಿತತ್ವನಿಬಂಧನವಾದ ಶಾಸ್ತ್ರೀಯ ಅಧಿಕಾರವೆನಿಸಿದ 'ಸ್ತ್ರಿಯಾಂ ಭಾವಾಧಿ-ಕಾರೋಽಸ್ತಿ ತೇನ ಭಾರ್ಯಾ ಪ್ರಸಿದ್ಧ್ಯತಿ' ಎಂಬಲ್ಲಿ ಹೇಳಿರುವುದಿಲ್ಲ. ಆದ್ದರಿಂದ ವ್ರಜಯಜೋರ್ಭಾವೇ





ಕ್ಯಪ್ ಎಂಬ ಸೂತ್ರದಲ್ಲಿ ಭಾವೇ ಎಂಬುದು ಅನುವೃತ್ತವಾಗುತ್ತದೆಂದು ಸಂಕುಚಿತವಾಗಿಯೇ ಹೇಳಬೇಕು. ಎಲ್ಲೆಡೆಯೂ ಅನುವೃತ್ತವಾಗುತ್ತದೆಂದು ಹೇಳಬಾರದು. ಹೀಗೆ ಹೇಳಿದಾಗ ವೈಯಾಕರಣರ ಮಾತಿಗೂ ಕೂಡ ವಿರೋಧವು ಬರುವುದಿಲ್ಲ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು – ಕರ್ಮಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ಹೇಳುವುದಾದರೆ ಹೆಂಡತಿ ಎಂಬರ್ಥದಲ್ಲಿ ಭೃತ್ಯಾ ಎಂಬ ಶಬ್ದವೇ ಪ್ರಯುಕ್ತವಾಗುತ್ತದೆ. ಭಾರ್ಯಾ ಎಂಬ ಶಬ್ದವು ಪ್ರಯುಕ್ತವಾಗುವುದಿಲ್ಲ. ಭಾವಾಧಿಕಾರ ಆಗಿರುವುದರಿಂದಲೇ ಹೆಂಡತಿ ಎಂಬರ್ಥದಲ್ಲಿ ಭಾರ್ಯಾ ಎಂಬ ಶಬ್ದವೇ ನಿಷ್ಪನ್ನವಾಗುತ್ತದೆ. ಭೃತ್ಯಾ ಎಂಬ ಶಬ್ದವು ನಿಷ್ಪನ್ನವಾಗುವುದಿಲ್ಲ. ಭೃಞ್ ಭರಣೇ ಎಂಬ ಧಾತುವಿಗೆ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ವಿವಕ್ಷಿಸಿದಾಗ ಭೃತ್ಯಾ ಎಂದಾಗುತ್ತದೆ. ಭೃಞ್ ಭರಣೇ ಎಂಬ ಧಾತುವಿಗೆ ಕರ್ಮಾರ್ಥದಲ್ಲಿ ಣ್ಯತ್‌ಪ್ರತ್ಯಯವನ್ನು ವಿಧಿಸಿದಾಗ ಭಾರ್ಯಾ ಎಂಬ ಶಬ್ದವು ನಿಷ್ಪನ್ನವಾಗುತ್ತದೆ.

ಭೃಞ್ ಧಾತುವಿಗೆ ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನವಾದ ಎಲ್ಲಾ ಕಾರಕಾದ್ಯರ್ಥಗಳಲ್ಲಿ ಕ್ಯಪ್ ಪ್ರತ್ಯಯವನ್ನು ವಿವಕ್ಷಿಸುವುದಾದರೆ ಕರ್ಮಾರ್ಥದಲ್ಲೂ ಕೂಡ ಕ್ಯಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಆಗ ಹೆಂಡತಿ ಎಂಬರ್ಥದಲ್ಲೂ ಭೃತ್ಯಾ ಎಂಬ ಶಬ್ದವನ್ನೇ ಪ್ರಯೋಗ ಮಾಡಬೇಕಾದೀತು. ಭಾರ್ಯಾ ಎಂಬ ಶಬ್ದವನ್ನು ಪ್ರಯೋಗ ಮಾಡದೇ ಇರಬೇಕಾದೀತು. ಪತ್ನಿ ಎಂಬರ್ಥದಲ್ಲಿ ಭೃತ್ಯಾ ಎಂಬ ಶಬ್ದಪ್ರಯೋಗವು ಬರಬಾರದು. ಭಾರ್ಯಾ ಎಂಬ ಶಬ್ದಪ್ರಯೋಗವೇ ಬರಬೇಕು ಎಂದು ವಿವಕ್ಷಿಸುವುದಾದರೆ ಭಾವಾಧಿಕಾರವನ್ನು ವಿವಕ್ಷಿಸಲೇಬೇಕು. ಭಾವಾರ್ಥದಲ್ಲಿ ಭೃಞ್ ಧಾತುವಿಗೆ ಕ್ಯಪ್‌ಪ್ರತ್ಯಯವು ಸಂಜ್ಞೆಯಲ್ಲಿ ಬರುತ್ತದೆ. ಹೀಗೆ ಸಂಜ್ಞಾಯಾಮ್ ಎಂದು ವಿವಕ್ಷಿಸಿದಾಗ ಭೃಞ್ ಧಾತುವಿಗೆ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ವಿವಕ್ಷಿಸಿದರೆ ಮಾತ್ರ ಭರಣಾರ್ಥದಲ್ಲಿ ಸಂಜ್ಞೆಯಾಗುತ್ತದೆ. ಒಂದು ವೇಳೆ ಕರ್ಮಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ವಿವಕ್ಷಿಸಿದರೆ ಭೃತ್ಯಾಶಬ್ದಕ್ಕೆ ಪತ್ನಿ ಎಂಬರ್ಥದಲ್ಲಿ ಸಂಜ್ಞಾತ್ವವು ಇಲ್ಲದೇ ಇರುವ ಕಾರಣ ಕ್ಯಪ್ ಪ್ರತ್ಯಯವು ಬರುವುದಿಲ್ಲ. ಹೀಗೆ ಸಂಜ್ಞಾ ಗ್ರಹಣದಿಂದ ಏನು ಜ್ಞಾಪನೆ ಮಾಡುತ್ತಿದ್ದಾರೆ ಎಂದರೆ ಯಾವ ಅರ್ಥದಲ್ಲಿ ಸಂಜ್ಞಾತ್ವವು ಬರುತ್ತದೋ ಅದೇ ಅರ್ಥದಲ್ಲೇ ಕ್ಯಪ್ ಪ್ರತ್ಯಯವು ಬರುತ್ತದೆ ಎಂಬುದು ಒಟ್ಟು ಸೂತ್ರಕಾರರ ಅಭಿಪ್ರಾಯವಾಗಿದೆ. ಭೃಞ್ ಧಾತುವಿಗೆ ಭಾವಾರ್ಥದಲ್ಲಿ ಮಾತ್ರ ಸಂಜ್ಞೆಯು ಬರುವುದರಿಂದ ಕ್ಯಪ್ ಪ್ರತ್ಯಯವು ಬರುತ್ತದೆ. ಅದೇ ವಿದ್ ಧಾತುವಿಗೆ ಭಾವಾರ್ಥದಲ್ಲಿ ಅಥವಾ ಕರಣಾರ್ಥದಲ್ಲಿ ಕ್ಯಪ್ ಪ್ರತ್ಯಯವು ಬರುವುದಾದರೆ ಅಲ್ಲಿ ಸಂಜ್ಞಾತ್ವವು ಬರುತ್ತದೆ. ಆದ್ದರಿಂದ ಅಕರ್ತರಿಚ ಕಾರಕೇ ಸಂಜ್ಞಾಯಾಮ್ ಎಂಬುದನ್ನು ವಿವಕ್ಷಿಸಿದರೆ ಸಂಜ್ಞಾತ್ವವು ಪ್ರಾಪ್ತವಾದರೆ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆ. ಅದನ್ನು ವಿವಕ್ಷಿಸಿದಾಗಲೂ ಸಂಜ್ಞಾತ್ವವು ಬರದಿದ್ದರೆ ಕ್ಯಪ್ ಪ್ರತ್ಯಯವು ಬರುವುದಿಲ್ಲ ಎಂದು ತಿಳಿಯಬೇಕು. ಸ್ತ್ರಿಯಾಂ ಭಾವಾಧಿಕಾರೋಸ್ತಿ ಎಂಬ ವೈಯಾಕರಣರ ಮಾತಿಗೆ ಇದೇ ಅಭಿಪ್ರಾಯವಾಗಿದೆ. ಈ ಮಾತಿನಲ್ಲಿ

ಸ್ವರಿತತ್ವನಿಬಂಧನವಾದ ಶಾಸ್ತ್ರೀಯ ಅಧಿಕಾರದ ಬಗ್ಗೆ ಹೇಳಿಯೇ ಇಲ್ಲ. ಆದ್ದರಿಂದ ಯಾವುದೇ ವಿರೋಧವಿಲ್ಲ.

## ವಿದ್ಯಾಶಬ್ದಾರ್ಥದ ಬಗ್ಗೆ ಒಂದು ವಿಮರ್ಶೆ

ವಾಕ್ಯಾರ್ಥಚಂದ್ರಿಕಾ– (ವ್ರಜಯಜೋರ್ಭಾವೇ ಕ್ಯಪ್ । ವಜ್ರಾ । ಇಜ್ಯಾ । 'ಸಂಜ್ಞಾಯಾಂ ಸಮಜನಿಷದನಿಪಮನವಿದುಷಞ್‌ಶೀಙ್‌ಭೃಞ್‌ಣಃ' । ಸಮಜಾದಿಭ್ಯಃ ಸ್ತ್ರಿಯಾಂ ಭಾವಾದೌ ಕ್ಯಪ್ ಸ್ಯಾತ್ ಸ ಚ ಉದಾತ್ತಃ ಸಂಜ್ಞಾಯಾಮ್ । 'ಅಜೇಃ ಕ್ಯಪಿ ವೀಭಾವೋ ನೇತಿ ವಾಚ್ಯಮ್' । ಸಮಜಂತ್ಯಸ್ಯಾಮ್ ಇತಿ ಸಮಜ್ಯಾ ಸಭಾ । ನಿಷೀದಂತ್ಯಸ್ಯಾಮ್ ಇತಿ ನಿಷದ್ಯಾ ಆಪಣಃ । ನಿಪತಂತ್ಯಸ್ಯಾಮ್ ಇತಿ ನಿಪತ್ಯಾ ಪಿಚ್ಛಲಾ ಭೂಮಿಃ । ಮನ್ಯತೇ ಅನಯೇತಿ ಮನ್ಯಾ ಗಲಪಾರ್ಶ್ವಶಿರಾ । ತಯಾ ಹಿ ಕ್ರುದ್ಧೋ ಜಾಯತೇ ಇತಿ ಭಾವಃ । ವಿದಂತ್ಯನಯಾ ವಿದ್ಯಾ । ಸುತ್ಯಾ । ಅಭಿಷವಃ । ಶಯ್ಯಾ । ಭೃತ್ಯಾ । ಭರಣಮ್ । ಜೀವಿಕಾ । 'ಕುಮಾರಭೃತ್ಯಾ ಗರ್ಭಿಣ್ಯಾಃ ಪರಿಚರ್ಯಾಽಭಿಧೀಯತೇ' ಇತಿ ಹಾರಾವಲೀ । 'ಕುಮಾರಭೃತ್ಯಾಕುಶಲೈರಧಿಷ್ಠಿತ' ಇತಿ ರಘುಃ । ಈಯತೇ ಅನಯಾ ಇತ್ಯಾ ಶಿಬಿಕಾ । 'ಭಾವೇಽನುಪಸರ್ಗಸ್ಯ' । ಅನುಪಸರ್ಗಸ್ಯ ಹ್ವಯತೇಃ ಸಂಪ್ರಸಾರಣಮಪ್ ಚ ಸ್ಯಾದ್ಭಾವೇ । ಹವಃ । 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' । ಕರ್ತೃಭಿನ್ನಕಾರಕೇ ಘಞ್ ಸ್ಯಾತ್ । 'ಘಞಿ ಚ ಭಾವಕರಣಯೋಃ' । ರಂಜೇರ್ನ ಲೋಪಃ ಸ್ಯಾತ್ । ರಾಗಃ । ಅನಯೋಃ ಕಿಮ್ । ರಜತ್ಯಸ್ಮಿನ್ ರಂಗಃ । ಪ್ರಾಸ್ಯತ ಇತಿ ಪ್ರಾಸಃ । ಸಂಜ್ಞಾಯಾಮ್ ಇತಿ ಪ್ರಾಯಿಕಮ್ । ಕೋ ಭವತಾ ಲಾಭೋ ಲಬ್ಧಃ । ಇತ ಉತ್ತರಂ ಭಾವೇ 'ಅಕರ್ತರಿ ಚ ಕಾರಕೇ' ಇತಿ ಪದದ್ವಯಮಪ್ಯನುವರ್ತತೇ । 'ಕೃತ್ಯಲ್ಯುಟೋ ಬಹುಲಮ್' ಇತಿ ಯಾವತ್ । 'ಏರಚ್' ಇತಿ ಸೂತ್ರವ್ಯಾಖ್ಯಾನಾವಸರೇ ಕಾಶಿಕಾಯಾಂ ಭಾವೇ ಅಕರ್ತರಿ ಚ ಕಾರಕೇ ಇತಿ ಪ್ರಕೃತಮನುವರ್ತತೇ ಯಾವತ್ ಕೃತ್ಯಲ್ಯುಟೋ ಬಹುಲಮ್ ಇತ್ಯುಕ್ತಮ್) । 'ಸಂಜ್ಞಾಯಾಂ ಸಮಜನಿಷದ ಇತ್ಯುಕ್ತೇಃ' ಇತಿ ಪಾಠೇಽಪಿ ಅಯಮೇವಾರ್ಥಃ । 'ಸಮಜನಿಷದ ಇತ್ಯತ್ರ ಸಂಜ್ಞಾಯಾಮ್ ಇತ್ಯಸ್ಯಾನುವೃತ್ತೇಃ' ಇತಿ ಪಾಠೇ ತು 'ವ್ರಜಯಜೋರ್ಭಾವೇ ಕ್ಯಪಿ' ಇತ್ಯತೋಽಸ್ವರಿತತ್ವೇನ ಭಾವಗ್ರಹಣಾನನುವೃತ್ತ್ಯಾ ನಿವರ್ತಕಾಭಾವಾತ್ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಇತ್ಯಸ್ಯ ಅನುವೃತ್ತೇಃ ವಿದ್ಯಾಶಬ್ದಸ್ಯ ಯೋಗರೂಢಿಭ್ಯಾಂ ಯಥಾರ್ಥಜ್ಞಾನಸಾಧನಬೋಧಕತ್ವಂ ಯುಕ್ತಮ್ ಇತಿ ದರ್ಶಯಿತುಂ





'ಸಂಜ್ಞಾಯಾಮ್' ಇತ್ಯಸ್ಯಾನುವೃತ್ತೇಃ ಇತ್ಯೇಕದೇಶೋತ್ಕೀರ್ತನಮ್ । ಅತ್ರ ಚ ಸಂಜ್ಞಾಗ್ರಹಣೇಽನುವರ್ತಮಾನೇ ಪುನಃ ಸಂಜ್ಞಾಗ್ರಹಣಮ್ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಇತ್ಯತ್ರ ಚಶಬ್ದಸ್ಯ ಸಂಜ್ಞಾಯಾಮ್ ಇತ್ಯನೇನ ಸಂಬಂಧೇ 'ಸಂಜ್ಞಾಯಾಮ್ ಅಸಂಜ್ಞಾಯಾಂ ಚ' ಇತ್ಯರ್ಥಲಾಭಾತ್ ತತ್ಸೂತ್ರೀಯಸಂಜ್ಞಾಶಬ್ದಸ್ಯ ಪ್ರಾಯಿಕಾರ್ಥತಯಾ ವ್ಯಾಖ್ಯಾತತ್ವಾತ್ ತದನುವೃತ್ತೌ ಅಪಿ ಅತ್ರ ನಿಯಮಾಲಾಭಾತ್ ತಲ್ಲಾಭಾಯ ಇತಿ ದ್ರಷ್ಟವ್ಯಮ್ । ಅತ್ರ ಪರತ್ವಸ್ಯ ಪ್ರಕಾರಾಂತರೇಣ ವಿವಕ್ಷಣೇ ತದ್ಭಾವೇಽಪೀತಿ ಶಂಕಾನಿವರ್ತಕತ್ವಂ ನ ಸ್ಯಾದಿತಿ ಸನ್ನಿಧಾನಾದ್ ವಿದ್ಯಾಶಬ್ದಾರ್ಥಯಾಥಾರ್ಥ್ಯೇನೈವ ಪರತ್ವಮ್ ಇತ್ಯಭಿಪ್ರೇತ್ಯಾಹ – ಪರೇತಿ ॥ ಗಹನಾರ್ಥತ್ವಸ್ಯ ಸಾಕ್ಷಾದ್ ಭಾಷ್ಯೇಽನುಕ್ತತಯಾ ತನ್ನಿವರ್ತ್ಯಾಂ ಶಂಕಾಮನುಕ್ತ್ವಾ ವ್ಯಾಖ್ಯೇಯತ್ವಮುಪಪಾದಯಿತುಂ ತತ್ಪ್ರಯೋಜಕಾನಿ ಕಥಯತೋ ಭಾಷ್ಯಕಾರಸ್ಯ ವ್ಯಾಖ್ಯೇಯತ್ವಪ್ರಯೋಜಕತ್ವಾತ್ ಗಹನಾರ್ಥತ್ವಮಪಿ ಉಪಲಕ್ಷಣತಯಾ ಅಭಿಪ್ರೇತಮ್ ಇತ್ಯಭಿಪ್ರಾಯೇಣ ಭಾವಕಥನದಶಾಯಾಂ ತದಾಹ – ಗಹನಾರ್ಥತ್ವಾಚ್ಚೇತಿ ॥

ಒಟ್ಟು ಮೂರು ಪಾಠಗಳಿವೆ. (1) ಸಮಜನಿಷದ ಇತ್ಯತ್ರ ಸಂಜ್ಞಾಯಾಂ ಇತ್ಯುಕ್ತೇಃ ; (2) ಸಂಜ್ಞಾಯಾಂ ಸಮಜನಿಷದ ಇತ್ಯುಕ್ತೇಃ (3) ಸಮಜನಿಷದ ಇತ್ಯತ್ರ ಸಂಜ್ಞಾಯಾಮಿತ್ಯಸ್ಯ ಅನುವೃತ್ತೇಃ ಎಂದು. ಈ ಮೂರರಲ್ಲಿ ಮೊದಲೆರಡು ಪಾಠಗಳಲ್ಲಿ ಉಕ್ತೇಃ ಎಂದು ಎಂದಿರುವುದರಿಂದ ಯಾವುದೇ ಸಮಸ್ಯೆ ಇಲ್ಲ. ಆದರೆ ಅನುವೃತ್ತೇಃ ಎಂಬ ಮೂರನೆಯ ಪಾಠದಲ್ಲಿ ಹೇಗೆ ಅರ್ಥವನ್ನು ಹೇಳಬೇಕು ಎಂಬ ಪ್ರಶ್ನೆಗೆ ಈಗ ಸೂತ್ರದಲ್ಲಿರುವ ಸಂಜ್ಞಾಯಾಂ ಎಂಬ ಪದವಷ್ಟೇ ಅನುವೃತ್ತವಾಗುತ್ತದೆ ಎಂಬುದು ಇದರ ಅರ್ಥವಲ್ಲ. 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸಮಗ್ರಸೂತ್ರವು ಅನುವೃತ್ತವಾಗುತ್ತದೆ ಎಂಬುದನ್ನು ತಿಳಿಸಲು ಸೂತ್ರದ ಏಕದೇಶಗ್ರಹಣವನ್ನು ಟೀಕೆಯಲ್ಲಿ ಮಾಡಿದ್ದಾರೆ. ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರದಲ್ಲಿರುವ ಭಾವಗ್ರಹಣವು ಇಲ್ಲಿ ಅನುವೃತ್ತವಾಗುತ್ತಿಲ್ಲ. ಒಂದು ವೇಳೆ ಸ್ವರಿತಸ್ವರದಲ್ಲಿ ಭಾವೇ ಎಂಬುದನ್ನು ಪ್ರಯೋಗಮಾಡಿದ್ದರೆ ಉತ್ತರಸೂತ್ರದಲ್ಲಿ ಅನುವೃತ್ತವಾಗುತ್ತಿತ್ತು. ಆದರೆ ಸ್ವರಿತತ್ವೇನ ಉಚ್ಚಾರ ಮಾಡದ ಕಾರಣ ಭಾವಗ್ರಹಣವು ಸಂಜ್ಞಾಯಾಂ ಸೂತ್ರದಲ್ಲಿ ಅನುವೃತ್ತವಾಗುತ್ತಿಲ್ಲ. ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸೂತ್ರವನ್ನು ನಿವೃತ್ತಿ ಮಾಡುವುದು ಈ ಭಾವಗ್ರಹಣವೇ ಆಗಿದೆ. ಭಾವಗ್ರಹಣವು ಅನುವೃತ್ತವಾಗದ ಕಾರಣ ಅಕರ್ತರಿಚ ಕಾರಕೇ ಸಂಜ್ಞಾಯಾಂ ಎಂಬುದು ನಿವೃತ್ತವಾಗುವುದಿಲ್ಲ. ಹೀಗೆ ಅಕರ್ತರಿಚ ಕಾರಕೇ ಸಂಜ್ಞಾಯಾಂ ಎಂಬುದು ಅನುವೃತ್ತವಾಗುವುದರಿಂದ ವಿದ್ಯಾಶಬ್ದಕ್ಕೆ ಯೋಗ ಹಾಗೂ ರೂಢಿಗಳ ಬಲದಿಂದ ಜ್ಞಾನ





ಹಾಗೂ ಯಥಾರ್ಥಜ್ಞಾನಸಾಧನ ಎಂಬೆರಡು ಅರ್ಥವನ್ನು ಹೇಳಿದ್ದು ಯುಕ್ತವೇ ಆಗಿದೆ. ಈ ಅರ್ಥವನ್ನು ತಿಳಿಸುವುದಕ್ಕಾಗಿ ಸಂಜ್ಞಾಯಾಂ ಎಂಬ ಸೂತ್ರದ ಏಕದೇಶಗ್ರಹಣವನ್ನು ಮಾಡಿದ್ದಾರೆ.

ಸಮಗ್ರ ಸೂತ್ರವನ್ನೇ ಇಲ್ಲಿ ಅನುವೃತ್ತಿ ಏಕೆ ಮಾಡಬೇಕು. ಈ ಸೂತ್ರದಲ್ಲಿ ಸಂಜ್ಞಾಯಾಂ ಎಂದು ಹೇಳಿದ್ದಾರಲ್ಲವೇ? ಎಂದರೆ, ಅಕರ್ತರಿಚ ಕಾರಕೇ ಇತ್ಯಾದಿ ಸೂತ್ರದಲ್ಲಿರುವ ಚಶಬ್ದವನ್ನು ಭಿನ್ನಕ್ರಮದಲ್ಲಿ ಅನ್ವಯ ಮಾಡಿದಾಗ ಸಂಜ್ಞಾಯಾಮ್ ಅಸಂಜ್ಞಾಯಾಂ ಚ ಎಂಬುದಾಗಿ ಸಂಜ್ಞೆ ಯಿರಲಿ ಇಲ್ಲದಿರಲಿ ಎಂಬರ್ಥವು ತಿಳಿಯುತ್ತದೆ. ಆಗ ನಿಯಮೇನ ರೂಢಿಯ ಲಾಭವು ಆಗುವುದಿಲ್ಲ. ನಿಯಮೇನ ರೂಢಿಯ ಸಿದ್ಧಿಗೋಸ್ಕರ ಪಾಣಿನಿಯು 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರದಲ್ಲಿ ಪುನಃ ಸಂಜ್ಞಾಯಾಂ ಎಂದು ಹೇಳಿದ್ದಾನೆ.

ಪರವಿದ್ಯಾ ಎಂಬಲ್ಲಿ ಪರತ್ವವನ್ನು ವಿಶೇಷಣವನ್ನಾಗಿ ಹೇಳಿದ್ದಾರೆ. ಇಲ್ಲಿರುವ ಪರತ್ವವನ್ನು ಬೇರೆ ರೀತಿಯಲ್ಲಿ ವಿವಕ್ಷಿಸಿದರೆ 'ತದ್ಭಾವೇಽಪಿ' ಇತ್ಯಾದಿಯಾಗಿ ಹೇಳಿದ ಆಶಂಕೆಯು ಪರಿಹಾರವಾಗುವುದಿಲ್ಲ. ಆದ್ದರಿಂದ ವಿದ್ಯಾಶಬ್ದಕ್ಕೆ ಯಾವ ಯಾಥಾರ್ಥ್ಯವೆಂಬ ಅರ್ಥವನ್ನು ಹೇಳಲಾಯಿತೋ ಅದರ ಸನ್ನಿಧಾನವಿರುವುದರಿಂದ ಆ ಯಾಥಾರ್ಥ್ಯದಲ್ಲಿಯೇ ಪರತ್ವವನ್ನು ವಿವಕ್ಷಿಸಬೇಕು. ಈ ಅಭಿಪ್ರಾಯದಿಂದ ''ಪರ'' ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. ಗಹನಾರ್ಥತ್ವವನ್ನು ಭಾಷ್ಯದಲ್ಲಿ ಕಂಠತಃ ಹೇಳಿಲ್ಲ. ಆದ್ದರಿಂದ ಗಹನಾರ್ಥವಾಗಿರುವುದರಿಂದ ಬ್ರಹ್ಮಸೂತ್ರಗಳನ್ನು ಏಕೆ ವ್ಯಾಖ್ಯಾನಮಾಡಬೇಕು ಎಂಬ ಆಶಂಕೆಯನ್ನು ಈ ಹಿಂದೆ ತೋರಿಸಿಲ್ಲ. ಆದರೆ ಗಹನಾರ್ಥತ್ವವು ಕೂಡ ವ್ಯಾಖ್ಯೇಯತ್ವಕ್ಕೆ ಪ್ರಯೋಜಕವಾಗಿದೆ ಎಂಬುದನ್ನು ಉಪಲಕ್ಷಣಯಾ ಭಾಷ್ಯಕಾರರು ವಿವಕ್ಷಿಸಿದ್ದಾರೆ ಎಂಬ ಅಭಿಪ್ರಾಯದಿಂದ ಭಾವಕಥನದಶೆಯಲ್ಲಿ 'ಗಹನಾರ್ಥತ್ವಚ್ಚ' ಎಂಬುದಾಗಿ ಹೇಳಿದ್ದಾರೆ.

ವಿಶೇಷವಿವರಣೆ– ವಾಕ್ಯಾರ್ಥಚಂದ್ರಿಕಾದಲ್ಲಿ ಒಟ್ಟು ಮೂರು ರೀತಿಯ ಆಕ್ಷೇಪಗಳಲ್ಲಿ ಮೊದಲನೆಯ ಆಕ್ಷೇಪ ಹೀಗಿದೆ – 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಲ್ಲಿ ಅಕರ್ತರಿಚ ಕಾರಕೇ ಸಂಜ್ಞಾಯಾಂ ಎಂಬ ಸೂತ್ರವು ಅನುವೃತ್ತವಾಗಬಾರದೆಂಬ ವಿವಕ್ಷೆಯಿಂದಲೇ ಭಾವೇ ಎಂಬುದಾಗಿ ಹೇಳಿದ್ದಾರೆ. ಅದೇ ಭಾವೇ ಎಂಬುದು ಸಂಜ್ಞಾಯಾಂ ಎಂಬ ಸೂತ್ರದಲ್ಲೂ ಅನುವೃತ್ತವಾಗುವುದಾದರೆ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆ. ಕರ್ತ್ರಭಿನ್ನಕಾರಕಾದ್ಯರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ವಿಧಾನ ಮಾಡಿದಂತಾಗುವುದಿಲ್ಲ. ಆಗ ವಿದ್ಯಾಶಬ್ದಕ್ಕೆ ಜ್ಞಾನ ಎಂಬಷ್ಟೇ ಅರ್ಥವು ತಿಳಿಯುತ್ತದೆ. ಜ್ಞಾನಸಾಧನ ಎಂಬರ್ಥವು ತಿಳಿಯುವುದಿಲ್ಲ. ವೃತ್ತಿಕಾರರು ಭಾವೇ ಎಂಬುದು ಅನುವೃತ್ತವಾಗುವುದಿಲ್ಲ ಎಂದು ಹೇಳಿದ್ದಾರೆ. ಆದ್ದರಿಂದ ಜ್ಞಾನಸಾಧನ ಎಂಬರ್ಥವನ್ನು ಕೂಡ ವಿವಕ್ಷಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ವೃತ್ತಿಕಾರರು





ಹೇಳಿದ್ದರೂ ಕೂಡ ಸೂತ್ರಕಾರರಿಗೆ ಇದು ಸಮ್ಮತವೆನ್ನಲು ಯಾವುದೇ ಜ್ಞಾಪಕವಿಲ್ಲ. ಹೀಗೆ ತದಧಿಕಾರಾಭಾವಜ್ಞಾಪಕಾಭಾವವೆಂಬುದು ಮೊದಲನೆಯ ಆಕ್ಷೇಪವಾಗಿದೆ.

'ಸ್ತ್ರಿಯಾಂ ಭಾವೋಧಿಕಾರೋಽಸ್ತಿ ತೇನ ಭಾವೋ ಪ್ರಸಿದ್ಧ್ಯತಿ' ಎಂಬ ವೈಯಾಕರಣರ ವಾಕ್ಯವು ವಿರುದ್ಧವಾಗುತ್ತದೆಂಬುದು ಎರಡನೆಯ ಆಕ್ಷೇಪ. ಈ ಶ್ಲೋಕವು ಶ್ಲೋಕವಾರ್ತಿಕದಲ್ಲಿದೆ. 'ಭೃಞೋ ಅಸಂಜ್ಞಾಯಾಂ' ಎಂಬ ಸೂತ್ರದ ಶ್ಲೋಕವಾರ್ತಿಕದಲ್ಲಿ ಹಾಗೂ ಭಾಷ್ಯದಲ್ಲಿ ಈ ಪ್ರಮೇಯವನ್ನು ಬಹಳವಾಗಿ ಚರ್ಚಿಸಿದ್ದಾರೆ. ಈ ಶ್ಲೋಕದ ಪೂರ್ವಾರ್ಧ ಹೀಗಿದೆ – 'ಸಂಜ್ಞಾಯಾಃ ಪುಂಸಿ ದೃಷ್ಟತ್ವಾತ್ ನ ತೇ ಭಾರ್ಯಾ ಪ್ರಸಿದ್ಧ್ಯತಿ' ಎಂದು. 'ಸ್ತ್ರಿಯಾಂ ಭಾವಾಧಿಕಾರೋಸ್ತಿ ತೇನ ಭಾರ್ಯಾ ಪ್ರಸಿದ್ಧ್ಯತಿ' ಎಂಬುದು ಉತ್ತರಾರ್ಧವಾಗಿದೆ. ಪೂರ್ವಾರ್ಧದಲ್ಲಿ ಮಾಡಿದ ಪೂರ್ವಪಕ್ಷ ಹೀಗಿದೆ – 'ಭೃಞೋ ಅಸಂಜ್ಞಾಯಾಂ ಎಂಬ ಸೂತ್ರದಲ್ಲಿ ಸಂಜ್ಞೆ ಇಲ್ಲದೇ ಇದ್ದಾಗ 'ಡುಭೃಞ್ ಭರಣೇ' ಎಂಬ ಧಾತುವಿಗೆ ಕ್ಯಪ್ ಎಂಬ ಪ್ರತ್ಯಯವು ಕರ್ಮಾರ್ಥದಲ್ಲಿ ಬರುತ್ತದೆಂದು ಹೇಳಲಾಗಿದೆ. ಈ ಕ್ಯಪ್‌ಪ್ರತ್ಯಯದಲ್ಲಿ ಕಕಾರ ಹಾಗೂ ಪಕಾರಗಳು ಲೋಪವಾಗಿ ಯ ಎಂದಷ್ಟೇ ಉಳಿಯುತ್ತದೆ. ಈ ಕ್ಯಪ್ ಪ್ರತ್ಯಯವು ಪಿತ್ತಾಗಿದೆ. ಈ ಪಿತ್ತಾದ ಪ್ರತ್ಯಯವು ಮುಂದೆ ಇರುವುದರಿಂದ ತುಕ್ ಎಂಬುದು ಆಗಮವಾಗಿ ಪ್ರಾಪ್ತವಾಗುತ್ತದೆ. 'ಹ್ರಸ್ವಸ್ಯ ಪಿತಿ ಕೃತಿ ತುಕ್' ಎಂಬ ಸೂತ್ರವು ಹ್ರಸ್ವಾಂತವಾದ ಧಾತುವಿಗೆ ಪಿತ್ತಾದ ಅಥವಾ ಕೃತ್ ಪ್ರತ್ಯಯವು ಮುಂದೆ ಇರುವಾಗ ತುಕಾಗಮವು ಬರುತ್ತದೆಂದು ಹೇಳಿದೆ. ಪ್ರಕೃತ ಭೃ ಎಂಬುದು ಹ್ರಸ್ವಾಂತವಾದ ಧಾತುವಾಗಿದೆ. ಕ್ಯಪ್ ಪ್ರತ್ಯಯವು ಪಿತ್ತಾದ ಕೃತ್‌ಪ್ರತ್ಯಯವಾಗಿದೆ. ಆದ್ದರಿಂದ ತುಕ್ ಆಗಮವು ಪ್ರಾಪ್ತವಾಗುತ್ತದೆ. ಇದರಲ್ಲಿ ಕ್ ಹಾಗೂ ಉಗಳು ಲೋಪವಾದರೆ ತ್ ಎಂದಷ್ಟೇ ಉಳಿಯುತ್ತದೆ. ಭೃ ಧಾತುವಿಗೆ ಗುಣವು ಬಂದರೆ ಭರ್ ಎಂದು ಆಗುವುದಿಲ್ಲ. ಏಕೆಂದರೆ ಕ್ಙಿತಿ ಚ ಎಂಬ ಸೂತ್ರವು ನಿಷೇಧ ಮಾಡುತ್ತಿದೆ. ಆಗ ಭೃ+ತ್+ಯ' ಎಂದಿರುವಾಗ ಒಟ್ಟಿಗೆ ಸೇರಿ ಭೃತ್ಯ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಈ ಭೃತ್ಯ ಎಂಬ ಶಬ್ದವು ಸೇವಕ ಎಂಬರ್ಥದಲ್ಲಿ ಯೌಗಿಕವಾಗಿದೆ ಹೊರತು ರೂಢವಲ್ಲ. ಭೃತ್ಯ ಎಂಬುದು ಯಾರೊಬ್ಬರ ಹೆಸರು ಕೂಡ ಆಗಿಲ್ಲ. ಆದ್ದರಿಂದ ಅಸಂಜ್ಞೆ ಎಂದು ಕರೆಸಿಕೊಳ್ಳುತ್ತದೆ. ಯಜಮಾನನಿಂದ ಯಾರು ಪೋಷಿಸಲ್ಪಡುತ್ತಾನೋ ಆವನು ಭೃತ್ಯ ಎಂದು ಕರೆಸಿಕೊಳ್ಳುತ್ತಾನೆ.

ಹೀಗೆ ಕಿಂಕರ ಎಂಬರ್ಥದಲ್ಲಿ ಭೃತ್ಯಶಬ್ದವು ಯೌಗಿಕವಾಗಿದೆ. ಒಂದು ವೇಳೆ ಸಂಜ್ಞೆಯಾದರೆ ಕ್ಯಪ್ ಪ್ರತ್ಯಯವೇ ಪ್ರಾಪ್ತವಾಗುವುದಿಲ್ಲ. ಆಗ ಭಾರ್ಯ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. (ಇಲ್ಲಿ ಭಾರ್ಯಾ ಎಂದರೆ ಸ್ತ್ರೀಲಿಂಗ ಶಬ್ದದಿಂದ ಪ್ರತಿಪಾದ್ಯವಾದ ಹೆಂಡತಿ ಎಂಬರ್ಥವನ್ನು ವಿವಕ್ಷಿಸಬಾರದು. ಪುಲ್ಲಿಂಗವಾದ ಭಾರ್ಯಶಬ್ದವಾಗಿದೆ. ಇದಕ್ಕೆ ಕ್ಷತ್ರಿಯ ಎಂದರ್ಥ). ಭೃಞ್ ಧಾತುವಿಗೆ ಣ್ಯತ್ ಪ್ರತ್ಯಯವು ಬಂದಾಗ ಭಾರ್ಯ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಕ್ಷತ್ರಿಯ ಎಂಬರ್ಥದಲ್ಲಿ ಭೃಞ್ ಧಾತುವಿಗೆ ಕ್ಯಪ್ ಪ್ರತ್ಯಯವನ್ನು





ಮಾಡಿದಾಗ ಭೃಞ್ ಧಾತುವು ಕ್ಷತ್ರಿಯ ಎಂಬರ್ಥದಲ್ಲಿ ಸಂಜ್ಞೆಯಾಗಿದೆ. ಆದ್ದರಿಂದ ಇಲ್ಲಿ ಕ್ಯಪ್‌ಪ್ರತ್ಯಯವು ಬಾರದೇ ಣ್ಯತ್ ಪ್ರತ್ಯಯವು ಬರುತ್ತದೆ. ಕ್ಷತ್ರಿಯ ಎಂಬರ್ಥದಲ್ಲಿ ಭೃತ್ಯ ಎಂದು ನಿಷ್ಪನ್ನವಾಗುವುದಿಲ್ಲ. ಭಾರ್ಯ ಎಂದು ನಿಷ್ಪನ್ನವಾಗುತ್ತದೆ. ಏಕೆಂದರೆ ಭಾರ್ಯ ಎಂಬ ಶಬ್ದವು ಸಂಜ್ಞೆಯಾಗಿದೆ ಭೃತ್ಯ ಎಂಬ ಶಬ್ದವು ಸಂಜ್ಞೆಯಾಗಿಲ್ಲ. ಒಂದು ವೇಳೆ ಭೃಞ್ ಧಾತುವಿಗೆ ಕ್ಯಪ್ ಪ್ರತ್ಯಯವನ್ನು ಮಾಡಿದಾಗ ಅದು ಸಂಜ್ಞೆಯಾಗುವುದಾದರೆ ಕ್ಯಪ್‌ಪ್ರತ್ಯಯವನ್ನು ವಿಧಾನ ಮಾಡಲೇಬಾರದು. ಬೇರೆ ಪ್ರತ್ಯಯವನ್ನೇ ವಿಧಾನ ಮಾಡಬೇಕು. ಆದ್ದರಿಂದಲೇ ಭಾರ್ಯ ಎಂಬಲ್ಲಿ ಕ್ಯಪ್ ಪ್ರತ್ಯಯವು ಪ್ರಾಪ್ತವಾಗಿಲ್ಲ. 'ಭೃಞೋ ಅಸಂಜ್ಞಾಯಾಮ್' ಎಂಬ ಸೂತ್ರದಲ್ಲಿ ವಿಧಾನಮಾಡಲ್ಪಟ್ಟ ಕ್ಯಪ್ ಪ್ರತ್ಯಯವು ಸ್ತ್ರೀಪ್ರಕರಣದಲ್ಲಿ ಪ್ರಾಪ್ತವಾಗಿಲ್ಲ. 'ಸಂಜ್ಞಾಯಾಂ ಸಮಜನಿಷದ' ಇತ್ಯಾದಿ ಸೂತ್ರದಲ್ಲಿ ವಿಧಾನ ಮಾಡಲ್ಪಟ್ಟ ಕ್ಯಪ್ ಪ್ರತ್ಯಯವು ಸ್ತ್ರೀಪ್ರಕರಣದಲ್ಲಿ ಪ್ರಾಪ್ತವಾಗಿದೆ. ಭೃಞ್ ಧಾತುವಿಗೆ ಸಂಜ್ಞೆಯು ಗಮ್ಯಮಾನವಾದ ಕ್ಯಪ್‌ಪ್ರತ್ಯಯವು ಬರುತ್ತದೆ ಎಂಬುದಾಗಿ ಸಂಜ್ಞಾಯಾಂ ಇತ್ಯಾದಿ ಸೂತ್ರವು ಹೇಳುತ್ತಿದೆ. ಆಗ ಭೃತ್ಯಾ ಎಂಬ ರೂಪವೇ ನಿಷ್ಪನ್ನವಾಗುತ್ತದೆ. ಆಗ ಪತ್ನಿ ಎಂಬರ್ಥದಲ್ಲಿ ಭಾರ್ಯಾ ಎಂಬ ರೂಪವು ನಿಷ್ಪನ್ನವಾಗಬಾರದು. ಭೃತ್ಯಾ ಎಂಬ ರೂಪವು ನಿಷ್ಪನ್ನವಾಗಬೇಕು. ಇದು ಪ್ರಧಾನ ಆಕ್ಷೇಪ.

ಇಲ್ಲಿ ಅವಾಂತರ ಆಶಂಕೆ ಹೀಗಿದೆ – ಭೃಞೋ ಅಸಂಜ್ಞಾಯಾಮ್ ಎಂಬ ಸೂತ್ರದಲ್ಲಿ ಅಸಂಜ್ಞಾಯಾಂ ಎಂದು ನಿಷೇಧ ಮಾಡಲಾಗಿದೆ. ಕ್ಷತ್ರಿಯವಾಚಕವಾದ ಭಾರ್ಯಾ ಶಬ್ದವು ಇದ್ದಂತೆ ಪತ್ನಿವಾಚಕವಾದ ಭಾರ್ಯಾಶಬ್ದವು ಕೂಡ ಸಂಜ್ಞೆಯೇ ಆಗಿದೆ. ಇದರಿಂದ ಕ್ಯಪ್ ಪ್ರತ್ಯಯವನ್ನು ನಿಷೇಧ ಮಾಡಿದಂತಾಗುತ್ತದಲ್ಲವೇ? ಇಲ್ಲಿ 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರಕ್ಕೂ, 'ಭೃಞೋ ಅಸಂಜ್ಞಾಯಾಂ' ಎಂಬ ಸೂತ್ರಕ್ಕೂ ಪರಸ್ಪರವಿರೋಧವು ಕಾಣಿಸುತ್ತಿದೆ. ಸಂಜ್ಞಾಯಾಮ್ ಇತ್ಯಾದಿ ಸೂತ್ರವು ಸಂಜ್ಞೆಯು ಗಮ್ಯಮಾನವಾದಾಗ ಕ್ಯಪ್‌ಪ್ರತ್ಯಯವು ಬರುತ್ತದೆಂದು ಹೇಳುತ್ತಿದೆ. ಭೃಞೋ ಅಸಂಜ್ಞಾಯಾಂ ಎಂಬ ಸೂತ್ರವು ಸಂಜ್ಞೆಯು ಇಲ್ಲದೇ ಇದ್ದಾಗಲೇ ಕ್ಯಪ್ ಪ್ರತ್ಯಯವು ಬರುತ್ತದೆಂದು ಹೇಳುತ್ತಿದೆ. ಆದ್ದರಿಂದಲೇ ಭೃಞೋ ಅಸಂಜ್ಞಾಯಾಂ ಎಂಬ ಸೂತ್ರದ ಬಲದಿಂದ ಭಾರ್ಯಾಶಬ್ದವು ಸಂಜ್ಞೆಯಾಗಿರುವುದರಿಂದ ಕ್ಯಪ್ ಪ್ರತ್ಯಯವು ಬರುವುದಿಲ್ಲವೆಂದು ಹೇಳಬಹುದಲ್ಲವೇ?

ಇದಕ್ಕೆ ಉತ್ತರವನ್ನು 'ಸಂಜ್ಞಾಯಾಂ ಪುಂಸಿ ದೃಷ್ಟತ್ವಾತ್' ಎಂಬ ಶ್ಲೋಕವಾರ್ತಿಕವು ಹೇಳಿದೆ ಭೃಞೋ ಅಸಂಜ್ಞಾಯಾಂ ಎಂಬಲ್ಲಿ ಮಾಡಲ್ಪಟ್ಟ ಸಂಜ್ಞಾನಿಷೇಧವು ಕೇವಲ ಪುಲ್ಲಿಂಗದಲ್ಲಿ ಎಂದು ತಿಳಿಯಬೇಕು. ಭೃತ್ಯಾ ಎಂಬ ಶಬ್ದವು ಪುಲ್ಲಿಂಗವಾಗಿದೆ. ಭಾರ್ಯಾ ಎಂಬ ಕ್ಷತ್ರಿಯವಾಚಕ ಶಬ್ದವು ಕೂಡ ಪುಲ್ಲಿಂಗವಾಗಿದೆ. ಆದ್ದರಿಂದ ಪುಲ್ಲಿಂಗವಾಗಿದ್ದು ಸಂಜ್ಞೆಯಾಗಿದ್ದರೆ ಮಾತ್ರ ಕ್ಯಪ್ ಪ್ರತ್ಯಯವು ಬರುವುದಿಲ್ಲ ಎಂಬುದು ಭೃಞೋ ಅಸಂಜ್ಞಾಯಾಂ ಎಂಬ ಸೂತ್ರದ ಅಭಿಪ್ರಾಯವಾಗಿದೆ. ಸಂಜ್ಞೆಯಾಗಿದ್ದು ಸ್ತ್ರೀಲಿಂಗವಾಗಿದ್ದರೆ





ಕ್ಯಪ್‌ಪ್ರತ್ಯಯವು ಬರುತ್ತದೆ. ಆಗ ಭೃತ್ಯಾ ಎಂಬ ಶಬ್ದವು ಪತ್ನಿವಾಚಕವಾಗಿ ಪ್ರಾಪ್ತವಾಗಬೇಕಾಗುತ್ತದೆ. ಭಾರ್ಯಾ ಎಂಬ ಶಬ್ದವು ಪತ್ನಿ ಎಂಬರ್ಥದಲ್ಲಿ ಪ್ರಸಿದ್ಧವಾಗದೇ ಇರಬೇಕಾದೀತು. ಈ ಆಕ್ಷೇಪವನ್ನೇ 'ಸಂಜ್ಞಾಯಾಂ ಪುಂಸಿ ದೃಷ್ಟತ್ವಾತ್ ನ ತೇ ಭಾರ್ಯಾ ಪ್ರಸಿದ್ಧ್ಯತಿ' ಎಂಬ ಪೂರ್ವಾರ್ಧವು ಹೇಳುತ್ತಿದೆ.

ಇದಕ್ಕೆ ಉತ್ತರವನ್ನು 'ಸ್ತ್ರಿಯಾಂ ಭಾವಾಧಿಕಾರೋಽಸ್ತಿ ತೇನ ಭಾರ್ಯಾ ಪ್ರಸಿದ್ಧ್ಯತಿ' ಎಂಬ ಶ್ಲೋಕವಾರ್ತಿಕದ ಉತ್ತರಾರ್ಧವು ಉತ್ತರಿಸುತ್ತಿದೆ. ಇಲ್ಲಿರುವ ಸಂಜ್ಞಾಯಾಂ ಎಂಬುದು ಸೂತ್ರದ ಪ್ರತೀಕಗ್ರಹಣವಾಗಿದೆ. ಸಂಜ್ಞಾಯಾಂ ಸಮಜನಿಷದ ಇತ್ಯಾದಿ ಸೂತ್ರದ ಬಲದಿಂದ ಕ್ಯಪ್‌ಪ್ರತ್ಯಯವೇ ಬರುತ್ತದೆ. ಆಗ ಭಾರ್ಯಾ ಎಂಬ ಶಬ್ದವು ನಿಷ್ಪನ್ನವಾಗುವುದಿಲ್ಲ. ಭೃತ್ಯಾ ಎಂಬ ಶಬ್ದವೇ ನಿಷ್ಪನ್ನವಾಗುತ್ತದೆ ಎಂದು. ಪುಂಸಿ ದೃಷ್ಟತ್ವಾತ್ ಎಂಬುದು ಅವಾಂತರ ಆಕ್ಷೇಪವನ್ನು ತೋರಿಸುತ್ತಿದೆ.

'ಭೃಞೋ ಅಸಂಜ್ಞಾಯಾಂ' ಎಂಬ ಸೂತ್ರದಲ್ಲಿ ಸಂಜ್ಞೆಯು ಗಮ್ಯಮಾನವಾಗದೇ ಇದ್ದಾಗ ಕ್ಯಪ್ ಪ್ರತ್ಯಯವು ಬರುತ್ತದೆಂದು ಹೇಳಲಾಗಿದೆ. ಭಾರ್ಯಾ ಎಂಬ ಶಬ್ದವು ಸಂಜ್ಞೆಯಾಗಿದೆ. ಆದ್ದರಿಂದ ಕ್ಯಪ್ ಪ್ರತ್ಯಯವು ಬರುವುದಿಲ್ಲ. ಆದ್ದರಿಂದ ಭಾರ್ಯಾ ಎಂಬ ಶಬ್ದವು ಅನಾಯಾಸವಾಗಿ ನಿಷ್ಪನ್ನವಾಗುತ್ತದಲ್ಲವೇ? ಈ ಅವಾಂತರ ಆಕ್ಷೇಪಕ್ಕೆ ಉತ್ತರವನ್ನು 'ಪುಂಸಿ ದೃಷ್ಟತ್ವಾತ್' ಎಂದು ಹೇಳಿದ್ದಾರೆ. ಭೃಞೋ ಅಸಂಜ್ಞಾಯಾಂ ಎಂಬ ಸೂತ್ರವು ಪುಲ್ಲಿಂಗಪ್ರಕರಣದಲ್ಲಿ ಪ್ರಾಪ್ತವಾಗಿದೆ. ದೃಷ್ಟತ್ವಾತ್ ಎಂಬ ಪದಕ್ಕೆ ಚರಿತಾರ್ಥವಾಗಿರುವುದರಿಂದ ಎಂದರ್ಥ. ಭೃಞೋ ಅಸಂಜ್ಞಾಯಾಂ ಎಂಬ ಸೂತ್ರವು ಪುಲ್ಲಿಂಗದಲ್ಲಿ ಚರಿತಾರ್ಥವಾಗಿದೆ. ಪತ್ನಿವಾಚಕವಾದ ಭಾರ್ಯಾಶಬ್ದವು ಸ್ತ್ರೀಲಿಂಗವಾಗಿರುವುದರಿಂದ ಅಸಂಜ್ಞಾಯಾಂ ಎಂಬುದಾಗಿ ಮಾಡಿದ ನಿಷೇಧವು ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಭಾರ್ಯಾ ಎಂಬ ಶಬ್ದವು ನಿಷ್ಪನ್ನವೇ ಆಗುವುದಿಲ್ಲ. ಏಕೆಂದರೆ ಸಂಜ್ಞಾಯಾಂ ಸಮಜನಿಷದ ಎಂಬ ಸೂತ್ರದಿಂದ ಕ್ಯಪ್ ಪ್ರತ್ಯಯವೇ ಬರುತ್ತದೆ. ಣ್ಯತ್ ಪ್ರತ್ಯಯವು ಬರುವುದಿಲ್ಲ. ಆದರೆ ಕ್ಷತ್ರಿಯವಾಚಕವಾದ ಭಾರ್ಯಾ ಶಬ್ದದ ನಿಷ್ಪತ್ತಿಗೆ ಯಾವುದೇ ಆತಂಕವಿಲ್ಲ. ತೇ ಎಂದರೆ ಪಾಣಿನಿಗೆ ಎಂದರ್ಥ. ಶ್ಲೋಕವಾರ್ತಿಕಕಾರರು ಪಾಣಿನಿಯನ್ನು ಕುರಿತು ಸಂಜ್ಞಾಯಾಂ ಪುಂಸಿ ದೃಷ್ಟತ್ವಾತ್ ನ ತೇ ಭಾರ್ಯಾ ಪ್ರಸಿದ್ಧ್ಯತಿ ಎಂಬುದಾಗಿ ಆಕ್ಷೇಪವನ್ನು ಮಾಡಿದ್ದಾರೆ. ಈ ಆಕ್ಷೇಪಕ್ಕೆ ಸ್ತ್ರಿಯಾಂ ಭಾವಾಧಿಕಾರೋಽಸ್ತಿ ತೇನ ಭಾರ್ಯಾ ಪ್ರಸಿದ್ಧ್ಯತಿ ಎಂದು ಉತ್ತರಿಸಲಾಗಿದೆ. ಸ್ತ್ರಿಯಾ ಎಂದರೆ ಸ್ತ್ರೀಪ್ರಕರಣದಲ್ಲಿರುವ ಸಂಜ್ಞಾಯಾಂ ಸಮಜನಿಷದ ಎಂಬ ಸೂತ್ರದಲ್ಲಿ ಎಂದರ್ಥ. ಈ ಸೂತ್ರದಲ್ಲಿ ಭಾವೇ ಎಂದು ಅನುವೃತ್ತವಾಗುತ್ತಿದೆ. ಭೃಞ್ ಧಾತುವಿಗೆ ಸಂಜ್ಞೆಯು ಗಮ್ಯಮಾನವಾದಾಗ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವು ಬರುತ್ತದೆ ಎಂದು ಹೇಳಿದಂತಾಯಿತು. ಭ್ರಿಯತೇ ಅನೇನ ಇತಿ ಎಂಬ ನಿಷ್ಪತ್ತಿಯಿಂದ ಪತಿಯಿಂದ ಪೋಷಣೆ ಮಾಡಲ್ಪಡುವವಳಾದ್ದರಿಂದ ಎಂಬ ಅರ್ಥವನ್ನು ವಿವಕ್ಷಿಸಿದಾಗ ಕರ್ಮಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ಹೇಳಿದಂತಾಯಿತು; ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ಹೇಳಿದಂತೆ ಆಗಲಿಲ್ಲ. ಆಗ





ಸೂತ್ರದಲ್ಲಿ ಭಾವೇ ಎಂಬುದು ಅನುವೃತ್ತವಾಗುತ್ತಿರುವುದರಿಂದ ಭೃಞ್ ಧಾತುವಿಗೆ ಭಾವಾರ್ಥದಲ್ಲಿ ಸಂಜ್ಞೆಯು ಗಮ್ಯಮಾನವಾದಾಗ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆಂದು ಹೇಳಿದ್ದರಿಂದ ಪತ್ನೀ-ವಾಚಕವಾದ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ಮಾಡಬೇಕು. ಪತ್ನೀವಾಚಕವಾಗಿ ಹೇಳುವಾಗ ಕರ್ಮಾರ್ಥದಲ್ಲೇ ಕ್ಯಪ್ ಪ್ರತ್ಯಯವನ್ನು ಹೇಳಬೇಕು. ಆದರೆ ಕರ್ಮಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ಇಲ್ಲಿ ವಿಧಾನ ಮಾಡುತ್ತಿಲ್ಲ. ಆದ್ದರಿಂದ ಭಾರ್ಯಾ ಎಂಬ ಶಬ್ದವು ಪ್ರಸಿದ್ಧವಾಗುತ್ತದೆ. ಇಲ್ಲಿ ಕ್ಯಪ್ ಪ್ರತ್ಯಯವು ಬಾರದೆ ಋಹಲೋರ್ಣ್ಯತ್ ಎಂಬ ಸೂತ್ರದಿಂದ ಣ್ಯತ್ ಪ್ರತ್ಯಯವನ್ನು ಕರ್ಮಾರ್ಥದಲ್ಲಿ ವಿಧಾನ ಮಾಡಲಾಗಿದೆ. ಭಾರ್ಯಾ ಶಬ್ದವು ಭ್ರಿಯತೇ ಇತಿ ಎಂದು ನಿಷ್ಪನ್ನವಾಗಿರುವುದರಿಂದ ಕರ್ಮಾರ್ಥಕವಾಗಿದೆ. ಆದ್ದರಿಂದ ಣ್ಯತ್ ಪ್ರತ್ಯಯವು ಇಲ್ಲಿ ಬರುತ್ತದೆ. ತೇನ ಭಾರ್ಯಾ ಪ್ರಸಿದ್ಧ್ಯತಿ ಎಂದರೆ ಸಂಜ್ಞಾಯಾಂ ಸಮಜನಿಷದ ಇತ್ಯಾದಿ ಸೂತ್ರವು ಋಹಲೋರ್ಣ್ಯತ್ ಎಂಬ ಸೂತ್ರವನ್ನು ವಿರೋಧ ಮಾಡುವುದಿಲ್ಲ. ಆದ್ದರಿಂದ ಣ್ಯತ್ ಪ್ರತ್ಯಯವು ಬಂದು ಭಾರ್ಯಾ ಎಂಬ ರೂಪವು ನಿಷ್ಪನ್ನವಾಗುತ್ತದೆ. ಏಕೆಂದರೆ ಇಲ್ಲಿ ಭಾವೇ ಎಂದು ಹೇಳಲಾಗಿದೆ ಎಂದರ್ಥ.

ಶ್ಲೋಕವಾರ್ತಿಕದಲ್ಲಿ ಭಾವೇ ಎಂಬುದರ ಅನುವೃತ್ತಿಯನ್ನು ಸಮರ್ಥನೆ ಮಾಡಲಾಗಿದೆ. ಆಗ ವಿದ ಧಾತುವಿಗೆ ಭಾವಾರ್ಥದಲ್ಲೇ ಕ್ಯಪ್ ಪ್ರತ್ಯಯವು ಬರುತ್ತದೆ. ಆದ್ದರಿಂದ ಜ್ಞಾನ ಎಂದಷ್ಟೇ ಅರ್ಥವನ್ನು ವಿದ್ಯಾಶಬ್ದಕ್ಕೆ ಹೇಳಿದಂತಾಗುತ್ತದೆ. ಭಾವೇ ಎಂಬುದರ ಅನುವೃತ್ತಿ ಮಾಡದಿದ್ದರೆ ಶ್ಲೋಕವಾರ್ತಿಕದ ವಿರೋಧವು ಬರುತ್ತದೆ. ಹೀಗೆ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯವು ಬಂದರೆ ಜ್ಞಾನಸಾಧನ ಎಂಬರ್ಥವು ದೊರೆಯುವುದಿಲ್ಲ ಎಂಬುದು ಒಟ್ಟು ಆಕ್ಷೇಪ.

ಉತ್ತರ ಹೀಗಿದೆ – ಸ್ತ್ರಿಯಾಂ ಭಾವಾಧಿಕಾರಃ ಎಂಬಲ್ಲಿರುವ ಅಧಿಕಾರ ಶಬ್ದಕ್ಕೆ ಅನುವೃತ್ತಿ ಎಂಬರ್ಥವನ್ನು ಹೇಳಬಾರದು. ಅಧಿಕಾರ ಶಬ್ದಕ್ಕೆ ವ್ಯಾಪಾರ ಎಂದರ್ಥ. ಇದು ಅಂಗೀಕಾರರೂಪವಾಗಿದೆ. ಭಾವಾಧಿಕಾರ ಎಂಬುದಕ್ಕೆ ಭಾವದ ಅಂಗೀಕಾರ ಎಂಬರ್ಥವನ್ನು ಹೇಳಿದಂತಾಯಿತು. ಸಂಜ್ಞಾಯಾಂ ಸಮಜನಿಷದ ಇತ್ಯಾದಿ ಸೂತ್ರದಲ್ಲಿ ಸಂಜ್ಞಾಯಾಂ ಎಂಬುದೇ ಬಹಳ ಮುಖ್ಯವಾದದ್ದು. ಯಾವ ಅರ್ಥದಲ್ಲಿ ಯಾವ ಪ್ರತ್ಯಯವನ್ನು ಇಟ್ಟಾಗ ಅದು ಸಂಜ್ಞೆಯಾಗುತ್ತದೋ ಆ ಅರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ಹೇಳಬೇಕು. ಭಾವದಲ್ಲೇ ಕ್ಯಪ್ ಬರಬೇಕು ಎಂದು ಹೇಳಿದರೆ ಸಂಜ್ಞಾಯಾಂ ಎಂದು ಹೇಳಿದ್ದೇ ವ್ಯರ್ಥವಾಗುತ್ತದೆ. ಸಂಜ್ಞಾಯಾಂ ಎಂದು ಹೇಳಿದ್ದರಿಂದ ಯಾವ ಅರ್ಥದಲ್ಲಿ ಉತ್ಪನ್ನವಾದ ಪ್ರತ್ಯಯವು ಲಭ್ಯಮಾನವಾದಾಗ ಸಂಜ್ಞೆಯು ಗಮ್ಯವಾಗುತ್ತದೋ ಆಗ ಕ್ಯಪ್ ಪ್ರತ್ಯಯವು ಬರುತ್ತದೆ. ಅಧಿಕರಣ, ಕರಣ, ಭಾವ ಮೊದಲಾದ ಯಾವ ಕಾರಕವಾದರೂ ಕೂಡ ಕ್ಯಪ್ ಪ್ರತ್ಯಯವನ್ನು ಹೇಳಲು ಬರುತ್ತದೆ. ಉದಾ - ಸಮಜ್ಯಂತೇ ಅಸ್ಯಾಂ ಇತಿ ಸಮಜ್ಯಾ ಎಂಬುದು. ಮಂಚ ಹಾಸಿಗೆಗಳಲ್ಲಿ ಸಮಜ್ಯಾ ಎಂಬ ಶಬ್ದವನ್ನು ಪ್ರಯೋಗಿಸಲಾಗುತ್ತದೆ.



ಅಧಿಕರಣಾರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ಹೇಳಿದರೆ ಮಾತ್ರ ಸಮಜ್ಯಾ ಇತ್ಯಾದಿ ಶಬ್ದಗಳು ನಿಷ್ಪನ್ನವಾಗುತ್ತದೆ. ಹೀಗೆ ಅಧಿಕರಣಾರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ಹೇಳಿದಾಗ ಮಾತ್ರ ಇದು ಸಂಜ್ಞೆ ಎಂದು ಕರೆಸಿಕೊಳ್ಳುತ್ತದೆ. ಕರ್ಮಾದ್ಯರ್ಥಗಳಲ್ಲಿ ಕ್ಯಪ್ ಪ್ರತ್ಯಯವನ್ನು ವಿವಕ್ಷಿಸಿದಗೆ ಸಂಜ್ಞೆಯೇ ಆಗುವುದಿಲ್ಲ. ಆದ್ದರಿಂದ ಯಾವ ಅರ್ಥದಲ್ಲಿ ಯಾವ ಪ್ರತ್ಯಯವನ್ನು ವಿವಕ್ಷಿಸಿದಾಗ ಸಂಜ್ಞೆಯಾಗುತ್ತದೋ ಆಗ ಕ್ಯಪ್ ಪ್ರತ್ಯಯವು ಬರುತ್ತದೆಂದು ಸಂಜ್ಞಾಯಾಂ ಎಂಬ ಪದಕ್ಕೆ ಅರ್ಥವನ್ನು ತಿಳಿಯಬೇಕು. ಆದ್ದರಿಂದ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆಂದು ನಿಯಮ ಮಾಡಲು ಬರುವುದಿಲ್ಲ. ಹಾಗಾದರೆ ಸ್ತ್ರಿಯಾಂ ಭಾವಾಧಿಕಾರೋऽಸ್ತಿ ಎಂಬುದಾಗಿ ಹೇಳಿದ್ದಕ್ಕೆ ಏನರ್ಥ? ಎಂದರೆ ಭಾವಸ್ಯ ಅಂಗೀಕಾರಃ ಎಂದರ್ಥ. ಸ್ತ್ರೀಪ್ರಕರಣಗತವಾದ ಸಂಜ್ಞಾಯಾಂ ಇತ್ಯಾದಿ ಸೂತ್ರದಲ್ಲಿ ಭೃಞ್ ಧಾತುವಿನ ವಿಷಯದಲ್ಲಿ ಭಾವವನ್ನು ಅಂಗೀಕಾರ ಮಾಡುತ್ತೇವೆ ಎಂಬ ಅಭಿಪ್ರಾಯವನ್ನು ತಿಳಿಯಬೇಕು. ಯಾವುದನ್ನು ಸ್ವರಿತಸ್ವರದಲ್ಲಿ ಪಾಣಿನಿಯು ಉಚ್ಚರಿಸುತ್ತಾನೋ ಅದನ್ನು ಮಾತ್ರ ಅನುವೃತ್ತಿ ಮಾಡಬೇಕು. ಅಕರ್ತರಿಚ ಕಾರಕೇ ಸಂಜ್ಞಾಯಾಂ ಇತ್ಯಾದಿ ಸೂತ್ರವು ಸ್ವರಿತಸ್ವರದಲ್ಲಿ ಉಚ್ಚರಿತವಾದ್ದರಿಂದ ಮುಂದಿನ ಸೂತ್ರಗಳಲ್ಲಿ ಅನುವೃತ್ತವಾಗುತ್ತದೆ. (ಯಾವುದು ಸ್ವರಿತಸ್ವರವೆಂಬುದು ಎಂಬುದನ್ನು ಸಂಪ್ರದಾಯದಿಂದಲೇ ತಿಳಿಯಬೇಕು). ಪ್ರಕೃತ ವ್ರಜಯಜೋರ್ಭಾವೇ ಕ್ಯಪ್ ಎಂಬ ಸೂತ್ರದಲ್ಲಿರುವ ಭಾವೇ ಎಂಬುದನ್ನು ಸ್ವರಿತಸ್ವರದಲ್ಲಿ ಪಾಣಿನಿಯು ಉಚ್ಚರಿಸಿರುವುದಿಲ್ಲ. ಆದ್ದರಿಂದ ಸ್ವರಿತತ್ವ ನಿಬಂಧನವಾದ ಅನುವೃತ್ತಿಯು ಮುಂದಿನ ಸೂತ್ರದಲ್ಲಿ ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಸ್ತ್ರೀಪ್ರಕರಣಗತವಾದ ಸಂಜ್ಞಾಯಾಂ ಸಮಜನಿಷದ ಇತ್ಯಾದಿ ಸೂತ್ರದಲ್ಲಿ ಭೃಞ್ ಧಾತುವಿಗೆ ಸಂಜ್ಞೆಯು ಗಮ್ಯಮಾನವಾದಾಗ ಕ್ಯಪ್ ಪ್ರತ್ಯಯವನ್ನು ವಿಧಿಸುವಾಗ ಭಾವಾರ್ಥವನ್ನು ವಿವಕ್ಷಿಸಿದ್ದೇವೆ ಎಂದಷ್ಟೇ ಅರ್ಥ ಹೊರತು ಭಾವೇ ಎಂಬುದು ಅನುವೃತ್ತವಾಗಿದೆ ಎಂದರ್ಥವಲ್ಲ. ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ಇಟ್ಟಾಗ ಭೃಞ್ ಧಾತುವಿಗೆ ಭೃತ್ಯಾ, ಭರಣಂ, ಜೀವಿಕಾ ಇತ್ಯಾದ್ಯರ್ಥಗಳು ತಿಳಿಯುತ್ತವೆ. ಒಂದು ವೇಳೆ ಕರ್ಮಾರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ವಿವಕ್ಷಿಸಿ ಪತ್ನಿ ಎಂಬರ್ಥವನ್ನು ಹೇಳಿದರೆ ಆವಾಗ ಇದು ಸಂಜ್ಞೆಯೇ ಆಗುವುದಿಲ್ಲ. ಏಕೆಂದರ ಪತ್ನಿ ಎಂಬರ್ಥದಲ್ಲಿ ಭಾರ್ಯಾ ಎಂಬ ಶಬ್ದವೇ ರೂಢವಾಗಿದೆ. ಭೃತ್ಯಾ ಎಂಬ ಶಬ್ದವು ರೂಢವಾಗಿಲ್ಲ. ಯಾವ ಅರ್ಥದಲ್ಲಿ ಕ್ಯಪ್ ಪ್ರತ್ಯಯವನ್ನು ಹೇಳಲಾಗುತ್ತದೋ ಆಗ ಅದು ಸಂಜ್ಞೆಯಾಗಬೇಕು. ಹೀಗೆ ಸಂಜ್ಞಾಯಾಂ ಎಂದು ಹೇಳಿದ್ದರಿಂದ ಪ್ರಕೃತ ವಿದ್ಯಾಶಬ್ದವು ಭಾವಾರ್ಥದಲ್ಲಿ ಹಾಗೂ ಕರಣಾರ್ಥದಲ್ಲಿ ನಿಷ್ಪನ್ನವಾಗಬಹುದಾದ್ದರಿಂದ ಜ್ಞಾನಸಾಧನ ಹಾಗೂ ಯಥಾರ್ಥಜ್ಞಾನ ಎಂಬರ್ಥ ಎರಡು ಅರ್ಥವನ್ನು ಪ್ರತಿಪಾದನೆ ಮಾಡುತ್ತದೆಂಬುದು ಸಿದ್ಧವಾಯಿತು.

(ವಾಕ್ಯಾರ್ಥಚಂದ್ರಿಕಾದ ವ್ಯಾಖ್ಯಾನವೆನಿಸಿದ ವಾಕ್ಯಾರ್ಥರತ್ನಮಾಲಾಟಪ್ಪಣಿಯ ಆಧಾರದಿಂದ ಈ ವಿವರಣೆಯನ್ನು ನೀಡಲಾಗಿದೆ).





## ರಸಘಟ್ಟ

## ಕಾಶೀ ಟಿಪ್ಪಣಿಯಲ್ಲಿ ವಿದ್ಯಾಶಬ್ದಾರ್ಥವಿಚಾರ

**ಕಾಶೀ– ತತ್ರ ಯೋಗರೂಢ್ಯೋಃ ಜ್ಞಾಪಕಮಾಹ – ಸಂಜ್ಞಾಯಾಂ ಸಮಜನಿಷದೇತ್ಯುಕ್ತೇರಿತಿ ॥ 'ಸಂಜ್ಞಾಯಾಂ ಸಮಜ- ನಿಷದ- ನಿಪತ- ಮನ- ವಿದ- ಷುಞ್- ಶೀಙ್- ಭೃಞಿಣಃ' ಇತಿ ಸೂತ್ರೇಣ ಸಮಜಾದಿಧಾತುಭ್ಯೋ ಭಾವೇಽಕರ್ತರಿ ಕಾರಕೇ ಚ ಸಂಜ್ಞಾಯಾಮೇವ ಕ್ಯಪ್ ವಿಧಾನಾದಿತ್ಯರ್ಥಃ । ತತ್ರ 'ಸಂಜ್ಞಾಯಾಮ್' ಇತ್ಯನೇನ 'ರೂಢೇರ್ಭಾವ' ಇತ್ಯಾದಿನಾ ಅನುವೃತ್ತಮಾನೇನ ಯೋಗಸ್ಯ ಚ ಜ್ಞಾಪನಾತ್ ಇತಿ ಭಾವಃ । 'ಸಮಜನಿಷದ' ಇತ್ಯತ್ರ ಸಂಜ್ಞಾಯಾಮ್ ಇತ್ಯುಕ್ತೇಃ - ಇತ್ಯಾದಿ ಪಾಠಸ್ತು ಯೋಗಮಂಗೀಕೃತ್ಯ ರೂಢಿಜ್ಞಾಪಕಾಶಂಕಯಾ ಅವತರಣೀಯಃ । 'ಸಂಜ್ಞಾಯಾಮಿತ್ಯನುವೃತ್ತೇಃ' ಇತಿ ಪಾಠೇ 'ಸಂಜ್ಞಾಯಾಮ್' ಇತ್ಯಸ್ಯ 'ಸಮಜನಿಷದ' ಇತಿ ಸೂತ್ರೇ ಪ್ರತಿಪದಮನುಷಂಗಾದಿತ್ಯರ್ಥಃ । ಪರಿಮಳೇ ತು 'ಸಂಜ್ಞಾಯಾಮ್ ಇತ್ಯೇಕದೇಶೋತ್ಕೀರ್ತನಾತ್ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ಇತಿ ಸೂತ್ರಸ್ಯೈವ ಅನುವೃತ್ತೇಃ' ಇತ್ಯರ್ಥೋ ವಿವಕ್ಷಿತಃ । ತೇನ ಯೋಗರೂಢ್ಯೋರ್ಲಾಭಃ । ನ ಚ ತತ್ಸೂತ್ರಾನುವೃತ್ತ್ಯಾ ಇಹ ಸಂಜ್ಞಾಗ್ರಹಣವೈಯರ್ಥ್ಯಮಿತಿ ವಾಚ್ಯಮ್ । ತತ್ಸೂತ್ರೇ 'ಸಂಜ್ಞಾಯಾಮ್' ಇತ್ಯಸ್ಯ ಸಂಜ್ಞಾಯಾಮ್ ಚ ಇತ್ಯನ್ವಯೇನ ಪ್ರಾಯಿಕತ್ವಸ್ಯ ವ್ಯಾಖ್ಯಾತತ್ವಾದಿಹ ತನ್ನಿಯಮಾರ್ಥತ್ವೇನ ಸಂಜ್ಞಾಗ್ರಹಣಸಾರ್ಥಕ್ಯಾದಿತಿ ॥**

'ಸಂಜ್ಞಾಯಾಂ ಸಮಜ- ನಿಷದ- ನಿಪತ- ಮನ- ವಿದ- ಷುಞ್- ಶೀಙ್- ಭೃಞಿಣಃ' ಎಂಬ ಸೂತ್ರದಿಂದ ಸಮಜ ಮೊದಲಾದ ಧಾತುಗಳ ಮುಂದೆ ಭಾವಾರ್ಥದಲ್ಲಿ ಕರ್ತೃಭಿನ್ನವಾದ ಇತರ ಕಾರಕಾದ್ಯರ್ಥಗಳಲ್ಲಿ ರೂಢಿಯು ಗಮ್ಯವಾದಾಗ ಮಾತ್ರ ಕ್ಯಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ ಎಂದು ಹೇಳಲಾಗಿದೆ. ಈ ಸೂತ್ರದಲ್ಲಿ ಸಂಜ್ಞಾಯಾಮ್ ಎಂಬ ಪದದಿಂದ ರೂಢಿಯು, ಭಾವೇ ಎಂಬುದರಿಂದ ಯೋಗವು ತಿಳಿಯುತ್ತದೆ. ಇಷ್ಟು ಸೂತ್ರದ ಅಭಿಪ್ರಾಯ.

'ಸಮಜನಿಷದೇತ್ಯತ್ರ ಸಂಜ್ಞಾಯಾಮಿತ್ಯುಕ್ತೇಃ' ಎಂಬುದಾಗಿ ಕೆಲವು ಪುಸ್ತಕಗಳಲ್ಲಿ ಪಾಠವಿದೆ. ಈ ಪಕ್ಷದಲ್ಲಿ ಯೋಗವನ್ನು ಅಂಗೀಕಾರ ಮಾಡಿ ರೂಢಿಗೆ ಜ್ಞಾಪಕವಾಗಿ ನ್ಯಾಯಸುಧಾವಾಕ್ಯವನ್ನು ಅವ-ತಾರಿಕಾರೂಪದಲ್ಲಿ ವ್ಯಾಖ್ಯಾನ ಮಾಡತಕ್ಕದ್ದು. ಸಂಜ್ಞಾಯಾಮಿತ್ಯನುವೃತ್ತೇಃ ಎಂಬ ಪಾಠದಲ್ಲಿ ಸಮಜ-ನಿಷದ ಎಂಬ ಸೂತ್ರದಲ್ಲಿ ಪ್ರತಿಯೊಂದು ಪದಗಳ ಜೊತೆ ಸಂಜ್ಞಾಯಾಮ್ ಎಂಬುದು ಅನುವೃತ್ತಮಾ-





ಗುತ್ತದೆ. ಪರಿಮಳದಲ್ಲಿ ಸಂಜ್ಞಾಯಾಮ್ ಎಂಬುದರ ಏಕದೇಶಗ್ರಹಣದಿಂದ ಆಕರ್ತರಿಚ ಕಾರಕೇ ಸಂಜ್ಞಾಯಾಮ್ ಎಂಬ ಸಂಪೂರ್ಣಸೂತ್ರವನ್ನೇ ಅನುವೃತ್ತಿಮಾಡಿಕೊಳ್ಳಬೇಕು ಎಂಬರ್ಥವನ್ನು ವಿವಕ್ಷಿಸಿದ್ದಾರೆ. ಇದರಿಂದ ಯೋಗ ಹಾಗೂ ರೂಢಿಗಳೆರಡೂ ಲಭ್ಯವಾಗುತ್ತವೆ.

ಅಕರ್ತರಿ ಚ ಇತ್ಯಾದಿ ಸೂತ್ರದಿಂದಲೇ ಸಂಜ್ಞಾಯಾಮ್ ಎಂಬುದು ಅನುವೃತ್ತವಾಗುತ್ತಿರುವಾಗ ಪುನಃ ಈ ಸೂತ್ರದಲ್ಲಿ ಸಂಜ್ಞಾಯಾಮ್ ಎಂದು ಹೇಳಿರುವುದು ವ್ಯರ್ಥವಲ್ಲವೇ? ಎಂಬುದಾಗಿ ಪ್ರಶ್ನಿಸಬಾರದು. ಹಿಂದಿನ ಸೂತ್ರದಲ್ಲಿ ಸಂಜ್ಞಾಯಾಂ ಚ ಎಂಬುದಾಗಿ ಅನ್ವಯ ಮಾಡಿದ್ದರಿಂದ ಪ್ರಾಯಿಕವೆಂದು ತಿಳಿಯುತ್ತದೆ. ಈ ಸೂತ್ರದಲ್ಲಿ ಪುನಃ ಸಂಜ್ಞಾಯಾಮ್ ಎಂಬುದಾಗಿ ಹೇಳಿರುವುದರಿಂದ ನಿಯಮವನ್ನು ತಿಳಿಸಿದಂತಾಗುತ್ತದೆ.

1. 'ಸಂಜ್ಞಾಯಾಂ ಸಮಜನಿಷದ ಇತ್ಯತ್ರ ಸಂಜ್ಞಾಯಾಮ್ ಇತ್ಯನುವೃತ್ತೇಃ' ಎಂಬುದು ಒಂದು ಪಾಠ.

2. 'ಸಮಜನಿಷದ ಇತ್ಯತ್ರ ಸಂಜ್ಞಾಯಾಮಿತ್ಯುಕ್ತೇಃ' ಎಂಬುದು ಮತ್ತೊಂದು ಪಾಠ.

3. 'ಸಂಜ್ಞಾಯಾಂ ಸಮಜನಿಷದ ಇತ್ಯುಕ್ತೇಃ' ಎಂಬುದು ಮತ್ತೊಂದು ಪಾಠ.

ಮೊದಲನೆಯ ಪಾಠ ಪರಿಮಳಕಾರರಿಗೆ ಸಮ್ಮತವಾದದ್ದು. ಎರಡನೆಯದ್ದು ವಾಕ್ಯಾರ್ಥಚಂದ್ರಿಕಾಕಾರರಿಗೆ ಸಮ್ಮತವಾದದ್ದು. ಮೂರನೆಯದ್ದು ಕಾಶೀ ಆಚಾರ್ಯರಿಗೆ ಸಮ್ಮತವಾದದ್ದು. ಕೊನೆಯ ಎರಡು ಪಾಠಗಳಲ್ಲಿ ಒಂದೇ ಅರ್ಥವು ತಿಳಿಯುತ್ತದೆ. ಮೊದಲನೆಯ ಪಾಠದಲ್ಲಿ ಇರುವ ಅರ್ಥವ್ಯತ್ಯಾಸವನ್ನು ಕಾಶೀ ಆಚಾರ್ಯರು ಇಲ್ಲಿ ಉಲ್ಲೇಖ ಮಾಡಿದ್ದಾರೆ.

ವಾಸ್ತವಿಕವಾಗಿ ಕಾಶಿಕಾವೃತ್ತಿಯಲ್ಲಿ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಲ್ಲಿರುವ ಸಂಜ್ಞಾಯಾಮ್ ಎಂಬುದನ್ನು ಸಂಜ್ಞಾಯಾಂ ಸಮಜನಿಷದ ಇತ್ಯಾದಿ ಸೂತ್ರದಲ್ಲಿ ಅನುವೃತ್ತಿ ಮಾಡಬಾರದು. ಕೇವಲ 'ಅಕರ್ತರಿ ಚ ಕಾರಕೇ' ಎಂಬುದನ್ನಷ್ಟೇ ಅನುವೃತ್ತಿ ಮಾಡಬೇಕು ಎಂಬುದಾಗಿ ಹೇಳಿದ್ದಾರೆ. ಆದರೆ 'ಸಂಜ್ಞಾಯಾಂ ಸಮಜನಿಷದ ಇತ್ಯತ್ರ ಸಂಜ್ಞಾಯಾಮಿತ್ಯನುವೃತ್ತೇಃ' ಎಂಬ ಸುಧಾವಾಕ್ಯವನ್ನು ನೋಡಿದಾಗ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ಎಂಬ ಸೂತ್ರದಲ್ಲಿರುವ ಸಂಜ್ಞಾಯಾಂ ಎಂಬ ಪದವನ್ನು ಮುಂದಿನ ಸಂಜ್ಞಾಯಾಂ ಸಮಜನಿಷದ ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಬೇಕೆಂಬ ಅರ್ಥವು ತಿಳಿಯುತ್ತದೆ. ಇದು ಕಾಶಿಕಾವೃತ್ತಿಗೆ ವಿರುದ್ಧವಾಯಿತಲ್ಲವೇ ಎಂಬ ಪ್ರಶ್ನೆಗೆ ಮೂರುರೀತಿಯಲ್ಲಿ ಪರಿಹಾರವನ್ನು ತಿಳಿಸಲಾಗಿದೆ.





1. ಸಂಜ್ಞಾಯಾಂ ಎಂಬುದು ನಾಮೈಕದೇಶಗ್ರಹಣವಾಗಿದೆ. ಇದನ್ನು ಅನುವೃತ್ತಿಮಾಡಿ-ಕೊಳ್ಳುವುದು ಟೀಕಾರಾಯರಿಗೆ ಸಮ್ಮತವಾದದ್ದಲ್ಲ. ಅಕರ್ತರಿ ಚ ಕಾರಕೇ ಎಂಬುದನ್ನಷ್ಟೇ ಅನುವೃತ್ತಿ ಮಾಡಿಕೊಳ್ಳಬೇಕೆಂಬುದು ಪರಿಮಳದಲ್ಲಿ ಹೇಳಿರುವ ಉತ್ತರ

2. ಸಂಜ್ಞಾಯಾಂ ಎಂಬುದು ಸಮಜನಿಷದ ಎಂಬ ಸೂತ್ರದಲ್ಲಿ ಪ್ರತಿಯೊಂದು ಪದಗಳಲ್ಲೂ ಅನ್ವಯವನ್ನು ಹೊಂದುತ್ತದೆ ಎಂಬುದು ಮತ್ತೊಂದು ಉತ್ತರ.

3. ಅಥವಾ ಹಿಂದಿನ ಸೂತ್ರದಿಂದಲೇ ಸಂಜ್ಞಾಯಾಂ ಎಂಬುದರಿಂದ ರೂಢ್ಯರ್ಥದಲ್ಲಿ ಕ್ಯಪ್ ಪ್ರತ್ಯಯ ಬರುತ್ತದೆ ಎಂದು ತಿಳಿಯುತ್ತಿದ್ದರೂ ಪುನಃ ಈ ಸೂತ್ರದಲ್ಲಿ ಸಂಜ್ಞಾಯಾಂ ಎಂಬುದರ ಗ್ರಹಣ-ದಿಂದ ರೂಢ್ಯರ್ಥದಲ್ಲಿ ಮಾತ್ರ ಎಂಬ ನಿಯಮವನ್ನು ತಿಳಿಸಿದಂತಾಗುತ್ತದೆ.

## ಸುಧಾಪರಿಮಳಸಾರ

ಆಥರ್ವಣ ಮೊದಲಾದ ಉಪನಿಷತ್ತುಗಳಲ್ಲಿ ಬ್ರಹ್ಮಸೂತ್ರವನ್ನು ಪರವಿದ್ಯಾ ಎಂದು ಕರೆದಿದ್ದಾರೆ. ಬ್ರಹ್ಮಸೂತ್ರಗಳನ್ನು ಪರವಿದ್ಯೆಯೆಂದು ಮುಂದೆ ಪ್ರತಿಪಾದಿಸುತ್ತಾರೆ.

ಈ ಉಪನಿಷತ್ತಿನಲ್ಲಿರುವ ವಿದ್ಯಾಶಬ್ದಕ್ಕೆ ಯೋಗರೂಢಿಗಳಿಂದ ಜ್ಞಾನ ಹಾಗೂ ಜ್ಞಾನಸಾಧನ ಎಂಬ ಅರ್ಥಗಳು ಸಿದ್ಧಿಸುತ್ತವೆ ಎಂದು ಸುಧಾದಲ್ಲಿ ಹೇಳಲಾಗಿದೆ. ಆದರೆ ಯಥಾರ್ಥಜ್ಞಾನ-ಸಾಧನೇ ವಿದ್ಯಾಶಬ್ದಸ್ಯ ಎಂದಷ್ಟೇ(ವಿದ್ಯಾಶಬ್ದವು ಯೋಗರೂಢಿಗಳಿಂದ ಜ್ಞಾನಸಾಧನವೆಂಬ ಅರ್ಥವುಳ್ಳದ್ದಾಗಿದೆ.) ಹೇಳಿದರೆ ಸಾಕಾಗುತ್ತಿತ್ತು. ಆದರೆ ಇಷ್ಟೇ ಪ್ರಯೋಗಿಸಿದ್ದರೆ ವಿದ್ಯಾಶಬ್ದಕ್ಕೆ ಯಥಾರ್ಥಜ್ಞಾನ ಎಂಬ ಅರ್ಥದಲ್ಲಿ ಯೋಗರೂಢಿಗಳು ಇಲ್ಲವೆಂಬ ಸಂಶಯ ಬರುತ್ತಿತ್ತು. ಅದನ್ನು ನಿವಾರಣೆ ಮಾಡುವುದಕ್ಕೋಸ್ಕರ ವಿದ್ಯಾಶಬ್ದಕ್ಕೆ 'ಜ್ಞಾನ' ಎಂಬ ಅರ್ಥದಲ್ಲಿ ಯೋಗ ಹಾಗೂ ರೂಢಿಗಳಿವೆ ಮತ್ತು 'ಜ್ಞಾನಸಾಧನ' ಎಂಬ ಅರ್ಥದಲ್ಲಿಯೂ ಯೋಗ ಮತ್ತು ರೂಢಿಗಳಿವೆ ಎಂದು ಹೇಳಿರುತ್ತಾರೆ.

ವಿದ್ಯಾಶಬ್ದವು ಯೋಗ-ರೂಢಿಗಳಿಂದ ಜ್ಞಾನವಾಚಕವಾದ ಹಾಗೆ ಜ್ಞಾನಸಾಧನವಾಚಕ-ವಾಗಲಾರದು. ಏಕೆಂದರೆ 'ಸಂಜ್ಞಾಯಾಂ ಸಮಜ-ನಿಷದ-ನಿಪತ-ಮನ-ವಿದ-ಷುಞ್-ಶೀಙ್ -ಭೃಞಿಣಃ'' ಎಂಬ ಸೂತ್ರದಿಂದ ವಿದಧಾತುವಿಗೆ ಕ್ಯಪ್‌ಎಂಬ ಪ್ರತ್ಯಯ ಬಂದು ವಿದ್ಯಾ ಎಂದು ರೂಪವಾಗುತ್ತದೆ. ಆದರೆ ಈ ಸೂತ್ರದಲ್ಲಿ ಕ್ಯಪ್ ಎಂಬುದನ್ನು 'ವ್ರಜಯಜೋಃ ಭಾವೇ ಕ್ಯಪ್'' ಎಂಬುದರಿಂದ ಅನುವೃತ್ತಿ ಮಾಡಬೇಕು. 'ವ್ರಜಯಜೋರ್ಭಾವೇ ಕ್ಯಪ್'' ಎಂಬ





ಸೂತ್ರವು 'ಭಾವ'' ಎಂಬ ಅರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ವಿಧಿಸುತ್ತದೆ. ಹಿಂದಿನ ಸೂತ್ರದಿಂದ 'ಭಾವೇ' ಎಂದು ಅನುವೃತ್ತಿ ಮಾಡಲು ಬರುತ್ತಿದ್ದರೂ ಈ ಸೂತ್ರದಲ್ಲಿ ಪುನಃ 'ಭಾವೇ' ಎಂದು ಹೇಳಿದ್ದರಿಂದ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯ ಬರುತ್ತದೆ. ಹೊರತು ಕರ್ತೃಭಿನ್ನ-ಕಾರಕಾರ್ಥದಲ್ಲಿ ಬರುವುದಿಲ್ಲವೆಂದು ತಿಳಿಯುತ್ತದೆ. ಈ ರೀತಿಯಾದ 'ವ್ರಜಯಜೋಃ' ಎಂಬ ಸೂತ್ರದ 'ಕ್ಯಪ್' ಪ್ರತ್ಯಯವನ್ನೇ 'ಸಂಜ್ಞಾಯಾಂ...''ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಿದ್ದ-ರಿಂದ ಇಲ್ಲಿ ಹೇಳಲ್ಪಟ್ಟ ಧಾತುಗಳಿಗೂ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯ ಬರುತ್ತದೆ-ಯೆಂದು ಸಿದ್ಧವಾಯಿತು. ಆದ್ದರಿಂದ ಜ್ಞಾನಸಾಧನ ಎಂಬ ಅರ್ಥವು ವಿದ್ಯಾಶಬ್ದದಿಂದ ತಿಳಿ-ಯಲು ಹೇಗೆ ಸಾಧ್ಯ?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು—'ಸಂಜ್ಞಾಯಾಂ ಸಮಜ...' ಎಂಬ ಸೂತ್ರದಲ್ಲಿ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಿಂದ 'ಭಾವೇ' ಎಂಬುದನ್ನು ಅನುವೃತ್ತಿ ಮಾಡಬಾರದು. ಕೇವಲ 'ಕ್ಯಪ್' ಎಂಬುದನ್ನಷ್ಟೇ ಅನುವೃತ್ತಿ ಮಾಡಬೇಕು. ಈ ರೀತಿಯಾಗಿ ವೃತ್ತಿ ಮೊದಲಾದ ಗ್ರಂಥಗಳಲ್ಲಿ ಹೇಳಿದ್ದಾರೆ. ಈಗ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರಕ್ಕಿಂತಲೂ ಮೊದಲಿನ ಸೂತ್ರಗಳಲ್ಲಿ ಅಧಿಕೃತವಾದ 'ಭಾವೇ' ಎಂಬುದನ್ನು ಮತ್ತು 'ಅಕರ್ತರಿ ಚ ಕಾರಕೇ' ಎಂಬುದನ್ನು 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಅನುವೃತ್ತಿ ಮಾಡಬೇಕಾದ್ದರಿಂದ 'ಸಂಜ್ಞಾಯಾಂ ಸಮಜ...' ಸೂತ್ರಕ್ಕೂ ಅದು ಅನುವೃತ್ತಿ-ಯಾಗುವುದರಿಂದ ಸಂಜ್ಞಾಯಾಂ... ಎಂಬ ಸೂತ್ರದಿಂದ ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನ-ಕಾರಕದಲ್ಲಿ ಕ್ಯಪ್ ಬರುತ್ತದೆ ಎಂದು ಸಿದ್ಧವಾಯಿತು.

ಈ ರೀತಿಯಾಗಿ ವಿದ್‌ಧಾತುವಿಗೆ ಭಾವಾರ್ಥದಲ್ಲಿಯೂ ಕರಣಾರ್ಥದಲ್ಲಿಯೂ ಕ್ಯಪ್‌ಪ್ರತ್ಯಯ ಬಂದು ವಿದ್ಯಾ ಎಂಬುದಾಗಿ ನಿಷ್ಪನ್ನವಾಗುತ್ತದೆ. ಆದ್ದರಿಂದ ವಿದ್ಯಾಶಬ್ದಕ್ಕೆ ಯೋಗವೂ ಸಂಜ್ಞಾಯಾಂ ಎಂದು ಹೇಳಿದ್ದರಿಂದ ರೂಢಿಯೂ ಸಿದ್ಧವಾಯಿತು.

ಈ ರೀತಿಯಾದ ಸಮಾಧಾನವು ಟೀಕಾಕಾರರಿಗೆ ಸಮ್ಮತವಾದದ್ದೆಂದು ಹೇಗೆ ತಿಳಿಯುತ್ತದೆ? ಎಂದರೆ ಸುಧಾದಲ್ಲಿ 'ಸಂಜ್ಞಾಯಾಂ ಸಮಜನಿಷದೇತ್ಯತ್ರ ಸಂಜ್ಞಾಯಾಮಿತ್ಯನುವೃತ್ತೇಃ' ಎಂದು ಹೇಳಿದ್ದಾರೆ. ಸೂತ್ರದಲ್ಲಿಯೇ ಸಂಜ್ಞಾಯಾಂ ಎಂದು ಇರುವಾಗ ಪುನಃ ಅನುವೃತ್ತಿಯನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಆದ್ದರಿಂದ ಸಂಜ್ಞಾಯಾಂ ಎಂಬುದನ್ನು ಅನುವೃತ್ತಿ ಮಾಡ-ಬೇಕೆಂದು ಅರ್ಥೈಸದೇ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸಮಗ್ರಸೂತ್ರವನ್ನೇ ಅನುವೃತ್ತಿಮಾಡಬೇಕು ಎಂದು ಟೀಕಾವಾಕ್ಯಕ್ಕೆ ಅರ್ಥೈಸಬೇಕು. ಅಕರ್ತರಿ ಚ – ಎಂಬ ಸೂತ್ರ-





1. ಸಂಜ್ಞಾಯಾಂ ಎಂಬುದು ಸಾಮೈಕದೇಶಗ್ರಹಣವಾಗಿದೆ. ಇದನ್ನು ಅನುವೃತ್ತಿಮಾಡಿಕೊಳ್ಳುವುದು ಟೀಕಾರಾಯರಿಗೆ ಸಮ್ಮತವಾದದ್ದಲ್ಲ. ಅಕರ್ತರಿ ಚ ಕಾರಕೇ ಎಂಬುದನ್ನಷ್ಟೇ ಅನುವೃತ್ತಿ ಮಾಡಿಕೊಳ್ಳಬೇಕೆಂಬುದು ಪರಿಮಳದಲ್ಲಿ ಹೇಳಿರುವ ಉತ್ತರ

2. ಸಂಜ್ಞಾಯಾಂ ಎಂಬುದು ಸಮಜನಿಷದ ಎಂಬ ಸೂತ್ರದಲ್ಲಿ ಪ್ರತಿಯೊಂದು ಪದಗಳಲ್ಲೂ ಅನ್ವಯವನ್ನು ಹೊಂದುತ್ತದೆ ಎಂಬುದು ಮತ್ತೊಂದು ಉತ್ತರ.

3. ಅಥವಾ ಹಿಂದಿನ ಸೂತ್ರದಿಂದಲೇ ಸಂಜ್ಞಾಯಾಂ ಎಂಬುದರಿಂದ ರೂಢ್ಯರ್ಥದಲ್ಲಿ ಕ್ಯಪ್ ಪ್ರತ್ಯಯ ಬರುತ್ತದೆ ಎಂದು ತಿಳಿಯುತ್ತಿದ್ದರೂ ಪುನಃ ಈ ಸೂತ್ರದಲ್ಲಿ ಸಂಜ್ಞಾಯಾಂ ಎಂಬುದರ ಗ್ರಹಣದಿಂದ ರೂಢ್ಯರ್ಥದಲ್ಲಿ ಮಾತ್ರ ಎಂಬ ನಿಯಮವನ್ನು ತಿಳಿಸಿದಂತಾಗುತ್ತದೆ.

## ಸುಧಾಪರಿಮಳಸಾರ

ಆಥರ್ವಣ ಮೊದಲಾದ ಉಪನಿಷತ್ತುಗಳಲ್ಲಿ ಬ್ರಹ್ಮಸೂತ್ರವನ್ನು ಪರವಿದ್ಯಾ ಎಂದು ಕರೆದಿದ್ದಾರೆ. ಬ್ರಹ್ಮಸೂತ್ರಗಳನ್ನು ಪರವಿದ್ಯೆಯೆಂದು ಮುಂದೆ ಪ್ರತಿಪಾದಿಸುತ್ತಾರೆ.

ಈ ಉಪನಿಷತ್ತಿನಲ್ಲಿರುವ ವಿದ್ಯಾಶಬ್ದಕ್ಕೆ ಯೋಗರೂಢಿಗಳಿಂದ ಜ್ಞಾನ ಹಾಗೂ ಜ್ಞಾನಸಾಧನ ಎಂಬ ಅರ್ಥಗಳು ಸಿದ್ಧಿಸುತ್ತವೆ ಎಂದು ಸುಧಾದಲ್ಲಿ ಹೇಳಲಾಗಿದೆ. ಆದರೆ ಯಥಾರ್ಥಜ್ಞಾನಸಾಧನೇ ವಿದ್ಯಾಶಬ್ದಸ್ಯ ಎಂದಷ್ಟೇ(ವಿದ್ಯಾಶಬ್ದವು ಯೋಗರೂಢಿಗಳಿಂದ ಜ್ಞಾನಸಾಧನವೆಂಬ ಅರ್ಥವುಳ್ಳದ್ದಾಗಿದೆ.) ಹೇಳಿದರೆ ಸಾಕಾಗುತ್ತಿತ್ತು. ಆದರೆ ಇಷ್ಟೇ ಪ್ರಯೋಗಿಸಿದ್ದರೆ ವಿದ್ಯಾಶಬ್ದಕ್ಕೆ ಯಥಾರ್ಥಜ್ಞಾನ ಎಂಬ ಅರ್ಥದಲ್ಲಿ ಯೋಗರೂಢಿಗಳು ಇಲ್ಲವೆಂಬ ಸಂಶಯ ಬರುತ್ತಿತ್ತು. ಅದನ್ನು ನಿವಾರಣೆ ಮಾಡುವುದಕ್ಕೋಸ್ಕರ ವಿದ್ಯಾಶಬ್ದಕ್ಕೆ 'ಜ್ಞಾನ' ಎಂಬ ಅರ್ಥದಲ್ಲಿ ಯೋಗ ಹಾಗೂ ರೂಢಿಗಳಿವೆ ಮತ್ತು 'ಜ್ಞಾನಸಾಧನ' ಎಂಬ ಅರ್ಥದಲ್ಲಿಯೂ ಯೋಗ ಮತ್ತು ರೂಢಿಗಳಿವೆ ಎಂದು ಹೇಳಿರುತ್ತಾರೆ.

ವಿದ್ಯಾಶಬ್ದವು ಯೋಗ-ರೂಢಿಗಳಿಂದ ಜ್ಞಾನವಾಚಕವಾದ ಹಾಗೆ ಜ್ಞಾನಸಾಧನವಾಚಕವಾಗಲಾರದು. ಏಕೆಂದರೆ 'ಸಂಜ್ಞಾಯಾಂ ಸಮಜ-ನಿಷದ-ನಿಪತ-ಮನ-ವಿದ-ಷುಞ್-ಶೀಙ್-ಭೃಞಿಣಃ'' ಎಂಬ ಸೂತ್ರದಿಂದ ವಿದಧಾತುವಿಗೆ ಕ್ಯಪ್ಎಂಬ ಪ್ರತ್ಯಯ ಬಂದು ವಿದ್ಯಾ ಎಂದು ರೂಪವಾಗುತ್ತದೆ. ಆದರೆ ಈ ಸೂತ್ರದಲ್ಲಿ ಕ್ಯಪ್ ಎಂಬುದನ್ನು 'ವ್ರಜಯಜೋಃ ಭಾವೇ ಕ್ಯಪ್'' ಎಂಬುದರಿಂದ ಅನುವೃತ್ತಿ ಮಾಡಬೇಕು. 'ವ್ರಜಯಜೋರ್ಭಾವೇ ಕ್ಯಪ್'' ಎಂಬ





ಸೂತ್ರವು 'ಭಾವ'' ಎಂಬ ಅರ್ಥದಲ್ಲಿ ಕ್ಯಪ್‌ಪ್ರತ್ಯಯವನ್ನು ವಿಧಿಸುತ್ತದೆ. ಹಿಂದಿನ ಸೂತ್ರದಿಂದ 'ಭಾವೇ' ಎಂದು ಅನುವೃತ್ತಿ ಮಾಡಲು ಬರುತ್ತಿದ್ದರೂ ಈ ಸೂತ್ರದಲ್ಲಿ ಪುನಃ 'ಭಾವೇ' ಎಂದು ಹೇಳಿದ್ದರಿಂದ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯ ಬರುತ್ತದೆ. ಹೊರತು ಕರ್ತೃಭಿನ್ನ-ಕಾರಕಾರ್ಥದಲ್ಲಿ ಬರುವುದಿಲ್ಲವೆಂದು ತಿಳಿಯುತ್ತದೆ. ಈ ರೀತಿಯಾದ 'ವ್ರಜಯಜೋಃ' ಎಂಬ ಸೂತ್ರದ 'ಕ್ಯಪ್' ಪ್ರತ್ಯಯವನ್ನೇ 'ಸಂಜ್ಞಾಯಾಂ...''ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಿದ್ದ-ರಿಂದ ಇಲ್ಲಿ ಹೇಳಲ್ಪಟ್ಟ ಧಾತುಗಳಿಗೂ ಭಾವಾರ್ಥದಲ್ಲಿ ಮಾತ್ರ ಕ್ಯಪ್‌ಪ್ರತ್ಯಯ ಬರುತ್ತದೆ-ಯೆಂದು ಸಿದ್ಧವಾಯಿತು. ಆದ್ದರಿಂದ ಜ್ಞಾನಸಾಧನ ಎಂಬ ಅರ್ಥವು ವಿದ್ಯಾಶಬ್ದದಿಂದ ತಿಳಿ-ಯಲು ಹೇಗೆ ಸಾಧ್ಯ?

ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು—'ಸಂಜ್ಞಾಯಾಂ ಸಮಜ...' ಎಂಬ ಸೂತ್ರದಲ್ಲಿ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರದಿಂದ 'ಭಾವೇ' ಎಂಬುದನ್ನು ಅನುವೃತ್ತಿ ಮಾಡಬಾರದು. ಕೇವಲ 'ಕ್ಯಪ್' ಎಂಬುದನ್ನಷ್ಟೇ ಅನುವೃತ್ತಿ ಮಾಡಬೇಕು. ಈ ರೀತಿಯಾಗಿ ವೃತ್ತಿ ಮೊದಲಾದ ಗ್ರಂಥಗಳಲ್ಲಿ ಹೇಳಿದ್ದಾರೆ. ಈಗ 'ವ್ರಜಯಜೋರ್ಭಾವೇ ಕ್ಯಪ್' ಎಂಬ ಸೂತ್ರಕ್ಕಿಂತಲೂ ಮೊದಲಿನ ಸೂತ್ರಗಳಲ್ಲಿ ಅಧಿಕೃತವಾದ 'ಭಾವೇ' ಎಂಬುದನ್ನು ಮತ್ತು 'ಅಕರ್ತರಿ ಚ ಕಾರಕೇ' ಎಂಬುದನ್ನು 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಅನುವೃತ್ತಿ ಮಾಡಬೇಕಾದ್ದರಿಂದ 'ಸಂಜ್ಞಾಯಾಂ ಸಮಜ...' ಸೂತ್ರಕ್ಕೂ ಅದು ಅನುವೃತ್ತಿ-ಯಾಗುವುದರಿಂದ ಸಂಜ್ಞಾಯಾಂ... ಎಂಬ ಸೂತ್ರದಿಂದ ಭಾವಾರ್ಥದಲ್ಲಿ ಮತ್ತು ಕರ್ತೃಭಿನ್ನ-ಕಾರಕದಲ್ಲಿ ಕ್ಯಪ್ ಬರುತ್ತದೆ ಎಂದು ಸಿದ್ಧವಾಯಿತು.

ಈ ರೀತಿಯಾಗಿ ವಿದ್‌ಧಾತುವಿಗೆ ಭಾವಾರ್ಥದಲ್ಲಿಯೂ ಕರಣಾರ್ಥದಲ್ಲಿಯೂ ಕ್ಯಪ್‌ಪ್ರತ್ಯಯ ಬಂದು ವಿದ್ಯಾ ಎಂಬುದಾಗಿ ನಿಷ್ಪನ್ನವಾಗುತ್ತದೆ. ಆದ್ದರಿಂದ ವಿದ್ಯಾಶಬ್ದಕ್ಕೆ ಯೋಗವೂ ಸಂಜ್ಞಾಯಾಂ ಎಂದು ಹೇಳಿದ್ದರಿಂದ ರೂಢಿಯೂ ಸಿದ್ಧವಾಯಿತು.

ಈ ರೀತಿಯಾದ ಸಮಾಧಾನವು ಟೀಕಾಕಾರರಿಗೆ ಸಮ್ಮತವಾದದ್ದೆಂದು ಹೇಗೆ ತಿಳಿಯುತ್ತದೆ? ಎಂದರೆ ಸುಧಾದಲ್ಲಿ 'ಸಂಜ್ಞಾಯಾಂ ಸಮಜನಿಷದೇತ್ಯತ್ರ ಸಂಜ್ಞಾಯಾಮಿತ್ಯನುವೃತ್ತೇಃ' ಎಂದು ಹೇಳಿದ್ದಾರೆ. ಸೂತ್ರದಲ್ಲಿಯೇ ಸಂಜ್ಞಾಯಾಂ ಎಂದು ಇರುವಾಗ ಪುನಃ ಅನುವೃತ್ತಿಯನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಆದ್ದರಿಂದ ಸಂಜ್ಞಾಯಾಂ ಎಂಬುದನ್ನು ಅನುವೃತ್ತಿ ಮಾಡ-ಬೇಕೆಂದು ಅರ್ಥೈಸದೇ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸಮಗ್ರಸೂತ್ರವನ್ನೇ ಅನುವೃತ್ತಿಮಾಡಬೇಕು ಎಂದು ಟೀಕಾವಾಕ್ಯಕ್ಕೆ ಅರ್ಥೈಸಬೇಕು. ಅಕರ್ತರಿ ಚ – ಎಂಬ ಸೂತ್ರ-





ವನ್ನು ಅನುವೃತ್ತಿ ಮಾಡುವಾಗ ಅದರ ಜೊತೆಗೆ ಇರುವ 'ಭಾವೇ' ಎಂಬುದೂ ಅನುವೃತ್ತವಾಗಿ ಬರುತ್ತದೆ ಎಂದು ಅಭಿಪ್ರಾಯ.

ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬ ಸಮಗ್ರ ಸೂತ್ರವೇ ಸಂಜ್ಞಾಯಾಂ ಸಮಜ.. ಎಂಬ ಸೂತ್ರದಲ್ಲಿ ಅನುವೃತ್ತವಾಗುವುದಾದರೆ ಈ ಸೂತ್ರದಲ್ಲಿ ಪುನಃ ಸಂಜ್ಞಾಯಾಂ ಎಂದು ಏಕೆ ಹೇಳಿದ್ದು? ಎಂದರೆ ಅಕರ್ತರಿ ಚ ಕಾರಕೇ ಸಂಜ್ಞಾಯಾಂ ಎಂಬಲ್ಲಿರುವ ಸಂಜ್ಞಾಯಾಂ ಎಂಬ ಪದವು ವ್ಯಾವರ್ತಕವಲ್ಲ. ಚಶಬ್ದವನ್ನು ಸಂಜ್ಞಾಯಾಂ ಚ ಎಂದು ಅನ್ವಯ ಮಾಡಿ ಸಂಜ್ಞಾಯಾಂ ಚ ಅಸಂಜ್ಞಾಯಾಂ ಚ ಎಂದು ವ್ಯಾಖ್ಯಾನಿಸಿದ್ದಾರೆ. ಆದ್ದರಿಂದ ಅಲ್ಲಿರುವ ಸಂಜ್ಞಾಯಾಂ ಎಂಬುದನ್ನು ಅನುವೃತ್ತಿ ಮಾಡುವುದೆಂದರೆ ಆ ಸೂತ್ರವನ್ನು ಅನುವೃತ್ತಿ ಮಾಡಬೇಕೆಂದಷ್ಟೇ ಅರ್ಥ. ಹಾಗಾದರೆ 'ಅಕರ್ತರಿ ಚ' ಎಂಬ ಸೂತ್ರದಲ್ಲಿರುವ ಸಂಜ್ಞಾಪದವು ಅವ್ಯಾವರ್ತಕವಾದ್ದರಿಂದ ವಿದ್ಯಾಶಬ್ದಕ್ಕೆ ಯಥಾರ್ಥಜ್ಞಾನಸಾಧನವೆಂಬ ಅರ್ಥದಲ್ಲಿ ರೂಢಿಯನ್ನು ತಿಳಿಸುವುದಿಲ್ಲ.

ಹೀಗೆ ಶಂಕಿಸಬಾರದು. ಏಕೆಂದರೆ 'ಸಮಜನಿಷದ' ಎಂಬ ಸೂತ್ರದಲ್ಲಿರುವ ಸಂಜ್ಞಾಪದವೇ ಅದರ ರೂಢಿಯನ್ನು ತಿಳಿಸುತ್ತದೆ. ಆದ್ದರಿಂದಲೇ 'ಸಮಜನಿಷದ' ಈ ಸೂತ್ರದಲ್ಲಿ ಪ್ರತಿಪದಕ್ಕೂ ಸಂಜ್ಞಾಯಾಂ ಎಂದು ಅನುಷಂಗ ಮಾಡಬೇಕು ಎಂದೂ ಅರ್ಥವನ್ನು ಹೇಳಿದ್ದಾರೆ.

ಕೆಲವು ಪುಸ್ತಕಗಳಲ್ಲಿ 'ಸಂಜ್ಞಾಯಾಂ ಸಮಜನಿಷದೇತ್ಯುಕ್ತೇಃ' ಎಂದೇ ಪಾಠವಿದೆ. ಈ ಪಕ್ಷದಲ್ಲಿ ಯಾವುದೇ ರೀತಿಯ ಕ್ಲೇಶವಿಲ್ಲ.

## ಪರಿಮಳವೈಶಿಷ್ಟ್ಯ

* ವಿದ್ಯಾಶಬ್ದಕ್ಕೆ ಜ್ಞಾನ ಹಾಗೂ ಜ್ಞಾನಸಾಧನ ಎಂಬುದಾಗಿ ಎರಡೂ ಅರ್ಥಗಳು ಯೋಗರೂಢಿಗಳಿಂದ ಸಿದ್ಧವಾಗುತ್ತವೆ. ಈ ವಿಷಯವನ್ನು ವ್ಯಾಕರಣದ ಆಧಾರದಲ್ಲಿ ಅತ್ಯದ್ಭುತವಾಗಿ ನಿರೂಪಣೆ ಮಾಡಿದ್ದಾರೆ. ವ್ಯಾಕರಣಶಾಸ್ತ್ರದಲ್ಲಿ ತಮ್ಮ ಅದ್ಭುತಪಾಂಡಿತ್ಯವನ್ನು ಪ್ರದರ್ಶಿಸಿದ್ದಾರೆ.

## 'ವ್ಯಾಖ್ಯಾಂ' 'ಅಪಿ ಚ' 'ಏವ' ಶಬ್ದಗಳಿಗೆ ವ್ಯಾಖ್ಯಾನ

**ಶ್ರೀಮನ್ನ್ಯಾಯಸುಧಾ– ತಥಾಪಿ ಅನ್ಯೈರೇವ ವ್ಯಾಖ್ಯಾತತ್ವಾತ್, ನ ಪುನರಿದಂ ವ್ಯಾಖ್ಯಾತವ್ಯಮ್ ಇತ್ಯತಃ – 'ವ್ಯಾಖ್ಯಾಮ್' ಇತ್ಯುಕ್ತಮ್ । ವಿಶಿಷ್ಟಾऽऽಖ್ಯಾ =**





**ವ್ಯಾಖ್ಯಾ । ಅನೇನ ಪರಕೃತಾನಾಮ್ ಅಪವ್ಯಾಖ್ಯಾನತಾಮ್ ಅಭಿಪ್ರೈತಿ । ತಥಾ ಚ ತತ್ರ ತತ್ರ ಪ್ರದರ್ಶಯಿಷ್ಯತಿ ।**

**ತಥಾಽಪಿ ಸ್ವಪ್ರಣೀತಭಾಷ್ಯೇಣೈವ ಕೃತವ್ಯುತ್ಪಾದನಮಿದಂ ಶಾಸ್ತ್ರಮ್ ಇತಿ, ಕಿಮನೇನ ವ್ಯುತ್ಪಾದನೇನ ಇತ್ಯತಃ 'ಅನ್ವಪಿ ಚ' ಇತ್ಯಾಹ । 'ಚ'ಶಬ್ದೇನ ಅನು-ವ್ಯಾಖ್ಯಾನೇ ಪ್ರಯೋಜನಸದ್ಭಾವಂ ಸಮುಚ್ಚಿನೋತಿ । ತಚ್ಚ ವಕ್ಷ್ಯತೇ ।**

**ಪ್ರಯೋಜನಸದ್ಭಾವೇ ಭಾಷ್ಯದಿಶಾ ಶಿಷ್ಯಾ ಏವ ಅನುವ್ಯಾಕರಿಷ್ಯಂತಿ, ಇತ್ಯತಃ – 'ಅಹಮೇವ' ಇತ್ಯಭಿಹಿತಮ್ । 'ಏವ'ಶಬ್ದೇನ ಅನ್ಯೇಷಾಮ್ ಅಸಾಮರ್ಥ್ಯಂ ಸೂಚಯತಿ ।**

ಬ್ರಹ್ಮಸೂತ್ರಗಳಿಗೆ ಅನೇಕ ಮಂದಿ ಈಗಾಗಲೇ ವ್ಯಾಖ್ಯಾನ ಮಾಡಿದ್ದಾರೆ. ಪುನಃ ಆಚಾರ್ಯರು ವ್ಯಾಖ್ಯಾನ ಮಾಡುವ ಅವಶ್ಯಕತೆ ಇಲ್ಲ. ಈ ಪ್ರಶ್ನೆಗೆ 'ವ್ಯಾಖ್ಯಾಂ' ಎಂಬು-ದರಿಂದ ಉತ್ತರಿಸಿದ್ದಾರೆ. ವಿಶಿಷ್ಟವಾದ ಆಖ್ಯಾನವೇ ವ್ಯಾಖ್ಯಾನ. ಹೀಗೆ ಹೇಳಿದ್ದರಿಂದ ಬೇರೆಯವರು ಮಾಡಿದ ವ್ಯಾಖ್ಯಾನವು ಅಪವ್ಯಾಖ್ಯಾನವೆಂದು ಅಭಿಪ್ರಾಯ ಪಡುತ್ತಾರೆ. ಬೇರೆಯವರದ್ದು ಅಪವ್ಯಾಖ್ಯಾನವೆಂದು ಅಲ್ಲಲ್ಲಿ ತೋರಿಸುತ್ತಾರೆ.

ಆದರೂ ಕೂಡ ಬ್ರಹ್ಮಸೂತ್ರಭಾಷ್ಯವೆಂಬ ತಮ್ಮ ಗ್ರಂಥದಿಂದಲೇ ಬ್ರಹ್ಮಸೂತ್ರಗಳನ್ನು ವ್ಯಾಖ್ಯಾನ ಮಾಡಿದ್ದಾಗಿದೆ. ಪುನಃ ಈ ಶಾಸ್ತ್ರದಿಂದ ಏನು ಪ್ರಯೋಜನ? ಎಂಬ ಪ್ರಶ್ನೆಗೆ ಉತ್ತರವನ್ನು ನೀಡಲು 'ಅನ್ವಪಿ ಚ' ಎಂಬುದಾಗಿ ಹೇಳಿರುತ್ತಾರೆ. ಇಲ್ಲಿರುವ ಚಶಬ್ದವು ಅನುವ್ಯಾಖ್ಯಾನದ ರಚನೆಯಲ್ಲಿ ಪ್ರಯೋಜನವಿದೆ ಎಂಬುದನ್ನು ಸಮುಚ್ಚಯ ಮಾಡು-ತ್ತಿದೆ. ಆ ಪ್ರಯೋಜನವನ್ನು ಮುಂದೆ ಹೇಳುತ್ತಾರೆ.

ಪ್ರಯೋಜನ ಇರುವುದಾದರೆ ಭಾಷ್ಯದಲ್ಲಿ ನೀಡಿದ ಮಾರ್ಗದರ್ಶನದಂತೆ ಶಿಷ್ಯರೇ ಅನುವ್ಯಾಖ್ಯಾನವನ್ನು ಮಾಡಬಹುದಲ್ಲವೇ? ಈ ಪ್ರಶ್ನೆಗೆ 'ಅಹಮೇವ' ಎಂಬುದಾಗಿ

ಉತ್ತರಿಸಿದ್ದಾರೆ. ಇಲ್ಲಿರುವ ಏವಶಬ್ದದಿಂದ ಬೇರೆಯವರಿಗೆ ಅನುವ್ಯಾಖ್ಯಾನವನ್ನು ರಚನೆ ಮಾಡುವ ಸಾಮರ್ಥ್ಯವಿಲ್ಲ ಎಂಬುದನ್ನು ಸೂಚನೆ ಮಾಡಿದ್ದಾರೆ.

## ಅನುವ್ಯಾಖ್ಯಾನದ ಪ್ರಯೋಜನ

ಪರಿಮಳ– ಅನುವ್ಯಾಖ್ಯಾನ ಇತಿ ॥ ಪುನರಪಿ ವಿವರಣಕರಣ ಇತ್ಯರ್ಥಃ । ವಕ್ಷ್ಯತ ಇತಿ ॥ 'ಸ್ವಯಂ ಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ' ಇತ್ಯತ್ರ ಇತಿ ಭಾವಃ ॥

'ಅನುವ್ಯಾಖ್ಯಾನೇ' ಎಂಬಲ್ಲಿ 'ಪುನಃ ವಿವರಣವನ್ನು ಮಾಡುವುದರಲ್ಲಿ' ಎಂಬರ್ಥವನ್ನು ತಿಳಿಯಬೇಕು. 'ವಕ್ಷ್ಯತೇ' ಎಂದು ಸುಧೆಯಲ್ಲಿ ಹೇಳಿದ್ದಾರೆ. 'ಸ್ವಯಂ ಕೃತಾಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ' ಎಂಬ ಅನುವ್ಯಾಖ್ಯಾನಶ್ಲೋಕದಲ್ಲಿ ಸ್ವತಃ ಆಚಾರ್ಯರೇ ಅನುವ್ಯಾಖ್ಯಾನದ ಪ್ರಯೋಜನವನ್ನು ಸ್ಪಷ್ಟಪಡಿಸುತ್ತಾರೆ.

## 'ವಕ್ಷ್ಯತೇ' ಎಂದರೆ ಎಲ್ಲಿ?

ವಾಕ್ಯಾರ್ಥಚಂದ್ರಿಕಾ– ತಚ್ಚ ವಕ್ಷ್ಯತೇ ॥ 'ಸ್ವಯಂಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ ಇತ್ಯತ್ರ' ಇತಿ ಶೇಷಃ।

'ತಚ್ಚ ವಕ್ಷ್ಯತೇ' ಎಂದರೆ 'ಸ್ವಯಂ ಕೃತಾಽಪಿ ತದ್ವ್ಯಾಖ್ಯಾ' ಎಂಬಲ್ಲಿ ಪ್ರತಿಪಾದನೆ ಮಾಡುತ್ತೇವೆ ಎಂದರ್ಥ.

## ರಸಘಟ್ಟ
## ಬೇರೆಯವರದ್ದು ಅಪವ್ಯಾಖ್ಯಾನ

ಕಾಶಿಕಾ – 'ವ್ಯಾಖ್ಯಾಮ್' ಇತ್ಯತ್ರ ವಿಶಬ್ದಪ್ರಯೋಜನಮಾಹ – ತಥಾಽಪಿ ಇತಿ ॥ 'ವ್ಯಾಖ್ಯಾತತ್ವಾತ್' ಇತ್ಯಾದೌ ವಿಶಬ್ದೇನ ಸ್ಪಷ್ಟಾರ್ಥತ್ವಾದಿಕಂ ವಿವಕ್ಷಿತಮ್ ।

ನ ಚ ಅನ್ಯಕೃತವ್ಯಾಖ್ಯಾನಾಮ್ ಅನೇಕತ್ವಾತ್ ಏಕತ್ರಾನಾಶ್ವಾಸ ಇತಿ ವಾಚ್ಯಮ್ । ಏಕತರಪರಿಗ್ರಹೇಣೈವ ತದುಪಪತ್ತೇರಿತಿ ಶಂಕಾಶಯಃ । ವಿಶಿಷ್ಟಾಃ ಯಥಾರ್ಥಾ । ಅನೇನೇತಿ ॥





'ವ್ಯಾಖ್ಯಾನಸ್ಯ ಯಥಾರ್ಥವಚನೇನ' ಇತ್ಯರ್ಥಃ । ವಿರುದ್ಧಾನಾಮ್ ಅನೇಕಯಾಥಾರ್ಥ್ಯಸ್ಯಾ-ಪರಾಯಾಥಾರ್ಥ್ಯಂ ವಿನಾಽನುಪಪತ್ತೇರಿತಿ ಭಾವಃ । ತತ್ಕಥಮ್? ಇತ್ಯತ ಆಹ – ತಥಾ ಚೇತಿ ॥ ತತ್ರ ತತ್ರ = ತತ್ತತ್ ಸೂತ್ರವ್ಯಾಖ್ಯಾವಸರೇ ।

'ವ್ಯಾಖ್ಯಾಂ' ಎಂಬಲ್ಲಿ ವಿಶಬ್ದದ ಪ್ರಯೋಜನವನ್ನು 'ತಥಾಽಪಿ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ವ್ಯಾಖ್ಯಾತತ್ವಾತ್ ಎಂಬಲ್ಲಿ ವಿಶಬ್ದಕ್ಕೆ ಸ್ಪಷ್ಟಾರ್ಥತ್ವವು ವಿವಕ್ಷಿತವಾಗಿದೆ. ವಿಶಿಷ್ಟವಾದ ಆಖ್ಯಾನವೇ ವ್ಯಾಖ್ಯಾನವೆಂದು ಕರೆಸಿಕೊಳ್ಳುವುದರಿಂದ ಅನುವ್ಯಾಖ್ಯಾನದಲ್ಲಿ ಅಸಾಧಾರಣವಾದ ವೈಶಿಷ್ಟ್ಯವಿದೆ ಎಂದು ತಿಳಿಯಬೇಕು.

ಬೇರೆಯವರು ಮಾಡಿದ ವ್ಯಾಖ್ಯಾನ ಇರುವಾಗ ನಿಮ್ಮ ವ್ಯಾಖ್ಯಾನದಲ್ಲಿಯೇ ವಿಶ್ವಾಸ ನಮಗೆ ಹೇಗೆ ಬರುತ್ತದೆ? ಎಂದು ಪ್ರಶ್ನಿಸಬಾರದು. ನಮ್ಮ ಶಾಸ್ತ್ರದಲ್ಲಿ ವೈಶಿಷ್ಟ್ಯವಿರುವುದರಿಂದಲೇ ವಿಶ್ವಾಸ ಮೂಡುತ್ತದೆ. ಉಳಿದ ಅಪವ್ಯಾಖ್ಯಾನದಲ್ಲಿ ವಿಶ್ವಾಸ ಮೂಡುವುದಿಲ್ಲ ಎಂಬ ಉತ್ತರವನ್ನು ತಿಳಿಸುವುದ-ಕ್ಕಾಗಿಯೇ ಇಲ್ಲಿ ಆಶಂಕೆಯನ್ನು ಮಾಡಿರುತ್ತಾರೆ. ವೈಶಿಷ್ಟ್ಯವೆಂದರೆ ಯಥಾರ್ಥವಾಗಿದೆ ಎಂದರ್ಥ. 'ಅನೇನ' ಎಂಬುದಕ್ಕೆ ವ್ಯಾಖ್ಯಾನವು ಯಥಾರ್ಥವಾಗಿರುವುದರಿಂದ ಎಂದರ್ಥ. ವಿರುದ್ಧವಾದ ಅನೇಕ ವ್ಯಾಖ್ಯಾನಗಳಲ್ಲಿ ಒಂದು ಮಾತ್ರ ಯಥಾರ್ಥವಾಗುತ್ತದೆ. ಉಳಿದವುಗಳೆಲ್ಲವೂ ಅಯಥಾರ್ಥವಾಗುತ್ತದೆ. ಉಳಿದವುಗಳಲ್ಲಿ ಅಯಥಾರ್ಥವು ಪ್ರಾಪ್ತವಾಗದೇ ಈ ಶಾಸ್ತ್ರದಲ್ಲಿ ಯಾಥಾರ್ಥ್ಯವು ಕೂಡುವುದಿಲ್ಲ. ಆ ಉಳಿದ ವ್ಯಾಖ್ಯಾನದಲ್ಲಿ ಯಥಾರ್ಥವಾದ ವ್ಯಾಖ್ಯಾನವಿರುವುದಿಲ್ಲ ಎಂಬುದನ್ನು 'ತಥಾ ಚ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. 'ತತ್ರ ತತ್ರ' ಎಂಬ ಪದಕ್ಕೆ ಆಯಾಯ ಸೂತ್ರ ವ್ಯಾಖ್ಯಾನ ಮಾಡುವ ಸಂದರ್ಭ-ದಲ್ಲಿ ಎಂದರ್ಥ.

## ಪ್ರತಿಜ್ಞೆಯ ಅಭಿಪ್ರಾಯ

ಕಾಶೀ – ಕಿಮನೇನೇತಿ ॥ 'ವ್ಯಾಖ್ಯಾಂ ಕರೋಮಿ' ಇತಿ ಪ್ರತಿಜ್ಞಾನೇನ ಕಿಂ ಸಾಧ್ಯಮ್? ಭಾಷ್ಯಮನುಭಾಷ್ಯಂ ವಾ । ನಾದ್ಯಃ । ಸಿದ್ಧತ್ವಾತ್ । ನಾಂತ್ಯಃ । ನಿಷ್ಪ್ರಯೋಜನತ್ವಾದಿತಿ ಭಾವಃ । ಏತೇನ ವ್ಯಾಖ್ಯಾಶಬ್ದಸ್ಯ ಪ್ರಕೃತತ್ವಾತ್ ಅನಯಾ ಇತಿ ವಕ್ತುಮುಚಿತಮ್ । ವ್ಯಾಖ್ಯಾಪ್ರಯೋಜನಮಾತ್ರ-ಜಿಜ್ಞಾಸಾಯಾಮ್ 'ಅನ್ವಪಿ' ಇತಿ ಪ್ರತೀಕೋಪಾದಾನಂ ಚಾನುಚಿತಮ್ ಇತ್ಯಪಾಸ್ತಮ್ । 'ಅನ್ವಪಿ' ಇತ್ಯನೇನ ಆದ್ಯಸ್ಯಾನಂಗೀಕಾರೇಣ ಪರಿಹಾರೇಽಪಿ ಅಂತ್ಯಸ್ಯ ಕೇನ ಪರಿಹಾರಃ? ಇತ್ಯತ ಆಹ – ಚಶಬ್ದೇನೇತಿ ॥ ಕಿಂ ತತ್ಪ್ರಯೋಜನಮ್, ಅತ ಆಹ – ತಚ್ಚೇತಿ ॥ 'ವಕ್ಷ್ಯತೇ' ಇತ್ಯಸ್ಯ 'ಸ್ಪಷ್ಟಾರ್ಥತಃ'





ಇತ್ಯನೇನೇತ್ಯಾದಿಃ । ಶಾಸ್ತ್ರಪ್ರಭವತ್ವಾದಿವಿವರಣೋತ್ತರಂ ತದ್ವಿವರಣಸ್ಯ ಕ್ರಮಪ್ರಾಪ್ತತ್ವಾತ್ ಇತಿ ಭಾವಃ ॥

'ವ್ಯಾಖ್ಯಾಂ ಕರೋಮಿ' ಎಂಬ ಪ್ರತಿಜ್ಞೆಯಿಂದ ಏನು ಸಾಧಿಸಿದಂತಾಯಿತು? ಭಾಷ್ಯವೋ ಅನು-ವ್ಯಾಖ್ಯಾನವೋ? ಭಾಷ್ಯವು ಈಗಾಗಲೇ ಸಿದ್ಧವಾಗಿದೆ. ಅನುವ್ಯಾಖ್ಯಾನಕ್ಕೆ ಯಾವುದೇ ಪ್ರಯೋಜನ-ವಿಲ್ಲ? ಎಂಬುದು 'ಕಿಮನೇನ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ. ಹೀಗೆ ಹೇಳಿದ್ದರಿಂದ 'ವ್ಯಾಖ್ಯಾ' ಎಂಬ ಶಬ್ದವೇ ಪೂರ್ವಪ್ರಕೃತವಾಗಿರುವುದರಿಂದ 'ಅನಯಾ' ಎಂಬುದಾಗಿ ಹೇಳಬೇಕಿತ್ತು. 'ಅನೇನ' ಎಂದು ಹೇಳಬಾರದಿತ್ತು. ಮತ್ತು ವ್ಯಾಖ್ಯಾಪ್ರಯೋಜನದ ಬಗ್ಗೆ ಮಾತ್ರ ಜಿಜ್ಞಾಸೆಯು ಉಂಟಾಗಿರು-ವುದರಿಂದ 'ಅನ್ವಪಿ' ಎಂಬ ಪ್ರತೀಕೋಪಾದಾನವೂ ಕೂಡ ಅನುಚಿತವಾಗಿದೆ. ಈ ಆಶಂಕೆಯನ್ನು ಪರಿಹರಿಸಿದಂತಾಯಿತು. 'ಅನ್ವಪಿ' ಎಂಬುದರಿಂದ ಮೊದಲನೆಯ ಪಕ್ಷವನ್ನು ಅಂಗೀಕಾರ ಮಾಡಿರು-ವುದಿಲ್ಲ ಎಂಬ ಪರಿಹಾರವನ್ನು ಹೇಳಿದಂತಾಯಿತು. ಆದರೆ ಅನುವ್ಯಾಖ್ಯಾನವು ನಿಷ್ಪ್ರಯೋಜನವೆಂಬ ಕೊನೆಯ ಪಕ್ಷವನ್ನು ಯಾವುದರಿಂದ ಪರಿಹರಿಸಿದಂತಾಯಿತು ಎಂಬ ಪ್ರಶ್ನೆಗೆ 'ಚಶಬ್ದೇನ' ಎಂಬುದರಿಂದ ಉತ್ತರಿಸಿದ್ದಾರೆ. ಅದೇನು ಪ್ರಯೋಜನ? ಎಂಬುದಕ್ಕೆ 'ತಚ್ಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ವಕ್ಷ್ಯತೇ' ಎಂದರೆ ಕ್ರಿಯತೇ ಸ್ಪಷ್ಟಾರ್ಥತಃ ಇತ್ಯಾದಿ ವಾಕ್ಯಸಂದರ್ಭದಲ್ಲಿ ಎಂದರ್ಥ. ಶಾಸ್ತ್ರಪ್ರಭವತ್ವದ ಬಗ್ಗೆ ವಿವರಣೆ ಮಾಡಿದಮೇಲೆ ಅನುವ್ಯಾಖ್ಯಾನದ ಸಾರ್ಥಕ್ಯವನ್ನು ಸಮರ್ಥಿಸುವುದು ಕ್ರಮಪ್ರಾಪ್ತ-ವಾಗುತ್ತದೆ. ಆದ್ದರಿಂದ ಇಲ್ಲಿಯೇ ಅದನ್ನು ಹೇಳಿರುವುದಿಲ್ಲ ಎಂದು ತಿಳಿಯಬೇಕು.

## ಸುಧಾಪರಿಮಳಸಾರ

ಬ್ರಹ್ಮಸೂತ್ರಗಳಿಗೆ ಅನೇಕ ಆಚಾರ್ಯರು ಈಗಾಗಲೇ ವ್ಯಾಖ್ಯಾನ ಮಾಡಿದ್ದಾರೆ. ಅದೇ ಬ್ರಹ್ಮ-ಸೂತ್ರಗಳಿಗೆ ಆನಂದತೀರ್ಥರು ಪುನಃ ಏಕೆ ವ್ಯಾಖ್ಯಾನ ಮಾಡಲು ಹೊರಟಿದ್ದಾರೆ? ಈ ಪ್ರಶ್ನೆಗೆ ಉತ್ತರವನ್ನು 'ವ್ಯಾಖ್ಯಾಂ' ಎಂದು ನೀಡಿದ್ದಾರೆ. ವಿಶಿಷ್ಟವಾದ ಆಖ್ಯಾನವೇ ವ್ಯಾಖ್ಯಾನ. ಸೂತ್ರ-ಕಾರರ ಭಾವಕ್ಕೆ ಅನುಗುಣವಾಗಿ ಉತ್ಕೃಷ್ಟವಾದ ವಿವರಣೆಯನ್ನು ಬ್ರಹ್ಮಸೂತ್ರಗಳಿಗೆ ಆನಂದ-ತೀರ್ಥರು ನೀಡಿದರೆ, ಉಳಿದ ಆಚಾರ್ಯರು ಸೂತ್ರಕಾರರ ಭಾವಕ್ಕೆ ವಿರುದ್ಧವಾದದ್ದನ್ನೇ ವ್ಯಾಖ್ಯಾನದ ಮೂಲಕ ಪ್ರಕಟಪಡಿಸಿದ್ದಾರೆ. ಆದ್ದರಿಂದಲೇ ಅವು ವ್ಯಾಖ್ಯಾನಗಳಲ್ಲ, ಅಪ-ವ್ಯಾಖ್ಯಾನಗಳು. ಬೇರೆ ಆಚಾರ್ಯರ ಅಪವ್ಯಾಖ್ಯಾನವನ್ನು ಆನಂದತೀರ್ಥರು ಅಲ್ಲಲ್ಲಿ ಮುಂದೆ ತೋರಿಸುತ್ತಾರೆ.

ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದು ಆನಂದತೀರ್ಥರು ಈಗಾಗಲೇ ವ್ಯಾಖ್ಯಾನ ಮಾಡಿದ್ದಾರೆ. ಪುನಃ ವ್ಯಾಖ್ಯಾನ ಮಾಡಲು ಕಾರಣವೇನೆಂಬ ಪ್ರಶ್ನೆಗೆ ಉತ್ತರವನ್ನು 'ಅನ್ವಪಿ ಚ' ಎಂದು ನೀಡಿದ್ದಾರೆ. 'ಚ'ಶಬ್ದವು ಈ ಅನುವ್ಯಾಖ್ಯಾನಕ್ಕೂ ಪ್ರಯೋಜನವಿದೆ ಎಂಬುದಕ್ಕೆ ಸಮುಚ್ಚಾಯಕವಾಗಿದೆ. ಆ ಪ್ರಯೋಜನವನ್ನು 'ಸ್ವಯಂಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟಾರ್ಥತಃ' ಎಂದು ಮುಂದೆ ಆನಂದತೀರ್ಥರೇ ತಿಳಿಸುತ್ತಾರೆ.

ಅನುವ್ಯಾಖ್ಯಾನಕ್ಕೆ ಪ್ರಯೋಜನವಿದ್ದರೂ ಆನಂದತೀರ್ಥರೇ ಏಕೆ ಅದನ್ನು ರಚಿಸಬೇಕು? ಆನಂದತೀರ್ಥರ ಭಾಷ್ಯವನ್ನು ಗಮನವಿಟ್ಟುಕೊಂಡು ಶಿಷ್ಯರೂ ರಚಿಸಬಹುದಲ್ಲವೇ? ಈ ಪ್ರಶ್ನೆಗೆ ಉತ್ತರವಾಗಿ 'ಅಹಂ ಏವ' ಎಂದು ಹೇಳಿದ್ದಾರೆ. 'ಏವ'ಶಬ್ದವು ವ್ಯಾಖ್ಯಾನದಲ್ಲಿ ಬೇರೆಯವರ ಅಸಾಮರ್ಥ್ಯವನ್ನು ತಿಳಿಸುತ್ತದೆ. ಅನುವ್ಯಾಖ್ಯಾನವನ್ನು ರಚಿಸುವ ಸಾಮರ್ಥ್ಯವಿರುವುದು ಆನಂದತೀರ್ಥರಿಗೆ ಮಾತ್ರ ಬೇರೆಯವರಿಗಿಲ್ಲ. ಆದ್ದರಿಂದ ಅದರ ರಚನೆಗೆ ಆನಂದತೀರ್ಥರೇ ತೊಡಗಿದ್ದಾರೆ.

**ಇಲ್ಲಿಗೆ ಅನುವ್ಯಾಖ್ಯಾನದ ಎರಡನೆಯ ಪದ್ಯದ ವ್ಯಾಖ್ಯಾನವು ಮುಗಿಯಿತು**

* * * * * *





## ಅನುವ್ಯಾಖ್ಯಾನದ ಮೂರನೆಯ ಶ್ಲೋಕಕ್ಕೆ ಪೀಠಿಕೆ

**ಶ್ರೀಮನ್ನ್ಯಾಯಸುಧಾ– ಯದುಕ್ತಮ್ 'ನಾರಾಯಣೋಽಸ್ಯ ಶಾಸ್ತ್ರಸ್ಯ ಪ್ರಭವಃ' ಇತಿ ತದಯುಕ್ತಮ್ । ವ್ಯಾಸೋಪಜ್ಞತಾಪ್ರಸಿದ್ಧಿವಿರೋಧಾತ್ । ನ ಚ ನಾರಾಯಣ ಏವ ವ್ಯಾಸಃ । ಜನನವಿರೋಧಾತ್ । ಕೃತಕೃತ್ಯಸ್ಯ ಪ್ರಯೋಜನಾಭಾವೇನ ಶಾಸ್ತ್ರಪ್ರಣಯನಾಸಂಭವಾಚ್ಚ । ಯಚ್ಚ ಅಸ್ಯ ಶ್ರೌತ್ಯಾ ಪರವಿದ್ಯಾಖ್ಯಯಾ ಸರ್ವೋತ್ತಮಪ್ರಾಮಾಣ್ಯಸಿದ್ಧಿರಿತಿ ತದಪಿ ಅಯುಕ್ತಮ್ । ಪರಶಬ್ದಸ್ಯಾನೇಕಾರ್ಥತ್ವೇನ ವಿದ್ಯಾಶಬ್ದಸ್ಯ ಚಾರ್ಥವಿವಕ್ಷಾವಿರಹಿಣ್ಯಾಪಿ ಮಂತ್ರೇ ಪ್ರಯೋಗದರ್ಶನೇನ ಪರವಿದ್ಯಾಖ್ಯಾಯಾಃ ಸರ್ವೋತ್ತಮಪ್ರಾಮಾಣ್ಯಾನಿಶ್ಚಾಯಕತ್ವಾತ್ । ಕಿಂಚೇಯಂ ಪರವಿದ್ಯಾಖ್ಯೈತದ್ ವಿಷಯಾ ಇತ್ಯತ್ರಾಪಿ ನ ನಿಯಾಮಕಮಸ್ತೀತ್ಯತ ಆಹ – ಪ್ರಾದುರ್ಭೂತ ಇತಿ ॥**

ನಾರಾಯಣನು ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಿರ್ಮಾಣ ಮಾಡಿದ್ದಾನೆ ಎಂದು ಈ ಹಿಂದೆ ಹೇಳಲಾಯಿತು. ಇದು ತಪ್ಪು. ಏಕೆಂದರೆ ವೇದವ್ಯಾಸದೇವರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾರೆಂಬ ಪ್ರಸಿದ್ಧಿಗೆ ವಿರೋಧ ಬರುತ್ತದೆ. ಇನ್ನು ನಾರಾಯಣನೇ ವೇದವ್ಯಾಸದೇವರೆಂದು ಹೇಳಲಾಗದು. ಏಕೆಂದರೆ ವೇದವ್ಯಾಸದೇವರಿಗೆ ಜನನವು ನಾರಾಯಣನೇ ವ್ಯಾಸರೆಂಬುದನ್ನು ವಿರೋಧಿಸುತ್ತಿದೆ. ಮತ್ತು ಕೃತಕೃತ್ಯನಾದ ನಾರಾಯಣನಿಗೆ ಯಾವುದೇ ಪ್ರಯೋಜನಗಳು ಇಲ್ಲವಾದ್ದರಿಂದ ಶಾಸ್ತ್ರವನ್ನು ರಚನೆ ಮಾಡುವ ಕಾರ್ಯವು ಕೂಡುವುದಿಲ್ಲ.

ಶ್ರುತಿಯಲ್ಲಿ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾ ಎಂದು ಕರೆಯಲಾಗಿದೆ. ಇದರಿಂದ ಈ ಶಾಸ್ತ್ರವು ಸರ್ವೋತ್ತಮಪ್ರಮಾಣವೆಂದು ಸಿದ್ಧವಾಗುತ್ತದೆ ಎಂಬುದಾಗಿ ಈ ಹಿಂದೆ ಹೇಳಲಾಯಿತು. ಇದು ಕೂಡ ತಪ್ಪು. ಏಕೆಂದರೆ ಪರಶಬ್ದಕ್ಕೆ ಅನೇಕಾರ್ಥಗಳಿವೆ. ವಿದ್ಯಾ ಶಬ್ದಕ್ಕೂ ಕೂಡ ಬೇರೆ ಅರ್ಥವಿದೆ. ಅರ್ಥವಿವಕ್ಷೆಯಿಲ್ಲದ ಮಂತ್ರಗಳಲ್ಲೂ ಕೂಡ

ವಿದ್ಯಾ ಎಂಬ ಶಬ್ದಪ್ರಯೋಗ ಮಾಡುವುದು ಕಂಡಿದೆ. ಹಾಗಾಗಿ ಪರವಿದ್ಯಾ ಎಂಬ ಹೆಸರಿನಿಂದ ಈ ಶಾಸ್ತ್ರಕ್ಕೆ ಸರ್ವೋತ್ತಮಪ್ರಾಮಾಣ್ಯವನ್ನು ನಿಶ್ಚಯಿಸಲು ಸಾಧ್ಯವಾಗುವುದಿಲ್ಲ.

ಮತ್ತು ಪರವಿದ್ಯಾ ಎಂಬ ಹೆಸರು ಬ್ರಹ್ಮಮೀಮಾಂಸಾಶಾಸ್ತ್ರವನ್ನೇ ವಿಷಯೀಕರಿಸುತ್ತದೆ ಎನ್ನಲು ಯಾವುದೇ ನಿಯಾಮಕಪ್ರಮಾಣವು ಇರುವುದಿಲ್ಲ. ಈ ಮೂರು ಆಕ್ಷೇಪಗಳಿಗೆ ಉತ್ತರವನ್ನು ನೀಡಲು 'ಪ್ರಾದುರ್ಭೂತಃ' ಎಂಬ ಅನುವ್ಯಾಖ್ಯಾನದ ಮೂರನೇ ಶ್ಲೋಕವು ಹೊರಟಿದೆ.

## 'ವ್ಯಾಸೋಪಜ್ಞತಾ' ಎಂಬುದರ ವ್ಯಾಖ್ಯಾನ

**ಪರಿಮಳ– ಉತ್ತರಶ್ಲೋಕಮವ್ಯೆಯಥ್ರ್ಯಾಯ ಅವತಾರಯತಿ – ಯದುಕ್ತಮ್ ಇತಿ ॥ 'ಹರಿರ್ವ್ಯಾಸಃ' ಇತ್ಯಸ್ಯ ವ್ಯಾವರ್ತ್ಯಮ್ – ನಾರಾಯಣ ಇತ್ಯಾದಿ ॥ ವ್ಯಾಸೋಪಜ್ಞೇತಿ ॥ ವ್ಯಾಸೇನ ಉಪಜ್ಞಾಯತೇ ಪ್ರಥಮಂ ಜ್ಞಾಯತ ಇತ್ಯರ್ಥಃ । 'ಆತಶ್ಚೋಪಸರ್ಗೇ' ಇತಿ ಪ್ರಾಪ್ತಾಙ್‌ಪ್ರತ್ಯಯಾಂತೋಪಜ್ಞಾಶಬ್ದಸ್ಯ 'ಉಪಜ್ಞೋಪಕ್ರಮಂ ತದಾದ್ಯಾಚಿಖ್ಯಾಸಾಯಾಮ್' ಇತಿ ಸೂತ್ರೇಣ ನಪುಂಸಕಲಿಂಗತ್ವೋಕ್ತೇಃ । 'ವ್ಯಾಸಪ್ರಣೇತಾ' ಇತಿ ಯಾವತ್ ।**

'ಪ್ರಾದುರ್ಭೂತೋ ಹರಿಃ' ಎಂಬ ಶ್ಲೋಕಕ್ಕೆ ಸಾರ್ಥಕ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ 'ಯದುಕ್ತಂ' ಇತ್ಯಾದಿಯಾಗಿ ಗ್ರಂಥದಿಂದ ಅವತಾರಿಕೆ ನೀಡುತ್ತಿದ್ದಾರೆ. 'ಹರಿರ್ವ್ಯಾಸಃ' ಶ್ರೀಹರಿಯೇ ವ್ಯಾಸನಾಗಿದ್ದಾನೆ ಎಂಬ ಮಾತಿನಿಂದ ಯಾವ ಆಕ್ಷೇಪವು ಪರಿಹಾರವಾಗುತ್ತದೋ ಅದನ್ನು 'ನಾರಾಯಣಃ' ಎಂಬ ವಾಕ್ಯದಿಂದ ಉಪಸ್ಥಾಪನೆ ಮಾಡಿದ್ದಾರೆ. 'ವ್ಯಾಸೋಪಜ್ಞತಾ' ಎಂಬ ಪದಕ್ಕೆ ವೇದವ್ಯಾಸದೇವರಿಂದ ಪ್ರಥಮವಾಗಿ ತಿಳಿಯಲ್ಪಟ್ಟದ್ದು ಎಂದರ್ಥ. 'ಆತಶ್ಚೋಪಸರ್ಗೇ' ಎಂಬ ಸೂತ್ರದಿಂದ ಅಙ್‌ಪ್ರತ್ಯಯ ಪ್ರಾಪ್ತವಾಗಿ ಉಪಜ್ಞ ಎಂಬ ಶಬ್ದವು ನಿಷ್ಪನ್ನವಾಗಿದೆ. ಉಪಜ್ಞ ಶಬ್ದಕ್ಕೆ ಪ್ರಥಮದಲ್ಲಿ ತಿಳಿಸಲ್ಪಡುವ ಇಚ್ಛೆಯಿದ್ದಾಗ ನಪುಂಸಕಲಿಂಗವು ಬರುತ್ತದೆ. ಆದ್ದರಿಂದ ವ್ಯಾಸೋಪಜ್ಞಂ ಎಂಬ ಶಬ್ದವು ನಿಷ್ಪನ್ನವಾಗಿದೆ. ವೇದವ್ಯಾಸದೇವರಿಂದ ಪ್ರಣೀತವಾಗಿದೆ ಎಂಬುದು ತಾತ್ಪರ್ಯಾರ್ಥ.





## ಮೂರನೆಯ ಶ್ಲೋಕದಿಂದ ಪರಿಹಾರವಾಗುವ ಆಕ್ಷೇಪಗಳು

**ಪರಿಮಳ–** 'ಪ್ರಾದುರ್ಭೂತ'ಪದವ್ಯಾವರ್ತ್ಯಂ – ನ ಚೇತ್ಯಾದಿ ॥ 'ಅರ್ಥಿತಃ' ಇತ್ಯೇತದ್ ವ್ಯಾವರ್ತ್ಯಮ್ – ಕೃತಕೃತ್ಯಸ್ಯೇತಿ ॥ 'ಅನುತ್ತಮ'ಪದವ್ಯಾವರ್ತ್ಯಂ – ಯಚ್ಚೇತ್ಯಾದಿ ॥ ಶ್ರೌತಯಾ ಇತಿ ॥ ಶ್ರೌತ್ಯೇತಿ ಪಾಠಃ ಸಾಧುಃ । 'ಶ್ರೌತಯಾ' ಇತಿ ಪಾಠೇ ತು 'ಶ್ರುತಿಸ್ಥ' ಇತ್ಯರ್ಥೇ ಶ್ರುತ್ಯುಕ್ತೇತ್ಯರ್ಥೇ ವಾ ತದ್ಧಿತಾ ಇತಿ ಪ್ರಾಪ್ತಣಪ್ರತ್ಯಯೇ ಟಾಪಿ ಶ್ರೌತೇತಿ ರೂಪಮ್ । 'ಶಾಸ್ತ್ರ'ಪದವ್ಯಾವರ್ತ್ಯಂ – ವಿದ್ಯಾಶಬ್ದಸ್ಯ ಚೇತಿ ॥ ಕಿಂ ಚೇತಿ ॥ ಮುಕ್ತಿಹೇತುಜ್ಞಾನಪರತ್ವೇನ ಉಪಪತ್ತೇರಿತಿ ಭಾವಃ ।

ಪ್ರಾದುರ್ಭೂತಪದದಿಂದ ಯಾವ ಆಕ್ಷೇಪವು ಪರಿಹಾರವಾಗುತ್ತದೋ ಅದನ್ನು ನಚ ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. 'ಅರ್ಥಿತಃ' ಎಂಬ ಪದದಿಂದ ಪರಿಹಾರವಾಗುವ ಆಕ್ಷೇಪವನ್ನು 'ಕೃತಕೃತ್ಯಸ್ಯ' ಎಂಬ ಪದದಿಂದ ತಿಳಿಸುತ್ತಿದ್ದಾರೆ. ಅನುತ್ತಮ ಎಂಬ ಪದದಿಂದ ವ್ಯಾವರ್ತ್ಯವಾದ ಆಕ್ಷೇಪವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ತೋರಿಸಿದ್ದಾರೆ.

'ಶ್ರೌತ್ಯಾ' ಎಂಬುದಾಗಿ ಟೀಕೆಯಲ್ಲಿದೆ. ಈ ಪಾಠವೇ ಸಾಧುವಾದದ್ದು. 'ಶ್ರೌತಯಾ' ಎಂಬ ಪಾಠವನ್ನು ಅಂಗೀಕರಿಸುವುದಾದರೆ ಶ್ರುತಿಸ್ಥವಾದ ಅಥವಾ ಶ್ರುತ್ಯುಕ್ತವಾದ ಎಂಬರ್ಥದಲ್ಲಿಯೇ ತದ್ಧಿತಾಃ ಎಂಬ ಸೂತ್ರದಿಂದ ತದ್ಧಿತಪ್ರತ್ಯಯವು ಪ್ರಾಪ್ತವಾಗುತ್ತದೆ. ಅದರ ಮುಂದೆ ಸ್ತ್ರೀಲಿಂಗದ ಟಾಪ್‌ಪ್ರತ್ಯಯವು ಬಂದರೆ ಶ್ರೌತಯಾ ಎಂಬ ರೂಪವು ನಿಷ್ಪನ್ನವಾಗುತ್ತದೆ.

ಶಾಸ್ತ್ರಪದದಿಂದ ವ್ಯಾವರ್ತ್ಯವಾಗುವ ಪೂರ್ವಪಕ್ಷವನ್ನು 'ವಿದ್ಯಾಶಬ್ದಸ್ಯ ಚ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಕಿಂಚ ॥ (ಮುಕ್ತಿಹೇತುಜ್ಞಾನಪರತ್ವವು) ಮುಕ್ತಿಕಾರಣವಾದ ಜ್ಞಾನದಲ್ಲಿ ಪರವಿದ್ಯಾಶಬ್ದವನ್ನು ಪ್ರಯೋಗಿಸಬಹುದು ಎಂಬುದು 'ಕಿಂಚ' ಎಂಬ ವಾಕ್ಯದ ಅಭಿಪ್ರಾಯ.





# 'ವ್ಯಾಸೋಪಜ್ಞತಾ' ಎಂಬುದಕ್ಕೆ ಎರಡು ವಿಗ್ರಹ

ಗುರ್ವರ್ಥದೀಪಿಕಾ – ವ್ಯಾಸೋಪಜ್ಞತಾ – ಉಪಪನ್ನಾ ಅರ್ಥಾಃ ಜ್ಞಾಪ್ಯಂತೇ ಅನೇನ ಇತ್ಯುಪಜ್ಞಃ, ಆದೌ ವಕ್ತಾ ಕರ್ತಾ ಇತ್ಯರ್ಥಃ। ವ್ಯಾಸ ಏವೋಪಜ್ಞೋ ಯಸ್ಯ ಸಃ ವ್ಯಾಸೋಪಜ್ಞಃ। ತಸ್ಯ ಭಾವಃ ವ್ಯಾಸೋಪಜ್ಞತಾ । ಉಪಪನ್ನಾನ್ ಅರ್ಥಾನ್ ಆದೌ ಜಾನಾತೀತಿ ವಾ ಉಪಜ್ಞಃ। ಆದೌ ಜ್ಞಾತಾ ಕರ್ತಾ ಇತಿ ಚಾರ್ಥಃ। ವ್ಯಾಸಕೃತಗ್ರಂಥತ್ವಪ್ರಸಿದ್ಧಿವಿರೋಧಾತ್ ಇತಿ ಫಲಿತೋಽರ್ಥಃ। ಪರಶಬ್ದಸ್ಯಾನೇಕಾರ್ಥತ್ವೇನ ॥ ಅನ್ಯಾರ್ಥತ್ವಸ್ಯಾಪಿ ವಿದ್ಯಮಾನತ್ವೇನ ಇತ್ಯರ್ಥಃ। ಮಂತ್ರೇ ಪ್ರಯೋಗದರ್ಶನೇನ॥ ಅಜ್ಞಪ್ರಯೋಗದರ್ಶನೇನ ಇತ್ಯರ್ಥಃ।

'ವ್ಯಾಸೋಪಜ್ಞತಾ' ಎಂಬುದರ ಅರ್ಥ ಹೀಗಿದೆ. 'ಉಪಪನ್ನಾ ಅರ್ಥಾಃ ಜ್ಞಾಪ್ಯಂತೇ ಅನೇನ ಇತ್ಯುಪಜ್ಞಃ। ವ್ಯಾಸ ಏವೋಪಜ್ಞೋ ಯಸ್ಯ ಸಃ ವ್ಯಾಸೋಪಜ್ಞಃ। ತಸ್ಯ ಭಾವಃ ವ್ಯಾಸೋಪಜ್ಞತಾ' – ಎಂಬುದು ವಿಗ್ರಹ. ಯಾರಿಂದ ಅರ್ಥಗಳು ತಿಳಿಸಲ್ಪಡುತ್ತವೋ ಎಂದರೆ ಮೊದಲು ಉಪದೇಶಿಸಿದವನು ಎಂದರ್ಥ. ಅವನೇ ಉಪಜ್ಞ ಎಂದು ಕರೆಸಿಕೊಳ್ಳುತ್ತಾನೆ. ಆ ವೇದವ್ಯಾಸದೇವರೇ ಉಪಜ್ಞರಾದ್ದರಿಂದ ವ್ಯಾಸೋಪಜ್ಞ ಎಂದು ಕರೆಯಲಾಗುತ್ತದೆ. ಅವರಲ್ಲಿರುವ ಧರ್ಮವೇ ವ್ಯಾಸೋಪಜ್ಞತಾ ಎಂದು ಕರೆಸಿಕೊಳ್ಳುತ್ತದೆ. ವೇದವ್ಯಾಸದೇವರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ಮೊದಲು ಉಪದೇಶಿಸಿದ್ದಾರೆ ಎಂಬ ಪ್ರಸಿದ್ಧಿಗೆ ವಿರೋಧ ಬರುತ್ತದೆಂಬುದು ಇದರ ಅಭಿಪ್ರಾಯ.

ಅಥವಾ ಉಪಪನ್ನಾನ್ ಜಾನಾತೀತಿ ಉಪಜ್ಞಃ, ವ್ಯಾಸ ಏವ ಉಪಜ್ಞಃ = ವ್ಯಾಸೋಪಜ್ಞಃ ಎಂಬುದಾಗಿಯೂ ವಿಗ್ರಹವನ್ನು ತಿಳಿಯಬಹುದು. ಮೊದಲು ಎಲ್ಲಾ ಅರ್ಥಗಳನ್ನು ಬ್ರಹ್ಮಮೀಮಾಂಸಾಶಾಸ್ತ್ರದಿಂದ ತಿಳಿದವರು ವ್ಯಾಸೋಪಜ್ಞರು. ತಿಳಿದವರು ಎಂದರೆ ರಚನೆ ಮಾಡಿದವರು ಎಂದರ್ಥ. ಹೀಗೆ ವೇದವ್ಯಾಸದೇವರಿಂದ ಈ ಗ್ರಂಥವು ರಚಿತವಾಗಿದೆ ಎಂಬ ಪ್ರಸಿದ್ಧಿಗೆ ವಿರೋಧಬರುವುದರಿಂದ ಎಂಬುದು ಫಲಿತಾರ್ಥ.

'ಪರಶಬ್ದಸ್ಯ ಅನೇಕಾರ್ಥತ್ವೇನ' ಎಂಬುದಾಗಿ ಸುಧೆಯಲ್ಲಿ ಹೇಳಿದ್ದಾರೆ. ಪರ ಎಂಬ ಶಬ್ದಕ್ಕೆ ಬೇರೆ ಅರ್ಥಗಳು ಕೂಡ ಇರುವುದರಿಂದ ಎಂಬುದು ಇದರ ಅರ್ಥ. 'ಮಂತ್ರೇ ಪ್ರಯೋಗದರ್ಶನೇನ' ಎಂಬುದಕ್ಕೆ ಅರ್ಥವಿವಕ್ಷೆ ಇಲ್ಲದ ಮಂತ್ರದಲ್ಲಿ ಅಜ್ಞರಿಂದ ಪ್ರಯೋಗವಿರುವುದು ಕಂಡಿದ್ದರಿಂದ ಎಂಬುದು ಇದರ ಅರ್ಥ.





# ಅನುವ್ಯಾಖ್ಯಾನದ ಪ್ರತಿಯೊಂದು ಪದಗಳೂ ಕೂಡ ಶಂಕಾಪರಿಹಾರಕಗಳು

ವಾಕ್ಯಾರ್ಥಚಂದ್ರಿಕಾ– 'ಹರಿರ್ವ್ಯಾಸಃ' ಇತಿ ಸಾಮಾನಾಧಿಕರಣ್ಯೇನ, 'ಪ್ರಾದುರ್ಭೂತಃ' ಇತ್ಯನೇನ, 'ವಿರಿಂಚಾದಿಭಿರರ್ಥಿತಃ' ಇತ್ಯನೇನ, ಪರವಿದ್ಯಾಖ್ಯಮ್ ಇತ್ಯನೂದ್ಯ 'ಅನುತ್ತಮಂ ಶಾಸ್ತ್ರಮ್' ಇತಿ ವ್ಯಾಖ್ಯಾನೇನ, ಬಹುವ್ರೀಹಿಣಾ ಚ ವ್ಯಾವರ್ತ್ಯಾಃ ಶಂಕಾಃ ಕ್ರಮೇಣ ದರ್ಶಯತಿ – ಯದುಕ್ತಮಿತ್ಯಾದಿನಾ ॥

'ಹರಿರ್ವ್ಯಾಸಃ' ಎಂಬ ಸಾಮಾನಾಧಿಕರಣ್ಯದಿಂದ 'ಪ್ರಾದುರ್ಭೂತಃ' ಎಂಬ ವಿಶೇಷಣದಿಂದ, ವಿರಿಂಚಾದಿಭಿರರ್ಥಿತಃ' ಎಂಬುದರಿಂದ 'ಪರವಿದ್ಯಾಖ್ಯಂ' ಎಂದು ಅನುವಾದ ಮಾಡಿ, 'ಅನುತ್ತಮಂ ಶಾಸ್ತ್ರಂ' ಎಂದು ವ್ಯಾಖ್ಯಾನ ಮಾಡಿದ್ದರಿಂದ ಮತ್ತು ಬಹುವ್ರೀಹಿಸಮಾಸದಿಂದ ವ್ಯಾವರ್ತ್ಯವಾದ ಶಂಕೆಗಳನ್ನು ಕ್ರಮವಾಗಿ ತೋರಿಸಲು 'ಯದುಕ್ತಂ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ವಿವರಣೆ -ಮೂರನೆಯ ಅನುವ್ಯಾಖ್ಯಾನ ಪದ್ಯದಲ್ಲಿರುವ ಪ್ರತಿಯೊಂದು ಪದಗಳು ಒಂದೊಂದು ಆಶಂಕೆಯನ್ನು ಪರಿಹಾರ ಮಾಡುತ್ತಿವೆ. ಆ ಆಶಂಕೆಗಳನ್ನೇ ಯದುಕ್ತಂ ಇತ್ಯಾದಿ ಟೀಕಾವಾಕ್ಯದಿಂದ ತೋರಿಸಿದ್ದಾರೆ. ಹಿಂದೆ ನಾರಾಯಣನು ಈ ಬ್ರಹ್ಮಸೂತ್ರವನ್ನು ರಚನೆ ಮಾಡಿದನೆಂದು ಹೇಳಿದರು. ಆದರೆ ವೇದವ್ಯಾಸದೇವರು ರಚನೆ ಮಾಡಿದ್ದಾರಲ್ಲವೇ? ಈ ಆಶಂಕೆಯು ಹರಿರ್ವ್ಯಾಸಃ ಎಂಬ ವಿಶೇಷಣದಿಂದ ಪರಿಹಾರವಾಗುತ್ತಿದೆ. ವ್ಯಾಸೋಪಜ್ಞತಾ ಎಂಬ ವಾಕ್ಯದಿಂದ ಪರಿಹಾರವಾಗುವ ಆಶಂಕೆಯನ್ನು ತೋರಿಸಿದ್ದಾರೆ. ವೇದವ್ಯಾಸದೇವರೇ ನಾರಾಯಣನೆಂದು ಹೇಳಿದರೆ ವೇದವ್ಯಾಸದೇವರಿಗೆ ಜನನವಾಗಿದೆ ಎಂಬ ಆಶಂಕೆಯನ್ನು ಜನನವಿರೋಧಾತ್ ಎಂಬ ವಾಕ್ಯದಿಂದ ತೋರಿಸಿದ್ದಾರೆ. ಇದು ಪ್ರಾದುರ್ಭೂತಃ ಎಂಬ ವಿಶೇಷಣದಿಂದ ಪರಿಹಾರವಾಗುತ್ತದೆ. ಕೃತಕೃತ್ಯರಾದವರಿಗೆ ಪ್ರಯೋಜನವಿರುವುದಿಲ್ಲವಾದ್ದರಿಂದ ಈ ಶಾಸ್ತ್ರವನ್ನು ರಚನೆ ಮಾಡುವುದು ವ್ಯರ್ಥವಲ್ಲವೇ? ಎಂಬ ಆಶಂಕೆಯನ್ನು 'ಕೃತಕೃತ್ಯಸ್ಯ' ಎಂಬ ವಾಕ್ಯದಿಂದ ತೋರಿಸಿದ್ದಾರೆ. ಇದನ್ನು 'ವಿರಿಂಚಿಭವಪೂರ್ವಕೈಃ ಅರ್ಥಿತಃ' ಎಂಬುದರಿಂದ ಪರಿಹರಿಸಿದ್ದಾರೆ. ಪರಶಬ್ದಕ್ಕೆ ಅನೇಕಾರ್ಥವಿದೆ. ವಿದ್ಯಾಶಬ್ದವು ಮಂತ್ರದಲ್ಲೂ ಕೂಡ ಪ್ರಯುಕ್ತವಾಗುತ್ತದೆ. ಆದ್ದರಿಂದ ಪರವಿದ್ಯೆ ಎಂಬ ಈ ಗ್ರಂಥಕ್ಕೆ ಸರ್ವೋತ್ತಮಪ್ರಾಮಾಣ್ಯದ ನಿಶ್ಚಯವಾಗುವುದಿಲ್ಲ ಎಂಬ ಆಕ್ಷೇಪವನ್ನು 'ಪರಶಬ್ದಸ್ಯ' ಎಂಬ ವಾಕ್ಯದಿಂದ ತೋರಿಸಿದ್ದಾರೆ. ಇದು ಪರವಿದ್ಯಾಖ್ಯಂ ಎಂದು ಅನುವಾದ ಮಾಡಿ 'ಅನುತ್ತಮಂ ಶಾಸ್ತ್ರಂ' ಎಂಬ ವ್ಯಾಖ್ಯಾನದಿಂದ ಪರಿಹಾರವಾಗುತ್ತದೆ. ಪರವಿದ್ಯಾಖ್ಯಂ ಎಂಬಲ್ಲಿ ಬಹುವ್ರೀಹಿಸಮಾಸವನ್ನು ಮಾಡಬೇಕು. ಇದರಿಂದ ಪರಿಹಾರವಾಗುವ ಆಕ್ಷೇಪವನ್ನು 'ಕಿಂಚೇಯಂ' ಎಂಬ ವಾಕ್ಯದಿಂದ ತೋರಿಸಿದ್ದಾರೆ.

## ವ್ಯಾಸೋಪಜ್ಞತಾ ಎಂಬ ಶಬ್ದ ನಿಷ್ಪತ್ತಿ

**ವಾಕ್ಯಾರ್ಥಚಂದ್ರಿಕಾ– ವ್ಯಾಸೋಪಜ್ಞತಾ ಇತಿ ॥ 'ಉಪಜ್ಞೋಪಕ್ರಮಂ ತದಾದ್ಯಾಚಿಖ್ಯಾಸಾಯಾಮ್' ಇತಿ ಸೂತ್ರೇ ಉಪಜ್ಞಾಯತೇ ಇತ್ಯುಪಜ್ಞಾ। ಕರ್ಮಣಿ 'ಆತಶ್ಚೋಪಸರ್ಗೇ' ಇತ್ಯಙ್ । ಉಪಕ್ರಮ್ಯತ ಇತ್ಯುಪಕ್ರಮಃ । ಕರ್ಮಣಿ ಘಞ್ । ಉಪಜ್ಞೋಪಕ್ರಮಯೋ ಆದೇರಾಖ್ಯಾನೇಚ್ಛಾಯಾಮುಪಜ್ಞೋಪಕ್ರಮಶಬ್ದಾಂತಸ್ತತ್ಪುರುಷೋ ನಪುಂಸಕಲಿಂಗೋ ಭವತ್ಯೇಕಚ್ಚೇತ್ಯುಕ್ತತ್ವಾತ್, ವ್ಯಾಸೋಪಜ್ಞೇತಿ ಕರ್ತೃಷಷ್ಠ್ಯಾ ಸಮಾಸೇ, ತದಾದ್ಯಾಚಿಖ್ಯಾಸಾಯಾಂ, ನಪುಂಸಕೇ ಸತಿ, ವ್ಯಾಸೋಪಜ್ಞಮಿತಿ ಸಿದ್ಧ್ಯತಿ। ತಥಾ ಚ 'ವ್ಯಾಸೇನ ಪ್ರಥಮಂ ಪ್ರಣೀತತಾಪ್ರಸಿದ್ಧಿವಿರೋಧಾತ್' ಇತ್ಯರ್ಥಃ । (ಉಪಜ್ಞೋಪಕ್ರಮಂ ತದಾದ್ಯಾಚಿಖ್ಯಾಸಾಯಾಮ್ । ಉಪಜ್ಞಾಂತ ಉಪಕ್ರಮಾಂತಶ್ಚ ತತ್ಪುರುಷೋ ನಪುಂಸಕಂ ಸ್ಯಾತ್ ತಯೋರುಪಜ್ಞಾಯಮಾನೋಪಕ್ರಮ್ಯಮಾಣಯೋರಾದಿಃ ಪ್ರಾಥಮ್ಯಂ ಚೇತ್ ಆಖ್ಯಾತುಮಿಷ್ಯತೇ। ಪಾಣಿನೇರುಪಜ್ಞಾ ಪಾಣಿನ್ಯುಪಜ್ಞಂ ಗ್ರಂಥಃ। ನಂದೋಪಕ್ರಮಂ ದ್ರೋಣಃ।)**

'ಉಪಜ್ಞೋಪಕ್ರಮಂ ತದಾದ್ಯಾಚಿಖ್ಯಾಸಾಯಾಮ್' ಎಂಬ ಸೂತ್ರದಲ್ಲಿ ಉಪಜ್ಞಾಯತೇ ಇತ್ಯುಪಜ್ಞಾ ಎಂಬುದಾಗಿ ಕರ್ಮಾರ್ಥದಲ್ಲಿ ಆತಶ್ಚೋಪಸರ್ಗೇ ಎಂಬ ಸೂತ್ರದಿಂದ ಅಙ್ ಪ್ರತ್ಯಯವು ಬಂದು ಸ್ತ್ರೀಲಿಂಗದಲ್ಲಿ ಉಪಜ್ಞಾ ಎಂಬ ಶಬ್ದವು ನಿಷ್ಪನ್ನವಾಗಿದೆ. ಇದರಂತೆ ಉಪಕ್ರಮ್ಯತೇ ಇತ್ಯುಪಕ್ರಮಃ ಎಂಬುದಾಗಿ ಕರ್ಮಾರ್ಥದಲ್ಲಿ ಘಞ್ ಪ್ರತ್ಯಯವು ಬಂದು ಪುಲ್ಲಿಂಗಾಂತವಾಗಿ ಉಪಕ್ರಮ ಎಂಬ ಶಬ್ದವು ನಿಷ್ಪನ್ನವಾಗಿದೆ. ಉಪಜ್ಞಾ ಹಾಗೂ ಉಪಕ್ರಮಗಳು ಮೊದಲು ಹೇಳುವ ಇಚ್ಛೆಯನ್ನು ಹೊಂದಿರಬೇಕು. ಅಂಥ ಉಪಜ್ಞಾ ಉಪಕ್ರಮಶಬ್ದಗಳೇ ಕೊನೆಯಾಗಿ ಉಳ್ಳ ತತ್ಪುರುಷ ಸಮಾಸವು ನಪುಂಸಕಲಿಂಗವುಳ್ಳದ್ದಾಗುತ್ತದೆ. ಮತ್ತು ಏಕವಚನವಾಗುತ್ತದೆ. ಪ್ರಕೃತ ವ್ಯಾಸೋಪಜ್ಞತಾ ಎಂಬಲ್ಲಿ ಕರ್ತ್ರರ್ಥದಲ್ಲಿ ಷಷ್ಠೀತತ್ಪುರುಷವನ್ನು ಮಾಡಲಾಗಿದೆ. ವೇದವ್ಯಾಸದೇವರಿಂದ ಮೊದಲು ಉಪಜ್ಞೇಯವಾಗಿದೆ. ಮತ್ತು ಮೊದಲು ಉಪಕ್ರಮ್ಯವಾಗಿದೆ. ಆದ್ದರಿಂದ ನಪುಂಸಕಲಿಂಗವಾಗಿ ವ್ಯಾಸೋಪಜ್ಞಂ ಎಂಬ ಶಬ್ದವು ಸಾಧುವಾಗಿದೆ. ನಾರಾಯಣನೇ ಬ್ರಹ್ಮಸೂತ್ರಗಳನ್ನು ರಚನೆ ಮಾಡಿದ್ದಾರೆಂದು ಹೇಳಿದರೆ ವೇದವ್ಯಾಸದೇವರಿಂದ ಮೊದಲು ಪ್ರಣೀತವಾಗಿದೆ ಎಂಬ ಪ್ರಸಿದ್ಧಿಗೆ ವಿರೋಧ ಬರುತ್ತದೆ ಎಂದರ್ಥ.

ವಿವರಣೆ - ಉಪಜ್ಞಾಯತೇ ಇತಿ ಉಪಜ್ಞಾ ಎಂಬುದು ಸ್ತ್ರೀಲಿಂಗಾಂತವಾದ ಶಬ್ದವಾಗಿದೆ. ಆದರೆ ಷಷ್ಠೀ ತತ್ಪುರುಷಸಮಾಸವನ್ನು ಮಾಡಿದಾಗ ನಪುಂಸಕಲಿಂಗದಲ್ಲಿ ಏಕವಚನಾಂತವಾಗಿ ಆಗುತ್ತದೆ. ಉಪಜ್ಞಾಯತೇ ಇತಿ ಉಪಜ್ಞಾ ಎಂಬಲ್ಲಿ ಆತಶ್ಚೋಪಸರ್ಗೇ ಎಂಬ ಸೂತ್ರದಿಂದ ಕರ್ಮಾರ್ಥದಲ್ಲಿ ಅಙ್ ಪ್ರತ್ಯಯವು





ಬಂದಿದೆ. ಉಪಕ್ರಮ್ಯತೇ ಇತಿ ಉಪಕ್ರಮಃ ಎಂಬಲ್ಲಿ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ಎಂಬ ಸೂತ್ರದಿಂದ ಕರ್ಮಾರ್ಥದಲ್ಲಿ ಘಞ್ ಪ್ರತ್ಯಯವು ಬಂದಿದೆ. ಉಪಜ್ಞಾ ಎಂಬುದು ಸ್ತ್ರೀಲಿಂಗಶಬ್ದವಾಗಿದೆ. ಉಪಕ್ರಮಃ ಎಂಬುದು ಪುಲ್ಲಿಂಗಶಬ್ದವಾಗಿದೆ. ಆದರೂ ಕೂಡ ಉಪಜ್ಞೇಯ ಮತ್ತು ಉಪಕ್ರಮ್ಯಗಳ ಆದ್ಯುಪಜ್ಞಾನ ಹಾಗೂ ಆದ್ಯುಪಕ್ರಮ (ಮೊದಲ ಉಪಜ್ಞಾನ, ಮೊದಲ ಉಪಕ್ರಮ) ಈ ಅರ್ಥವು ವಿವಕ್ಷಿತವಾದಾಗ ಉಪಜ್ಞಾಶಬ್ದ ಹಾಗೂ ಉಪಕ್ರಮ ಶಬ್ದಗಳೇ ಕೊನೆಯಲ್ಲಿರುವಾಗ ತತ್ಪುರುಷಸಮಾಸವಾಗುತ್ತದೆ. ಮತ್ತು ನಪುಂಸಕಲಿಂಗವೂ ಕೂಡ ಆಗುತ್ತದೆ. ಉಪಜ್ಞಾಯತೇ ಇತ್ಯುಪಜ್ಞಾ, ವ್ಯಾಸಸ್ಯ ಉಪಜ್ಞಾ ವ್ಯಾಸೋಪಜ್ಞಂ ಎಂಬುದಾಗಿ ಷಷ್ಠೀತತ್ಪುರುಷಸಮಾಸವನ್ನು ಮಾಡಬೇಕು. ಉಪಜ್ಞಾಶಬ್ದವೇ ಕೊನೆಯಾಗಿಯುಳ್ಳ ವ್ಯಾಸೋಪಜ್ಞತಾ ಎಂಬ ಶಬ್ದವು ನಪುಂಸಕಲಿಂಗವಾಗುತ್ತದೆ. ವ್ಯಾಸಸ್ಯ ಉಪಜ್ಞಾ ಎಂಬಲ್ಲಿ ಷಷ್ಠೀವಿಭಕ್ತಿಯು ಕರ್ತ್ರರ್ಥದಲ್ಲಿದೆ. ವೇದವ್ಯಾಸದೇವರೇ ಮೊದಲು ತಿಳಿದಿರುವುದರಿಂದ ವ್ಯಾಸೋಪಜ್ಞತಾ ಎಂಬ ಅರ್ಥವು ಯುಕ್ತವಾಗುತ್ತದೆ. ಆದ್ದರಿಂದ ವೇದವ್ಯಾಸದೇವರಿಂದ ಮೊದಲು ಪ್ರಣೀತವಾಗಿದೆ ಎಂಬ ಪ್ರಸಿದ್ಧಿಗೆ ವಿರೋಧಬರುತ್ತದೆ ಎಂದಭಿಪ್ರಾಯ.

ತದಾದ್ಯಾಚಿಖ್ಯಾಸಾಯಾಮ್ - 'ಆಖ್ಯಾತುಂ ಇಚ್ಛಾ ಆಚಿಖ್ಯಾಸಾ' ಯಾವುದು ಹೇಳಲು ಇಚ್ಛೆಯುಳ್ಳದ್ದಾಗುತ್ತದೋ ಆಚಿಖ್ಯಾಸಾ ಎಂದು ಕರೆಸಿಕೊಳ್ಳುತ್ತದೆ. ಮೊದಲು ಹೇಳಲು ಉಪಜ್ಞೇಯ ಮತ್ತು ಉಪಕ್ರಮ್ಯಗಳ ಆದ್ಯುಪಜ್ಞಾನ, ಹಾಗೂ ಆದ್ಯುಪಕ್ರಮಗಳು ವಿವಕ್ಷಿತವಾಗಿರಬೇಕು. ಮೊದಲು ಉಪಜ್ಞೇಯವಾಗಿರಬೇಕು. ಮೊದಲು ಉಪಕ್ರಮ್ಯವಾಗಿರಬೇಕು ಎಂದರ್ಥ.

## ರಸಘಟ್ಟಿ

## ಯಾವ ಪಾಠ ಸರಿ?

ಕಂಬಾಲೂರುರಾಮಚಂದ್ರತೀರ್ಥೀಯ– ಶ್ರೌತಯಾ ಇತಿ ॥ ಯದ್ಯಪಿ ಶ್ರುತಿಶಬ್ದಾತ್ ಸಂಬಂಧಾರ್ಥೇ ಅಣ್‌ಪ್ರತ್ಯಯೇ ಟಿಡ್ಢಾಣಞಿತ್ಯಾದಿನಾ ಙೀಪಾ ಭವಿತವ್ಯಮ್ । ತಥಾಽಪಿ ಶ್ರುತಿಸಂಬಂಧಿ 'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾದಿವಾಕ್ಯಂ ಶ್ರೌತಮ್ । ತತ್ ಶ್ರೌತಂ ವಾಕ್ಯಮಸ್ಯಾಸ್ತಿ ಇತ್ಯರ್ಥೇ ಅರ್ಶಆದಿಭ್ಯೋಽಚ್ ಇತ್ಯಚ್ ಪ್ರತ್ಯಯೇ ತದಂತಾತ್ ಶ್ರೌತಶಬ್ದಾತ್ ಅಜಾದ್ಯತಷ್ಟಾಬ್ ಇತಿ ಟಾಪಿ ಕೃತೇ ಶ್ರೌತಯಾ ಇತಿ ರೂಪಂ ಸಾಧ್ವಿತಿ ಜ್ಞೇಯಮ್ । ಶ್ರೌತಪರವಿದ್ಯಾಖ್ಯಯಾ ಇತಿ ಪಾಠೇ ನ ಕಾಽಪ್ಯನುಪಪತ್ತಿಃ । ಘಞಂತಸ್ಯ ಶ್ರೌತಶಬ್ದಸ್ಯ ಸ್ತ್ರಿಯಾಃ ಪುಂವದಿತ್ಯಾದಿನಾ ಪುಂವದ್ಭಾವಸಂಭವಾತ್ ।





ವಾಸ್ತವಿಕವಾಗಿ 'ಶ್ರೌತ್ಯಾ' ಎಂಬ ರೂಪವು ನಿಷ್ಪನ್ನವಾಗಬೇಕು. 'ಶ್ರೌತಯಾ' ಎಂಬ ರೂಪವು ನಿಷ್ಪನ್ನವಾಗುವುದಿಲ್ಲ. ಅದು ಹೀಗೆ ಶ್ರುತಿಶಬ್ದದ ಮುಂದೆ ಸಂಬಂಧಾರ್ಥದಲ್ಲಿ ಅಣ್‌ಪ್ರತ್ಯಯವು ಬಂದರೆ ಟಿಡ್ಢಾಣಞ್ ಇತ್ಯಾದಿ ಸೂತ್ರದಿಂದ ಙೀಪ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರೌತ್ಯಾ ಎಂಬುದಾಗಿ ಹೇಳಬೇಕಿತ್ತು. ಆದರೂ ಕೂಡ ಶ್ರುತಿಗೆ ಸಂಬಂಧಪಟ್ಟ ದ್ವೇ ವಿದ್ಯೇ ವೇದಿತವ್ಯೇ ಇತ್ಯಾದಿ ವಾಕ್ಯವು ಶ್ರೌತ ಎನಿಸುತ್ತದೆ. ಶ್ರೌತಂ ಅಸ್ಯಾಸ್ತೀತಿ ಎಂಬ ಅರ್ಥದಲ್ಲಿ ಅರ್ಶಾದಿಭ್ಯೋ ಅಚ್ ಎಂಬ ಸೂತ್ರದಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯವು ಪ್ರಾಪ್ತವಾಗುತ್ತದೆ. ಅನಂತರ ಶ್ರೌತಶಬ್ದದ ಮುಂದ ಅಜಾದ್ಯತಷ್ಟಾಪ್ ಎಂಬ ಸೂತ್ರದಿಂದ ಟಾಪ್ ಪ್ರತ್ಯಯವು ಬಂದರೆ ಶ್ರೌತಾ ಎಂಬುದಾಗಿ ನಿಷ್ಪನ್ನ-ವಾಗುತ್ತದೆ. ತೃತೀಯಾವಿಭಕ್ತಿಯಲ್ಲಿ ಶ್ರೌತಯಾ ಎಂಬ ರೂಪವು ಸಾಧುವಾಗುತ್ತದೆ. ಕೆಲವು ಪುಸ್ತಕಗಳಲ್ಲಿ ಶ್ರೌತಪರವಿದ್ಯಾಖ್ಯಯಾ ಎಂಬ ಪಾಠವಿದೆ. ಈ ಪಕ್ಷದಲ್ಲಿ ಅನುಪಪತ್ತಿಯೇ ಇರುವುದಿಲ್ಲ. ಘಾಂತ ವಾದ ಶ್ರೌತಶಬ್ದಕ್ಕೆ ಸ್ತ್ರಿಯಾಃ ಪುಂವತ್ ಇತ್ಯಾದಿ ಸೂತ್ರದಿಂದ ಪುಂವದ್ಭಾವವು ಪ್ರಾಪ್ತವಾಗುತ್ತದೆ.

ಪರಿಮಳದಲ್ಲಿ 'ಶ್ರೌತ್ಯಾ ಪರವಿದ್ಯಾಖ್ಯಯಾ' ಎಂಬ ಪಾಠವನ್ನೇ ಸಾಧುವೆಂದು ಪರಿಗಣಿಸಿದ್ದಾರೆ. ಶ್ರೌತಯಾ ಎಂಬ ಪಾಠದಲ್ಲಿ ಹೇಗೆ ಅರ್ಥವನ್ನು ತಿಳಿಯಬೇಕೆಂಬುದನ್ನು ದಿಗ್ದರ್ಶನ ಮಾಡಿದ್ದಾರೆ. ಪ್ರಕೃತ ಕೆಲವು ವ್ಯಾಖ್ಯಾನಗಳ ಪ್ರಕಾರ ಶ್ರೌತಯಾ ಎಂಬ ಪಾಠವನ್ನೇ ಸಾಧುವೆಂದು ಪರಿಗಣಿಸಲಾಗಿದೆ. ಇನ್ನು ಕೆಲವು ಪಾಠಗಳಲ್ಲಿ ಶ್ರೌತಪರವಿದ್ಯಾಖ್ಯಯಾ ಎಂಬ ಪಾಠವನ್ನು ಅಂಗೀಕರಿಸಲಾಗಿದೆ. ಹೀಗೆ ಒಟ್ಟು ಮೂರು ರೀತಿಯಲ್ಲಿ ಪಾಠಾಂತರಗಳಿವೆ. ಮೂರು ಪಾಠಗಳಲ್ಲಿಯೂ ಅನುಪಪತ್ತಿಯು ಇರುವುದಿಲ್ಲ ಎಂಬುದನ್ನು ವ್ಯಾಖ್ಯಾನಗಳಲ್ಲಿ ಉಪಪಾದನೆ ಮಾಡಿದ್ದಾರೆ.

## ನಾರಾಯಣನು ವ್ಯಾಸರಲ್ಲವೆಂದು ಆಕ್ಷೇಪ

ಕಾಶೀ – ಅಸ್ತು, ಏತಚ್ಛಾಸ್ತ್ರಂ ನ ನಾರಾಯಣಪ್ರಣೀತಂ, ತದನ್ಯಪ್ರಣೀತತ್ವಾತ್ ಇತ್ಯನು-ಮಾನವಿರುದ್ಧಮಿತಿ ಯಾವತ್ । ಅತ್ರ ಹೇತ್ವಸಿದ್ಧಿಂ ಪರಿಹರತಿ – ವ್ಯಾಸೋಪಜ್ಞತಾ ಇತಿ ॥ ಉಪಜ್ಞಾಯತೇ ಇತ್ಯುಪಜ್ಞಾ ವ್ಯಾಸಸ್ಯೋಪಜ್ಞಾ ವ್ಯಾಸೋಪಜ್ಞಂ ವ್ಯಾಸೇನಾದೌ ಜ್ಞಾತಮ್ । 'ಉಪಜ್ಞೋಪಕ್ರಮಂ ತದಾದ್ಯಾಚಿಖ್ಯಾಸಾಯಾಮ್' ಇತಿ ಸೂತ್ರೇಣ ಉಪಜ್ಞೇಯೋಪಕ್ರಮ್ಯ-ಯೋರಾದೇರಾಖ್ಯಾನೇಚ್ಛಾಯಾಮ್ ಉಪಜ್ಞೋಪಕ್ರಮಶಬ್ದಾಂತತತ್ಪುರುಷಸ್ಯ ನಪುಂಸಕತ್ವ-ವಿಧಾನಾತ್ । ವ್ಯಾಸಪ್ರಣೀತತಾಪ್ರಸಿದ್ಧಿವಿರೋಧಾತ್ ಇತಿ ಫಲಿತಾರ್ಥಃ । ಶಾಸ್ತ್ರಪ್ರಣೇತುರ್ವ್ಯಾಸಸ್ಯ ನಾರಾಯಣಾನ್ಯತ್ವಾತ್ । ಹೇತ್ವಸಿದ್ಧಿಃ ಇತ್ಯಾಶಂಕ್ಯ ನಿರಾಚಷ್ಟೇ – ನ ಚೇತಿ ॥ 'ವ್ಯಾಸೋ

ನಾರಾಯಣೋ ನ ಭವತಿ ಜನನವತ್ತ್ವಾತ್ ದೇವದತ್ತವತ್' ಇತ್ಯನುಮಾನಾತ್ ಇತಿ ಭಾವಃ । ಅತ್ರ ವಿಪಕ್ಷೇ ಬಾಧಕಮಾಹ – ಜನನೇತಿ ॥ ಅತ್ರೈವ ದೋಷಾಂತರಂ ಶಾಸ್ತ್ರಪ್ರಣಯನಾನುಪಪತ್ತೇರಿತಿ । ತದುಪಪಾದನಾಯ – ಕೃತಕೃತ್ಯಸ್ಯ ಪ್ರಯೋಜನಾಭಾವೇನ ಇತಿ ॥ ಪೂರ್ಣಕಾಮಸ್ಯ ಪ್ರಯೋಜನೋದ್ದೇಶಾಭಾವನಿಯಮೇನ ಇತ್ಯರ್ಥಃ । ತಥಾ ಚ ವ್ಯಾಸೋ ಯದಿ ನಾರಾಯಣಃ ಸ್ಯಾತ್ ತದಾ ಕೃತಕೃತ್ಯಃ ಸ್ಯಾತ್ । ಕೃತಕೃತ್ಯತ್ವೇ ಚ ಪ್ರಯೋಜನೋದ್ದೇಶಶೂನ್ಯಃ ಸ್ಯಾತ್ । ತಥಾತ್ವೇ ಶಾಸ್ತ್ರಪ್ರಣೇತಾ ನ ಸ್ಯಾತ್ । ಅತೋ ನಾರಾಯಣಾನ್ಯ ಏವ ಇತಿ ಭಾವಃ ।

'ಏತಚ್ಛಾಸ್ತ್ರಂ ನ ನಾರಾಯಣಪ್ರಣೀತಂ, ತದನ್ಯಪ್ರಣೀತತ್ವಾತ್' – ಈ ಬ್ರಹ್ಮಮೀಮಾಂಸಾಶಾಸ್ತ್ರವು ಅನ್ಯರಿಂದ ಪ್ರಣೀತವಾಗಿರುವ ಕಾರಣ ಎಂಬ ಅನುಮಾನದಿಂದ ವಿರುದ್ಧವಾಗಿದೆ ಎಂಬುದು ಅಯುಕ್ತಂ ಎಂಬ ಪದದ ಅರ್ಥ. ಈ ಅನುಮಾನದಲ್ಲಿ ತದನ್ಯಪ್ರಣೀತತ್ವ ಎಂಬ ಹೇತುವು ಅಸಿದ್ಧವಾಗಿದೆ ಎಂಬ ಆಶಂಕೆಯನ್ನು 'ವ್ಯಾಸೋಪಜ್ಞತಾ' ಎಂಬ ವಾಕ್ಯದಿಂದ ಪರಿಹರಿಸಿದ್ದಾರೆ. ಉಪಜ್ಞಾಯತೇ ಇತ್ಯುಪಜ್ಞಾ ವ್ಯಾಸಸ್ಯ ಉಪಜ್ಞಾ ವ್ಯಾಸಸ್ಯೋಪಜ್ಞಾ ಎಂಬ ನಿಷ್ಪತ್ತಿಯಿಂದ ವೇದವ್ಯಾಸದೇವರಿಂದ ಮೊದಲು ತಿಳಿಯಲ್ಪಟ್ಟಿದೆ ಎಂಬರ್ಥವನ್ನು ತಿಳಿಯಬೇಕು.

'ಉಪಜ್ಞೋಪಕ್ರಮಂ ತದಾದ್ಯಾಚಿಖ್ಯಾಸಾಯಾಮ್' ಎಂಬ ಸೂತ್ರದಿಂದ ಉಪಜ್ಞಶಬ್ದಕ್ಕೆ ಕರ್ಮಾರ್ಥದಲ್ಲಿ ಅಙ್ ಪ್ರತ್ಯಯವು ಬರುತ್ತದೆ. ಉಪಕ್ರಮಶಬ್ದಕ್ಕೆ ಕರ್ಮಾರ್ಥದಲ್ಲಿ ಘಞ್‌ಪ್ರತ್ಯಯವು ಬರುತ್ತದೆ. ಅನಂತರ ತತ್ಪುರುಷಸಮಾಸವು ಪ್ರಾಪ್ತವಾಗಿ ನಪುಂಸಕಲಿಂಗವು ಬರುತ್ತದೆ. ಷಷ್ಠೀತತ್ಪುರುಷಸಮಾಸವನ್ನು ಮಾಡಬೇಕು. ಷಷ್ಠೀವಿಭಕ್ತಿಯನ್ನು ಕರ್ತ್ರರ್ಥದಲ್ಲಿ ವಿವಕ್ಷಿಸಬೇಕು. ಆಗ ವ್ಯಾಸಸ್ಯ ಉಪಜ್ಞಾ ಎಂಬುದಕ್ಕೆ ವ್ಯಾಸಪ್ರಣೀತವಾಗಿದೆ ಎಂಬ ಪ್ರಸಿದ್ಧಿಯ ವಿರೋಧವು ಪ್ರಾಪ್ತವಾಗುತ್ತದೆ ಎಂಬರ್ಥವು ಫಲತಃ ತಿಳಿಯುತ್ತದೆ.

ಶಾಸ್ತ್ರಪ್ರಣೇತೃಗಳಾದ ವೇದವ್ಯಾಸದೇವರು ಸಾಕ್ಷಾತ್ ನಾರಾಯಣದೇವರೇ ಆಗಿದ್ದಾರೆ. ಈ ವಿಷಯದಲ್ಲಿ ಹೇತ್ವಸಿದ್ಧಿಯನ್ನು ಆಶಂಕಿಸಿ, ನಿರಾಕರಣೆ ಮಾಡಲು 'ನಚ' ಎಂಬ ವಾಕ್ಯವು ಹೊರಟಿದೆ. ವ್ಯಾಸಃ ನಾರಾಯಣೋ ನ ಭವತಿ ಜನನವತ್ತ್ವಾತ್ ದೇವದತ್ತವತ್ ಎಂಬ ಅನುಮಾನವನ್ನು ಇಲ್ಲಿ ತಿಳಿಯಬೇಕು. ಈ ಅನುಮಾನಕ್ಕೆ ವಿಪಕ್ಷೇ ಬಾಧಕತರ್ಕವನ್ನು 'ಜನನವಿರೋಧಾತ್' ಎಂದು ಹೇಳಿದ್ದಾರೆ. ಮತ್ತೊಂದು ದೋಷವನ್ನು ಶಾಸ್ತ್ರಪ್ರಣಯನಾಸಂಭವಾಚ್ಚ ಎಂಬುದರಿಂದ ಹೇಳಿದ್ದಾರೆ. ಇದರ ಉಪಪಾದನೆಗಾಗಿ 'ಕೃತಕೃತ್ಯಸ್ಯ ಪ್ರಯೋಜನಾಭಾವೇನ' ಎಂಬ ಮಾತು ಹೊರಟಿದೆ. ಪೂರ್ಣಕಾಮನಿಗೆ ಯಾವುದೇ ಪ್ರಯೋಜನದ ಉದ್ದೇಶವಿರುವುದಿಲ್ಲವೆಂಬ ನಿಯಮವಿದೆ ಎಂಬುದು ಹೇತುವಾಗಿದೆ.





ಒಟ್ಟು ಹೀಗೆ ತಿಳಿಯಬೇಕು – ವ್ಯಾಸಃ ಯದಿ ನಾರಾಯಣಃ ಸ್ಯಾತ್ ತದಾ ಕೃತಕೃತ್ಯಃ ಸ್ಯಾತ್ । ಕೃತಕೃತ್ಯತ್ವೇ ಚ ಪ್ರಯೋಜನೋದ್ದೇಶಶೂನ್ಯಃ ಸ್ಯಾತ್ । ತಥಾತ್ವೇ ಶಾಸ್ತ್ರಪ್ರಣೇತಾ ನ ಸ್ಯಾತ್ । ಅತೋ ನಾರಾಯಣಾದನ್ಯ ಏವ – 'ವೇದವ್ಯಾಸದೇವರು ಒಂದು ವೇಳೆ ನಾರಾಯಣಸ್ವರೂಪರೇ ಆಗಿದ್ದರೆ ಕೃತಕೃತ್ಯರಾಗುತ್ತಿದ್ದರು. ಕೃತಕೃತ್ಯರಾಗಿದ್ದಲ್ಲಿ ಯಾವುದೇ ಪ್ರಯೋಜನವನ್ನು ಹೊಂದುತ್ತಿರಲಿಲ್ಲ. ಆಗ ಶಾಸ್ತ್ರಪ್ರಣೇತೃತ್ವವು ಕೂಡುತ್ತಿರಲಿಲ್ಲ. ಶಾಸ್ತ್ರಪ್ರಣೇತೃತ್ವವು ಇವರಲ್ಲಿರುವುದರಿಂದ ಪ್ರಯೋಜನೋದ್ದೇಶವು ಇರುತ್ತದೆ. ಆದ್ದರಿಂದ ಕೃತಕೃತ್ಯರಲ್ಲ. ಹಾಗಾಗಿ ವೇದವ್ಯಾಸದೇವರು ನಾರಾಯಣಸ್ವರೂಪರಲ್ಲ' ಎಂದು.

## ಸುಧಾಪರಿಮಳಸಾರ

ಸಾಕ್ಷಾತ್ ನಾರಾಯಣನೇ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾನೆಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದರು. ಆದರೆ ಲೋಕದಲ್ಲಿ ವೇದವ್ಯಾಸದೇವರು ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದ್ದಾರೆಂದು ಪ್ರಸಿದ್ಧಿ ಇದೆ. ಈ ಪ್ರಸಿದ್ಧಿಗೆ ವಿರೋಧ ಬರುತ್ತದಲ್ಲವೇ? ನಾರಾಯಣನೇ ವೇದವ್ಯಾಸದೇವರೆಂದು ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ವೇದವ್ಯಾಸದೇವರಿಗೆ ಜನನವಿದೆ. ನಾರಾಯಣನಿಗೆ ಜನನವಿಲ್ಲ. ನಾರಾಯಣನೇ ವೇದವ್ಯಾಸದೇವರಾಗಿದ್ದಲ್ಲಿ ಈ ಗ್ರಂಥವನ್ನು ರಚನೆ ಮಾಡುತ್ತಲೇ ಇರಲಿಲ್ಲ. ಯಾರು ಕೃತಕೃತ್ಯರೋ ಅವರಿಗೆ ಆಗಬೇಕಾದದ್ದು ಯಾವುದೂ ಇರುವುದಿಲ್ಲ. ನಾರಾಯಣನು ಪಡೆಯಬೇಕಾದದ್ದನ್ನೆಲ್ಲ ಪಡೆದಿರುವುದರಿಂದ ಬ್ರಹ್ಮಸೂತ್ರಗಳ ರಚನೆಯಿಂದ ಅವನಿಗೆ ಏನೂ ಆಗಬೇಕಾಗಿಲ್ಲ. ಮತ್ತು ಬ್ರಹ್ಮಮೀಮಾಂಸಾಶಾಸ್ತ್ರವು ದ್ವೇ ವಿದ್ಯೇ ವೇದಿತವ್ಯೇ ಎಂದು ಶ್ರುತಿ ಹೇಳುವಂತೆ ಶ್ರೇಷ್ಠಪ್ರಮಾಣವೆಂದು ಸಿದ್ಧವಾಗಿದೆ ಎಂಬುದಾಗಿ ಈ ಹಿಂದೆ ಉಪಪಾದನೆ ಮಾಡಲಾಯಿತು. ಇದೂ ಕೂಡ ಸರಿಯಲ್ಲ. ಪರಶಬ್ದಕ್ಕೆ ಅನೇಕಾರ್ಥಗಳಿರುವಾಗ ಶ್ರೇಷ್ಠ ಎಂಬ ಅರ್ಥವು ಸಿದ್ಧವಾಗುವುದಿಲ್ಲ. ಆದ್ದರಿಂದ ಸರ್ವೋತ್ಕೃಷ್ಟಪ್ರಾಮಾಣ್ಯವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಹೇಗೆ ಬರುತ್ತದೆ? ಈ ಎರಡು ಪ್ರಶ್ನೆಗಳಿಗೆ ಉತ್ತರವನ್ನು ನೀಡುವುದಕ್ಕಾಗಿ 'ಪ್ರಾದುರ್ಭೂತೋ ಹರಿರ್ವ್ಯಾಸಃ' ಎಂಬ ಮೂರನೆಯ ಅನುವ್ಯಾಖ್ಯಾನಶ್ಲೋಕವು ಹೊರಟಿದೆ.

## ಪರಿಮಳದ ವೈಶಿಷ್ಟ್ಯ

* ವ್ಯಾಸೋಪಜ್ಞತಾ ಎಂಬ ಶಬ್ದಕ್ಕೆ ವ್ಯಾಕರಣದ ಪ್ರಕಾರ ನಿಷ್ಪತ್ತಿಯನ್ನು ಹೇಳಿ ಅಪೂರ್ವವಾದ ಅರ್ಥವನ್ನು ಹೇಳಿದ್ದಾರೆ.







* ಶ್ರೌತ್ಯಾ ಪರವಿದ್ಯಾಖ್ಯಯಾ ಎಂಬ ಸಾಧುಪಾಠದ ಬಗ್ಗೆ ವಿಮರ್ಶಿಸಿದ್ದಾರೆ.

* ಅನುವ್ಯಾಖ್ಯಾನಶ್ಲೋಕದಲ್ಲಿರುವ ಚಕ್ರೇ ಎಂಬ ಪದಕ್ಕೆ ಸಾಧುತ್ವವನ್ನು ವ್ಯಾಕರಣದ ಪ್ರಕಾರ ಸಮರ್ಥನೆ ಮಾಡಿದ್ದು ಅಪೂರ್ವವಾಗಿದೆ.

## ಬ್ರಹ್ಮಮೀಮಾಂಸಾಶಾಸ್ತ್ರದ ರಚನೆ

**ಅನು – ಪ್ರಾದುರ್ಭೂತೋ ಹರಿರ್ವ್ಯಾಸೋ ವಿರಿಂಚಭವಪೂರ್ವಕೈಃ ।**
**ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಮ್ ॥೩॥**

ಬ್ರಹ್ಮರುದ್ರಾದಿದೇವತೆಗಳು ತತ್ವಜ್ಞಾನದ ಸ್ಥಾಪನೆಗಾಗಿ ಶ್ರೀಹರಿಯನ್ನು ಪ್ರಾರ್ಥಿಸಿದರು. ಆ ಶ್ರೀಹರಿಯು ವೇದ-ವ್ಯಾಸರೂಪದಿಂದ ಪ್ರಕಟನಾದನು. ಎಲ್ಲ ಶಾಸ್ತ್ರಗಳಲ್ಲಿ ಶ್ರೇಷ್ಠವಾದ ಪರವಿದ್ಯೆಯೆಂದು ಕರೆಸಿಕೊಳ್ಳುವ ಬ್ರಹ್ಮ-ಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದನು.

## ಶಾಸ್ತ್ರಪ್ರಭವತ್ವದ ವಿವರಣೆಗಾಗಿ ಮೂರನೆಯ ಶ್ಲೋಕ.

**ಸನ್ನ್ಯಾಯರತ್ನಾವಳೀ– ಶಾಸ್ತ್ರಪ್ರಭವಮಿತ್ಯುಕ್ತಂ ವಿವೃಣೋತಿ – ಪ್ರಾದುರ್ಭೂತ ಇತಿ ॥ ನ ವಿದ್ಯತೇ ಉತ್ತಮಂ ಶಾಸ್ತ್ರಂ ಯಸ್ಮಾತ್ ತತ್ ಅನುತ್ತಮಮ್ ॥3॥**

ಹಿಂದಿನ ಶ್ಲೋಕದಲ್ಲಿ 'ಶಾಸ್ತ್ರಪ್ರಭವಂ' ಎಂದು ಹೇಳಿದರು. ಅದರ ವಿವರಣೆಯನ್ನೇ ಈ ಶ್ಲೋಕದಲ್ಲಿ ಮಾಡುತ್ತಿದ್ದಾರೆ. 'ಅನುತ್ತಮಮ್' ಎಂಬ ಪದಕ್ಕೆ ಇದಕ್ಕಿಂತಲೂ ಉತ್ತಮವಾದ ಶಾಸ್ತ್ರ ಮತ್ತೊಂದಿಲ್ಲ ಎಂದರ್ಥ.

ವಿವರಣೆ – ಹಿಂದಿನ ಶ್ಲೋಕದಲ್ಲಿ ವೇದವ್ಯಾಸದೇವರು ಶಾಸ್ತ್ರಪ್ರಭವರಾಗಿದ್ದಾರೆಂದು ಹೇಳಿದರು. ಅದನ್ನೇ ಈಗ ಪ್ರಾದುರ್ಭೂತಃ ಎಂಬ ಶ್ಲೋಕದಲ್ಲಿ ವಿವರಣೆ ಮಾಡುತ್ತಿದ್ದಾರೆ. ನಾರಾಯಣನು ಬ್ರಹ್ಮಾದಿದೇವತೆಗಳಿಂದ ತತ್ತ್ವಜ್ಞಾನಕ್ಕೋಸ್ಕರ ಪ್ರಾರ್ಥಿತನಾದಾಗ ವೇದವ್ಯಾಸರೂಪದಿಂದ ಅವತರಿಸಿದನು. ತತ್ತ್ವಜ್ಞಾನದ ಸ್ಥಾಪನೆಗಾಗಿ ಪರವಿದ್ಯೆಯೆಂದು ಕರೆಸಿಕೊಳ್ಳುವ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದನು. ಈ





ಶ್ಲೋಕದಲ್ಲಿ ಅನುತ್ತಮಂ ಎಂಬ ಪದಕ್ಕೆ ನ ವಿದ್ಯತೇ ಉತ್ತಮಂ ಯಸ್ಮಾತ್ ತತ್ ಅನುತ್ತಮಂ ಎಂಬುದಾಗಿ ವಿಗ್ರಹವನ್ನು ತಿಳಿಯಬೇಕು. ಯಾವ ಶಾಸ್ತ್ರದ ದೆಸೆಯಿಂದ ಮತ್ತೊಂದು ಉತ್ತಮವಾದ ಶಾಸ್ತ್ರವು ಇರುವುದಿಲ್ಲವೋ ಆ ಶಾಸ್ತ್ರವೇ ಅನುತ್ತಮ ಎಂದು ಕರೆಸಿಕೊಳ್ಳುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರಕ್ಕಿಂತ ಉತ್ತಮವಾದ ಮತ್ತೊಂದು ಶಾಸ್ತ್ರವು ಇಲ್ಲದ ಕಾರಣ ಇದು ಅನುತ್ತಮಶಾಸ್ತ್ರ ಎಂದು ಕರೆಸಿಕೊಳ್ಳುತ್ತದೆ.

**ನಯಚಂದ್ರಿಕಾ– ಸೂತ್ರಾಣಾಂ ಪ್ರಾಮಾಣ್ಯಂ ಸಾಧಯಿತುಮ್ ಆಪ್ತಿಮೂಲತ್ವಾದಿಕಂ ದರ್ಶಯತಿ – ಪ್ರಾದುರ್ಭೂತ ಇತಿ ॥**

ಸೂತ್ರಗಳಿಗೆ ಪ್ರಾಮಾಣ್ಯವನ್ನು ಸಾಧನೆ ಮಾಡುವುದಕ್ಕಾಗಿ ಆಪ್ತಿಮೂಲತ್ವಾದಿಗಳನ್ನು ತೋರಿಸಲು 'ಪ್ರಾದುರ್ಭೂತಃ' ಎಂಬ ಮೂರನೆಯ ಪದ್ಯವು ಹೊರಟಿದೆ.

## ಕೃಪಾಪರವಶರಾಗಿ ಈ ಗ್ರಂಥವನ್ನು ರಚಿಸಿದರು

**ಶ್ರೀಮನ್ನ್ಯಾಯಸುಧಾ– ಅತ್ರ 'ಕೃತಕೃತ್ಯೋಽಪಿ ಹರಿರಾತ್ಮಕೃಪಾಸ್ಪದೈಃ ವಿರಿಂಚಭವಪೂರ್ವಕೈಃ ಅಮರೈಃ ಅರ್ಥಿತೋ ವ್ಯಾಸಃ ಪ್ರಾದುರ್ಭೂತೋ ನ ತು ಜಾತೋ ಗ್ರಂಥಮಿಮಂ ಚಕ್ರೇ' ಇತ್ಯನೇನ ನಾರಾಯಣಸ್ಯ ಶಾಸ್ತ್ರಪ್ರಭವತ್ವೇ ಅನುಪಪತ್ತಿಃ ಪರಿಹೃತಾ । ದೃಶ್ಯಂತೇ ಹಿ ಕೇವಲಂ ಕೃಪಾಪಾರವಶ್ಯೇನ ಪರೋಪಕಾರಾಯ ಪ್ರವರ್ತಮಾನಾಃ ಸುತರಾಂ ತೈರರ್ಥಿತಾಃ । ಅತ ಏವ ಪರಪ್ರಯೋಜನಮಪಿ ಆತ್ಮಗಾಮೀವ ಮನ್ಯಮಾನಸ್ಯ ಭಗವತಃ ಶಾಸ್ತ್ರಪ್ರಣಯನಮ್ ಇತಿ ಜ್ಞಾಪಯಿತುಮ್ ಆತ್ಮನೇಪದಪ್ರಯೋಗಃ । ಅತ್ರ ಚ 'ನಾರಾಯಣಾದ್ ವಿನಿಷ್ಪನ್ನಮ್' ಇತ್ಯಾದ್ಯಾಗಮಃ ಪ್ರಮಾಣಮ್ ।**

ಶ್ರೀಹರಿಗೆ ಶಾಸ್ತ್ರದ ರಚನೆಯಿಂದ ಆಗಬೇಕಾದ ಪ್ರಯೋಜನ ಏನೂ ಇಲ್ಲ. ಅವನು ಕೃತಕೃತ್ಯ. ಆದರೂ ಕೂಡ ತನಗೆ ಕೃಪಾಪಾತ್ರರಾದ ಬ್ರಹ್ಮರುದ್ರಾದಿದೇವತೆಗಳು ತನ್ನ ಅವತಾರಕ್ಕಾಗಿ ಪ್ರಾರ್ಥನೆ ಮಾಡಿದರು. ಅದಕ್ಕನುಗುಣವಾಗಿ ವೇದವ್ಯಾಸರೂಪದಿಂದ ಪ್ರಕಟನಾದನು. ಹೊರತು ಹುಟ್ಟಲಿಲ್ಲ. ಹೀಗೆ ಪ್ರಕಟನಾದ ಶ್ರೀಹರಿಯು ಈ ಗ್ರಂಥವನ್ನು

ರಚನೆ ಮಾಡಿದನು. ಈ ಗ್ರಂಥವನ್ನು ರಚನೆ ಮಾಡಿದನು ಎಂದು ಹೇಳಿದ್ದರಿಂದ ನಾರಾಯಣನು ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಿರ್ಮಾಣ ಮಾಡಿದ್ದಾನೆ ಎಂಬ ವಿಷಯದಲ್ಲಿರುವ ಅನುಪಪತ್ತಿಶಂಕೆಯನ್ನು ಪರಿಹರಿಸಿದಂತಾಯಿತು.

ಅದು ಹೀಗೆ – ಲೋಕದಲ್ಲಿ ಬೇರೆಯವರು ಉಪಕಾರಕ್ಕಾಗಿ ಅವರ ಪ್ರಾರ್ಥನೆಯಂತೆ ಕೃಪಾಪರವಶರಾಗಿ ಉಪಕಾರ ಮಾಡುವುದು ಕಂಡಿದೆ. ಇಂಥ ಸಂದರ್ಭದಲ್ಲಿ ಕೃಪೆ ಬಿಟ್ಟು ಬೇರೆ ಕಾರಣ ಇರುವುದಿಲ್ಲ. ಆದ್ದರಿಂದಲೇ ಬೇರೆಯವರಿಗೆ ದೊರಕುವ ಪ್ರಯೋಜನವೂ ಕೂಡ ತನಗೆ ಸಂಬಂಧಪಟ್ಟದ್ದು ಎಂಬುದಾಗಿ ಭಗವಾನ್ ಬಾದರಾಯಣರು ಭಾವಿಸಿದ್ದಾರೆ. ಈ ದೃಷ್ಟಿಯಿಂದಲೇ ಈ ಶಾಸ್ತ್ರವನ್ನು ರಚನೆ ಮಾಡಿದ್ದಾರೆ. ಇದನ್ನು ತಿಳಿಸುವುದಕ್ಕಾಗಿಯೇ ಆತ್ಮನೇಪದಪ್ರಯೋಗವನ್ನು ಮಾಡಿರುತ್ತಾರೆ. ಈ ವಿಷಯದಲ್ಲಿ 'ನಾರಾಯಣಾದ್ ವಿನಿಷ್ಪನ್ನಂ' ಇತ್ಯಾದಿಯಾಗಿ ಭಾಷ್ಯದಲ್ಲಿ ಉದಾಹರಿಸಿದ ಆಗಮವಾಕ್ಯಗಳು ಪ್ರಮಾಣವಾಗಿವೆ.

## ಇದು ಅನುತ್ತಮಶಾಸ್ತ್ರ

**ಶ್ರೀಮನ್ನ್ಯಾಯಸುಧಾ– ಪರವಿದ್ಯಾಖ್ಯಯಾ ಅಸ್ಯ ಸರ್ವೋತ್ತಮಪ್ರಾಮಾಣ್ಯಸಿದ್ಧಿಂ ವ್ಯುತ್ಪಾದಯಿತುಂ 'ಪರವಿದ್ಯಾಖ್ಯಮ್' ಇತ್ಯನೂದ್ಯ 'ಅನುತ್ತಮಂ ಶಾಸ್ತ್ರಮ್' ಇತಿ ವ್ಯಾಖ್ಯಾತಮ್ । 'ನಾಸ್ತ್ಯುತ್ತಮಂ ಶಾಸ್ತ್ರಮ್ ಅಸ್ಮಾತ್' ಇತಿ = ಅನುತ್ತಮಮ್ । ಶಿಷ್ಯತೇ ಯಥಾಸ್ಥಿತಂ ಪ್ರತಿಪಾದ್ಯತೇ ತತ್ತ್ವಮ್ ಅನೇನೇತಿ = ಶಾಸ್ತ್ರಮ್ ।**

ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯೆ ಎಂದು ಹೆಸರು ನೀಡಿದ್ದಾರೆ. ಇದರಿಂದಲೇ ಈ ಶಾಸ್ತ್ರಕ್ಕೆ ಸರ್ವೋತ್ಕೃಷ್ಟಪ್ರಾಮಾಣ್ಯವು ಸಿದ್ಧವಾಗುತ್ತದೆ. ಇದನ್ನು ತೋರಿಸುವುದಕ್ಕಾಗಿ ಪರವಿದ್ಯಾಖ್ಯಂ ಎಂದು ಅನುವಾದ ಮಾಡಿ, ಅನುತ್ತಮಂ ಶಾಸ್ತ್ರಂ = ಸರ್ವೋತ್ತಮವಾದ





ಶಾಸ್ತ್ರವಾಗಿದೆ ಎಂದು ವ್ಯಾಖ್ಯಾನ ಮಾಡಿದ್ದಾರೆ. ಅನುತ್ತಮಶಬ್ದಕ್ಕೆ ಇದಕ್ಕಿಂತ ಉತ್ತಮವಾದ ಮತ್ತೊಂದು ಶಾಸ್ತ್ರವಿಲ್ಲ ಎಂದರ್ಥ. ಶಾಸ್ತ್ರಶಬ್ದಕ್ಕೆ ತತ್ವವನ್ನು ಯಥಾಸ್ಥಿತವಾಗಿ ಪ್ರತಿಪಾದಿಸುವ ಗ್ರಂಥ ಎಂದರ್ಥ.

## 'ಚಕ್ರೇ' ಎಂಬ ಪ್ರಯೋಗದ ಬಗ್ಗೆ

ಪರಿಮಳ– ನನು 'ಏವಂ ಚಕ್ರೇ' ಇತ್ಯಯುಕ್ತಮ್ । ಕೃಞ್ ಞಿತ್ತ್ವೇನ 'ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ' ಇತಿ ಕ್ರಿಯಾಜನ್ಯಫಲಸ್ಯ ಕರ್ತೃಗಾಮಿತ್ವ ಏವ ಆತ್ಮನೇಪದತ್ವೋಕ್ತೇಃ ।

ಚಕ್ರೇ ಎಂಬ ಪ್ರಯೋಗವು ಅಯುಕ್ತವಾಗಿದೆ. ಏಕೆಂದರೆ ಕೃಞ್ ಧಾತುವಿನಿಂದ ನಿಷ್ಪನ್ನವಾಗಿದೆ. ಕೃಞ್ ಧಾತುವು ಞಿತ್ ಆಗಿದೆ. ಞ್ ಇತ್ ಸಂಜ್ಞಕವಾದ ಧಾತುಗಳಿಗೆ ಕ್ರಿಯಾಪದವು ಕರ್ತೃವಿನಲ್ಲಿ ಇರುವಾಗ ಆತ್ಮನೇ ಪದ ಬರುತ್ತದೆಂದು 'ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ' ಎಂಬ ಸೂತ್ರವು ಹೇಳುತ್ತಿದೆ. ಆದ್ದರಿಂದ ಚಕ್ರೇ ಎಂಬ ರೂಪವು ಸಾಧುವಾಗಿದೆ.

## ಆತ್ಮನೇಪದಪ್ರಯೋಗದ ಹಿನ್ನೆಲೆ

ಪರಿಮಳ– ಅತ್ರ ಕರ್ತುಃ ಕೃತಕೃತ್ಯತಯಾ ಫಲಾನಪೇಕ್ಷಿತತ್ವಾತ್ ಇತ್ಯತ ಆಹ – ಅತ ಏವೇತಿ ॥ ಪರಾರ್ಥಪ್ರವೃತ್ತಿಮತ್ತ್ವಾದೇವ ಇತ್ಯರ್ಥಃ । ಅತ್ರೇತಿ ॥ ಶ್ಲೋಕೋಕ್ತಾರ್ಥೇ । ಭಾಷ್ಯೋಕ್ತಾಗಮೋ ಮಾನಮ್ ಇತ್ಯರ್ಥಃ।

ಚಕ್ರೇ = ಮಾಡಿದನು ಎಂದು ಹೇಳಿದ್ದಾರೆ. ಈ ಶಾಸ್ತ್ರರಚನೆ ಎಂಬ ಯಾವ ಕ್ರಿಯೆಯಿದೆಯೋ ಇದರ ಫಲವು ಶಾಸ್ತ್ರಕರ್ತೃವಾದ ವೇದವ್ಯಾಸದೇವರೂಪಿಯಾದ ಶ್ರೀಹರಿಯಲ್ಲಿ ಬರುವುದಿಲ್ಲ. ಏಕೆಂದರೆ ಇವನು ಕೃತಕೃತ್ಯನಾಗಿದ್ದಾನೆ. ಆದ್ದರಿಂದಲೇ ಅವನಿಗೆ ಫಲದ ಅಪೇಕ್ಷೆಯೂ ಇರುವುದಿಲ್ಲ. ಈ ಪ್ರಶ್ನೆಗೆ ಉತ್ತರಿಸಲು 'ಅತ ಏವ' ಇತ್ಯಾದಿ ಗ್ರಂಥ ಹೊರಟಿದೆ. ಮತ್ತೊಬ್ಬರ ಪ್ರಯೋಜನಕ್ಕಾಗಿಯೇ ಪ್ರವೃತ್ತಿಯುಳ್ಳವನಾದ್ದರಿಂದ ಎಂಬುದು ಅತ ಏವ







ಎಂಬುದರ ಅರ್ಥ. ಅತ್ರ ಎಂಬ ಪದಕ್ಕೆ 'ಪ್ರಾದುರ್ಭೂತಃ' ಎಂಬ ಶ್ಲೋಕದಲ್ಲಿ ಹೇಳಿದ ಅರ್ಥದಲ್ಲಿ ಭಾಷ್ಯದಲ್ಲಿ ಉದಾಹರಿಸಿದ ಆಗಮವಚನವು ಪ್ರಮಾಣವಾಗಿದೆ ಎಂದರ್ಥ.

ವಿವರಣೆ – ಚಕ್ರೇ ಎಂಬ ಪ್ರಯೋಗವು ಹೇಗೆ ಕೂಡುತ್ತದೆ ಎಂಬುದನ್ನು ಸ್ವರಸವಾಗಿ ಇಲ್ಲಿ ಉಪಪಾದನೆ ಮಾಡಿದ್ದಾರೆ. ಇದು ಆತ್ಮನೇ ಪದಿಯ ಲಿಟ್‌ಲಕಾರ. ವ್ಯಾಕರಣದ ನಿಯಮದಂತೆ ಕ್ರಿಯಾ-ಫಲವು ಕರ್ತೃವಿನಲ್ಲಿ ಇದ್ದಾಗ ಮಾತ್ರ ಆತ್ಮನೇ ಪದಿ ಪ್ರಯೋಗವನ್ನು ಮಾಡಬೇಕು. ಪ್ರಕೃತ ಶಾಸ್ತ್ರರಚನೆ ಎಂಬ ಕ್ರಿಯೆಯಿಂದ ಯಾವ ಫಲವು ದೊರೆಯುತ್ತದೋ ಅದು ಗ್ರಂಥಕರ್ತೃಗಳಾದ ವೇದವ್ಯಾಸ-ದೇವರಲ್ಲೇ ಇರಬೇಕು. ಆದರೆ ಅವರು ಕೃತಕೃತ್ಯರು. ಅವರಿಗೆ ದೊರೆಯಬೇಕಾದ ಪ್ರಯೋಜನ ಯಾವುದೂ ಇಲ್ಲ. ಹೀಗಿರುವಾಗ ಆತ್ಮನೇಪದಿಪ್ರಯೋಗವನ್ನು ಹೇಗೆ ಮಾಡಿದರು?

ಉತ್ತರ ಹೀಗಿದೆ – ವೇದವ್ಯಾಸದೇವರಿಗೆ ಈ ಗ್ರಂಥರಚನೆಯಿಂದ ಯಾವುದೇ ಪ್ರಯೋಜನವಿಲ್ಲ ಎಂಬುದರಲ್ಲಿ ಸಂಶಯವಿಲ್ಲ. ಆದರೆ, ಉಳಿದೆಲ್ಲ ಸಜ್ಜನರಿಗೆ ಇದರಿಂದ ಪರಮಲಾಭವಿದೆ. ಅವರಿಗೆ ದೊರಕುವ ಪ್ರಯೋಜನವನ್ನೇ ತಮ್ಮದು ಎಂದು ವೇದವ್ಯಾಸದೇವರು ಭಾವಿಸಿದ್ದಾರೆ. ಲೋಕದಲ್ಲೂ ಕೂಡ ಕೆಲವೆಡೆ ತಮಗೇನೂ ಪ್ರಯೋಜನವಿಲ್ಲದಿದ್ದರೂ ಮತ್ತೊಬ್ಬರ ಪ್ರಯೋಜನವನ್ನೇ ತಮ್ಮ ಪ್ರಯೋಜನವೆಂದು ತಿಳಿದು ಪ್ರವೃತ್ತಿಮಾಡುವುದು ಕಂಡಿದೆ. ಈ ವಿಷಯವನ್ನು ತಿಳಿಸುವುದಕ್ಕಾಗಿ ಚಕ್ರೇ ಎಂಬ ಆತ್ಮನೇಪದಪ್ರಯೋಗವನ್ನು ಮಾಡಿರುತ್ತಾರೆ.

## ಎಲ್ಲಾ ಆಶಂಕೆಗಳಿಗೆ ಉತ್ತರ

ವಾಕ್ಯಾರ್ಥಚಂದ್ರಿಕಾ – ಅತ್ರ 'ಕೃತಕೃತ್ಯೋऽಪಿ ಹರಿಃ' ಇತ್ಯನುವಾದೇನ ಪೂರ್ವಪಕ್ಷ್ಯಭಿ-ಪ್ರೇತಕೃತಕೃತ್ಯತ್ವಹೇತೋರಪ್ರಯೋಜಕತ್ವಸ್ಯ, 'ಪ್ರಾದುರ್ಭೂತಃ' ಇತಿ ಪ್ರಾದುರ್ಭಾವಾಭಿಧಾನೇನ ಜನನಹೇತೋರಸಿದ್ಧೇಶ್ಚ ಸೂಚನಾತ್; 'ವಿರಿಂಚಭವಪೂರ್ವಕೈಃ' ಇತಿ ಸೂಚಿತಕೃಪಾಯಾಃ, 'ಅರ್ಥಿತಃ' ಇತ್ಯುಕ್ತಪ್ರಾರ್ಥನಸ್ಯ ಚ ಪ್ರಾದುರ್ಭಾವಶಾಸ್ತ್ರಪ್ರಣಯನಪ್ರಯೋಜಕತ್ವಸ್ಯ ಅಭಿಪ್ರೇತ-ತಯಾ, ಯುಕ್ತಃ ಶಂಕಾಪರಿಹಾರ ಇತ್ಯಭಿಪ್ರೇತ್ಯ ತಥಾ ಅನ್ವಯಂ ದರ್ಶಯನ್ನೇವ ಅಂಶವಿಶೇಷ-ಪ್ರಯೋಜನಂ ದರ್ಶಯತಿ – ಅತ್ರೇತಿ ॥

'ವ್ಯಾಸಃ ನ ಶಾಸ್ತ್ರಪ್ರಣೇತಾ ಭವಿತುಮರ್ಹತಿ ಕೃತಕೃತ್ಯತ್ವಾತ್' ಎಂಬ ಅನುಮಾನದಲ್ಲಿ ಕೃತ-ಕೃತ್ಯತ್ವ ಎಂಬ ಹೇತುವಿರಲಿ ಆದರೂ ಕೂಡ ಶಾಸ್ತ್ರಪ್ರಣೇತೃತ್ವವೇ ಬರುತ್ತದೆ ಎಂಬುದಾಗಿ ಕೃತಕೃತ್ಯ-







ಹೇತುವಿಗೆ ಅಪ್ರಯೋಜಕತ್ವವನ್ನು ಹೇಳಿದಂತಾಯಿತು. ಪ್ರಾದುರ್ಭೂತಃ ಎಂದು ಹೇಳಿದ್ದರಿಂದ ಜನನ-ಹೇತುವಿಗೆ ಅಸಿದ್ಧಿಯನ್ನು ಹೇಳಿದಂತಾಯಿತು. 'ವೇದವ್ಯಾಸಃ ನ ನಾರಾಯಣಃ ಜನ್ಮವತ್ವಾತ್' ಎಂಬ ಅನುಮಾನಕ್ಕೆ ಸ್ವರೂಪಾಸಿದ್ಧಿಯು ಬರುತ್ತದೆ. 'ವಿರಿಂಚಭವಪೂರ್ವಕೈಃ' ಎಂಬುದಾಗಿ ಬ್ರಹ್ಮಾದಿಗಳ ಹೆಸರನ್ನು ಹೇಳಿದ್ದರಿಂದಲೇ ಅವರ ವಿಷಯದಲ್ಲಿ ಭಗವಂತನಿಗೆ ಕೃಪೆಯಿದೆಯೆಂದು ಹೇಳಿದಂತಾಯಿತು. 'ಅರ್ಥಿತಃ' ಎಂದು ಹೇಳಲ್ಪಟ್ಟ ಪ್ರಾರ್ಥನೆಯು ಶಾಸ್ತ್ರಪ್ರಣಯನಕ್ಕೆ ಪ್ರಯೋಜಕವಾಗಿದೆ. 'ವಿರಿಂಚಿಭವ-ಪೂರ್ವಕೈಃ' ಎಂದು ಸೂಚಿತವಾದ ಕೃಪೆಯು ಪ್ರಾದುರ್ಭಾವಕ್ಕೆ ಪ್ರಯೋಜಕವಾಗಿದೆ. ಆದ್ದರಿಂದ ಹಿಂದಿನ ಎಲ್ಲಾ ಆಶಂಕೆಗಳನ್ನು ಪರಿಹಾರ ಮಾಡಿದಂತಾಯಿತು. ಇದರಂತೆ ಅನುವ್ಯಾಖ್ಯಾನಶ್ಲೋಕದಲ್ಲಿ ಅನ್ವಯವನ್ನು ತೋರಿಸುವ ಮೂಲಕ ಚಕ್ರೇ ಎಂಬಲ್ಲಿರುವ ಆತ್ಮನೇಪದಪ್ರಯೋಗವೆಂಬ ಅಂಶವಿಶೇಷ ಪ್ರಯೋಜನವನ್ನು 'ಅತ್ರ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

ಹಿಂದೆ ಪೂರ್ವಪಕ್ಷಿಯು ಹೀಗೆ ಅನುಮಾನ ಮಾಡಿದ್ದನು – ನಾರಾಯಣಃ ನ ಬ್ರಹ್ಮ-ಮೀಮಾಂಸಾಶಾಸ್ತ್ರಕರ್ತಾ ಕೃತಕೃತ್ಯತ್ವಾತ್ ಎಂದು. ಇಲ್ಲಿರುವ ಕೃತಕೃತ್ಯತ್ವಹೇತುವು ಅಪ್ರಯೋಜಕವಾಗಿದೆ ಎಂಬುದನ್ನು ಕೃತಕೃತ್ಯೋऽಪಿ ಹರಿಃ' ಎಂಬ ವಾಕ್ಯದಿಂದ ಸಮರ್ಥಿಸಿದ್ದಾರೆ. ಮತ್ತು ಹಿಂದೆ ಪೂರ್ವ-ಪಕ್ಷಿಯು 'ನಾರಾಯಣಃ ವ್ಯಾಸಃ ನ ಭವತಿ ಜನನವತ್ವಾತ್' ಎಂಬ ಮತ್ತೊಂದು ಅನುಮಾನವನ್ನು ಪ್ರಯೋಗಮಾಡಿದ್ದನು. ಈ ಅನುಮಾನದಲ್ಲಿ ಹೇತ್ವಸಿದ್ಧಿಯನ್ನು ಪ್ರಾದುರ್ಭೂತಃ ಎಂಬುದರಿಂದ ಪರಿ-ಹರಿಸಿದ್ದಾರೆ. ವಿರಿಂಚಭವಪೂರ್ವಕೈಃ ಎಂಬುದರಿಂದ ನಾರಾಯಣನಿಗೆ ವಿರಿಂಚಾದಿಗಳಲ್ಲಿರುವ ಕೃಪೆಯನ್ನು ತಿಳಿಸಿದ್ದಾರೆ. 'ಅರ್ಥಿತಃ' ಎಂಬ ಪದಪ್ರಯೋಗದಿಂದ ಅವತಾರಕ್ಕೆ ಪ್ರಾರ್ಥನೆಯೇ ಕಾರಣ ಎಂಬುದನ್ನು ತಿಳಿಸಿದ್ದಾರೆ. ಆದ್ದರಿಂದ ಕೃಪೆಯು ಪ್ರಾದುರ್ಭಾವಕ್ಕೆ ಕಾರಣವಾಗಿದೆ; ಪ್ರಾರ್ಥನೆಯು ಶಾಸ್ತ್ರರಚನೆಗೆ ಕಾರಣವಾಗಿದೆ ಎಂದು ಹೇಳಿದಂತಾಯಿತು. ಆದ್ದರಿಂದ ಹಿಂದೆ ಮಾಡಿದ ಎಲ್ಲಾ ಆಶಂಕೆಗಳೂ ಪರಿಹಾರವಾದವು. ಈ ಅಭಿಪ್ರಾಯದಿಂದ ಅನ್ವಯವನ್ನು ತೋರಿಸುವ ಮೂಲಕ ಶ್ಲೋಕದಲ್ಲಿರುವ ಕೆಲವು ಅಂಶಗಳ ವೈಶಿಷ್ಟ್ಯವನ್ನು ಉಪಪಾದನೆ ಮಾಡಲು 'ಅತ್ರ' ಇತ್ಯಾದಿ ಗ್ರಂಥವು ಹೊರಟಿದೆ.

ವಿಶೇಷವಿವರಣೆ - ಅಂಶವಿಶೇಷಪ್ರಯೋಜನ ಎಂಬ ಪದಕ್ಕೆ 'ಚಕ್ರೇ ಎಂಬ ಆತ್ಮನೇಪದಪ್ರಯೋಗದ ಪ್ರಯೋಜನವನ್ನು' ಎಂಬ ಅರ್ಥವನ್ನೇ ವಿವಕ್ಷಿಸಬೇಕು. ಏಕೆಂದರೆ ಅತ್ರ ಇತ್ಯಾದಿ ವಾಕ್ಯವನ್ನು ಗಮನಿಸಿದಾಗ ಉಳಿದೆಲ್ಲ ಅರ್ಥವನ್ನು ಹೇಳಿದ್ದಾಗಿದೆ. ಆತ್ಮನೇ ಪದಪ್ರಯೋಗವನ್ನು ಮಾತ್ರ ಹೇಳಿರುವುದಿಲ್ಲ. ಆದ್ದರಿಂದ ಇದನ್ನೇ ಈಗ ಅತ್ರ ಎಂಬ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆಂದು ತಿಳಿಯಬೇಕು.





## ಪರಪ್ರಯೋಜನವು ಕೂಡ ಸ್ವಾತ್ಮಗಾಮಿಯಾಗಿದೆ

ವಾಕ್ಯಾರ್ಥಚಂದ್ರಿಕಾ– ಸ್ವಪ್ರಯೋಜನಶೂನ್ಯಾನಾಮಪಿ ಕೃಪಾಪ್ರಾರ್ಥನಾಭ್ಯಾಂ ಪ್ರವೃತ್ತಿಂ ನಿದರ್ಶಯತಿ – ದೃಶ್ಯಂತೇ ಹೀತಿ ॥ ನನು ಪರಪ್ರಯೋಜನೋದ್ದೇಶೇನ ಭಗವತಃ ಪ್ರವೃತ್ತೌ 'ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ' ಇತಿ (ಸ್ವರಿತೇತೋ ಞಿತಶ್ಚ ಧಾತೋರಾತ್ಮನೇಪದಂ ಸ್ಯಾತ್ । ಕರ್ತಾರಮಭಿಪ್ರೈತಿ ಗಚ್ಛತಿ ಕರ್ತ್ರಭಿಪ್ರಾಯಂ ತಸ್ಮಿನ್) ಕರ್ತೃಗಾಮಿಕ್ರಿಯಾಫಲನಿಮಿತ್ತಕಾತ್ಮನೇಪದಪ್ರಯೋಗೋಽನುಪಪನ್ನ ಇತ್ಯತಃ, ಕೃಪಾಪಾರವಶ್ಯಾದಿನಾ ಕರ್ತುಃ ಪರಪ್ರಯೋಜನಸ್ಯಾಪಿ ಸ್ವಾತ್ಮಗಾಮಿತ್ವಾನುಸಂಧಾನಜ್ಞಾಪಕತ್ವಾತ್ ತಸ್ಯ ನಾನುಪಪತ್ತಿಃ, ಇತ್ಯಾಶಯೇನಾಹ – ಅತ ಏವೇತಿ ॥ ಅಂಶಾಂತರಪ್ರಯೋಜನಂ ದರ್ಶಯತಿ – ಪರೇತಿ ॥

ಸ್ವಪ್ರಯೋಜನವಿಲ್ಲದಿದ್ದರೂ ಕೂಡ ಕೃಪೆ ಹಾಗೂ ಪ್ರಾರ್ಥನೆಗಳಿಂದ ಪ್ರವೃತ್ತಿ ಮಾಡುವುದು ಕಂಡಿದೆ. ಈ ವಿಷಯದಲ್ಲಿ ಉದಾಹರಣೆಯನ್ನು 'ದೃಶ್ಯಂತೇ ಹಿ'; ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

ಪ್ರಶ್ನೆ – ಪರಪ್ರಯೋಜನೋದ್ದೇಶದಿಂದ ಭಗವಂತನು ಪ್ರವೃತ್ತಿಯನ್ನು ಮಾಡುತ್ತಾನೆ. ಆದ್ದರಿಂದ 'ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ' ಎಂಬ ಸೂತ್ರದಿಂದ ಕ್ರಿಯಾಫಲವು ಕರ್ತೃಗಾಮಿಯಾದಾಗ ತನ್ನಿಮಿತ್ತಕವಾಗಿ ಆತ್ಮನೇ ಪದಪ್ರಯೋಗವು ಅನುಪಪನ್ನವಾಗುತ್ತದಲ್ಲವೇ?

ಉತ್ತರ – ಹೌದು; ಆದರೆ ಕೃಪಾಪಾರವಶ್ಯದಿಂದ ಕರ್ತೃಗಳಾದ ವೇದವ್ಯಾಸದೇವರು ಪರಪ್ರಯೋಜನವನ್ನೇ ಸ್ವಾತ್ಮಗಾಮಿಯೆಂಬುದಾಗಿ ತಿಳಿದಿದ್ದಾರೆ. ಆದ್ದರಿಂದ ಕ್ರಿಯಾಫಲವು ಸ್ವಾತ್ಮಗಾಮಿಯಾಗಿರುವುದರಿಂದ ಆತ್ಮನೇಪದಪ್ರಯೋಗವು ಅನುಪನ್ನವಾಗುವುದಿಲ್ಲ. ಈ ಅಭಿಪ್ರಾಯದಿಂದ 'ಅತ ಏವ' ಎಂಬ ಗ್ರಂಥವು ಹೊರಟಿದೆ. 'ಪರವಿದ್ಯಾಖ್ಯಂ' ಎಂಬುದಾಗಿ ಅನುವಾದ ಮಾಡಿ 'ಅನುತ್ತಮಂ ಶಾಸ್ತ್ರಂ' ಎಂಬ ವ್ಯಾಖ್ಯಾನವೆಂಬ ಮತ್ತೊಂದು ಅಂಶದ ಪ್ರಯೋಜನವನ್ನು 'ಪರ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

## ಅನುತ್ತಮಂ ಶಾಸ್ತ್ರಂ ಎಂಬುದು ಹೇಗೆ ವ್ಯಾಖ್ಯಾನವಾಗುತ್ತದೆ.

ವಾಕ್ಯಾರ್ಥಚಂದ್ರಿಕಾ– 'ಅನುತ್ತಮಮ್' ಇತ್ಯಸ್ಯ ನ ಪರಶಬ್ದವ್ಯಾಖ್ಯಾನತ್ವಂ ವಿರುದ್ಧಾರ್ಥತ್ವಾತ್ । ನಾಪಿ ಭಾವಸಾಧನಶಾಸ್ತ್ರಶಬ್ದಸ್ಯ ಕರಣಸಾಧನವಿದ್ಯಾಶಬ್ದವ್ಯಾಖ್ಯಾನತ್ವಂ ಯುಕ್ತಮ್, ಇತ್ಯತ ಆಹ – ನಾಸ್ತೀತ್ಯಾದಿನಾ ॥ ಯದ್ವಾ, ಪರವಿದ್ಯಾಶಬ್ದವ್ಯಾಖ್ಯಾನಾರ್ಥಂ ಪ್ರವೃತ್ತೇ 'ಅನುತ್ತಮಂ

ಶಾಸ್ತ್ರಮ್' ಇತ್ಯತ್ರ ವಕ್ಷ್ಯಮಾಣಮನುಪಪತ್ತಿಪರಿಹಾರಕತ್ವಂ ಯದಭಿಪ್ರೇತಂ ತದುಪಯುಕ್ತತಯಾ ವ್ಯಾಖ್ಯಾನಮಿದಮ್ ಇತಿ ದ್ರಷ್ಟವ್ಯಮ್ ।

ಪರಶಬ್ದಕ್ಕೆ ಉತ್ತಮ ಎಂದರ್ಥ. ಆದರೆ ಅನುತ್ತಮ ಎಂಬುದಾಗಿ ಅನುವ್ಯಾಖ್ಯಾನಶ್ಲೋಕದಲ್ಲಿ ವಿರುದ್ಧವಾದ ಅರ್ಥವನ್ನು ಹೇಳುತ್ತಿದ್ದಾರೆ. ಮತ್ತು ವಿದ್ಯಾಶಬ್ದಕ್ಕೆ ಶಾಸ್ತ್ರ ಎಂಬ ಅರ್ಥವು ಕೂಡ ವಿರುದ್ಧವಾಗಿದೆ. ಏಕೆಂದರೆ ವಿದ್ಯಾಶಬ್ದವು ಕರಣಸಾಧನದಲ್ಲಿ ಪ್ರಯುಕ್ತವಾಗಿದೆ. ಶಾಸ್ತ್ರಶಬ್ದವು ಭಾವ-ಸಾಧನ ಉಳ್ಳದ್ದಾಗಿದೆ. ಆದ್ದರಿಂದ 'ಪರವಿದ್ಯಾಖ್ಯಂ' ಎಂದು ಅನುವಾದ ಮಾಡಿ 'ಅನುತ್ತಮಂ ಶಾಸ್ತ್ರಂ' ಎಂಬ ವ್ಯಾಖ್ಯಾನವು ಹೇಗೆ ಸಾಧ್ಯವಾಗುತ್ತದೆ? ಈ ಪ್ರಶ್ನೆಗೆ 'ನಾಸ್ತಿ' ಎಂಬುದರಿಂದ ಉತ್ತರಿಸಿದ್ದಾರೆ. ನ ಉತ್ತಮಂ ಅನುತ್ತಮಂ ಎಂಬ ಅರ್ಥವನ್ನು ಇಲ್ಲಿ ವಿವಕ್ಷಿಸಬಾರದು. 'ನ ವಿದ್ಯತೇ ಉತ್ತಮಂ ಯಸ್ಮಾತ್ ತತ್ ಅನುತ್ತಮಂ' ಎಂಬರ್ಥವನ್ನು ವಿವಕ್ಷಿಸಿದಾಗ ಪರಶಬ್ದಕ್ಕೆ ಅನುತ್ತಮಂ ಎಂಬುದು ವ್ಯಾಖ್ಯಾನ-ವಾಗುತ್ತದೆ. ಅದರಂತೆ 'ಯಥಾಸ್ಥಿತಂ ಪ್ರತಿಪಾದ್ಯತೇ ತತ್ವಂ ಅನೇನೇತಿ ಶಾಸ್ತ್ರಮ್' ಎಂಬ ವ್ಯುತ್ಪತ್ತಿಯಿಂದ ಶಾಸ್ತ್ರಶಬ್ದವು ಕರಣಸಾಧನವೇ ಆಗಿದೆ.

ಅಥವಾ ಮತ್ತೊಂದು ಬಗೆಯಲ್ಲಿ ಉತ್ತರವನ್ನು ಹೀಗೆ ತಿಳಿಯಬೇಕು – ಪರವಿದ್ಯಾಶಬ್ದದ ವ್ಯಾಖ್ಯಾನಕ್ಕೋಸ್ಕರ ಅನುತ್ತಮಂ ಶಾಸ್ತ್ರಮ್ ಎಂಬುದು ಪ್ರವೃತ್ತವಾಗಿದೆ. ಮುಂದೆ 'ಇದಮುಕ್ತಂ ಭವತಿ' ಎಂಬುದಾಗಿ ಅನೇಕ ಅನುಪಪತ್ತಿಗಳನ್ನು ಆಕ್ಷೇಪ ಮಾಡಿ ಇದರಿಂದ ಪರಿಹಾರ ಮಾಡುತ್ತಾರೆ. ಅದಕ್ಕೆ ಉಪಯೋಗವಾಗುವ ರೀತಿಯಲ್ಲಿ ಅನುತ್ತಮಂ ಶಾಸ್ತ್ರಂ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಅದು ಹೇಗೆ ಎಂಬುದು ಮುಂದಿನ ಮೂಲದಲ್ಲಿ ಸ್ಪಷ್ಟವಾಗುತ್ತದೆ.

## ರಸಘಟ್ಟ

## ಶ್ರೀಹರಿಯು ಸ್ವಭಾವತಃ ದಯಾಳು

ಕಾಶೀ– 'ಕೇವಲಮ್' ಇತಿ ಪರಪ್ರಾರ್ಥನವ್ಯವಚ್ಛೇದಃ । ತೈಸ್ತಥಾ ಪ್ರವೃತ್ತಮಾನೈಃ ಆತ್ಮಕೃಪಾಸ್ಪದೈಶ್ಚ ಬ್ರಹ್ಮಾದಿಭಿಃ ಅರ್ಥಿತಃ ಸ್ವತೋ ದಯಾಲುರ್ಹರಿಃ ಸುತರಾಮೇವ ಪ್ರವರ್ತಿತು-ಮರ್ಹತೀತ್ಯರ್ಥಃ । ಅತ್ಯಂತಕೃಪಾಪಾರವಶ್ಯಾತ್ ಇತಿ ಭಾವಃ । ಪರೇ ತು 'ಅರ್ಥಿತಃ' ಇತಿ ಪಾಠ-ಮುಪೇತ್ಯ 'ಕೃಪಾಪ್ರಾರ್ಥನಾಭ್ಯಾಮೇವ ಪ್ರವೃತ್ತಿಂ ನಿದರ್ಶಯತಿ' ಇತ್ಯವತಾರಯಂತಿ । ಹರೇರ-ತ್ಯಂತಕೃಪಾಪಾರವಶ್ಯಮತ್ರ ಕುತೋ ಲಭ್ಯತೇ? ಇತ್ಯತ ಆಹ ಅತ ಏವೇತಿ ॥

ಟೀಕೆಯಲ್ಲಿರುವ ಕೇವಲಮ್ ಎಂಬ ಶಬ್ದವು ಬೇರೆಯವರ ಪ್ರಾರ್ಥನೆಯಿಲ್ಲದಿದ್ದಾಗಲೂ ಕೂಡ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಕೇವಲ ಕೃಪೆಯಿಂದ ಪ್ರವೃತ್ತಿ ಮಾಡುತ್ತಾರೆ. ಲೋಕದಲ್ಲೇ ಹೀಗೆ ಕಂಡಿರುವಾಗ ಆತ್ಮಕೃಪಾಪಾತ್ರರಾದ ಬ್ರಹ್ಮರುದ್ರಾದಿಗಳು ಶ್ರೀಹರಿಯನ್ನು ಪ್ರಾರ್ಥನೆ ಮಾಡಿದ್ದಾರೆ. ಇಂತಹ ಶ್ರೀಹರಿಯು ಸ್ವಭಾವತಃ ದಯಾಳುವಾಗಿದ್ದಾನೆ. ಆದ್ದರಿಂದ ಸುತರಾಂ ಪ್ರವೃತ್ತಿ ಮಾಡುತ್ತಾನೆ ಎಂದು ತಿಳಿಯಬೇಕು. ಅತ್ಯಂತ ಕೃಪಾಪರವಶನಾಗಿರುವುದರಿಂದ ಈ ಶಾಸ್ತ್ರವನ್ನು ರಚನೆ ಮಾಡಿದ್ದಾನೆ ಎಂದಭಿಪ್ರಾಯ. ಕೆಲವರು ಅರ್ಥಿತಃ ಎಂಬ ಪಾಠವನ್ನು ಅನುಸರಿಸಿ ಭಗವಂತನ ಕೃಪೆ ಹಾಗೂ ಬ್ರಹ್ಮಾದಿಗಳ ಪ್ರಾರ್ಥನೆ ಇವೆರಡೂ ಕೂಡ ಶಾಸ್ತ್ರರಚನೆಗೆ ಹಿನ್ನೆಲೆ ಎಂದು ಅವತಾರಿಕೆ ನೀಡಿದ್ದಾರೆ. ಶ್ರೀಹರಿಯು ಅತ್ಯಂತ ಕೃಪಾಪರವಶನಾಗಿದ್ದಾನೆ ಎಂಬ ವಿಷಯದಲ್ಲಿ ಏನು ಆಧಾರ? ಎಂಬ ಪ್ರಶ್ನೆಗೆ 'ಅತ ಏವ' ಎಂದು ಉತ್ತರಿಸುತ್ತಿದ್ದಾರೆ.

## ಸುಧಾಪರಿಮಳಸಾರ

ಬ್ರಹ್ಮರುದ್ರಾದಿದೇವತೆಗಳು ಲೋಕದಲ್ಲಿ ತತ್ವಜ್ಞಾನವನ್ನು ಸ್ಥಾಪನೆ ಮಾಡುವುದಕ್ಕಾಗಿ ನಾರಾಯಣನನ್ನು ಕುರಿತು ಪ್ರಾರ್ಥನೆ ಮಾಡಿದರು. ಅವರ ಪ್ರಾರ್ಥನೆಯಂತೆ ತತ್ವಜ್ಞಾನಸ್ಥಾಪನೆಗಾಗಿ ಶ್ರೀಮನ್ನಾರಾಯಣನು ವೇದವ್ಯಾಸರೂಪದಿಂದ ಭೂಲೋಕದಲ್ಲಿ ಅವತರಿಸಿದನು. ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದನು. ಈ ಶಾಸ್ತ್ರರಚನೆಯಿಂದ ತನಗೆ ಆಗಬೇಕಾದ ಪ್ರಯೋಜನ ಏನೂ ಇಲ್ಲ. ಕೇವಲ ಸಜ್ಜನರ ಮೇಲಿನ ಕರುಣೆಯಿಂದಷ್ಟೇ ರಚನೆ ಮಾಡಿರುವನು. ಸಜ್ಜನರ ಪ್ರಯೋಜನವೇ ತನ್ನ ಪ್ರಯೋಜನವೆಂದು ಭಾವಿಸಿದನು. ಆದ್ದರಿಂದ ಈ ಶಾಸ್ತ್ರವು ಸರ್ವೋತ್ಕೃಷ್ಟವಾಗಿದೆ. ಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ.

## ಯಾವುದು ಪರವಿದ್ಯೆ?

**ಶ್ರೀಮನ್ನ್ಯಾಯಸುಧಾ– ಇದಮುಕ್ತಂ ಭವತಿ – 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' ಇತಿ ವಿದ್ಯಾದ್ವಯಮುದ್ದಿಶ್ಯ ತತ್ರ 'ಅಪರಃ' ಇತ್ಯಾದಿನಾ ಸಾಂಗಾನ್ ವೇದಾನ್ ಅಪರವಿದ್ಯಾತ್ವೇನೋಕ್ತ್ವಾ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಇತಿ ಪರವಿದ್ಯಾ ಪ್ರದರ್ಶಿತಾ । ಸಾ ತಾವದ್ವೇದಾದಿಶಾಸ್ತ್ರಪ್ರಕರಣಾತ್ ಪರಮಾಕ್ಷರಾಧಿಗತಿಕರಣತ್ವಲಿಂಗಾಚ್ಚ ಶಾಸ್ತ್ರಮೇವ ಭವಿತುಮರ್ಹತಿ**





**ಅನ್ಯಥಾ ಸಕೃದುಕ್ತವಿದ್ಯಾಶಬ್ದಸ್ಯ ಅನೇಕಾರ್ಥತ್ವಕಲ್ಪನಾಪ್ರಸಂಗಾಚ್ಚ । ಶಾಸ್ತ್ರಂ ಚಾಪ್ರಾಮಾಣಂ ಚೇತಿ ವಿಪ್ರತಿಷಿದ್ಧಮ್ । ತಸ್ಯ ಚ ಪರತ್ವಂ ನಾಮ 'ಅನ್ಯತ್ ನ ಸಂಭವತಿ' ಇತ್ಯನುತ್ತಮತ್ವಮೇವ । ತದಪಿ ಸನ್ನಿಧಾನಾತ್ ಪ್ರಮಾಣತ್ವೇನೈವ । ಶಬ್ದಾಂತರಸಮಭಿವ್ಯಾಹಾರವಶೇನ ಸಾಮಾನ್ಯಶಬ್ದಸ್ಯ ವಿಶೇಷಾರ್ಥಸ್ಯ ಕಲ್ಪನೀಯತ್ವಾತ್ ।**

**ತದ್ಯಥಾ 'ಪರಮಧಾರ್ಮಿಕಃ' ಇತ್ಯಭಿಹಿತೇ ಪರಮತ್ವಂ ಧರ್ಮೇಣ ಇತಿ ಜ್ಞಾಯತೇ । ತಚ್ಚ ಅನುತ್ತಮಂ ಶಾಸ್ತ್ರಮಿದಮೇವ ವಿವಕ್ಷಿತಮ್ । ನಿರ್ಣೀತವ್ಯಾನಾಮ್ ಋಗಾದಿಪದೋಪಲಕ್ಷಿತಾನಾಮ್ ಅಶೇಷಶಾಸ್ತ್ರಾಣಾಮ್ ಅಪರವಿದ್ಯಾತ್ವೇನೋಕ್ತತ್ವಾತ್ । ಅನ್ಯಸ್ಯ ಅಪ್ರಸಂಗಾತ್ ಪರತ್ವಾಸಂಭವಾಚ್ಚ । ಸಂಭವತಿ ತು ಅಸ್ಯ ಪರತ್ವಮನುಗ್ರಾಹಕತ್ವಾತ್ ।**

ಒಟ್ಟು ಅಭಿಪ್ರಾಯ ಹೀಗಿದೆ – 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' ಪರವಿದ್ಯೆ ಅಪರವಿದ್ಯೆ ಎಂಬುದಾಗಿ ವಿದ್ಯೆಗಳು ಎರಡು ವಿಧ' ಎಂಬುದಾಗಿ ಎರಡು ವಿದ್ಯೆಗಳನ್ನು ಉದ್ದೇಶಿಸಿ 'ತತ್ರಾಪರಾ ಋಗ್ವೇದೋ' ಇತ್ಯಾದಿ ವಾಕ್ಯದಿಂದ ಶಿಕ್ಷಾದಿ ಆರು ಅಂಗಗಳಿಂದ ಕೂಡಿದ ವೇದಗಳು ಅಪರವಿದ್ಯೆ ಎಂದು ಹೇಳಲಾಗಿದೆ. ಅನಂತರ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬ ವಾಕ್ಯದಿಂದ ಪರವಿದ್ಯೆಯನ್ನು ಹೇಳಲಾಗಿದೆ. ಆ ಪರವಿದ್ಯೆಯು ಯಾವುದು? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಉತ್ತರ ಹೀಗೆ ತಿಳಿಯಬೇಕು – ವೇದಾದಿ ಶಾಸ್ತ್ರಪ್ರಕರಣದಿಂದ ಮತ್ತು ಸರ್ವೋತ್ತಮವಾದ ಅಕ್ಷರಜ್ಞಾನಸಾಧನವೆಂಬ ಯುಕ್ತಿಯಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವೇ ಪರವಿದ್ಯೆ ಎನಿಸಿಕೊಳ್ಳಲು ಯೋಗ್ಯ -ವಾಗಿದೆ. ಇಲ್ಲದಿದ್ದರೆ ಒಮ್ಮೆ ಮಾತ್ರ ಪ್ರಯೋಗ ಮಾಡಲ್ಪಟ್ಟ ವಿದ್ಯಾ ಎಂಬ ಶಬ್ದಕ್ಕೆ ಬೇರೆ ಬೇರೆ ಅರ್ಥಗಳನ್ನು ಒಪ್ಪುವ ಪ್ರಸಂಗ ಬರುತ್ತದೆ.







ಮತ್ತು 'ಇದು ಶಾಸ್ತ್ರ' 'ಅಪ್ರಮಾಣ' ಇವೆರಡು ಮಾತುಗಳಲ್ಲಿ ಪರಸ್ಪರವಿರೋಧ ಬರುತ್ತದೆ. ಶಾಸ್ತ್ರವು 'ಪರ' ಎಂದರೆ ಬೇರೆ ಅರ್ಥವನ್ನು ವಿವಕ್ಷಿಸಲು ಸಾಧ್ಯವಿಲ್ಲದ ಕಾರಣ ಸರ್ವೋತ್ತಮವಾಗಿದೆ ಎಂಬರ್ಥವನ್ನೇ ವಿವಕ್ಷಿಸಬೇಕು. ಇಂಥ ಸರ್ವೋತ್ತಮತ್ವರೂಪವಾದ ಪರತ್ವವೂ ಕೂಡ ಪ್ರಮಾಣ ಎಂಬ ಶಬ್ದದ ಸನ್ನಿಧಾನವಿರುವ ಪ್ರಯುಕ್ತ ಪ್ರಾಮಾಣ್ಯಾತಿ-ಶಯರೂಪವೇ ಆಗುತ್ತದೆ. ಬೇರೆ ಶಬ್ದಗಳ ಪೂರ್ವಾಪರಸಂಬಂಧದಿಂದ ಸಾಮಾನ್ಯ-ವಾಚಕವಾದ ಶಬ್ದವು ವಿಶೇಷಾರ್ಥದಲ್ಲಿ ಪರ್ಯವಸಾನವಾಗುತ್ತದೆಂಬುದನ್ನು ಕಲ್ಪನೆ ಮಾಡಬೇಕು.

ಉದಾಹರಣೆ - 'ಪರಮಧಾರ್ಮಿಕಃ' ಎಂದು ಹೇಳುತ್ತಾರೆ. ಇದನ್ನು ಕೇಳಿದಾಗ ಧರ್ಮಾಚರಣೆಯನ್ನು ಉತ್ಕೃಷ್ಟವಾಗಿ ಆಚರಿಸುತ್ತಾನೆಂಬ ಅರ್ಥವು ತಿಳಿಯುತ್ತದೆ. ಇಲ್ಲಿ-ರುವ ಪರಮತ್ವವು ಧರ್ಮದ ಜೊತೆ ಅನ್ವಯ ಹೊಂದುತ್ತದೆ. ಪ್ರಕೃತ ಸರ್ವೋತ್ತಮವಾದ ಪ್ರಮಾಣವಾಗಿದೆ ಎಂಬ ಮಾತಲ್ಲೂ ಕೂಡ ಪ್ರಾಮಾಣ್ಯದಲ್ಲಿ ಸರ್ವೋತ್ತಮತ್ವವೇ ತಿಳಿಯುತ್ತದೆ. ಆ ಸರ್ವೋತ್ತಮವಾದ ಶಾಸ್ತ್ರವೆಂದರೆ ಬ್ರಹ್ಮಮೀಮಾಂಸಾಶಾಸ್ತ್ರವೇ ಆಗುತ್ತದೆ ಹೊರತು ಬೇರೆ ಶಾಸ್ತ್ರವಲ್ಲ. ಏಕೆಂದರೆ ನಿರ್ಣೇಯಗ್ರಂಥವೆನಿಸಿದ ಋಗ್ವೇದ ಮೊದಲಾದ ಪದಗಳಿಂದ ಉಪಲಕ್ಷಿತವಾದ ಸಕಲಶಾಸ್ತ್ರಗಳೆಲ್ಲವೂ ಅಪರವಿದ್ಯೆಯೆಂದು ಹೇಳಲಾಗಿದೆ. ಋಗಾದಿಶಾಸ್ತ್ರಗಳನ್ನು ಬಿಟ್ಟು ಬೇರೆ ಶಾಸ್ತ್ರಗಳಿಗೆ ಇಲ್ಲಿ ಸಂಗತಿಯೇ ಇರುವುದಿಲ್ಲ. ಮತ್ತು ಬೇರೆ ಶಾಸ್ತ್ರಗಳಲ್ಲಿ ಪರತ್ವವು ಕೂಡ ಅಸಂಭಾವಿತವಾಗಿದೆ. ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರತ್ವವು ಸಂಭಾವಿತವಾಗಿದೆ. ಏಕೆಂದರೆ ವೇದಾದಿಶಾಸ್ತ್ರಗಳಿಗೆ ಈ ಬ್ರಹ್ಮಮೀಮಾಂಸಾ-ಶಾಸ್ತ್ರವು ಅನುಗ್ರಾಹಕವಾಗಿದೆ.

## ಆಥರ್ವಣದಲ್ಲಿ ಏನು ಹೇಳಿದೆ?

**ಪರಿಮಳ–** ನನು ಏತಾವತಾ ವಿದ್ಯಾಶಬ್ದಃ ಶಾಸ್ತ್ರಪರಃ ಇತ್ಯತ್ರ ನ ನಿಯಾಮಕಮುಕ್ತಮ್ ಇತ್ಯತ ಆಹ – ಇದಮುಕ್ತಂ ಭವತಿ ಇತಿ ॥ 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ,





ತತ್ರ ಅಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಣವೇದಃ ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋಜ್ಯೋತಿಷಮ್ ಇತಿ । ಅಥ ಪರೇ'ತ್ಯಾದಿ ಪಾಠಕ್ರಮಃ । 'ಅಪರೋಕ್ಷಜ್ಞಾನಂ ಪರವಿದ್ಯಾಶಬ್ದಾರ್ಥ ಇತಿ ವಾದಿಭಿರುಕ್ತಮಸತ್' ಇತಿ ಭಾವೇನೋಕ್ತಂ – ವೇದಾದಿಶಾಸ್ತ್ರೇತಿ ॥ ಯುಕ್ತಿಸ್ತು ಚಂದ್ರಿಕಾಯಾಮ್ ಉಕ್ತಾ । ವಕ್ತಿ ಚಾತ್ರಾಪಿ ಲೇಶತಃ ।

'ಚಕ್ರೇ ಶಾಸ್ತ್ರಮನುತ್ತಮಮ್' ಎಂದು ಹೇಳಿದ ಮಾತ್ರದಿಂದ ವಿದ್ಯಾಶಬ್ದವು ಶಾಸ್ತ್ರಪರವಾಗಿದೆ ಎಂಬ ವಿಷಯದಲ್ಲಿ ಯಾವುದೇ ನಿಯಾಮಕಪ್ರಮಾಣವಿಲ್ಲ? ಈ ಪ್ರಶ್ನೆಗೆ ಇದಮುಕ್ತಂ ಭವತಿ' ಎಂಬುದರಿಂದ ಉತ್ತರಿಸಿದ್ದಾರೆ. ಉಪನಿಷತ್ತಿನಲ್ಲಿ ಪ್ರಾಪ್ತವಾದ ಪಾಠಕ್ರಮ ಹೀಗಿದೆ – 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ, ತತ್ರ ಅಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಣವೇದಃ ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋಜ್ಯೋತಿಷಮ್ ಇತಿ । ಅಥ ಪರಾ' ಒಟ್ಟು ಎರಡು ವಿದ್ಯೆಗಳನ್ನು ತಿಳಿಯಬೇಕು. ಪರವಿದ್ಯೆ ಅಪರವಿದ್ಯೆ ಎಂದು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದ, ಜ್ಯೋತಿಷ ಇವು ಅಪರವಿದ್ಯೆ ಎನಿಸುತ್ತದೆ - ಎಂದು. ಅಪರೋಕ್ಷಜ್ಞಾನವು ಪರವಿದ್ಯೆ ಎಂಬ ವಾದವು ತಪ್ಪು ಎಂಬುದನ್ನು ತಿಳಿಸಲು ವೇದಾದಿಶಾಸ್ತ್ರಮ್ ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಈ ವಿಷಯದಲ್ಲಿ ಯುಕ್ತಿಯನ್ನು ತಾತ್ಪರ್ಯಚಂದ್ರಿಕೆಯಲ್ಲಿ ತಿಳಿಸಿದ್ದಾರೆ. ಇಲ್ಲಿಯೂ ಕೂಡ ನ್ಯಾಯಸುಧಾಕಾರರು ಸಂಕ್ಷೇಪದಿಂದ ಈ ವಿಷಯವನ್ನು ಉಪಪಾದನೆ ಮಾಡಿದ್ದಾರೆ.

## ಪರವಿದ್ಯಾಶಬ್ದಕ್ಕೆ ಅನ್ಯಾರ್ಥ ಸಲ್ಲದು

ಪರಿಮಳ– ಅನ್ಯಥೇತಿ ॥ 'ಜ್ಞಾನಾರ್ಥತ್ವೇ' ಇತ್ಯರ್ಥಃ । ಸಕೃದುಕ್ತೇತಿ ॥ 'ದ್ವೇ ವಿದ್ಯೇ ವೇದಿತವ್ಯೇ' ಇತ್ಯತ್ರ ಸಕೃತ್ ಶ್ರುತೇತ್ಯರ್ಥಃ । ಪರೋಕ್ಷಜ್ಞಾನಮ್ ಅಪರವಿದ್ಯಾ । ಅತೋ ನಾನೇಕಾರ್ಥತ್ವಮ್ ಇತಿ ತು 'ತತ್ರ ಅಪರಾ' ಇತ್ಯಾದಿ ವಿರೋಧಾದಯುಕ್ತಮೇವೇತಿ ಭಾವಃ ।

ಅನ್ಯಥಾ ಎಂಬ ಪದಕ್ಕೆ ಪರವಿದ್ಯೆ ಎಂಬ ಶಬ್ದದಿಂದ ಅಪರೋಕ್ಷಜ್ಞಾನ ಅಥವಾ ವೇದಜನ್ಯಜ್ಞಾನ ಎಂಬರ್ಥವನ್ನು ವಿವಕ್ಷಿಸಿದರೆ ಎಂದರ್ಥ. 'ಸಕೃದುಕ್ತ' ಎಂಬುದರ ಅರ್ಥ ಹೀಗಿದೆ –





'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಾಕ್ಯದಲ್ಲಿ ಒಮ್ಮೆ ಮಾತ್ರ ಪ್ರಯೋಗಮಾಡಲ್ಪಟ್ಟದ್ದು ಎಂದರ್ಥ. ಪರೋಕ್ಷಜ್ಞಾನವು ಅಪರವಿದ್ಯೆ ಎಂದು ಹೇಳಿದ್ದಾರೆ. ಆದ್ದರಿಂದ ವಿದ್ಯಾಶಬ್ದಕ್ಕೆ ಒಂದೇ ಅರ್ಥ ಹೇಳಿದಂತಾಯಿತು. ಅನೇಕಾರ್ಥವನ್ನು ಹೇಳಿದಂತಾಗಲಿಲ್ಲ. ಈ ಪ್ರಶ್ನೆಗೆ 'ತತ್ರ ಅಪರಾ' ಇತ್ಯಾದಿ ವಾಕ್ಯದಿಂದ ವಿರೋಧ ಬರುತ್ತದೆಂದು ಉತ್ತರಿಸಲಾಗಿದೆ. ಆದ್ದರಿಂದ ಈ ಪ್ರಶ್ನೆಯು ಅಯುಕ್ತವೆಂದು ತಿಳಿಯಬೇಕು.

## ಪರಶಬ್ದಕ್ಕೆ ಸರ್ವೋತ್ತಮ ಎಂದೇ ಅರ್ಥ

ಪರಿಮಳ– ತಾವತಾ ಪ್ರಾಮಾಣ್ಯಂ ಸರ್ವೋತ್ತಮಪ್ರಾಮಾಣ್ಯಂ ವಾ ಕುತಃ । ಪರಶಬ್ದಸ್ಯ ಅನೇಕಾರ್ಥತ್ವಾತ್ ಇತ್ಯುಕ್ತೇರಿತ್ಯತ ಆಹ – ಶಾಸ್ತ್ರಂ ಚೇತಿ ॥ ಅನ್ಯತ್ ನ ಸಂಭವತಿ ಇತಿ ॥ ಅಪರತ್ವಪ್ರತಿದ್ವಂದ್ವಿತಯಾ ನಿರ್ದೇಶಾತ್ ಇತಿ ಭಾವಃ । ಪ್ರಮಾಣತ್ವೇನೈವ ತತ್ವಜ್ಞಾನಕರಣತ್ವೇನೈವ ಇತ್ಯರ್ಥಃ । ಸಾಮಾನ್ಯೇತಿ ॥ ಅನೇಕಾರ್ಥಸಾಧಾರಣಪರಶಬ್ದಾರ್ಥಸ್ಯ ಇತ್ಯರ್ಥಃ ।

ವಿದ್ಯಾಶಬ್ದಕ್ಕೆ ಶಾಸ್ತ್ರ ಎಂಬರ್ಥವನ್ನು ಒಪ್ಪೋಣ. ಅಂದ ಮಾತ್ರಕ್ಕೆ ಪ್ರಾಮಾಣ್ಯವು ಹೇಗೆ ಸಿದ್ಧವಾಗುತ್ತದೆ? ಮತ್ತು ಸರ್ವೋತ್ತಮಪ್ರಾಮಾಣ್ಯವು ಕೂಡ ಹೇಗೆ ಸಿದ್ಧವಾಗುತ್ತದೆ? ಏಕೆಂದರೆ ಪರಶಬ್ದಕ್ಕೆ ಅನೇಕಾರ್ಥಗಳು ಇರುತ್ತವೆ. ಈ ಪ್ರಶ್ನೆಗೆ ಉತ್ತರಿಸಲು 'ಶಾಸ್ತ್ರಂ ಚ' ಎಂಬ ವಾಕ್ಯವು ಹೊರಟಿದೆ.

'ಅನ್ಯನ್ನ ಸಂಭವತಿ' ಎಂಬುದಾಗಿ ಗ್ರಂಥದಲ್ಲಿ ಹೇಳಿದ್ದಾರೆ. ಅಪರಶಬ್ದಕ್ಕೆ ಪ್ರತಿದ್ವಂದ್ವಭಾವದಿಂದ ಪರಶಬ್ದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಪರಶಬ್ದಕ್ಕೆ ಅನುತ್ತಮ ಎಂಬರ್ಥವನ್ನು ಬಿಟ್ಟು ಬೇರೆ ಅರ್ಥಗಳು ಅಸಂಭಾವಿತಗಳಾಗುವವು ಎಂದಭಿಪ್ರಾಯ.

ಪ್ರಮಾಣತ್ವೇನೈವ ಎಂದರೆ ಯಥಾರ್ಥಜ್ಞಾನವನ್ನು ತಂದು ಕೊಡುವುದರಲ್ಲಿ ಉತ್ತಮತ್ವವು ಇರುವುದರಿಂದಲೇ ಎಂದರ್ಥ. ಸಾಮಾನ್ಯಶಬ್ದಸ್ಯ ಎಂದು ಮೂಲದಲ್ಲಿ ಹೇಳಿದ್ದಾರೆ. ಸಾಮಾನ್ಯವಾಗಿ ಅನೇಕಾರ್ಥಗಳ ವಾಚಕವಾದ ಪರ ಎಂಬ ಶಬ್ದಕ್ಕೆ ಎಂಬುದು ಇದರ ಅರ್ಥ.





## ಇದಮೇವ ಅನುತ್ತಮಮ್

**ಪರಿಮಳ–** ಕಿಂಚ ಇಯಂ ಪರವಿದ್ಯಾ ಇತ್ಯನೇನೋಕ್ತಶಂಕಾಂ ನಿರಾಹ – ತಚ್ಚೇತಿ ॥ ಇದಮೇವ = ಬ್ರಹ್ಮತಂತ್ರಮೇವ । ಅನ್ಯಸ್ಯ = ಕರ್ಮತಂತ್ರಾದೇಃ । ಅಕ್ಷರಾಖ್ಯಪರಬ್ರಹ್ಮಾಪ್ರತಿಪಾದಕತ್ವಾತ್ ಇತಿ ಭಾವಃ । ಪರತ್ವೇತಿ ॥ ಮುಕ್ತಿಹೇತುಜ್ಞಾನಜನಕತ್ವಾದಿತಿ ಭಾವಃ । ಅಸ್ಯ = ಬ್ರಹ್ಮತಂತ್ರಸ್ಯ ।

ಕಿಂಚ ಇಯಂ ಪರವಿದ್ಯಾಖ್ಯಾ' ಇತ್ಯಾದಿವಾಕ್ಯದಿಂದ ಈ ಶಾಸ್ತ್ರಕ್ಕೆ ಪರವಿದ್ಯಾ ಎಂಬ ಹೆಸರಿದೆ ಎಂಬಲ್ಲಿ ಯಾವುದೇ ಆಧಾರವಿಲ್ಲ? ಈ ಸಂಶಯವನ್ನು ಪರಿಹರಿಸಲು ತಚ್ಚ ಇತ್ಯಾದಿ ಗ್ರಂಥವು ಹೊರಟಿದೆ. ಇದಮೇವ ಎಂಬ ಶಬ್ದಕ್ಕೆ ಬ್ರಹ್ಮಮೀಮಾಂಸಾಶಾಸ್ತ್ರವೇ ಎಂದರ್ಥ. ಅಸ್ಯ ಎಂಬ ಪದಕ್ಕೆ ಕರ್ಮತಂತ್ರ ಮೊದಲಾದವುಗಳಿಗೆ ಎಂದರ್ಥ.

ಅಕ್ಷರರೂಪನಾದ ಪರಬ್ರಹ್ಮನನ್ನು ಪ್ರತಿಪಾದನೆ ಮಾಡದ ಕಾರಣ ಪರವಿದ್ಯೆ ಎನಿಸುವುದಿಲ್ಲ ಎಂಬ ಅಭಿಪ್ರಾಯವನ್ನು ತಿಳಿಯಬೇಕು. ಮತ್ತು ಮೋಕ್ಷಜ್ಞಾನವನ್ನು ಹುಟ್ಟಿಸುವುದಿಲ್ಲವಾದ್ದರಿಂದ ಪರವಿದ್ಯೆ ಎಂದು ಕರೆಸಿಕೊಳ್ಳುವುದಿಲ್ಲ ಎಂದೂ ಕೂಡ ತಿಳಿಯಬೇಕು. 'ಅಸ್ಯ' ಎಂಬ ಪದಕ್ಕೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಎಂದರ್ಥ.

ವಿಶೇಷವಿಚಾರ– ಈ ಹಿಂದೆ ಚಕ್ರೇ ಶಾಸ್ತ್ರಮನುತ್ತಮಮ್ ಎಂಬುದಾಗಿ ಅನುತ್ತಮಶಾಸ್ತ್ರವನ್ನು ರಚನೆ ಮಾಡಿದನು ಎಂದು ಹೇಳಲಾಯಿತು. ಹೀಗೆ ಹೇಳಿದ ಮಾತ್ರಕ್ಕೆ ಬ್ರಹ್ಮಸೂತ್ರವು ಪರವಿದ್ಯೆ ಎಂದು ಸಮರ್ಥನೆ ಮಾಡಿದಂತಾಗುವುದಿಲ್ಲ. ಆದಕ್ಕಾಗಿ ಇದಮುಕ್ತಂ ಭವತಿ ಇತ್ಯಾದಿ ಗ್ರಂಥವು ಹೊರಟಿದೆ. ಬ್ರಹ್ಮಮೀಮಾಂಸಾಶಾಸ್ತ್ರವೇ ಪರವಿದ್ಯೆಯಾಗಿದೆ. ಉಳಿದ ಷಡಂಗಗಳಿಂದ ಕೂಡಿದ ಋಗಾದಿವೇದಗಳು ಅಪರವಿದ್ಯೆ ಆಗಿವೆ ಎಂಬುದನ್ನು ಅಥರ್ವಣೋಪನಿಷತ್ತು ಸ್ಪಷ್ಟಪಡಿಸಿದೆ.

ಕೆಲವು ವಾದಿಗಳು ಅಪರೋಕ್ಷಜ್ಞಾನವನ್ನೇ ಪರವಿದ್ಯೆ ಎನ್ನುತ್ತಾರೆ. ಅಂಥ ವಾದಿಗಳನ್ನೆಲ್ಲಾ ನಿರಾಕರಣೆ ಮಾಡಲು ವೇದಾದಿಶಾಸ್ತ್ರಪ್ರಕರಣಾತ್ ಇತ್ಯಾದಿ ವಾಕ್ಯಸಂದರ್ಭವು ಪ್ರವೃತ್ತವಾಗಿದೆ. ಇದರ ವಿವರಣೆಯನ್ನು ತಾತ್ಪರ್ಯಚಂದ್ರಿಕೆಯ ಅದೃಶ್ಯತ್ವಾಧಿಕರಣದಲ್ಲಿ ನೋಡಿ ತಿಳಿಯಬೇಕು.

ತಾತ್ಪರ್ಯಚಂದ್ರಿಕೆಯ ಅದೃಶ್ಯತ್ವಾಧಿಕರಣದಲ್ಲಿ ಪರವಿದ್ಯೆಯ ಬಗ್ಗೆ ಇತರವಾದಿಗಳ ಅಭಿ-

ಪ್ರಾಯವನ್ನು ಹೀಗೆ ನಿರಾಕರಣೆ ಮಾಡಲಾಗಿದೆ. ಹಾಗೂ ತಾತ್ಪರ್ಯಚಂದ್ರಿಕೆಯ ಟಿಪ್ಪಣಿಯಾದ ಪ್ರಕಾಶವ್ಯಾಖ್ಯಾನದಲ್ಲೂ ಕೂಡ ಇದರ ಬಗ್ಗೆ ಸ್ಪಷ್ಟಮಾಹಿತಿ ದೊರೆಯುತ್ತದೆ. ಅದು ಹೀಗೆ –

## ಮತ ತ್ರಯಗಳಲ್ಲಿ ಪರವಿದ್ಯಾ ವಿಚಾರ

## ತಾತ್ಪರ್ಯಚಂದ್ರಿಕಾ

ಸಿದ್ಧಾಂತ ಹೀಗಿದೆ - ಪರವಿದ್ಯೆಗೆ ವಿಷಯನಾದವನು ವಿಷ್ಣುವೇ ಅಗಿದ್ದಾನೆಂದು ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿ, ಸ್ಮೃತಿಗಳಿಂದ ಸಿದ್ಧವಾಗಿದೆ. ಮತ್ತು ಋಗ್ವೇದವೇ ಮೊದಲಾದ ವಿದ್ಯೆಗಳಿಂದ ವಿಷ್ಣುವು ವೇದ್ಯನಾಗಿದ್ದರೂ ಅವನು ಪರವಿದ್ಯೆಗೆ ವಿಷಯನಾಗುತ್ತಾನೆಂಬುದು ಯುಕ್ತವೇ ಆಗಿದೆ.

ಏಕೆಂದರೆ 'ಪ್ರವೃತ್ತಿಂ ಚ ನಿವೃತ್ತಂ ಚ ಯಥೈಕಂ ಕರ್ಮ ಕಥ್ಯತೇ । ಉಪಾಧಿಭೇದಾದ್ವಿದ್ಯಾಽಪಿ ತಥೈವೈಕಾ ಪರಾಽಪರಾ ॥' ಹೇಗೆ ಒಂದೇ ಕರ್ಮವು ಉಪಾಧಿಭೇದದಿಂದ ಪ್ರವೃತ್ತಿಕರ್ಮ ಹಾಗೂ ನಿವೃತ್ತಕರ್ಮವೆಂಬ ಪ್ರಭೇದವನ್ನು ಹೊಂದಿದೆಯೋ, ಅದೇ ರೀತಿಯಾಗಿ ಒಂದೇ ವಿದ್ಯೆಯು ಉಪಾಧಿ ಭೇದದಿಂದ ಪರವಿದ್ಯೆ ಹಾಗೂ ಅಪರವಿದ್ಯೆಯೆನಿಸುತ್ತದೆ.

ಯಾವರೀತಿಯಾಗಿ ಒಂದೇ ಕರ್ಮವು 'ನಿಷ್ಕಾಮಜ್ಞಾನಪೂರ್ವಕತ್ವ' ಎಂಬ ಉಪಾಧಿಯಿಂದ ನಿವೃತ್ತಕರ್ಮವೆಂದೂ ಸಕಾಮಜ್ಞಾನಪೂರ್ವಕತ್ವವೆಂಬ ಉಪಾಧಿಯಿಂದ ಪ್ರವೃತ್ತಕರ್ಮವೆಂದೂ 'ನಿಷ್ಕಾಮಂ ಜ್ಞಾನಪೂರ್ವಂ ಚ ನಿವೃತ್ತಮಿತಿ ಚೋಚ್ಯತೇ' ಇತ್ಯಾದಿ ಸ್ಮೃತಿಯಿಂದ ಕರೆಸಿಕೊಳ್ಳುತ್ತದೋ, ಅಥವಾ ಯಾವರೀತಿಯಾಗಿ ಒಂದೇ ಅನ್ನವು ಬೇರೆ ಬೇರೆ ಉಪಾಧಿಗಳಿಂದ ಪಥ್ಯವೂ ಅಪಥ್ಯವೂ ಆಗುತ್ತದೋ, (ಆರೋಗ್ಯಕ್ಕೆ ಹಿತಕರವಾದ ಪದಾರ್ಥಗಳನ್ನು ಅನ್ನದ ಜೊತೆಗೆ ಸೇರಿಸಿ ತಿಂದಾಗ ಅನ್ನವು ಪಥ್ಯವಾಗುತ್ತದೆ. ಆರೋಗ್ಯಕ್ಕೆ ಅಹಿತವಾದ ಪದಾರ್ಥಗಳನ್ನು ಅನ್ನದ ಜೊತೆಗೆ ಸೇರಿಸಿ ತಿಂದಾಗ ಆ ಅನ್ನವು ಅಪಥ್ಯವಾಗುತ್ತದೆ.) ಅದೇ ರೀತಿಯಾಗಿ ಋಗ್ವೇದವೇ ಮೊದಲಾದ ಒಂದೇ ವಿದ್ಯೆಯು ಸನ್ನ್ಯಾಯಗಳಿಂದ ಪ್ರಮಿತವಾದ ಬ್ರಹ್ಮವಿಷಯಕವಾದ ಶಕ್ತಿತಾತ್ಪರ್ಯವೆಂಬ ಉಪಾಧಿಯಿಂದ ಪರವಿದ್ಯೆ-ಯೆನಿಸುತ್ತದೆ. ಏಕೆಂದರೆ ಮೋಕ್ಷಕ್ಕೆಸಾಧನವಾದ ಯಥಾರ್ಥಜ್ಞಾನಕ್ಕೆ ಕಾರಣವಾಗಿರುವುದರಿಂದ. ಯಾವಾಗ ಋಗ್ವೇದಾದಿಗಳು ಸನ್ನ್ಯಾಯಗಳಿಗೆ ವಿಷಯವಾಗುವುದಿಲ್ಲವೋ, ಆವಾಗ ಅವೇ ಅಪರ-ವಿದ್ಯೆಯೆನಿಸುತ್ತವೆ. ಮೋಕ್ಷಕ್ಕೆ ಸಾಧನವಾದ ಯಥಾರ್ಥಜ್ಞಾನಕ್ಕೆ ಕಾರಣವಾಗದ್ದರಿಂದ.







ಇದನ್ನೇ ಆಥರ್ವಣೋಪನಿಷದ್ ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ -

'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ।
ತಾ ಏವ ಪರಮಾ ವಿದ್ಯಾ ವಿಷ್ಣೋಸ್ತು ವಾಚಕಾಃ॥'

ಋಗ್ವೇದಾದಿಗಳು ಯಾವಾಗ ವಿಷ್ಣುವನ್ನು ಪ್ರತಿಪಾದಿಸುವುದಿಲ್ಲವೋ, ಆವಾಗ ಅಪರವಿದ್ಯೆಯೆನಿಸುತ್ತದೆ. ಯಾವಾಗ ವಿಷ್ಣುವನ್ನು ಪ್ರತಿಪಾದಿಸುತ್ತದೋ, ಆವಾಗಲೇ ಪರವಿದ್ಯೆಯೆನಿಸುತ್ತದೆ ಎಂಬುದಾಗಿ.

ಅದ್ವೈತಿಗಳು ಪರಾಪರ ವಿದ್ಯೆಯ ಬಗ್ಗೆ ಹೀಗೆ ಹೇಳುತ್ತಾರೆ - ಋಗ್ವೇದಾದಿಗಳ ಖಿಲ ಭಾಗವೆನಿಸಿದ ಉಪನಿಷತ್ತುಗಳು ಪರವಿದ್ಯೆಯೆನಿಸುತ್ತದೆ. ಅವುಗಳ ಸನ್ನಿಧಾನದಿಂದ ಗೋಬಲೀವರ್ದನ್ಯಾಯದಿಂದ ಉಪನಿಷತ್ತನ್ನು ಬಿಟ್ಟು ಉಳಿದ ಋಗ್ವೇದಾದಿಗಳು ಅಂದರೆ ಮಂತ್ರಭಾಗವು ಅಪರವಿದ್ಯೆಯೆನಿಸುತ್ತದೆ. ಗೋಬಲೀವರ್ದನ್ಯಾಯದಲ್ಲಿ ಬಲಿವರ್ದ ಶಬ್ದವಿರುವುದರಿಂದ ಗೋ ಶಬ್ದಕ್ಕೆ ಕೇವಲ ಹಸುವೆಂದು ಅರ್ಥೈಸುವಂತೆ ಪರಶಬ್ದವು ಪ್ರತ್ಯೇಕವಾಗಿರುವುದರಿಂದ ಅಪರಶಬ್ದದಿಂದ ಉಪನಿಷತ್ತುಗಳನ್ನು ಬಿಟ್ಟು ಕೇವಲ ಋಗ್ವೇದಾದಿಗಳನ್ನು ವಿವಕ್ಷಿಸಬೇಕು.

ಇದು ತಪ್ಪು. "ಸರ್ವೇ ವೇದಾ ಯತ್ಪದಮಾಮನಂತಿ" ಇವೇ ಮೊದಲಾದ ಶ್ರುತಿಗಳು ಹಾಗೂ "ವೇದೈಶ್ಚ ಸರ್ವೈರಹಮೇವ ವೇದ್ಯಃ" ಮೊದಲಾದ ಸ್ಮೃತಿಗಳು ಬ್ರಹ್ಮನು ಸಕಲವೇದಗಳಿಂದ ವೇದ್ಯನಾಗಿದ್ದಾನೆಂದು ಪ್ರತಿಪಾದಿಸುತ್ತಿವೆ.

ಉಪನಿಷತ್ತುಗಳು ಪರವಿದ್ಯೆಯೆಂದು ಹೇಳಿದ್ದೇ ತಪ್ಪು. ಏಕೆಂದರೆ ಉಪನಿಷತ್ತಿನಲ್ಲಿ ಜ್ಞೇಯನಾದ ಶುದ್ಧಬ್ರಹ್ಮನನ್ನು ವಿಷಯೀಕರಿಸದ ಉಪಾಸನಾದಿಗಳನ್ನು ಹೇಳುವ ಅನೇಕ ವಾಕ್ಯಗಳು ಇರುತ್ತವೆ. ಶುದ್ಧಬ್ರಹ್ಮನನ್ನಷ್ಟೇ ಪ್ರತಿಪಾದಿಸುತ್ತಿದ್ದರೆ ಪರವಿದ್ಯೆಯೆಂದು ಹೇಳಬಹುದಿತ್ತು. ಮತ್ತು ಮಂತ್ರಭಾಗದಲ್ಲಿಯೂ ಜ್ಯೋತಿರಧಿಕರಣದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಅನೇಕ ಬ್ರಹ್ಮಪ್ರತಿಪಾದಕವಾದ ಭಾಗಗಳಿವೆಯೆಂದು ಕಾಣಸುತ್ತಿದೆ.

ರೂಪವು ಎರಡುವಿಧವಾಗಿದೆ. ನೀಲ ಮತ್ತು ಅನೀಲ ಎಂಬ ವಿರುದ್ಧಾರ್ಥ ಪ್ರತಿಪಾದಕ ವಾಕ್ಯದಲ್ಲಿ ಹೇಳಿದಂತೆ 'ಎರಡು ವಿದ್ಯೆಗಳನ್ನು ತಿಳಿಯಬೇಕು. ಪರವಿದ್ಯೆ ಅಪರವಿದ್ಯೆಯೆಂದು'. ಈ ವಾಕ್ಯದಲ್ಲಿಯೂ ಪರಾಪರಶಬ್ದಗಳಿಗೆ ಪರಸ್ಪರವಾಗಿ ವಿರುದ್ಧಾರ್ಥವೇ ಪ್ರತೀತವಾಗುತ್ತಿದೆ. ನೀಲ ಮತ್ತು ಅನೀಲವೆಂದು

ಹೇಳಿದಾಗ ನೀಲಪದಕ್ಕೆ ಅನೀಲದ ವಿಶೇಷರೂಪವನ್ನು ಹೇಳುತ್ತಿದೆಯೆಂದು ಯಾರೂ ವ್ಯಾಖ್ಯಾನಿಸುವುದಿಲ್ಲ. ಆದ್ದರಿಂದ ಪರವಿದ್ಯೆಯ ವಿಶೇಷ ಅಪರವಿದ್ಯೆ ಎಂದು ಹೇಳಲಾಗಿದು.

ಇದು ತಪ್ಪು. ಶ್ರುತಿಯಲ್ಲಿ ಋಗಾದಿಗಳನ್ನು ಅಪರವಿದ್ಯೆಯೆಂದು ಹೇಳಿದ್ದಾರೆ. ''ಯಯಾ ತದಕ್ಷರಮಧಿಗಮ್ಯತೇ'' ಎಂದೂ, ಮತ್ತು ''ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಮ್'' ಎಂಬುದಾಗಿಯೂ ಜ್ಞಾನಕ್ಕೆ ಕರಣವಾದದ್ದೇ ಪರವಿದ್ಯೆಯೆಂದು ಹೇಳಿರುವುದರಿಂದ ಪ್ರಕೃತ ವಿದ್ಯಾಶಬ್ದಕ್ಕೆ ಜ್ಞಾನವೆಂಬರ್ಥವನ್ನು ಹೇಳುವುದು ತಪ್ಪಾಗುತ್ತದೆ.

## ಪ್ರಕಾಶ

ಪರವಿದ್ಯೆಯೆಂದರೆ ''ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಿದ್ಯೆಯೆಂದರ್ಥ. ಯಾವ ವಿದ್ಯೆಯು ಮೋಕ್ಷಕ್ಕೆ ಸಾಧನವಾಗಿದೆಯೋ, ಅದೇ ಪರವಿದ್ಯೆಯೆನಿಸುತ್ತದೆ. ಈ ಪರವಿದ್ಯೆಗೆ ವಿಷ್ಣುವೇ ವಿಷಯನಾಗಿದ್ದಾನೆಂದು ಪ್ರಮಾಣಗಳಿಂದ ಸಿದ್ಧವಾಗಿವೆ - ''ತಮೇವಂ ವಿದ್ವಾನಮೃತ ಇಹ ಭವತಿ'' ''ತತ್ಕರ್ಮ ಹರಿತೋಷಂ ಯತ್ಸಾ ವಿದ್ಯಾ ತನ್ಮತಿರ್ಯಯಾ ।'' ''ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ । ತತ್ರ ಯೇ ವೇದಾ ಯಾನ್ಯಂಗಾನಿ ಯಾನಿ ಪ್ರತ್ಯಂಗಾನಿ ಸಾ ಪರಾ । ಅಥಾ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರಮಾತ್ಮಾ'' ಈ ಎಲ್ಲಾ ವಾಕ್ಯಗಳಿಂದ ಪರವಿದ್ಯೆಗೆ ವಿಷ್ಣುವೇ ವಿಷಯನಾಗಿದ್ದಾನೆಂದು ಸ್ಪಷ್ಟವಾಗುತ್ತದೆ.

ವಿಷ್ಣು ಪರವಿದ್ಯೆಗೆ ವಿಷಯನಾಗಿದ್ದಾನೆಂದು ಯಾವ ಪ್ರಮಾಣದಿಂದ ಹೇಳುತ್ತೀರಿ? ಎಂದರೆ ಋಗ್ವೇದಾದಿಗಳೇ ಪರವಿದ್ಯೆಯೆನಿಸಿವೆ. ಆದ್ದರಿಂದ ವಿಷ್ಣು ಪರವಿದ್ಯೆಗೂ ವಿಷಯನಾಗಿದ್ದಾನೆ ಎಂದು ಹೇಳುತ್ತೇವೆ.

ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿತಿ ಚೋಚ್ಯತೇ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ॥

ನಿಷ್ಕಾಮಜ್ಞಾನಪೂರ್ವಕವಾಗಿ ಮಾಡುವ ಕರ್ಮವು ನಿವೃತ್ತಕರ್ಮವೆನಿಸುತ್ತದೆ. ಹೀಗೆ ನಿವೃತ್ತಕರ್ಮವನ್ನು ಆಚರಿಸುವವರು ಬ್ರಹ್ಮನನ್ನು ಪಡೆಯುತ್ತಾನೆ ಎಂದು ವ್ಯಾಸಸ್ಮೃತಿಯಲ್ಲಿ ಹೇಳಲಾಗಿದೆ. ನಿಷ್ಕಾಮಕರ್ಮವೆಂದರೆ ಸ್ವರ್ಗಾದಿಫಲಗಳನ್ನು ಅಪೇಕ್ಷಿಪಡದೆ ಮಾಡಲ್ಪಡುವ ಕರ್ಮಗಳೆಂದರ್ಥ. ಶ್ಲೋಕದಲ್ಲಿರುವ ಕರ್ಮವೆಂಬ ಪದವು ಉಪಲಕ್ಷಣವಾಗಿದೆ.





ಅದ್ವೈತಿಗಳ ಭಾಷ್ಯದಲ್ಲಿ ಹೇಳಲ್ಪಟ್ಟ ಪರವಿದ್ಯಾ ಹಾಗೂ ಅಪರವಿದ್ಯೆಗಳ ಸ್ವರೂಪ ಹೀಗಿದೆ –

ಋಗ್ವೇದಾದಿಗಳು ಕರ್ಮಬೋಧಕಗಳಾಗಿವೆ. ಹೀಗಿರುವಾಗ ಅವುಗಳಿಗೆ ಬ್ರಹ್ಮಪರತ್ವವನ್ನು ಹೇಗೆ ಒಪ್ಪುತ್ತೀರಿ ? ಎಂದರೆ ವೇದದ ಏಕದೇಶಕ್ಕೆ ಕರ್ಮಪರತ್ವವನ್ನು ಒಪ್ಪುತ್ತೀರೋ? ಅಥವಾ ಸಮಸ್ತ-ವೇದಕ್ಕೂ ಕರ್ಮಪರತ್ವವನ್ನು ಒಪ್ಪುತ್ತೀರೋ? ಮೊದಲನೆಯ ಪಕ್ಷದಲ್ಲಿ 'ಉಪನಿಷತ್ಸ್ವಪಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಎರಡನೆಯ ಪಕ್ಷದಲ್ಲಿ 'ಮಂತ್ರೇಷು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ''ಜ್ಯೋತಿಶ್ಚರಣಾಭಿಧಾನಾತ್'' ಎಂಬ ಸೂತ್ರದಲ್ಲಿ ಸಿದ್ಧಾಂತಿಗಳು ತೋರಿಸಿರುವ ನ್ಯಾಯದಿಂದ ಮಂತ್ರ -ಭಾಗವೂ ಸಹ ಬ್ರಹ್ಮಪರವಾಗಿದೆಯೆಂಬುದನ್ನು ತಿಳಿಯಬೇಕು.

ಪರಶಬ್ದವು ವಿದ್ಯಾವಿಶೇಷವನ್ನು ಹೇಳುತ್ತಿದೆ. ಅಪರಶಬ್ದವು ಸಾಮಾನ್ಯವನ್ನು ಹೇಳುತ್ತಿದೆಯೆಂಬ ವ್ಯಾಖ್ಯಾನವೂ ಅಯುಕ್ತವಾಗಿದೆ.

'ದ್ವೇ ವಿದ್ಯೇ ವೇದಿತವ್ಯೇ' ಬ್ರಹ್ಮವಿಷಯೇ ಪರೋಕ್ಷಾಪರೋಕ್ಷರೂಪೇ ದ್ವೇ ಜ್ಞಾನೇ ಉಪಾ-ದೇಯೇ ಇತ್ಯರ್ಥಃ' 'ದ್ವೇ ವಿದ್ಯೇ ವೇದಿತವ್ಯೇ' ಎಂದರೆ ಬ್ರಹ್ಮವಿಷಯಕವಾದ ಪರೋಕ್ಷಜ್ಞಾನ ಹಾಗೂ ಅಪರೋಕ್ಷಜ್ಞಾನಗಳನ್ನು ಸ್ವೀಕರಿಸಬೇಕು ಎಂದರ್ಥ' ಹೀಗೆ ರಾಮಾನುಜಭಾಷ್ಯದಲ್ಲಿ ಮಾಡಲ್ಪಟ್ಟ ವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಿಸಿದ್ದಾರೆ.

ವಿದ್ಯಾಶಬ್ದಕ್ಕೆ ಜ್ಞಾನವೆಂಬರ್ಥವು ಇರಬಹುದು. ಆದರೆ ಪರವಿದ್ಯಾ ಮತ್ತು ಅಪರವಿದ್ಯಾ ಎಂಬಲ್ಲಿರುವ ವಿದ್ಯಾಶಬ್ದವು ಜ್ಞಾನವೆಂಬರ್ಥದಲ್ಲಿ ಇರುವುದಿಲ್ಲವೆಂದು 'ಯಯಾ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಯಯಾ' ಯಾವ ವಿದ್ಯೆಯಿಂದ 'ಅಧಿಗಮ್ಯತೇ' ಬ್ರಹ್ಮನು ಹೊಂದಲ್ಪಡುತ್ತಾನೋ ಅವನೇ ಅಕ್ಷರನು ಎಂಬರ್ಥವನ್ನು ಮಾಡಬಹುದಾದ್ದರಿಂದ ಜ್ಞಾನಕರಣವೆಂಬರ್ಥದಲ್ಲಿ ವಿದ್ಯಾಶಬ್ದವನ್ನು ಏಕೆ ಪ್ರಯೋಗಿಸಬೇಕು? ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿರುತ್ತಾರೆ.

ವಿದ್ಯಾಶಬ್ದಕ್ಕೆ ಬ್ರಹ್ಮಮೀಮಾಂಸಾಶಾಸ್ತ್ರ ಎಂಬ ಅರ್ಥವನ್ನು ಸಮರ್ಥಿಸಿದ್ದಾಯಿತು. ಇದರಿಂದ ಪ್ರಾಮಾಣ್ಯವು ಅಥವಾ ಸರ್ವೋತ್ತಮಪ್ರಾಮಾಣ್ಯವು ಹೇಗೆ ಸಿದ್ಧವಾಗುತ್ತದೆ? ಏಕೆಂದರೆ ಪರ ಎಂಬ ಶಬ್ದಕ್ಕೆ ಬೇರೆ ಅರ್ಥಗಳು ಕೂಡ ಲೋಕದಲ್ಲಿ ಕಾಣಿಸುತ್ತಿವೆ. ಈ ಪ್ರಶ್ನೆಗೆ ಉತ್ತರ ಹೀಗಿದೆ– ಅಪರ ಎಂಬ ಶಬ್ದವನ್ನು ಅದಕ್ಕೆ ವಿರೋಧವಾದ ಅರ್ಥವನ್ನು ತಿಳಿಸುವ ಪರ ಎಂಬ ಶಬ್ದವನ್ನು ಉಪನಿಷತ್ತು ಪ್ರಯೋಗ ಮಾಡುತ್ತಿದೆ. ಅಪರ ಎಂಬ ಶಬ್ದಕ್ಕೆ ಸರ್ವೋತ್ತಮವಲ್ಲದ್ದು ಎಂಬರ್ಥವು ಇರುವುದರಿಂದ





ಪರ ಎಂಬ ಶಬ್ದಕ್ಕೆ ಸರ್ವೋತ್ತಮ ಎಂಬರ್ಥವು ತಿಳಿಯುತ್ತದೆ. ಆದ್ದರಿಂದ ಲೋಕದಲ್ಲಿ ಪ್ರಸಿದ್ಧವಾಗಿರುವ 'ಬೇರೆ' ಇತ್ಯಾದಿ ಅರ್ಥಗಳನ್ನು ಪರಶಬ್ದಕ್ಕೆ ವಿವಕ್ಷಿಸಬಾರದು.

ಬ್ರಹ್ಮಮೀಮಾಂಸಾಶಾಸ್ತ್ರವೇ ಪರವಿದ್ಯೆ ಎನ್ನಲು ಯಾವ ಪ್ರಮಾಣವನ್ನು ಹೇಳಿದಂತಾಯಿತು?

ಅನುಮಾನಪ್ರಮಾಣವನ್ನು ಹೇಳಿದಂತಾಯಿತು. ಅದು ಹೀಗೆ – 'ಇದಂ ಬ್ರಹ್ಮಮೀಮಾಂಸಾಶಾಸ್ತ್ರಮ್ ಅನುತ್ತಮಂ ನಿರ್ಣೀತವ್ಯಾರ್ಥಾನಾಂ ಋಗಾದಿಪದೋಪಲಕ್ಷಿತಾನಾಮ್ ಅಶೇಷಶಾಸ್ತ್ರಾಣಾಮ್ ಅಪರವಿದ್ಯಾತ್ವೇನ ಉಕ್ತತ್ವಾತ್' ಎಂದು.

ಹೀಗೆ ಅನುತ್ತಮಂ ಶಾಸ್ತ್ರಂ ಎಂಬ ಅನುವ್ಯಾಖ್ಯಾನದ ಮಾತಿನಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಪರವಿದ್ಯೆ ಎನಿಸಿದೆ. ಉಳಿದವುಗಳು ಅಪರವಿದ್ಯೆ ಎನಿಸಿವೆ ಎಂಬುದನ್ನು ಪ್ರತಿಪಾದನೆ ಮಾಡಿದಂತಾಯಿತು.

## ಕೈಮುತ್ಯನ್ಯಾಯದಿಂದ ಪ್ರಾಮಾಣ್ಯಸಮರ್ಥನೆ

**ಗುರ್ವರ್ಥದೀಪಿಕಾ – 'ಶಾಸ್ತ್ರಮೇವ ಭವಿತುಮರ್ಹತಿ' ಇತ್ಯತ್ರ ನ ತು ವಿಷಹರಮಂತ್ರಾದಿವತ್ ಮಂತ್ರಮಾತ್ರಮ್ ಇತ್ಯೇವಕಾರಾರ್ಥಃ । ಅನ್ಯಥಾ ಸಕೃದುಕ್ತವಿದ್ಯಾಶಬ್ದಸ್ಯ ಇತ್ಯತ್ರ ಅನ್ಯಥಾ ವೇದವಿಷಯೇ ವಿದ್ಯಾತ್ವಂ 'ಯಯಾ ತದಕ್ಷರಮಧಿಗಮ್ಯತೇ' ಇತ್ಯತ್ರ ಮಂತ್ರಮಾತ್ರತ್ವಮ್ ಇತ್ಯಂಗೀಕಾರೇ । ಅನ್ಯನ್ನ ಸಂಭವತಿ ಇತ್ಯತ್ರ ಅನ್ಯತ್ ಭಿನ್ನತ್ವಂ ನ ಸಂಭವತಿ । ತಥಾ ಸತಿ ವೇದವಿದ್ಯಾಯಾ ಅಪಿ ಅಕ್ಷರವಿದ್ಯಾಭಿನ್ನತ್ವೇನ ಪರವಿದ್ಯಾತ್ವಪ್ರಸಂಗಾತ್ ಇತ್ಯರ್ಥಃ । ಸನ್ನಿಧಾನಾತ್ ಅಪೌರುಷೇಯತಯಾ ಪ್ರಮಾಣಭೂತವೇದಸನ್ನಿಧಾನಾತ್ । ಅಪರವಿದ್ಯಾತ್ವೇನೋಕ್ತವೇದವಿದ್ಯಾಽಪಿ ಅಪೌರುಷೇಯತ್ವಾತ್ ಯದಾ ಪ್ರಮಾಣಂ ತದಾ ತತೋಽಪಿ ಉತ್ತಮವಿದ್ಯಾತ್ವೇನೋಕ್ತಾಕ್ಷರವಿದ್ಯಾರೂಪಬ್ರಹ್ಮಮೀಮಾಂಸಾಯಾಃ ಪ್ರಾಮಾಣ್ಯಂ ಕಿಂ ವಕ್ತವ್ಯಮ್? ಇತಿ ಭಾವಃ ।**

'ಶಾಸ್ತ್ರಮೇವ ಭವಿತುಮರ್ಹತಿ' ಎಂಬುದಾಗಿ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಇಲ್ಲಿ ಏವಕಾರದಿಂದ ಇದನ್ನು ತಿಳಿಯಬೇಕು – ವಿಷಹರಮಂತ್ರವು ಕೇವಲ ಮಂತ್ರ ಎನಿಸುತ್ತದೆ. ಅದರಂತೆ ಈ ಶಾಸ್ತ್ರವು ಕೇವಲ ಮಂತ್ರ ಎನಿಸುವುದಿಲ್ಲ - ಎಂದು. ಅನ್ಯಥಾ ಸಕೃದುಕ್ತವಿದ್ಯಾಶಬ್ದಸ್ಯ ಎಂಬ ವಾಕ್ಯಕ್ಕೆ ಹೀಗೆ ಅರ್ಥ – ವೇದವಿಷಯದಲ್ಲಿ ವಿದ್ಯಾ ಎಂಬರ್ಥವನ್ನು 'ಯಯಾ ತದಕ್ಷರಮಧಿಗಮ್ಯತೇ' ಎಂಬಲ್ಲಿ ಕೇವಲ ಮಂತ್ರ ಎಂಬರ್ಥವನ್ನು ಅಂಗೀಕಾರ ಮಾಡಿದರೆ ಎಂದು.





**ಅನ್ಯನ್ನ ಸಂಭವತಿ** – ಪರ ಎಂಬ ಶಬ್ದಕ್ಕೆ 'ಬೇರೆ' ಎಂಬರ್ಥವು ಕೂಡುವುದಿಲ್ಲ. ಹಾಗಾಗಿದ್ದಲ್ಲಿ ವೇದವಿದ್ಯೆಯು ಕೂಡ ಅಕ್ಷರವಿದ್ಯೆಗಿಂತ ಭಿನ್ನವಾದ ಕಾರಣ ಪರವಿದ್ಯೆ ಎನಿಸುವ ಪ್ರಸಂಗ ಬರುತ್ತದೆ.

**ಸನ್ನಿಧಾನಾತ್** – ಅಪೌರುಷೇಯವಾದ್ದರಿಂದ ಪ್ರಮಾಣವೆನಿಸಿದ ವೇದದ ಸನ್ನಿಧಾನವಿರುವುದರಿಂದ. ಅಪರವಿದ್ಯೆ ಎನಿಸಿದ ವೇದವಿದ್ಯೆಯೂ ಅಪೌರುಷೇಯವಾದ್ದರಿಂದ ಯಾವಾಗ ಪ್ರಮಾಣವೆಂದು ಸಿದ್ಧವಾಗುತ್ತದೋ ಆಗಲೇ ಅದಕ್ಕಿಂತಲೂ ಉತ್ತಮವಿದ್ಯೆ ಎಂದು ಹೇಳಲ್ಪಟ್ಟ ಅಕ್ಷರವಿದ್ಯಾಸ್ವರೂಪವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವು ಪ್ರಾಪ್ತವಾಗುತ್ತದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕೇನು? ಎಂಬ ಕೈಮುತ್ಯನ್ಯಾಯವು ಇಲ್ಲಿ ವಿವಕ್ಷಿತವಾಗಿದೆ.

## ಇದಮುಕ್ತಂ ಭವತಿ ಎಂಬ ಸುಧಾವಾಕ್ಯಕ್ಕೆ ವಿಸ್ತೃತವಾದ ಪೀಠಿಕೆ

**ವಾಕ್ಯಾರ್ಥಚಂದ್ರಿಕಾ–** ನನು 'ಪರಶಬ್ದಸ್ಯ ಅನೇಕಾರ್ಥತ್ವೇನ ವಿದ್ಯಾಶಬ್ದಸ್ಯ ಅರ್ಥವಿವಕ್ಷಾವಿರಹಿಣ್ಯಪಿ ಮಂತ್ರೇ ಪ್ರಯೋಗದರ್ಶನೇನ ನ ಪರವಿದ್ಯಾಖ್ಯಯಾ ಸರ್ವೋತ್ತಮಪ್ರಾಮಾಣ್ಯಸಿದ್ಧಿಃ' ಇತಿ ಶಂಕಾಯಾಃ 'ಪರವಿದ್ಯಾಖ್ಯಮ್' ಇತ್ಯನೂದ್ಯ 'ಅನುತ್ತಮಂ ಶಾಸ್ತ್ರಮ್' ಇತಿ ವ್ಯಾಖ್ಯಾನಮಾತ್ರೇಣ ನ ಪರಿಹಾರಃ । 'ಪರಾವಿದ್ಯಾ' ಇತ್ಯತ್ರ ವಿದ್ಯಾಶಬ್ದೇನ ಶಾಸ್ತ್ರೋಪಾದಾನೇ ಪರಶಬ್ದಸ್ಯ ಅನುತ್ತಮತ್ವಾತಿರಿಕ್ತಾರ್ಥತ್ವಾಭಾವೇ ಚ ಹೇತೋರನುಕ್ತೇಃ ತತ್ಸದ್ಭಾವೇಽಪಿ ವಾ ಶಾಸ್ತ್ರತ್ವೇನ ಪ್ರಾಮಾಣ್ಯಸಿದ್ಧಿಪ್ರಕಾರಸ್ಯ ಪರಶಬ್ದಸ್ಯ ಸ್ವತಂತ್ರವಿಶೇಷಣತ್ವೇನಾಪಿ ಉಪಪತ್ತ್ಯಾ ಪ್ರಾಮಾಣ್ಯೇ ಅನುತ್ತಮತ್ವಸಿದ್ಧಿಪ್ರಕಾರಸ್ಯ ಚಾನುಕ್ತ್ಯಾ ವಿವಕ್ಷಿತಾರ್ಥಾಸಿದ್ಧಿರೇವ । ತತ್ರ 'ಅಪರಾ' ಇತ್ಯಾದಿನಿರ್ದಿಷ್ಟವ್ಯತಿರಿಕ್ತಾನಾಮೇವ 'ಅಥ ಪರಾ' ಇತ್ಯನೇನ ಗ್ರಹಣಸಂಭವೇನ ತೇನ ಅಸ್ಯೈವ ಗ್ರಹಣೇ ವಿಶೇಷಹೇತೋರನುಕ್ತ್ಯಾ ನ ಕಿಂಚೇತ್ಯುಕ್ತಶಂಕಾಪರಿಹಾರೋಽಪಿ ಇತ್ಯತಃ ಶಾಸ್ತ್ರಗ್ರಹಣೇನ್ನೈವ ತತ್ರಾಪರಾ ಇತ್ಯಾದಿ ಶಾಸ್ತ್ರಪ್ರಕರಣಸ್ಯ, ಪ್ರತಿಪತ್ತಿಕರಣಾರ್ಥಕಶಾಸ್ತ್ರಪದೋಪಾದಾನೇನ್ನೈವ 'ಯಯಾ ತದಕ್ಷರಮಧಿಗಮ್ಯತೇ' ಇತಿ ವಾಕ್ಯಶೇಷೋಪಾತ್ತಲಿಂಗಸ್ಯ ಚ ಸೂಚನಾತ್ ವಿದ್ಯಾಶಬ್ದೇನ ಶಾಸ್ತ್ರೋಪಾದಾನೇ ಸಾಧಕಸ್ಯ ಪ್ರಕರಣಸ್ಯ ಸೂಚನೇನ್ನೈವ 'ಅನ್ಯಥಾ' ಇತ್ಯುಕ್ತವಿಪಕ್ಷಬಾಧಕಸ್ಯ ಚ ಸೂಚನಾತ್ ತತ್ವಜ್ಞಾನಕರಣಾರ್ಥಕಶಾಸ್ತ್ರಶಬ್ದೋಪಾದಾನೇನ 'ತಾದೃಶಸ್ಯಾಪಿ ಅಪ್ರಾಮಾಣ್ಯಶಂಕಾ ವ್ಯಾಹತಿಗ್ರಸ್ತತಯಾ ನೋದೇತಿ' ಇತ್ಯರ್ಥಸ್ಯ ಸೂಚನೇನ ಶಾಸ್ತ್ರತ್ವೇನ ಪ್ರಾಮಾಣ್ಯಸಿದ್ಧಿಪ್ರಕಾರಸ್ಯಾಪಿ ಸೂಚಿತತ್ವಾತ್ 'ಅನುತ್ತಮಮ್' ಇತ್ಯರ್ಥವಿಶೇಷಕಥನೇನ್ನೈವ ಪ್ರಕೃತೇ ಪರಶಬ್ದಾರ್ಥಾಂತರಾಸಂಭವಸ್ಯ, ಸಾಮಾನ್ಯೇ ವಿಶೇಷಪದಸಮಭಿವ್ಯಾಹಾರೇಣ ಚ ಪರತ್ವಸ್ಯ ವಿದ್ಯಾತ್ವೇನ ಸಂಬಂಧೇ





ಸನ್ನಿಧಾನರೂಪಹೇತೋಶ್ಚ ಸೂಚನಾದ್ಯುಕ್ತಃ 'ಶಾಸ್ತ್ರಮನುತ್ತಮಮ್' ಇತಿ ವ್ಯಾಖ್ಯಾನಮಾತ್ರೇಣ ಪೂರ್ವಶಂಕಾಪರಿಹಾರಃ।

ಶಾಸ್ತ್ರಪ್ರಕರಣಸೂಚಕಶಾಸ್ತ್ರಶಬ್ದೇನ ಪರಶಬ್ದಸ್ಯೋತ್ತಮತ್ವವ್ಯಾಖ್ಯಾನೇನ ಚ ಶಾಸ್ತ್ರಾಣಾಮ್ ಋಗಾದ್ಯಪೇಕ್ಷಯಾ ಸಂಭವಾತ್ ಪರತ್ವಾನಾಂ ಚಾನುಪಾದಾನಸೂಚನಾತ್ ಉತ್ತಮತ್ವವ್ಯಾಖ್ಯಾನೇ -ನೈವ ತತ್ಪ್ರಯೋಜಕಸ್ಯ , ತತ್ಪ್ರಯೋಜಕಪ್ರಯೋಜ್ಯಾವಧಿಭೂತಾನಾಂ ತತ್ರಾಪರಾ ಇತ್ಯಾದಿನೋ-ಪಲಕ್ಷಣಸ್ಯ ಚ ಸೂಚನೇನ ಅಸ್ಯೈವ ಗ್ರಹಣೇ ಪರಿಶೇಷಸೂಚನಾತ್ 'ಕಿಂಚ' ಇತ್ಯಾದಿಶಂಕಾ-ಪರಿಹಾರೋಽಪಿ ಯುಕ್ತ ಇತ್ಯಾಶಯೇನಾಹ – ಇದಮುಕ್ತಂ ಭವತೀತಿ ॥

ಪ್ರಶ್ನೆ– ''ಪರಶಬ್ದಕ್ಕೆ ಅನೇಕಾರ್ಥಗಳಿವೆ. ವಿದ್ಯಾಶಬ್ದಕ್ಕೆ ಅರ್ಥವಿವಕ್ಷೆಯಿಲ್ಲದ ಮಂತ್ರದಲ್ಲೂ ಕೂಡ ಪ್ರಯೋಗ ಕಂಡಿದೆ. ಆದ್ದರಿಂದ ಪರವಿದ್ಯೆಯೆಂದು ಹೇಳಿದ ಮಾತ್ರಕ್ಕೆ ಸರ್ವೋತ್ತಮ-ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ'' ಎಂಬ ಆಶಂಕೆಯನ್ನು ಹಿಂದೆ ಮಾಡಲಾಗಿತ್ತು. ಇದಕ್ಕೆ 'ಪರ-ವಿದ್ಯಾಖ್ಯಂ' ಎಂದು ಅನುವಾದ ಮಾಡಿ ಅನುತ್ತಮಂ ಶಾಸ್ತ್ರಂ ಎಂದು ವ್ಯಾಖ್ಯಾನ ಮಾಡಿದ ಮಾತ್ರಕ್ಕೆ ಪರಿಹಾರವನ್ನು ಹೇಳಿದಂತಾಗಲಿಲ್ಲ. ಪರವಿದ್ಯಾ ಎಂಬಲ್ಲಿ ವಿದ್ಯಾಶಬ್ದದಿಂದ ಶಾಸ್ತ್ರವನ್ನೇ ಸ್ವೀಕರಿಸಬೇಕು. ಪರಶಬ್ದಕ್ಕೆ ಸರ್ವೋತ್ತಮ ಎಂದೇ ಅರ್ಥ. ಬೇರೆ ಅರ್ಥವನ್ನು ವಿವಕ್ಷಿಸಬಾರದು ಎಂಬ ವಿಷಯದಲ್ಲಿ ಹೇತುವನ್ನು ಹೇಳಿರುವುದಿಲ್ಲ. ಒಂದು ವೇಳೆ ವಿದ್ಯಾಶಬ್ದಕ್ಕೆ ಶಾಸ್ತ್ರ ಎಂಬರ್ಥದ ವಿಷಯದಲ್ಲಿ ಸರ್ವೋತ್ತಮ ಎಂಬ ವಿಷಯದಲ್ಲಿ ಹೇತುವನ್ನು ಹೇಳಿದರೂ ಕೂಡ ಶಾಸ್ತ್ರವಾದ ಮಾತ್ರಕ್ಕೆ ಪ್ರಾಮಾಣ್ಯವು ಹೇಗೆ ಸಿದ್ಧವಾಗುತ್ತದೆ ಎಂಬುದನ್ನು ಆಚಾರ್ಯರು ಸಮರ್ಥನೆ ಮಾಡಿರುವುದಿಲ್ಲ. ಮತ್ತು ಪರಶಬ್ದಕ್ಕೆ ಸರ್ವೋತ್ತಮ ಎಂದಷ್ಟೇ ಅರ್ಥ. ಇದು ಸ್ವತಂತ್ರವಾದ ವಿಶೇಷಣವಾಗಿ ಉಪಪನ್ನವಾಗುತ್ತದೆ. ಪ್ರಾಮಾಣ್ಯದಲ್ಲಿ ಸರ್ವೋತ್ತಮತ್ವವನ್ನು ಇದು ಸಮರ್ಥನೆ ಮಾಡುವುದಿಲ್ಲ. ಈ ವಿಷಯವನ್ನೂ ಕೂಡ ಆಚಾರ್ಯರು ಸಮರ್ಥನೆ ಮಾಡಿರುವುದಿಲ್ಲ. ಆದ್ದರಿಂದ ವಿವಕ್ಷಿತವಾದ ಅರ್ಥವೇ ಸಿದ್ಧವಾಗುವುದಿಲ್ಲ.

'ಅಪರ' ಎಂಬ ಶಬ್ದಗ್ರಹಣದಿಂದ ಯಾವುದನ್ನು ನಿರ್ದೇಶ ಮಾಡಿದ್ದಾರೋ ತದ್ವ್ಯತಿರಿಕ್ತವಾದ-ದ್ದನ್ನೇ 'ಅಥ ಪರಾ' ಎಂಬುದರಿಂದ ಗ್ರಹಣ ಮಾಡಬೇಕು. ಆದ್ದರಿಂದ ಋಗಾದಿಗಳನ್ನು ಬಿಟ್ಟು ಬೇರೆ ಯಾವುದನ್ನಾದರೂ ಗ್ರಹಣ ಮಾಡಬೇಕು ಎಂಬುದನ್ನು ಒಪ್ಪೋಣ. ಆದರೆ ಬ್ರಹ್ಮಸೂತ್ರವನ್ನೇ ಗ್ರಹಣ-ಮಾಡಬೇಕು ಎಂಬ ವಿಷಯದಲ್ಲಿ ವಿಶೇಷಹೇತುವನ್ನು ಹೇಳಿರುವುದಿಲ್ಲ. ಆದ್ದರಿಂದ 'ಕಿಂಚ' ಇತ್ಯಾದಿ ಗ್ರಂಥದಿಂದ ಬ್ರಹ್ಮಸೂತ್ರವನ್ನೇ ಪರವಿದ್ಯೆಯೆಂದು ಏಕೆ ವಿವಕ್ಷಿಸಬೇಕು? ಎಂಬುದಾಗಿ ಹಿಂದೆ ಮಾಡಿದ ಆಶಂಕೆಗೆ ಪರಿಹಾರವನ್ನು ಕೂಡ ಮಾಡಿದಂತಾಗಲಿಲ್ಲ. ಆದ್ದರಿಂದ 'ಪರವಿದ್ಯಾಖ್ಯಂ' ಎಂದು ಅನುವಾದ





ಮಾಡಿ 'ಅನುತ್ತಮಂ ಶಾಸ್ತ್ರಂ' ಎಂದು ವ್ಯಾಖ್ಯಾನ ಮಾಡಿದ ಮಾತ್ರಕ್ಕೆ ಈ ಯಾವ ಆಶಂಕೆಗಳಿಗೂ ಕೂಡ ಉತ್ತರಿಸಿದಂತೆ ಆಗಲಿಲ್ಲ?

ಉತ್ತರ - ಆಚಾರ್ಯರು 'ಶಾಸ್ತ್ರಂ' ಎಂಬ ಪದಪ್ರಯೋಗದಿಂದ 'ತತ್ರ ಅಪರಾ' ಇತ್ಯಾದಿ ಆಥರ್ವಣಶಾಸ್ತ್ರದ ಪ್ರಕರಣವನ್ನು ಸೂಚನೆ ಮಾಡಿದ್ದಾರೆ. 'ಶಿಷ್ಯತೇ ಯಥಾವಸ್ತುಂ ಪ್ರತಿಪಾದ್ಯತೇ ಅನೇನ ಇತಿ ಶಾಸ್ತ್ರಮ್' ಎಂಬುದಾಗಿ ಶಾಸ್ತ್ರಶಬ್ದಕ್ಕೆ ವ್ಯುತ್ಪತ್ತಿಯನ್ನು ತೋರಿಸಿದ್ದರಿಂದ ಹೀಗೆ ಯೌಗಿಕವಾದ ಶಾಸ್ತ್ರಶಬ್ದವನ್ನು ಪ್ರಯೋಗ ಮಾಡಿದ್ದರಿಂದಲೇ ಯಯಾ ತದಕ್ಷರಮಧಿಗಮ್ಯತೇ ಎಂಬ ವಾಕ್ಯಶೇಷದಿಂದ ಉಪಾತ್ತವಾದ 'ಅಕ್ಷರಾಧಿಗತಿಕರಣತ್ವ' ಎಂಬ ಲಿಂಗವನ್ನು ಸೂಚನೆ ಮಾಡಿದ್ದಾರೆ.

(ಇದಮುಕ್ತಂ ಭವತಿ ಎಂಬ ಮೂಲದಲ್ಲಿ ದ್ವೇವಿದ್ಯೇ ವೇದಿತವ್ಯೇ ಎಂಬ ವಾಕ್ಯದಿಂದ ಪ್ರಕರಣವನ್ನು ಸಾ ತಾವತ್ ಎಂಬ ವಾಕ್ಯದಿಂದ ಪ್ರಕರಣವನ್ನು ಹೇಳಿದ್ದಾರೆ. ಅದನ್ನೇ ಇಲ್ಲಿ ವ್ಯಾಖ್ಯಾನ ಮಾಡಿದ್ದಾರೆಂದು ತಿಳಿಯಬೇಕು).

ಲಿಂಗ ಮತ್ತು ಪ್ರಕರಣವನ್ನು ಹೇಳಿದ್ದಾಯಿತು. ಅನ್ಯಥಾ ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ವಿಪಕ್ಷೇ ಬಾಧಕವನ್ನು ಹೇಳಿದ್ದಾರೆ. ಪ್ರಕರಣ ಒಂದಿಂದ ವಿದ್ಯಾಶಬ್ದದಿಂದ ಶಾಸ್ತ್ರವನ್ನೇ ಸ್ವೀಕರಿಸಲಾಗಿದೆ. ಹೀಗೆ ತತ್ರ ಅಪರಾ ಎಂಬ ವಾಕ್ಯದಲ್ಲಿ ವಿದ್ಯಾಶಬ್ದದಿಂದ ಶಾಸ್ತ್ರವನ್ನು ಸ್ವೀಕರಿಸಿ. ಅಥ ಪರಾ ಎಂಬಲ್ಲಿ ಶಾಸ್ತ್ರಾತಿರಿಕ್ತವನ್ನು ವಿದ್ಯಾಶಬ್ದದಿಂದ ಸ್ವೀಕರಿಸಿದರೆ ಒಂದೇ ವಿದ್ಯಾ ಶಬ್ದಕ್ಕೆ ಅನೇಕಾರ್ಥಗಳನ್ನು ಸ್ವೀಕರಿಸಿ-ದಂತಾಗುತ್ತದೆ. ಒಂದೇ ಪ್ರಕರಣದಲ್ಲಿ ಇರುವ ಒಂದೇ ಶಬ್ದಕ್ಕೆ ಅನೇಕಾರ್ಥಗಳನ್ನು ಹೇಳಿದಂತಾಗುತ್ತದೆ. ಇದೇ ವಿಪಕ್ಷೇ ಬಾಧಕತರ್ಕವಾಗಿದೆ. ಈ ವಿಪಕ್ಷೇ ಬಾಧಕತರ್ಕವು ವ್ಯಾಹತಿಗ್ರಸ್ತವಾದ್ದರಿಂದ ಉದಯವೇ ಆಗುವುದಿಲ್ಲ. ಏಕೆಂದರೆ ಶಾಸ್ತ್ರಶಬ್ದವನ್ನು ಪ್ರಯೋಗ ಮಾಡಿದ್ದರಿಂದ ವಿದ್ಯಾ ಎಂಬ ಶಬ್ದಕ್ಕೆ ಶಾಸ್ತ್ರವೆಂದು ಒಪ್ಪೋಣ ಅಂದಮಾತ್ರಕ್ಕೆ ಪ್ರಮಾಣ ಹೇಗಾಯಿತು? ಎಂದರೆ ವಿದ್ಯಾಶಬ್ದಕ್ಕೆ 'ಶಾಸ್ತ್ರ' ಎಂಬರ್ಥವನ್ನು ಆಚಾರ್ಯರು ಹೇಳಿದ್ದಾರೆ. ಶಾಸ್ತ್ರಶಬ್ದಕ್ಕೆ ಜ್ಞಾನಕರಣ ಎಂದಷ್ಟೇ ಅರ್ಥವಲ್ಲ; ತತ್ವಜ್ಞಾನಕರಣ ಎಂಬರ್ಥ-ವನ್ನು ವಿವಕ್ಷಿಸಬೇಕು. ಇಂಥ ಶಾಸ್ತ್ರಶಬ್ದಪ್ರಯೋಗದಿಂದ ಶಾಸ್ತ್ರವು ಅಪ್ರಮಾಣವಾಗಲಿ ಎಂಬ ಆಶಂಕೆಯೇ ಹುಟ್ಟುವುದಿಲ್ಲ. ಈ ಆಶಂಕೆಯು ವ್ಯಾಹತಿಗ್ರಸ್ತವಾಗುತ್ತದೆ. ಹೀಗೆ ಆಚಾರ್ಯರು ಶಾಸ್ತ್ರಶಬ್ದ-ಪ್ರಯೋಗದಿಂದ ಪ್ರಾಮಾಣ್ಯವು ಸಿದ್ಧವಾಗುತ್ತದೆಂದು ಸೂಚಿಸಿದ್ದಾರೆ.

ಆಚಾರ್ಯರು ಪರಶಬ್ದಕ್ಕೆ 'ಅನುತ್ತಮ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಇದರಿಂದ ಪರಶಬ್ದಕ್ಕೆ ಬೇರೆ ಅರ್ಥವನ್ನು ಕಲ್ಪನೆ ಮಾಡಬಾರದು ಎಂದು ಹೇಳಿದಂತಾಯಿತು. ವಿದ್ಯಾ ಎಂಬ ವಿಶೇಷಪದದ





ಸಮಭಿವ್ಯಾಹಾರದಿಂದ ಸಾಮಾನ್ಯವಾಚಕವಾದ ಪರಶಬ್ದಕ್ಕೆ ಪ್ರಾಮಾಣ್ಯೇನೈವ ಪರತ್ವವನ್ನು ವಿವಕ್ಷಿಸಬೇಕು. ಇದಕ್ಕೆ ಸನ್ನಿಧಾನವೇ ಯುಕ್ತಿಯಾಗಿದೆ. ಹೀಗೆ 'ಅನುತ್ತಮಂ ಶಾಸ್ತ್ರಂ' ಎಂಬುದರಿಂದ ಸನ್ನಿಧಾನವೆಂಬ ಯುಕ್ತಿಯನ್ನು ಸೂಚನೆ ಮಾಡಿದ್ದಾರೆ. ಇದರಿಂದ ಹಿಂದಿನ ಆಶಂಕೆಯನ್ನು ಪರಿಹಾರ ಮಾಡಿದಂತಾಯಿತು.

ಶಾಸ್ತ್ರಪ್ರಕರಣವನ್ನು ಸೂಚನೆ ಮಾಡುವ ಶಾಸ್ತ್ರಶಬ್ದದ ಪ್ರಯೋಗದಿಂದ ಮತ್ತು ಪರಶಬ್ದಕ್ಕೆ ಉತ್ತಮತ್ವ ಎಂಬ ಅರ್ಥವನ್ನು ಹೇಳಿದ್ದರಿಂದ ಅಶಾಸ್ತ್ರಗಳೆನಿಸಿದ ಬೌದ್ಧಾದಿಶಾಸ್ತ್ರಗಳನ್ನು ಇಲ್ಲಿ ವಿವಕ್ಷಿಸಬಾರದೆಂದು ಸೂಚಿಸಿದ್ದಾರೆ. ಮತ್ತು ಋಗಾದ್ಯಪೇಕ್ಷೆಯಿಂದ ಪರತ್ವವು ಅಸಂಭಾವಿತವಾದ ಪೂರ್ವಮೀಮಾಂಸಾದಿ ಶಾಸ್ತ್ರಗಳನ್ನು ಕೂಡ ವಿವಕ್ಷಿಸಬಾರದೆಂದು ಸೂಚಿಸಿದ್ದಾರೆ. ಶಾಸ್ತ್ರಪ್ರಕರಣಸೂಚಕವಾದ ಶಾಸ್ತ್ರಶಬ್ದಪ್ರಯೋಗದಿಂದ ಬೌದ್ಧಾದಿಶಾಸ್ತ್ರಗಳನ್ನು ವಿವಕ್ಷಿಸಬಾರದೆಂದು ತಿಳಿಸಿದರು. ಪರಶಬ್ದಕ್ಕೆ ಉತ್ತಮತ್ವವೆಂದು ವ್ಯಾಖ್ಯಾನ ಮಾಡಿದ್ದರಿಂದ ಜೈಮಿನ್ಯಾದಿಶಾಸ್ತ್ರಗಳು ಅನುಪಾದೇಯವೆಂದು ಸೂಚನೆ ಮಾಡಿದರು. ಪರಿಶೇಷಾತ್ ಅನುತ್ತಮಂ ಶಾಸ್ತ್ರಂ ಎಂಬುದರಿಂದ ಬ್ರಹ್ಮಸೂತ್ರಗಳನ್ನೇ ವಿವಕ್ಷಿಸಬೇಕೆಂದು ಹೇಳಿದಂತಾಯಿತು. ಅದು ಹೀಗೆ – ಪರಶಬ್ದಕ್ಕೆ ಉತ್ತಮ ಎಂಬರ್ಥವನ್ನು ಹೇಳಿದ್ದರಿಂದಲೇ ಉತ್ತಮತ್ವಕ್ಕೆ ಪ್ರಯೋಜಕವಾದ ಅನುಗ್ರಾಹಕತ್ವವನ್ನು ಹೇಳಿದಂತಾಯಿತು. ಈ ಅನುಗ್ರಾಹಕತ್ವಕ್ಕೆ ಪ್ರಯೋಜಕವಾದದ್ದು ಉತ್ತಮತ್ವ . ಈ ಉತ್ತಮತ್ವಕ್ಕೆ ಅವಧಿಭೂತವಾದ ಎಲ್ಲವನ್ನೂ ಕೂಡ 'ತತ್ರಾಪರಾ' ಇತ್ಯಾದಿ ವಾಕ್ಯದಿಂದ ಸ್ವೀಕರಿಸಬೇಕು. ಆದ್ದರಿಂದ ಪರಿಶೇಷಪ್ರಮಾಣದಿಂದ ಬ್ರಹ್ಮಸೂತ್ರಗಳನ್ನೇ ಸ್ವೀಕರಿಸಬೇಕೆಂದು ಸಿದ್ಧವಾಯಿತು. 'ಕಿಂಚ' ಇತ್ಯಾದಿ ಗ್ರಂಥದಿಂದ ಮಾಡಿದ ಆಶಂಕೆಯ ಪರಿಹಾರವು ಯುಕ್ತವೇ ಆಯಿತು. ಈ ಅಭಿಪ್ರಾಯದಿಂದ 'ಇದಮುಕ್ತಂ ಭವತಿ' ಎಂಬ ಗ್ರಂಥವು ಹೊರಟಿದೆ.

## ಇದಮುಕ್ತಂ ಭವತಿ ಎಂಬುದಕ್ಕೆ ವ್ಯಾಖ್ಯಾನ

ವಾಕ್ಯಾರ್ಥಚಂದ್ರಿಕಾ– ಅತ್ರ 'ದ್ವೇ ವಿದ್ಯೇ' ಇತ್ಯಾರಭ್ಯ 'ಉದ್ದಿಶ್ಯ' ಇತ್ಯಂತಮ್ 'ಅನ್ಯಥಾ' ಇತ್ಯುಕ್ತಬಾಧಕಸ್ಯ, 'ತತ್ರ' ಇತ್ಯಾದಿ 'ಉಕ್ತ್ವಾ' ಇತ್ಯಂತಂ ಶಾಸ್ತ್ರಪ್ರಕರಣಸ್ಯ, 'ಯಯಾ' ಇತಿ ವಾಕ್ಯಶೇಷಸ್ಯ ಲಿಂಗಸ್ಯ ಸೂಚನಾಯ ಇತಿ ಮಂತವ್ಯಮ್ ॥ ಲಿಂಗಾಚ್ಚೇತಿ ॥ ಅಕ್ಷರಾಧಿಗತಿಕರಣತ್ವಸ್ಯ ಚ ತತ್ವಜ್ಞಾನಕರಣೇ ಶಾಸ್ತ್ರ ಏವ ಸಂಭವಾತ್ ಅರ್ಥವಿವಕ್ಷಾವಿಹರಿಣಿ ಮಂತ್ರಾದೌ ಅಸಂಭವಾದಿತಿ ಭಾವಃ। ಪ್ರಸಂಗಾಚ್ಚೇತಿ ॥ ಚಶಬ್ದ ಉಕ್ತಸಾಧಕಸಮುಚ್ಚಯಾರ್ಥಃ।

'ದ್ವೇ ವಿದ್ಯೇ' ಎಂಬಲ್ಲಿಂದ ಪ್ರಾರಂಭಿಸಿ 'ಉದ್ದಿಶ್ಯ' ಎಂಬಲ್ಲಿಯ ತನಕ ಇರುವ ವಾಕ್ಯವು ಅನ್ಯಥಾ ಎಂಬ ಮುಂದಿನ ವಾಕ್ಯದಲ್ಲಿ ಹೇಳಲ್ಪಟ್ಟ ಬಾಧಕವನ್ನು ಸೂಚಿಸುತ್ತಿದೆ. ತತ್ರ ಎಂಬಲ್ಲಿಂದ ಪ್ರಾರಂಭಿಸಿ 'ಉಕ್ತ್ವಾ' ಎಂಬಲ್ಲಿಯ ತನಕ ಇರುವ ವಾಕ್ಯಸಂದರ್ಭವು ಶಾಸ್ತ್ರಪ್ರಕರಣವನ್ನು ಸೂಚನೆ ಮಾಡುತ್ತಿದೆ. 'ಯಯಾ' ಎಂಬ ವಾಕ್ಯಶೇಷವು ಲಿಂಗವನ್ನು ಸೂಚನೆ ಮಾಡುತ್ತಿದೆ ಎಂದು ತಿಳಿಯಬೇಕು.

'ಲಿಂಗಾಚ್ಚ' ಎಂಬುದರ ಅಭಿಪ್ರಾಯವು ಹೀಗಿದೆ – ಅಕ್ಷರಾಧಿಕರಣತ್ವವು ತತ್ವಜ್ಞಾನಕ್ಕೆ ಕರಣವಾದ ಶಾಸ್ತ್ರದಲ್ಲೇ ಯುಕ್ತವಾಗುತ್ತದೆ. ಅರ್ಥವಿವಕ್ಷೆ ಇಲ್ಲದ ವಿಷಹರಮಂತ್ರದಲ್ಲಿ ಯುಕ್ತವಾಗುವುದಿಲ್ಲವಾದ್ದರಿಂದ ಎಂದು. 'ಪ್ರಸಂಗಾಚ್ಚ' ಎಂಬಲ್ಲಿನ ಚಶಬ್ದವು ಹಿಂದೆ ಹೇಳಿದ ಪ್ರಕರಣ ಹಾಗೂ ಲಿಂಗಗಳೆಂಬ ಎರಡು ಸಾಧಕಗಳನ್ನು ಸಮುಚ್ಚಯ ಮಾಡುವುದಕ್ಕಾಗಿ ಹೇಳಿರುತ್ತಾರೆ.

## ವೇದ ಇತಿಹಾಸ ಉಳಿದ ಮೀಮಾಂಸಾಶಾಸ್ತ್ರ ಹಾಗೂ ಬೌದ್ಧಾದಿಶಾಸ್ತ್ರಗಳು ಪರವಿದ್ಯೆ ಎನಿಸಲಾರವು

**ವಾಕ್ಯಾರ್ಥಚಂದ್ರಿಕಾ – ಅನ್ಯಸ್ಯ ಸಂಭವತೀತಿ ॥ ಅನ್ಯತ್ವಾರ್ಥಿತ್ವಪರಮಾತ್ರತ್ವಾನಾಮಪರಪ್ರತಿಯೋಗಿತಯಾ ಉಕ್ತವಿದ್ಯಾಯಾಮ್ ಅಸಂಭವ ಇತ್ಯರ್ಥಃ॥**

ಏತದತಿರಿಕ್ತಂ ಪರವಿದ್ಯಾತ್ವೇನ ವಿವಕ್ಷಿತಂ ಭವಚ್ಛಾಸ್ತ್ರಮ್ ಋಗಾದಿಕಂ ತದತಿರಿಕ್ತಂ ವಾ । ಅತಿರಿಕ್ತತ್ವೇಽಪಿ ನಿರ್ಣೇತವ್ಯಮ್ ಇತಿಹಾಸಾದಿಕಂ ನಿರ್ಣಾಯಕಂ ಧರ್ಮದೇವಮೀಮಾಂಸಾರೂಪಂ ವಾ ಬೌದ್ಧಾದಿ ವೇತಿ ವಿಕಲ್ಪಾನ್ ಮನಸಿ ನಿಧಾಯ ಋಗಾದಿಶಬ್ದಾನಾಂ ನಿರ್ಣೇತವ್ಯಮಿತಿಹಾಸಾದಿ ಉಪಲಕ್ಷಣತ್ವಮ್ ಅಭಿಪ್ರೇತ್ಯ , ಆದೌ ನಿರಾಚಷ್ಟೇ – ನಿರ್ಣೇತವ್ಯಾನಾಮ್ ಇತಿ॥

ತದತಿರಿಕ್ತತ್ವಪಕ್ಷೇ ದ್ವಿತೀಯಂ ಶಾಸ್ತ್ರಶಬ್ದಸೂಚಿತಯುಕ್ತ್ಯಾ ನಿರಾಹ – ಅನ್ಯಸ್ಯ ಚೇತಿ ॥ 'ಸ ಬ್ರಹ್ಮವಿದ್ಯಾಯಾಮ್' ಇತಿ ಬ್ರಹ್ಮಶಾಸ್ತ್ರಸ್ಯೈವ ಪ್ರಕರಣೇನ ಧರ್ಮದೇವಮೀಮಾಂಸಯೋರಪ್ರಸಂಗಾದಿತ್ಯರ್ಥಃ । ಸರ್ವನಿರ್ಣೇತವ್ಯಶಾಸ್ತ್ರನಿರ್ಣಾಯಕಸ್ಯಾಸ್ಯ ಪರವಿದ್ಯಾತ್ವೇನ ಅವಿವಕ್ಷಾಯಾಮ್ ಏತದೇಕದೇಶಾಮುಖ್ಯಪ್ರತಿಪಾದ್ಯವ್ಯಾಖ್ಯಾನರೂಪಯೋಸ್ತಯೋಃ ಪರವಿದ್ಯಾತ್ವಸ್ಯ ಸುತರಾಮಪ್ರಾಪ್ತೇಃ ಇತಿ ವಾಽರ್ಥಃ।

ಬೌದ್ಧಾದೇಃ ವೇದಾದಿವಿರುದ್ಧತ್ವೇನ ಅಯಥಾರ್ಥತ್ವಾತ್ ಶಾಸ್ತ್ರಗ್ರಹಣಸೂಚಿತಪ್ರಕರಣೇನ ನಿರಾಸಃ – ಇತ್ಯಭಿಪ್ರೇತ್ಯ ದ್ವಿತೀಯೇ ತೃತೀಯಂ ನಿರಾಕರೋತಿ – ಅನ್ಯಸ್ಯೇತಿ ॥ ಪರಶಬ್ದಾರ್ಥೋ-





ತ್ರಮತ್ವೇನಾಪಿ ತದ್ವ್ಯಾವೃತ್ತಿರಿತ್ಯಾಹ – ಪರತ್ವೇತಿ ॥ ಪರಿಶೇಷಸ್ಯ ಅನುತ್ತಮತ್ವೋಕ್ತ್ಯಾ ಸೂಚಿತಂ ತತ್ರಯೋಜಕಮ್ ಆಹ – ಸಂಭವತೀತಿ ॥

'ಪರೋರಿ ಪರಮಾತ್ಮನೋಃ' ಎಂಬ ಮಾತಿನಂತೆ ಪರಶಬ್ದಕ್ಕೆ ಬೇರೆ, ಶತ್ರು, ಪರಮಾತ್ಮ ಎಂಬ ಅರ್ಥಗಳಿವೆ. ಪರವಿದ್ಯಾ ಎಂಬಲ್ಲಿರುವ ಪರಶಬ್ದಕ್ಕೆ ಈ ಮೂರು ಅರ್ಥಗಳನ್ನು ಕೂಡ ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಹಿಂದೆ ಅಪರ ಎಂಬುದು ಪ್ರಸಕ್ತವಾಗಿದೆ. ಅದಕ್ಕೆ ಪ್ರತಿಯೋಗಿಯಾದ ಉತ್ತಮ ಎಂಬ ಅರ್ಥವನ್ನೇ ವಿವಕ್ಷಿಸಬೇಕು. ಏಕೆಂದರೆ ಅನ್ಯತ್ವಾದಿಗಳು ಅಪರಕ್ಕೆ ಪ್ರತಿಯೋಗಿಯೇ ಆಗಿರುವುದಿಲ್ಲ. ಮತ್ತು ವಿದ್ಯಾದಲ್ಲಿ ಅವು ಅಸಂಭಾವಿತವೂ ಆಗಿವೆ.

ಬ್ರಹ್ಮಮೀಮಾಂಸಾಶಾಸ್ತ್ರಕ್ಕಿಂತ ಅತಿರಿಕ್ತವಾದದ್ದು ಪರವಿದ್ಯೆ ಎಂದು ವಿವಕ್ಷಿಸುವುದಾದರೆ ಅದು ಋಗಾದಿ ವೇದಗಳೋ ಅಥವಾ ತದತಿರಿಕ್ತವೋ. ಅತಿರಿಕ್ತವೆಂದು ಹೇಳಿದಾಗಲೂ ನಿರ್ಣೀತವ್ಯವಾದ ಇತಿಹಾಸಗಳೋ ಅಥವಾ ನಿರ್ಣಾಯಕವಾದ ಕರ್ಮಮೀಮಾಂಸಾ ದೇವಮೀಮಾಂಸಾದಿ ಶಾಸ್ತ್ರಗಳೋ ಅಥವಾ ಬೌದ್ಧಾದಿಶಾಸ್ತ್ರಗಳೋ? ಇಷ್ಟು ವಿಕಲ್ಪಗಳನ್ನು ಮನಸ್ಸಿನಲ್ಲಿ ವಿವಕ್ಷಿಸಿ ಋಗಾದಿಶಬ್ದಗಳಿಂದ ನಿರ್ಣೇತವ್ಯವಾದ ಇತಿಹಾಸಾದಿಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂಬ ಅಭಿಪ್ರಾಯದಿಂದ 'ನಿರ್ಣೇತವ್ಯಾರ್ಥಾನಾಮ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಈ ವಾಕ್ಯದಿಂದ ಋಗಾದಿವೇದಗಳು ಮತ್ತು ಇತಿಹಾಸಾದಿಗಳು ಪರವಿದ್ಯೆ ಎನಿಸುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸಿದಂತಾಯಿತು.

ಅತಿರಿಕ್ತಪಕ್ಷದಲ್ಲಿ ಎರಡನೆಯ ಪಕ್ಷವನ್ನು ಶಾಸ್ತ್ರಶಬ್ದದಿಂದ ಸೂಚಿತವಾದ ಯುಕ್ತಿಯಿಂದ ನಿರಾಕರಣೆ ಮಾಡಲು 'ಅನ್ಯಸ್ಯ ಚ' ಎಂಬ ವಾಕ್ಯವು ಹೊರಟಿದೆ. 'ಸಬ್ರಹ್ಮವಿದ್ಯಾಂ' ಎಂಬುದಾಗಿ ಬ್ರಹ್ಮಮೀಮಾಂಸಾಶಾಸ್ತ್ರವೇ ಪ್ರಕರಣದಿಂದ ಪ್ರಾಪ್ತವಾಗಿರುವ ಕಾರಣ ಕರ್ಮಮೀಮಾಂಸಾಶಾಸ್ತ್ರವಾಗಲೀ ದೈವೀಮೀಮಾಂಸಾಶಾಸ್ತ್ರವಾಗಲೀ ಪರವಿದ್ಯೆ ಎಂದು ಕರೆಸಿಕೊಳ್ಳುವುದಿಲ್ಲ. ಸರ್ವನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವು ಬಾರದಿದ್ದಾಗ ತದೇಕದೇಶವಾದ ಅಮುಖ್ಯವಾಗಿ ಶಾಸ್ತ್ರವೆಂದು ಕರೆಸಿಕೊಳ್ಳುವ ವ್ಯಾಖ್ಯಾನರೂಪವಾದ ಕರ್ಮಮೀಮಾಂಸಾಶಾಸ್ತ್ರಕ್ಕಾಗಲೀ ದೈವೀಮೀಮಾಂಸಾಶಾಸ್ತ್ರಕ್ಕಾಗಲೀ ಪರವಿದ್ಯಾತ್ವವು ಸುತರಾಂ ಪ್ರಾಪ್ತವಾಗುವುದಿಲ್ಲ ಎಂಬರ್ಥವನ್ನು ಕೂಡ ಹೇಳಬಹುದು.

ಬೌದ್ಧಾದಿಶಾಸ್ತ್ರಗಳು ವೇದವಿರುದ್ಧವಾಗಿರುವ ಕಾರಣ ಅಯಥಾರ್ಥಗಳಾಗಿವೆ. ಆದ್ದರಿಂದ ಶಾಸ್ತ್ರಶಬ್ದದಿಂದ ಸೂಚಿತವಾದ ಪ್ರಕರಣದಿಂದ ಇವುಗಳನ್ನು ನಿರಾಕರಣೆ ಮಾಡಿದಂತಾಯಿತು. ಹೀಗೆ ಎರಡನೆಯ ಪಕ್ಷದಲ್ಲಿ ಮೂರನೆಯ ವಿಕಲ್ಪವನ್ನು 'ಅನ್ಯಸ್ಯ' ಎಂಬ ವಾಕ್ಯದಿಂದಲೇ ನಿರಾಕರಣೆ ಮಾಡಿ-





ದ್ದಾರೆ. ಪರಶಬ್ದಾರ್ಥವೆನಿಸಿದ ಉತ್ತಮತ್ವದಿಂದಲೂ ಅಂಥ ಬೌದ್ಧಾದಿಶಾಸ್ತ್ರಗಳು ವ್ಯಾವರ್ತ್ಯವಾಗುತ್ತವೆಂಬುದನ್ನು 'ಪರತ್ವಾಸಂಭವಾಚ್ಚ' ಎಂಬುದಾಗಿ ಮತ್ತೊಂದು ಹೇತುವನ್ನು ಹೇಳುವ ಮೂಲಕ ಸಮರ್ಥನೆ ಮಾಡಿದ್ದಾರೆ. ಪರಿಶೇಷಾತ್ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅನುತ್ತಮತ್ವವು ಸಿದ್ಧವಾಗುತ್ತದೆ. ಇದರಿಂದ ಏನು ಲಾಭವಾಯಿತೆಂಬುದನ್ನು 'ಸಂಭವತಿ ತು' ಎಂಬ ವಾಕ್ಯದಿಂದ ತಿಳಿಸಿದ್ದಾರೆ.

ಋಗಾದಿ ವೇದಗಳು ಮಹಾಭಾರತಾದಿ ಇತಿಹಾಸಾದಿಗ್ರಂಥಗಳೂ ಕರ್ಮಮೀಮಾಂಸಾಶಾಸ್ತ್ರ, ದೈವೀಮೀಮಾಂಸಾಶಾಸ್ತ್ರ ಇವೆಲ್ಲವೂ ಅಪರವಿದ್ಯ ಎನಿಸಿವೆ. ಬೌದ್ಧಾದಿಶಾಸ್ತ್ರಗಳಲ್ಲಿ ವಿದ್ಯಾತ್ವವೇ ಇರುವುದಿಲ್ಲ. ಆದ್ದರಿಂದ ಪರಿಶೇಷಾತ್ ಬ್ರಹ್ಮಮೀಮಾಂಸಾಶಾಸ್ತ್ರವಷ್ಟೇ ಶ್ರೇಷ್ಠಶಾಸ್ತ್ರವಾಗಿದೆ.

## ರಸಘಟ್ಟ
## ಪರಾಪರಶಬ್ದಗಳ ಅರ್ಥ

ಯಾದುಪತ್ಯ – ಅನ್ಯನ್ನ ಸಂಭವತಿ ॥ ಪರತ್ವಸ್ಯ ಅನ್ಯತ್ವರೂಪತ್ವೇ ಅಪರತ್ವಸ್ಯ ಅನನ್ಯತ್ವರೂಪತಾಪತ್ತ್ಯಾ ತತ್ರ ಯೇ ವೇದಾ ಯಾನ್ಯಂಗಾನಿ ಇತ್ಯಾದಿಭೇದವ್ಯಪದೇಶೋ ಬಾಧಿತಃ ಸ್ಯಾದಿತ್ಯರ್ಥಃ । ಅತೋಽಪರತ್ವಮ್ ಅಧಮತ್ವಂ ತತ್ಪ್ರತಿಯೋಗಿಕಂ ಚ ಪರತ್ವಮ್ ಉತ್ತಮಮೇವ ವಕ್ತವ್ಯಮ್ ಇತಿ ಭಾವಃ ।

ಅನ್ಯನ್ನ ಸಂಭವತಿ – ಪರ ಎಂಬ ಶಬ್ದಕ್ಕೆ ಬೇರೆ ಎಂಬರ್ಥವನ್ನು ಹೇಳಿದರೆ ಅಪರ ಎಂಬ ಶಬ್ದಕ್ಕೆ ಬೇರೆಯಲ್ಲದ್ದು (ಒಂದೇ ಆದದ್ದು) ಎಂಬರ್ಥವನ್ನು ಹೇಳಿದಂತಾಗುತ್ತದೆ. ಆಗ 'ವೇದಾಃ ಯಾನಿ ಅಂಗಾನಿ' ಇತ್ಯಾದಿ ಶ್ರುತಿಯಲ್ಲಿ ವೇದ ಹಾಗೂ ವೇದಾಂಗಗಳಿಗೆ ಭೇದವ್ಯಪದೇಶ ಹೇಳಿದ್ದು ಬಾಧಿತವಾಗುತ್ತಿತ್ತು. ಹಾಗಾಗಿ ಅಪರ ಎಂಬ ಶಬ್ದಕ್ಕೆ ಅಧಮವಾದದ್ದು ಎಂಬರ್ಥವನ್ನು ವಿವಕ್ಷಿಸಬೇಕು. ಅದಕ್ಕೆ ಪ್ರತಿಯೋಗಿಯಾಗಿ ಪರ ಎಂಬ ಶಬ್ದಕ್ಕೆ ಉತ್ತಮವಾದದ್ದು ಎಂಬರ್ಥವನ್ನು ಹೇಳಬೇಕು.

## ಋಗಾದಿವೇದಗಳಿಗೆ ಅಪರವಿದ್ಯಾತ್ವಸಮರ್ಥನೆ

ಆನಂದ – ನನ್ವಸ್ತು ಪರವಿದ್ಯಾಶಬ್ದೇನ ಸರ್ವೋತ್ತಮಪ್ರಾಮಾಣ್ಯಲಾಭಃ, ತಥಾಽಪಿ ಪರವಿದ್ಯಾಖ್ಯಾ ಸೂತ್ರಾಣಾಮೇವ ಕುತಃ? ಋಗಾದಿರೇವ ಕಿಂ ನ ಸ್ಯಾತ್? ಇತ್ಯತ ಆಹ – ತಚ್ಚೇತಿ ॥ ಅತ್ರ ಹೇತುಮಾಹ – ನಿರ್ಣೇತವ್ಯಾರ್ಥಾನಾಮ್ ಇತಿ ॥ ಋಗಾದಿಪದವಾಚ್ಯಾನಾಮ್





ತ್ತಮತ್ವೇನಾಪಿ ತದ್ವ್ಯಾವೃತ್ತಿರಿತ್ಯಾಹ – ಪರತ್ವೇತಿ ॥ ಪರಿಶೇಷಸ್ಯ ಅನುತ್ತಮತ್ವೋಕ್ತ್ಯಾ ಸೂಚಿತಂ ತತ್ತ್ಯೋಜಕಮ್ ಆಹ – ಸಂಭವತೀತಿ ॥

'ಪರೋರಿ ಪರಮಾತ್ಮನೋಃ' ಎಂಬ ಮಾತಿನಂತೆ ಪರಶಬ್ದಕ್ಕೆ ಬೇರೆ, ಶತ್ರು, ಪರಮಾತ್ಮ ಎಂಬ ಅರ್ಥಗಳಿವೆ. ಪರವಿದ್ಯಾ ಎಂಬಲ್ಲಿರುವ ಪರಶಬ್ದಕ್ಕೆ ಈ ಮೂರು ಅರ್ಥಗಳನ್ನು ಕೂಡ ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಹಿಂದೆ ಅಪರ ಎಂಬುದು ಪ್ರಸಕ್ತವಾಗಿದೆ. ಅದಕ್ಕೆ ಪ್ರತಿಯೋಗಿಯಾದ ಉತ್ತಮ ಎಂಬ ಅರ್ಥವನ್ನೇ ವಿವಕ್ಷಿಸಬೇಕು. ಏಕೆಂದರೆ ಅನ್ಯತ್ವಾದಿಗಳು ಅಪರಕ್ಕೆ ಪ್ರತಿಯೋಗಿಯೇ ಆಗಿರುವುದಿಲ್ಲ. ಮತ್ತು ವಿದ್ಯಾದಲ್ಲಿ ಅವು ಅಸಂಭಾವಿತವೂ ಆಗಿವೆ.

ಬ್ರಹ್ಮಮೀಮಾಂಸಾಶಾಸ್ತ್ರಕ್ಕಿಂತ ಅತಿರಿಕ್ತವಾದದ್ದು ಪರವಿದ್ಯೆ ಎಂದು ವಿವಕ್ಷಿಸುವುದಾದರೆ ಅದು ಋಗಾದಿ ವೇದಗಳೋ ಅಥವಾ ತದತಿರಿಕ್ತವೋ. ಅತಿರಿಕ್ತವೆಂದು ಹೇಳಿದಾಗಲೂ ನಿರ್ಣೇತವ್ಯವಾದ ಇತಿಹಾಸಗಳೋ ಅಥವಾ ನಿರ್ಣಾಯಕವಾದ ಕರ್ಮಮೀಮಾಂಸಾ ದೇವಮೀಮಾಂಸಾದಿ ಶಾಸ್ತ್ರಗಳೋ ಅಥವಾ ಬೌದ್ಧಾದಿಶಾಸ್ತ್ರಗಳೋ? ಇಷ್ಟು ವಿಕಲ್ಪಗಳನ್ನು ಮನಸ್ಸಿನಲ್ಲಿ ವಿವಕ್ಷಿಸಿ ಋಗಾದಿಶಬ್ದಗಳಿಂದ ನಿರ್ಣೇತವ್ಯವಾದ ಇತಿಹಾಸಾದಿಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂಬ ಅಭಿಪ್ರಾಯದಿಂದ 'ನಿರ್ಣೇತವ್ಯಾರ್ಥಾನಾಮ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಈ ವಾಕ್ಯದಿಂದ ಋಗಾದಿವೇದಗಳು ಮತ್ತು ಇತಿಹಾಸಾದಿಗಳು ಪರವಿದ್ಯೆ ಎನಿಸುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸಿದಂತಾಯಿತು.

ಅತಿರಿಕ್ತಪಕ್ಷದಲ್ಲಿ ಎರಡನೆಯ ಪಕ್ಷವನ್ನು ಶಾಸ್ತ್ರಶಬ್ದದಿಂದ ಸೂಚಿತವಾದ ಯುಕ್ತಿಯಿಂದ ನಿರಾಕರಣೆ ಮಾಡಲು 'ಅನ್ಯಸ್ಯ ಚ' ಎಂಬ ವಾಕ್ಯವು ಹೊರಟಿದೆ. 'ಸಬ್ರಹ್ಮವಿದ್ಯಾಂ' ಎಂಬುದಾಗಿ ಬ್ರಹ್ಮಮೀಮಾಂಸಾಶಾಸ್ತ್ರವೇ ಪ್ರಕರಣದಿಂದ ಪ್ರಾಪ್ತವಾಗಿರುವ ಕಾರಣ ಕರ್ಮಮೀಮಾಂಸಾಶಾಸ್ತ್ರವಾಗಲೀ ದೈವೀಮೀಮಾಂಸಾಶಾಸ್ತ್ರವಾಗಲೀ ಪರವಿದ್ಯೆ ಎಂದು ಕರೆಸಿಕೊಳ್ಳುವುದಿಲ್ಲ. ಸರ್ವನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವು ಬಾರದಿದ್ದಾಗ ತದೇಕದೇಶವಾದ ಅಮುಖ್ಯವಾಗಿ ಶಾಸ್ತ್ರವೆಂದು ಕರೆಸಿಕೊಳ್ಳುವ ವ್ಯಾಖ್ಯಾನರೂಪವಾದ ಕರ್ಮಮೀಮಾಂಸಾಶಾಸ್ತ್ರಕ್ಕಾಗಲೀ ದೈವೀಮೀಮಾಂಸಾಶಾಸ್ತ್ರಕ್ಕಾಗಲೀ ಪರವಿದ್ಯಾತ್ವವು ಸುತರಾಂ ಪ್ರಾಪ್ತವಾಗುವುದಿಲ್ಲ ಎಂಬರ್ಥವನ್ನು ಕೂಡ ಹೇಳಬಹುದು.

ಬೌದ್ಧಾದಿಶಾಸ್ತ್ರಗಳು ವೇದವಿರುದ್ಧವಾಗಿರುವ ಕಾರಣ ಅಯಥಾರ್ಥಗಳಾಗಿವೆ. ಆದ್ದರಿಂದ ಶಾಸ್ತ್ರಶಬ್ದದಿಂದ ಸೂಚಿತವಾದ ಪ್ರಕರಣದಿಂದ ಇವುಗಳನ್ನು ನಿರಾಕರಣೆ ಮಾಡಿದಂತಾಯಿತು. ಹೀಗೆ ಎರಡನೆಯ ಪಕ್ಷದಲ್ಲಿ ಮೂರನೆಯ ವಿಕಲ್ಪವನ್ನು 'ಅನ್ಯಸ್ಯ' ಎಂಬ ವಾಕ್ಯದಿಂದಲೇ ನಿರಾಕರಣೆ ಮಾಡಿ-





ದ್ದಾರೆ. ಪರಶಬ್ದಾರ್ಥವೆನಿಸಿದ ಉತ್ತಮತ್ವದಿಂದಲೂ ಅಂಥ ಬೌದ್ಧಾದಿಶಾಸ್ತ್ರಗಳು ವ್ಯಾವರ್ತ್ಯವಾಗುತ್ತವೆಂಬುದನ್ನು 'ಪರತ್ವಾಸಂಭವಾಚ್ಚ' ಎಂಬುದಾಗಿ ಮತ್ತೊಂದು ಹೇತುವನ್ನು ಹೇಳುವ ಮೂಲಕ ಸಮರ್ಥನೆ ಮಾಡಿದ್ದಾರೆ. ಪರಿಶೇಷಾತ್ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅನುತ್ತಮತ್ವವು ಸಿದ್ಧವಾಗುತ್ತದೆ. ಇದರಿಂದ ಏನು ಲಾಭವಾಯಿತೆಂಬುದನ್ನು 'ಸಂಭವತಿ ತು' ಎಂಬ ವಾಕ್ಯದಿಂದ ತಿಳಿಸಿದ್ದಾರೆ.

ಋಗಾದಿ ವೇದಗಳು ಮಹಾಭಾರತಾದಿ ಇತಿಹಾಸಾದಿಗ್ರಂಥಗಳೂ ಕರ್ಮಮೀಮಾಂಸಾಶಾಸ್ತ್ರ, ದೈವೀಮೀಮಾಂಸಾಶಾಸ್ತ್ರ ಇವೆಲ್ಲವೂ ಅಪರವಿದ್ಯೆ ಎನಿಸಿವೆ. ಬೌದ್ಧಾದಿಶಾಸ್ತ್ರಗಳಲ್ಲಿ ವಿದ್ಯಾತ್ವವೇ ಇರುವುದಿಲ್ಲ. ಆದ್ದರಿಂದ ಪರಿಶೇಷಾತ್ ಬ್ರಹ್ಮಮೀಮಾಂಸಾಶಾಸ್ತ್ರವಷ್ಟೇ ಶ್ರೇಷ್ಠಶಾಸ್ತ್ರವಾಗಿದೆ.

## ರಸಘಟ್ಟ
## ಪರಾಪರಶಬ್ದಗಳ ಅರ್ಥ

ಯಾದುಪತ್ಯ – ಅನ್ಯನ್ನ ಸಂಭವತಿ ॥ ಪರತ್ವಸ್ಯ ಅನ್ಯತ್ವರೂಪತ್ವೇ ಅಪರತ್ವಸ್ಯ ಅನನ್ಯತ್ವರೂಪತಾಪತ್ತ್ಯಾ ತತ್ರ ಯೇ ವೇದಾ ಯಾನ್ಯಂಗಾನಿ ಇತ್ಯಾದಿಭೇದವ್ಯಪದೇಶೋ ಬಾಧಿತಃ ಸ್ಯಾದಿತ್ಯರ್ಥಃ । ಅತೋಽಪರತ್ವಮ್ ಅಧಮತ್ವಂ ತತ್ಪ್ರತಿಯೋಗಿಕಂ ಚ ಪರತ್ವಮ್ ಉತ್ತಮಮೇವ ವಕ್ತವ್ಯಮ್ ಇತಿ ಭಾವಃ ।

ಅನ್ಯನ್ನ ಸಂಭವತಿ – ಪರ ಎಂಬ ಶಬ್ದಕ್ಕೆ ಬೇರೆ ಎಂಬರ್ಥವನ್ನು ಹೇಳಿದರೆ ಅಪರ ಎಂಬ ಶಬ್ದಕ್ಕೆ ಬೇರೆಯಲ್ಲದ್ದು (ಒಂದೇ ಆದದ್ದು) ಎಂಬರ್ಥವನ್ನು ಹೇಳಿದಂತಾಗುತ್ತದೆ. ಆಗ 'ವೇದಾಃ ಯಾನಿ ಅಂಗಾನಿ' ಇತ್ಯಾದಿ ಶ್ರುತಿಯಲ್ಲಿ ವೇದ ಹಾಗೂ ವೇದಾಂಗಗಳಿಗೆ ಭೇದವ್ಯಪದೇಶ ಹೇಳಿದ್ದು ಬಾಧಿತವಾಗುತ್ತಿತ್ತು. ಹಾಗಾಗಿ ಅಪರ ಎಂಬ ಶಬ್ದಕ್ಕೆ ಅಧಮವಾದದ್ದು ಎಂಬರ್ಥವನ್ನು ವಿವಕ್ಷಿಸಬೇಕು. ಅದಕ್ಕೆ ಪ್ರತಿಯೋಗಿಯಾಗಿ ಪರ ಎಂಬ ಶಬ್ದಕ್ಕೆ ಉತ್ತಮವಾದದ್ದು ಎಂಬರ್ಥವನ್ನು ಹೇಳಬೇಕು.

## ಋಗಾದಿವೇದಗಳಿಗೆ ಅಪರವಿದ್ಯಾತ್ವಸಮರ್ಥನೆ

ಆನಂದ – ನನ್ವಸ್ತು ಪರವಿದ್ಯಾಶಬ್ದೇನ ಸರ್ವೋತ್ತಮಪ್ರಾಮಾಣ್ಯಲಾಭಃ, ತಥಾಽಪಿ ಪರವಿದ್ಯಾಖ್ಯಾ ಸೂತ್ರಾಣಾಮೇವ ಕುತಃ? ಋಗಾದಿರೇವ ಕಿಂ ನ ಸ್ಯಾತ್? ಇತ್ಯತ ಆಹ – ತಚ್ಚೇತಿ ॥ ಅತ್ರ ಹೇತುಮಾಹ – ನಿರ್ಣೀತವ್ಯಾರ್ಥಾನಾಮ್ ಇತಿ ॥ ಋಗಾದಿಪದವಾಚ್ಯಾನಾಮ್





ಅಪರವಿದ್ಯಾತ್ವೇನೋಕ್ತತ್ವಾತ್ ಇತ್ಯೇವೋಕ್ತೇ ಭಾರತಾದೇಃ ಋಗಾದಿಪದವಾಚ್ಯತ್ವಾಭಾವಾತ್ ಪರವಿದ್ಯಾತ್ವಂ ಸ್ಯಾದಿತಿ ಋಗಾದಿಪದೋಪಲಕ್ಷಿತಾನಾಮ್ ಇತ್ಯುಕ್ತಮ್ ।

ನನು ಉಪಲಕ್ಷ್ಯತಾವಚ್ಛೇದಕಾಭಾವಾತ್ ನೋಪಲಕ್ಷಣಂ ಸಂಭವತಿ ಇತ್ಯತ ಉಕ್ತಮ್ – ನಿರ್ಣೀತವ್ಯಾರ್ಥಾನಾಮ್ ಇತಿ ॥ ತಥಾ ಚ 'ಕಾಕೇಭ್ಯೋ ದಧಿ ರಕ್ಷ್ಯತಾಮ್' ಇತ್ಯತ್ರ ದಧ್ಯುಪಘಾತಕತ್ವರೂಪೋಪಲಕ್ಷ್ಯತಾವಚ್ಛೇದಕಸ್ಯ ಮಾರ್ಜಾರಾದಿಷ್ವಪಿ ಸತ್ತ್ವೇನ ಕಾಕಶಬ್ದೇನ ಮಾರ್ಜಾರಾದ್ಯುಪಲಕ್ಷಣವತ್ ಅತ್ರಾಪಿ ನಿಣೀತವ್ಯಾರ್ಥತ್ವರೂಪೋಪಲಕ್ಷ್ಯತಾವಚ್ಛೇದಕಸ್ಯ ಋಗಾದಿಷು ಭಾರತಾದಿಷು ಚ ಸತ್ತ್ವಾತ್ ಉಪಲಕ್ಷ್ಯತಾವಚ್ಛೇದಕೈಕ್ಯಾತ್ ಉಪಲಕ್ಷಣಂ ಯುಕ್ತಮಿತಿ ಭಾವಃ। ತಥಾಪಿ ಅಪೌರುಷೇಯಸ್ಯ ಋಗಾದೇರಪರವಿದ್ಯಾತ್ವಂ ಪೌರುಷೇಯಬ್ರಹ್ಮಸೂತ್ರಾಣಾಂ ಚ ಪರವಿದ್ಯಾತ್ವಂ ಕಥಂ ಘಟತೇ? ಇತ್ಯತೋಽಪ್ಯುಕ್ತಂ – ನಿರ್ಣೀತವ್ಯಾರ್ಥಾನಾಮ್ ಇತಿ ॥ ತಥಾ ಚ ವೇದಸ್ಯ ನಿಣೀತವ್ಯಾರ್ಥತ್ವಾತ್ ಬ್ರಹ್ಮಸೂತ್ರಾಣಾಂ ಚ ನಿರ್ಣೀತಾರ್ಥತ್ವೇನ ವ್ಯಾಖ್ಯಾನರೂಪತ್ವಾತ್ ವ್ಯಾಖ್ಯಾನವ್ಯಾಖ್ಯೇಯಯೋರ್ಮಧ್ಯೇ ವ್ಯಾಖ್ಯಾನಂ ಪ್ರಬಲಮ್ ಇತಿ ನ್ಯಾಯೇನ ಬ್ರಹ್ಮಸೂತ್ರಾಣಾಂ ಪ್ರಬಲತ್ವೇನ ಪರವಿದ್ಯಾತ್ವಮ್, ಋಗಾದೀನಾಂ ತು ವ್ಯಾಖ್ಯೇಯತ್ವೇನ ಅಪರವಿದ್ಯಾತ್ವಮಿತಿ ಭಾವಃ। ತರ್ಹಿ ಅಸ್ತು ಋಗಾದ್ಯತಿರಿಕ್ತಸ್ಯ ಪರವಿದ್ಯಾಶಬ್ದಾರ್ಥತ್ವಮ್ ಇತ್ಯತ ಆಹ – ಅನ್ಯಸ್ಯೇತಿ ॥ ಅಪ್ರಸಂಗಾತ್ ॥ ಪರವಿದ್ಯಾಶಬ್ದಾರ್ಥತ್ವಪ್ರಸಂಗಾಭಾವಾತ್ । ಕಿಂಚ ಅನ್ಯಸ್ಯ ಪರತ್ವಾಸಂಭವಾಚ್ಚ ನ ಪರವಿದ್ಯಾಶಬ್ದಾರ್ಥತ್ವಮ್ ಇತ್ಯಾಹ – ಪರತ್ವಾಸಂಭವಾಚ್ಚೇತಿ ॥

'ಪರವಿದ್ಯಾ' ಎಂಬ ಶಬ್ದದಿಂದ ಸರ್ವೋತ್ತಮಪ್ರಾಮಾಣ್ಯದ ಲಾಭವಾಗುತ್ತದೆಂದು ಒಪ್ಪೋಣ. ಅಂದಮಾತ್ರಕ್ಕೆ ಬ್ರಹ್ಮಸೂತ್ರವೇ ಏಕೆ ಪರವಿದ್ಯೆ ಆಗಬೇಕು? ಋಗಾದಿವೇದಗಳು ಪರವಿದ್ಯೆ ಎನಿಸಬಾರದೇ? ಈ ಪ್ರಶ್ನೆಗೆ ಉತ್ತರವನ್ನು ''ತಚ್ಚ'' ಇತ್ಯಾದಿ ಗ್ರಂಥದಿಂದ ನೀಡುತ್ತಿದ್ದಾರೆ. ಈ ವಿಷಯದಲ್ಲಿ 'ನಿರ್ಣೀತವ್ಯಾರ್ಥಾನಾಮ್' ಇತ್ಯಾದಿ ವಾಕ್ಯವು ಹೇತುವನ್ನು ಹೇಳುತ್ತಿದೆ. ಗ್ರಂಥದಲ್ಲಿ 'ಋಗಾದಿಪದವಾಚ್ಯಾನಾಮ್' ಎಂದು ಹೇಳಬಹುದಿತ್ತಲ್ಲವೇ? ಎಂದರೆ ಅಪರವಿದ್ಯಾ ಎಂದು ಕರೆಸಿಕೊಳ್ಳುವ ಮಹಾಭಾರತಾದಿಗಳಲ್ಲಿ ಋಗಾದಿ ಪದಗಳ ಪ್ರಯೋಗವು ಇರುವುದಿಲ್ಲ. ಹಾಗಾಗಿ ಮಹಾಭಾರತಾದಿಗಳಿಗೂ ಪರವಿದ್ಯಾತ್ವವು ಪ್ರಾಪ್ತವಾಗುತ್ತಿತ್ತು. ಆದರ ನಿವಾರಣೆಗಾಗಿ 'ಋಗಾದಿಪದವಾಚ್ಯಾನಾಂ' ಎಂದು ಹೇಳದೇ 'ಋಗಾದಿಪದೋಪಲಕ್ಷಿತಾನಾಂ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ.

ಉಪಲಕ್ಷ್ಯತಾವಚ್ಛೇದಕವಾದದ್ದೇ ಇಲ್ಲದ ಕಾರಣ ಉಪಲಕ್ಷಣವು ಹೇಗೆ ಕೂಡುತ್ತದೆ? ಈ ಪ್ರಶ್ನೆಗೂ ಕೂಡ 'ನಿಣೀತವ್ಯಾರ್ಥಾನಾಮ್' ಎಂಬ ವಾಕ್ಯವೇ ಉತ್ತರಿಸುತ್ತಿದೆ. ಇಷ್ಟು ಅಭಿಪ್ರಾಯ –

'ಕಾಕೇಭ್ಯೋ ದಧಿ ರಕ್ಷ್ಯತಾಮ್ = ಕಾಗೆಗಳಿಂದ ಮೊಸರನ್ನು ರಕ್ಷಿಸು' ಎಂದು ಹೇಳಿದರೆ ಮೊಸರನ್ನು ತಿನ್ನುವ ಮಾರ್ಜಾಲಾದಿಗಳೂ ಕೂಡ ಬಾರದಂತೆ ರಕ್ಷಣೆ ಮಾಡು ಎಂದೇ ಅರ್ಥ. ಇಲ್ಲಿರುವ ಕಾಕ ಎಂಬ ಪದವು ಬೆಕ್ಕು ಮೊದಲಾದ ಪ್ರಾಣಿಗಳನ್ನು ಉಪಲಕ್ಷಣಯಾ ಹೇಳುತ್ತಿದೆ. ದಧ್ಯುಪಘಾತಕತ್ವ ಎಂಬ ಉಪಲಕ್ಷ್ಯತಾವಚ್ಛೇದಕವು ಕಾಗೆಯಲ್ಲಿ ಇದ್ದಂತೆ ಬೆಕ್ಕು ಮೊದಲಾದ ಪ್ರಾಣಿಗಳಲ್ಲೂ ಇದೆ. ಹಾಗಾಗಿ ಕಾಕ ಎಂಬ ಶಬ್ದದಿಂದ ಬೆಕ್ಕು ಮೊದಲಾದವುಗಳನ್ನು ಉಪಲಕ್ಷಣಯಾ ವಿವಕ್ಷಿಸಲಾಗುತ್ತದೆ. ಅದರಂತೆ ಪ್ರಕೃತ ನಿರ್ಣೇತವ್ಯಾರ್ಥತ್ವ ಎಂಬ ಉಪಲಕ್ಷ್ಯತಾವಚ್ಛೇದಕ ಧರ್ಮವು ಋಗಾದಿವೇದಗಳಲ್ಲಿ ಇದ್ದಂತೆ ಮಹಾಭಾರತಾದಿಗಳಲ್ಲೂ ಇರುತ್ತದೆ. ಉಪಲಕ್ಷ್ಯತಾವಚ್ಛೇದಕಧರ್ಮದಲ್ಲಿ ಐಕ್ಯವಿರುವುದರಿಂದ ಉಪಲಕ್ಷಣಯಾ ಮಹಾಭಾರತಾದಿಗಳನ್ನೂ ಕೂಡ ವಿವಕ್ಷಿಸಬೇಕು. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರವಷ್ಟೇ ಪರವಿದ್ಯೆ ಎನಿಸುತ್ತದೆ. ಋಗಾದಿವೇದಗಳು ಮಹಾಭಾರತಾದಿಗಳು ಅಪರವಿದ್ಯೆ ಎನಿಸುತ್ತವೆ.

ಹೀಗೆ ಹೇಳಿದರೂ ಅಪೌರುಷೇಯವಾದ ಋಗಾದಿವೇದಗಳಿಗೆ ಅಪರವಿದ್ಯಾತ್ವವನ್ನು ಹೇಳುವುದು ತಪ್ಪಲ್ಲವೇ? ಪೌರುಷೇಯವಾದ ಬ್ರಹ್ಮಸೂತ್ರಗಳಿಗೆ ವೇದಗಳಿಗಿಂತಲೂ ಕೂಡ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವುದು ಹೇಗೆ ಕೂಡುತ್ತದೆ?. ಈ ಪ್ರಶ್ನೆಗೂ ಕೂಡ 'ನಿರ್ಣೇತವ್ಯಾರ್ಥಾನಾಂ'[1] ಎಂಬ ವಾಕ್ಯವೇ ಉತ್ತರಿಸುತ್ತದೆ. ವೇದವು ನಿರ್ಣೇಯಗ್ರಂಥವೆನಿಸಿದೆ. ಬ್ರಹ್ಮಮೀಮಾಂಸಾಶಾಸ್ತ್ರವು ನಿರ್ಣಾಯಕಗ್ರಂಥವೆನಿಸಿದೆ. ವೇದವು ವ್ಯಾಖ್ಯೇಯ ಎನಿಸಿದೆ. ಬ್ರಹ್ಮಸೂತ್ರಗಳು ವ್ಯಾಖ್ಯಾನ ಎನಿಸಿವೆ. ನಿರ್ಣೇಯ ಮತ್ತು ನಿರ್ಣಾಯಕಗಳಲ್ಲಿ ಅಥವಾ ವ್ಯಾಖ್ಯಾನ ಮತ್ತು ವ್ಯಾಖ್ಯೇಯಗಳಲ್ಲಿ ನಿರ್ಣಾಯಕವೇ ಪ್ರಬಲ ಅಥವಾ ವ್ಯಾಖ್ಯಾನವೇ ಪ್ರಬಲ. ಇದು ನ್ಯಾಯಸಿದ್ಧವಾಗಿದೆ. ಈ ದೃಷ್ಟಿಯಿಂದ ಬ್ರಹ್ಮಮೀಮಾಂಸಾಶಾಸ್ತ್ರವೇ ವೇದಕ್ಕಿಂತ ಶ್ರೇಷ್ಠ ಎನಿಸುತ್ತದೆ. ಋಗಾದಿವೇದಗಳು ನಿರ್ಣೇಯವಾದ್ದರಿಂದ ಮತ್ತು ವ್ಯಾಖ್ಯೇಯವಾದ್ದರಿಂದ ಅಧಮವಿದ್ಯೆ ಎನಿಸುತ್ತದೆ.

ಹಾಗಾದರೆ ಋಗಾದ್ಯತಿರಿಕ್ತವಾದ ಶಾಸ್ತ್ರಗಳಿಗೆ ಪರವಿದ್ಯಾತ್ವವು ಪ್ರಾಪ್ತವಾಗಲಿ? ಎಂಬ ಪ್ರಶ್ನೆಗೆ 'ಅನ್ಯಸ್ಯ' ಎಂಬ ಮುಂದಿನ ವಾಕ್ಯವು ಉತ್ತರಿಸುತ್ತದೆ. ಇಲ್ಲಿರುವ 'ಅಪ್ರಸಂಗಾತ್' ಎಂಬ ಪದಕ್ಕೆ ಪರವಿದ್ಯೆ ಎಂಬ ಶಬ್ದಾರ್ಥವನ್ನು ಹೇಳುವ ಪ್ರಸಂಗವೇ ಇಲ್ಲ ಎಂದರ್ಥ. ಮತ್ತು ಬೇರೆ ಶಾಸ್ತ್ರಗಳಿಗೆ ಪರತ್ವವು ಅಸಂಭಾವಿತವಾಗಿದೆ. ಆದ್ದರಿಂದ ಪರವಿದ್ಯೆ ಎಂದು ಕರೆಯಲು ಸಾಧ್ಯವಿಲ್ಲ. ಈ ವಿಷಯವನ್ನು 'ಪರತ್ವಾಸಂಭವಾಚ್ಚ' ಎಂಬುದಾಗಿ ಹೇಳಿದ್ದಾರೆ.

---

[1] ನಿರ್ಣೇತವ್ಯಾರ್ಥಾನಾಮ್ ಎಂಬ ವಾಕ್ಯಕ್ಕೆ ಮೂರು ಮಜಲಿನ ವ್ಯಾಖ್ಯಾನ ಅರ್ಥಪೂರ್ಣವಾಗಿರುವುದನ್ನು ವಿದ್ಯಾರ್ಥಿಗಳು ಗಮನಿಸಬೇಕು.

## ಬ್ರಹ್ಮಸೂತ್ರಗಳು ವೇದಾನುಗ್ರಾಹಕವಾದ್ದರಿಂದ ಶ್ರೇಷ್ಠ

ಸತ್ಯವ್ರತತೀರ್ಥೀಯ – ನನು 'ದ್ವೇ ವಿದ್ಯೇ' ಇತಿ ಶ್ರುತೌ ಪರವಿದ್ಯಾ ಶ್ರೂಯತಾಮ್ । ತಸ್ಯಾಶ್ಚ ವಿದ್ಯಾಶಬ್ದಾದರ್ಥವಿವಕ್ಷಾಪೂರ್ವಕಂ ಯಥಾರ್ಥತ್ವಂ ಚಾಸ್ತು। ಶಾಸ್ತ್ರತ್ವಾಚ್ಚ ಪ್ರಾಮಾಣ್ಯಮ್। ತಸ್ಯ ಪರಶಬ್ದಾದುತ್ಕೃಷ್ಟತ್ವಮ್ । ಬ್ರಹ್ಮಸೂತ್ರಾಣಾಂ ಕಿಮಾಯಾತಮ್? ಇತ್ಯಾಶಂಕ್ಯ ಋಗಾದಿ-ಶಾಸ್ತ್ರಾಣಾಮ್ ಅಪರವಿದ್ಯಾತ್ವಾತ್ ಬ್ರಹ್ಮಾವಗತಿಕಾರಣತ್ವೇನ ತೇಷಾಮೇವ ಪರವಿದ್ಯಾತ್ವೇ ಸರ್ವೋತ್ಕೃಷ್ಟಪ್ರಾಮಾಣ್ಯಂ ಲಬ್ಧಮಿತ್ಯತ ಆಹ – ತಚ್ಚೇತಿ ॥

ನನು ಧರ್ಮಸೂತ್ರಾಣಾಮಪಿ ವೇದಾನುಗ್ರಾಹಕತ್ವಾತ್ ಪರವಿದ್ಯಾತ್ವಂ ಸ್ಯಾತ್? ಇತಿ ಚೇತ್, ತೇಷಾಂ ಬ್ರಹ್ಮಜ್ಞಾನಾರ್ಥಧರ್ಮಪ್ರತಿಪಾದಕತ್ವಮೇವ ಅಕ್ಷರಾಧಿಗತಿಕಾರಣತ್ವಾಭಾವಾತ್ ಇತ್ಯಾಹ – ಅನ್ಯಸ್ಯೇತಿ ॥ ನನು ಧರ್ಮಸೂತ್ರಾಣಾಂ ಕರ್ಮಪ್ರತಿಪಾದಕತ್ವಾತ್ ಕರ್ಮಣಾಂ ಬ್ರಹ್ಮಜ್ಞಾನಾರ್ಥತ್ವಾತ್ ಪರಂಪರಯಾ ತದಸ್ತೀತ್ಯತ ಆಹ – ಪರತ್ವೇತಿ ॥ ನನು ಕಥಂ ಬ್ರಹ್ಮ-ಸೂತ್ರಾಣಾಂ ಸಾಕ್ಷಾತ್ ಪರತ್ವಂ ವೇದದ್ವಾರತ್ವಾತ್ ಇತ್ಯತ ಆಹ ಸಂಭವತಿ ತ್ವಿತಿ ॥ ವೇದದ್ವಾರಾ ಬ್ರಹ್ಮಾವಗತಿಹೇತುತ್ವೇಽಪಿ ಸಾಕ್ಷಾದ್ ಬ್ರಹ್ಮಾವಗತಿಹೇತುಭೂತವೇದಾನುಗ್ರಾಹಕತ್ವಾತ್ ಪರತ್ವಮ್ ಇತ್ಯರ್ಥಃ।

'ದ್ವೇ ವಿದ್ಯೇ' ಎಂಬ ಶ್ರುತಿಯು ಪರವಿದ್ಯೆಯನ್ನು ಹೇಳಲಿ. ವಿದ್ಯಾಶಬ್ದವು ಯಥಾರ್ಥತ್ವವನ್ನು ಕೂಡ ಹೇಳಲಿ. ಶಾಸ್ತ್ರವಾಗಿರುವುದರಿಂದ ಪ್ರಾಮಾಣ್ಯವು ಕೂಡ ಸಿದ್ಧವಾಗಲಿ. ಪರಶಬ್ದದಿಂದ ಉತ್ಕೃಷ್ಟತ್ವವು ಕೂಡ ಸಿದ್ಧವಾಗಲಿ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇದರಿಂದ ಏನು ಹೇಳಿ-ದಂತಾಯಿತು. ಪರವಿದ್ಯಾತ್ವವು ಇದಕ್ಕೆ ಸಿದ್ಧವಾಗುವ ಅವಶ್ಯಕತೆ ಇಲ್ಲ? ಎಂದು ಆಶಂಕಿಸಿ ಋಗಾದಿ-ಶಾಸ್ತ್ರಗಳೆಲ್ಲವೂ ಅಪರವಿದ್ಯೆಯಾಗಿವೆ. ಒಂದು ವೇಳೆ ಬ್ರಹ್ಮನನ್ನು ತಿಳಿಯಲು ಕಾರಣವಾಗಿರುವುದರಿಂದ ಋಗಾದಿಶಾಸ್ತ್ರಗಳೇ ಪರವಿದ್ಯೆಯೆಂದು ಹೇಳಿದರೆ ಅವುಗಳಲ್ಲಿ ಸರ್ವೋತ್ಕೃಷ್ಟಪ್ರಾಮಾಣ್ಯವು ಸಿದ್ಧ-ವಾಗಬೇಕಾಗುತ್ತದೆ ಎಂಬುದನ್ನು "ತಚ್ಚ" ಎಂಬ ವಾಕ್ಯದಿಂದ ಹೇಳಿದ್ದಾರೆ.

ಧರ್ಮಪ್ರತಿಪಾದಕವಾದ ಸೂತ್ರಗಳು ಕೂಡ ವೇದಾನುಗ್ರಾಹಕವಾಗಿರುವ ಕಾರಣ ಪರವಿದ್ಯೆ ಆಗಲಿ? ಎಂದು ಪ್ರಶ್ನಿಸಬಾರದು. ಬ್ರಹ್ಮಜ್ಞಾನಕ್ಕೋಸ್ಕರ ಧರ್ಮವನ್ನು ಪ್ರತಿಪಾದನೆ ಮಾಡುತ್ತಿರು-ವುದರಿಂದ ಅಕ್ಷರಜ್ಞಾನಸಾಧನವೆಂಬ ಯುಕ್ತಿಯು ಇಲ್ಲದ್ದರಿಂದಲೂ ಅವುಗಳು ಪರವಿದ್ಯೆ ಎನಿಸುವುದಿಲ್ಲ ಎಂಬುದನ್ನು "ಅನ್ಯಸ್ಯ" ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.





ಧರ್ಮಪ್ರತಿಪಾದಕವಾದ ಸೂತ್ರಗಳು ಕರ್ಮಪ್ರತಿಪಾದಕವಾಗಿವೆ. ಕರ್ಮಗಳು ಬ್ರಹ್ಮಜ್ಞಾನ-ಕ್ಕೋಸ್ಕರ ಇರುತ್ತವೆ. ಹೀಗೆ ಪರಂಪರೆಯಿಂದ ಬ್ರಹ್ಮಪ್ರತಿಪಾದಕವಾಗಿವೆಯಲ್ಲವೇ? ಈ ಪ್ರಶ್ನೆಗೆ 'ಪರತ್ವಾಸಂಭವಾಚ್ಚ' ಎಂಬುದಾಗಿ ಉತ್ತರಿಸಿದ್ದಾರೆ.

ಬ್ರಹ್ಮಸೂತ್ರಗಳಿಗೆ ನೇರವಾಗಿ ಸರ್ವೋತ್ತಮತ್ವವು ಹೇಗೆ ಬರಲು ಸಾಧ್ಯ. ಇವುಗಳೂ ಕೂಡ ವೇದದ ಮೂಲಕವೇ ಬ್ರಹ್ಮನನ್ನು ತಿಳಿಸುತ್ತವಲ್ಲವೇ? ಈ ಪ್ರಶ್ನೆಗೆ 'ಸಂಭವತಿ ತು' ಎಂಬುದಾಗಿ ಉತ್ತರಿಸಿದ್ದಾರೆ. ವೇದಗಳ ಮೂಲಕವೇ ಬ್ರಹ್ಮನನ್ನು ತಿಳಿಸುವುದಾದರೂ ಕೂಡ ಸಾಕ್ಷಾತ್ ಬ್ರಹ್ಮನನ್ನು ತಿಳಿಸುವ ವೇದಕ್ಕೆ ಅನುಗ್ರಾಹಕವಾಗಿರುವ ಕಾರಣ ಶ್ರೇಷ್ಠವೆಂದು ತಿಳಿಯಬೇಕು.

## 'ಅಯಂ ಪರಮಧಾರ್ಮಿಕಃ' ಎಂಬಲ್ಲಿ ಪರಿಷ್ಕಾರ

ಕಾಶಿಕಾ– ಅಯಮರ್ಥಃ– 'ಅಯಂ ಪರಮಧಾರ್ಮಿಕಃ' ಇತ್ಯುಕ್ತೇ ಧನಾದಿನಾ ಪರಮತ್ವಸ್ಯ ಕಿಂಚದ್ ಧಾರ್ಮಿಕತ್ವಸ್ಯ ಚಾಪ್ರತೀತೇಃ । ಸಾತಿಶಯಧರ್ಮಬೋಧಕಶಬ್ದಾಂತರಸಮಭಿ-ವ್ಯಾಹೃತೋತ್ಕೃಷ್ಟಾರ್ಥಕಶಬ್ದಸ್ಯ ಅನ್ವಯಿತಾವಚ್ಛೇದಕಧರ್ಮಾತಿಶಯಪ್ರಯುಕ್ತೋತ್ಕರ್ಷ-ಬೋಧಕತ್ವವ್ಯುತ್ಪತ್ತಿರಂಗೀಕಾರ್ಯಾ । 'ಉತ್ತಮಃ ಪಟಃ' ಇತ್ಯಾದೌ ಪಟತ್ವಾತಿಶಯಾಬೋಧಾತ್ ಸಾತಿಶಯ ಇತ್ಯಾದಿ । ತಥಾ ಚ ಪರಮಧಾರ್ಮಿಕ ಇತ್ಯಾದೌ ಪರಮಶಬ್ದಾತ್ ಧಾರ್ಮಿಕಾಂತರಾ-ವಧಿಕಧರ್ಮಾತಿಶಯಪ್ರಯುಕ್ತಶ್ರೇಷ್ಠ್ಯವತ್ ಪರವಿದ್ಯಾ ಇತ್ಯತ್ರ ಪರಶಬ್ದಾದ್ ವಿದ್ಯಾಂತರಾವಧಿಕ-ಪ್ರಾಮಾಣ್ಯಾತಿಶಯಪ್ರಯುಕ್ತಶ್ರೈಷ್ಠ್ಯಸ್ಯೈವ ಬೋಧಃ। ಪ್ರಾಮಾಣ್ಯಸ್ಯ ಸಾತಿಶಯತ್ವಂ ತು ವಕ್ಷ್ಯತೇ।

'ಅಯಂ ಪರಮಧಾರ್ಮಿಕಃ' ಎಂದು ಹೇಳಿದಾಗ ಪರಮಶಬ್ದದಿಂದ ಬಹು ಹಣವುಳ್ಳವನೆಂದು ಧಾರ್ಮಿಕಪದದಿಂದ ಸ್ವಲ್ಪ ಧರ್ಮಾಚರಣೆಯುಳ್ಳವನೆಂದು ಯಾರಿಗೂ ಬೋಧ ಬರುವುದಿಲ್ಲ. ಇನ್ನೊಬ್ಬ ಧಾರ್ಮಿಕನಿಗಿಂತ ಇವನು ಉತ್ತಮನಾಗಿದ್ದಾನೆ ಎಂದೇ ತಿಳಿಯುತ್ತದೆ. ಆದ್ದರಿಂದ ಇಂತಹ ಸ್ಥಳದಲ್ಲಿ ಸಾತಿಶಯಧರ್ಮಬೋಧಕಶಬ್ದಾಂತರಸಮಭಿವ್ಯಾಹೃತೋತ್ಕೃಷ್ಟಾರ್ಥಕಶಬ್ದವು ಅನ್ವಯಿ-ತಾವಚ್ಛೇದಕಧರ್ಮಾತಿಶಯಪ್ರಯುಕ್ತೋತ್ಕರ್ಷಬೋಧಕವೆಂದು ತಿಳಿಯಬೇಕು. ಇಲ್ಲಿ ಸಾತಿಶಯ-ಧರ್ಮಬೋಧಕಶಬ್ದವೆಂದರೆ ಧಾರ್ಮಿಕ ಎಂಬ ಶಬ್ದ. ಆದರಿಂದ ಸಮಭಿವ್ಯಾಹೃತವಾದ ಉತ್ಕೃಷ್ಟಾ-ರ್ಥಕಶಬ್ದವೆಂದರೆ ಪರಮ ಎಂಬ ಶಬ್ದ. ಅದು ಅನ್ವಯಿತಾವಚ್ಛೇದಕವಾದ ಧಾರ್ಮಿಕತ್ವದ ಅತಿಶಯ-ಪ್ರಯುಕ್ತವಾದ ಉತ್ಕರ್ಷವನ್ನು ತಿಳಿಸುತ್ತದೆ.

## ಸುಧಾಪರಿಮಳಸಾರ

'ಚಕ್ರೇ ಶಾಸ್ತ್ರಮನುತ್ತಮಮ್' ಎಂಬುದಾಗಿ ಅನುವ್ಯಾಖ್ಯಾನಶ್ಲೋಕದಲ್ಲಿ ಪರಮಶ್ರೇಷ್ಠವಾದ ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಾರಾಯಣನು ರಚನೆ ಮಾಡಿದನು ಎಂಬುದಾಗಿ ಹೇಳಿದರು. ಇದನ್ನು ನೋಡಿದಾಗ ಬ್ರಹ್ಮಮೀಮಾಂಸಾಶಾಸ್ತ್ರವೊಂದೇ ಸರ್ವೋತ್ತಮಪ್ರಮಾಣವಾಗಿದೆ ಉಳಿದವುಗಳಲ್ಲ ಎಂದು ತಿಳಿಯುತ್ತದೆ. ಇದು ಹೇಗೆ ಎಂಬುದನ್ನು ಈಗ ಸಮರ್ಥನೆ ಮಾಡುತ್ತಿ-ದ್ದಾರೆ. ಒಟ್ಟು ವಿದ್ಯೆಗಳು ಎರಡು. (1) ಪರವಿದ್ಯೆ (2) ಅಪರವಿದ್ಯೆ . ಹೀಗೆ ಆಥರ್ವಣೋ-ಪನಿಷತ್ತು ವಿಭಾಗ ಮಾಡಿದೆ. ಇಷ್ಟನ್ನೇ ಹೇಳಿ ಸುಮ್ಮನಾಗದೇ ಯಾವುದು ಅಪರವಿದ್ಯೆ ಎಂಬುದರ ವಿವರಣೆಯನ್ನು ಕೂಡ ತಾನೇ ಮಾಡಿದೆ. ಆರು ಅಂಗಗಳಿಂದ ಕೂಡಿದ ಋಗಾದಿ-ವೇದಗಳು ಅಪರವಿದ್ಯೆ ಎನಿಸಿವೆ. ಪರಮಾತ್ಮನ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವ ಬ್ರಹ್ಮಮೀಮಾಂಸಾಶಾಸ್ತ್ರವು ಪರವಿದ್ಯೆ ಎನಿಸಿದೆ ಎಂದು. ಇಲ್ಲಿರುವ ಪರ ಎಂಬ ಶಬ್ದಕ್ಕೆ ಲೋಕದಲ್ಲಿ ಬಳಕೆಯಿರುವ 'ಬೇರೆ' ಇತ್ಯಾದ್ಯರ್ಥಗಳನ್ನು ವಿವಕ್ಷಿಸಬಾರದು. ಸರ್ವೋತ್ತಮ ಎಂಬರ್ಥವನ್ನೇ ವಿವಕ್ಷಿಸಬೇಕು. ಏಕೆಂದರೆ ಇದಕ್ಕೆ ವಿರುದ್ಧವಾದ ಅಪರ ಎಂಬ ಶಬ್ದವು ಅಧಮ ಎಂಬರ್ಥದಲ್ಲಿ ಪ್ರಯುಕ್ತವಾಗಿರುವಾಗ ಪರ ಎಂಬ ಶಬ್ದಕ್ಕೆ ಉತ್ತಮ ಎಂಬರ್ಥವನ್ನೇ ಹೇಳಬೇಕು.

ಕೆಲವರು ಅಪರೋಕ್ಷಜ್ಞಾನವನ್ನು ಪರವಿದ್ಯೆ ಎನ್ನುವರು; ಉಪನಿಷತ್ತನ್ನು ಪರವಿದ್ಯೆ ಎನ್ನುವರು; ಋಗಾದಿವೇದಗಳನ್ನು ಪರವಿದ್ಯೆ ಎನ್ನುವರು; ಕರ್ಮಮೀಮಾಂಸಾ ದೈವಮೀಮಾಂಸಾ ಇವು-ಗಳನ್ನು ಪರವಿದ್ಯೆ ಎನ್ನುವರು; ಬೌದ್ಧಾದಿಶಾಸ್ತ್ರಗಳನ್ನೂ ಕೂಡ ಪರವಿದ್ಯೆ ಎನ್ನುವರು. ಆದರೆ ಇವು ಯಾವುದೂ ಕೂಡ ಪರವಿದ್ಯೆ ಎನ್ನಿಸುವುದಿಲ್ಲ. ಬ್ರಹ್ಮಸೂತ್ರಗಳಷ್ಟೇ ಪರವಿದ್ಯೆ ಎನಿಸು-ತ್ತವೆ. ಏಕೆಂದರೆ ಪರವಿದ್ಯೆಯನ್ನು ಹೇಳುವ ಉಪನಿಷತ್ತಿನ ಪ್ರಕರಣದಲ್ಲಿ ಬೌದ್ಧಾದಿಶಾಸ್ತ್ರಗಳು ಪ್ರಸ್ತುತವೇ ಆಗಿರುವುದಿಲ್ಲ. ವೇದಾದಿಶಾಸ್ತ್ರಗಳನ್ನು ಸ್ವತಃ ತಾನೇ ಅಪರವಿದ್ಯೆಯೆಂದು ಗುರುತಿಸಿದೆ. ಪರಿಶೇಷಾತ್ ಬ್ರಹ್ಮಸೂತ್ರವನ್ನೇ ಪರವಿದ್ಯೆ ಎನ್ನಬೇಕು. ಬ್ರಹ್ಮಮೀಮಾಂಸಾಶಾಸ್ತ್ರವು ಪರಮಾತ್ಮನ ಜ್ಞಾನವನ್ನು ತಂದುಕೊಡುವ ವೇದಗಳಿಗೆ ಅನುಗ್ರಾಹಕವಾಗಿರುವ ಕಾರಣ ಶ್ರೇಷ್ಠವಾಗಿದೆ ಎಂಬುದು ಒಟ್ಟು ಅಭಿಪ್ರಾಯ.

## ಪರಿಮಳದ ವೈಶಿಷ್ಟ್ಯ

* ಅಪರೋಕ್ಷಜ್ಞಾನವನ್ನೇ ಕೆಲವರು ಪರವಿದ್ಯೆ ಎನ್ನುವರು. ಈ ವಿಷಯವನ್ನು ತಾತ್ಪರ್ಯ-





ಚಂದ್ರಿಕಾ ಹಾಗೂ ಪ್ರಕಾಶ ಟಿಪ್ಪಣಿಯಲ್ಲಿ ಓದಿ ತಿಳಿಯಬೇಕು ಎಂಬುದರ ಉಪಸ್ಥಾಪನೆ ಅಪೂರ್ವ-ವಾಗಿದೆ.

* ಪರಶಬ್ದಕ್ಕೆ ಅಪರತ್ವಪ್ರತಿದ್ವಂದ್ವಿಭಾವದಿಂದ ಉತ್ತಮತ್ವವನ್ನು ಹೇಳಬೇಕು.

## ಉಪನಿಷತ್ತು ಪರವಿದ್ಯೆಯೋ? ಅಲ್ಲವೋ?

**ಶ್ರೀಮನ್ನ್ಯಾಯಸುಧಾ– ಏತೇನ ಉಪನಿಷದಃ ಪರವಿದ್ಯಾ ಇತಿ ವ್ಯಾಖ್ಯಾನಮ್ ಇತಿ ಪರಾಸ್ತಮ್ । ಋಗಾದಿಗ್ರಹಣೇನ ತಾಸಾಮಪಿ ಗೃಹೀತತ್ವಾತ್ । ಬ್ರಾಹ್ಮಣ-ಪರಿವ್ರಾಜಕನ್ಯಾಯಶ್ಚ ಅಗತಿಕಾ ಗತಿಃ । ತಜ್ಜನ್ಯಂ ಜ್ಞಾನಂ ಪರವಿದ್ಯಾ ಇತ್ಯಪಿ ನ ಯುಕ್ತಮ್ । ಅಧಿಗತಿಕರಣತ್ವಾನುಪಪತ್ತೇಃ । ಅನೇಕಾರ್ಥತಾಕಲ್ಪನಾಪತ್ತೇಶ್ಚ ।**

**ಅತೋಽನಯಾ ಪರವಿದ್ಯಾಖ್ಯಯಾ ಅಸ್ಯ ಶಾಸ್ತ್ರಸ್ಯ ಸರ್ವೋತ್ತಮಪ್ರಾಮಾಣ್ಯ-ಸಾಧನಮ್ ಉಪಪನ್ನಮಿತಿ ।**

ಬ್ರಹ್ಮಸೂತ್ರಗಳು ಪರವಿದ್ಯೆ ಎಂದು ಹೇಳಿದ್ದರಿಂದ 'ಉಪನಿಷತ್ತುಗಳು ಪರವಿದ್ಯೆ ಎನಿ-ಸುತ್ತವೆ' ಎಂಬ ಮಾಯಾವಾದಿಗಳ ವ್ಯಾಖ್ಯಾನವನ್ನು ಕೂಡ ನಿರಾಕರಣೆ ಮಾಡಿದಂತಾ-ಯಿತು. ಏಕೆಂದರೆ ಋಗಾದಿವೇದಗಳಲ್ಲಿಯೇ ಉಪನಿಷತ್ತುಗಳು ಸಹ ಅಂತರ್ಗತವಾಗಿವೆ. ಬೇರೆ ಗತಿಯಿಲ್ಲದಾಗ ಮಾತ್ರ ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಬೇಕು.

'ಉಪನಿಷತ್ತಿನಿಂದ ಜನ್ಯವಾದ ಜ್ಞಾನವು ಪರವಿದ್ಯೆ' ಎಂಬುದಾಗಿ ರಾಮಾನುಜರು ಹೇಳುತ್ತಾರೆ. ಇದೂ ಕೂಡ ಅಯುಕ್ತವಾಗಿದೆ. ಏಕೆಂದರೆ ಅಕ್ಷರನಾಮಕನಾದ ಪರಮಾತ್ಮನ ಜ್ಞಾನಕ್ಕೆ ಯಾವುದು ಸಾಧನವೋ ಅದೇ ಪರವಿದ್ಯೆ ಎನಿಸುತ್ತದೆ. ಇದು ಉಪನಿಷತ್ತಿನಿಂದ ಜನ್ಯವಾದ ಜ್ಞಾನದಲ್ಲಿ ಇರುವುದಿಲ್ಲ. ಮತ್ತು ದ್ವೇ ವಿದ್ಯೇ ವೇದಿತವ್ಯೇ ಎಂಬುದಾಗಿ ಒಂದು ಬಾರಿ ಪ್ರಯೋಗ ಮಾಡಲ್ಪಟ್ಟ ವಿದ್ಯಾಶಬ್ದಕ್ಕೆ ಅನೇಕಾರ್ಥಗಳನ್ನು ಕಲ್ಪನೆ ಮಾಡಬೇಕಾ-ಗುತ್ತದೆ.

ಆದ್ದರಿಂದ ಈ ಪರವಿದ್ಯಾ ಎಂಬ ಹೆಸರುಳ್ಳ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸರ್ವೋತ್ತಮಪ್ರಾಮಾಣ್ಯವನ್ನು ಸಾಧನೆ ಮಾಡಿದ್ದು ಅತ್ಯಂತ ಯುಕ್ತವಾಯಿತು.

## ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಬೇಕೇ?

ಪರಿಮಳ– ಮಾಯಾವಾದ್ಯುಕ್ತಂ ನಿರಾಹ – ಏತೇನ ಇತಿ ॥ 'ಬ್ರಾಹ್ಮಣಾ ಆಗತಾಃ ಪರಿವ್ರಾಜಕಶ್ಚಾಗತಾಃ' ಇತಿವತ್ ಸ್ಯಾದಿತ್ಯತ ಆಹ – ಬ್ರಾಹ್ಮಣೇತಿ ॥ 'ಅಗತಿಕಾ' ಇತಿ ಭಿನ್ನಂ ಪದಮ್ ।

ಮಾಯಾವಾದಿಗಳ ಮತವನ್ನು ನಿರಾಕರಣೆ ಮಾಡುವುದಕ್ಕಾಗಿ 'ಏತೇನ' ಇತ್ಯಾದಿ ಗ್ರಂಥವು ಹೊರಟಿದೆ. 'ಬ್ರಾಹ್ಮಣಾಃ ಆಗತಾಃ ಪರಿವ್ರಾಜಕಾಶ್ಚ ಆಗತಾಃ - ಬ್ರಾಹ್ಮಣರು ಬಂದರು; ಭಿಕ್ಷುಗಳು ಕೂಡ ಬಂದರು' ಎಂದು ಹೇಳಿದಾಗ ಬ್ರಾಹ್ಮಣಶಬ್ದಕ್ಕೆ 'ಪರಿವ್ರಾಜಕರನ್ನು ಬಿಟ್ಟು' ಎಂದು ಹೇಗೆ ಅರ್ಥ ಮಾಡುತ್ತೇವೋ ಅದರಂತೆ ಉಪನಿಷತ್ತುಗಳನ್ನು ಬಿಟ್ಟು ಎಂಬರ್ಥವನ್ನು ಋಗಾದಿಪದಗಳಿಗೆ ಮಾಡಬೇಕಲ್ಲವೇ? ಈ ಪ್ರಶ್ನೆಗೆ 'ಬ್ರಾಹ್ಮಣ' ಇತ್ಯಾದಿ ವಾಕ್ಯವು ಹೊರಟಿದೆ. ಅಗತಿಕಾಗತಿಃ ಎಂಬುದು ಒಂದೇ ಪದವಲ್ಲ. ಅಗತಿಕಾಃ ಎಂಬುದು ಒಂದು ಪದ; ಗತಿಃ ಎಂಬುದು ಬೇರೆಯ ಪದ.

## ರಾಮಾನುಜಮತನಿರಾಸ

ರಾಮಾನುಜೋಕ್ತಂ ನಿರಾಹ – ತಜ್ಜನ್ಯಮಿತಿ ॥ ಋಗಾದಿಜನ್ಯಮ್ ಉಪನಿಷಜ್ಜನ್ಯಂ ವಾ । ಅನೇಕಾರ್ಥತಾ ಇತಿ ॥ 'ದ್ವೇ ವಿದ್ಯೇ' ಇತ್ಯತ್ರ 'ಋಗಾದಿಕಂ ತಜ್ಜನ್ಯಜ್ಞಾನಂ ಚ' ಇತ್ಯನೇಕಾರ್ಥತ್ವಂ ಸಕೃತ್ ಶ್ರುತವಿದ್ಯಾಶಬ್ದಸ್ಯ ಇತ್ಯರ್ಥಃ।

ರಾಮಾನುಜರ ಮತವನ್ನು ನಿರಾಕರಣೆ ಮಾಡುವುದಕ್ಕಾಗಿ 'ತಜ್ಜನ್ಯಂ' ಇತ್ಯಾದಿ ಗ್ರಂಥವು ಹೊರಟಿದೆ. ತಜ್ಜನ್ಯಂ ಎಂಬ ಪದಕ್ಕೆ ಋಗಾದಿವೇದಗಳಿಂದ ಅಥವಾ ಉಪನಿಷತ್ತುಗಳಿಂದ ಹುಟ್ಟುವ ಜ್ಞಾನವೆಂದರ್ಥ.





ಅನೇಕಾರ್ಥತಾ – ದ್ವೇ ವಿದ್ಯೇ ಎಂಬ ಶ್ರುತಿಯಲ್ಲಿರುವ ವಿದ್ಯಾಶಬ್ದಕ್ಕೆ ಒಂದೇ ಕಾಲದಲ್ಲಿ ಋಗಾದಿವೇದಗಳು ಹಾಗೂ ಅವುಗಳಿಂದ ಹುಟ್ಟುವ ಜ್ಞಾನ ಎಂಬುದಾಗಿ ಎರಡರ್ಥವನ್ನು ಒಪ್ಪಬೇಕಾಗುತ್ತದೆ. ಒಮ್ಮೆ ಉಚ್ಚರಿತವಾದ ವಿದ್ಯಾಶಬ್ದಕ್ಕೆ ಅನೇಕಾರ್ಥವನ್ನು ಕಲ್ಪನೆ ಮಾಡುವುದು ಶಬ್ದಶಾಸ್ತ್ರಕ್ಕೆ ವಿರುದ್ಧವೆಂದಭಿಪ್ರಾಯ.

ವಿವರಣೆ –ಏತೇನ ಎಂಬುದರಿಂದ ಮಾಯಾವಾದಿಗಳು ಹೇಳಿದ್ದನ್ನು ನಿರಾಕರಿಸುತ್ತಿದ್ದಾರೆ. ಬ್ರಾಹ್ಮಣಾಃ ಆಗತಾಃ, ಪರಿವ್ರಾಜಕಾಶ್ಚ ಆಗತಾಃ ಎಂದು ಲೋಕದಲ್ಲಿ ಪ್ರಯೋಗವಿದೆ. ಪರಿವ್ರಾಜಕರೂ (ಸಂನ್ಯಾಸಿಗಳೂ) ಬ್ರಾಹ್ಮಣರೇ ಆಗಿದ್ದರೂ ಪುನಃ ಪ್ರತ್ಯೇಕವಾಗಿ ಪರಿವ್ರಾಜಕಶಬ್ದವಿದೆ. ಆದ್ದರಿಂದ ಇಲ್ಲಿರುವ ಬ್ರಾಹ್ಮಣಪದಕ್ಕೆ ಪರಿವ್ರಾಜಕರಲ್ಲದ ಬ್ರಾಹ್ಮಣರು ಎಂದು ಅರ್ಥೈಸಬೇಕು. ಹಾಗೆಯೇ ಪ್ರಕೃತ-ದಲ್ಲೂ ಋಗ್ವೇದದಲ್ಲಿಯೇ ಉಪನಿಷತ್ತು ಸೇರಿದ್ದರೂ ಋಗ್ವೇದಪದಕ್ಕೆ ಉಪನಿಷದನ್ಯವಾದ ವೇದವನ್ನ ವಿವಕ್ಷಿಸಬೇಕೆಂದು ಮಾಯಾವಾದಿಗಳ ಅಭಿಪ್ರಾಯ. ಬೇರೆ ಯಾವುದೇ ಗತಿಯಿಲ್ಲದಾಗ ಮಾತ್ರ ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಬೇಕು. ಪ್ರಕೃತದಲ್ಲಿ ದ್ವೈತಿಗಳು ಹೇಳಿದ ಗತಿಯಿರ-ಬೇಕಾದರೆ ಮಾಯಾವಾದಿಗಳ ಸಮರ್ಥನೆ ಸರಿಯಾದದ್ದಲ್ಲ. ರಾಮಾನುಜರ ಅಭಿಪ್ರಾಯವನ್ನು ತಜ್ಜನ್ಯಂ ಎಂಬುದರಿಂದ ನಿರಾಕರಿಸುತ್ತಿದ್ದಾರೆ.

## ಉಪನಿಷತ್ತು ವೇದಕ್ಕಿಂತ ಬೇರೆಯಲ್ಲ

ವಾಕ್ಯಾರ್ಥಚಂದ್ರಿಕಾ– ಉಕ್ತನ್ಯಾಯಂ ಸ್ವೋಕ್ತಪ್ರಸಕ್ತಪ್ರತಿಷೇಧವಿರೋಧ್ಯಪವ್ಯಾಖ್ಯಾನ-ನಿರಾಸೇಽಪಿ ಅತಿದಿಶತಿ– ಏತೇನೇತಿ ॥ 'ಸರ್ವೇ ವೇದಾ ಯತ್ಪದಮಾಮನಂತಿ' 'ವೇದೈಶ್ಚ ಸರ್ವೈ-ರಹಮೇವ ವೇದ್ಯಃ' ಇತ್ಯಾದಿ ಶ್ರುತಿಸ್ಮೃತಿಭಿರ್ಋಗಾದೀನಾಮುಪನಿಷದಾಂ ಚ ಬ್ರಹ್ಮಪರತ್ವಾವ-ಗಮಾತ್ ಉಪನಿಷತ್ಸ್ವಪಿ ಜ್ಞೇಯಶುದ್ಧಬ್ರಹ್ಮ ಅವಿಷಯಾಣಾಮುಪಾಸನಾದಿವಾಕ್ಯಾನಾಂ ಬಹೂನಾಂ, ಮಂತ್ರೇಷ್ವಪಿ ಜ್ಯೋತಿರಾದ್ಯಧಿಕರಣೋಕ್ತನ್ಯಾಯೇನ ಬ್ರಹ್ಮಪರಭಾಗಸ್ಯ ಚ ದರ್ಶನಾಚ್ಚ ಅವಿಶೇಷಾತ್ ಉಪನಿಷದಾಮೃಗಾದಿಭ್ಯಃ ಪೃಥಕ್ಕರಣಂ ನ ಯುಕ್ತಮಿತ್ಯಭಿಪ್ರೇತ್ಯ ಆಹ-ಋಗಾದೀತಿ ॥

ಹಿಂದೆ ಹೇಳಿದ ನ್ಯಾಯದಿಂದ ಅಪವ್ಯಾಖ್ಯಾನವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು ಎಂಬುದನ್ನು ಅತಿದೇಶ ಮಾಡಲು 'ಏತೇನ' ಇತ್ಯಾದಿ ಗ್ರಂಥವು ಹೊರಟಿದೆ. 'ಸರ್ವೇ ವೇದಾ ಯತ್ಪದಮಾಮನಂತಿ' 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಇವೇ ಮೊದಲಾದ ಶ್ರುತಿಸ್ಮೃತಿಗಳಿಂದ ಋಗಾದಿವೇದಗಳು ಉಪನಿಷತ್ತುಗಳೂ ಕೂಡ ಬ್ರಹ್ಮಪರವಾಗಿದೆ ಎಂದು ತಿಳಿಯುತ್ತದೆ. ಮತ್ತು ಉಪ-

ನಿಷತ್ತುಗಳಲ್ಲೂ ಕೂಡ ಶುದ್ಧಬ್ರಹ್ಮವಿಷಯಕವಾದ ಉಪಾಸನಾದಿ ವಿಷಯಕವಾದ ಅನೇಕವಾಕ್ಯಗಳಿವೆ. ಮಂತ್ರಭಾಗದಲ್ಲೂ ಕೂಡ ಜ್ಯೋತಿರಾದ್ಯಧಿಕರಣದಲ್ಲಿ ಹೇಳಲ್ಪಟ್ಟ ನ್ಯಾಯದಂತೆ ಬ್ರಹ್ಮಪ್ರತಿಪಾದಕವಾದ ಭಾಗವೂ ಇದೆ. ಹೀಗೆ ಉಪನಿಷತ್ತುಗಳಿಗೂ ಋಗಾದಿವೇದಗಳಿಗೂ ವ್ಯತ್ಯಾಸ ಕಾಣಿಸುತ್ತಿಲ್ಲ. ಹಾಗಾಗಿ ಉಪನಿಷತ್ತುಗಳನ್ನು ವೇದಗಳಿಗಿಂತ ಪ್ರತ್ಯೇಕವಾಗಿ ಪರಿಗಣನೆ ಮಾಡುವುದೇ ತಪ್ಪು. ಈ ಅಭಿಪ್ರಾಯದಿಂದ 'ಋಗಾದಿಗ್ರಹಣೇನ' ಎಂಬ ವಾಕ್ಯವು ಪ್ರವೃತ್ತವಾಗಿದೆ.

## ಬೇರೆ ಗತಿ ಇಲ್ಲದಾಗ ಮಾತ್ರ ಬ್ರಾಹ್ಮಣಪರಿವ್ರಾಜಕನ್ಯಾಯ

ವಾಕ್ಯಾರ್ಥಚಂದ್ರಿಕಾ– ನನು ತಥಾಽಪಿ ಬ್ರಾಹ್ಮಣಪರಿವ್ರಾಜಕನ್ಯಾಯೇನ ಉಪನಿಷದಾಂ ಪೃಥಕ್ಕರಣಂ ಕಿಂ ನ ಸ್ಯಾತ್? ಇತ್ಯತಃ ಅಸ್ಮದುಕ್ತರೀತ್ಯಾ ಸತಿ ಗತ್ಯಂತರೇ ಬ್ರಾಹ್ಮಣಪರಿವ್ರಾಜಕನ್ಯಾಯಮನುಸೃತ್ಯ 'ರೂಪಂ ದ್ವಿವಿಧಂ, ನೀಲಮ್ ಅನೀಲಂ ಚ' ಇತ್ಯಾದಿವತ್ 'ದ್ವೇ ವಿದ್ಯೇ ವೇದಿತವ್ಯೇ, ಪರಾ ಚೈವಾಪರಾ ಚ' ಇತ್ಯತ್ರ ಪರಾಪರಶಬ್ದಯೋರ್ವಿರುದ್ಧಾರ್ಥತ್ವಪ್ರತೀತೇಃ ಅಪಹ್ನವೋ ನ ಯುಕ್ತ ಇತ್ಯಾಹ – ಬ್ರಾಹ್ಮಣೇತಿ ॥ 'ಗತ್ಯಂತರರಹಿತಾ ಗಮನಿಕಾ' ಇತ್ಯರ್ಥಃ ॥

ಪ್ರಶ್ನೆ - ಬ್ರಾಹ್ಮಣ ಪರಿವ್ರಾಜಕನ್ಯಾಯದಿಂದ ವೇದಗಳಿಗಿಂತ ಉಪನಿಷತ್ತನ್ನು ಪ್ರತ್ಯೇಕವಾಗಿ ಪರಿಗಣಿಸಬಹುದಲ್ಲವೇ?

ಉತ್ತರ – ನಾವು ಹೇಳುವಂತೆ ಬೇರೆ ಗತಿಯಿರುವಾಗ ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸುವುದು ಸಮಂಜಸವಾಗುವುದಿಲ್ಲ. ಉದಾ – 'ರೂಪಂ ದ್ವಿವಿಧಂ ನೀಲಂ ಅನೀಲಂ ಚ' ರೂಪವು ಎರಡು ವಿಧ ನೀಲರೂಪ ಹಾಗೂ ಅನೀಲರೂಪ ಎಂದು. ಈ ಎರಡು ರೂಪಗಳಲ್ಲಿ ಭೇದವಿದೆ. ಯಾರೂ ಕೂಡ ಅನೀಲರೂಪವು ನೀಲರೂಪದ ವಿಶೇಷವೆಂದು ಹೇಳುವುದಿಲ್ಲ. ಅದರಂತೆ 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' ಎಂಬುದಾಗಿ ಎರಡು ಬಗೆಯ ವಿದ್ಯೆಗಳನ್ನು ಶ್ರುತಿ ಪರಿಚಯ ಮಾಡಿಸುತ್ತಿದೆ. ಹೀಗಿರುವಾಗ ವೇದ ವಿಶೇಷವಾದ ಉಪನಿಷತ್ತನ್ನು ಪರವಿದ್ಯಾತ್ವೇನ ವಿವಕ್ಷಿಸುವುದು ಅಯುಕ್ತವಾಗುತ್ತದೆ. ನಾವು ಹೇಳುವಂತೆ ವಿವಕ್ಷಿಸಲು ಬರುವಾಗ ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಿ ಪ್ರತೀತಿಗೆ ಅಪಹ್ನವವನ್ನು ಮಾಡುವುದು ಯುಕ್ತವಲ್ಲ. ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಬೇರೆ ಗತಿಯಿಲ್ಲದಾಗ ಮಾತ್ರ ಅನುಸರಿಸಬೇಕು. ಗತಿ ಎಂಬ ಶಬ್ದಕ್ಕೆ ಗಮನಿಕಾ ಎಂದರ್ಥ. ಗಮನಿಕಾ ಎಂದರೆ ವ್ಯಾಖ್ಯಾನ ಎಂದರ್ಥ. ಬೇರೆ ವ್ಯಾಖ್ಯಾನವಿಲ್ಲದಿದ್ದಾಗ ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಬೇಕೆಂದರ್ಥ.





## ರಸಘಟ್ಟ
## ಕೇವಲ ಉಪನಿಷತ್ತಿಗೆ ಪರವಿದ್ಯಾತ್ವವಿಲ್ಲ

ಸತ್ಯವ್ರತೀಯ– ಉಪನಿಷದಾಂ ಕರ್ಮಾಪೇಕ್ಷಿತಕರ್ತೃಪ್ರತಿಪಾದಕತ್ವಪಕ್ಷೇ ಬ್ರಹ್ಮಜ್ಞಾನಸಾಧನತ್ವಾಭಾವಾತ್ ಪರವಿದ್ಯಾತ್ವಾಭಾವಾತ್, ಬ್ರಹ್ಮಜ್ಞಾನಸಾಧನತ್ವಾವಲಂಬನೇನ ಪರವಿದ್ಯಾತ್ವೇ ಋಗಾದೀನಾಮಪಿ ತಥಾತ್ವೇನ ವಿಭಾಗಾಯೋಗಾತ್ ಉಪನಿಷದಾಂ ಬ್ರಹ್ಮಪರತ್ವಮೇವ ನ ಕರ್ಮಾಪೇಕ್ಷಿತಕರ್ತೃಪರತ್ವಮ್ ಇತ್ಯುಕ್ತೇ ಋಗಾದೀನಾಮಪಿ ಬ್ರಹ್ಮಣಿ ತಾತ್ಪರ್ಯಂ ನಾನ್ಯತ್ರ ಇತಿ ತುಲ್ಯತ್ವಾತ್ ಉಪನಿಷದಾಂ ಸ್ವರಸತೋ ಬ್ರಹ್ಮಪರತ್ವಂ ನ ತಥಾ ಋಗಾದೀನಾಮ್ ಇತಿ ಏತಾವಾನ್ ವಿಶೇಷಃ । ತಾತ್ಪರ್ಯಂ ತು ಸರ್ವೇಷಾಂ ಬ್ರಹ್ಮಣ್ಯೇವ ಇತಿ ನೋಪನಿಷನ್ಮಾತ್ರಸ್ಯ ಪರವಿದ್ಯಾತ್ವಮಿತ್ಯರ್ಥಃ ।

ಉಪನಿಷತ್ತುಗಳು ಕರ್ಮಾಪೇಕ್ಷಿತವಾದ ಕರ್ತೃಪ್ರತಿಪಾದಕವಾಗುವ ಪಕ್ಷದಲ್ಲಿ ಬ್ರಹ್ಮಜ್ಞಾನಸಾಧನವಾಗುವುದಿಲ್ಲ. ಆಗ ಪರವಿದ್ಯೆಯು ಕೂಡ ಆಗುವುದಿಲ್ಲ. ಬ್ರಹ್ಮಜ್ಞಾನಸಾಧನತ್ವವನ್ನು ಅವಲಂಬಿಸಿದಾಗ ಪರವಿದ್ಯೆ ಎನಿಸುತ್ತದಲ್ಲವೇ? ಎಂದರೆ ಋಗಾದಿ ವೇದಗಳಲ್ಲೂ ಕೂಡ ಇದು ಸಮಾನ. ಆದ್ದರಿಂದ ಋಗಾದಿವೇದಗಳಿಗೂ ಉಪನಿಷತ್ತುಗಳಿಗೂ ವ್ಯತ್ಯಾಸ ಮಾಡಲು ಕಾರಣವಿಲ್ಲ. ಉಪನಿಷತ್ತುಗಳು ಕೇವಲ ಬ್ರಹ್ಮಪರವಾಗುತ್ತವೆ. ಕರ್ಮಾಪೇಕ್ಷಿತವಾದ ಕರ್ತೃಪರತ್ವವೂ ಇರುವುದಿಲ್ಲ ಎಂದು ಹೇಳಿದರೆ ಋಗಾದಿಗಳಿಗೂ ಕೂಡ ಬ್ರಹ್ಮನಲ್ಲೇ ತಾತ್ಪರ್ಯವಿದೆ. ಬೇರೆಡೆ ಇಲ್ಲ ಎಂಬುದು ಸಮಾನವಾಗಿದೆ. ಉಪನಿಷತ್ತುಗಳಿಗೆ ಸ್ವರಸವಾದ ಬ್ರಹ್ಮಪರತ್ವವಿದೆ. ಇದರಂತೆ ಋಗಾದಿವೇದಗಳಿಗೆ ಸ್ವರಸವಾದ ಬ್ರಹ್ಮಪರತ್ವವಿಲ್ಲ ಎಂಬುದಷ್ಟೇ ವ್ಯತ್ಯಾಸ. ಆದರೆ ಎರಡರ ತಾತ್ಪರ್ಯ ಬ್ರಹ್ಮನೊಬ್ಬನೇ ಆಗಿದ್ದಾನೆ. ಆದ್ದರಿಂದ ಕೇವಲ ಉಪನಿಷತ್ತಿಗೆ ಪರವಿದ್ಯಾತ್ವವು ಕೂಡುವುದಿಲ್ಲ.

## ವಿದ್ಯಾಶಬ್ದಕ್ಕೆ ಅನೇಕಾರ್ಥ ಒಪ್ಪಬೇಕಾಗುತ್ತದೆ

ಕಂಬಾಲೂರು ರಾಮಚಂದ್ರತೀರ್ಥರು – ನನು 'ಯಯಾ ತದಕ್ಷರಮಧಿಗಮ್ಯತೇ' ಇತ್ಯನೇನ ಅಕ್ಷರಶಬ್ದಿತಬ್ರಹ್ಮಪ್ರಾಪ್ತಿಕರಣತ್ವಮೇವ ಉಚ್ಯತೇ, ತಚ್ಚ ಜ್ಞಾನೇ ಸಂಭವತಿ ಇತಿ ಚೇನ್ನ । ಋಗಾದೀನಾಂ ಜ್ಞಾನಸಾಧನಾನಾಂ ಪ್ರಕರಣೇ 'ಯಯಾ ತದಕ್ಷರಮಧಿಗಮ್ಯತೇ' ಇತ್ಯಸ್ಯ ಜ್ಞಾನಸಾಧನಾರ್ಥತ್ವಾವಶ್ಯಂಭಾವಾತ್ । ಇಯಾಂಸ್ತು ವಿಶೇಷಃ । ಪರವಿದ್ಯಾತ್ವೇನ ಗೃಹೀತಸ್ಯ ಶಾಸ್ತ್ರಸ್ಯ ವಿಷ್ಣುಜ್ಞಾನಸಾಧನತ್ವಮ್ ಅಪರವಿದ್ಯಾತ್ವೇನ ಗೃಹೀತಸ್ಯ ಋಗಾದೇಸ್ತು ವಿಷ್ಣ್ವನ್ಯವಿಷಯಜ್ಞಾನ-





ಸಾಧನತ್ವಮ್ ಇತ್ಯನೇಕಾರ್ಥತಾ ಇತಿ । 'ದ್ವೇ ವಿದ್ಯೇ ವೇದಿತವ್ಯೇ' ಇತ್ಯತ್ರ ವಿದ್ಯಾಶಬ್ದಸ್ಯ ಅಪರ-ವಿದ್ಯಾತ್ವೇನ ಗೃಹೀತೇ ವೇದಾದೌ ಯಥಾರ್ಥಜ್ಞಾನಸಾಧನತ್ವಂ ಪ್ರವೃತ್ತಿನಿಮಿತ್ತಂ, ಪರವಿದ್ಯಾತ್ವೇನ ಗೃಹೀತೇ ತಜ್ಜನ್ಯಜ್ಞಾನೇ ತು ಯಥಾರ್ಥಜ್ಞಾನತ್ವಂ ಪ್ರವೃತ್ತಿನಿಮಿತ್ತಮ್ - ಇತಿ ಪ್ರವೃತ್ತಿನಿಮಿತ್ತಭೇದೇನ ಸಕೃತ್ ಪ್ರಯುಕ್ತವಿದ್ಯಾಶಬ್ದಸ್ಯಾನೇಕಾರ್ಥಕತ್ವಕಲ್ಪನಾಪತ್ತೇಶ್ಚ ಇತ್ಯರ್ಥಃ।

'ಅಥ ಯಯಾ ತದಕ್ಷರಮಧಿಗಮ್ಯತೇ' ಎಂಬ ವೇದವಾಕ್ಯದಿಂದ ಅಕ್ಷರಶಬ್ದದಿಂದ ಪ್ರತಿಪಾದ್ಯ-ನಾದ ಬ್ರಹ್ಮಪ್ರಾಪ್ತಿಗೆ ಯಾವುದು ಕರಣವೋ ಅದನ್ನೇ ಹೇಳಲಾಗಿದೆ. ಇದು ಜ್ಞಾನದಲ್ಲಿ ಬರುತ್ತದಲ್ಲವೇ? ಈ ಶಂಕೆಯು ಅಸಾಧುವಾಗಿದೆ. ಋಗಾದಿವೇದಗಳು ಜ್ಞಾನಸಾಧನಗಳಾಗಿವೆ. ಯಯಾ ತದಕ್ಷರಮಧಿ-ಗಮ್ಯತೇ ಎಂಬ ವಾಕ್ಯಕ್ಕೆ ಜ್ಞಾನಸಾಧನ ಎಂಬರ್ಥವನ್ನೇ ವಿವಕ್ಷಿಸಬೇಕು. ಇಷ್ಟುಮಾತ್ರ ವಿಶೇಷ – ಪರವಿದ್ಯೆ ಎಂದು ಅಂಗೀಕರಿಸಲ್ಪಟ್ಟ ಶಾಸ್ತ್ರಕ್ಕೆ ವಿಷ್ಣುಜ್ಞಾನಸಾಧನತ್ವವಿದೆ. ಅಪರವಿದ್ಯೆ ಎಂದು ಪರಿಗಣಿಸ-ಲ್ಪಟ್ಟ ಋಗಾದಿವೇದಗಳಿಗೆ ವಿಷ್ಣ್ವನ್ಯವಿಷಯಜ್ಞಾನಸಾಧನತ್ವವಿರುತ್ತದೆ. ಹೀಗೆ ಅನೇಕಾರ್ಥತ್ವವನ್ನು ಒಪ್ಪಬೇಕಾಗುತ್ತದೆ. ದ್ವೇ ವಿದ್ಯೇ ವೇದಿತವ್ಯೇ ಎಂಬಲ್ಲಿ ವಿದ್ಯಾಶಬ್ದಕ್ಕೆ ಅಪರವಿದ್ಯಾತ್ವೇನ ಪರಿಗಣಿಸಲ್ಪಟ್ಟ ವೇದಾದಿಗಳಲ್ಲಿ ಯಥಾರ್ಥಜ್ಞಾನಸಾಧನತ್ವವು ಪ್ರವೃತ್ತಿನಿಮಿತ್ತವಾಗುತ್ತದೆ. ಪರವಿದ್ಯೆ ಎಂದು ಪರಿಗಣಿಸ-ಲ್ಪಟ್ಟ ತಜ್ಜನ್ಯಜ್ಞಾನದಲ್ಲಿ ಯಥಾರ್ಥಜ್ಞಾನತ್ವವು ಪ್ರವೃತ್ತಿನಿಮಿತ್ತವೆಂದು ಪರಿಗಣಿಸಲ್ಪಡಬೇಕಾಗುತ್ತದೆ. ಹೀಗೆ ಪ್ರವೃತ್ತಿನಿಮಿತ್ತವು ಬೇರೆ ಬೇರೆಯಾಗಿರುವುದರಿಂದ ಒಮ್ಮೆ ಪ್ರಯೋಗಿಸಲ್ಪಟ್ಟ ವಿದ್ಯಾಶಬ್ದಕ್ಕೆ ಅನೇಕಾರ್ಥತ್ವವನ್ನು ಕಲ್ಪನೆಮಾಡಬೇಕಾಗುತ್ತದೆಂಬುದು 'ಅನೇಕಾರ್ಥತಾಕಲ್ಪನಾಪತ್ತೇಶ್ಚ' ಎಂಬ ಸುಧಾ-ವಾಕ್ಯದ ಅಭಿಪ್ರಾಯವಾಗಿದೆ.

## ಸುಧಾಪರಿಮಳಸಾರ

ಋಗಾದಿವೇದಗಳು ಅಪರವಿದ್ಯೆಯಾಗಿರುವುದರಿಂದ ಉಪನಿಷತ್ತುಗಳೂ ಕೂಡ ಅಪರವಿದ್ಯೆ ಎನಿಸುತ್ತವೆ. ಆದರೆ ಅದ್ವೈತಿಗಳು ಉಪನಿಷತ್ತುಗಳನ್ನು ಪರವಿದ್ಯೆ ಎಂದು ವ್ಯಾಖ್ಯಾನ ಮಾಡು-ತ್ತಾರೆ. ಬ್ರಾಹ್ಮಣರು ಬಂದರು, ಸನ್ಯಾಸಿಗಳು ಕೂಡ ಬಂದರು ಎಂದು ಹೇಳಿದಾಗ ಸನ್ಯಾಸಿಗಳು ಕೂಡ ಬ್ರಾಹ್ಮಣರೇ ಆಗಿದ್ದಾರೆ. ಆದರೂ ಅವರನ್ನು ಪ್ರತ್ಯೇಕವಾಗಿ ಪರಿ-ಗಣಿಸುವಂತೆ ಉಪನಿಷತ್ತುಗಳು ಋಗಾದಿವೇದಗಳಲ್ಲಿ ಸೇರಿದ್ದರೂ ಕೂಡ ಪ್ರತ್ಯೇಕವಾಗಿ ಪರಿಗಣಿಸಬಹುದು. ಆದ್ದರಿಂದ ಋಗಾದಿವೇದಗಳಿಗೆ ಮಾತ್ರ ಅಪರವಿದ್ಯಾತ್ವವನ್ನು 'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಾಕ್ಯವು ಹೇಳುತ್ತಿದೆ. ಉಪನಿಷತ್ತುಗಳು ಹೇಳುತ್ತಿಲ್ಲ. ಅದ್ವೈತಿಗಳ ಈ





ವಾದ ಅಯುಕ್ತವಾಗಿದೆ. ಏಕೆಂದರೆ ಬೇರೆ ಗತಿಯಿಲ್ಲದಾಗ ಮಾತ್ರ ಬ್ರಾಹ್ಮಣಪರಿವ್ರಾಜಕ-ನ್ಯಾಯವನ್ನು ಅನುಸರಿಸಬೇಕು. ಆದರೆ ಉಪನಿಷತ್ತನ್ನೂ ಕೂಡ ಋಗಾದಿ ಪದದಿಂದಲೇ ವಿವಕ್ಷಿಸಲು ಬರುವಾಗ ಅಗತಿಕಾಗತಿಯನ್ನು ಹೇಳಕೂಡದು.

ಉಪನಿಷತ್ತಿನಿಂದ ಹುಟ್ಟುವ ಜ್ಞಾನವು ಪರವಿದ್ಯೆಯೆಂದು ರಾಮಾನುಜರು ವ್ಯಾಖ್ಯಾನ ಮಾಡುತ್ತಾರೆ. ಇದೂ ಕೂಡ ತಪ್ಪು. 'ದ್ವೇ ವಿದ್ಯೇ ವೇದಿತವ್ಯೇ' ಎಂಬಲ್ಲಿರುವ ವಿದ್ಯಾಶಬ್ದಕ್ಕೆ ಅಪರವಿದ್ಯಾಸಂದರ್ಭದಲ್ಲಿ ಶಾಸ್ತ್ರವೆಂದೂ ಪರವಿದ್ಯಾಸಂದರ್ಭದಲ್ಲಿ ಉಪನಿಷತ್ತಿನಿಂದ ಹುಟ್ಟುವ ಜ್ಞಾನವೆಂದು ಅನೇಕಾರ್ಥವನ್ನು ಕಲ್ಪನೆ ಮಾಡಬೇಕಾಗುತ್ತದೆ. ಆದ್ದರಿಂದ ಉಪ-ನಿಷತ್ತಿನಿಂದ ಕೂಡಿದ ಸಮಸ್ತವೇದವು ಅಪರವಿದ್ಯೆ ಎನಿಸುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರವು ಪರವಿದ್ಯೆ ಎನಿಸುತ್ತದೆ. ಆದ್ದರಿಂದ ಈ ಶಾಸ್ತ್ರಕ್ಕೆ ಸರ್ವೋತ್ತಮಪ್ರಾಮಾಣ್ಯವು ಸಿದ್ಧವಾಗುತ್ತದೆ.

## ವಿದ್ಯಾಮತ್ತು ಶಾಸ್ತ್ರಶಬ್ದಗಳ ಅರ್ಥ

**ಶ್ರೀಮನ್ನ್ಯಾಯಸುಧಾ– ಯದ್ಯಪಿ ವಿದ್ಯಾಶಾಸ್ತ್ರಶಬ್ದೌ ಶಿಷ್ಯಾಚಾರ್ಯ-ವ್ಯಾಪಾರಾನುಬಂಧಿನೌ, ತಥಾಽಪಿ ಉಭಯಾನುಗತತತ್ತ್ವಜ್ಞಾನಕರಣತ್ವಮಾತ್ರ-ಮುಪಾದಾಯ ದ್ವಯೋರೈಕಾರ್ಥ್ಯಮ್ ಉಕ್ತಮ್ ಇತ್ಯವಗಂತವ್ಯಮ್ ।**

'ವಿದ್ಯಾ' ಎಂದರೆ ಶಿಷ್ಯನ ಪ್ರಯತ್ನದಿಂದ ಉಂಟಾಗುವ ಜ್ಞಾನಕರಣ ಎಂದರ್ಥ. 'ಶಾಸ್ತ್ರ' ಎಂದರೆ ಆಚಾರ್ಯನ ಪ್ರಯತ್ನದಿಂದ ಉಂಟಾಗುವ ಶಾಸನಕರಣ ಎಂದರ್ಥ. ಆದ್ದರಿಂದ 'ವಿದ್ಯಾ'ಶಬ್ದವು ಶಿಷ್ಯನ ವ್ಯಾಪಾರಕ್ಕೆ ಬೋಧಕವಾಗಿದೆ. 'ಶಾಸ್ತ್ರ'ಶಬ್ದವು ಆಚಾರ್ಯನ ವ್ಯಾಪಾರಕ್ಕೆ ಬೋಧಕವಾಗಿದೆ. ಆದರೂ ಕೂಡ ಈ ಎರಡು ಬಗೆಯ ವ್ಯಾಪಾರಗಳಲ್ಲಿ ತತ್ತ್ವಜ್ಞಾನಕರಣತ್ವ ಎಂಬುದು ಸಾಧಾರಣವಾಗಿದೆ. ಇದೇ 'ವಿದ್ಯಾ' ಮತ್ತು 'ಶಾಸ್ತ್ರ'ಶಬ್ದಗಳ ಅರ್ಥವೆಂದು ತಿಳಿಯಬೇಕು. ಹಾಗಾಗಿ 'ವಿದ್ಯಾ' ಮತ್ತು 'ಶಾಸ್ತ್ರ'ಶಬ್ದಗಳು ಸಮಾನಾರ್ಥಕಗಳಾಗಿವೆ ಎಂಬುದಾಗಿ ತಿಳಿಯಬೇಕು.

## ವಿದ್ಯೆಯು ವ್ಯಾಖ್ಯೇಯ, ಶಾಸ್ತ್ರವು ವ್ಯಾಖ್ಯಾನ

ಪರಿಮಳ– ನನು ವಿದ್ಯತೇ ಅನೇನ ಶಿಷ್ಯೇಣ ಕರ್ತ್ರಾ ವೇದಾದಿನಾ ಕರಣೇನ ಇತಿ





ವಿದ್ಯಾಶಬ್ದಃ ಶಿಷ್ಯಪ್ರಯತ್ನಜನ್ಯಜ್ಞಾನಕರಣವಾಚೀ। ಶಿಷ್ಯತೇ ಪ್ರತಿಪಾದ್ಯತೇ ಆಚಾರ್ಯೇಣ ಕರ್ತ್ರಾ ವೇದಾದಿನಾ ಕರಣೇನ ಇತಿ ಶಾಸ್ತ್ರಶಬ್ದಃ ಆಚಾರ್ಯಪ್ರಯತ್ನಸಾಧ್ಯಶಾಸನಕರಣವಾಚೀ। ತಥಾ ಚ ವಿದ್ಯಾಶಬ್ದಶಾಸ್ತ್ರಶಬ್ದೌ ಭಿನ್ನಾರ್ಥೌ ಇತಿ ನ ವ್ಯಾಖ್ಯಾನವ್ಯಾಖ್ಯೇಯಭಾವಮ್ ಆಪದ್ಯೇತೇ । ಅತಃ ಕಥಂ ಪರವಿದ್ಯಾಖ್ಯಮ್ ಇತ್ಯನೂದ್ಯ 'ಅನುತ್ತಮಂ ಶಾಸ್ತ್ರಮ್' ಇತಿ ವ್ಯಾಖ್ಯಾತಮಿತ್ಯುಕ್ತಮ್ ಇತ್ಯಾಶಂಕ್ಯ ನಿರಾಹ – ಯದ್ಯಪೀತಿ ॥ ತಥಾಪಿ ಇತಿ ॥ ವೇದನಶಾಸನಯೋಃ ಶಿಷ್ಯಾಚಾರ್ಯಪ್ರಯತ್ನಸಾಧ್ಯತ್ವೇऽಪಿ ಶಿಷ್ಯಾಚಾರ್ಯವ್ಯಾಪಾರಾಂಶಂ ವಿಹಾಯ ವೇದನಶಾಸನಯೋಃ ತುಲ್ಯತತ್ತ್ವಜ್ಞಾನತ್ವಧರ್ಮಮಾತ್ರಮುಪಾದಾಯ ತಜ್ಜನಕತ್ವಮಾತ್ರೇಣ ಐಕಾರ್ಥ್ಯಮುಕ್ತಮ್ – ಇತ್ಯರ್ಥಃ। ಉಭಯಾನುಗತಾ ಇತ್ಯಸ್ಯ ವಿದ್ಯಾಶಾಸ್ತ್ರೋಭಯಾನುಗತಾ ಇತಿ ವಾ ಅರ್ಥಃ।

ಪ್ರಶ್ನೆ – 'ವಿದ್ಯತೇ ಅನೇನ' ಇತಿ ವಿದ್ಯಾ ಎಂಬ ನಿಷ್ಪತ್ತಿಯಿಂದ ಶಿಷ್ಯನಾದವನು ಯಾವ ವೇದ ಮೊದಲಾದ ಕರಣಗಳಿಂದ ಯಾವುದನ್ನು ಹೊಂದುವನೋ ಅದು 'ವಿದ್ಯಾ' ಎಂದು ಕರೆಸಿಕೊಳ್ಳುತ್ತದೆ. ಈ ವ್ಯುತ್ಪತ್ತಿಯ ಪ್ರಕಾರ ಶಿಷ್ಯಪ್ರಯತ್ನದಿಂದ ಜನ್ಯವಾದ 'ಜ್ಞಾನಕರಣ' ಎಂಬುದು 'ವಿದ್ಯಾ'ಶಬ್ದದ ಅರ್ಥವಾಗುತ್ತದೆ.

'ಶಿಷ್ಯತೇ ಅನೇನ ಇತಿ ಶಾಸ್ತ್ರಮ್' ಎಂಬ ನಿಷ್ಪತ್ತಿಯಿಂದ ಯಾವ ವೇದಾದಿ ವಿದ್ಯೆಗಳ ಮೂಲಕ ಯಾವುದನ್ನು ಆಚಾರ್ಯಪುರುಷನು ಶಾಸನಮಾಡುತ್ತಾನೋ ಅದೇ ಶಾಸ್ತ್ರ ಎನಿಸುತ್ತದೆ. ಹಾಗಾಗಿ ಆಚಾರ್ಯನ ಪ್ರಯತ್ನಜನ್ಯವಾದ 'ಶಾಸನಕರಣ' (ಉಪದೇಶಸಾಧನ) ಎಂಬುದು ಶಾಸ್ತ್ರಶಬ್ದದ ಅರ್ಥವಾಗಿದೆ.

ಮೇಲೆ ಹೇಳಿದ ಎರಡು ನಿಷ್ಪತ್ತಿಗಳನ್ನು ಗಮನಿಸಿದಾಗ ವಿದ್ಯಾಶಬ್ದದ ಅರ್ಥವೇ ಬೇರೆ; ಶಾಸ್ತ್ರಶಬ್ದದ ಅರ್ಥವೇ ಬೇರೆ. ಈ ಕಾರಣದಿಂದ ವಿದ್ಯೆಯೆಂಬುದು ವ್ಯಾಖ್ಯೇಯವೆಂದೂ ಶಾಸ್ತ್ರವೆಂಬುದು ವ್ಯಾಖ್ಯಾನವೆಂದೂ ಹೇಳುವುದು ಅಯುಕ್ತವಾಗುತ್ತದೆ. ಹಾಗಾಗಿ 'ಪರವಿದ್ಯಾಖ್ಯಂ' ಎಂಬುದಾಗಿ ಅನುವಾದವನ್ನು ಮಾಡಿ, ಅದಕ್ಕೆ 'ಅನುತ್ತಮಂ ಶಾಸ್ತ್ರಮ್' ಎಂಬುದಾಗಿ ವ್ಯಾಖ್ಯಾನಮಾಡುವುದು ಹೇಗೆ ಯುಕ್ತವಾಗುತ್ತದೆ?





ಈ ಆಶಂಕೆಯನ್ನು ಪರಿಹರಿಸಲು 'ಯದ್ಯಪಿ' ಇತ್ಯಾದಿ ಗ್ರಂಥವು ಪ್ರವೃತ್ತವಾಗಿದೆ. 'ತಥಾಪಿ' ಇತ್ಯಾದಿ ವಾಕ್ಯದಿಂದ ಯಾವ ಉತ್ತರವನ್ನು ಹೇಳಿದ್ದಾರೋ ಅದರ ಅಭಿಪ್ರಾಯ ಹೀಗಿದೆ – 'ವಿದ್ಯಾ' ಎಂಬ ಶಬ್ದದ ಅರ್ಥವೆನಿಸಿದ ವೇದನವು ಶಿಷ್ಯಪ್ರಯತ್ನದಿಂದ ಸಾಧ್ಯವಾಗಿದೆ. 'ಶಾಸ್ತ್ರ' ಎಂಬ ಶಬ್ದದ ಅರ್ಥವೆನಿಸಿದ ಶಾಸನವು ಆಚಾರ್ಯಪ್ರಯತ್ನದಿಂದ ಸಾಧ್ಯವಾಗಿದೆ. ಆದರೂ ಕೂಡ ಶಿಷ್ಯನ ವ್ಯಾಪಾರ ಹಾಗೂ ಆಚಾರ್ಯನ ವ್ಯಾಪಾರ ಎಂಬ ಅಂಶವನ್ನು ಬಿಟ್ಟು ವೇದನ ಮತ್ತು ಶಾಸನಗಳಲ್ಲಿ ಸಮಾನವಾದ ತತ್ವಜ್ಞಾನತ್ವ ಎಂಬ ಧರ್ಮವನ್ನಷ್ಟೇ ಸ್ವೀಕರಿಸಬೇಕು. ಆಗ ತತ್ವಜ್ಞಾನಜನಕ ಎಂಬ ಅರ್ಥವು ಉಭಯಾನುಗತವಾಗುತ್ತದೆ. ವಿದ್ಯಾ ಮತ್ತು ಶಾಸ್ತ್ರಶಬ್ದಗಳೆರಡೂ ಸಮಾನಾರ್ಥಕಗಳಾಗುತ್ತವೆ. 'ಉಭಯಾನುಗತ' ಎಂಬ ಶಬ್ದಕ್ಕೆ ವಿದ್ಯಾ ಮತ್ತು ಶಾಸ್ತ್ರ ಇವೆರಡು ಶಬ್ದಗಳಲ್ಲಿ ಅನುಗತವಾದ ಎಂದರ್ಥ.

## ವಿದ್ಯಾ ಎಂದರೆ ಶಾಸ್ತ್ರವೇ

ವಾಕ್ಯಾರ್ಥಚಂದ್ರಿಕಾ– ನನು ವಿದ್ಯಾಶಾಸ್ತ್ರಶಬ್ದಯೋಃ ಭಿನ್ನವಿಷಯತ್ವಾತ್ ನ ವ್ಯಾಖ್ಯಾನವ್ಯಾಖ್ಯೇಯಭಾವೋ ಯುಕ್ತಃ ಇತ್ಯತೋ ಗೌಣೀಂ ವೃತ್ತಿ- ಮಾಶ್ರಿತ್ಯ ಸಮಾಧತ್ತೇ – ಯದ್ಯಪೀತಿ ॥

ವಿದ್ಯಾಶಬ್ದವು ಶಿಷ್ಯವ್ಯಾಪಾರಾನುಬಂಧಿಯಾಗಿದೆ. ಶಾಸ್ತ್ರಶಬ್ದವು ಆಚಾರ್ಯವ್ಯಾಪಾರಾನುಬಂಧಿಯಾಗಿದೆ. ಎರಡೂ ಕೂಡ ಭಿನ್ನವಿಷಯಕವಾಗಿದೆಯಾದ್ದರಿಂದ ವ್ಯಾಖ್ಯಾನವ್ಯಾಖ್ಯೇಯಭಾವವೇ ಪ್ರಸಕ್ತವಾಗುವುದಿಲ್ಲ. ಈ ಪ್ರಶ್ನೆಗೆ ಗೌಣೀವೃತ್ತಿಯನ್ನಾಶ್ರಯಿಸಿ 'ಯದ್ಯಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಎರಡೂ ವ್ಯಾಪಾರಗಳಲ್ಲಿ ತತ್ವಜ್ಞಾನಕರಣತ್ವವು ಸಮಾನವಾಗಿರುವುದರಿಂದ ವಿದ್ಯಾಶಬ್ದಕ್ಕೆ ಶಾಸ್ತ್ರ ಎಂಬ ವ್ಯಾಖ್ಯಾನವು ಯುಕ್ತವಾಗಿದೆ ಎಂದಭಿಪ್ರಾಯ.

## ರಸಘಟ್ಟ
## ವಿದ್ಯಾಶಬ್ದ ಶಾಸ್ತ್ರಶಬ್ದಗಳಿಗೆ ಐಕಾರ್ಥ್ಯವು ಅಯುಕ್ತ

ಕಂಬಾಲೂರು ರಾಮಚಂದ್ರತೀರ್ಥರು – ಯದ್ಯಪೀತಿ ॥ 'ವೇತ್ತಿ ತತ್ತ್ವಂ ಶಿಷ್ಯೋಽನಯಾ' ಇತಿ ವಿದ್ಯಾಶಬ್ದಃ ಶಿಷ್ಯವ್ಯಾಪಾರಾನುಬಂಧೀ । 'ಶಾಸ್ತಿ ತತ್ತ್ವಮ್ ಆಚಾರ್ಯೋಽನೇನ' ಇತಿ ಶಾಸ್ತ್ರಶಬ್ದಃ ಆಚಾರ್ಯವ್ಯಾಪಾರಾನುಬಂಧೀ - ಇತಿ ವಿದ್ಯಾಶಾಸ್ತ್ರಶಬ್ದಯೋಃ ಐಕ್ಯಾರ್ಥ್ಯಾಭಾವೇನ ಪರವಿದ್ಯಾಖ್ಯಂ ಶಾಸ್ತ್ರಮ್ ಇತಿ ತಯೋರೈಕಾರ್ಥ್ಯೋಕ್ತಿರಯುಕ್ತಾ ಇತಿ ಶಂಕಾಭಿಪ್ರಾಯಃ ।





'ವೇತ್ತಿ ತತ್ತ್ವಂ ಶಿಷ್ಯೋಽನಯಾ' ಎಂಬ ವ್ಯುತ್ಪತ್ತಿಯಿಂದ ವಿದ್ಯಾಶಬ್ದವು ಶಿಷ್ಯವ್ಯಾಪಾರವನ್ನು ಹೇಳುತ್ತದೆ. 'ಶಾಸ್ತಿ ತತ್ತ್ವಮ್ ಆಚಾರ್ಯೋಽನೇನ' ಎಂಬ ವ್ಯುತ್ಪತ್ತಿಯಿಂದ ಶಾಸ್ತ್ರಶಬ್ದವು ಆಚಾರ್ಯ-ಪುರುಷನ ವ್ಯಾಪಾರವನ್ನು ಹೇಳುತ್ತದೆ. ಹೀಗೆ ವಿದ್ಯಾ ಮತ್ತು ಶಾಸ್ತ್ರಶಬ್ದಗಳೆರಡೂ ಭಿನ್ನಾರ್ಥಕಗಳಾ-ಗಿರುವುದರಿಂದ 'ಪರವಿದ್ಯಾಖ್ಯಂ ಶಾಸ್ತ್ರಂ' ಎಂಬುದಾಗಿ ಐಕಾರ್ಥ್ಯವನ್ನು ಹೇಳಿದ್ದು ಅಯುಕ್ತವಾಗುತ್ತದೆ ಎಂಬುದು ಆಶಂಕೆಯ ಅಭಿಪ್ರಾಯ.

## ಶಿಷ್ಯವ್ಯಾಪಾರ ಗುರುವ್ಯಾಪಾರದಲ್ಲಿ ಅನುಗತವಾದದ್ದು

ಸತ್ಯವ್ರತೀಯ– ಶಿಷ್ಯಾಚಾರ್ಯವ್ಯಾಪಾರಾನುಬಂಧಿನೌ ಶಿಷ್ಯಾಚಾರ್ಯಕರ್ತೃಕವ್ಯಾಪಾರ-ಘಟಿತಪ್ರವೃತ್ತಿನಿಮಿತ್ತಕೌ । ಉಭಯಾನುಗತಂ– ಶಿಷ್ಯಾಚಾರ್ಯವ್ಯಾಪಾರದ್ವಯಾನುಗತಮ್ । ತತ್ತ್ವ-ಜ್ಞಾನಕರಣತ್ವಂ – ತತ್ತ್ವಜ್ಞಾನಕಾರಣಭೂತವ್ಯಾಪಾರಘಟಿತಪ್ರವೃತ್ತಿಕತ್ವಂ ವಿದ್ಯಾಶಾಸ್ತ್ರಶಬ್ದದ್ವಯಾನು-ಗತಮಿತಿ ಯಾವತ್ । ಮಾತ್ರಶಬ್ದೇನ ವ್ಯಾಪಾರದ್ವಯೇ ಶಿಷ್ಯಾಚಾರ್ಯಕರ್ತೃಕತ್ವವಿವಕ್ಷಾ ವ್ಯಾವ-ರ್ತ್ಯತೇತಿ ವ್ಯಾಖ್ಯೇಯಮ್ ।

'ಶಿಷ್ಯಾಚಾರ್ಯವ್ಯಾಪಾರಾನುಬಂಧಿನೌ' ಶಿಷ್ಯ ಮತ್ತು ಆಚಾರ್ಯಕರ್ತೃಕವಾದ ಯಾವ ವ್ಯಾಪಾರವಿದೆಯೋ ತದ್ಘಟಿತವಾದ ಪ್ರವೃತ್ತಿನಿಮಿತ್ತವುಳ್ಳವುಗಳು ಎಂದರ್ಥ. ಉಭಯಾನುಗತಂ – ಶಿಷ್ಯ ಮತ್ತು ಆಚಾರ್ಯನ ಎರಡು ವ್ಯಾಪಾರಗಳಲ್ಲಿ ಅನುಗತವಾದದ್ದು ಎಂದರ್ಥ. ತತ್ತ್ವಜ್ಞಾನಕರಣತ್ವಂ - ತತ್ತ್ವಜ್ಞಾನಕ್ಕೆ ಕಾರಣವಾದ ಯಾವ ವ್ಯಾಪಾರವಿದೆಯೋ ತದ್ಘಟಿತವಾದ ಪ್ರವೃತ್ತಿನಿಮಿತ್ತವುಳ್ಳದ್ದು ವಿದ್ಯಾ ಮತ್ತು ಶಾಸ್ತ್ರಶಬ್ದಗಳೆರಡರಲ್ಲಿ ಅನುಗತವಾಗಿದೆ ಎಂದಭಿಪ್ರಾಯ. ಮಾತ್ರಶಬ್ದದಿಂದ ಎರಡು ವ್ಯಾಪಾರ-ಗಳಲ್ಲಿ ಶಿಷ್ಯಾಚಾರ್ಯಕರ್ತೃಕತ್ವವನ್ನು ವ್ಯಾವೃತ್ತಿಮಾಡಲಾಗಿದೆ.

## ಸುಧಾಪರಿಮಳಸಾರ

'ಪರವಿದ್ಯಾಖ್ಯಂ ಶಾಸ್ತ್ರಂ ಚಕ್ರೇ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಪರವಿದ್ಯಾಖ್ಯಂ ಎಂಬುದಾಗಿ ಅನುವಾದ ಮಾಡಿ ಶಾಸ್ತ್ರಂ ಎಂಬುದಾಗಿ ಅದನ್ನು ವ್ಯಾಖ್ಯಾನ ಮಾಡಿದ್ದು ಹೇಗೆ ಸರಿ? ಎಂಬ ವಿಮರ್ಶೆಯನ್ನು ಪ್ರಕೃತ ಮಾಡುತ್ತಿದ್ದಾರೆ. ವಿದ್ಯಾ ಎಂಬ ಶಬ್ದದ ಅರ್ಥವೇ ಬೇರೆ ಶಾಸ್ತ್ರ ಎಂಬ ಶಬ್ದದ ಅರ್ಥವೇ ಬೇರೆ. ಶಿಷ್ಯಪ್ರಯತ್ನದಿಂದ ಹುಟ್ಟುವ ಜ್ಞಾನಕ್ಕೆ ಸಾಧನವಾದದ್ದು ವಿದ್ಯೆ ಎನಿಸುತ್ತದೆ. ಗುರುಪ್ರಯತ್ನದಿಂದ ಹುಟ್ಟುವ ಉಪದೇಶಕ್ಕೆ ಸಾಧನವಾದದ್ದು ಶಾಸ್ತ್ರ





ಎನಿಸುತ್ತದೆ. ಹೀಗೆ ಎರಡೂ ಶಬ್ದಗಳು ವಿಭಿನ್ನವಾದ ಅರ್ಥಗಳನ್ನು ಹೇಳುತ್ತಿವೆ. ಆದ್ದರಿಂದ ವಿದ್ಯೆಯನ್ನೇ ಶಾಸ್ತ್ರವೆಂದು ವ್ಯಾಖ್ಯಾನ ಮಾಡುವುದು ಹೇಗೆ ಸರಿ? ಈ ಪ್ರಶ್ನೆಗೆ ಉತ್ತರ ಹೀಗೆ ತಿಳಿಯಬೇಕು. ಶಿಷ್ಯಪ್ರಯತ್ನ ಹಾಗೂ ಆಚಾರ್ಯಪ್ರಯತ್ನಗಳೆಂಬ ಎರಡು ಅಂಶಗಳನ್ನು ಬಿಟ್ಟು ವೇದನ, ಹಾಗೂ ಶಾಸನಗಳೆರಡರಲ್ಲಿ ಸಮಾನವಾಗಿರುವ ತತ್ವಜ್ಞಾನತ್ವ ಎಂಬ ಧರ್ಮವನ್ನಷ್ಟೇ ಸ್ವೀಕರಿಸಬೇಕು. ಅಂಥ ತತ್ವಜ್ಞಾನಜನಕತ್ವವು ವಿದ್ಯಾಶಬ್ದ ಹಾಗೂ ಶಾಸ್ತ್ರಶಬ್ದಗಳೆರಡರಲ್ಲಿಯೂ ಸಮಾನವಾಗಿದೆ. ಹಾಗಾಗಿ ಪರವಿದ್ಯಾಖ್ಯಂ ಎಂಬುದಾಗಿ ಅನುವಾದ ಮಾಡಿ ಶಾಸ್ತ್ರಂ ಎಂದು ವ್ಯಾಖ್ಯಾನ ಮಾಡಿರುವುದು ಅಸಾಧುವಲ್ಲ.

## ಪರಿಮಳ ವೈಶಿಷ್ಟ್ಯ

* ವಿದ್ಯಾಶಬ್ದ ಹಾಗೂ ಶಾಸ್ತ್ರಶಬ್ದಗಳ ನಿಷ್ಪತ್ತಿಯನ್ನು ಸ್ಪಷ್ಟವಾಗಿ ತೋರಿಸಲಾಗಿದೆ.

* 'ಪರವಿದ್ಯಾಖ್ಯಂ' ಎಂಬುದನ್ನು ಅನುವಾದ ಮಾಡಿ ಶಾಸ್ತ್ರಂ ಎಂದು ವ್ಯಾಖ್ಯಾನವು ಹೇಗೆ ಸರಿ? ಎಂಬುದರ ವಿಮರ್ಶೆ ಸ್ವರಸವಾಗಿದೆ.

* ವೇದನ ಹಾಗೂ ಶಾಸನಗಳೆರಡರಲ್ಲಿ ಸಮಾನವಾದ ಯಾವ ತತ್ವಜ್ಞಾನವಿದೆಯೋ ತಜ್ಜನಕತ್ವೇನ ರೂಪೇಣ ವಿದ್ಯಾಶಬ್ದ ಹಾಗೂ ಶಾಸ್ತ್ರಶಬ್ದಗಳಿಗೆ ಒಂದೇ ಅರ್ಥವನ್ನು ಹೇಳಬೇಕೆಂದು ಉಪಪಾದನೆ ಮಾಡಲಾಗಿದೆ.

## ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪೃಥಕ್ ಪ್ರಾಮಾಣ್ಯವಿಲ್ಲ

**ಶ್ರೀಮನ್ನ್ಯಾಯಸುಧಾ–**

**'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ ।**

**ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥'**

**ಇತಿ ಭಗವತ್ಪಾದೀಯಂ ವ್ಯಾಖ್ಯಾನಮಪಿ ಏತಮೇವಾರ್ಥಂ ಸೂಚಯತಿ । ಬ್ರಹ್ಮ -ಮೀಮಾಂಸಾಶಾಸ್ತ್ರವ್ಯುತ್ಪಾದಿತನ್ಯಾಯಾನುಪಕೃತಾ ಹಿ ವೇದಾದಯೋ ವಿಷ್ಣೋಃ ಅವಾಚಕಾಃ, ತದುಪಕೃತಾಶ್ಚ ತಸ್ಯ ವಾಚಕಾ ಭವಂತಿ - ಇತಿ ।**

'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ ।
ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥'

''ಋಗಾದಿವೇದಗಳು ಯಾವಾಗ ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲವೋ ಅಪರವಿದ್ಯೆಯೆಂದು ಕರೆಸಿಕೊಳ್ಳುತ್ತವೆ. ಯಾವಾಗ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೋ ಆವಾಗ ಅದೇ ಋಗಾದಿವೇದಗಳು ಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ''.

ಹೀಗೆ ಭಗವತ್ಪಾದಾಚಾರ್ಯರು ಪರವಿದ್ಯಾ ಎಂಬ ಶಬ್ದದ ವ್ಯಾಖ್ಯಾನವನ್ನು ಮಾಡಿದ್ದಾರೆ. ಇದೂ ಕೂಡ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯೆ ಎಂಬ ಅರ್ಥವನ್ನೇ ಸೂಚನೆ ಮಾಡುತ್ತಿದೆ. ಬ್ರಹ್ಮಮೀಮಾಂಸಾಶಾಸ್ತ್ರದಿಂದ ಯಾವ ಯುಕ್ತಿಗಳು ತಿಳಿಯುತ್ತವೋ ಆ ಯುಕ್ತಿಗಳ ಸಹಾಯವನ್ನು ಪಡೆಯದೇ ಇರುವ ವೇದಾದಿಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲ. ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ವ್ಯುತ್ಪಾದಿತವಾದ ನ್ಯಾಯಗಳ ಉಪಕಾರ ಪಡೆದ ಋಗಾದಿವೇದಗಳು ವಿಷ್ಣುವಾಚಕಗಳಾಗುತ್ತವೆ.

## ನ್ಯಾಯಸುಧೆಯ ಈ ವಾಕ್ಯ ಬಹಳ ಮುಖ್ಯ

**ಶ್ರೀಮನ್ನ್ಯಾಯಸುಧಾ– ತಥಾಽಪಿ ಕೇವಲಸ್ಯ ನ ಪರವಿದ್ಯಾತ್ವಂ ಲಭ್ಯತೇ ಇತಿ ಚೇತ್ । ಮಾ ಲಾಭಿ । ವೇದಾದೀತಿಕರ್ತವ್ಯತಾರೂಪಸ್ಯ ಅಸ್ಯ ಪೃಥಕ್ ಪ್ರಾಮಾಣ್ಯಾನಭ್ಯುಪಗಮಾತ್[1] ।**

ಆದರೂ ಕೂಡ ಕೇವಲ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವು ಲಭ್ಯವಾಗುವುದಿಲ್ಲವಲ್ಲ? ಎಂದರೆ ಬೇಕಾಗಿಲ್ಲ. ವೇದಗಳ ಇತಿಕರ್ತವ್ಯತಾರೂಪವಾಗದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರತ್ಯೇಕ ಪ್ರಾಮಾಣ್ಯವನ್ನು ಅಂಗೀಕಾರ ಮಾಡಿಲ್ಲ.

[1] ನ್ಯಾಯಸುಧೆಯ ಈ ವಾಕ್ಯವೇ ಬಹಳ ಮುಖ್ಯ. ಏಕೆಂದರೆ ಬ್ರಹ್ಮಸೂತ್ರಗಳಿಗೆ ಪ್ರತ್ಯೇಕಪ್ರಾಮಾಣ್ಯವಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಈ ವಾಕ್ಯದ ಆಧಾರದಲ್ಲಿ ಅನೇಕ ವಾಕ್ಯಾರ್ಥಗೋಷ್ಠಿಗಳು ನಡೆದಿವೆ.





## ಉಪನಿಷತ್ತುಗಳಿಗೆ ಮುಖ್ಯಪರವಿದ್ಯಾತ್ವಸಮರ್ಥನೆ

ಪರಿಮಳ– ನನ್ವೇವಮ್ ಆಥರ್ವಣಭಾಷ್ಯವಿರೋಧಃ । ತತ್ರ ಋಗಾದೇರೇವ ಪರವಿದ್ಯಾತ್ವೋಕ್ತೇಃ ಇತ್ಯತ ಆಹ – ಋಗಾದ್ಯಾ ಇತಿ ॥ 'ಯದಾ ವಿಷ್ಣೋರ್ನ ವಾಚಕಾಃ' ಇತಿ ಮಂತ್ರಬ್ರಾಹ್ಮಣಾಭಿಪ್ರಾಯಮ್ । ಕರ್ಮದೇವ ತಂತ್ರೋಕ್ತನ್ಯಾಯಾನಾಮಪಿ ಕರ್ಮಕಾಂಡದೇವಕಾಂಡಮಾತ್ರನಿರ್ಣಾಯಕತ್ವಾತ್ । ಉಪನಿಷದಾಂ ತು ವಿಷ್ಣ್ವವಾಚಕತ್ವದಶಾಯಾಃ ಅಭಾವಾತ್ । ಉಕ್ತಂ ಹಿ ಛಾಂದೋಗ್ಯಭಾಷ್ಯೇ ತೃತೀಯಾಧ್ಯಾಯೇ – 'ಆರಣ್ಯಕಮಾವರ್ತಯೇತ್ ಆರಣ್ಯಕಮಾವರ್ತಯೇತ್' ಇತಿ । ಅನ್ಯಥಾ ಇತರಪರತ್ವೇ ಆವೃತ್ತಿವಿಧಾನಂ ವ್ಯರ್ಥಂ ಸ್ಯಾತ್ । 'ಆರಣ್ಯಕೇಷು ಋತೇ ವಿಷ್ಣುಂ ನೈವಾನ್ಯತ್ ಕಿಂಚಿದುಚ್ಯತೇ' ಇತಿ ತತ್ರೋಕ್ತಸ್ಮೃತಿವಿರೋಧಶ್ಚ ಸ್ಯಾತ್ । 'ಯದಾ ವಾಚಕಾಃ' ಇತಿ ತು ತ್ರಿರೂಪಕೃತ್ಸ್ನವೇದಾಭಿಪ್ರಾಯಮ್ । ಬ್ರಹ್ಮತಂತ್ರಸ್ಯ ಕೃತ್ಸ್ನವೇದೇತಿಕರ್ತವ್ಯತಾರೂಪತ್ವಾತ್ । 'ಯದಾ' ಇತ್ಯುಕ್ತಿರಪಿ ಮಂತ್ರಬ್ರಾಹ್ಮಣರೂಪೈಕದೇಶಾಭಿಪ್ರಾಯಾ ।

ಬ್ರಹ್ಮಮೀಮಾಂಸಾಶಾಸ್ತ್ರವು ಪರವಿದ್ಯೆ ಎಂಬುದಾಗಿ ವ್ಯಾಖ್ಯಾನ ಮಾಡಿದ್ದು ಅಯುಕ್ತವಾಗಿದೆ. ಏಕೆಂದರೆ ಆಥರ್ವಣೋಪನಿಷತ್ತಿನ ಭಾಷ್ಯದಲ್ಲಿ ಋಗಾದಿವೇದಗಳನ್ನೇ ಪರವಿದ್ಯೆ ಎಂದು ಕರೆದಿದ್ದಾರೆ. ಆ ಭಾಷ್ಯದ ವಿರೋಧವನ್ನು ಹೇಗೆ ಪರಿಹರಿಸುತ್ತೀರಿ? ಎಂಬ ಪ್ರಶ್ನೆಗೆ 'ಋಗಾದ್ಯಾಃ' ಇತ್ಯಾದಿ ವಾಕ್ಯದಿಂದ ಉತ್ತರ ನೀಡುತ್ತಿದ್ದಾರೆ.

ಯದಾ ವಿಷ್ಣೋಃ ನ ವಾಚಕಾಃ - ಎಂಬುದಾಗಿ ಹೇಳಿದ್ದು ಮಂತ್ರಭಾಗ ಹಾಗೂ ಬ್ರಾಹ್ಮಣಭಾಗಗಳಿಗೆ ಮಾತ್ರ ಸಂಬಂಧ ಪಡುತ್ತದೆ. ಏಕೆಂದರೆ, ಕರ್ಮಮೀಮಾಂಸಾ ಹಾಗೂ ದೇವಮೀಮಾಂಸಾಗಳಲ್ಲಿ ಹೇಳಲ್ಪಟ್ಟ ಯುಕ್ತಿಗಳೂ ಕರ್ಮಕಾಂಡ ಹಾಗೂ ದೇವಕಾಂಡವನ್ನಷ್ಟೇ ನಿರ್ಣಯ ಮಾಡುತ್ತವೆ. ಉಪನಿಷತ್ತುಗಳಿಗಂತೂ ವಿಷ್ಣುವನ್ನು ಪ್ರತಿಪಾದನೆ ಮಾಡದಿರುವ ಸ್ಥಿತಿಯೇ ಇಲ್ಲ. ಇದನ್ನು ಛಾಂದೋಗ್ಯಭಾಷ್ಯದ ತೃತೀಯಾಧ್ಯಾಯವು ಹೀಗೆ ಹೇಳಿದೆ. 'ಆರಣ್ಯಕಮಾವರ್ತಯೇತ್, ಆರಣ್ಯಕಮಾವರ್ತಯೇತ್' ಆರಣ್ಯಕವನ್ನು ಆವರ್ತನೆ ಮಾಡಬೇಕು; ಆರಣ್ಯಕವನ್ನು ಆವರ್ತನೆ ಮಾಡಬೇಕು ಎಂದು. ಒಂದು ವೇಳೆ ಉಪನಿಷತ್ತುಗಳು ವಿಷ್ಣುವನ್ನು





ಪ್ರತಿಪಾದನೆ ಮಾಡದೇ ಬೇರೆ ವಿಚಾರವನ್ನು ಪ್ರತಿಪಾದನೆ ಮಾಡುವುದಾದರೆ ಆರಣ್ಯಕಗಳೆನಿಸಿದ ಉಪನಿಷತ್ತುಗಳನ್ನು ಆವರ್ತನೆ ಮಾಡಬೇಕು ಎಂಬ ವಿಧಾನಕ್ಕೆ ಪ್ರಯೋಜನವೇ ಇಲ್ಲದೇ ಇರಬೇಕಾಗುತ್ತದೆ. ಮತ್ತು 'ಆರಣ್ಯಕೇಷು ಋತೇ ವಿಷ್ಣುಂ ನೈವಾನ್ಯತ್ ಕಿಂಚಿದುಚ್ಯತೇ' ಆರಣ್ಯಕಭಾಗದಲ್ಲಿ ವಿಷ್ಣುವನ್ನು ಬಿಟ್ಟು ಬೇರೆ ಯಾವುದನ್ನೂ ಹೇಳಿರುವುದಿಲ್ಲ ಎಂಬ ಸ್ಮೃತಿ-ವಿರೋಧವು ಪ್ರಾಪ್ತವಾಗುತ್ತದೆ.

'ಯದಾ ವಿಷ್ಣೋಸ್ತು ವಾಚಕಾಃ' ಎಂಬ ಭಾಗವು ಮಂತ್ರ ಬ್ರಾಹ್ಮಣ ಆರಣ್ಯಕಗಳೆಂಬ ಸಕಲವೇದಗಳಿಗೆ ಸಂಬಂಧಪಡುತ್ತದೆ. ಏಕೆಂದರೆ, ಬ್ರಹ್ಮಮೀಮಾಂಸಾಶಾಸ್ತ್ರವು ಸಕಲವೇದಗಳ ಇತಿಕರ್ತವ್ಯತಾರೂಪವಾಗಿದೆ.

'ಯದಾ' ಎಂಬ ಭಾಗವು ಕೂಡ ಮಂತ್ರಬ್ರಾಹ್ಮಣಗಳೆಂಬ ವೇದದ ಎರಡು ಅಂಶಗಳಿಗೆ ಮಾತ್ರ ಸಂಬಂಧಪಡುತ್ತದೆ.

## ಬ್ರಹ್ಮಸೂತ್ರಗಳಿಗೆ ಮುಖ್ಯಪರವಿದ್ಯಾತ್ವಸಮರ್ಥನೆ

**ವಾಕ್ಯಾರ್ಥಚಂದ್ರಿಕಾ– ನನ್ವಪವ್ಯಾಖ್ಯಾನಸ್ಯಾಯುಕ್ತತ್ವೇನ ಪ್ರಸಕ್ತಪ್ರತಿಷೇಧಸ್ಯ ತದ್ವಿರೋ-ಧಾಭಾವೇಽಪಿ 'ಋಗಾದ್ಯಾ ಅಪರಾ ವಿದ್ಯಾ' ಇತಿ ಭಗವತ್ಪಾದೀಯವ್ಯಾಖ್ಯಾನವಿರೋಧಃ ಸ್ಯಾದೇವ ಇತ್ಯತೋ ವಿಕಲ್ಪೇನ ಭಗವದ್ವಾಚಕೇಷ್ವಪಿ ಋಗಾದಿಷು ಯದಾತದಾಶಬ್ದಪ್ರಯೋಗಾತ್ ಉಪ-ಕಾರಕವಿಶೇಷಸಾಹಿತ್ಯತದಭಾವವಿವಕ್ಷಾಯಾಃ ಸೂಚಿತತ್ವಾತ್ ಉಪಕೃತಾನಾಂ ಪರವಿದ್ಯಾತ್ವೇ ಪರಿಶೇಷಣೇಯೇ ಉಪಕಾರಕಪ್ರಾಧಾನ್ಯವಿವಕ್ಷಯಾ ಪ್ರಸಕ್ತಪ್ರತಿಷೇಧೇನ ಪರಿಶೇಷೋ ನಾನುಪಪನ್ನ ಇತ್ಯಾಹ – ಋಗಾದ್ಯಾ ಇತಿ ॥**

ಆಥರ್ವಣೋಪನಿಷತ್ತಿನಲ್ಲಿರುವ ಪರವಿದ್ಯಾ ಎಂಬಶಬ್ದಕ್ಕೆ ಋಗಾದಿಗಳು ಉಪನಿಷತ್ತುಗಳು ತಜ್ಜನ್ಯ ಜ್ಞಾನಗಳು ಯಾವುದೂ ಕೂಡ ಅರ್ಥವಾಗುವುದಿಲ್ಲ ಬ್ರಹ್ಮಸೂತ್ರವೇ ಆಗುತ್ತದೆ ಎಂಬುದಾಗಿ ಪರಿಶೇಷಪ್ರಮಾಣದಿಂದ ಸಮರ್ಥನೆ ಮಾಡಿದ್ದಾಯಿತು. ಅಪವ್ಯಾಖ್ಯಾನಗಳೆಲ್ಲವೂ ಅಯುಕ್ತವಾದ್ದರಿಂದ ಅವುಗಳ ವಿರೋಧವು ಈ ಪರಿಶೇಷಪ್ರಮಾಣಕ್ಕೆ ಬರುವುದಿಲ್ಲ. ಆದರೆ ಶ್ರೀಮದಾಚಾರ್ಯರೇ 'ತಾ ಏವ ಪರಮಾವಿದ್ಯಾಃ' ಎಂಬುದಾಗಿ ಋಗಾದಿಗಳನ್ನು ಪರವಿದ್ಯೆಯೆಂದು ಹೇಳಿದ್ದಾರೆ. ಅವುಗಳ ವಿರೋಧ ಬರುತ್ತದಲ್ಲವೇ?





ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು – ಆಚಾರ್ಯರ ಮಾತಿನಲ್ಲಿ ಋಗಾದಿಗಳಿಗೆ ಪರವಿದ್ಯಾತ್ವವನ್ನು ಹೇಳುವಾಗ ಯದಾ ಮತ್ತು ತದಾ ಎಂಬ ಶಬ್ದಪ್ರಯೋಗವನ್ನು ಮಾಡಿದ್ದಾರೆ. ಇದರಿಂದ ಉಪಕಾರಕವಿಶೇಷಸಹಿತವಾದ ಋಗಾದಿಗಳಿಗೆ ಪರವಿದ್ಯಾತ್ವವಿದೆ. ಉಪಕಾರಕವಿಶೇಷಸಾಹಿತ್ಯ-ವಿಲ್ಲದಿದ್ದಾಗ ಪರವಿದ್ಯಾತ್ವವಿರುವುದಿಲ್ಲ ಎಂದು ಸೂಚನೆ ಮಾಡಿದಂತಾಯಿತು. ಉಪಕೃತವಾದ ವೇದ-ಗಳಿಗೆ ಪರವಿದ್ಯಾತ್ವವನ್ನು ಪರಿಶೇಷತಃ ನೀವು ಹೇಳಬೇಕು. ಆಗ ಉಪಕಾರಕಕ್ಕೆ ಪ್ರಾಧಾನ್ಯವನ್ನು ವಿವಕ್ಷಿಸಿ-ದಂತಾಗುತ್ತದೆ. ಪ್ರಸಕ್ತ ಪ್ರತಿಷೇಧದಿಂದ ಪರಿಶೇಷಪ್ರಮಾಣವು ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವನ್ನು ಸಮರ್ಥನೆ ಮಾಡಿದ್ದು ಅನುಪಪನ್ನವಾಗುವುದಿಲ್ಲ. ಈ ವಿಷಯವನ್ನು 'ಋಗಾದ್ಯಾಃ' ಎಂಬ ಗ್ರಂಥದಿಂದ ಉಪಪಾದನೆ ಮಾಡಿದ್ದಾರೆ.

ವಿವರಣೆ - ಕೇವಲ ವೇದಗಳಿಗೆ ಪರವಿದ್ಯಾತ್ವವು ಇರುವುದಿಲ್ಲ. ಬ್ರಹ್ಮಸೂತ್ರಗಳಿಂದ ಉಪಕೃತವಾದ ವೇದಗಳಿಗೆ ಪರವಿದ್ಯಾತ್ವವು ಇರುತ್ತದೆ. ಯಾವಾಗ ಬ್ರಹ್ಮಸೂತ್ರಗಳು ಉಪಕಾರವನ್ನು ಮಾಡುವುದಿಲ್ಲವೋ ಆದೇ ವೇದಗಳು ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ಹೀಗೆ ಹೇಳಿದಾಗ ಉಪಕಾರಕ್ಕೆ ಪ್ರಾಧಾನ್ಯವನ್ನು ವಿವಕ್ಷಿಸಿದಂತಾಯಿತು. ಉಪಕಾರ ಮಾಡುವ ಬ್ರಹ್ಮಸೂತ್ರಗಳಿಗೆ ಮುಖ್ಯಪರವಿದ್ಯಾತ್ವವಿದೆ. ವೇದಗಳಿಗೆ ಅಮುಖ್ಯಪರವಿದ್ಯಾತ್ವವಿದೆ ಎಂಬುದು ಒಟ್ಟು ಅಭಿಪ್ರಾಯ.

## ಉಪಕಾರಿಯಾಗದ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವಿಲ್ಲ

ವಾಕ್ಯಾರ್ಥಚಂದ್ರಿಕಾ– ನನ್ವೇವಂ ತರ್ಹಿ 'ವಸ್ತುತ ಉಪಕೃತಸ್ಯ ಋಗಾದೇರನುಪಕೃತ-ಋಗಾದ್ಯಪೇಕ್ಷಯಾ ಪರವಿದ್ಯಾತ್ವಂ ಸಿದ್ಧ್ಯೇತ್ । ನ ತು ಉಪಕಾರಕಪ್ರಾಧಾನ್ಯವಿವಕ್ಷಾಮಾತ್ರೇಣ ಭವದಭಿಮತಮುಪಕಾರಕಸ್ಯೈವ ಪರವಿದ್ಯಾತ್ವಮ್' ಇತ್ಯಾಶಂಕಾಂ ಸಯುಕ್ತಿಕಮ್ ಅಂಗೀಕಾರೇಣ ಪರಿಹರತಿ – ತಥಾಽಪೀತಿ ॥

ಹಾಗಾದರೆ ಉಪಕೃತವಾದ ಋಗಾದಿಗಳಿಗೆ ಅನುಪಕೃತವಾದ ಋಗಾದಿಗಳಿಗಿಂತ ಪರವಿದ್ಯಾತ್ವ-ವಿದೆ ಎಂದು ಹೇಳಿದಂತಾಯಿತು. ಉಪಕಾರಕಪ್ರಾಧಾನ್ಯವಿವಕ್ಷಾಮಾತ್ರದಿಂದ ನಿಮಗೆ ಅಭಿಮತವಾದ ಉಪಕಾರಿಯಾದ ಕೇವಲ ಬ್ರಹ್ಮಸೂತ್ರಕ್ಕೆ ಪರವಿದ್ಯಾತ್ವವನ್ನು ಹೇಳಿದಂತಾಗಲಿಲ್ಲವಲ್ಲ? ಈ ಆಶಂಕೆಯನ್ನು ಯುಕ್ತಿಬದ್ಧವಾಗಿ ಅಂಗೀಕಾರ ಮಾಡಿ ಪರಿಹರಿಸುತ್ತಿದ್ದಾರೆ – 'ತಥಾಪಿ' ಎಂಬ ವಾಕ್ಯದಿಂದ.

ವಿವರಣೆ – ಬ್ರಹ್ಮಸೂತ್ರಗಳ ಸಹಾಯವಿಲ್ಲದ ವೇದಗಳಿಗಿಂತ ಬ್ರಹ್ಮಸೂತ್ರಗಳ ಸಹಾಯವಿರುವ ವೇದಗಳಿಗೆ ಉತ್ತಮತ್ವವಿದೆ. ಅದಕ್ಕಿಂತಲೂ ಉತ್ತಮತ್ವ ಬ್ರಹ್ಮಸೂತ್ರಗಳಿಗಿದೆ. ಆದರೆ ವೇದಗಳಿಗೆ ಸಹಕಾರಿಯಾದ ಕೇವಲ





ಬ್ರಹ್ಮಸೂತ್ರಗಳಿಗೆ ಉತ್ತಮತ್ವವಿದೆ. ಅರ್ಥಾತ್ ಕೇವಲ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವನ್ನು ಒಪ್ಪಲು ಸಾಧ್ಯವಿಲ್ಲ.

## ರಸಘಟ್ಟ
## ಕಾಶಿಕಾಟಿಪ್ಪಣಿಯಲ್ಲಿ ಪರವಿದ್ಯಾ ವಿಚಾರ
(ಒಂದು ವಿಮರ್ಶೆ)

## ಪುರುಷಸೂಕ್ತಾದಿಗಳು ಕೇವಲ ಪರವಿದ್ಯೆಗಳಲ್ಲವೇ?

ಕಾಶೀಟಿಪ್ಪಣಿ– ಅಥ ಸಿದ್ಧಾಂತೇಽಪಿ ಋಗಾದಿಪದಾನಾಮ್ ಋಗಾದಿಸಾಮಾನ್ಯಪರತ್ವಂ ನ ಸಂಭವತಿ । 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯುಪನಿಷದಾಂ ಪುರುಷಸೂಕ್ತಾದೀನಾಂ ಚ ಅಪರವಿದ್ಯಾತ್ವಾಭಾವಾತ್ । ಉಕ್ತಂ ಚ ಪರಿಮಳೇ – 'ಉಪನಿಷದಾಂ ವಿಷ್ಣುವಾಚಕತ್ವದಶಾಯಾ ಅಭಾವಾತ್' ಇತಿ ।

ಆಕ್ಷೇಪ – ಅದ್ವೈತಿಗಳನ್ನು ಕುರಿತು ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅಗತಿಕಾಗತಿಯಿಂದಷ್ಟೇ ಅನುಸರಿಸಬೇಕೆಂದು ಹೇಳಿದಿರಿ. ಏಕೆಂದರೆ ಪರವಿದ್ಯಾತ್ವವನ್ನು ಸಮರ್ಥಿಸುವ ಉಪನಿಷತ್ತು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳನ್ನು ಅಪರವಿದ್ಯೆ ಎಂಬುದಾಗಿ ಸ್ಪಷ್ಟವಾಗಿ ಹೇಳುತ್ತಿದೆ. ಇಲ್ಲಿರುವ ಋಗ್ವೇದಾದಿಶಬ್ದಗಳಿಗೆ ಉಪನಿಷತ್ತುಗಳನ್ನು ಬಿಟ್ಟು ಎಂದು ವ್ಯಾಖ್ಯಾನ ಮಾಡುವುದು ಅಯುಕ್ತವಾಗುತ್ತದೆ. ಬೇರೆ ಗತಿಯಿಲ್ಲದಿದ್ದಾಗ ಮಾತ್ರ ಹೀಗೆ ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಬೇಕು. ಆದರೆ ನಾವು ಹೇಳುವಂತೆ ಬೇರೆ ಗತಿ ಇದೆ ಎಂಬುದಾಗಿ ನ್ಯಾಯಸುಧೆಯಲ್ಲಿ ಹೇಳಲಾಗಿದೆ. ಹಾಗಾದರೆ ಸಿದ್ಧಾಂತದಲ್ಲೂ ಕೂಡ ಋಗಾದಿಪದಗಳಿಗೆ ಋಗಾದಿಸಾಮಾನ ಎಂಬರ್ಥವನ್ನು ಹೇಳುವುದು ಕೂಡುವುದಿಲ್ಲ. ಏಕೆಂದರೆ ಸತ್ಯಂ ಜ್ಞಾನಮನಂತಂ ಬ್ರಹ್ಮ ಇವೇ ಮೊದಲಾದ ಉಪನಿಷದ್ವಾಕ್ಯಗಳು ಪುರುಷಸೂಕ್ತಗಳು ನಿರಂತರವಾಗಿ ವಿಷ್ಣುಪರವೇ ಆಗಿವೆ. ಆದ್ದರಿಂದ ಪರವಿದ್ಯೆಗಳೆಂದೇ ಯಾವಾಗಲೂ ಕರೆಸಿಕೊಳ್ಳುತ್ತವೆ. ಇವುಗಳಲ್ಲಿ ಅಪರವಿದ್ಯಾತ್ವವೇ ಇರುವುದಿಲ್ಲ. ಇದಕ್ಕೆ ಪರಿಮಳಗ್ರಂಥದ ಸಮ್ಮತಿಯೂ ಇದೆ. 'ಉಪನಿಷದಾಂ ವಿಷ್ಣುವಾಚಕತ್ವದಶಾಯಾ ಅಭಾವಾತ್' 'ಉಪನಿಷತ್ತುಗಳಿಗೆ ವಿಷ್ಣುವಾಚಕತ್ವ ದಶೆಯೇ ಇರುವುದಿಲ್ಲ' ಎಂದು. ಆದ್ದರಿಂದ ಉಪನಿಷತ್ತು ಪುರುಷಸೂಕ್ತಾದಿಗಳು ಇವುಗಳನ್ನು ಬಿಟ್ಟು ಋಗಾದಿವೇದಗಳು ಅಪರವಿದ್ಯೆ ಎಂಬುದಾಗಿ ಆಥರ್ವಣೋಪನಿಷತ್ತು ಹೇಳುತ್ತಿದೆ. ಹೀಗೆಯೇ ತತ್ತ್ವ-





ವಾದಿಗಳು ಕೂಡ ವ್ಯಾಖ್ಯಾನ ಮಾಡಬೇಕು. ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅದ್ವೈತಿಗಳು ಅನುಸರಿಸಿದಂತೆ ನೀವು ಕೂಡ ಅನುಸರಿಸಬೇಕು. ಆದ್ದರಿಂದ ಅದ್ವೈತಮತಖಂಡನೆಯು ಅಯುಕ್ತವಾಗಿದೆಯಲ್ಲವೇ?

## ಉಪನಿಷತ್ತುಗಳು ಕೂಡ ಐಕ್ಯಪರವಾದಾಗ ಅಪರವಿದ್ಯೆಯಾಗುತ್ತವಲ್ಲವೇ?

ಕಾಶೀ– ನ ಚ ತೇಷಾಮಪಿ ಪರೋಕ್ತಜೀವೈಕ್ಯಪರತ್ವದಶಾಯಾಮ್ ಅಪರವಿದ್ಯಾತ್ವಸಂಭವಃ।

ಪ್ರಶ್ನೆ – ಉಪನಿಷತ್ತುಗಳು ಕೂಡ ಅದ್ವೈತಿಗಳು ಹೇಳುವಂತೆ ಜೀವೈಕ್ಯಪರವಾದಾಗ ಅಪರವಿದ್ಯಾ ಆಗುತ್ತದಲ್ಲವೇ? ಯಾವಾಗ ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ಶ್ರುತಿಗಳು ಜೀವಭಿನ್ನನಾದ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೋ ಆಗಷ್ಟೇ ಪರವಿದ್ಯೆ ಎನಿಸುತ್ತವೆ. ಅದ್ವೈತಿಗಳು ಹೇಳುವಂತೆ ಐಕ್ಯಪರವಾದಾಗ ಅಥವಾ ಜಗನ್ಮಿಥ್ಯಾತ್ವಪರವಾದಾಗ ಪುರುಷಸೂಕ್ತಾದಿಗಳು ಉಪನಿಷದಾದಿಗಳು ಕೂಡ ಅಪರವಿದ್ಯೆ ಆಗುತ್ತವೆ. ಆದ್ದರಿಂದ ವಿಷ್ಣುವಾಚಕತ್ವದಶೆಯೇ ಇರುವುದಿಲ್ಲ ಎಂದು ಹೇಳಿದ್ದು ಹೇಗೆ ಕೂಡುತ್ತವೆ.

## ಅದ್ವೈತಿಗಳಿಗೂ ತತ್ವವಾದಿಗಳಿಗೂ ಏನು ವ್ಯತ್ಯಾಸ?

ಕಾಶೀ– ತಾದೃಶದಶಾಯಾಮ್ ಅತತ್ತ್ವಾವೇದಕತ್ವೇನ ವಿದ್ಯಾತ್ವಸ್ಯೈವ ಅಭಾವಾತ್ । ಅತೋ ಲಕ್ಷಣಯಾ ವಿಷ್ಣುವಾಚಕವಿದ್ಯಾತ್ವವಿಶಿಷ್ಟಋಗಾದಿಪರತ್ವಂ ವಾಚ್ಯಮ್ । ತಥಾ ಚ ವಿಶೇಷಾಭಾವಾನ್ನ ಪರಮತನಿರಾಸೋ ಯುಕ್ತಃ । ಪರೇಣಾಪಿ ಬ್ರಹ್ಮಕರ್ಮವಿಷಯವಿದ್ಯಯೋರೇವ ಪರಾಪರಭಾವಾಂಗೀಕಾರಾದಿತಿ ಚೇತ್ ।

ಸಮಾಧಾನ – ಉಪನಿಷತ್ತುಗಳಿಗೆ ಅಥವಾ ಉಳಿದ ಯಾವುದೇ ವೇದವಾಕ್ಯಗಳಿಗೆ ಐಕ್ಯಪರತ್ವದ ದಶೆಯೇ ಇರುವುದಿಲ್ಲ. ಹಾಗೇನಾದರೂ ವೇದವಾಕ್ಯಗಳು ಜೀವೈಕ್ಯವನ್ನು ಪ್ರತಿಪಾದನೆ ಮಾಡುವುದಾದರೆ ಅತತ್ತ್ವಾವೇದಕವಾಗುತ್ತವೆ. ಆಗ ವಿದ್ಯಾತ್ವವೇ ಅವುಗಳಲ್ಲಿ ಬರುವುದಿಲ್ಲ. ಆದ್ದರಿಂದ ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ಶ್ರುತಿಗಳು ಐಕ್ಯಪರವಾದಾಗ ಅಪರವಿದ್ಯೆ ಎನಿಸುತ್ತವೆ. ಜೀವಭಿನ್ನನಾದ ವಿಷ್ಣುಪರವಾದಾಗ ಪರವಿದ್ಯೆ ಎನಿಸುತ್ತವೆ ಎಂಬುದಾಗಿ ಹೇಳಲು ಸಾಧ್ಯವೇ ಇಲ್ಲ. ನಿರಂತರವಾಗಿ ಈ





ವಾಕ್ಯಗಳು ವಿಷ್ಣುಪರವೇ ಆಗಿರುತ್ತವೆ. ಆದ್ದರಿಂದ ಋಗಾದಿಪದಗಳಿಗೆ ಲಕ್ಷಣಾವೃತ್ತಿಯನ್ನಂಗೀಕರಿಸಿ ವಿಷ್ಣುವಾಚಕವಿದ್ಯಾತ್ವವಿಶಿಷ್ಟಋಜ್ಮಂತ್ರಗಳು ಎಂದು ಅರ್ಥೈಸಬೇಕು. ವಿಷ್ಣುವನ್ನು ಪ್ರತಿಪಾದನೆ ಮಾಡದ ಯಾವ ವಿದ್ಯೆಯಿದೆಯೋ ತದ್ವಿಶಿಷ್ಟವಾದ ಋಗಾದಿವೇದಗಳನ್ನೇ ಆಥರ್ವಣೋಪನಿಷತ್ತು ಅಪರವಿದ್ಯೆ ಎಂಬುದಾಗಿ ಹೇಳುತ್ತಿದೆ.

ಹೀಗೆ ಹೇಳಿದಾಗ ಅದ್ವೈತಿಗಳಿಗೂ ನಿಮಗೂ ಯಾವುದೇ ವ್ಯತ್ಯಾಸವಿಲ್ಲದಂತಾಯಿತು. ಅವರೂ ಕೂಡ ಉಪನಿಷತ್ತನ್ನು ಪರವಿದ್ಯೆ ಎನ್ನುತ್ತಾರೆ. ಸಿದ್ಧಾಂತಿಗಳಾದ ನೀವೂ ಕೂಡ ಉಪನಿಷತ್ತನ್ನು ಪರವಿದ್ಯೆ ಎನ್ನುತ್ತಿದ್ದೀರಿ. ಯಾವುದೇ ವ್ಯತ್ಯಾಸವಿಲ್ಲದ ಕಾರಣ ಅದ್ವೈತಮತನಿರಾಸವು ಅಯುಕ್ತವಾಗಿದೆ. ಅದ್ವೈತಿಯು ಋಗಾದಿವೇದಗಳು ಬ್ರಹ್ಮಪರವಾದಾಗ ಪರವಿದ್ಯೆ ಎಂಬುದಾಗಿ ಕರ್ಮಪರವಾದಾಗ ಅಪರವಿದ್ಯೆ ಎಂಬುದಾಗಿ ಅಂಗೀಕರಿಸಿದ್ದಾನೆ. ಸಾಮಾನ್ಯವಾಚಕವಾದ ಋಗಾದಿಪದಗಳಿಗೆ ವಿಶೇಷಪರತ್ವವನ್ನು ಅದ್ವೈತಿಯು ಒಪ್ಪಿದಂತೆ ನೀವು ಕೂಡ ಒಪ್ಪಿರುತ್ತೀರಿ. ಆದ್ದರಿಂದ ಅದ್ವೈತಮತನಿರಾಸವು ಹೇಗೆ ಕೂಡುತ್ತದೆ?

## ಸಮಸ್ತವೇದಗಳಿಗೆ ಪರಾಪರತ್ವವ್ಯವಸ್ಥೆ

ಕಾಶೀ– ಉಚ್ಯತೇ । ಸಮಸ್ತಗುಣಪೂರ್ಣತ್ವಾದಿರೂಪಸರ್ವೋತ್ಕೃಷ್ಟತಾವಿಶಿಷ್ಟವಿಷ್ಣುಪ್ರತಿಪತ್ತಿಪರತ್ವೇನ ಜ್ಞಾಯಮಾನತ್ವಮೇವ ಹಿ ವಿದ್ಯಾಯಾಃ ಪರತ್ವಮ್ । ತದ್ರಾಹಿತ್ಯಮ್ ಅಪರತ್ವಮ್ । ತಚ್ಚ ತಾರ್ಕಿಕಾದಿರೀತ್ಯಾ ಅಬಾಧಿತಜೀವಭಿನ್ನತ್ವಾದಿಮಾತ್ರವಿಶಿಷ್ಟೇಶ್ವರಪರತ್ವೇನ ಜ್ಞಾಯಮಾನೋಪನಿಷದಾದಿಸಾಧಾರಣಮಿತಿ ಸಿದ್ಧಾಂತೇ ಋಗಾದಿಪದಾನಾಮ್ ಋಗಾದಿಸಾಮಾನ್ಯಪರತ್ವೇಽಪಿ ನ ದೋಷಃ । ಪರಮತೇ ಚ ಬ್ರಹ್ಮವಿಷಯವಿದ್ಯಾಯಾಃ ಕರ್ಮವಿಷಯತ್ವಾಭಾವಾತ್ ತದನುಪಪತ್ತಿಃ ।

ಸಮಾಧಾನ – ಕೇವಲ ವಿಷ್ಣುಪ್ರತಿಪಾದಕವಾದ ಮಾತ್ರಕ್ಕೆ ಪರವಿದ್ಯೆ ಆಗುತ್ತದೆಂದು ನಾವು ಹೇಳುವುದಿಲ್ಲ. ಸಮಸ್ತಗುಣಪೂರ್ಣತ್ವಾದಿರೂಪಸರ್ವೋತ್ಕೃಷ್ಟವಿಶಿಷ್ಟವಿಷ್ಣುಪ್ರತಿಪತ್ತಿಪರತ್ವೇನ ಜ್ಞಾಯಮಾನವಾದ ವಿದ್ಯೆಯೇ ಪರವಿದ್ಯೆ ಆಗುತ್ತದೆ ಎಂದು ಹೇಳುತ್ತೇವೆ. ಇದು ಎಲ್ಲಿ ಇರುವುದಿಲ್ಲವೋ ಅದು ಅಪರವಿದ್ಯೆ ಎನಿಸುತ್ತದೆ.

ಈ ಪರಿಷ್ಕಾರದ ಅಭಿಪ್ರಾಯ ಹೀಗಿದೆ – ತಿಳುವಳಿಕೆಯು ವ್ಯಕ್ತಿಯಲ್ಲಿ ಬರುತ್ತದೆ. ತಿಳಿಯಲ್ಪಡುವಂಥದ್ದು ಆಯಾ ಶಾಸ್ತ್ರಗಳಾಗುತ್ತವೆ. ಪ್ರಕೃತ ಜ್ಞಾಯಮಾನವಾಗಬೇಕು ಎಂದು ಹೇಳಿದ್ದರಿಂದ ಜ್ಞಾಯಮಾನತ್ವವು ಋಗಾದಿವೇದಗಳಲ್ಲಿ ಬರುತ್ತದೆ. ವ್ಯಕ್ತಿಯಲ್ಲಿ ಬರುವುದಿಲ್ಲ. ಆಯಾ ಋಗಾದಿಶಾಸ್ತ್ರಗಳು ಹೇಗೆ ಜ್ಞಾಯಮಾನವಾಗಬೇಕು ಎಂದರೆ ಕೇವಲ ವಿಷ್ಣುವನ್ನು ಪ್ರತಿಪಾದನೆ ಮಾಡುವ ಮೂಲಕ





ಜ್ಞಾಯಮಾನವಾದರೆ (ತಿಳಿಯಲ್ಪಟ್ಟರೆ) ಪರವಿದ್ಯೆ ಎಂದು ಕರೆಸಿಕೊಳ್ಳುವುದಿಲ್ಲ. ಆ ವಿಷ್ಣುವು ಎಲ್ಲಾ ಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಮತ್ತು ಸರ್ವೋತ್ತಮನಾಗಿದ್ದಾನೆಂದು ಆ ವಿದ್ಯೆಗಳು ಪ್ರತಿಪಾದನೆ ಮಾಡಬೇಕು. ಹೀಗೆ ಮಾಡದೇ ಕೇವಲ ವಿಷ್ಣುವನ್ನಷ್ಟೇ ಪ್ರತಿಪಾದನೆ ಮಾಡಿದರೆ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ. ಉದಾಹರಣೆ – ತಾರ್ಕಿಕರು ವಿಷ್ಣುವನ್ನು ಜೀವಭಿನ್ನ ಎನ್ನುತ್ತಾರೆ. ಆದರೆ ಸಮಸ್ತಗುಣಪರಿಪೂರ್ಣನೆಂದೂ ಸರ್ವೋತ್ತಮನೆಂದೂ ಅಂಗೀಕರಿಸುವುದಿಲ್ಲ. ಅವರ ಮತದ ವಾಸನೆಯುಳ್ಳ ವ್ಯಕ್ತಿಯು ಋಗಾದಿಶಾಸ್ತ್ರಗಳನ್ನು ಅಬಾಧಿತವಾದ ಜೀವಭಿನ್ನತ್ವಾದಿ ವಿಶಿಷ್ಟನಾದ ವಿಷ್ಣುಪರವೆಂದು ತಿಳಿದುಕೊಂಡರೆ ಆಗ ಜೀವಭಿನ್ನತ್ವಾದಿಮಾತ್ರವಿಶಿಷ್ಟ ಈಶ್ವರಪರತ್ವೇನ ವೇದಗಳು ಜ್ಞಾಯಮಾನವಾಗುತ್ತವೆ. ಇದು ಉಪನಿಷತ್ತುಗಳಲ್ಲೂ ಕೂಡ ಸಾಧಾರಣವಾಗಿದೆ. ಹೀಗೆ ತಾರ್ಕಿಕಮತದ ಪ್ರಕಾರ ಋಗಾದಿವಿದ್ಯೆಗಳು ಅಪರವಿದ್ಯೆಯಾಗುತ್ತವೆ. ಆದ್ದರಿಂದ ಸಿದ್ಧಾಂತದಲ್ಲಿ ಋಗಾದಿಪದಗಳಿಗೆ ಋಗಾದಿಸಾಮಾನ್ಯಪರತ್ವವನ್ನು ಒಪ್ಪಿದಾಗ ಯಾವುದೇ ದೋಷವಿಲ್ಲ.

ಅಭಿಪ್ರಾಯ ಹೀಗಿದೆ – ಋಗ್ವೇದ, ಯಜುರ್ವೇದ ಮೊದಲಾದ ಪದಗಳಿಗೆ ವಿಷ್ಣುಸೂಕ್ತ, ಪುರುಷಸೂಕ್ತ, ಉಪನಿಷತ್ತು ಇವುಗಳನ್ನು ಬಿಟ್ಟು ಉಳಿದ ವೇದಗಳನ್ನು ವಿವಕ್ಷಿಸಬೇಕೆಂದು ವ್ಯಾಖ್ಯಾನ ಮಾಡುವ ಅವಶ್ಯಕತೆ ಇಲ್ಲ. ಏಕೆಂದರೆ ಈ ವಿಷ್ಣುಸೂಕ್ತ ಮೊದಲಾದವುಗಳೂ ಕೂಡ ತಾರ್ಕಿಕ ಮತದ ವಾಸನೆಯುಳ್ಳವನಿಗೆ ಪರವಿದ್ಯೆಯೇ ಆಗುತ್ತವೆ. ತಾರ್ಕಿಕಮತವನ್ನು ತಿಳಿದ ವ್ಯಕ್ತಿಯು ಈ ವಿಷ್ಣುಸೂಕ್ತಾದಿಗಳನ್ನು ಓದಿದಾಗ ಅಬಾಧಿತವಾದ ಜೀವಭೇದವಿಶಿಷ್ಟವಾದ ವಿಷ್ಣುಪರತ್ವವನ್ನಷ್ಟೇ ತಿಳಿಯುತ್ತಾನೆ. ಸಮಸ್ತಗುಣಪರಿಪೂರ್ಣನಾದ ಸರ್ವೋತ್ತಮನಾದ ವಿಷ್ಣುವನ್ನು ಪ್ರತಿಪಾದ್ಯನೆಂದು ತಿಳಿಯುವುದಿಲ್ಲ. ಅವನ ದೃಷ್ಟಿಯಿಂದ ಈ ವಿದ್ಯೆಗಳು ಕೇವಲ ಜೀವಭೇದವಿಶಿಷ್ಟವಿಷ್ಣುಪರತ್ವೇನ ಜ್ಞಾಯಮಾನಗಳಾಗುವುದರಿಂದ ಅಪರವಿದ್ಯೆಯಾಗುತ್ತವೆ. ಆದ್ದರಿಂದ ಋಗಾದಿಪದಗಳಿಗೆ ವಿಷ್ಣುಸೂಕ್ತ, ಉಪನಿಷತ್ತು ಮೊದಲಾದವುಗಳನ್ನು ಬಿಟ್ಟು ಉಳಿದ ಮಂತ್ರಗಳನ್ನು ವಿವಕ್ಷಿಸಬೇಕು ಎಂಬುದಾಗಿ ಅರ್ಥಮಾಡಬೇಕಾಗಿಲ್ಲ.

ಪ್ರಶ್ನೆ – ಉಪನಿಷದಾಂ ವಿಷ್ಣುವಾಚಕತ್ವದಶಾಯಾಮ್ ಅಭಾವಾತ್ ಎಂಬ ಪರಿಮಳದ ವಾಕ್ಯಕ್ಕೆ ಏನು ಅರ್ಥ?

ಉತ್ತರ – ಉಪನಿಷತ್ತುಗಳಿಗೆ ನಿರಂತರವಾಗಿ ವಿಷ್ಣುವಾಚಕತ್ವ ದಶೆಯೇ ಇರುತ್ತದೆ. ವಿಷ್ಣುವನ್ನು ಪ್ರತಿಪಾದನೆ ಮಾಡದೇ ಇರುವ ಅವಕಾಶವೇ ಇರುವುದಿಲ್ಲ ಎಂದರ್ಥ. ಆದರೆ ತಾರ್ಕಿಕಮತದ ಪ್ರಕಾರ ಉಪನಿಷತ್ತನ್ನು ನೋಡಿದಾಗ ಉಪನಿಷತ್ತುಗಳು ಸಮಸ್ತಗುಣಪರಿಪೂರ್ಣನಾದ ಸರ್ವೋತ್ತಮನಾದ ವಿಷ್ಣುವನ್ನು ಪ್ರತಿಪಾದನೆ ಮಾಡಲಾರವು. ಕೇವಲ ಅಬಾಧಿತವಾದ ಜೀವಭೇದವಿಶಿಷ್ಟನಾದ ವಿಷ್ಣುವನ್ನಷ್ಟೇ





ಪ್ರತಿಪಾದನೆ ಮಾಡುತ್ತವೆ. ಇಂಥ ಕೆಲವು ಸಂದರ್ಭದಲ್ಲಿ ಮಾತ್ರ ಅಪರವಿದ್ಯಾತ್ವವು ಉಪನಿಷತ್ತುಗಳಿಗೂ ಕೂಡ ಪ್ರಾಪ್ತವಾಗುತ್ತದೆ. ಇಂಥ ದಶೆಯನ್ನು ಬಿಟ್ಟು ಉಳಿದೆಲ್ಲ ಸಂದರ್ಭದಲ್ಲಿ ಸಮಸ್ತಗುಣಪರಿಪೂರ್ಣನಾದ ಸರ್ವೋತ್ತಮನಾದ ವಿಷ್ಣುವನ್ನೇ ಪ್ರತಿಪಾದನೆ ಮಾಡುವುದರಿಂದ ಪರವಿದ್ಯೆಯೇ ಆಗಿರುತ್ತವೆ ಎಂದರ್ಥ.

ಪ್ರಶ್ನೆ – ಹಾಗಾದರೆ ಒಬ್ಬ ಅದ್ವೈತಿಯು ಉಪನಿಷತ್ತನ್ನು ನೋಡಿದಾಗ ಜೀವಭೇದವನ್ನೂ ಕೂಡ ಉಪನಿಷದ್ವಾಕ್ಯಗಳಿಂದ ತಿಳಿಯಲಾರ. ಆದ್ದರಿಂದ ಜೀವಭೇದವಿಶಿಷ್ಟವಾದ ವಿಷ್ಣುಪರತ್ವವೂ ಕೂಡ ಉಪನಿಷತ್ತುಗಳಿಗೆ ಇಲ್ಲವೆಂದು ಅಂಗೀಕರಿಸಬೇಕಾದೀತು?

ಉತ್ತರ – ಆ ಸಂದರ್ಭದಲ್ಲಿ ಉಪನಿಷತ್ತುಗಳು ಅತತ್ವಾವೇದಕವಾಗುವುದರಿಂದ ವಿದ್ಯೆಯೆಂದೇ ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಅದ್ವೈತಮತದ ಪ್ರಕಾರ ಆಕ್ಷೇಪ ಮಾಡುವುದೇ ತಪ್ಪು. ಕೇವಲ ತಾರ್ಕಿಕಮತದ ಪ್ರಕಾರ ಆಕ್ಷೇಪ ಮಾಡಬಹುದು. ಆಗ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ತತ್ವವಾದದ ಪ್ರಕಾರ ಉಪನಿಷತ್ತುಗಳನ್ನು ತಿಳಿದಾಗ ನಿರಂತರ ಪರವಿದ್ಯೆಯೇ ಆಗಿರುತ್ತವೆ.

ಪ್ರಶ್ನೆ – ಹಾಗಾದರೆ ಅದ್ವೈತಿಗಳು ಕೂಡ ನಮ್ಮಂತೆಯೇ ಹೇಳಬಹುದು. ಆಗ ಋಗಾದಿಶಬ್ದಗಳಿಗೆ ವಿಶೇಷಪರವಾಗಿ ಲಕ್ಷಣಾವೃತ್ತಿಯನ್ನು ಅನುಸರಿಸಬೇಕಾಗಿಲ್ಲವಲ್ಲವೇ?

ಉತ್ತರ – ಅದ್ವೈತಮತದಲ್ಲಿ ಬ್ರಹ್ಮವಿಷಯಕವಾದ ವಿದ್ಯೆಯು ಕರ್ಮಪರವಾಗುವುದಿಲ್ಲ. ಕರ್ಮಪರವಾದ ವಿದ್ಯೆಯು ಬ್ರಹ್ಮಪರವಾಗುವುದಿಲ್ಲ. ಆದ್ದರಿಂದ ಋಗಾದಿಪದಗಳಿಗೆ ವಿಶೇಷಪರವಾಗಿ ಅವರು ವ್ಯಾಖ್ಯಾನವನ್ನು ಮಾಡಲೇಬೇಕು. ಋಗ್ವೇದ ಮೊದಲಾದ ಶಬ್ದಗಳಿಗೆ ಉಪನಿಷತ್ತುಗಳನ್ನು ಬಿಟ್ಟು ಉಳಿದ ವೇದಭಾಗಗಳು ಎಂಬುದಾಗಿಯೇ ಅವರು ಬ್ರಾಹ್ಮಣಪರಿವ್ರಾಜಕನ್ಯಾಯವನ್ನು ಅನುಸರಿಸಬೇಕು. ಇದು ಅನುಪಪನ್ನವಾಗಿದೆ.

## ಮೇಲಿನ ವಿಷಯದಲ್ಲಿ ಆಥರ್ವಣೋಪನಿಷದ್ಭಾಷ್ಯದ ಸಮ್ಮತಿ

ಕಾಶೀ– ನ ಚೈವಂ 'ಯಯಾ ತದಕ್ಷರಮಧಿಗಮ್ಯತೇ' ಇತಿ ಪರಶಬ್ದವ್ಯಾಖ್ಯಾನವಿರೋಧ ಇತಿ ವಾಚ್ಯಮ್ । 'ಯಯಾ' ಇತ್ಯನೇನಾಪಿ ತತ್ಪರತ್ವೇನ ಜ್ಞಾಯಮಾನರೂಪತ್ವಸ್ಯ ಕರಣೇತಿಕರ್ತವ್ಯತಾಸಾಧಾರಣಸಾಧನಸ್ಯೈವ ವಿವಕ್ಷಿತತ್ವಾತ್ । ಅನ್ಯಥಾ ತತ್ಕಾಮಾಃ ಕರ್ಮಾಣ್ಯಾಚರಥ ತದಾ ಸಾಽಪಿ ಪರವಿದ್ಯಾ ಇತ್ಯಾಥರ್ವಣಭಾಷ್ಯೇ ಪರಮಾತ್ಮಪ್ರೀತ್ಯುದ್ದೇಶಮಾತ್ರೇಣ ಕರ್ಮವಿದ್ಯಾಯಾಃ ಪರ-







ವಿದ್ಯಾತ್ವೋಕ್ತಿವಿರೋಧಾತ್ । ಅಧಿಕಾರಿವಿಶೇಷಾನ್ ಪ್ರತಿ ಸಾಕ್ಷಾದಕ್ಷರಾಧಿಗತಿಕರಣತ್ವಂ ಚ ಸರ್ವ-ವಿದ್ಯಾನಾಂ ವಕ್ಷ್ಯತೇ।

ಪ್ರಶ್ನೆ – ನೀವು ಪರವಿದ್ಯಾತ್ವ ಎಂದರೆ ಸಮಸ್ತಗುಣಪೂರ್ಣತ್ವಾದಿರೂಪಸರ್ವೋತ್ಕೃಷ್ಟವಿಶಿಷ್ಟ-ವಿಷ್ಣುಪ್ರತಿಪತ್ತಿಪರತ್ವೇನ ಜ್ಞಾಯಮಾನತ್ವಂ ಎಂದು ಹೇಳುತ್ತಿದ್ದೀರಿ. ಆದರೆ 'ಯಯಾ ತದಕ್ಷರಮಧಿ-ಗಮ್ಯತೇ' ಎಂದು ಉಪನಿಷತ್ತು ಭಗವತ್ಪ್ರತಿಪತ್ತಿಸಾಧನತ್ವವನ್ನು ಪರವಿದ್ಯೆ ಎಂದು ಹೇಳುತ್ತಿದೆ. ಇದನ್ನು ಬಿಟ್ಟು ಜ್ಞಾಯಮಾನತ್ವರೂಪವಾದ ಪರವಿದ್ಯಾತ್ವವನ್ನು ಹೇಳುವುದು ಉಪನಿಷತ್ತಿಗೆ ವಿರುದ್ಧವಾಗು-ತ್ತದಲ್ಲವೇ?

ಸಮಾಧಾನ – ಯಯಾ ತದಕ್ಷರಮಧಿಗಮ್ಯತೇ ಎಂಬ ವೇದವಾಕ್ಯಕ್ಕೂ ಕೂಡ ಇದೇ ಅಭಿ-ಪ್ರಾಯ. ಯಯಾ ಎಂಬ ತೃತೀಯಾವಿಭಕ್ತಿಯಿಂದ ಸಾಧನತ್ವವು ತಿಳಿಯುತ್ತದೆ. ಸಮಸ್ತಗುಣಪೂರ್ಣ-ತ್ವಾದಿರೂಪಸರ್ವೋತ್ಕೃಷ್ಟವಿಶಿಷ್ಟವಿಷ್ಣುಪ್ರತಿಪತ್ತಿಪರತ್ವೇನ ಜ್ಞಾಯಮಾನವಾದಾಗ ಮಾತ್ರ ಆ ವಿದ್ಯೆಯು ಅಕ್ಷರಾಧಿಗತಿಸಾಧನವಾಗಲು ಸಾಧ್ಯ. ಇಲ್ಲವಾದರೆ ಅಕ್ಷರಾಧಿಗತಿಸಾಧನವೆಂದೇ ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ನಾವು ಹೇಳಿದ ಪರಿಷ್ಕಾರವು ಉಪನಿಷತ್ತಿಗೆ ಅತ್ಯಂತ ಸಮ್ಮತವಾಗಿದೆ.

ವಿಷ್ಣುಸರ್ವೋತ್ತಮತ್ವವಿಶಿಷ್ಟವಾಗಿ ವಿಷ್ಣುಪ್ರತಿಪತ್ತಿಪರತ್ವೇನ ಜ್ಞಾಯಮಾನವಾದದ್ದೇ ಪರವಿದ್ಯೆ-ಯಾಗುತ್ತದೆಂದು ಅಂಗೀಕಾರ ಮಾಡದಿದ್ದರೆ 'ತತ್ಕಾಮಾಃ ಕರ್ಮಾಣ್ಯಾಚರಥ ತದಾ ಸಾऽಪಿ ಪರವಿದ್ಯಾ' – 'ವಿಷ್ಣುಕಾಮನೆಯಿಂದ ಕರ್ಮಗಳನ್ನು ಆಚರಿಸಿ. ಆಗ ಅದು ಕೂಡ ಪರವಿದ್ಯೆಯಾಗುತ್ತದೆ' ಎಂಬ ಆಥರ್ವಣಭಾಷ್ಯದ ವಿರೋಧವು ಬರುತ್ತದೆ. ಈ ಭಾಷ್ಯದಲ್ಲಿ ಪರಮಾತ್ಮನ ಪ್ರೀತಿಗೋಸ್ಕರ ಮಾಡಲ್ಪ-ಡುವ ಕರ್ಮಪ್ರತಿಪಾದಕವಾದ ವಿದ್ಯೆಗಳು ಕೂಡ ಪರವಿದ್ಯೆ ಎನಿಸುತ್ತವೆಂದು ಆಚಾರ್ಯರು ಹೇಳಿದ್ದಾರೆ. ಮತ್ತು ಅಧಿಕಾರಿಭೇದದಿಂದ ನೇರವಾಗಿಯೇ ಅಕ್ಷರಾಧಿಕರಣತ್ವವು ಸಕಲವಿದ್ಯೆಗಳಿಗೆ ಪ್ರಾಪ್ತವಾಗುತ್ತದೆ ಎಂಬ ವಿಷಯವನ್ನು ಮುಂದೆ ಸ್ಪಷ್ಟಪಡಿಸುತ್ತೇವೆ.

## ಬ್ರಹ್ಮಸೂತ್ರಗಳು ಪರವಿದ್ಯೆಯೆನ್ನಲು ಪ್ರಬಲತರ್ಕ

ಕಾಶೀ– ಅಯಂ ಭಾವಃ । ಸತ್ಯಮ್ । ಋಗಾದೀನಾಂ ವಿಷ್ಣುವಾಚಕತ್ವದಶಾಯಾಂ ಪರ-ವಿದ್ಯಾತ್ವಮುಚ್ಯತ ಇತಿ । ಸಾ ಚ ಏತತ್ ಶಾಸ್ತ್ರಜನ್ಯಸನ್ನ್ಯಾಯಜ್ಞಾನಾಧೀನವಿಶೇಷಣಾನ್ಯಾಯೇನ ವಿಶೇಷಣೀಭೂತೈತಚ್ಛಾಸ್ತ್ರಸ್ಯ ಸಿದ್ಧ್ಯತ್ಯೇವ ಇತಿ।





ಬ್ರಹ್ಮಸೂತ್ರಗಳಲ್ಲಿ ಹೇಳಲ್ಪಟ್ಟ ನ್ಯಾಯಾನುಸಂಧಾನದ ಅಧೀನವಾದ ತಾತ್ಪರ್ಯನಿಶ್ಚಯ-ವಿಶಿಷ್ಟವಾದ ಋಗಾದಿವೇದಗಳೇ ಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ಇಂಥ ವಿಶಿಷ್ಟವಾದ ಋಗಾದಿ-ವಿದ್ಯೆಗಳಿಗೆ ಪರವಿದ್ಯಾತ್ವವು ಪ್ರಾಪ್ತವಾದಾಗ ವಿಶೇಷಣಭೂತವಾದ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವು ಸಿದ್ಧವಾಯಿತು. ಇಷ್ಟು ವಿಷಯವನ್ನು 'ಬ್ರಹ್ಮಮೀಮಾಂಸಾಶಾಸ್ತ್ರವ್ಯುತ್ಪಾದಿತನ್ಯಾಯಾನುಪಕೃತಾಃ' ಇತ್ಯಾದಿ ಸುಧಾವಾಕ್ಯದಿಂದ ತಿಳಿಸಿದ್ದಾರೆ.

ಇಲ್ಲಿ ತಿಳಿಯಬೇಕಾದ ಪ್ರಮೇಯದ ಸಾರಾಂಶ ಹೀಗಿದೆ – ಋಗಾದಿವೇದಗಳಿಗೆ ವಿಷ್ಣುವಾಚಕತ್ವ ದಶೆಯಲ್ಲಿ ಪರವಿದ್ಯಾತ್ವವಿದೆ ಎಂಬುದು ಸತ್ಯವಾದ ವಿಚಾರವೇ ಆಗಿದೆ. ಆದರೆ ಆ ದಶೆ ಯಾವಾಗ ಬರುತ್ತದೆಂದರೆ ಈ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಜನ್ಯವಾದ ಸನ್ನ್ಯಾಯಗಳಿಂದ ಉಂಟಾಗುವ ಜ್ಞಾನದ ಅಧೀನವಾದಾಗ ಮಾತ್ರ ವಿಷ್ಣುಪರತ್ವನಿಶ್ಚಯದ ದಶೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಹಿಂದೆ ಹೇಳಿ-ದಂತೆ ಏತಚ್ಛಾಸ್ತ್ರವಿಶಿಷ್ಟವಾದ ವೇದಗಳಿಗೆ ಪರವಿದ್ಯಾತ್ವವನ್ನು ಒಪ್ಪುವುದು ಅತ್ಯಂತ ಆವಶ್ಯಕ. 'ನಾಗೃಹೀತವಿಶೇಷಣಾಬುದ್ಧಿಃ ವಿಶೇಷ್ಯಂ ಉಪಧಾವತಿ' ಎಂಬ ಮೀಮಾಂಸಕರು ಅಂಗೀಕರಿಸಿದ ನ್ಯಾಯ-ದಂತೆ ವಿಶೇಷಣವನ್ನು ವಿಷಯೀಕರಿಸದ ಬುದ್ಧಿಯು ವಿಶೇಷ್ಯವನ್ನು ಉಪಸ್ಥಾಪನೆ ಮಾಡುವುದೇ ಇಲ್ಲ. 'ವಿಶೇಷ್ಯಂ ನಾಭಿಧಾಗಚ್ಛೇತ್ ಕ್ಷೀಣಶಕ್ತಿರ್ವಿಶೇಷಣೇ' ಎಂಬ ನ್ಯಾಯವೂ ಕೂಡ ಇದಕ್ಕೆ ಸಮ್ಮತವಾಗಿದೆ. 'ವಿಶೇಷಣದಲ್ಲೇ ತನ್ನ ಶಕ್ತಿಯನ್ನು ಕಳೆದುಕೊಂಡ ಮೇಲೆ ವಿಶೇಷ್ಯದ ತನಕ ಅನುಧಾವನ ಮಾಡುವುದೇ ಇಲ್ಲ'. ಆದ್ದರಿಂದ ವಿಶೇಷಣಭೂತವಾದ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವು ಸಿದ್ಧವಾಗುತ್ತದೆ.

## ತರ್ಕವು ನಿರ್ದುಷ್ಟವೇ?

ಕಾಶೀ– ನ ಚ ವಾಚ್ಯವಾಚಕಭಾವಸ್ಯ ನಿತ್ಯತ್ವಾತ್ ಕಥಮೇತಚ್ಛಾಸ್ತ್ರವಿಶಿಷ್ಟಸ್ಯೈವ ವಾಚಕತ್ವಂ ಕಥಂ ಚ ನ್ಯಾಯವ್ಯುತ್ಪಾದಕಶಾಸ್ತ್ರಸ್ಯ ವಿಷ್ಣುವಾಚಕತ್ವಮಿತಿ ವಾಚ್ಯಮ್ ।

ಆಕ್ಷೇಪ – ವಾಚ್ಯವಾಚಕಭಾವವು ನಿತ್ಯವಾಗಿದೆ. ಹೀಗಿರುವಾಗ ಈಶಾಸ್ತ್ರದಿಂದ ವಿಶಿಷ್ಟವಾದಾಗ ಮಾತ್ರ ವೇದವು ವಾಚಕವಾಗುತ್ತದೆಂಬುದು ಹೇಗೆ ಸರಿ? ಮತ್ತು ಈ ನ್ಯಾಯವ್ಯುತ್ಪಾದಕವಾದ ಶಾಸ್ತ್ರಕ್ಕೆ ವಿಷ್ಣುವಾಚಕತ್ವವಾದರೂ ಹೇಗೆ ಬರುತ್ತದೆ?

## ಫಲೋಪಧಾನರೂಪವಾದ ವೇದಕ್ಕೆ ಬ್ರಹ್ಮಸೂತ್ರಗಳು ಬೇಕೇ ಬೇಕು?

ಕಾಶೀ– ಯತೋ ನಾತ್ರ ವಾಚಕತ್ವಂ ಪದಶಕ್ತಿರಪಿ ತು 'ಯಯಾ ತದಕ್ಷರಮಧಿಗಮ್ಯತೇ' ಇತಿ





ಶ್ರುತ್ಯನುಸಾರೇಣ ವಿಷ್ಣ್ವಧಿಗತಿಕರಣತ್ವಮೇವ । ತಚ್ಚ ಫಲಾಯೋಗವ್ಯವಚ್ಛಿನ್ನತ್ವರೂಪಮುಕ್ತ-ವಿಶಿಷ್ಟಸ್ಯೈವೇತಿ ನೋಕ್ತದೋಷಃ।

ಸಮಾಧಾನ – ಈ ಎರಡೂ ಪ್ರಶ್ನೆಗಳು ಅಯುಕ್ತ. ಏಕೆಂದರೆ, ಪ್ರಕೃತ ವಾಚಕತ್ವವನ್ನು ಪದಶಕ್ತಿ-ರೂಪವನ್ನಾಗಿ ನಾವಿಲ್ಲಿ ಅಂಗೀಕರಿಸಿಲ್ಲ. ಮತ್ತೇನೆಂದರೆ 'ಯಯಾ ತದಕ್ಷರಮಧಿಗಮ್ಯತೇ' ಎಂಬ ಶ್ರುತಿಗೆ ಅನುಸಾರಿಯಾಗಿ ವಿಷ್ಣ್ವಧಿಕರಣತ್ವವನ್ನೇ ಅಂಗೀಕರಿಸಿದ್ದೇವೆ. ವಿಷ್ಣ್ವಧಿಗತಿಕರಣತ್ವವು ಸ್ವರೂಪೋಪಧಾನ ಮತ್ತು ಫಲೋಪಧಾನ ಎಂಬುದಾಗಿ ಎರಡು ವಿಧವಾಗಿದೆ. ವೇದಗಳಿಗೆ ವಿಷ್ಣ್ವಧಿಗತಿಸಾಧನತ್ವವು ಇದ್ದೇ ಇದೆ. ಈ ಸಾಧನತ್ವವು ಶಕ್ತಿರೂಪದಿಂದ ನಿರಂತರವಾಗಿ ಇದ್ದೇ ಇರುತ್ತದೆ. ಇದಕ್ಕಾಗಿ ಬ್ರಹ್ಮಸೂತ್ರವು ಏನೂ ಮಾಡಬೇಕಾದ ಅವಶ್ಯಕತೆಯೇ ಇರುವುದಿಲ್ಲ. ಈ ಶಕ್ತಿಯು ಫಲೋಪಧಾನರೂಪವಾಗಬೇಕು ಎಂದರೆ ಬ್ರಹ್ಮಸೂತ್ರಗಳು ಬೇಕೇ ಬೇಕು. ಇಲ್ಲಿರುವ ಅಯೋಗವ್ಯವಚ್ಛೇದವು ಫಲಾಯೋಗವ್ಯವ-ಚ್ಛೇದರೂಪವಾಗಿದೆ. ಇದು ಬ್ರಹ್ಮಸೂತ್ರವಿಶಿಷ್ಟವಾದದ್ದಕ್ಕೆ ಪ್ರಾಪ್ತವಾಗುತ್ತದೆ.

ಗಮನಿಸಿ – ಬ್ರಹ್ಮಸೂತ್ರಗಳ ಬೆಂಬಲದಿಂದ ವೇದಗಳು ವಿಷ್ಣುವಾಚಕಗಳಾಗುತ್ತವೆಂಬುದು ಅಭಿಪ್ರಾಯವಲ್ಲ. ವೇದಗಳು ನಿರಂತರವಾಗಿ ವಿಷ್ಣುವಾಚಕಗಳೇ ಆಗಿವೆ. ಇದರಲ್ಲಿ ಸಂಶಯವೇ ಇಲ್ಲ. ಆದರೆ ಅದು ಶಕ್ತಿ-ರೂಪವಾಗಷ್ಟೇ ಇರುತ್ತದಷ್ಟೇ. ಫಲೋಪಧಾನರೂಪವಾಗಬೇಕೆಂದರೆ ಮಾತ್ರ ಬ್ರಹ್ಮಸೂತ್ರಗಳು ಆವಶ್ಯಕ-ಗಳಾಗಿವೆ ಎಂಬ ಕಾಶೀ ಆಚಾರ್ಯರು ಹೇಳಿದ ಈ ಅಂಶವು ಅತ್ಯಪೂರ್ವವಾಗಿದೆ.

## ಮಂತ್ರಜಪಗಳೂ ಕೂಡ ಪರವಿದ್ಯೆ

ಕಾಶೀ– ನ ಚೈವಂ ವಿಷ್ಣುಪರತ್ವೇನ ಅನುಸಂಧೀಯಮಾನಮಂತ್ರಾದೇಃ ಜಪಾದೌ ಪರ-ವಿದ್ಯಾತ್ವಾನುಪಪತ್ತಿಃ। ಅಧಿಗತಿಕರಣತ್ವಾಭಾವಾದಿತಿ ವಾಚ್ಯಮ್। ಕರಣಶಕ್ತಿಮತ್ತ್ವಸ್ಯೈವ ವಿವಕ್ಷಿತ-ತ್ವಾತ್। ತಚ್ಚೋಕ್ತನ್ಯಾಯೇನ ವಿಷ್ಣುಪರತ್ವೇನಾನುಸಂಧೀಯಮಾನತ್ವಾದಿರೂಪಮ್।

ಪ್ರಶ್ನೆ – ವಿಷ್ಣುಪರತ್ವೇನ ಅನುಸಂಧಾನಕ್ಕೆ ವಿಷಯವಾದ ಮಂತ್ರಾದಿಗಳಲ್ಲಿ ಜಪಾದಿಗಳಲ್ಲಿ ಪರವಿದ್ಯಾತ್ವವು ಬಾರದೇ ಇರಬೇಕಾದೀತು? ಏಕೆಂದರೆ ವಿಷ್ಣ್ವಧಿಗತಿಕರಣತ್ವವನ್ನೇ ನೀವು ಪರವಿದ್ಯಾ-ತ್ವವೆಂದು ಹೇಳುತ್ತಿದ್ದೀರಿ. ಈ ಮಂತ್ರಜಪಗಳು ವಿಷ್ಣುವಿನ ಜ್ಞಾನಕ್ಕೆ ಕರಣವಾಗುವುದಿಲ್ಲ.

ಉತ್ತರ – ವಿಷ್ಣ್ವಧಿಗತಿಕರಣಶಕ್ತಿಮತ್ತ್ವವನ್ನೇ ಪರವಿದ್ಯಾತ್ವವೆಂದು ನಾವು ವಿವಕ್ಷಿಸಿದ್ದೇವೆ. ಇದು ಹಿಂದೆ ಹೇಳಿದ ನ್ಯಾಯದಂತೆ ವಿಷ್ಣುಪರತ್ವೇನ ಅನುಸಂಧೀಯಮಾನವಾಗಿರುವ ಜಪ ಮಂತ್ರಾದಿಗಳಲ್ಲೂ





ಕೂಡ ಇರುತ್ತದೆ. ಓಂ ನಮೋ ನಾರಾಯಣಾಯ ಓಂ ಎಂಬುದಾಗಿ ನೂರು ಬಾರಿ ಜಪ ಮಾಡುತ್ತೇವೆ. ಇದು ವಿಷ್ಣುವಿನ ಬಗ್ಗೆ ಹೆಚ್ಚಿನ ಜ್ಞಾನವನ್ನು ಹುಟ್ಟಿಸದೇ ಇರಬಹುದು. ಆದರೆ ಇದು ವಿಷ್ಣುಪರವಾಗಿದೆ ಎಂಬ ಅನುಸಂಧಾನವಿರುವುದರಿಂದ ಅಂಥ ವಿಷ್ಣ್ವಧಿಗತಿಕರಣಶಕ್ತಿಯುಳ್ಳದ್ದಾಗಿದೆ. ಆದ್ದರಿಂದ ದೋಷವಿಲ್ಲ.

## ಋಗಾದಿವೇದಗಳು ವಿವಕ್ಷಾಭೇದದಿಂದ ನಿರಂತರ ಪರವಿದ್ಯೆ ಎಂಬುದರ ಸಮರ್ಥನೆ

ಕಾಶೀ– ನ ಚೈವಮ್ ಋಗಾದೀನಾಂ ಬ್ರಹ್ಮಾದಿಭಿಃ ಸರ್ವದಾ ವಿಷ್ಣುಪರತ್ವೇನ ಅನುಸಂಧೀಯಮಾನತ್ವಾತ್ ಸರ್ವದಾ ಪರವಿದ್ಯಾತ್ವಾಪತ್ತಿರಿತಿ ವಾಚ್ಯಮ್ । ಇಷ್ಟತ್ವಾತ್ । ನ ಚೈವಮ್ ಅಪರವಿದ್ಯಾತ್ವಾನುಪಪತ್ತಿಃ । ಯಾ ವಿದ್ಯಾ ಯದಾ ಯೇನ ವಿಷ್ಣುಪರತ್ವೇನ ಅನುಸಂಧೀಯತೇ ಸಾ ತದಾ ತಂ ಪ್ರತಿ ಪರವಿದ್ಯಾ । ಯಾ ವಿದ್ಯಾ ಯದಾ ಯೇನ ವಿಷ್ಣುಪರತ್ವೇನ ನಾನುಸಂಧೀಯತೇ ಸಾ ತದಾ ತಂ ಪ್ರತಿ ಅಪರವಿದ್ಯಾ ಇತ್ಯಂಗೀಕಾರೇಣ ಬ್ರಹ್ಮಾದೀನ್ ಪ್ರತಿ ಪರವಿದ್ಯಾತ್ವಸ್ಯ ಅನ್ಯಾನ್ ಪ್ರತಿ ಅಪರವಿದ್ಯಾತ್ವಸ್ಯ ಚೋಪಪತ್ತೇಃ । ವಿದ್ಯಾಶಬ್ದೇನಾಪಿ ತತ್ತತ್ಪರತ್ವೇನಾನುಸಂಧೀಯತೇ ಸಾ ತದಾ ತಂ ಪ್ರತಿ ಅಪರವಿದ್ಯೇತ್ಯಂಗೀಕಾರೇಣ ಮಾನತ್ವಮೇವ ವಿವಕ್ಷಿತಮ್ । ನಾತೋ ಜಪಾದೌ ಮಂತ್ರಾದೇಃ ವಿದ್ಯಾತ್ವಾನುಪಪತ್ತಿಃ । ಅನುಸಂಧಾನಂ ಚ ಉಭಯತ್ರ ಯಥಾರ್ಥಂ ಗ್ರಾಹ್ಯಮ್ । ತೇನಾತತ್ಪರೇ ತತ್ಪರತ್ವೇನಾನುಸಂಧೀಯಮಾನೇ ನಾತಿವ್ಯಾಪ್ತಿಃ ।

ಪ್ರಶ್ನೆ – ಋಗಾದಿವೇದಗಳನ್ನು ಬ್ರಹ್ಮಾದಿದೇವತೆಗಳು ನಿರಂತರವಾಗಿ ವಿಷ್ಣುಪರತ್ವೇನ ಅನುಸಂಧಾನ ಮಾಡುತ್ತಲೇ ಇರುತ್ತಾರೆ. ಆಗ ಬ್ರಹ್ಮಾದಿದೇವತೆಗಳ ದೃಷ್ಟಿಯಲ್ಲಿ ವೇದವು ನಿರಂತರವಾಗಿ ಪರವಿದ್ಯೆಯಾಗಲಿ.

ಉತ್ತರ – ನಮಗಿದು ಇಷ್ಟಾಪತ್ತಿಯೇ ಆಗಿದೆ.

ಪ್ರಶ್ನೆ – ಹಾಗಾದರೆ ವೇದವು ಅಪರವಿದ್ಯೆಯೆಂದೇ ಕರೆಸಿಕೊಳ್ಳುವುದಿಲ್ಲ ಎಂದಾಯಿತಲ್ಲವೇ?

ಉತ್ತರ – ವೇದವು ಯಾವಾಗ ಪರವಿದ್ಯೆಯಾಗುತ್ತದೆ ಯಾವಾಗ ಅಪರವಿದ್ಯೆಯಾಗುತ್ತದೆ ಎಂಬುದನ್ನು ಸ್ಪಷ್ಟವಾಗಿ ಹೀಗೆ ತಿಳಿಯಬೇಕು – 'ಯಾ ವಿದ್ಯಾ ಯದಾ ಯೇನ ವಿಷ್ಣುಪರತ್ವೇನ ಅನುಸಂಧೀಯತೇ ಸಾ ತದಾ ತಂ ಪ್ರತಿ ಪರವಿದ್ಯಾ' 'ಯಾವ ವಿದ್ಯೆಯು ಯಾವಾಗ ಯಾವ ವ್ಯಕ್ತಿಯಿಂದ





ವಿಷ್ಣುಪರತ್ವೇನ ಅನುಸಂಧಾನ ಮಾಡಲ್ಪಡುತ್ತದೋ ಆ ವಿದ್ಯೆಯು ಆ ಸಂದರ್ಭದಲ್ಲಿ ಆ ವ್ಯಕ್ತಿಯನ್ನು ಕುರಿತು ಪರವಿದ್ಯೆ ಎಂಬುದಾಗಿ ಕರೆಸಿಕೊಳ್ಳುತ್ತದೆ'

'ಯಾ ವಿದ್ಯಾ ಯದಾ ಯೇನ ವಿಷ್ಣುಪರತ್ವೇನ ನಾನುಸಂಧೀಯತೇ ಸಾ ತದಾ ತಂ ಪ್ರತಿ ಅಪರವಿದ್ಯಾ' 'ಯಾವ ವಿದ್ಯೆಯು ಯಾವಾಗ ಯಾವ ವ್ಯಕ್ತಿಯಿಂದ ವಿಷ್ಣುಪರವೆಂದು ಅನುಸಂಧಾನ ಮಾಡಲ್ಪಡುವುದಿಲ್ಲವೋ ಆ ವಿದ್ಯೆಯು ಆಗ ಆ ವ್ಯಕ್ತಿಯನ್ನು ಕುರಿತು ಅಪರವಿದ್ಯೆ' ಎಂಬುದಾಗಿ ಕರೆಸಿಕೊಳ್ಳುತ್ತದೆ. ಹೀಗೆ ನಾವು ಅಂಗೀಕಾರ ಮಾಡಿರುವುದರಿಂದ ವೇದಗಳು ಬ್ರಹ್ಮಾದಿದೇವತೆಗಳ ವಿಷಯದಲ್ಲಿ ಯಾವಾಗಲೂ ಪರವಿದ್ಯೆಯೇ ಆಗಿರುತ್ತವೆ. ಇತರರ ವಿಷಯದಲ್ಲಿ ಅಪರವಿದ್ಯೆ ಎನಿಸುತ್ತವೆ.

(ವಿದ್ಯಾಶಬ್ದೇನಾಪಿ ಎಂಬ ವಾಕ್ಯವು ಅಪರಿಪೂರ್ಣವಾಗಿ ಕಾಣುತ್ತಿರುವುದರಿಂದ ಅನುವಾದ ಮಾಡಿಲ್ಲ. ಇಲ್ಲಿ ಲಿಪಿಕಾರರ ದೋಷವು ಕಾಣಿಸುತ್ತಿದೆ).

ಹಾಗಾಗಿ ಜಪಾದಿಗಳಲ್ಲಿ ಮತ್ತು ಮಂತ್ರಾದಿಗಳಲ್ಲಿ ವಿದ್ಯಾತ್ವವು ಅನುಪಪನ್ನವಾಗುತ್ತದೆಂಬ ಶಂಕೆಗೂ ಅವಕಾಶವಿಲ್ಲ. ಎರಡೂ ಕಡೆ ಅನುಸಂಧಾನವು ಯಥಾರ್ಥವಾಗಿರಬೇಕೆಂದಷ್ಟೇ ವಿವಕ್ಷಿಸ-ಬೇಕು. ಅಭಿಪ್ರಾಯ ಹೀಗಿದೆ – ಬೌದ್ಧಶಾಸ್ತ್ರವನ್ನು ಯಾರಾದರೂ ವಿಷ್ಣುಪರವಾಗಿ ತಿಳಿದುಕೊಂಡಾಗ ಅವನನ್ನು ಕುರಿತು ಬೌದ್ಧಶಾಸ್ತ್ರವು ಪರವಿದ್ಯೆ ಎನಿಸುವುದಿಲ್ಲ. ಏಕೆಂದರೆ ಆ ಬೌದ್ಧಶಾಸ್ತ್ರವೇ ಅಯಥಾರ್ಥವಾಗಿದೆ.

## ಪುರಾಣಿಕರನ್ನು ಕುರಿತು ವೇದಕ್ಕೆ ಪರವಿದ್ಯಾತ್ವವನ್ನು ಹೇಳಿಲ್ಲ

ಕಾಶೀ– ನ ಚೈವಮಪಿ ವಿಷ್ಣುನಾ ವಿಷ್ಣುಪರತ್ವೇನ ಅನುಸಂಧೀಯಮಾನವೇದಾದೇ-ರ್ವಿಷ್ಣುಂ ಪ್ರತಿ ಪರವಿದ್ಯಾತ್ವಾಪತ್ತಿಃ । ಏವಮ್ ಅನಧಿಕಾರಿಣಾಮಪಿ ವೇದೋ ವಿಷ್ಣುಪರ ಇತ್ಯನುಸಂಧಾನಸಂಭವಾತ್ ತಾನ್ ಪ್ರತಿ ತಸ್ಯ ಪರವಿದ್ಯಾತ್ವಾಪತ್ತಿರಿತಿ ವಾಚ್ಯಮ್ । ಯತಸ್ತತ್ಪರತ್ವಂ ತತ್ಪ್ರತೀತೀಚ್ಛಯಾ ಉಚ್ಚರಿತತ್ವಮ್ । ಪ್ರತೀತಿಶ್ಚ ಸ್ವಕೀಯೋಪಾದೇಯಾ । ವೇದಶ್ಚ ನ ವಿಷ್ಣ್ವಾ-ದೀನಾಮ್ ಅರ್ಥಪ್ರತೀತೀಚ್ಛಯೋಚ್ಚರಿತ ಇತ್ಯದೋಷಃ ।

ಆಕ್ಷೇಪ – ಹೀಗೆ ಪರಿಷ್ಕಾರ ಮಾಡುವುದಾದರೆ ಸಮಸ್ತವೇದಗಳು ತನ್ನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂಬುದಾಗಿ ಮಹಾವಿಷ್ಣುವಿಗೆ ನಿರಂತರ ಅನುಸಂಧಾನವಿದೆ. ಆ ಕಾರಣದಿಂದ ಮಹಾ-ವಿಷ್ಣುವನ್ನು ಕುರಿತು ಕೂಡ ವೇದಗಳು ಪರವಿದ್ಯೆ ಎನಿಸಲಿ?





(2) ಅನಧಿಕಾರಿಯಾದ ಸುರಾಣಕರೇ ಮೊದಲಾದವರು ವೇದವು ವಿಷ್ಣುಪರವಾಗಿದೆ ಎಂಬುದಾಗಿ ಅನುಸಂಧಾನ ಮಾಡುವುದು ಕಂಡಿದೆ. ಇಂಥ ಸುರಾಣಕರನ್ನು ಕುರಿತು ಕೂಡ ವೇದವು ಪರವಿದ್ಯೆಯಾಗಲಿ?

ಆದ್ದರಿಂದ 'ಯಾ ವಿದ್ಯಾ ಯದಾ' ಇತ್ಯಾದಿಯಾದ ನಿಮ್ಮ ಪರಿಷ್ಕಾರವು ಅತಿವ್ಯಾಪ್ತಿ-ದೋಷಗ್ರಸ್ತವಾಗಿದೆಯಲ್ಲವೇ?

ಸಮಾಧಾನ – ತತ್ಪರತ್ವ ಎಂಬ ಶಬ್ದಕ್ಕೆ ತತ್ಪ್ರತೀತೀಚ್ಛಯಾ ಉಚ್ಚರಿತತ್ವಂ ಎಂಬುದಾಗಿ ಪುನಃ ಪರಿಷ್ಕಾರ ಮಾಡುತ್ತೇವೆ. ವೇದವು ವಿಷ್ಣುವಿಗೆ ಯಥಾರ್ಥಜ್ಞಾನ ಬರಲಿ ಎಂಬ ಇಚ್ಛೆಯಿಂದ ವಿಷ್ಣು-ವಿನಿಂದ ಉಚ್ಚರಿತವೇ ಆಗಿಲ್ಲ. ಆದ್ದರಿಂದ ವಿಷ್ಣುವನ್ನು ಕುರಿತು ಪರವಿದ್ಯೆಯಾಗಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಅದರಂತೆ ಸುರಾಣಕರಿಗೆ ಉಪದೇಶ ಮಾಡುವಾಗ ಇವರಿಗೆ ಈ ವೇದದಿಂದ ಯಥಾರ್ಥಜ್ಞಾನ ಬರಲಿ ಎಂಬ ಇಚ್ಛೆಯನ್ನು ಹೊಂದಿರುವುದಿಲ್ಲ. ಆದ್ದರಿಂದ ಸುರಾಣಕರನ್ನು ಕುರಿತು ಕೂಡ ವೇದವು ಪರವಿದ್ಯೆ ಎನಿಸುವುದಿಲ್ಲ.

## ಪರವಿದ್ಯಾತ್ವವಿಷಯದಲ್ಲಿ ಮತ್ತೊಂದು ಪರಿಷ್ಕಾರ

ಕಾಶೀ– 'ನ ಚಾನ್ಯಾರ್ಥಂ ತು ಜೈಮಿನಿಃ ಇತಿ ನ್ಯಾಯೇನ ವಿಷ್ಣುಜ್ಞಾನಾರ್ಥ-ಕರ್ಮಾದಿಪರತ್ವೇನಾನುಸಂಧೀಯಮಾನಕರ್ಮಕಾಂಡಸ್ಯ ಪರವಿದ್ಯಾತ್ವಾತ್ ತದನುಪಪತ್ತಿರಿತಿ ವಾಚ್ಯಮ್ । ಪದಸಮನ್ವಯೇ ಪದಾರ್ಥವಿಧಯೇವ ವಾಕ್ಯಸಮನ್ವಯೇ ವಾಕ್ಯಾರ್ಥವಿಧಯೇವ ಕಾಂಡಸಮನ್ವಯೇಽಪಿ ಕಾಂಡತಾತ್ಪರ್ಯಾರ್ಥವಿಧಯಾ ವಿಷ್ಣುಪ್ರತೀತೀಚ್ಛಯೋಚ್ಚರಿತತ್ವಸ್ಯ ಕರ್ಮ-ಕಾಂಡೇಽಪಿ ಸತ್ತ್ವಾತ್ । ವಿಷ್ಣೋಃ ಶಬ್ದತೋಽಪ್ರತಿಪಾದ್ಯತ್ವೇಽಪಿ ತಾತ್ಪರ್ಯತಃ ಪ್ರತಿಪಾದ್ಯತ್ವಾತ್ ।

ಪ್ರಶ್ನೆ – 'ಅನ್ಯಾರ್ಥಂ ತು ಜೈಮಿನಿಃ ಎಂಬ ಸೂತ್ರದ ನ್ಯಾಯದಂತೆ ಕರ್ಮಕಾಂಡವೆಲ್ಲವೂ ವಿಷ್ಣುಜ್ಞಾನಕ್ಕೋಸ್ಕರ ಹೊರಟಿವೆ ಎಂಬುದಾಗಿ ಅನುಸಂಧಾನವಿದೆ. ಆದ್ದರಿಂದ ನೇರವಾಗಿ ಕರ್ಮ-ಕಾಂಡವು ವಿಷ್ಣುವನ್ನು ಪ್ರತಿಪಾದನೆ ಮಾಡದ ಕಾರಣ ಪರವಿದ್ಯೆ ಆಗದಿರಬೇಕಾದೀತು?

ಉತ್ತರ - ಪದಸಮನ್ವಯವನ್ನು ಪದಾರ್ಥದ ಮೂಲಕ ಮಾಡುವಂತೆ ವಾಕ್ಯಸಮನ್ವಯವನ್ನು ವಾಕ್ಯಾರ್ಥದ ಮೂಲಕ ಸಮನ್ವಯ ಮಾಡುವಂತೆ ಕಾಂಡಸಮನ್ವಯವನ್ನು ಮಾಡುವುದು ಕೂಡ ಕಾಂಡತಾತ್ಪರ್ಯದ ಮೂಲಕವೇ ಆಗಿದೆ. ವಿಷ್ಣುವಿನ ಜ್ಞಾನಬರಲಿ ಎಂಬ ಇಚ್ಛೆಯಿಂದಲೇ ಕರ್ಮ-





ಕಾಂಡವೂ ಉಚ್ಚರಿತವಾಗಿರುವ ಕಾರಣ ಕರ್ಮಕಾಂಡದಲ್ಲೂ ಕೂಡ ತತ್ಪ್ರತೀತೀಚ್ಛಯಾ ಉಚ್ಚರಿತತ್ವ ಎಂಬ ತತ್ಪರತ್ವವು ಪ್ರಾಪ್ತವಾಗುತ್ತದೆ. ವಿಷ್ಣುವು ಕರ್ಮಕಾಂಡದಿಂದ ಶಬ್ದತಃ ಪ್ರತಿಪಾದ್ಯನಾಗದಿರಬಹುದು. ತಾತ್ಪರ್ಯತಃ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಕರ್ಮಕಾಂಡಕ್ಕೆ ಪರವಿದ್ಯಾತ್ವವು ಪ್ರಾಪ್ತವಾಗಲು ಬಾಧಕವಿಲ್ಲ.

## ಕಾಮ್ಯಕರ್ಮಪರವಾದ ವೇದಮಂತ್ರಗಳು ಪರವಿದ್ಯೆಯಲ್ಲ

ಕಾಶೀ– ನ ಚ ಕಾಮ್ಯವಿನಿಯುಕ್ತವಿಷ್ಣುವಿದ್ಯಾಯಾ ಅಪಿ ಪರವಿದ್ಯಾತ್ವಾಪತ್ತಿಃ ಮೋಕ್ಷಾನನುಕೂಲಪದಾರ್ಥತ್ವೇನ ಅನಿಷ್ಯಮಾಣತ್ವಸ್ಯಾಪಿ ವಿದ್ಯಾವಿಶೇಷಣತ್ವಾತ್ । ಯದ್ವಾ। ಯಥಾಶ್ರುತಮೇವ ಅಕ್ಷರಾಧಿಗತಿಕರಣತ್ವಂ ವಿವಕ್ಷಿತಮ್ । ನ ಚೈವಂ ಜಪ್ಯಮಾನಮಂತ್ರಾದೇಃ ಪರವಿದ್ಯಾತ್ವಾನುಪಪತ್ತಿಃ।

'ಮಂತ್ರೋ ಮಂತ್ರಾರ್ಥವಚನಮನ್ಯಸ್ಯ ಸ್ವಾತ್ಮನೋಽಪಿ ವಾ।
ಸರ್ವಕರ್ಮಸು ಕರ್ತವ್ಯೌ ಸರ್ವಕರ್ಮಾತ್ಮಕೌ ಯತಃ'

ಇತ್ಯತ್ರ ಆತ್ಮನಶ್ಚೇತ್ ಮನಸೈವ ಇತಿ ತೈತ್ತಿರೀಯಭಾಷ್ಯೋಕ್ತೇಃ ಮಂತ್ರಾಧೀನಮಂತ್ರಾರ್ಥವಿಷ್ಣುಜ್ಞಾನಸತ್ತ್ವ ಏವ ಮಂತ್ರಸ್ಯ ಪರವಿದ್ಯಾತ್ವೋಪಗಮಾತ್ । ಮಂತ್ರಸ್ಯ ಅನ್ಯಾರ್ಥತ್ವೇಽಪಿ ವಿಷ್ಣುಜ್ಞಾನಾರ್ಥಮಿದಮ್ ಇತ್ಯಾದಿತಾತ್ಪರ್ಯಾರ್ಥಸ್ಮೃತಿಹೇತುತ್ವೇನೈವ ಪರವಿದ್ಯಾತ್ವೋಪಪತ್ತೇಃ।

ಪ್ರಶ್ನೆ – ಕಾಮ್ಯಫಲಕ್ಕೋಸ್ಕರ ಕೆಲವು ವಿಷ್ಣುವಿದ್ಯೆಗಳು ವಿನಿಯುಕ್ತವಾಗಿದೆ. ಅವುಗಳು ಕೂಡ ಪರವಿದ್ಯೆಯೇ ಆಗಲಿ.

ಉತ್ತರ – ಪರವಿದ್ಯೆಯ ಪರಿಷ್ಕಾರದಲ್ಲಿ ಮೋಕ್ಷಾನನುಕೂಲಪದಾರ್ಥತ್ವೇನ ಅನಿಷ್ಯಮಾಣತ್ವವನ್ನು ವಿಶೇಷಣವನ್ನಾಗಿ ನೀಡುತ್ತೇವೆ. ಕಾಮ್ಯವಿದ್ಯೆಗಳು ಮೋಕ್ಷಕ್ಕೆ ಅನನುಕೂಲವಾಗಿರುವುದರಿಂದ ಇಚ್ಛೆಗೆ ವಿಷ್ಣುವನ್ನು ತಿಳಿಯಲು ಇವು ಅನಿಷ್ಟವಾಗಿವೆ. ಆದ್ದರಿಂದ ಕಾಮ್ಯಫಲಕ್ಕೋಸ್ಕರ ವಿನಿಯುಕ್ತವಾದ ಮಂತ್ರಭಾಗಗಳು ಪರವಿದ್ಯೆ ಎಂದು ಕರೆಸಿಕೊಳ್ಳುವುದಿಲ್ಲ.

ಅಥವಾ ಯಥಾಶ್ರುತವಾಗಿಯೇ ಅಕ್ಷರಾಧಿಗತಕರಣತ್ವವನ್ನೇ ಪರವಿದ್ಯೆಯೆಂದು ವಿವಕ್ಷಿಸುತ್ತೇವೆ.





(2) ಅನಧಿಕಾರಿಯಾದ ಸುರಾಣಕರೇ ಮೊದಲಾದವರು ವೇದವು ವಿಷ್ಣುಪರವಾಗಿದೆ ಎಂಬುದಾಗಿ ಅನುಸಂಧಾನ ಮಾಡುವುದು ಕಂಡಿದೆ. ಇಂಥ ಸುರಾಣಕರನ್ನು ಕುರಿತು ಕೂಡ ವೇದವು ಪರವಿದ್ಯೆಯಾಗಲಿ?

ಆದ್ದರಿಂದ 'ಯಾ ವಿದ್ಯಾ ಯದಾ' ಇತ್ಯಾದಿಯಾದ ನಿಮ್ಮ ಪರಿಷ್ಕಾರವು ಅತಿವ್ಯಾಪ್ತಿ-ದೋಷಗ್ರಸ್ತವಾಗಿದೆಯಲ್ಲವೇ?

ಸಮಾಧಾನ – ತತ್ಪರತ್ವ ಎಂಬ ಶಬ್ದಕ್ಕೆ ತತ್ಪ್ರತೀತೀಚ್ಛಯಾ ಉಚ್ಚರಿತತ್ವಂ ಎಂಬುದಾಗಿ ಪುನಃ ಪರಿಷ್ಕಾರ ಮಾಡುತ್ತೇವೆ. ವೇದವು ವಿಷ್ಣುವಿಗೆ ಯಥಾರ್ಥಜ್ಞಾನ ಬರಲಿ ಎಂಬ ಇಚ್ಛೆಯಿಂದ ವಿಷ್ಣು-ವಿನಿಂದ ಉಚ್ಚರಿತವೇ ಆಗಿಲ್ಲ. ಆದ್ದರಿಂದ ವಿಷ್ಣುವನ್ನು ಕುರಿತು ಪರವಿದ್ಯೆಯಾಗಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಅದರಂತೆ ಸುರಾಣಕರಿಗೆ ಉಪದೇಶ ಮಾಡುವಾಗ ಇವರಿಗೆ ಈ ವೇದದಿಂದ ಯಥಾರ್ಥಜ್ಞಾನ ಬರಲಿ ಎಂಬ ಇಚ್ಛೆಯನ್ನು ಹೊಂದಿರುವುದಿಲ್ಲ. ಆದ್ದರಿಂದ ಸುರಾಣಕರನ್ನು ಕುರಿತು ಕೂಡ ವೇದವು ಪರವಿದ್ಯೆ ಎನಿಸುವುದಿಲ್ಲ.

## ಪರವಿದ್ಯಾತ್ವವಿಷಯದಲ್ಲಿ ಮತ್ತೊಂದು ಪರಿಷ್ಕಾರ

ಕಾಶೀ– 'ನ ಚಾನ್ಯಾರ್ಥಂ ತು ಜೈಮಿನಿಃ ಇತಿ ನ್ಯಾಯೇನ ವಿಷ್ಣುಜ್ಞಾನಾರ್ಥ-ಕರ್ಮಾದಿಪರತ್ವೇನಾನುಸಂಧೀಯಮಾನಕರ್ಮಕಾಂಡಸ್ಯ ಪರವಿದ್ಯಾತ್ವಾತ್ ತದನುಪಪತ್ತಿರಿತಿ ವಾಚ್ಯಮ್ । ಪದಸಮನ್ವಯೇ ಪದಾರ್ಥವಿಧಯೇವ ವಾಕ್ಯಸಮನ್ವಯೇ ವಾಕ್ಯಾರ್ಥವಿಧಯೇವ ಕಾಂಡಸಮನ್ವಯೇಽಪಿ ಕಾಂಡತಾತ್ಪರ್ಯಾರ್ಥವಿಧಯಾ ವಿಷ್ಣುಪ್ರತೀತೀಚ್ಛಯೋಚ್ಚರಿತತ್ವಸ್ಯ ಕರ್ಮ-ಕಾಂಡೇಽಪಿ ಸತ್ವಾತ್ । ವಿಷ್ಣೋಃ ಶಬ್ದತೋಽಪ್ರತಿಪಾದ್ಯತ್ವೇಽಪಿ ತಾತ್ಪರ್ಯತಃ ಪ್ರತಿಪಾದ್ಯತ್ವಾತ್ ।

ಪ್ರಶ್ನೆ – 'ಅನ್ಯಾರ್ಥಂ ತು ಜೈಮಿನಿಃ ಎಂಬ ಸೂತ್ರದ ನ್ಯಾಯದಂತೆ ಕರ್ಮಕಾಂಡವೆಲ್ಲವೂ ವಿಷ್ಣುಜ್ಞಾನಕ್ಕೋಸ್ಕರ ಹೊರಟವೆ ಎಂಬುದಾಗಿ ಅನುಸಂಧಾನವಿದೆ. ಆದ್ದರಿಂದ ನೇರವಾಗಿ ಕರ್ಮ-ಕಾಂಡವು ವಿಷ್ಣುವನ್ನು ಪ್ರತಿಪಾದನೆ ಮಾಡದ ಕಾರಣ ಪರವಿದ್ಯೆ ಆಗದಿರಬೇಕಾದೀತು?

ಉತ್ತರ - ಪದಸಮನ್ವಯವನ್ನು ಪದಾರ್ಥದ ಮೂಲಕ ಮಾಡುವಂತೆ ವಾಕ್ಯಸಮನ್ವಯವನ್ನು ವಾಕ್ಯಾರ್ಥದ ಮೂಲಕ ಸಮನ್ವಯ ಮಾಡುವಂತೆ ಕಾಂಡಸಮನ್ವಯವನ್ನು ಮಾಡುವುದು ಕೂಡ ಕಾಂಡತಾತ್ಪರ್ಯದ ಮೂಲಕವೇ ಆಗಿದೆ. ವಿಷ್ಣುವಿನ ಜ್ಞಾನಬರಲಿ ಎಂಬ ಇಚ್ಛೆಯಿಂದಲೇ ಕರ್ಮ-





ಕಾಂಡವೂ ಉಚ್ಚರಿತವಾಗಿರುವ ಕಾರಣ ಕರ್ಮಕಾಂಡದಲ್ಲೂ ಕೂಡ ತತ್ಪ್ರೀತೀಚ್ಛಯಾ ಉಚ್ಚರಿತತ್ವ ಎಂಬ ತತ್ಪರತ್ವವು ಪ್ರಾಪ್ತವಾಗುತ್ತದೆ. ವಿಷ್ಣುವು ಕರ್ಮಕಾಂಡದಿಂದ ಶಬ್ದತಃ ಪ್ರತಿಪಾದ್ಯನಾಗದಿರಬಹುದು. ತಾತ್ಪರ್ಯತಃ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಕರ್ಮಕಾಂಡಕ್ಕೆ ಪರವಿದ್ಯಾತ್ವವು ಪ್ರಾಪ್ತವಾಗಲು ಬಾಧಕವಿಲ್ಲ.

## ಕಾಮ್ಯಕರ್ಮಪರವಾದ ವೇದಮಂತ್ರಗಳು ಪರವಿದ್ಯೆಯಲ್ಲ

ಕಾಶೀ– ನ ಚ ಕಾಮ್ಯವಿನಿಯುಕ್ತವಿಷ್ಣುವಿದ್ಯಾಯಾ ಅಪಿ ಪರವಿದ್ಯಾತ್ವಾಪತ್ತಿಃ ಮೋಕ್ಷಾನನುಕೂಲಪದಾರ್ಥತ್ವೇನ ಅನಿಷ್ಯಮಾಣತ್ವಸ್ಯಾಪಿ ವಿದ್ಯಾವಿಶೇಷಣತ್ವಾತ್ । ಯದ್ವಾ । ಯಥಾಶ್ರುತಮೇವ ಅಕ್ಷರಾಧಿಗತಿಕರಣತ್ವಂ ವಿವಕ್ಷಿತಮ್ । ನ ಚೈವಂ ಜಪ್ಯಮಾನಮಂತ್ರಾದೇಃ ಪರವಿದ್ಯಾತ್ವಾನುಪಪತ್ತಿಃ ।

'ಮಂತ್ರೋ ಮಂತ್ರಾರ್ಥವಚನಮನ್ಯಸ್ಯ ಸ್ವಾತ್ಮನೋಽಪಿ ವಾ ।
ಸರ್ವಕರ್ಮಸು ಕರ್ತವ್ಯೌ ಸರ್ವಕರ್ಮಾತ್ಮಕೌ ಯತಃ'

ಇತ್ಯತ್ರ ಆತ್ಮನಶ್ಚೇತ್ ಮನಸೈವ ಇತಿ ತೈತ್ತಿರೀಯಭಾಷ್ಯೋಕ್ತೇಃ ಮಂತ್ರಾಧೀನಮಂತ್ರಾರ್ಥವಿಷ್ಣುಜ್ಞಾನಸತ್ತ್ವ ಏವ ಮಂತ್ರಸ್ಯ ಪರವಿದ್ಯಾತ್ವೋಪಗಮಾತ್ । ಮಂತ್ರಸ್ಯ ಅನ್ಯಾರ್ಥತ್ವೇಽಪಿ ವಿಷ್ಣುಜ್ಞಾನಾರ್ಥಮಿದಮ್ ಇತ್ಯಾದಿತಾತ್ಪರ್ಯಾರ್ಥಸ್ಮೃತಿಹೇತುತ್ವೇನೈವ ಪರವಿದ್ಯಾತ್ವೋಪಪತ್ತೇಃ ।

ಪ್ರಶ್ನೆ – ಕಾಮ್ಯಫಲಕ್ಕೋಸ್ಕರ ಕೆಲವು ವಿಷ್ಣುವಿದ್ಯೆಗಳು ವಿನಿಯುಕ್ತವಾಗಿದೆ. ಅವುಗಳು ಕೂಡ ಪರವಿದ್ಯೆಯೇ ಆಗಲಿ.

ಉತ್ತರ – ಪರವಿದ್ಯೆಯ ಪರಿಷ್ಕಾರದಲ್ಲಿ ಮೋಕ್ಷಾನನುಕೂಲಪದಾರ್ಥತ್ವೇನ ಅನಿಷ್ಯಮಾಣತ್ವವನ್ನು ವಿಶೇಷಣವನ್ನಾಗಿ ನೀಡುತ್ತೇವೆ. ಕಾಮ್ಯವಿದ್ಯೆಗಳು ಮೋಕ್ಷಕ್ಕೆ ಅನನುಕೂಲವಾಗಿರುವುದರಿಂದ ಇಚ್ಛೆಗೆ ವಿಷ್ಣುವನ್ನು ತಿಳಿಯಲು ಇವು ಅನಿಷ್ಟವಾಗಿವೆ. ಆದ್ದರಿಂದ ಕಾಮ್ಯಫಲಕ್ಕೋಸ್ಕರ ವಿನಿಯುಕ್ತವಾದ ಮಂತ್ರಭಾಗಗಳು ಪರವಿದ್ಯೆ ಎಂದು ಕರೆಸಿಕೊಳ್ಳುವುದಿಲ್ಲ.

ಅಥವಾ ಯಥಾಶ್ರುತವಾಗಿಯೇ ಅಕ್ಷರಾಧಿಗತಕರಣತ್ವವನ್ನೇ ಪರವಿದ್ಯೆಯೆಂದು ವಿವಕ್ಷಿಸುತ್ತೇವೆ.





ಪ್ರಶ್ನೆ – ಹಾಗಾದರೆ ಜಪಮಾಡುವ ಮಂತ್ರದಲ್ಲೂ ಪರವಿದ್ಯಾತ್ವವು ಬಾರದೇ ಇರಬೇಕಾದೀತು? ಏಕೆಂದರೆ ಆ ಮಂತ್ರಜಪಗಳು ಯಥಾಶ್ರುತವಾಗಿ ಅಕ್ಷರಾಧಿಗತಿಕರಣ ಆಗಿರುವುದಿಲ್ಲ?

ಉತ್ತರ – ಇದು ತಪ್ಪು.

'ಮಂತ್ರೋ ಮಂತ್ರಾರ್ಥವಚನಮನ್ಯಸ್ಯ ಸ್ವಾತ್ಮನೋಽಪಿ ವಾ ।
ಸರ್ವಕರ್ಮಸು ಕರ್ತವ್ಯೌ ಸರ್ವಕರ್ಮಾತ್ಮಕೌ ಯತಃ ॥'

'ಮತ್ತೊಬ್ಬರ ಪ್ರಯೋಜನಕ್ಕೋಸ್ಕರ ಅಥವಾ ತನ್ನ ಪ್ರಯೋಜನಕ್ಕೋಸ್ಕರ ಯಾವ ಮಂತ್ರವನ್ನು ಉಚ್ಚರಿಸುತ್ತಾನೋ ಅವನು ಅರ್ಥಜ್ಞಾನಪುರಃಸರವಾಗಿಯೇ ಆ ಮಂತ್ರವನ್ನು ಉಚ್ಚಾರಣೆ ಮಾಡಬೇಕು. ಎಲ್ಲಾ ಕರ್ಮಗಳಲ್ಲೂ ಕೂಡ ಹೀಗೆಯೇ'

ಎಂಬ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ 'ಆತ್ಮನಶ್ಚೇತ್ ಮನಸ್ಯೆವ' ಎಂಬ ತೈತ್ತಿರೀಯಭಾಷ್ಯದಲ್ಲಿ ಮಂತ್ರಾಧೀನವಾದ ಮಂತ್ರಾರ್ಥನಾದ ವಿಷ್ಣುಜ್ಞಾನ ಇದ್ದರೆ ಮಾತ್ರ ಮಂತ್ರವು ಪರವಿದ್ಯೆಯಾಗುತ್ತದೆಂದು ಸಮರ್ಥಿಸಿದ್ದಾರೆ. ಒಂದು ವೇಳೆ ಮಂತ್ರವು ವಿಷ್ಣುಪರವಾಗದೇ ರುದ್ರಾದಿ ಪರವಾಗಿದ್ದಾಗ ಇದು ವಿಷ್ಣುಜ್ಞಾನಕ್ಕೋಸ್ಕರ ಎಂಬ ತಾತ್ಪರ್ಯವನ್ನು ಹೊಂದಿರಬೇಕು. ಆಗಲೂ ಕೂಡ ವಿಷ್ಣುಜ್ಞಾನಕ್ಕೋಸ್ಕರವೆಂಬ ತಾತ್ಪರ್ಯಾರ್ಥದ ಸ್ಮೃತಿಹೇತುತ್ವೇನ ರುದ್ರಾದಿ ಪರವಾದ ಮಂತ್ರಗಳು ಪರವಿದ್ಯೆಯೆಂದು ಕರೆಸಿಕೊಳ್ಳುತ್ತವೆ.

## ಬ್ರಹ್ಮಮೀಮಾಂಸಾಶಾಸ್ತ್ರ ನ್ಯಾಯದ ಅನುಸಂಧಾನ ಇಲ್ಲದೇ ಇದ್ದಾಗ?

ಕಾಶೀ– ತತ್ಕಾಮಾ ಇತ್ಯಾಥರ್ವಣಭಾಷ್ಯಸ್ಯಾಪಿ ವಿಷ್ಣುಪ್ರೀತಿತಜ್ಞಾನಕಾಮಾಃ ತದರ್ಥತ್ವೇನ ಮಂತ್ರಾರ್ಥಸ್ಮೃತಿಮಂತ ಇತ್ಯೇವಾರ್ಥಃ । ನ ಚೈವಮಪಿ ಮೀಮಾಂಸಾಧಿಗತವೇದಾರ್ಥಸ್ಯ ಪುಂಸಃ ಕಾಲಾಂತರೇ ವಿನಾಽಪಿ ಮೀಮಾಂಸಾಂ ವೇದಜ್ಞಾನಾರ್ಥಸ್ಮೃತಿಸಂಭವೇನ ಶಾಸ್ತ್ರಸ್ಯ ತದಹೇತುತಯಾ ಪರವಿದ್ಯಾತ್ವಾನುಪಪತ್ತಿರಿತಿ ವಾಚ್ಯಮ್ । ತಥಾಽಪಿ ತತ್ಪ್ರಯೋಜಕತ್ವಮಾತ್ರೇಣ ಪರವಿದ್ಯಾತ್ವಸ್ಯ ಉಪಪಾದಯಿಷ್ಯಮಾಣತ್ವಾತ್ ಇತಿ ದಿಕ್ ।

'ತತ್ಕಾಮಾಃ' ಎಂಬ ಆಥರ್ವಣಭಾಷ್ಯಕ್ಕೂ ಕೂಡ ವಿಷ್ಣುಪ್ರೀತಿ ಹಾಗೂ ವಿಷ್ಣುವಿನ ಜ್ಞಾನವನ್ನು ಅಪೇಕ್ಷಿಸುವವನಿಗೆ ಎಂಬರ್ಥವನ್ನು ವಿವಕ್ಷಿಸಬೇಕು. ಆದ್ದರಿಂದ ಮಂತ್ರಾರ್ಥದ ಸ್ಮರಣೆಯುಳ್ಳವನ ವಿಷಯದಲ್ಲಿ ಮಾತ್ರ ಆಯಾ ವೇದಗಳು ಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ.

ಪ್ರಶ್ನೆ – ಯಾವ ವ್ಯಕ್ತಿಯು ಬ್ರಹ್ಮಮೀಮಾಂಸಾಶಾಸ್ತ್ರಗಳಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಸಮಸ್ತವೇದಾರ್ಥಗಳನ್ನು ತಿಳಿದಿರುವನೋ ಅಂಥ ಪುರುಷನಿಗೆ ಕಾಲಾಂತರದಲ್ಲಿ ಬ್ರಹ್ಮಮೀಮಾಂಸಾ-ಶಾಸ್ತ್ರದ ನ್ಯಾಯಾನುಸಂಧಾನ ಇಲ್ಲದೇ ಇದ್ದರೂ ಕೂಡ ವೇದಾರ್ಥಗಳ ಸ್ಮೃತಿಯು ಪ್ರಾಪ್ತವಾಗುತ್ತದೆ. ಆಗ ಬ್ರಹ್ಮಮೀಮಾಂಸಾಶಾಸ್ತ್ರವು ಅಂಥ ವೇದಾರ್ಥಕ್ಕೆ ಕಾರಣವಾಗಿರುವುದಿಲ್ಲ. ಆದ್ದರಿಂದ ಬ್ರಹ್ಮ-ಮೀಮಾಂಸಾಶಾಸ್ತ್ರವನ್ನು ಪರವಿದ್ಯೆಯೆಂದು ಹೇಗೆ ಹೇಳುತ್ತೀರಿ?

ಉತ್ತರ – ತತ್ಪ್ರಯೋಜಕತ್ವಮಾತ್ರದಿಂದ ಪರವಿದ್ಯಾತ್ವವನ್ನು ಮುಂದೆ ಉಪಪಾದನೆ ಮಾಡುತ್ತೇವೆ. ಬ್ರಹ್ಮಮೀಮಾಂಸಾಶಾಸ್ತ್ರವು ಕಾಲಾಂತರದಲ್ಲಿ ವಿಷ್ಣುಸರ್ವೋತ್ತಮತ್ವಜ್ಞಾನದ ದಾರ್ಢ್ಯಕ್ಕೆ ಪ್ರಯೋಜನವಾಗಿದೆ. ಆದ್ದರಿಂದ ಯದಾ ಕದಾಚಿತ್ ಬ್ರಹ್ಮಮೀಮಾಂಸಾಶಾಸ್ತ್ರವು ವೇದಾರ್ಥದ ನಿರ್ಣಯಕ್ಕೆ ಆವಶ್ಯಕವಾಗಿಯೇ ಇರುತ್ತದೆ. ಆದ್ದರಿಂದ ಪರವಿದ್ಯೆಯಂದು ಕರೆಸಿಕೊಳ್ಳುತ್ತದೆ.

## ಸುಧಾಪರಿಮಳಸಾರ

ಋಗಾದಿವೇದಗಳು ವಿಷ್ಣುವಾಚಕಗಳಾಗದೇ ಇರುವಾಗ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ಅದೇ ಋಗಾದಿವೇದಗಳು ವಿಷ್ಣುವಾಚಕಗಳಾದಾಗ ಪರವಿದ್ಯೆ ಎನಿಸುತ್ತವೆ. ಹೀಗೆ ಸಾಕ್ಷಾತ್ ಭಗವತ್ಪಾದರೇ ಆಥರ್ವಣೋಪನಿಷದ್ಭಾಷ್ಯದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಬ್ರಹ್ಮಮೀಮಾಂಸಾಶಾಸ್ತ್ರಗಳಲ್ಲಿ ಹೇಳಿದ ನ್ಯಾಯಗಳ ಬೆಂಬಲ ಪಡೆದಾಗ ಮಾತ್ರ ವೇದಗಳು ವಿಷ್ಣುವಾಚಕಗಳಾಗಿ ಪರವಿದ್ಯೆ ಎನಿಸುತ್ತವೆ. ನ್ಯಾಯಗಳ ಸಹಕಾರವನ್ನು ಪಡೆಯದೇ ಇದ್ದಾಗ ಅದೇ ವೇದಗಳು ಅಪರವಿದ್ಯೆ ಎನಿಸುತ್ತವೆ. ಹಾಗಾಗಿ ಬ್ರಹ್ಮಸೂತ್ರದ ಬೆಂಬಲವಿಲ್ಲದ ವೇದಾದಿ-ಗಳನ್ನು ಅಪರವಿದ್ಯೆ ಎಂದು ಹೇಳಿದ್ದರಿಂದ ಬ್ರಹ್ಮಸೂತ್ರಗಳೇ ಮುಖ್ಯ ಎಂದು ಹೇಳಿ-ದಂತಾಯಿತು. ಉಪಕಾರಕಪ್ರಾಧಾನ್ಯವಿವಕ್ಷೆಯಿಂದ ಬ್ರಹ್ಮಸೂತ್ರಗಳನ್ನು ಪರವಿದ್ಯೆ ಎಂದು ಕರೆಯಲಾಗಿದೆ. ಹಾಗಾದರೆ ಕೇವಲ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವ ಬರುವುದಿಲ್ಲವೇ ಎಂದರೆ ಇತಿಕರ್ತವ್ಯತಾರೂಪವಾಗಿದ್ದಾಗ ಮಾತ್ರ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವನ್ನು ತಿಳಿಯಬೇಕು. ಪ್ರತ್ಯೇಕವಾದ ಪರವಿದ್ಯಾತ್ವವು ಬ್ರಹ್ಮಸೂತ್ರಗಳಿಗೆ ಇರುವುದಿಲ್ಲ.

ಇಲ್ಲಿಗೆ ಅನುವ್ಯಾಖ್ಯಾನದಲ್ಲಿ ಮೂರನೆಯ ಪದ್ಯದ ವ್ಯಾಖ್ಯಾನವು ಮುಗಿಯಿತು

ಶ್ರೀಕೃಷ್ಣಾರ್ಪಣಮಸ್ತು

- - - - - -





ಶರ್ವಾದಿಸರ್ವಗೀರ್ವಾಣನಿರ್ವಾಣಗತಿಹೇತವಃ ।
ಪೂರ್ಣಪ್ರಜ್ಞಪದಾಂಭೋಜಪಾಂಸವಃ ಪಾಂತು ನಃ ಸದಾ ॥
ಶ್ರೀಮಧ್ವೇಶಾರ್ಪಣಮಸ್ತು



ಪರಿಶಿಷ್ಟ

ದೊಡ್ಡಬಳ್ಳಾಪುರ ವಾಸುದೇವಾಚಾರ್ಯರು ರಚಿಸಿರುವ

# ''ವಿದ್ಯಾವಿನಿರ್ಣಯಃ''

ಗ್ರಂಥದ ಆಮೂಲಾಗ್ರ ಕನ್ನಡಾನುವಾದ





# ವಿಜ್ಞಾಪನೆ

ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ ॥

ವಿದ್ಯಾವಿವೇಚನ ಎಂಬ ಗ್ರಂಥವನ್ನು ಗತವರ್ಷ ನಾವು ಪ್ರಕಟಿಸಿರುವುದು ಸರಿಯಷ್ಟೇ. ಕೊಯ-ಮತ್ತೂರಿನಲ್ಲಿ ಚಾರ್ಟರ್ಡ್ ಅಕೌಂಟೆಂಡ್ ಡಿ.ವಿ. ಸುಬ್ಬಾಚಾರ್ಯರು ಅದನ್ನು ಖಂಡಿಸಿ, 'ಬ್ರಹ್ಮ-ಮೀಮಾಂಸಾಶಾಸ್ತ್ರಮಹಿಮಾ ಮತ್ತು ವಿದ್ಯಾವಿವೇಚನವಿಚಾರ', ಎಂಬ ಗ್ರಂಥವನ್ನು ಪ್ರಕಟಿಸಿ ಅದನ್ನು ನನಗೆ ಕಳುಹಿಸಿದ್ದಾರೆ. ಅದನ್ನು ಸಂತೋಷದಿಂದ ನೋಡಿದೆನು. ಅದರ ಪೀಠಿಕೆಯಲ್ಲಿ... "But no agreement was reached" ಪರಂತು 'ನಾಸ್ಮಾಕಂ ತಾದೃಶೇ ನಿಪುಣತರಮುಪಪಾದನಂ ಮನೋಗತಂ'' ಎಂಬುದನ್ನು ನೋಡಿ ವಿಸ್ಮಯವಾಯಿತು. ಶ್ರೀಪಾಳಗಾರು ಆರ್ಯ ಅಕ್ಷೋಭ್ಯತೀರ್ಥ ಸಂಸ್ಥಾನಾಧೀಶ್ವರರು ಕೊಯ-ಮತ್ತೂರಿನಲ್ಲಿ ಸಭೆ ಮಾಡಿದಾಗ ಸುಬ್ಬಾಚಾರ್ಯರು ಪರವಿದ್ಯಾವಿಷಯವನ್ನು ವಿಚಾರ ಮಾಡತೊಡಗಿದರು. ಅಲ್ಲಿ ಎರಡಾವರ್ತಿ ಶ್ರೀಗಳವರು ಸಭೆಯನ್ನು ನಡೆಯಿಸಿದರು. ಮೊದಲನೆಯ ಸಭೆಯಲ್ಲಿ ಶ್ರೀಗಳವರು, ಪಂಡಿತರು, ಸಭ್ಯಮಹಾಶಯರು, ಸುಬ್ಬಾಚಾರ್ಯರ ಗುರುಗಳಾದ ಶ್ರೀವಾದಿರಾಜಾಚಾರ್ಯರು, ಇವರುಗಳ ಸಮಕ್ಷದಲ್ಲಿ ಬಹು ಹೊತ್ತು ವಿಚಾರ ನಡೆದು ನ್ಯಾಯಸುಧೆಯ ಪರವಿದ್ಯಾನಿರೂಪಣಭಾಗವನ್ನು ಕೂಲಂಕಷವಾಗಿ ಪರಿಶೀಲಿಸಿ ವೇದವೇ ಮುಖ್ಯಪರವಿದ್ಯೆಯು ಅದರ ನಿಜಾರ್ಥವನ್ನು ತಿಳಿಯಲು ಸಹಕಾರಿಯಾಗಿರುವ ಬ್ರಹ್ಮಸೂತ್ರವು ಗೌಣವಾಗಿ ಪರವಿದ್ಯೆಯೆಂದು ವ್ಯವಹರಿಸಲ್ಪಟ್ಟಿದೆ ಎಂದು ನಿರೂಪಿಸಿದೆನು. ನೆರೆದ ಸಭೆಯಲ್ಲಿಯೇ ಸುಬ್ಬಾಚಾರ್ಯರು ಒಪ್ಪಿಕೊಂಡರು. ಎರಡನೆಯ ಸಭೆಯ ಹೊತ್ತಿಗೆ ಅವರು ಕೆಲವು ಶ್ಲೋಕಗಳನ್ನು ಮುದ್ರಿಸಿ ಸುಮಾರು ೧೦-೧೨ ಪುಟಗಳಷ್ಟು ಕೆಲವು ವಿಷಯಗಳನ್ನು ಬರೆದು ಮುಂದಿರಿಸಿ, ಬ್ರಹ್ಮಸೂತ್ರವೇ ಮುಖ್ಯಪರವಿದ್ಯೆ, ವೇದಾದಿ ಸಕಲ ಶಾಸ್ತ್ರಗಳಿಗಿಂತಲೂ ಉತ್ತಮ, ವೇದವು ಅದಕ್ಕಿಂತಲೂ ನ್ಯೂನವಾದುದೆಂದು, ವಾಕ್ಯಾರ್ಥಚಂದ್ರಿಕಾದಿಗಳಲ್ಲಿ ಕೆಲವು ವಾಕ್ಯಗಳು ತಮ್ಮ ವಾದಕ್ಕೆ ಸಾಧಕವೆಂತಲೂ ಹೇಳಿದರು. ಅಲ್ಲಿ ನೆರೆದಿದ್ದ ಪಂಡಿತರ ಮತ್ತು ಸಭ್ಯರ ಎದುರಿನಲ್ಲಿಯೇ ಅವರು ಉದಾಹರಿಸಿದ ವಾಕ್ಯಗಳಿಗೆ ಸರಿಯಾದ ಅರ್ಥವನ್ನು ವಿವರಿಸಿ ಎಲ್ಲವೂ ವೇದವು ಮುಖ್ಯ ಪರವಿದ್ಯೆ ; ಸರ್ವೋತ್ತಮಶಾಸ್ತ್ರವು ಎಂಬುದಕ್ಕೆ ಸಾಧಕವೆಂದು ನಾನು ನಿರೂಪಿಸಿದೆನು. ಅದನ್ನೇ ಸಂಗ್ರಹಿಸಿ 'ವಿದ್ಯಾವಿನಿರ್ಣಯ' ಎಂಬ ಗ್ರಂಥವನ್ನು ರಚಿಸಿರುವೆನು.





ಬ್ರಹ್ಮಸೂತ್ರವೇ ಆಥರ್ವಣೋಕ್ತ ಮುಖ್ಯಪರವಿದ್ಯೆಯು, ಅದೇ ಸರ್ವೋತ್ತಮ ಶಾಸ್ತ್ರವು ಎರಡನೆಯದು ಮಹಾಭಾರತವು. ಇವರೆಡಕ್ಕಿಂತಲೂ ವೇದವು ನ್ಯೂನವಾದುದು. ಅದು ಅಪರವಿದ್ಯೇ ಎಂಬುದೇ ಸುಬ್ಬಾಚಾರ್ಯರ ವಾದವು. ಅದಕ್ಕೆ ಅನುವ್ಯಾಖ್ಯಾನ ಸುಧಾ, ವಾಕ್ಯಾರ್ಥಚಂದ್ರಿಕಾ, ಗುರ್ವರ್ಥದೀಪಿಕಾ, ಛಾಂದೋಗ್ಯಭಾಷ್ಯ , ವೇದೇಶೀಯ ಟಿಪ್ಪಣಿ, ಗೀತಾಭಾಷ್ಯ , ಇವುಗಳಲ್ಲಿನ ಕೆಲವು ವಾಕ್ಯಗಳನ್ನು ಸಾಧಕವೆಂದು ಉದಾಹರಿಸಿರುವರು. ಈ ವಾಕ್ಯಗಳಿಗೆಲ್ಲಾ ಶಾಸ್ತ್ರಮರ್ಯಾದೆಯಿಂದ ಅರ್ಥವನ್ನು ಪರಿಶೀಲಿಸಿದರೆ ಒಂದು ವಾಕ್ಯವೂ ಸಹ ಅವರ ಪಕ್ಷಕ್ಕೇ ಸಾಧಕವಾಗುವುದಿಲ್ಲ. ಬಾಧಕವೇ ಆಗುತ್ತದೆಂಬುದನ್ನು ಈ ಗ್ರಂಥದಲ್ಲಿ ಸಾಧಕಬಾಧಕ ವಿಮರ್ಶೆಯಿಂದ ಸಪ್ರಮಾಣವಾಗಿ ನಿರ್ಣಯಿಸಲಾಗಿದೆ. ಪುನರುಕ್ತಿಯಾಗಬಾರದೆಂದು ಇಲ್ಲಿಯೂ ವಿವರಿಸುವುದಿಲ್ಲ.

ಅಪೌರುಷೇಯ ವೇದವೇ ಸರ್ವೋತ್ತಮ ಶಾಸ್ತ್ರ, ಮತ್ತು ಆಥರ್ವಣೋಕ್ತಮುಖ್ಯ ಪರವಿದ್ಯೆಯು, ಪೌರುಷೇಯ ಶಾಸ್ತ್ರವು ೧) ನಿರ್ಣಾಯಕ, ೨) ನಿರ್ಣೇಯ ಎಂಬುದಾಗಿ ಎರಡುವಿಧ. ನಿರ್ಣಾಯಕಶಾಸ್ತ್ರಗಳಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರವು ಉತ್ತಮ. ನಿರ್ಣೇಯಗಳಲ್ಲಿ ಭಾರತವು ಉತ್ತಮವೆಂಬುದೇ ಶ್ರೀಮದಾಚಾರ್ಯರ ಸಿದ್ಧಾಂತತತ್ತ್ವ. ಅದನ್ನೇ ಮೂಲ, ಟೀಕಾ, ಟಿಪ್ಪಣ್ಯಾದಿ ೪೦ ಗ್ರಂಥಗಳಿಂದ ವಿಚಾರಪೂರ್ವಕವಾಗಿ ಈ ಗ್ರಂಥದಲ್ಲಿ ಸಿದ್ಧಪಡಿಸಲಾಗಿದೆ. ಆ ಗ್ರಂಥಗಳ ಹೆಸರನ್ನು ಮುಂದೆ ಕೊಟ್ಟಿದೆ.

ಅವರೇ ಉದಾಹರಿಸಿರುವ ಅನುವ್ಯಾಖ್ಯಾನಾದಿಗಳಲ್ಲಿ ಪೌರುಷೇಯವಾದ ಬ್ರಹ್ಮಸೂತ್ರಮಹಾಭಾರತ-ಗಳು ವೇದಸಂವಾದಿಯಾಗಿರುವುದರಿಂದ ಪ್ರಮಾಣವೆನಿಸುವುದೆಂದು ಹೇಳಿದೆ ಎಂದರೆ ಪೌರುಷೇಯ ಗ್ರಂಥವು ವೇದಸಂವಾದಿಯಾದರೆ ಪ್ರಮಾಣವು ವೇದವಿರುದ್ಧವಾದುದು ಅಪ್ರಮಾಣ ಎಂದು ತಾತ್ಪರ್ಯ. ಹೀಗೆ ಯಾವುದರ ವಿರೋಧದಿಂದ ಪೌರುಷೇಯವು ಪ್ರಮಾಣವಾಗಿರಲಾರದೋ, ಯಾವುದರ ಸಂವಾದದಿಂದ ಪ್ರಮಾಣವಾಗುವುದೋ ಅಂತಹ ವೇದವು ಪೌರುಷೇಯಗ್ರಂಥಕ್ಕಿಂತಲೂ ನ್ಯೂನವೆನ್ನಬಹುದೇ ? ವೇದ-ಸಂವಾದದಿಂದ ಪೌರುಷೇಯಪ್ರಾಮಾಣ್ಯವನ್ನು ಸಮರ್ಥಿಸುವ ಅನುವ್ಯಾಖ್ಯಾನಾದಿಗಳಿಗೆ ವೇದವು ಅಪರವಿದ್ಯೇ , ಹಾಗೂ ಪೌರುಷೇಯಕ್ಕಿಂತ ನ್ಯೂನ ಎಂದು ತಾತ್ಪರ್ಯವು ಸರ್ವಥಾ ಸಂಭವಿಸುವುದಿಲ್ಲ.

ಸಿದ್ಧಾಂತಕಾರರು ಪ್ರಮಾಣ ಮತ್ತು ಅದರ ದರ್ಜೆಯನ್ನು ಮೊದಲು ನಿರ್ಣಯಿಸಿ ಸಿದ್ಧವಾದ ಉತ್ತಮ ಪ್ರಮಾಣದ ಆಧಾರದ ಮೇಲೆ ಸಿದ್ಧಾಂತವನ್ನು ಸ್ಥಾಪಿಸುವುದೇ ಸಂಪ್ರದಾಯ. ಪ್ರತಿಲೇಖಕರು ಹೇಳುವಂತೆ . ಬ್ರಹ್ಮಸೂತ್ರಾದಿಪೌರುಷೇಯಗ್ರಂಥಗಳೇ ಸರ್ವೋತ್ತಮ ಪ್ರಮಾಣವೆಂಬುದು ಹೇಳಿದಂತಾಗಿ ಅವಹೇಳನಕ್ಕೆ ಗುರಿಯಾಗುವುದು. ವೇದದ ಸಕಲ ಭಾಗವನ್ನು ಪರಮಪ್ರಮಾಣವೆಂದು ಘೋಷಿಸಿ ಅದರ ಆಧಾರದಿಂದ ಪರಮ ವೈದಿಕಸಿದ್ಧಾಂತಸ್ಥಾಪಕರಾದ ಶ್ರೀಮದಾಚಾರ್ಯರನ್ನು ಅವೈದಿಕಸಿದ್ಧಾಂತಕರ್ತರೆನ್ನುವುದರಿಂದ ಶ್ರೀಮದಾಚಾರ್ಯರಿಗೆ ದ್ರೋಹವೆಸಗಿದಂತೆಯೇ ಸರಿ.





ಆಥರ್ವಣೋಪನಿಷಪತ್ತಿನ "ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ" ಎಂಬ ವಾಕ್ಯೋಕ್ತ ವಿದ್ಯಾದ್ವಯ ಯಾವುದೆಂಬುದೇ ಈಗ ವಿಚಾರ್ಯವು. ಅಲ್ಲಿ ಪರವಿದ್ಯೆಯನ್ನು ಹೆಸರೆತ್ತಿ ಹೇಳದೆ ಅದರ ಲಕ್ಷಣವನ್ನು ಹೇಳಿ ಸಮನ್ವಯಪೂರ್ವಕವಾಗಿ ಕರ್ಮಬ್ರಹ್ಮ ವಿಷಯಕವಾದ ಮಂತ್ರಗಳೇ ಪರವಿದ್ಯೆಂದು ನಿರೂಪಿಸಿದೆ.

"ಆಥರ್ವಣಾನೇವ ಮಂತ್ರಾನ್ ಪರವಿದ್ಯಾತ್ವೇನಾಹ" ಎಂಬ ಅದರ ಭಾಷ್ಯವು ಟೀಕಾಟಿಪ್ಪಣಿಗಳೂ ಹಾಗೆಯೇ ನಿರೂಪಿಸಿವೆ.

'ಯಯಾ ತದಕ್ಷರಮಧಿಗಮ್ಯತೇ' ಎಂಬುದೇ ಲಕ್ಷಣೋಕ್ತಿಯು. ಅಕ್ಷರನಾಮಕವಿಷ್ಣುವನ್ನು ಬೋಧಿಸುವುದೇ ಪರವಿದ್ಯೆ ಎಂದು ಅದರ ಅರ್ಥ. ಅದರಿಂದ ವಿಷ್ಣುಬೋಧಕವನ್ನು ಪರವಿದ್ಯಾಲಕ್ಷಣವೆಂದು ಹೇಳಿದೆ.

ಈ ಲಕ್ಷಣವು ವೇದ ಹಾಗೂ ಬ್ರಹ್ಮಸೂತ್ರಗಳಲ್ಲಿ ಯಾವುದಕ್ಕೆ ಸಲ್ಲುತ್ತದೆ ? ಎಂಬುದನ್ನು ವಿಚಾರಿಸೋಣ:- "ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ, ಪುನಸ್ತಸ್ಯಾರ್ಥವಿತ್ತಯೇ ಚಕಾರ ಬ್ರಹ್ಮಸೂತ್ರಾಣಿ" ಎಂಬ ಸೂತ್ರಭಾಷ್ಯೋಕ್ತಿಯಂತೆ ವೇದಾರ್ಥವನ್ನು ನಿರ್ಣಯಿಸುವುದಕ್ಕೋಸ್ಕರವೇ ಬ್ರಹ್ಮಸೂತ್ರವು ರಚಿತವಾಗಿದೆ. ಅನಂತ ವೇದರಾಶಿಯಲ್ಲಿನ ಒಂದೊಂದು ವಾಕ್ಯವನ್ನು ತೆಗೆದುಕೊಂಡು 'ಇದು ವಿಷ್ಣುಬೋಧಕ', 'ಇದು ವಿಷ್ಣುಬೋಧಕ' ಎಂದು ಹೇಳತೊಡಗಿದರೆ ಅದು ಮುಗಿಯುವುದೇ ಇಲ್ಲ. ಆದಕಾರಣ ಶ್ರೀವೇದವ್ಯಾಸರು ಸೂತ್ರದಿಂದ ನ್ಯಾಯವನ್ನು ಹೇಳಿ ಅದರ ಬಲದಿಂದ ವಾಕ್ಯಾರ್ಥನಿರ್ಣಯಿಸುವ ಪ್ರಕಾರವನ್ನು ತೋರಿಸಿ, ಉದಾಹರಣೆಗಾಗಿ ಕೆಲವು ವಾಕ್ಯಗಳ ಅರ್ಥನಿರ್ಣಯವನ್ನು ತೋರಿಸಿದ್ದಾರೆ. ಹಾಗೆಯೇ ಸೂತ್ರೋಕ್ತವಾದ ಒಂದೊಂದು ನ್ಯಾಯದಿಂದ ಬಹುಶಾಖಾರ್ಥಗಳು ನಿರ್ಣಯಿಸಲ್ಪಡುತ್ತವೆ ಎಂದರೆ ವೇದವೇ ಸಾಕ್ಷಾತ್ತಾಗಿ ವಿಷ್ಣುಬೋಧಕವಾದರೂ ಅದನ್ನು ಎಲ್ಲರೂ ತಿಳಿಯಲಾರರು. ಅಂತಹವರಿಗೆ ವೇದದಿಂದ ವಿಷ್ಣುಬೋಧವಾಗಲು ಸೂತ್ರೋಕ್ತನ್ಯಾಯವು ಸಹಕಾರಿಯಾಗುವುದು. ಸೂತ್ರವು ಸಾಕ್ಷಾತ್ತಾಗಿ ನ್ಯಾಯವನ್ನೇ ಬೋಧಿಸುತ್ತದೆಯಾದರೂ, ಆ ನ್ಯಾಯವು ವೇದದಿಂದಾಗುವ ವಿಷ್ಣುಜ್ಞಾನಕ್ಕೆ ಸಹಾಯಕವಾಗಿರುವ ಕಾರಣ ಔಪಚಾರಿಕವಾಗಿ ಪರಂಪರೆಯಿಂದ ಸೂತ್ರವೂ ವಿಷ್ಣುಬೋಧಕವೆನ್ನಬಹುದೆಂದು ನ್ಯಾಯಸುಧೆಯಲ್ಲಿ ಸ್ಪಷ್ಟ ನಿರೂಪಣವಿದೆ.

ಹೀಗೇ ಉಪನಿಷದುಕ್ತ ಪರವಿದ್ಯಾಲಕ್ಷಣವಾದ ವಿಷ್ಣುಬೋಧಕತ್ವವು ವೇದದ ಸಹಜ ಧರ್ಮವಾದುದರಿಂದ ಅದೇ ಉಪನಿಷದುಕ್ತ ಪರವಿದ್ಯೆಯೆಂಬಲ್ಲಿ ಸಂಶಯವಿಲ್ಲ. ವೇದದಿಂದಾಗುವ ವಿಷ್ಣುಬೋಧಕ್ಕೆ ಸಹಕಾರಿಯಾಗಿರುವ ಸೂತ್ರವನ್ನು ಈ ಅರ್ಥದಲ್ಲಿ ಪರವಿದ್ಯೆಯೆಂದು ವ್ಯವಹರಿಸಲು ಅಡ್ಡಿಯಿಲ್ಲ. ಅಂತಹುದನ್ನು





ಅಮುಖ್ಯವೆಂದು ಹೇಳುವರು. ಆದುದರಿಂದ ಬ್ರಹ್ಮಸೂತ್ರವನ್ನು ಉಪನಿಷದುಕ್ತ ಲಕ್ಷಣದಿಂದ ಮುಖ್ಯಪರ-ವಿದ್ಯೆಯನ್ನಲಾಗುವುದಿಲ್ಲ.

ಉಪನಿಷದ್ಭಾಷ್ಯ , ಟೀಕಾ, ಟಿಪ್ಪಣಿ, ಈ ವಿಷಯವನ್ನು ಪ್ರತಿಪಾದಿಸಿರುವ ಇತರ ಸಿದ್ಧಾಂತ ಗ್ರಂಥಗಳೆಲ್ಲವೂ ಏಕಕಂಠದಿಂದ ಋಗಾದಿವೇದವೇ  ವಿಭಿನ್ನವಿವಕ್ಷೆಯಿಂದ ಪರಾಪರವಿದ್ಯೆಯೆನಿಸುವುದು; ಗ್ರಂಥಭೇದವಿಲ್ಲವೆಂದು ಸ್ಪಷ್ಟವಾಗಿ ಘೋಷಿಸಿವೆ. ಅವೆಲ್ಲವನ್ನೂ ಈ ಗ್ರಂಥದಲ್ಲಿ ಉದಾಹರಿಸಿ ವಿಮರ್ಶಿಸಲಾಗಿದೆ. ಹೀಗೆ ಸ್ಪಷ್ಟೋಕ್ತಿಯಿದ್ದರೂ, ಬ್ರಹ್ಮಸೂತ್ರವೆ ಪರವಿದ್ಯಾ , ಅದೇ ವೇದಕ್ಕಿಂತಲೂ ಉತ್ತಮವೆಂಬ ವಾದವು ಅಪಸಿದ್ಧಾಂತ ಪ್ರಸಾರವೆಂದು ಬೇರೆ ಹೇಳಬೇಕಾಗಿಲ್ಲ.

ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' (೧-೩-೬) ಎಂಬ ಸೂತ್ರದಲ್ಲಿನ ಧರ್ಮಪದಕ್ಕೆ ಭಾಷ್ಯದಲ್ಲಿ ಪರವಿದ್ಯಾವಿಯಷಯತ್ವವೆಂಬ ಧರ್ಮ ಎಂದರ್ಥಮಾಡಿ 'ಯತ್ತದದ್ರೇಶ್ಯಂ' ಇತ್ಯಾದಿ ವೇದವಿಷಯತ್ವವನ್ನು ನಿರೂಪಿಸಿದ್ದಾರೆ. ಆದರಿಂದ ವೇದವೇ ಪರವಿದ್ಯೆಯೆಂದು ಸೂತ್ರಭಾಷ್ಯಕಾರರ ಆಶಯವು ವ್ಯಕ್ತವಾಗುವುದು. ಪ್ರತಿಲೇಖಕರ ಹೇಳಿಕೆಯಂತೆ ಸೂತ್ರವೇ ಪರವಿದ್ಯೆಯಾದಲ್ಲಿ ಸೂತ್ರವಿಷಯತ್ವವೇ ಸೂತ್ರೋಕ್ತಧರ್ಮ-ವೆಂದಂತಾಗುವುದು. ಯಾವುದೇ ಗ್ರಂಥದಿಂದ ಅರ್ಥವಿಶೇಷವನ್ನು ಸಾಧಿಸುವಾಗ ತನಗಿಂತಲೂ ಉತ್ತಮವಾದ ಗ್ರಂಥಾಂತರೋಕ್ತಿಯನ್ನು ಪ್ರಮಾಣವೆಂದು ಹೇಳುವುದೇ ಸರಿಯಾದ ಮಾರ್ಗವು. ತನಗೆ ತಾನೇ ಪ್ರಮಾಣವೆಂದು ಹೇಳಬಾರದು. ಹಾಗಾದರೆ ನಾನು ಹೇಳುತ್ತೇನೆ ಒಪ್ಪಲೇಬೇಕು ಎಂದು ನಿಬಂಧಿ-ಸಿದಂತಾಗುವುದಿಲ್ಲವೇ? ಅಂತಹ ಸಾಧನೆ ಮಾಡುವುದಿಕ್ಕಿಂತ ಪ್ರತಿಜ್ಞಾಮಾತ್ರವೇ ಲೇಸು. ಪ್ರತಿಜ್ಞಾ ಮಾತ್ರದಿಂದ ಇಷ್ಟಸಿದ್ಧಿಯಾಗುವುದಿಲ್ಲವೆಂಬುದು ಸ್ಪಷ್ಟ. ಆದುದರಿಂದ ಸೂತ್ರವೇ ಪರವಿದ್ಯೆ , ಸರ್ವೋತ್ತಮಶಾಸ್ತ್ರವೆಂಬುದು ಸೂತ್ರಕಾರರಿಗೆ ಸಮ್ಮತವಲ್ಲವೆಂದು ಸ್ಪಷ್ಟವಾಗುತ್ತದೆ.

ಬ್ರಹ್ಮಸೂತ್ರದ 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರಭಾಷ್ಯದಲ್ಲಿ ಶ್ರೀಸರ್ವಜ್ಞರು. ''ಋಗ್ಯಜುಃಸಾಮಾಥ-ರ್ವಾಶ್ಚ ಭಾರತಂ ಪಂಚರಾತ್ರಕಂ । ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ । ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ । ಅತೋನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತದಿತಿ ಸ್ಕಾಂದೇ ॥'' ಇತ್ಯಾದಿ ಪ್ರಮಾಣವಚನದಿಂದ ಶಾಸ್ತ್ರಗಳನ್ನು ಪರಿಗಣಿಸಿರುವರು. ಅದರಲ್ಲಿ ಬ್ರಹ್ಮಸೂತ್ರವು ಸೇರಿಲ್ಲ. ಋಗಾದಿಗಳಂತೆ ಬ್ರಹ್ಮಸೂತ್ರವು ಪ್ರಧಾನಶಾಸ್ತ್ರವಾಗಿದ್ದಲ್ಲಿ ಅದನ್ನೂ ಹೇಳಬೇಕಾಗಿದ್ದಿತು. ಹೇಳಿಲ್ಲವಾದ ಕಾರಣ ಬ್ರಹ್ಮಸೂತ್ರವು ವೇದಕ್ಕೆ ಅರ್ಥನಿರ್ಣಯಮಾಡಿಕೊಡುವ ಅಂಗ ಶಾಸ್ತ್ರವೇ ಹೊರತು ವೇದದಂತೆ ಪೃಥಕ್ಕಾದ ಪ್ರಧಾನಶಾಸ್ತ್ರವಲ್ಲವೆಂಬ ಆಶಯವು ವ್ಯಕ್ತವಾಗುತ್ತದೆ. ಸುಧೆಯಲ್ಲಿಯೂ 'ವೇದಾದಿತಿಕರ್ತವ್ಯತಾ-ರೂಪಸ್ಯಾಸ್ಯ ಪೃಥಕ್‌ಪ್ರಮಾಣ್ಯಾನಭ್ಯುಪಗಮಾತ್' ಎಂಬ ವಾಕ್ಯದಿಂದ ಈ ಅಭಿಪ್ರಾಯವು ಸಿದ್ಧವಾಗಿದೆ. ಹೀಗೆ

ಸ್ವತಂತ್ರ ಶಾಸ್ತ್ರಗಳ ಪಂಕ್ತಿಗೆ ಸೇರಲರ್ಹವಲ್ಲದ ವೇದೇತಿಕರ್ತವ್ಯತಾರೂಪವಾದ ಅಂಗಶಾಸ್ತ್ರವನ್ನು ವೇದಕ್ಕಿಂತಲೂ ಉತ್ತಮಶಾಸ್ತ್ರವೆನ್ನುವುದು ಹಾಸ್ಯಾಸ್ಪದ. ಎಂದಿಗೂ ಸರ್ವಜ್ಞರಿಗೆ ಅಭಿಮತವಾಗಲಾರದು.

ಪರಾಪರವಿದ್ಯೆಯ ಬಗ್ಗೆ ಪ್ರಸ್ತಾಪಮಾಡಿರುವ ಉಪನಿಷತ್ತು ಸ್ವತಃ ಲಕ್ಷಣಸಮನ್ವಯಪೂರ್ವಕವಾಗಿ ವೇದವೇ ಪರಾಪರವಿದ್ಯೆಯೆಂದು ಹೇಳಿದೆ. ಭಾಷ್ಯಕಾರರು ಒಂದೇ ವೇದವನ್ನು ಪರಾಪರವಿದ್ಯೆಯೆನ್ನುವುದು ಹೇಗೆ? ವಿರುದ್ಧವಲ್ಲವೇ ? ಎಂಬ ಪ್ರಶ್ನೆಗೆ ವಿವಕ್ಷಾಭೇದದಿಂದ ಬ್ರಹ್ಮಸೂತ್ರೋಕ್ತನ್ಯಾಯದಿಂದ ಪರಿಶೀಲಿಸಿದರೆ ವೇದವೆಲ್ಲವೂ ವಿಷ್ಣುವನ್ನೇ ಬೋಧಿಸುವುದು. ಆಗ ಅದು ಪರವಿದ್ಯೆಯೆನಿಸುವುದು. ಸ್ವತಂತ್ರವಾಗಿ ಲೋಕ-ನ್ಯಾಯದಿಂದ ಪರಿಶೀಲಿಸಿದರೆ ಕರ್ಮದೇವತಾದಿಬೋಧಕವಾಗುವುದು, ಆಗ ಅದೇ ವೇದವು ಅಪರವಿದ್ಯೆ-ಯೆನಿಸುವುದು ಎಂಬುದಾಗಿ ಸಮಾಧಾನ ಹೇಳಿ, ಒಂದೇ ವೇದವು ವಿವಕ್ಷಾಭೇದದಿಂದ ಪರಾಪರವಿದ್ಯೆ-ಯಾಗುವುದೆಂದು ಸ್ಪಷ್ಟಪಡಿಸಿದ್ದಾರೆ. ಟೀಕಾ, ಟಿಪ್ಪಣಿಕಾರರೆಲ್ಲರೂ, ಏಕಕಂಠದಿಂದ ವೇದವೇ ಪರಾಪರ-ವಿದ್ಯೆಯು, ಗ್ರಂಥಭೇದವಿಲ್ಲವೆಂದು ಮುಕ್ತಕಂಠದಿಂದ ಘೋಷಿಸಿರುವಾಗ ವೇದಭಿನ್ನವಾದ ಬ್ರಹ್ಮಸೂತ್ರವು ಪರವಿದ್ಯೆ ಮುಂತಾದ ವಾದಕ್ಕೇ ಒಂದಾದರೂ ನಿರವಕಾಶಪ್ರಮಾಣವು ಹೇಗೆ ದೊರಕೀತು?

ಅನುವ್ಯಾಖ್ಯಾನದಲ್ಲಿ "ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಂ, ಪರಮಾಖ್ಯವಿದ್ಯಾ" ಎಂಬ ವಾಕ್ಯದಿಂದ ಬ್ರಹ್ಮಸೂತ್ರವನ್ನು ಶ್ರೀಸರ್ವಜ್ಞರು ಪರವಿದ್ಯೆಯೆಂದು ಹೇಳಿರುವುದೇನೋ ನಿಜ, ಆದರೆ ಆ ವಾಕ್ಯಕ್ಕೆ ಅಲ್ಲಿನ ಸಂದರ್ಭ ಆಥರ್ವಣೋಪನಿಷತ್ತು, ಅದರ ಭಾಷ್ಯಾದಿ ಇತರ ಗ್ರಂಥದಲ್ಲಿನ ಆಚಾರ್ಯರ ನಿರೂಪಣೆ, ಟೀಕಾ, ಟಿಪ್ಪಣಿ, ಇತ್ಯಾದಿಗಳನ್ನು ಪರ್ಯಾಲೋಚಿಸಿ ಮೇಲೆ ಹೇಳಿದಂತೆ ಪರವಿದ್ಯೆಯಾದ ವೇದದ ವಿಷ್ಣು-ಬೋಧಕತ್ವವನ್ನು ತೋರಿಸಿಕೊಡುವ ಕಾರಣ, ಸೂತ್ರವನ್ನೂ ಅಮುಖ್ಯಪರವಿದ್ಯೆಯೆಂದು ವ್ಯವಹರಿಸ-ಬಹುದೆಂಬುದೇ ನಿಜವಾದ ಆಶಯವೆಂದು ನ್ಯಾಯಸುಧಾದಿಗಳಲ್ಲಿ ನಿರೂಪಿಸಿರುವುದನ್ನು ತಿಳಿಯಬೇಕು.

ಈ ಗ್ರಂಥದಲ್ಲಿ - ಪ್ರಕೃತವಿಷಯಕ್ಕೆ ಸಂಬಂಧಿಸಿದ ೪೦ ಸಿದ್ಧಾಂತಗ್ರಂಥಗಳ ವಾಕ್ಯಗಳನ್ನು ಉದಾಹರಿಸಿ, ವಿಚಾರಪೂರ್ವಕವಾಗಿ ವೇದವೇ ಮುಖ್ಯಪರವಿದ್ಯೆಯು, ಸರ್ವಶಾಸ್ತ್ರೋತ್ತಮ, ಪೌರುಷೇಯ ನಿರ್ಣಾಯ ಗ್ರಂಥಗಳಲ್ಲಿ ಬ್ರಹ್ಮಸೂತ್ರವೂ, ನಿರ್ಣೇಯ ಗ್ರಂಥಗಳಲ್ಲಿ ಮಹಾಭಾರತವೂ ಉತ್ತಮವೆಂಬ ಸಿದ್ಧಾಂತವನ್ನು ಸಪರಿಕರವಾಗಿ ನಿರ್ಣಯಿಸಲಾಗಿದೆ. ನನಗೆ ಆಗ್ರಹವಿಲ್ಲ. ವೈಷ್ಣವರೆಲ್ಲರೂ ಬಾಂಧವರೆಂದು ನನ್ನ ಭಾವನೆ. ಶ್ರೀಸುಬ್ಬಾಚಾರ್ಯಾದಿಗಳಲ್ಲಿ ನನಗೆ ವೈಮನಸ್ಯವಿಲ್ಲ. ಅಪಸಿದ್ಧಾಂತವನ್ನು ಮಾತ್ರ ನಾನು ಯಾವಾಗಲೂ ದ್ವೇಷಿಸುವೆನು. ಅಂತಹ ಪ್ರಚಾರವನ್ನು ಸಹಿಸಲಾರೆನು. ಅದನ್ನು ತುಚ್ಛೀಕರಿಸುವುದು, ಸತ್ ಸಿದ್ಧಾಂತವನ್ನು ಗೌರವಿಸುವುದು ಕರ್ತವ್ಯವು. ಈಗಲೂ ನಾನು ಹೇಳಿರುವುದು ಸಿದ್ಧಾಂತವಲ್ಲ. ಪ್ರತಿಲೇಖಕರ ಹೇಳಿಕೆಯೇ ಸಿದ್ಧಾಂತವೆಂದು ಯಾರಾದರೂ ಪಂಡಿತರು ಸಪ್ರಮಾಣವಾಗಿ ಶಾಸ್ತ್ರಮರ್ಯಾದೆಯನ್ನನುಸರಿಸಿ ವಿಚಾರ-





ಪೂರ್ವಕವಾಗಿ ನಿರ್ಣಯಿಸಿಕೊಟ್ಟರೆ ನಾನು ಅದನ್ನೇ ಸಂತೋಷದಿಂದ ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಿ, ಪ್ರಚುರಪಡಿಸುವೆನೆಂದು ಮನಃಪೂರ್ವಕವಾಗಿ ಬಿನ್ನವಿಸುವೆನು.

ಸಂಸ್ಕೃತ ಭಾಷೆಯಲ್ಲಿ ಬರೆದಿದ್ದ ಈ ಪೀಠಿಕೆಯನ್ನು ನೋಡಿ ಕೆಲವು ದಕ್ಷಿಣ ದೇಶದ ಮಾಧ್ವಬಾಂಧವರು ಸಂಸ್ಕೃತವನ್ನರಿಯದ ಮಾಧ್ವಜನತೆಗೂ ಈ ವಿಷಯದ ಪರಿಚಯವಾಗುವಂತೆ ಮಾಧ್ವರ ಮನೆಭಾಷೆಯಾದ ಕನ್ನಡದಲ್ಲಿ ಪೀಠಿಕೆಯನ್ನು ಪ್ರಚುರಪಡಿಸುವುದು ಒಳ್ಳೆಯದೆಂದು ಸೂಚಿಸಿದುದರಿಂದ ಕನ್ನಡ ಭಾಷೆಯಲ್ಲಿ ಇದನ್ನು ಪ್ರಕಟಿಸಲಾಗಿದೆ.

ಸತ್‌ಸಿದ್ಧಾಂತಪ್ರಚಾರ ಬದ್ಧಾದರರು, ಯತ್ಯಾಶ್ರಮವಿಹಿತವೈರಾಗ್ಯತಪಃಪ್ರವಚನಾದಿ ಸದ್ಗುಣಾಲಂಕೃತರು ಆಗಿರುವ ಶ್ರೀ ಆರ್ಯ ಅಕ್ಷೋಭ್ಯತೀರ್ಥಸಂಸ್ಥಾನಾಧೀಶ್ವರ (ಬಾಳಗಾರು) ಶ್ರೀ ಶ್ರೀ ರಘುಮಾನ್ಯತೀರ್ಥ-ಶ್ರೀಪಾದಂಗಳವರು ತಮ್ಮ ಸಭೆಯಲ್ಲಿ ಶ್ರೀಸುಬ್ಬಾಚಾರ್ಯರಿಂದ ಪ್ರಾರಂಭಿಸಲ್ಪಟ್ಟ ಅನ್ಯಥಾ ಪ್ರಕಟಿತವಾದ ಅಪಸಿದ್ಧಾಂತ ಪ್ರಚಾರವನ್ನು ಮನಗಂಡು, ಅದಕ್ಕೆ ಪ್ರತಿಗ್ರಂಥವನ್ನು ರಚಿಸಲು ನನಗೆ ಅಪ್ಪಣೆಯನ್ನಿತ್ತರು. ಶ್ರೀಗಳವರ ಆಜ್ಞಾಪ್ರಕಾರ ಸಿದ್ಧಾಂತ ಗ್ರಂಥಗಳ ಆಧಾರದಿಂದ ಈ ಗ್ರಂಥವನ್ನು ರಚಿಸಿ ಶ್ರೀಗಳವರಿಗೆ ಸಮರ್ಪಿಸಿದೆನು. ಇಂತಹ ಸಂದರ್ಭಗಳಲ್ಲಿ ಅಸದ್ವಾದವನ್ನು ಖಂಡಿಸಿ ಸತ್‌ಸಿದ್ಧಾಂತ ಪ್ರಚಾರಮಾಡುವುದು ವೇದಾಂತಸಾಮ್ರಾಜ್ಯ ಪೀಠಾಧಿಪತಿಗಳಿಗೆ ಮುಖ್ಯ ಕರ್ತವ್ಯವೆಂಬುದನ್ನರಿತು ಶ್ರೀ ಶ್ರೀಗಳವರು ಈ ಗ್ರಂಥವನ್ನು ಪ್ರಕಾಶಿಸಿರುವರು. ಈ ರೀತಿ ಸಿದ್ಧಾಂತ ಮನನಾದಿಗಳಿಂದ ಶ್ರೀ ಸರ್ವಜ್ಞರಸೇವೆಗೇಅವಕಾಶವನ್ನು ಕಲ್ಪಿಸಿದ ಶ್ರೀಗಳವರ ಸನ್ನಿಧಾನದಲ್ಲಿ ಕೃತಜ್ಞತಾಪೂರ್ವಕ ಸಾಷ್ಟಾಂಗ ನಮಸ್ಕಾರಗಳನ್ನರ್ಪಿಸುತ್ತೇನೆ.

- ಪಂಡಿತರತ್ನಂ ,

ದೊಡ್ಡಬಳ್ಳಾಪುರ ವಾಸುದೇವಾಚಾರ್ಯಃ



# ವಿದ್ಯಾವಿನಿರ್ಣಯಃ

ಶ್ರೀ ಗುರುಭ್ಯೋ ನಮಃ

## ಮಂಗಳಾಚರಣೆ

ಯತ್ಪದಂ ವೇದಸಂವೇದ್ಯಂ ಕಟಾಕ್ಷೇಣಾಪಿ ವೀಕ್ಷಿತುಮ್ ।

ನ ಕ್ಷಮಂತೇ ವಿಮತಯಸ್ತುಮುಪಾಸೇ ಶ್ರಿಯಃ ಪತಿಮ್ ॥ -(ನ್ಯಾಯಸುಧಾ)

ಯಾವ ವೇದಪ್ರತಿಪಾದ್ಯನ ಪಾದವನ್ನು ಕಟಾಕ್ಷದಿಂದಲೂ ಕೂಡ ನೋಡಲು ಕುಮತಿಗಳಿಗೆ ಸಾಧ್ಯವಿಲ್ಲವೋ, ಅಂಥ ಶ್ರೀಪತಿಯನ್ನು ಉಪಾಸನೆ ಮಾಡುತ್ತೇನೆ.

ನಮಾಮಿ ಶ್ರೀಮದಾನಂದತೀರ್ಥಾರ್ಯಪದಪಂಕಜೇ ।

ಟೀಕಾರ್ಯಂ ವ್ಯಾಸರಾಜಾದಿಟಿಪ್ಪಣ್ಯಾಚಾರ್ಯಸಂತತಿಮ್ ॥

ಪೂಜ್ಯರಾದ ಶ್ರೀಮದಾನಂದತೀರ್ಥರ ಪಾದಕಮಲಗಳಲ್ಲಿ ಭಕ್ತಿಯಿಂದ ನಮಸ್ಕಾರ ಮಾಡುವೆನು. ಟೀಕಾರಾಯರಿಗೆ ಹಾಗೂ ವ್ಯಾಸರಾಜರೇ ಮೊದಲಾದ ಅನೇಕ ಟಿಪ್ಪಣ್ಯಾಚಾರ್ಯರ ಪರಂಪರೆಗೆ ನಮಸ್ಕಾರ ಮಾಡುವೆನು.

ನತ್ವಾ ಮಂತ್ರಾಲಯಾಚಾರ್ಯಂ ತದುಕ್ತೀಃ ಪರಿಭಾವ್ಯ ಚ ।

ಮದ್ಗುರೂಂಶ್ಚ ಯಥಾಶಕ್ತಿ ಕುರ್ವೇ ವಿದ್ಯಾವಿನಿರ್ಣಯಮ್ ॥

ಮಂತ್ರಾಲಯ ಪ್ರಭುಗಳ ಪಾದಕಮಲಗಳಲ್ಲಿ ನಮಸ್ಕಾರವನ್ನು ಮಾಡಿ, ಅವರ ಉಕ್ತಿಗಳನ್ನು ಚೆನ್ನಾಗಿ ವಿಚಾರ ಮಾಡಿ, ನನ್ನ ಗುರುಗಳಿಗೆ ನಮಿಸಿ, ವಿದ್ಯಾವಿನಿರ್ಣಯ ಎಂಬ ಗ್ರಂಥವನ್ನು ನನ್ನ ಶಕ್ತ್ಯನುಸಾರವಾಗಿ ರಚನೆ ಮಾಡುವೆನು.

### ಆಥರ್ವಣದಲ್ಲಿ ಪರವಿದ್ಯಾವಿಚಾರ

"ಸ ಬ್ರಹ್ಮವಿದ್ಯಾ" ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ।







**ಅನುವಾದ –** ಸಕಲ ವಿದ್ಯೆಗಳಿಗೆ ಆಶ್ರಯವಾದ ಬ್ರಹ್ಮವಿದ್ಯೆಯೆನಿಸಿದ ವೇದವಿದ್ಯೆಯನ್ನು ಜ್ಯೇಷ್ಠಪುತ್ರನಾದ ಅಥರ್ವ ಎಂಬ ಋಷಿಗಳಿಗೆ ಚತುರ್ಮುಖಬ್ರಹ್ಮದೇವರು ಉಪದೇಶಿಸಿದರು.

**ವಿವರಣೆ –** ಆಥರ್ವಣೋಪನಿಷತ್ತಿನಲ್ಲಿ ಬಂದಿರುವ ಪರವಿದ್ಯಾಪ್ರಕರಣದ ಸಂಪೂರ್ಣಭಾಗ ಹೀಗೆ ಪ್ರಾರಂಭವಾಗುತ್ತದೆ – ಪ್ರಾರಂಭದಲ್ಲಿ ಯಾವುದೇ ವಿದ್ಯೆಯನ್ನು ತಿಳಿಯುವಾಗ ಆ ವಿದ್ಯೆಯ ಋಷಿಪರಂಪರೆ ಹಾಗೂ ದೇವತಾಜ್ಞಾನವು ಅತ್ಯಾವಶ್ಯಕ. ಈ ಕಾರಣದಿಂದ ಈ ಪರವಿದ್ಯೆಯ ಋಷಿ ಪರಂಪರೆಯನ್ನು ಉಪನಿಷತ್ತಿನ ಪ್ರಾರಂಭದಲ್ಲಿ ವೇದ-ಪುರುಷನು 'ಬ್ರಹ್ಮ ದೇವಾನಾಂ' ಇತ್ಯಾದಿ ಮಂತ್ರಗಳ ಮೂಲಕ ತಿಳಿಸುತ್ತಾನೆ.

**ಮಂತ್ರದ ಪ್ರತಿಪದಾರ್ಥ –** ಬ್ರಹ್ಮಾ = ಚತುರ್ಮುಖ ಬ್ರಹ್ಮದೇವರು, ದೇವಾನಾಂ = ಗರುಡ, ಶೇಷ ಮೊದಲಾದ ಸಕಲ ದೇವತೆಗಳಿಗಿಂತಲೂ, ಪ್ರಥಮಃ = ಮೊದಲಿಗೆ, ಸಂಬಭೂವ = ಭಗವಂತನಿಂದ ಅವತಾರ ಮಾಡಿದರು, ವಿಶ್ವಸ್ಯ = ಜಗತ್ತಿನ, ಕರ್ತಾ = ಕರ್ತೃವಾದ, ಭುವನಸ್ಯ = ಜಗತ್ತಿನ, ಗೋಪ್ತಾ = ರಕ್ಷಕರಾದ, ಸಃ = ಆ ಬ್ರಹ್ಮದೇವರು, ಸರ್ವವಿದ್ಯಾಪ್ರತಿಷ್ಠಾಂ = ಎಲ್ಲ ವಿದ್ಯೆಗಳಿಗೆ ಆಶ್ರಯವಾದ (ಯಾವ ವಿದ್ಯೆಯಿಂದ ವೇದ್ಯವಾದ ಎಲ್ಲಾ ಫಲವು ಬರುತ್ತದೋ ಅಂತಹ), ಬ್ರಹ್ಮವಿದ್ಯಾಂ = ಪರಬ್ರಹ್ಮವಿಷಯಕವಾದ ಯಥಾರ್ಥಜ್ಞಾನವನ್ನು ಉಂಟುಮಾಡುವ ವೇದರಾಶಿಯನ್ನು, ಬ್ರಹ್ಮವಿದ್ಯೆಯನ್ನು, ಜ್ಯೇಷ್ಠಪುತ್ರಾಯ = ವೈವಸ್ವತ ಮನ್ವಂತರದಲ್ಲಿ ಮೊದಲಿಗೆ ಹುಟ್ಟಿದ ಅಥರ್ವಾಯ = ಅಥರ್ವ ಎಂಬ ಋಷಿಗಳಿಗೋಸ್ಕರ, ಪ್ರಾಹ = ಉಪದೇಶಿಸಿದರು.

ಬ್ರಹ್ಮದೇವರು ಮೊದಲಿಗೆ ಭಗವಂತನಿಂದ ಅವತಾರ ಮಾಡಿದ್ದಾರೆ. ಆ ಬ್ರಹ್ಮದೇವರು ಜಗತ್ತಿನ ಸೃಷ್ಟಿ ಹಾಗೂ ಪಾಲನೆಯನ್ನು ಭಗವಂತನ ಅಧೀನವಾಗಿ ಮಾಡುತ್ತಿದ್ದಾರೆ. ಜಗತ್ತಿನಲ್ಲಿ ಇರುವ ಸಾಧಕರಿಗೆ ಅವರ ಸಾಧನೆಯನ್ನು ಹೆಚ್ಚು ಮಾಡಿಕೊಳ್ಳಲು ಅನೇಕ ವಿದ್ಯೆಗಳನ್ನು ತಮ್ಮ ಅನೇಕ ಶಿಷ್ಯರಿಗೆ ಉಪದೇಶ ಮಾಡಿದ್ದಾರೆ. ಹಾಗೆ ಉಪದೇಶಿಸುವ ಪ್ರಾರಂಭದಲ್ಲಿ ಪರವಿದ್ಯಾ ಎಂಬ ಅತ್ಯುತ್ತಮ ವಿದ್ಯೆಯನ್ನು ಅಥರ್ವ ಎಂಬ ಋಷಿಗಳಿಗೆ ಉಪದೇಶಿಸಿದ್ದಾರೆ.

## ಬ್ರಹ್ಮವಿದ್ಯೆಗೆ ಪರಾಪರವ್ಯವಸ್ಥೆ

**ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾ ಅಥರ್ವಾ ತಾಂ ಪುರೋವಾಚಾಂಗಿರೇ ಬ್ರಹ್ಮವಿದ್ಯಾಂ। ಸ ಭಾರದ್ವಾಜಾಯ ಸತ್ಯವಹಾಯ ಪ್ರಾಹ ಭಾರದ್ವಜೋಽಂಗಿರಸೇ ಪರಾವರಾಂ।**

**ಅನುವಾದ –** ಚತುರ್ಮುಖಬ್ರಹ್ಮದೇವರು ಯಾವ ಬ್ರಹ್ಮವಿದ್ಯೆಯನ್ನು ಅಥರ್ವಋಷಿಗಳಿಗೆ ಉಪದೇಶ ಮಾಡಿದರೋ, ಅದನ್ನು ಹಿಂದೆ ಅಂಗಿರಾ ಎಂಬ ಋಷಿಗಳಿಗೆ ಉಪದೇಶ ಮಾಡಿದ್ದರು. ಆ ಅಂಗಿರಾ ಋಷಿಗಳು

ಭರದ್ವಾಜರ ಪುತ್ರರಾದ ಸತ್ಯವಹ ಎಂಬ ಋಷಿಗಳಿಗೆ ಉಪದೇಶ ಮಾಡಿದರು. ಅವರು ಮತ್ತೊಬ್ಬ ಅಂಗಿರಸರಿಗೆ ಪರಾವರರೂಪವಾದ ಬ್ರಹ್ಮವಿದ್ಯೆಯನ್ನು ಉಪದೇಶಿಸಿದರು.

ಪ್ರತಿಪದಾರ್ಥ - ಬ್ರಹ್ಮಾ = ಬ್ರಹ್ಮದೇವರು, ಯಾಂ ಬ್ರಹ್ಮವಿದ್ಯಾಂ = ಯಾವ ಬ್ರಹ್ಮವಿದ್ಯೆಯನ್ನು, ಅಥರ್ವಣೇ = ಅಥರ್ವ ಋಷಿಗಳಿಗೆ, ಪ್ರವದೇತಾ = ಉಪದೇಶ ಮಾಡಿದರೋ, ತಾಂ = ಆ ವಿದ್ಯೆಯನ್ನು, ಅಥರ್ವಾ = ಅಥರ್ವ ಋಷಿಗಳು, ಪುರಾ = ಹಿಂದೆ, ಅಂಗಿರೇ = ಅಂಗಿರಾ ಎಂಬ ಋಷಿಗಳಿಗೋಸ್ಕರ, ಉವಾಚ = ಉಪದೇಶ ಮಾಡಿದರು, ಸಃ = ಆ ಅಂಗಿರಸ ಋಷಿಗಳು, ಭರದ್ವಾಜಾಯ = ಭರದ್ವಾಜರ ಪುತ್ರರಾದ, ಸತ್ಯವಹಾಯ = ಸತ್ಯವಹ ಎಂಬ ಋಷಿಗಳಿಗೆ, ಪ್ರಾಹ = ಉಪದೇಶ ಮಾಡಿದರು. ಭಾರದ್ವಾಜಃ = ಭರದ್ವಾಜ ಋಷಿಗಳ ಮಕ್ಕಳಾದ ಸತ್ಯವಹರು, ಅಂಗಿರಸೇ = ಮತ್ತೊಬ್ಬ ಅಂಗಿರ ಎಂಬ ಋಷಿಗಳಿಗೆ, ಪರಾವರಾಂ = ಪರಾವರ ರೂಪವಾದ ಈ ಬ್ರಹ್ಮವಿದ್ಯೆಯನ್ನು, ಪ್ರಾಹ = ಉಪದೇಶ ಮಾಡಿದರು.

ವಿವರಣೆ - 'ಪರಾವರ' ಎಂದರೆ 'ಪರ' ಹಾಗೂ 'ಅವರ' ಎಂದರ್ಥ. ಒಂದೇ ವಿದ್ಯೆಯು ವಿವಕ್ಷಾಭೇದದಿಂದ ಪರವೂ, ಅವರವೂ ಆಗುತ್ತದೆ. ಇಂತಹ ಪರವಿದ್ಯೆಯೂ, ಅಪರವಿದ್ಯೆಯೂ ಆಗುವ ಬ್ರಹ್ಮವಿದ್ಯೆಯನ್ನು ಚತುರ್ಮುಖಬ್ರಹ್ಮದೇವರು ಅಥರ್ವರಿಗೆ, ಅಥರ್ವರಿಂದ ಅಂಗೀರಸರಿಗೆ, ಆ ಅಂಗಿರಸರು ಭರದ್ವಾಜರ ಮಕ್ಕಳಾದ ಸತ್ಯವಹರಿಗೆ, ಆ ಸತ್ಯವಹರು ಮತ್ತೊಬ್ಬ ಅಂಗಿರಸ ಋಷಿಗಳಿಗೆ ಉಪದೇಶ ಮಾಡಿದ್ದಾರೆ. ಹೀಗೆ ಆ ಬ್ರಹ್ಮವಿದ್ಯೆಯು ವಿಷ್ಣುವಿನಿಂದ ಬ್ರಹ್ಮದೇವರ ಮುಖಾಂತರ ಲೋಕಕ್ಕೆ ಬಂದ ಕ್ರಮವನ್ನು ಇಲ್ಲಿ ತಿಳಿಸಿದ್ದಾರೆ. ಉಪನಿಷತ್ತಿನ ಪ್ರವದೇತ ಎಂಬ ಶಬ್ದಕ್ಕೆ ಪ್ರಾವದತ್ ಎಂಬುದಾಗಿ ಅರ್ಥ. ಲಙ್ ಅರ್ಥದಲ್ಲಿ ವೈದಿಕವಾದ ಲಿಙ್ ಲಕಾರವು ಇಲ್ಲಿ ವೇದದಲ್ಲಿ ಪ್ರಯುಕ್ತವಾಗಿದೆ. ಪ್ರವದೇತ ಎಂಬ ಶಬ್ದಕ್ಕೆ ಸ್ಪಷ್ಟವಾಗಿ ಹೇಳಿದರು ಎಂದರ್ಥ.

## ಸಾಫಲ್ಯದಾಯಕ ವಿದ್ಯೆ ಯಾವುದು ?

ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ। ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ।

ಅನುವಾದ - ಮಹಾಶಾಲರೆನಿಸುವ ಶೌನಕ ಋಷಿಗಳು ಶಾಸ್ತ್ರೋಕ್ತರೀತಿಯಲ್ಲಿ ಅಂಗಿರಸರನ್ನು ಶಿಷ್ಯತ್ವೇನ ಉಪಸತ್ತಿ ಮಾಡಿದರು. ಅನಂತರ ಪೂಜ್ಯರೇ ! ಯಾವುದನ್ನು ತಿಳಿದರೆ ಉಳಿದೆಲ್ಲವನ್ನು ತಿಳಿದದ್ದು ಸಫಲವಾಗುತ್ತದೋ, ಅದನ್ನು ಉಪದೇಶಿಸಿರಿ ಎಂದು ಪ್ರಾರ್ಥಿಸಿದರು.

ಪ್ರತಿಪದಾರ್ಥ - ಮಹಾಶಾಲಃ = ಪ್ರತಿವರ್ಷವೂ ಯಜ್ಞವನ್ನು ತಪ್ಪದೇ ಮಾಡುವ, ಶೌನಕಃ = ಶೌನಕ ಋಷಿಗಳು, ಅಂಗಿರಸಂ = ಅಂಗಿರಸ ಋಷಿಗಳನ್ನು, ವಿಧಿವತ್ = ಶಾಸ್ತ್ರೋಕ್ತ ರೀತಿಯಾಗಿ, ಉಪಸನ್ನಃ =







ಶಿಷ್ಯವೃತ್ತಿಯಿಂದ ಸೇವೆ ಮಾಡಿ ಪ್ರಶ್ನೆ ಮಾಡಿದರು, ಹೇ ಭಗವಃ = ಎಲೈ ಪೂಜ್ಯರಾದ ಶೌನಕರೇ, ಸರ್ವಮಿದಂ = ನಾನು ತಿಳಿದಿರುವ ಎಲ್ಲಾ ದೇವತಾದಿಗಳು ಹಾಗೂ ಕರ್ಮ ಮುಂತಾದವುಗಳು, ಕಸ್ಮಿನ್ ನು = ಯಾವುದನ್ನು, ವಿಜ್ಞಾತೇ = ಚೆನ್ನಾಗಿ ತಿಳಿದುಕೊಂಡಲ್ಲಿ, ವಿಜ್ಞಾತಂ ಭವತಿ = ಎಲ್ಲವೂ ಸಫಲವಾಗುತ್ತದೋ, ವೈ = ಇದು ಪ್ರಸಿದ್ಧವಾಗಿದೆ.

**ವಿವರಣೆ** – ನಾನು ತಿಳಿದುಕೊಂಡ ವಿಷಯವು ಯಾವ ವಿಷಯವನ್ನು ತಿಳಿದುಕೊಂಡಾಗ ಮೋಕ್ಷಫಲಕವಾಗುತ್ತದೋ, ಅಂತಹ ವಿಷಯವನ್ನು ನನಗೆ ತಿಳಿಸಿ ಎಂಬುದಾಗಿ ಶೌನಕರ ಪ್ರಶ್ನೆಯ ಅಭಿಪ್ರಾಯ.

'ಮಹಾಶಾಲ' ಎಂಬ ಶಬ್ದವು ಪ್ರತಿವರ್ಷವೂ ಸಹ ಯಜ್ಞವನ್ನು ತಪ್ಪದೇ ಆಚರಣೆ ಮಾಡುವ ವ್ಯಕ್ತಿಯನ್ನು ಹೇಳುತ್ತದೆ. ಶ್ರೀಮದಾಚಾರ್ಯರು ಐತರೇಯ ಭಾಷ್ಯದಲ್ಲಿ ಮಹಾಶಾಲದ ಶಬ್ದವನ್ನು ನಿರ್ವಚನೆ ಮಾಡುವಾಗ 'ಪ್ರತ್ಯಬ್ದಕೃತ್' ಪ್ರತಿವರ್ಷವೂ ಯಜ್ಞವನ್ನು ಮಾಡುವ ವ್ಯಕ್ತಿಯನ್ನು 'ಮಹಾಶಾಲಾ' ಎಂಬ ಶಬ್ದದಿಂದ ಕರೆಯಬೇಕು ಎಂದು ವಿವರಣೆ ನೀಡಿದ್ದಾರೆ. ಯಾವಾಗಲೋ ಒಮ್ಮೆ ಯಜ್ಞವನ್ನು ಮಾಡುವವರು ಯಜ್ಞಶಾಲೆಯನ್ನು ತಾತ್ಕಾಲಿಕವಾಗಿ ನಿರ್ಮಾಣ ಮಾಡುತ್ತಾರೆ. ಆದರೆ ಶೌನಕರು ಪ್ರತಿವರ್ಷವೂ ಯಜ್ಞವನ್ನು ಮಾಡುವುದರಿಂದ ದೃಢವಾದ ಯಜ್ಞಶಾಲೆಯನ್ನು ನಿರ್ಮಾಣ ಮಾಡಿ ಮಹಾಶಾಲ ಎಂಬ ಶಬ್ದದಿಂದ ಪ್ರಸಿದ್ಧರಾಗಿದ್ದಾರೆ. ಹೀಗೆ ಪ್ರತಿವರ್ಷವೂ ಸಹ ಯಜ್ಞಾದಿ ಕರ್ಮವನ್ನು ಮಾಡುವುದರಿಂದ ಆ ಯಜ್ಞಾದಿ ಕರ್ಮಗಳು ಹೇಗೆ ಸಫಲವಾಗುತ್ತವೆ? ಅವುಗಳಿಂದ ಹೇಗೆ ಭಗವಂತನ ಪ್ರೀತಿಯಾಗುತ್ತದೆ? ಅವುಗಳನ್ನು ಆಚರಣೆ ಮಾಡಿದಾಗ ನಾವು ಫಲವನ್ನು ಹೇಗೆ ಪಡೆಯಲು ಸಾಧ್ಯ ? ಇತ್ಯಾದಿ ವಿಷಯಗಳನ್ನು ಶೌನಕರು ತಿಳಿದಿರುವುದರಿಂದ ಈ ಕರ್ಮ ಹಾಗೂ ದೇವತಾದಿವಿಷಯಕವಾದ ವಿಚಾರವನ್ನು ಶೌನಕರ ಬಳಿ ಪ್ರಶ್ನೆ ಮಾಡಿರುವರು.

## ವಿಷಯವಾಕ್ಯದ ಉಲ್ಲೇಖ ಮತ್ತು ವ್ಯಾಖ್ಯಾನ

**ತಸ್ಮೈ ಸ ಹೋವಾಚಾ । ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ ಯದ್‌ಬ್ರಹ್ಮವಿದೋ ವದಂತಿ ಪರಾ ಚೈರಾಪರಾ ಚ । ತತ್ರಾಪರಾ ಋಗ್ವೇದೋ ಯಜುರ್ವೇದಃ ಸಾಮವೇದೋऽಥರ್ವವೇದಃ ಶಿಕ್ಷಾಕಲ್ಪೋ ವ್ಯಾಕರಣಮ್ ನಿರುಕ್ತಂ ಛಂದೋ ಜ್ಯೋತಿಷಮಿತಿ ।**

ಅನುವಾದ – ಆ ಶೌನಕರಿಗೆ ಅಂಗಿರಸರು ಸಂತೋಷದಿಂದ ವಿದ್ಯೆಯನ್ನು ಉಪದೇಶಿಸಿದರು. ವಿದ್ಯೆಯು ಎರಡು ಬಗೆ ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ. ಒಂದು ಪರವಿದ್ಯೆ , ಮತ್ತೊಂದು ಅಪರವಿದ್ಯೆ ಎಂದು.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ ಇವುಗಳು ಅಪರವಿದ್ಯೆ ಎನಿಸುತ್ತವೆ.



ವಿವರಣೆ – ಅಂಗೀರಸರು ಶೌನಕರಿಗೆ ಒಂದೇ ವಿದ್ಯೆಯು ವಿವಕ್ಷಾ ಭೇದದಿಂದ ಪರಮಮುಖ್ಯಾರ್ಥ ಬೋಧಕವಾದಾಗ ಪರವಿದ್ಯಾ ಎಂಬುದಾಗಿಯೂ ಅಮುಖ್ಯಾರ್ಥ ಬೋಧಕವಾದಾಗ ಅಪರವಿದ್ಯೆ ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ, ಇದು ಪ್ರಸಿದ್ಧ ಎಂಬುದಾಗಿ ಪರಾಪರವಿದ್ಯೆಯ ವಿವೇಚನೆಯನ್ನು ಮಾಡಿಕೊಟ್ಟಿದ್ದಾರೆ.

ಪ್ರತಿಪದಾರ್ಥ – ತಸ್ಮೈ = ಆ ಶೌನಕರಿಗೆ, ಸಃ = ಆ ಅಂಗಿರಸರು, ಹ = ಸಂತೋಷದಿಂದ, ಉವಾಚ = ತಾವು ತಿಳಿದ ವಿದ್ಯೆಯನ್ನು ಉಪದೇಶ ಮಾಡಿದರು, ವಿದ್ಯಾ = ಜ್ಞಾನಜನಕವಾದ ಶಾಸ್ತ್ರವು, ದ್ವೇ = ಎರಡು ವಿಧ ಎಂದು, ವೇದಿತವ್ಯೇ = ತಿಳಿಯಲ್ಪಡಬೇಕು, ಇತಿ ಯತ್ = ಹೀಗೆಂಬುದನ್ನು, ಬ್ರಹ್ಮವಿದಃ = ಬ್ರಹ್ಮಜ್ಞಾನಿಗಳು, ವದಂತಿ = ಹೇಳುತ್ತಾರೆ, ಸ್ಮ ಹ = ಇದು ಪ್ರಸಿದ್ಧವು. ಪರಾ = ಪರಮಮುಖ್ಯಾರ್ಥವನ್ನು ಬೋಧಿಸುವ ಪರವಿದ್ಯೆಯು, ಚ = ಮತ್ತು, ಅಪರಾಚ = ಅಮುಖ್ಯಾರ್ಥವನ್ನು ಬೋಧಿಸುವ ಅಪರವಿದ್ಯೆಯು, ಏವ = ಹೀಗೆ ಇವುಗಳಲ್ಲಿ ಯಾವುದೇ ರೀತಿಯ ಭೇದವಿಲ್ಲ.

ತತ್ರ = ಆ ಪರಾಪರ ವಿದ್ಯೆಗಳಲ್ಲಿ, ಅಪರಾ = ಅಪರವಿದ್ಯೆಯು, ಋಗ್ವೇದಃ = ಋಗ್ವೇದವು, ಯಜುರ್ವೇದಃ = ಯಜುರ್ವೇದವು, ಸಾಮವೇದಃ = ಸಾಮವೇದವು, ಅಥರ್ವವೇದಃ = ಅಥರ್ವವೇದವು, ಶಿಕ್ಷಾ = ವರ್ಣ ಮುಂತಾದವುಗಳ ಸ್ಥಾನ, ಪ್ರಯತ್ನ ಮುಂತಾದವುಗಳನ್ನು ನಿರೂಪಿಸುವ ಶಿಕ್ಷಾ ಶಾಸ್ತ್ರವು, ಕಲ್ಪಃ = ಪ್ರಸಿದ್ಧವಾದ ಯಾಜ್ಞೀಯ ಕರ್ಮಗಳನ್ನು ಬೋಧನೆ ಮಾಡುವ ಧರ್ಮಶಾಸ್ತ್ರ ಗ್ರಂಥಗಳು, ವ್ಯಾಕರಣಂ = ಶಬ್ದಶಾಸ್ತ್ರವು, ನಿರುಕ್ತಂ = ಶಬ್ದಗಳ ನಿರ್ವಚನೆಯನ್ನು ಮಾಡುವ ನಿರುಕ್ತ ಗ್ರಂಥವು, ಛಂದಃ = ಗಾಯತ್ರೀ, ಉಷ್ಣಿಕ್ ಮುಂತಾದ ಛಂದಸ್ಸಿನ ಲಕ್ಷಣವನ್ನು ನಿರೂಪಣೆ ಮಾಡುವ ಛಂದಶ್ಶಾಸ್ತ್ರವು, ಜ್ಯೋತಿಷಂ = ಯಾಜ್ಞೀಯ ಕರ್ಮಗಳನ್ನು ಆಚರಣೆ ಮಾಡಲು ಬೇಕಾಗುವ ಕಾಲಗಳ ನಿರ್ಣಾಯಕವಾದ ಜ್ಯೋತಿಶ್ಶಾಸ್ತ್ರವು, ಇತಿ = ಹೀಗೆಂಬುದಾಗಿ;

ಋಗಾದಿಶಾಸ್ತ್ರಗಳು ಪರವಿದ್ಯಾ ಹಾಗೂ ಅಪರವಿದ್ಯಾ ಎಂಬುದಾಗಿ ಎರಡು ವಿಧವಾಗಿರುತ್ತದೆ. ಅವುಗಳಲ್ಲಿ ಯಾವ ಶಾಸ್ತ್ರದಿಂದ ಭಗವಂತನ ಜ್ಞಾನವು ಬರುತ್ತದೋ ಅದು ಪರವಿದ್ಯೆ, ಅದೇ ವಿದ್ಯೆಯು ಭಗವಂತನ ಜ್ಞಾನಕ್ಕೆ ಪ್ರಯೋಜಕವಾಗದೇ ಇದ್ದಾಗ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ ಎಂದಭಿಪ್ರಾಯ.

## ಭಗವಂತನೇ ಪ್ರತಿಪಾದ್ಯನಾದಾಗ ಪರವಿದ್ಯೆ

ಅಥ ಪರಾ ಯಯಾ ತದಕ್ಷರಮಧಿಗಮ್ಯತೇ। ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮ- ಚಕ್ಷುಃಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ'' ಇತಿ।







**ಅನುವಾದ –** ಯಾವ ಜ್ಞಾನದಿಂದ ಅಕ್ಷರವಾಚ್ಯನಾದ ಭಗವಂತನು ತಿಳಿಯುತ್ತಾನೋ, ಅದೇ ಪರವಿದ್ಯೆ ಎನಿಸುತ್ತದೆ. ಇಂದ್ರಿಯಗಳಿಂದ ಗೋಚರವಲ್ಲದ್ದು, ಮನಸ್ಸಿನಿಂದ ತಿಳಿಯಲ್ಪಡದೇ ಇರುವುದು, ಜನನರಹಿತವಾದದ್ದು, ವರ್ಣರಹಿತವಾದದ್ದು, ಪ್ರಾಕೃತವಾದ ಪಾಣಿ, ಪಾದಗಳಿಲ್ಲದ್ದು, ನಿತ್ಯವಾದದ್ದು, ಸರ್ವತ್ರ ವ್ಯಾಪ್ತವಾದ್ದು, ಅತ್ಯಂತ ಸೂಕ್ಷ್ಮವಾದದ್ದು ಯಾವುದಿದೆಯೋ, ಅದು ಅಕ್ಷರ ಎನಿಸುತ್ತದೆಂದು ಜ್ಞಾನಿಗಳು ತಿಳಿಯುತ್ತಾರೆ.

**ಪ್ರತಿಪದಾರ್ಥ –** ಅಥ = ಅನಂತರದಲ್ಲಿ, ಯಯಾ = ಯಾವ ಜ್ಞಾನದಿಂದ, ತತ್ = ಆ, ಅಕ್ಷರಂ = ಅಕ್ಷರವಾಚ್ಯನಾದ ಭಗವಂತನು, ಅಧಿಗಮ್ಯತೇ = ತಿಳಿಯಲ್ಪಡುತ್ತಾನೋ ಅದು ಪರಾ = ಪರವಿದ್ಯೆಯು, ಎಂಬುದಾಗಿ;

ಯತ್ ತತ್ = ಯಾವ ಅಕ್ಷರವು, ಅದ್ರೇಶ್ಯಂ = ಬಾಹ್ಯೇಂದ್ರಿಯಗಳಿಂದ ಗೋಚರವಲ್ಲದ್ದು, ಅಗ್ರಾಹ್ಯಂ = ಮನಸ್ಸಿನಿಂದಲೂ ಸಹ, ಸಾಕಲ್ಯೇನ ವಿಷಯವಾಗದೇ ಇರುವುದು ಅಥವಾ ಅಯೋಗ್ಯವಾದ ಮನಸ್ಸಿಗೆ ವಿಷಯವಾಗದೇ ಇರುವುದು, ಅಗೋತ್ರಂ = ಜನನ ರಹಿತವಾದ್ದರಿಂದ ಲೌಕಿಕರಂತೆ ಗೋತ್ರರಹಿತವಾದದ್ದು, ಅವರ್ಣಂ = ಬ್ರಾಹ್ಮಣ ಮುಂತಾದ ವರ್ಣರಹಿತವಾದದ್ದು, ಅಚಕ್ಷುಃ ಶ್ರೋತ್ರಂ ಅಪಾಣಿಪಾದಂ = ಪ್ರಾಕೃತವಾದ ಕಣ್ಣು, ಶ್ರೋತ್ರೇಂದ್ರಿಯ, ಕಿವಿ, ಹಸ್ತ, ಪಾದ ಮುಂತಾದವುಗಳು ಇಲ್ಲದೇ ಇರತಕ್ಕದ್ದು, ನಿತ್ಯಂ = ಚತುರ್ವಿಧವಾದ ನಾಶರಹಿತವಾದದ್ದು, ವಿಭುಂ = ಸರ್ವತ್ರ ವ್ಯಾಪ್ತವಾದದ್ದು, ಸರ್ವಗತಂ = ಸರ್ವಸಮರ್ಥವಾದದ್ದು, ಸುಸೂಕ್ಷ್ಮಂ = ಅತ್ಯಂತ ಸೂಕ್ಷ್ಮವಾದದ್ದು, ಯತ್ = ಯಾವುದೋ, ತತ್ = ಅಂತಹ, ಅವ್ಯಯಂ = ಯಾವಾಗಲೂ ಏಕಪ್ರಕಾರವಾಗಿರುವ ವಸ್ತುವನ್ನು, ಧೀರಾಃ = ಜ್ಞಾನಿಗಳು, ಭೂತಯೋನಿಂ = ಎಲ್ಲಾ ಜಗತ್ತಿಗೂ ಕಾರಣವನ್ನಾಗಿ, ಪರಿಪಶ್ಯಂತಿ = ತಿಳಿಯುತ್ತಾರೆ, ಇತಿ = ಹೀಗೆ.

**ವಿವರಣೆ –** ಈ ಬ್ರಹ್ಮವಿದ್ಯೆಯ ಋಷಿಪರಂಪರೆಯನ್ನು ಹೇಳಿದ ಅನಂತರದಲ್ಲಿ ಈ ವಿದ್ಯೆಯಿಂದ ಪ್ರತಿಪಾದ್ಯವಾದ ದೇವತೆಯನ್ನು ಶೌನಕರು ಅಂಗಿರಸರಿಗೆ ಉಪದೇಶ ಮಾಡಿದ್ದಾರೆ. ಯಾವ ಅಕ್ಷರನ ಬಗ್ಗೆ ನೀನು ಪ್ರಶ್ನೆ ಮಾಡಿದ್ದೀಯೋ, ಅಂತಹ ಅಕ್ಷರನು ಬಾಹ್ಯೇಂದ್ರಿಯಗಳಿಗೆ ಅಗೋಚರನು, ಲೌಕಿಕರಂತೆ ಗೋತ್ರ ವರ್ಣಾದಿಗಳಿಂದ ರಹಿತನು ಪ್ರಾಕೃತವಾದ ಹಸ್ತಪಾದಾದಿ ಇಂದ್ರಿಯಗಳಿಂದಲೂ ರಹಿತನು ಹಾಗೂ ಅಪ್ರಾಕೃತವಾದ ದೇಹವುಳ್ಳವನು, ನಾಶರಹಿತನು, ಸರ್ವಸಮರ್ಥನು, ಸರ್ವವ್ಯಾಪಕನು, ಸಕಲ ಪ್ರಾಣಿಗಳಿಗೆ ಕಾರಣನು, ಯಾವತ್ತೂ ಗುಣಗಳಲ್ಲಿ, ರೂಪದಲ್ಲಿ, ಕ್ರಿಯೆಗಳಲ್ಲಿ ವ್ಯತ್ಯಾಸವಿಲ್ಲದವನಾದ್ದರಿಂದ ಏಕಪ್ರಕಾರನಾದ ಅಕ್ಷರನನ್ನು ಜ್ಞಾನಿಗಳು ಚಿಂತನೆ ಮಾಡುತ್ತಾರೆ ಎಂಬುದಾಗಿ ಈ ಪರಾಪರವಿದ್ಯೆಯ ಪ್ರತಿಪಾದ್ಯನಾದ ಭಗವಂತನ ಸ್ವರೂಪವನ್ನು ತಿಳಿಸಿದ್ದಾರೆ. ಆಥರ್ವಣದ ಪರವಿದ್ಯಾ ಪ್ರಕರಣದ ವೇದಭಾಗದ ಅಭಿಪ್ರಾಯ. ಈ

ವೇದಭಾಗಕ್ಕೆ ಶ್ರೀಮದಾಚಾರ್ಯರು ಭಾಷ್ಯವನ್ನು ಬರೆದು ಪರಾಪರವಿದ್ಯೆಗಳ ನಿಜವಾದ ಅಭಿಪ್ರಾಯ ಹಾಗೂ ಅವುಗಳ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ.

## ಪರವಿದ್ಯಾ ಅಪರವಿದ್ಯೆಗಳ ನಿರ್ಣಯ

**ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ।**

**ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ॥ ಇತಿ ಪರಮಸಂಹಿತಾಯಾಂ**

**ಋಗ್ಭಿಃ ..... ಪುರಾಣೈಃ। .....**

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ।**

**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ॥**

**ಅನುವಾದ** - ಯಾವಾಗ ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲವೆಂದು ಮೇಲ್ನೋಟಕ್ಕೆ ತಿಳಿಯುತ್ತದೋ, ಆಗ ಆ ಋಗ್ವೇದಾದಿಗಳು ಅಪರವಿದ್ಯೆ ಎನಿಸುತ್ತವೆ. ಯಾವಾಗ ವಿಷ್ಣುವಾಚಕಗಳೆಂದು ತಿಳಿಯುತ್ತವೋ, ಅದೇ ಋಗ್ವೇದಾದಿಗಳು ಪರವಿದ್ಯೆ ಎನಿಸುತ್ತವೆ. 'ಋಗ್ಭಿಃ', 'ಪುರಾಣೈಃ' 'ವೇದೇ ರಾಮಾಯಣೇ ಚೈವ' ಇತ್ಯಾದಿ ಪ್ರಮಾಣಗಳಿಂದ ವಿಷ್ಣುವೇ ಎಲ್ಲದರಿಂದಲೂ ಮುಖ್ಯವಾಗಿ ಪ್ರತಿಪಾದ್ಯನೆಂದು ತಿಳಿಯುತ್ತದೆ.

**ವಿವರಣೆ** – ಒಂದೇ ವಿದ್ಯೆಯು ಬೇರೆ ಬೇರೆ ದೃಷ್ಟಿಯಿಂದ ಪರವಿದ್ಯಾ ಹಾಗೂ ಅಪರವಿದ್ಯಾ ಎಂದು ಕರೆಸಿಕೊಳ್ಳುತ್ತದೆ. ಯಾವಾಗ ವಿಷ್ಣುವನ್ನು ಹೇಳದೇ ಕೇವಲ ಮೇಲ್ನೋಟಕ್ಕೆ ಕಾಣುವ ಕರ್ಮ, ದೇವತೆ, ವಿಧಿ, ನಿಷೇಧ ಇತ್ಯಾದಿಗಳು ವೇದದಿಂದ ಪ್ರತಿಪಾದ್ಯವಾಗುತ್ತವೋ (ವಿಷ್ಣುವಾಚಕವಾಗುವುದಿಲ್ಲವೋ) ಅಂತಹ ಋಗಾದಿ ವೇದವಿದ್ಯೆಗಳು ಅಪರಾವಿದ್ಯಾ ಎಂದು ಕರೆಸಿಕೊಳ್ಳುತ್ತವೆ. ವಿಷ್ಣುವಾಚಕವಾಗದೇ ಇರುವ ಸಂದರ್ಭದಲ್ಲಿ 'ಅಪರವಿದ್ಯಾ' ಶಬ್ದದಿಂದ ಪ್ರತಿಪಾದ್ಯವಾಗುತ್ತವೆ. ಅದೇ ವಿದ್ಯೆಯು ವೇದದಲ್ಲಿ ಇರುವ ಪ್ರಕೃತಿ, ಪ್ರತ್ಯಯ, ಸುಪ್ ಮುಂತಾದ ವಿಭಕ್ತಿ ಪ್ರತ್ಯಯಾದಿಗಳ ಸಹಿತವಾಗಿ ಭಗವಂತನನ್ನು ಹೇಳಿದಾಗ ಮತ್ತು ಭಗವಂತನ ಗುಣಗಳನ್ನೂ ಹೇಳಿದಾಗ ಅವುಗಳೇ 'ಪರವಿದ್ಯಾ' ಎಂದು ಕರೆಸಿಕೊಳ್ಳುತ್ತದೆ. ಹೀಗೆ ವೇದದಲ್ಲಿರುವ ಸ್ವರ, ವರ್ಣ, ಅಕ್ಷರ, ಶಬ್ದ ಇತ್ಯಾದಿಗಳೆಲ್ಲವೂ ಸಹ ಭಗವದ್ವಾಚಕವಾದಾಗ ಪರಮಾವಿದ್ಯಾ , ಪರವಿದ್ಯಾ ಎಂದು ಕರೆಸಿಕೊಳ್ಳುತ್ತವೆ.

ಯಜ್ಞದಲ್ಲಿ ಹೋತೃಗಳು ಋಗ್ವೇದದ ಮಂತ್ರಗಳಿಂದ ವಿಷ್ಣುವನ್ನು ಆಹ್ವಾನ ಮಾಡುತ್ತಾರೆ. ಅಧ್ವರ್ಯುಗಳು ಯಜುರ್ವೇದದ ಮಂತ್ರಗಳಿಂದ ವಿಷ್ಣುವನ್ನು ಉದ್ದೇಶ ಮಾಡಿ ಹೋಮ




ಮಾಡುತ್ತಾರೆ. ಉದ್ಗಾತೃಗಳು ಸಾಮವೇದದ ಮಂತ್ರಗಳಿಂದ ಭಗವಂತನನ್ನು ಧ್ಯಾನ ಮಾಡುತ್ತಾರೆ. ಕೆಲವರು ಅಥರ್ವಣವೇದ ಹಾಗೂ ಇತಿಹಾಸ ಪುರಾಣಗಳಿಂದ ಭಗವಂತನನ್ನೇ ಸ್ತೋತ್ರ ಮಾಡುತ್ತಾರೆ. ಇಂತಹ ಭಗವಂತನಿಗೆ ಸದೃಶವಾದ ಯಾವುದೇ ವಸ್ತುವು ಇಲ್ಲ, ಸಮವಾದ ವಸ್ತುವೂ ಇಲ್ಲ. ಉತ್ತಮವಾದ ವಸ್ತುವೂ ಸಹ ಇರುವುದಿಲ್ಲ. ಹೀಗೆ ತಿಳಿಯುವವರು ಭಾಗವತೋತ್ತಮರು. ಈ ಭಾಷ್ಯವಾಕ್ಯದಲ್ಲಿ ಸಕಲ ವೇದಾದಿ ಶಾಸ್ತ್ರಗಳಿಂದ ವಿಷ್ಣುವೇ ಪ್ರತಿಪಾದ್ಯ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ.

## ಮಹಾಭಾರತದಲ್ಲಿ ಬಂದ ವಾಕ್ಯದ ವಿವರಣೆ

ವೇದದಲ್ಲಿ, ರಾಮಾಯಣದಲ್ಲಿ, ಪುರಾಣದಲ್ಲಿ, ಮಹಾಭಾರತದಲ್ಲಿ ಈ ಎಲ್ಲಾ ಗ್ರಂಥಗಳ ಪ್ರಾರಂಭದ, ಮಧ್ಯದ ಹಾಗೂ ಅಂತ್ಯಗಳಲ್ಲಿ ಪ್ರತಿಪಾದ್ಯನಾದವನು ವಿಷ್ಣುವೇ. ನಾಲ್ಕುವೇದಗಳು, ಹದಿನೆಂಟು ಪುರಾಣಗಳು ಎಲ್ಲವೂ ಸಹ ಭಗವಂತನನ್ನೇ ತಿಳಿಸುತ್ತಿವೆ. ಬೇರೆ ಯಾರನ್ನೂ ಕೂಡ ತಿಳಿಸುವುದಿಲ್ಲ. ಉಪಕ್ರಮ, ಉಪಸಂಹಾರ ಮುಂತಾದ ಆರುವಿಧವಾದ ತಾತ್ಪರ್ಯಲಿಂಗಗಳಿಂದ ಭಗವಂತನನ್ನು ತಿಳಿಯಲು ಸಾಧ್ಯ . ಹೀಗೆ ಯಾರು ಉಪಕ್ರಮಾದಿಗಳಿಂದ ಭಗವಂತನನ್ನು ತಿಳಿಯಲು ಅಪೇಕ್ಷಿಸುತ್ತಾರೋ, ಅವರಿಗೆ ಸಕಲ ಶಾಸ್ತ್ರಗಳೂ ಸಹ ಭಗವಂತನೇ ಶಾಸ್ತ್ರಗಳಿಂದ ಪ್ರತಿಪಾದ್ಯ ಎಂಬುದಾಗಿ ಪ್ರತಿಪಾದಿಸುತ್ತವೆ. ವಾಕ ಹಾಗೂ ಅನುವಾಕ ಮುಂತಾದ ಯಜುರ್ವೇದದ ಪ್ರಕರಣ ವಿಶೇಷಗಳಲ್ಲಿ ಹಾಗೂ ಅಥರ್ವವೇದದ ಪ್ರಕರಣ ವಿಶೇಷವಾದ ನಿಷತ್ ಹಾಗೂ ಉಪನಿಷತ್ತುಗಳಲ್ಲಿ ಮತ್ತು ಸಾಮವೇದದ ವಿಶೇಷ ಮಂತ್ರಗಳಾದ ಗಾನಭಾಗಗಳಲ್ಲಿ ಭಗವಂತನ ಸೃಷ್ಟಿಕರ್ತೃತ್ವ ಸ್ಥಿತಿಕರ್ತೃತ್ವ ಮತ್ತು ಲಯಕರ್ತೃತ್ವದ ವರ್ಣನೆ ಇದೆ. ಇವುಗಳಿಂದ ಭಗವಂತನೇ ಸಕಲವೇದಪ್ರತಿಪಾದ್ಯ ಎಂಬ ವಿಷಯ ತಿಳಿಯುತ್ತದೆ.

ಇಲ್ಲಿ 'ಶಬ್ದಬ್ರಹ್ಮ ಪ್ರಶಾಮ್ಯತಿ' ಎಂಬ ವಾಕ್ಯಕ್ಕೆ ವಾದಿರಾಜರ ವಿವರಣೆ ಹೀಗಿದೆ – ಅನಂತವಾದ ಶಬ್ದರಾಶಿಗಳು ಋಗ್ವೇದ, ಯಜುಸ್, ಸಾಮ ಮುಂತಾದ ರೂಪವಾಗಿ ಭಗವಂತನ ಮಹಿಮೆಗಳನ್ನು ತಿಳಿಸುತ್ತಿವೆ. ಇವುಗಳಲ್ಲಿ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ ಮುಂತಾದ ತಾತ್ಪರ್ಯಲಿಂಗಗಳಿಂದ ಎಲ್ಲಾ ವೇದರಾಶಿಯು ಭಗವಂತನನ್ನು ಪ್ರತಿಪಾದನೆ ಮಾಡುತ್ತದೆ ಎಂದು ಜ್ಞಾನಿಯು ತಿಳಿಯುತ್ತಾನೆ. ಹೀಗೆ ತಿಳಿದ ಸಾಧಕನಿಗೆ ಶಬ್ದಬ್ರಹ್ಮ= ಶಬ್ದಾಭಿಮಾನಿನಿಯಾದ ಲಕ್ಷ್ಮೀದೇವಿಯು, ಪ್ರಶಾಮ್ಯತಿ = ಪರಮ ಸಂತುಷ್ಟಳಾಗುತ್ತಾಳೆ. ಅಂದರೆ ಆ ಸಾಧಕನಿಗೆ ಇಷ್ಟವಾದ ಸಕಲ ಅಭೀಷ್ಟಗಳನ್ನೂ ಸಹ ನೀಡುತ್ತಾಳೆ. ಇದಕ್ಕೆ ವಿರುದ್ಧವಾಗಿ ಭಗವಂತನನ್ನು ತಿಳಿಯದೇ ಮೇಲ್ನೋಟಕ್ಕೆ ಕಾಣುವ ಧರ್ಮಾದಿಗಳನ್ನೇ ತಿಳಿದ ಪಕ್ಷದಲ್ಲಿ ಆ ಲಕ್ಷ್ಮಿಯು ಅವನಿಗೆ ಇಷ್ಟಾರ್ಥವನ್ನು ನೀಡದೇ ವಿರುದ್ಧವಾದ ಅನಪೇಕ್ಷಿತವಾದ ದೋಷಗಳನ್ನು ನೀಡುತ್ತಾಳೆ. ತನ್ಮುಖಾಂತರ ಅವನಿಗೆ ಅನುಗ್ರಹ ಮಾಡದೇ ಶಾಪವನ್ನು ನೀಡುತ್ತಾಳೆ, ಕುಪಿತಳಾಗುತ್ತಾಳೆ ಎಂಬುದಾಗಿ ವಿವರಣೆಯನ್ನು ನೀಡಿದ್ದಾರೆ.







## ಮಹಾಭಾರತದಲ್ಲಿ ಬಂದ ಮತ್ತೊಂದು ವಾಕ್ಯ

'ವೇದೈಶ್ಚ ಸರ್ವೈಃ ಅಹಮೇವ ವೇದ್ಯಃ ವೇದಾಂತಕೃತ್ ವೇದವಿದೇವ ಚಾಹಂ' ಎಂಬುದಾಗಿ. ಗೀತೆಯಲ್ಲಿ ಸಕಲ ವೇದದಿಂದಲೂ ನಾನೇ ವೇದ್ಯನು ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರವನ್ನು ರಚನೆ ಮಾಡಿದವನೂ ಸಕಲ ವೇದಗಳ ಅರ್ಥವನ್ನು ಬಲ್ಲವನೂ ಆಗಿದ್ದೇನೆಂಬುದಾಗಿ ಮಹಾಭಾರತದಲ್ಲಿ ತನ್ನ ಸ್ವರೂಪವನ್ನು ತಾನೇ ತಿಳಿಸಿದ್ದಾನೆ. ಇದರಲ್ಲಿಯೂ ಸಹ ಸಕಲ ವೇದಪ್ರತಿಪಾದ್ಯತ್ವವು ಮುಖ್ಯವಾಗಿ ಭಗವಂತನಿಗೇ ಇರುತ್ತದೆ. ಉಳಿದ ಧರ್ಮಾದಿಗಳಿಗಾಗಲೀ, ದೇವತಾದಿಗಳಿಗಾಗಲೀ, ಕರ್ಮಾದಿಗಳಿಗಾಗಲೀ ಸಕಲ ವೇದಪ್ರತಿಪಾದ್ಯತ್ವವು ಇರುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

## 'ಚತುರ್ದಶ ಮಹಾವಿದ್ಯಾಸ್ಥಾನಾನಿ ವೇದಿತವ್ಯಾನಿ ಭವಂತಿ' ಎಂಬುದರ ಅಭಿಪ್ರಾಯ

.... ಚತುರ್ದಶ ಮಹಾ ವಿದ್ಯಾಸ್ಥಾನಾನಿ ವೇದಿತವ್ಯಾನಿ ಭವಂತೀತಿ ಚ ಮೂಲಶ್ರುತಿಃ ||

ಅನುವಾದ - ಒಟ್ಟು ಹದಿನಾಕು ವಿದ್ಯಾಸ್ಥಾನಗಳಿವೆ. ಇದನ್ನು ಮೂಲವೇದವು ತಿಳಿಸಿದೆ.

**ವಿವರಣೆ** - ಹದಿನಾಲ್ಕು ಶಾಸ್ತ್ರಗಳಿವೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಇತಿಹಾಸ, ಪುರಾಣ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ, ಸ್ಮೃತಿಗಳು ಹಾಗೂ ಮೀಮಾಂಸಾ ಎಂದು. ಈ ಹದಿನಾಲ್ಕು ಶಾಸ್ತ್ರಗಳೂ ಸಹ ಭಗವಂತನೇ ಸರ್ವೋತ್ತಮ ಎಂಬ ಮೂಲ ಜ್ಞಾನಕ್ಕೆ ಸಾಧನವಾಗಿವೆ. ಹಾಗಾಗಿ ಈ ಮಹಾವಿದ್ಯೆಯನ್ನು ತಿಳಿಯುವುದಕ್ಕೆ ಸಾಧನವಾದ ಹದಿನಾಲ್ಕು ವಿದ್ಯೆಗಳನ್ನು ಪರವಿದ್ಯಾ ಎಂಬುದಾಗಿ ತಿಳಿದುಕೊಳ್ಳಬೇಕು ಎಂಬುದಾಗಿ ಮೂಲವೇದದ ವಾಕ್ಯವು ಭಗವಂತನನ್ನು ತಿಳಿಸಲು ಹದಿನಾಲ್ಕು ವಿದ್ಯೆಗಳು ಸಾಧನ ಎಂಬ ಅಂಶವನ್ನು ತಿಳಿಸುತ್ತಿದೆ.

## ವೇದ ಹಾಗೂ ಪಂಚರಾತ್ರಗಳು ಕೇವಲ ವಿಷ್ಣುವನ್ನೇ ತಿಳಿಸುತ್ತವೆ

ಪಂಚರಾತ್ರಂ ಋಗಾದ್ಯಾಶ್ಚ ಸರ್ವಮೇಕಂ ಪುರಾऽಭವತ್

ಮೂಲವೇದ ಇತಿ ಖ್ಯಾತ್ಯಾ ಕಾಲೇ ಕೃತಯುಗೇ ತದಾ || .........

ತಸ್ಮಾತ್ಕಾರ್ಯಯುಗಾ ಜನಾಃ ಪ್ರಾಪ್ನುವಂತಿ ಹರಿಂ ತಂ ಚ ತಸ್ಮಾದ್ವೇದೇ ನ ಕಿಂಚ ನ ||

ಪಾರಾವರ್ಯಂ .........





ಮಾಡುತ್ತಾರೆ. ಉದ್ಗಾತೃಗಳು ಸಾಮವೇದದ ಮಂತ್ರಗಳಿಂದ ಭಗವಂತನನ್ನು ಧ್ಯಾನ ಮಾಡುತ್ತಾರೆ. ಕೆಲವರು ಅಥರ್ವಣವೇದ ಹಾಗೂ ಇತಿಹಾಸ ಪುರಾಣಗಳಿಂದ ಭಗವಂತನನ್ನೇ ಸ್ತೋತ್ರ ಮಾಡುತ್ತಾರೆ. ಇಂತಹ ಭಗವಂತನಿಗೆ ಸದೃಶವಾದ ಯಾವುದೇ ವಸ್ತುವು ಇಲ್ಲ, ಸಮವಾದ ವಸ್ತುವೂ ಇಲ್ಲ. ಉತ್ತಮವಾದ ವಸ್ತುವೂ ಸಹ ಇರುವುದಿಲ್ಲ. ಹೀಗೆ ತಿಳಿಯುವವರು ಭಾಗವತೋತ್ತಮರು. ಈ ಭಾಷ್ಯವಾಕ್ಯದಲ್ಲಿ ಸಕಲ ವೇದಾದಿ ಶಾಸ್ತ್ರಗಳಿಂದ ವಿಷ್ಣುವೇ ಪ್ರತಿಪಾದ್ಯ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ.

## ಮಹಾಭಾರತದಲ್ಲಿ ಬಂದ ವಾಕ್ಯದ ವಿವರಣೆ

ವೇದದಲ್ಲಿ, ರಾಮಾಯಣದಲ್ಲಿ, ಪುರಾಣದಲ್ಲಿ, ಮಹಾಭಾರತದಲ್ಲಿ ಈ ಎಲ್ಲಾ ಗ್ರಂಥಗಳ ಪ್ರಾರಂಭದ, ಮಧ್ಯದ ಹಾಗೂ ಅಂತ್ಯಗಳಲ್ಲಿ ಪ್ರತಿಪಾದ್ಯನಾದವನು ವಿಷ್ಣುವೇ. ನಾಲ್ಕುವೇದಗಳು, ಹದಿನೆಂಟು ಪುರಾಣಗಳು ಎಲ್ಲವೂ ಸಹ ಭಗವಂತನನ್ನೇ ತಿಳಿಸುತ್ತಿವೆ. ಬೇರೆ ಯಾರನ್ನೂ ಕೂಡ ತಿಳಿಸುವುದಿಲ್ಲ. ಉಪಕ್ರಮ, ಉಪಸಂಹಾರ ಮುಂತಾದ ಆರುವಿಧವಾದ ತಾತ್ಪರ್ಯಲಿಂಗಗಳಿಂದ ಭಗವಂತನನ್ನು ತಿಳಿಯಲು ಸಾಧ್ಯ . ಹೀಗೆ ಯಾರು ಉಪಕ್ರಮಾದಿಗಳಿಂದ ಭಗವಂತನನ್ನು ತಿಳಿಯಲು ಅಪೇಕ್ಷಿಸುತ್ತಾರೋ, ಅವರಿಗೆ ಸಕಲ ಶಾಸ್ತ್ರಗಳೂ ಸಹ ಭಗವಂತನೇ ಶಾಸ್ತ್ರಗಳಿಂದ ಪ್ರತಿಪಾದ್ಯ ಎಂಬುದಾಗಿ ಪ್ರತಿಪಾದಿಸುತ್ತವೆ. ವಾಕ ಹಾಗೂ ಅನುವಾಕ ಮುಂತಾದ ಯಜುರ್ವೇದದ ಪ್ರಕರಣ ವಿಶೇಷಗಳಲ್ಲಿ ಹಾಗೂ ಅಥರ್ವವೇದದ ಪ್ರಕರಣ ವಿಶೇಷವಾದ ನಿಷತ್ ಹಾಗೂ ಉಪನಿಷತ್ತುಗಳಲ್ಲಿ ಮತ್ತು ಸಾಮವೇದದ ವಿಶೇಷ ಮಂತ್ರಗಳಾದ ಗಾನಭಾಗಗಳಲ್ಲಿ ಭಗವಂತನ ಸೃಷ್ಟಿಕರ್ತೃತ್ವ ಸ್ಥಿತಿಕರ್ತೃತ್ವ ಮತ್ತು ಲಯಕರ್ತೃತ್ವದ ವರ್ಣನೆ ಇದೆ. ಇವುಗಳಿಂದ ಭಗವಂತನೇ ಸಕಲವೇದಪ್ರತಿಪಾದ್ಯ ಎಂಬ ವಿಷಯ ತಿಳಿಯುತ್ತದೆ.

ಇಲ್ಲಿ 'ಶಬ್ದಬ್ರಹ್ಮ ಪ್ರಶಾಮ್ಯತಿ' ಎಂಬ ವಾಕ್ಯಕ್ಕೆ ವಾದಿರಾಜರ ವಿವರಣೆ ಹೀಗಿದೆ – ಅನಂತವಾದ ಶಬ್ದರಾಶಿಗಳು ಋಗ್ವೇದ, ಯಜುಸ್, ಸಾಮ ಮುಂತಾದ ರೂಪವಾಗಿ ಭಗವಂತನ ಮಹಿಮೆಗಳನ್ನು ತಿಳಿಸುತ್ತಿವೆ. ಇವುಗಳಲ್ಲಿ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ ಮುಂತಾದ ತಾತ್ಪರ್ಯಲಿಂಗಗಳಿಂದ ಎಲ್ಲಾ ವೇದರಾಶಿಯು ಭಗವಂತನನ್ನು ಪ್ರತಿಪಾದನೆ ಮಾಡುತ್ತದೆ ಎಂದು ಜ್ಞಾನಿಯು ತಿಳಿಯುತ್ತಾನೆ. ಹೀಗೆ ತಿಳಿದ ಸಾಧಕನಿಗೆ ಶಬ್ದಬ್ರಹ್ಮ = ಶಬ್ದಾಭಿಮಾನಿನಿಯಾದ ಲಕ್ಷ್ಮೀದೇವಿಯು, ಪ್ರಶಾಮ್ಯತಿ = ಪರಮ ಸಂತುಷ್ಟಳಾಗುತ್ತಾಳೆ. ಅಂದರೆ ಆ ಸಾಧಕನಿಗೆ ಇಷ್ಟವಾದ ಸಕಲ ಅಭೀಷ್ಟಗಳನ್ನೂ ಸಹ ನೀಡುತ್ತಾಳೆ. ಇದಕ್ಕೆ ವಿರುದ್ಧವಾಗಿ ಭಗವಂತನನ್ನು ತಿಳಿಯದೇ ಮೇಲ್ನೋಟಕ್ಕೆ ಕಾಣುವ ಧರ್ಮಾದಿಗಳನ್ನೇ ತಿಳಿದ ಪಕ್ಷದಲ್ಲಿ ಆ ಲಕ್ಷ್ಮಿಯು ಅವನಿಗೆ ಇಷ್ಟಾರ್ಥವನ್ನು ನೀಡದೇ ವಿರುದ್ಧವಾದ ಅನಪೇಕ್ಷಿತವಾದ ದೋಷಗಳನ್ನು ನೀಡುತ್ತಾಳೆ. ತನ್ಮುಖಾಂತರ ಅವನಿಗೆ ಅನುಗ್ರಹ ಮಾಡದೇ ಶಾಪವನ್ನು ನೀಡುತ್ತಾಳೆ, ಕುಪಿತಳಾಗುತ್ತಾಳೆ ಎಂಬುದಾಗಿ ವಿವರಣೆಯನ್ನು ನೀಡಿದ್ದಾರೆ.





## ಮಹಾಭಾರತದಲ್ಲಿ ಬಂದ ಮತ್ತೊಂದು ವಾಕ್ಯ

'ವೇದೈಶ್ಚ ಸರ್ವೈಃ ಅಹಮೇವ ವೇದ್ಯಃ ವೇದಾಂತಕೃತ್ ವೇದವಿದೇವ ಚಾಹಂ' ಎಂಬುದಾಗಿ. ಗೀತೆಯಲ್ಲಿ ಸಕಲ ವೇದದಿಂದಲೂ ನಾನೇ ವೇದ್ಯನು ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರವನ್ನು ರಚನೆ ಮಾಡಿದವನೂ ಸಕಲ ವೇದಗಳ ಅರ್ಥವನ್ನು ಬಲ್ಲವನೂ ಆಗಿದ್ದೇನೆಂಬುದಾಗಿ ಮಹಾಭಾರತದಲ್ಲಿ ತನ್ನ ಸ್ವರೂಪವನ್ನು ತಾನೇ ತಿಳಿಸಿದ್ದಾನೆ. ಇದರಲ್ಲಿಯೂ ಸಹ ಸಕಲ ವೇದಪ್ರತಿಪಾದ್ಯತ್ವವು ಮುಖ್ಯವಾಗಿ ಭಗವಂತನಿಗೇ ಇರುತ್ತದೆ. ಉಳಿದ ಧರ್ಮಾದಿಗಳಿಗಾಗಲೀ, ದೇವತಾದಿಗಳಿಗಾಗಲೀ, ಕರ್ಮಾದಿಗಳಿಗಾಗಲೀ ಸಕಲ ವೇದಪ್ರತಿಪಾದ್ಯತ್ವವು ಇರುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

## 'ಚತುರ್ದಶ ಮಹಾವಿದ್ಯಾಸ್ಥಾನಾನಿ ವೇದಿತವ್ಯಾನಿ ಭವಂತಿ' ಎಂಬುದರ ಅಭಿಪ್ರಾಯ

.... ಚತುರ್ದಶ ಮಹಾ ವಿದ್ಯಾಸ್ಥಾನಾನಿ ವೇದಿತವ್ಯಾನಿ ಭವಂತೀತಿ ಚ ಮೂಲಶ್ರುತಿಃ ॥

ಅನುವಾದ – ಒಟ್ಟು ಹದಿನಾಕು ವಿದ್ಯಾಸ್ಥಾನಗಳಿವೆ. ಇದನ್ನು ಮೂಲವೇದವು ತಿಳಿಸಿದೆ.

ವಿವರಣೆ – ಹದಿನಾಲ್ಕು ಶಾಸ್ತ್ರಗಳಿವೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಇತಿಹಾಸ, ಪುರಾಣ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ, ಸ್ಮೃತಿಗಳು ಹಾಗೂ ಮೀಮಾಂಸಾ ಎಂದು. ಈ ಹದಿನಾಲ್ಕು ಶಾಸ್ತ್ರಗಳೂ ಸಹ ಭಗವಂತನೇ ಸರ್ವೋತ್ತಮ ಎಂಬ ಮೂಲ ಜ್ಞಾನಕ್ಕೆ ಸಾಧನವಾಗಿವೆ. ಹಾಗಾಗಿ ಈ ಮಹಾವಿದ್ಯೆಯನ್ನು ತಿಳಿಯುವುದಕ್ಕೆ ಸಾಧನವಾದ ಹದಿನಾಲ್ಕು ವಿದ್ಯೆಗಳನ್ನು ಪರವಿದ್ಯಾ ಎಂಬುದಾಗಿ ತಿಳಿದುಕೊಳ್ಳಬೇಕು ಎಂಬುದಾಗಿ ಮೂಲವೇದದ ವಾಕ್ಯವು ಭಗವಂತನನ್ನು ತಿಳಿಸಲು ಹದಿನಾಲ್ಕು ವಿದ್ಯೆಗಳು ಸಾಧನ ಎಂಬ ಅಂಶವನ್ನು ತಿಳಿಸುತ್ತಿದೆ.

## ವೇದ ಹಾಗೂ ಪಂಚರಾತ್ರಗಳು ಕೇವಲ ವಿಷ್ಣುವನ್ನೇ ತಿಳಿಸುತ್ತವೆ

ಪಂಚರಾತ್ರಂ ಋಗಾದ್ಯಾಶ್ಚ ಸರ್ವಮೇಕಂ ಪುರಾಽಭವತ್

ಮೂಲವೇದ ಇತಿ ಹ್ಯಾಖ್ಯಾ ಕಾಲೇ ಕೃತಯುಗೇ ತದಾ ॥ .........

ತಸ್ಮಾತ್ಕಾರ್ಯಯುಗಾ ಜನಾಃ ಪ್ರಾಪ್ನುವಂತಿ ಹರಿಂ ತಂ ಚ ತಸ್ಮಾದ್ವೇದೇ ನ ಕಿಂಚ ನ ॥

ಪಾರಾವರ್ಯಂ .........





ವೇದೈಶ್ಚ ಪಂಚರಾತ್ರೈಶ್ಚ ಭಕ್ತ್ಯಾ ಯಜ್ಞೈಸ್ತಥೈವ ಚ ।

ದೃಶ್ಯೋऽಹಂ ನಾನ್ಯಥಾ ದೃಶ್ಯೋ ವರ್ಷಕೋಟಿ ಶತೈರಪಿ ॥ ಇತ್ಯಾದಿ ವಾರಾಹೇ ॥

**ಅನುವಾದ** - ಪಂಚರಾತ್ರ, ಋಗ್ವೇದಾದಿಗಳು ಎಲ್ಲವೂ ಕೂಡ ಕೃತಯುಗದಲ್ಲಿ ಮೂಲವೇದ ಎಂಬುದಾಗಿ ಒಂದೇ ಆಗಿದ್ದವು. ಆದ್ದರಿಂದ ಕೃತಯುಗದ ಜನರು ಪ್ರತಿಯೊಂದು ಶಬ್ದಗಳಿಂದ ಪರಮಾತ್ಮನನ್ನೇ ತಿಳಿಯುತ್ತಿದ್ದರು. ಪರಮಾತ್ಮನನ್ನು ಬಿಟ್ಟು, ಬೇರೆ ಯಾವುದನ್ನೂ ಕೂಡ ವೇದದಿಂದ ತಿಳಿಯುತ್ತಿರಲಿಲ್ಲ. ಇಂಥ ವೇದವು 'ಪಾರಾವರ್ಯ' ಎಂದು ಕರೆಸಿಕೊಳ್ಳುತ್ತದೆ.

ವೇದಗಳಿಂದ, ಪಂಚರಾತ್ರಗಳಿಂದ, ಭಕ್ತಿಯಿಂದ ಹಾಗೂ ಯಜ್ಞಗಳಿಂದ ನಾನು ತಿಳಿಯುತ್ತೇನೆ. ಇದನ್ನು ಬಿಟ್ಟು ನೂರುಕೋಟಿ ವರ್ಷ ಸಾಧನೆಗೈದರೂ ನಾನು ತಿಳಿಯಲಾರೆನು. ಹೀಗೆ ವರಾಹಪುರಾಣದಲ್ಲಿ ಹೇಳಲಾಗಿದೆ.

**ವಿವರಣೆ** - ಪಂಚರಾತ್ರ ಹಾಗೂ ಋಗ್ವೇದ ಮುಂತಾದ ಎಲ್ಲಾ ವೇದರಾಶಿಯೂ ಸಹ ಸೃಷ್ಟಿಯ ಪ್ರಾರಂಭದಲ್ಲಿ, ಏಕಂ ಆಭವತ್ = ಒಂದೇ ಆಗಿತ್ತು. ಆ ಕಾಲದಲ್ಲಿ ಯಾವುದೇ ರೀತಿಯ ವಿಭಾಗ ಇರಲಿಲ್ಲ. ವೇದವನ್ನು 'ವೇದ' ಎಂಬ ಶಬ್ದದಿಂದಲೇ ಜನಗಳು ಕೃತಯುಗದಲ್ಲಿ ವ್ಯವಹಾರ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಮೂಲವೇದ ಎಂದು ಪ್ರಸಿದ್ಧವಾದ ವೇದವಾಙ್ಮಯವನ್ನು ಯಾವುದೇ ದೇವತಾದಿಗಳನ್ನು ಚಿಂತನೆ ಮಾಡದೇ ಕೇವಲ ಭಗವಂತನನ್ನೇ ಚಿಂತನೆ ಮಾಡಲು ಕೃತಯುಗದಲ್ಲಿ ಇದ್ದ ಸಾಧಕರು ಉಪಯೋಗಿಸುತ್ತಿದ್ದರು. ಕೃತಯುಗದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಇತ್ಯಾದಿಯಾದ ಯಾವುದೇ ವೇದಗಳ ವಿಭಾಗವೂ ಸಹ ಇರಲಿಲ್ಲ. ಇಷ್ಟು ಮಾತ್ರವಲ್ಲ ಇಂದ್ರ, ರುದ್ರ, ಬ್ರಹ್ಮ, ಗಣಪತಿ ಮುಂತಾದ ಯಾವುದೇ ನಾಮಗಳೂ ಸಹ ಬೇರೆ ದೇವತೆಗಳನ್ನು ಆ ಕಾಲದಲ್ಲಿ ಪ್ರತಿಪಾದನೆ ಮಾಡುತ್ತಿರಲಿಲ್ಲ. ಕೇವಲ ಭಗವಂತನನ್ನೇ ಪ್ರತಿಪಾದನೆ ಮಾಡುತ್ತಿದ್ದವು. ಬ್ರಹ್ಮ, ರುದ್ರ ಇತ್ಯಾದಿ ಎಲ್ಲಾ ನಾಮಗಳಿಂದಲೂ ಸಹ ಸಾಕ್ಷಾತ್ ವಾಚ್ಯನಾದವನು ಕೇವಲ ಭಗವಂತನೇ ಆಗಿದ್ದ.

ಕೃತಯುಗದ ಜನರು ಕೇವಲ ವಿಷ್ಣುವನ್ನೇ ಚಿಂತನೆ ಮಾಡುತ್ತಿದ್ದರು ದೇವತೆಗಳನ್ನೂ ಸಹ ವಿಷ್ಣುವಾಚಕವಾದ ಶಬ್ದಗಳಿಂದ ಚಿಂತನೆ ಮಾಡುತ್ತಿರಲಿಲ್ಲ. ಬ್ರಹ್ಮಾದಿ ಎಲ್ಲಾ ದೇವತೆಗಳೂ ಸಹ ಮನು ಎಂಬ ಶಬ್ದದಿಂದ ವಾಚ್ಯರಾಗಿದ್ದರು. ದೇವತೆಗಳನ್ನು ಆರಾಧನೆ ಮಾಡುವಾಗ ದೇವತೆಗಳಿಗೆ ದೇವತಾತ್ವೇನ ಆರಾಧನೆಯು ಆ ಸಂದರ್ಭದಲ್ಲಿ ಇರಲಿಲ್ಲ. ದೇವತೆ ಎಂದರೆ ಕೇವಲ ವಿಷ್ಣು ಒಬ್ಬನೇ. ಉಳಿದ ದೇವತೆಗಳು ಇಂದ್ರಾದಿಗಳ ಆರಾಧನೆಯನ್ನು ಮಾಡುವಾಗ ಅವರು ಲೋಕಕ್ಕೆ ಯಾವ ರೀತಿಯಾಗಿ ಉಪಕಾರ ಮಾಡಿದ್ದಾರೆಯೋ, ಗುರುವಾಗಿ, ತಂದೆಯಾಗಿ ಆ ರೀತಿಯಾಗಿ ಗುರುತ್ವ,





ಪಿತೃತ್ವ ಮುಂತಾದ ಧರ್ಮಗಳ ಮುಖಾಂತರ ದೇವತೆಗಳ ಆರಾಧನೆಯು ನಡೆಯುತ್ತಿತ್ತು. ಹೀಗೆ ಕೃತಯುಗದಲ್ಲಿದ್ದ ಎಲ್ಲಾ ಸಾಧಕರು ದೇವತಾನಾಮದಿಂದ ಬೇರೆ ದೇವತೆಗಳನ್ನು ಆರಾಧನೆ ಮಾಡದೇ ಕೇವಲ ವಿಷ್ಣುವನ್ನೇ ಆರಾಧನೆ ಮಾಡುತ್ತಿದ್ದರು. ಹಾಗಾಗಿ ಎಲ್ಲಾ ವೇದಗಳೂ ಸಹ ಕೇವಲ ವಿಷ್ಣುವಾಚಕವಾಗಿಯೇ ಇದ್ದವು. ಆ ಕೃತಯುಗದವಿದ್ಯೆಯಲ್ಲಿ ಪರವಿದ್ಯೆ, ಅಪರವಿದ್ಯೆ ಎಂಬ ಯಾವುದೇ ಭೇದವೂ ಸಹ ಇರಲಿಲ್ಲ. ಋಕ್ ವೇದದಿಂದ ಆರಂಭ ಮಾಡಿಕೊಂಡು ವ್ಯಾಖ್ಯಾನ, ಅನುವ್ಯಾಖ್ಯಾನದವರೆಗಿನ ಎಲ್ಲಾ ಶಬ್ದರಾಶಿಯೂ ಸಹ ಭಗವಂತನನ್ನೇ ಆ ಕಾಲದಲ್ಲಿ ಪ್ರತಿಪಾದನೆ ಮಾಡುತ್ತಿದ್ದವು. ಬೇರೆ ಯಾವ ವಿಭಾಗವೂ ಸಹ ಆ ಕೃತಯುಗದಲ್ಲಿ ಇರಲಿಲ್ಲ.

## ಕೃತಯುಗದಂತೆ ಕಲಿಯುಗದಲ್ಲೂ ಸಹ ಧರ್ಮವು ಮುಖ್ಯಧರ್ಮವೇ ಆಗಬೇಕು

ಕೃತಯುಗದಲ್ಲಿ ಯಾವುದೇ ರೀತಿಯ ವೇದದ ವಿಭಾಗವಿರಲಿಲ್ಲ. ಆ ಮೂಲರಾಶಿಯು ಮೂಲವೇದ ಎಂದು ಕರೆಸಿಕೊಂಡ ವೇದಭಾಗವು ತ್ರೇತಾಯುಗದಲ್ಲಿ ಋಕ್, ಯಜುಸ್, ಸಾಮ ಎಂಬುದಾಗಿ ಮೂರು ಭಾಗವನ್ನು ಹೊಂದಿತು. ಅನಂತರ ದ್ವಾಪರಯುಗದಲ್ಲಿ ಅಥರ್ವವೇದ ಹಾಗೂ ಪಂಚರಾತ್ರಗಳು ಸೇರಿಕೊಂಡು ಐದುಭಾಗವಾಗಿ ವಿಭಕ್ತವಾಯಿತು. ಕಲಿಯುಗಕ್ಕೆ ಬಂದಾಗ ಪ್ರಾಯಃ ಎಲ್ಲಾ ವೇದಭಾಗವೂ ಸಹ ನಾಶವಾದವು. ಬ್ರಹ್ಮಾದಿದೇವತೆಗಳು ಕೃತಯುಗದಲ್ಲಿ ಯಾವ ಧರ್ಮವನ್ನು ಆಚರಣೆ ಮಾಡುತ್ತಿದ್ದರೋ ಅದೇ ಧರ್ಮವನ್ನೇ ಕಲಿಯುಗದಲ್ಲೂ ಸಹ ಆಚರಣೆ ಮಾಡುತ್ತಾರೆ. ಆದರೆ ಅಶಕ್ತರು ಧರ್ಮವನ್ನು ಮಾಡಲು ಸಾಧ್ಯವಿಲ್ಲವಾದ್ದರಿಂದ ತ್ರೇತಾದಿಯುಗಗಳಲ್ಲಿ ಆಯಾ ಯುಗಾನುಸಾರವಾಗಿ ಧರ್ಮಗಳನ್ನು ಭಾಗಮಾಡುತ್ತಾ ಸುಲಭವಾದ ಧರ್ಮಗಳನ್ನು ತಿಳಿಸುತ್ತಿವೆ. ಹೀಗೆ ನಾರಾಯಣಸಂಹಿತೆ ಎಲ್ಲಾ ವೇದದ ಧರ್ಮಗಳನ್ನು ಯಾವ ಕಾಲದಲ್ಲಿ ಯಾವ ರೀತಿ ಆಚರಣೆ ಮಾಡಬೇಕೆಂಬ ಅಂಶವನ್ನು ತಿಳಿಸುತ್ತಿದೆ.

ವೇದೈಶ್ಚ ಪಂಚರಾತ್ರೈಶ್ಚ -

## ವರಾಹ ಪುರಾಣದಲ್ಲಿ ನೀಡಿದ ವಿವರಣೆ

ನಾಲ್ಕು ವೇದಗಳು ಹಾಗೂ ಪಂಚರಾತ್ರ, ಯಜ್ಞಗಳು ಇವುಗಳೆಲ್ಲವೂ ಸಹ ಭಗವಂತನನ್ನೇ ತಿಳಿಸುತ್ತಿವೆ. ಇವೆಲ್ಲವೂ ಸಹ ಭಕ್ತಿಪೂರ್ವಕವಾಗಿ ಭಗವಂತನನ್ನು ಚಿಂತನೆ ಮಾಡುತ್ತಾ ಕರ್ಮಾನುಷ್ಠಾನ ಮಾಡಿದಾಗ ಮಾತ್ರ ಭಗವಂತನ ದರ್ಶನ ಸಾಧ್ಯ. ವೇದ ಹಾಗೂ ಪಂಚರಾತ್ರಗಳಿಂದ ಹೊರತಾಗಿ ಬೇರೆ ಯಾವುದರಿಂದಲೂ ಸಹ ಅನೇಕ ಕೋಟಿ ವರ್ಷ ಪಯತ್ನ ಪಟ್ಟರೂ ಸಹ ಭಗವಂತನ ದರ್ಶನವು ಸಾಧ್ಯವಿಲ್ಲ. ಹೀಗೆ ವರಾಹ ಪುರಾಣದಲ್ಲೇ ಭಗವಂತನು ತನ್ನ ದರ್ಶನವಾಗಬೇಕಾದರೆ ತಾನು ಸಾಧಕರಿಗೆ ಅಪರೋಕ್ಷವನ್ನು ನೀಡಬೇಕಾದರೆ ವೇದ ಹಾಗೂ ಪಂಚರಾತ್ರಾದಿಗಳಿಂದ ತಾನೊಬ್ಬನೇ ಪ್ರತಿಪಾದ್ಯ ಎಂಬ ಅಂಶವನ್ನು ಚಿಂತನೆ ಮಾಡಬೇಕು.

ಆಗಷ್ಟೇ ತಾನು ಲಭ್ಯ ಎಂಬ ಅಂಶವನ್ನು ತಿಳಿಸಿದ್ದಾನೆ. ಹೀಗೆ ಸಮಗ್ರವಾದ ವೇದ ಹಾಗೂ ಪಂಚರಾತ್ರಗಳು ಪರವಿದ್ಯಾ ಎಂಬ ಅಂಶವನ್ನು ಸ್ಪಷ್ಟಪಡಿಸಲಾಗಿದೆ.

## ವೇದವಿದ್ಯೆಗೂ ಪರವಿದ್ಯೆಗೂ ಭೇದವಿಲ್ಲ

ಅತ್ರಾಪಿ ತದೇತತ್ಸತ್ಯಂ ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯನ್ ಇತ್ಯಾದಿನಾ ಕರ್ಮವಿಷಯಾಮಪರವಿದ್ಯಾಮುಕ್ತ್ವಾ ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಂ ಇತ್ಯಾರಭ್ಯ ಆಥರ್ವಣಾನೇವ ಮಂತ್ರಾನ್ ಪರವಿದ್ಯಾತ್ವೇನಾಹ

ಚತುರ್ವೇದ ಸಂಸ್ಕಾರವತಾಮೇವ ಚ ವಿದ್ಯಾಯಾಮಧಿಕಾರ ಉಕ್ತಃ । ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮಿತಿ ॥

(- ಆಥರ್ವಣೋಪನಿಷದ್ಭಾಷ್ಯಂ ಖಂಡ - 9)

ಅನುವಾದ - ಆಥರ್ವಣೋಪನಿಷತ್ತಿನಲ್ಲೂ ಕೂಡ 'ತದೇತತ್ಸತ್ಯಂ ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯನ್' ಇತ್ಯಾದಿ ವಾಕ್ಯಗಳಿಂದ ಕರ್ಮವಿಷಯಕವಾದ ಮಂತ್ರವು ಅಪರವಿದ್ಯೆಯಾಗುತ್ತದೆ ಎಂದು ಹೇಳಲಾಗಿದೆ. ಅನಂತರ 'ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಂ' ಎಂಬಲ್ಲಿಂದ ಪ್ರಾರಂಭಿಸಿ ಇದೇ ಕರ್ಮವಿಷಯಕವಾದ ಮಂತ್ರಗಳೇ ಭಗವತ್ಪರವಾದಾಗ ಪರವಿದ್ಯೆ-ಯಾಗುತ್ತವೆಂದು ಹೇಳಲಾಗಿದೆ. ಮತ್ತು ಆಯಾ ಶಾಖೆಯವರಿಗೆ ಆಯಾ ಶಾಖೆಯಲ್ಲಿ ಹೇಳಿದ ಸಂಸ್ಕಾರವನ್ನು ವಿಧಿಸಲಾಗಿದೆ. ತಮ್ಮ ಶಾಖೆಗೆ ಅನುಗುಣವಾದ ಸಂಸ್ಕಾರ ಹೊಂದಿದವರಿಗೆ ಈ ಪರವಿದ್ಯೆಯಲ್ಲಿ ಅಧಿಕಾರವನ್ನು ಹೇಳಲಾಗಿದೆ. 'ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ ॥' ಇದರಿಂದ ವೇದಕ್ಕೆ ಯಾರು ಅಧಿಕಾರಿಗಳೋ, ಅವರೇ ಬ್ರಹ್ಮವಿದ್ಯೆಗೂ ಕೂಡ ಅಧಿಕಾರಿಗಳಾಗಿದ್ದಾರೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ವೇದವಿದ್ಯೆ ಹಾಗೂ ಬ್ರಹ್ಮವಿದ್ಯೆಗೆ ಐಕ್ಯವು ಸಿದ್ಧವಾಗುತ್ತದೆ.

ವಿವರಣೆ - ಋಗಾದಿ ಎಲ್ಲಾ ವೇದಗಳೂ ಸಹ ಭಗವಂತನನ್ನೇ ತಿಳಿಸುತ್ತಿವೆ. ಇದೇ ಪರವಿದ್ಯೆಯೇ ಹೊರತು ಉಪನಿಷತ್ತು ಉಪವಿದ್ಯೆ ಎಂಬ ನಿಯಮವು ಆಥರ್ವರಿಗೆ ಇಲ್ಲ. ಆಥರ್ವ ಋಷಿಗಳೂ ಸಹ ಭಗವಂತನನ್ನು ತಿಳಿಸುವ ವಿದ್ಯೆಯೇ ಪರವಿದ್ಯೆ ಎಂದು ಅಭಿಪ್ರಾಯ ಪಡುತ್ತಾರೆಯೇ ಹೊರತು ಕೇವಲ ಉಪನಿಷತ್ತು ಮಾತ್ರವೇ ಪರವಿದ್ಯೆ ಎಂಬ ನಿಯಮವನ್ನು ಅಂಗೀಕಾರ ಮಾಡುವುದಿಲ್ಲ. ಇದಕ್ಕೆ ಕಾರಣ 'ತದೇತತ್ ಸತ್ಯಂ ಮಂತ್ರೇಷು ಕರ್ಮಾಣಿ' ಇತ್ಯಾದಿ ಮಂತ್ರಗಳನ್ನು ಹೇಳಲಾಗಿದೆ. ಇವೆಲ್ಲವೂ ಸಹ ಕರ್ಮವಿಷಯಕವಾಗಿದೆ. ಕರ್ಮವಿಷಯಕವಾದ ಈ ವಿದ್ಯೆಯು ಅಪರವಿದ್ಯಾ ಎಂದು ಕರೆಸಿಕೊಳ್ಳುತ್ತದೆ. ಇದನ್ನು ಹೇಳಿ ಅನಂತರ ಬ್ರಹ್ಮನನ್ನು ತಿಳಿಸುವ 'ಯೇನಾಕ್ಷರಂ

ಪುರುಷಂ' ಎಂಬ ಅಥರ್ವ ಮಂತ್ರಗಳನ್ನು ಈ ಪ್ರಕರಣದಲ್ಲಿ ಉಪದೇಶ ಮಾಡಲಾಗಿದೆ. ಯಾವ ವೇದಭಾಗವು ವಿಷ್ಣುಪರವಾಗಿದೆಯೋ ಅದು ಪರವಿದ್ಯಾ ಎಂಬ ವಿಷಯವನ್ನು ತಿಳಿಸಿದ ನಂತರ ಆಪಾತತಃ ಕರ್ಮಾದಿಗಳನ್ನು ನಿರೂಪಣೆ ಮಾಡುವಂತೆ ನೇರಭಾಗಗಳಿದ್ದರೂ ಸಹ ವಸ್ತುತಃ ಅದು ವಿಷ್ಣುಪರವೇ ಆಗಿದೆ. ಆ ವೇದಭಾಗವು ವಿಷ್ಣುಪರ ಎಂದು ಯಾರು ಚಿಂತನೆ ಮಾಡುತ್ತಾರೋ ಆಗ ಅದು ಪರವಿದ್ಯಾ ಎಂದು ಕರೆಸಿಕೊಳ್ಳುತ್ತದೆ ಎಂಬುದಾಗಿ ಅಥರ್ವ ಋಷಿಗಳ ಅಭಿಪ್ರಾಯವಾಗಿದೆ. ಹಾಗೂ ತಮ್ಮ ತಮ್ಮ ಶಾಖೆಯಲ್ಲಿ ಹೇಳಿದ ಯೋಗ್ಯವಾದ ಯಾವ ಸಂಸ್ಕಾರವನ್ನು ಯಾರು ಪಡೆದುಕೊಂಡಿದ್ದಾರೋ ಅಂತಹ ಸಂಸ್ಕೃತರಾದ ಸಾಧಕರಿಗೆ ಮಾತ್ರವೇ ಈ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ ಹೊರತು ಬೇರೆಯವರಿಗೆ ಈ ವಿದ್ಯೆಯಲ್ಲಿ ಅಧಿಕಾರವಿಲ್ಲ ಎಂಬುದೂ ಸಹ ಅಂಗೀರಸರ ಉಪದೇಶದಿಂದ ಸ್ಪಷ್ಟವಾಗುತ್ತದೆ. ಹೀಗಾಗಿ ಋಗಾದಿ ವೇದಾಧ್ಯಯನದಲ್ಲಿ ಯಾರು ಸಂಸ್ಕೃತರಾಗಿ ಅಧಿಕಾರಿಗಳಾಗಿದ್ದಾರೋ ಅವರಿಗೇ ಬ್ರಹ್ಮವಿದ್ಯೆಯಲ್ಲೂ ಸಹ ಅಧಿಕಾರ. ಒಂದು ವೇಳೆ ವೇದದ ಅಧಿಕಾರಿ ಹಾಗೂ ಬ್ರಹ್ಮವಿದ್ಯೆಗೆ ಅಧಿಕಾರಿಯು ಬೇರೆ ಬೇರೆಯಾದರೆ ಆಗ ಅವು ಬೇರೆ ಬೇರೆಯ ವಿಷಯಗಳನ್ನೇ ಹೇಳಬೇಕಾಗಿತ್ತು. ಆದರೆ ಋಗಾದಿ ವೇದಶಾಸ್ತ್ರಕ್ಕೂ, ಬ್ರಹ್ಮವಿದ್ಯೆಗೂ ಯಾವುದೇ ರೀತಿಯ ವಿಷಯಭೇದವು ಇಲ್ಲ. ಆದ್ದರಿಂದ ಈ ವಿದ್ಯೆಯ ಅಧಿಕಾರಿಗಳಲ್ಲೂ ಸಹ ಭೇದವು ಇಲ್ಲ. ಈ ಅಧಿಕಾರಿಯು ಒಬ್ಬನೇ ಆದ ಕಾರಣ ಸಕಲ ಋಗಾದಿ ಶಾಸ್ತ್ರಗಳೂ ಸಹ ಬ್ರಹ್ಮವಿದ್ಯೆಯನ್ನೇ ಪ್ರತಿಪಾದನೆ ಮಾಡುತ್ತವೆ ಎಂದರೆ ಪರವಿದ್ಯೆಯನ್ನೇ ಪ್ರತಿಪಾದನೆ ಮಾಡುತ್ತವೆ. ಪ್ರತಿ ವೇದರಾಶಿಯೂ ಸಹ ಪರವಿದ್ಯಾ ಎಂಬುದಾಗಿ ಈ ಭಾಷ್ಯದ ಭಾಗದಿಂದ ಸ್ಪಷ್ಟವಾಗುತ್ತದೆ.

## ಬ್ರಹ್ಮವಿದ್ಯೆ ಸಕಲವಿದ್ಯೆಗಳಿಗೆ ಆಶ್ರಯ

ಪ್ರತಿತಿಷ್ಠತ್ಯನಯೇತಿ ಪ್ರತಿಷ್ಠಾ ಸರ್ವವಿದ್ಯಾನಾಂ ಪ್ರತಿಷ್ಠಾ ಸರ್ವವಿದ್ಯಾ ಪ್ರತಿಷ್ಠಾ ತಾಂ ಸರ್ವವಿದ್ಯಾಪ್ರತಿಷ್ಠಾಖ್ಯಾಂ। ಬ್ರಹ್ಮವಿದ್ಯಾಜ್ಞಾನೇ ಸರ್ವವಿದ್ಯಾನಾಂ ಸಫಲತ್ವಾದಿತಿ ಭಾವಃ।

ಅನುವಾದ - 'ಪ್ರತಿತಿಷ್ಠತ್ಯನಯಾ ಪ್ರತಿಷ್ಠಾ' ಇತ್ಯಾದಿ ವ್ಯುತ್ಪತ್ತಿಯಿಂದ ಯಾವುದರಿಂದ ಜ್ಞಾನವು ಸ್ಥಿರವಾಗುತ್ತದೋ, ಅದನ್ನೇ ಪ್ರತಿಷ್ಠಾ ಎಂದು ವ್ಯವಹರಿಸಲಾಗುತ್ತದೆ. ಸಕಲವಿದ್ಯೆಗಳಿಗೆ ಆಶ್ರಯವಾದದ್ದು ಬ್ರಹ್ಮವಿದ್ಯೆಯೇ ಆಗಿದೆ. ಬ್ರಹ್ಮವಿದ್ಯೆಯನ್ನು ಪಡೆದರೆ ಉಳಿದೆಲ್ಲಾ ವಿದ್ಯೆಗಳು ಸಫಲವಾಗುತ್ತವೆಂದು ಅಭಿಪ್ರಾಯ.

ವಿವರಣೆ - 'ಸರ್ವವಿದ್ಯಾ ಪ್ರತಿಷ್ಠಾ' ಎಂಬಲ್ಲಿ 'ಪ್ರತಿಷ್ಠಾ' ಶಬ್ದಕ್ಕೆ 'ಪ್ರತಿಷ್ಠಾಖ್ಯಾ' ಎಂದರ್ಥ. 'ಪ್ರತಿಷ್ಠತಿ ಅನಯಾ ಇತಿ ಪ್ರತಿಷ್ಠಾ' ಯಾವುದರಿಂದ ಜ್ಞಾನವು ಸ್ಥಿರವಾಗಿ ಸ್ಥಾಪಿತವಾಗುತ್ತದೋ, ಅದನ್ನು 'ಪ್ರತಿಷ್ಠಾ' ಎಂಬ ಶಬ್ದದಿಂದ ವ್ಯವಹಾರ ಮಾಡಲಾಗಿದೆ. ಸರ್ವವಿದ್ಯೆಗಳಿಗೂ ಸಹ ಆಶ್ರಯವಾದದ್ದು ಬ್ರಹ್ಮವಿದ್ಯೆ. ಬ್ರಹ್ಮವಿದ್ಯೆಯನ್ನು ತಿಳಿದಾಗ ಎಲ್ಲಾ ವಿದ್ಯೆಗಳೂ ಸಹ ಸಫಲವಾಗುತ್ತವೆ.





ನಾವು ಮಾಡುವ ಎಲ್ಲಾ ಕರ್ಮಗಳೂ ಸಹ ಭಗವಂತನನ್ನು ಪಡೆಯುವುದಕ್ಕೋಸ್ಕರವೇ. ಭಗವಂತನ ಜ್ಞಾನವು ಬಂದರೆ ಸಕಲವಿದ್ಯೆಗಳೂ ಸಹ ಸಫಲವಾಗಿವೆ. ಸಫಲವಾದ ವಿದ್ಯೆಯೇ ಬ್ರಹ್ಮವಿದ್ಯೆ ಎಂಬುದಾಗಿ ಈ ಪ್ರತಿಷ್ಠಾ ಶಬ್ದದ ಅಭಿಪ್ರಾಯ.

## ಕರ್ಮಧಾರಯ ಸಮಾಸದಿಂದ ಪರಾಪರಾವಿದ್ಯೆಗಳಿಗೆ ಅಭೇದಸಮರ್ಥನೆ

ಪರಾವರಾಮಿತಿ ಪರಾ ಚ ಸಾ ಅವರಾ ಚ ಪರಾವರಾ ತಾಮಿತ್ಯರ್ಥಃ। ಋಗಾದಿವಿದ್ಯಾನಾಮೇವ ವಿವಕ್ಷಾಭೇದೇನ ಪರಾವರವಿದ್ಯಾತ್ವಂ ನ ತು ಪರಾವರವಿದ್ಯಯೋರ್ಭೇದೋಽಸ್ತೀತಿ ದರ್ಶಯಿತುಂ ಪರಾವರಾಮಿತಿ ಕರ್ಮಧಾರಯ ನಿರ್ದೇಶಃ। ಅಭೇದೇ ಕರ್ಮಧಾರಯ ಇತಿ ಪ್ರಸಿದ್ಧೇರಿತಿ ಬೋಧ್ಯಂ।

ಅನುವಾದ – 'ಪರಾ ಚ ಸಾ ಅವರಾ ಚ' ಎಂಬ ಸಮಾಸದಿಂದ ಪರ ಹಾಗೂ ಅಪರ ಎನಿಸಿದ ಋಗಾದಿ ವೇದಗಳು ಎಂಬುದಾಗಿ 'ಪರಾವರಾಮ್' ಎಂಬ ವಿಶೇಷಣವನ್ನು ನೀಡಲಾಗಿದೆ. ಇದರಿಂದ ವಿವಕ್ಷಾಭೇದದಿಂದ ಋಗಾದಿವಿದ್ಯೆಗಳೇ ಪರವಿದ್ಯೆ ಹಾಗೂ ಅಪರವಿದ್ಯೆಯೆಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಪರವಿದ್ಯೆಯೇ ಬೇರೆ, ಅಪರವಿದ್ಯೆಯೇ ಬೇರೆ ಎಂದು ತಿಳಿಯಬಾರದು. ಇದನ್ನು ತಿಳಿಸುವುದಕ್ಕಾಗಿ ಕರ್ಮಧಾರಯಸಮಾಸವನ್ನು ನಿರ್ದೇಶಿಸಲಾಗಿದೆ. ಅಭೇದವಿದ್ದಾಗ ಕರ್ಮಧಾರಯ ಸಮಾಸವನ್ನು ಮಾಡಬೇಕೆಂಬುದು ಲೋಕಪ್ರಸಿದ್ಧವಾದ ವಿಚಾರ.

ವಿವರಣೆ – ಎರಡನೆಯ ಮಂತ್ರದಲ್ಲಿ 'ಪರಾವರಾಮ್' ಎಂಬ ಶಬ್ದವಿದೆ. 'ಪರಾ ಚ ಸ ಅವರಾ ಚ' ಎಂದು ಇಲ್ಲಿ ಕರ್ಮಧಾರಯಸಮಾಸವನ್ನು ಮಾಡಬೇಕು. ಪರವೂ ಆದ, ಅವರವೂ ಆದ ವಿದ್ಯೆ ಎಂದರ್ಥ. ಋಗಾದಿ ವಿದ್ಯೆಗಳಿಗೆ ವಿವಕ್ಷಾಭೇದದಿಂದ ಪರತ್ವ, ಅವರತ್ವವು ಬರುತ್ತದೆ. ಹೊರತು, ಪರವಿದ್ಯೆ ಹಾಗೂ ಅವರವಿದ್ಯೆಗಳಿಗೆ ಭೇದವು ಇಲ್ಲ ಎಂಬುದನ್ನು ಸೂಚನೆ ಮಾಡಲು ಪರಾವರಾ ಎಂಬ ಶಬ್ದವನ್ನು ಪ್ರಯೋಗ ಮಾಡಲಾಗಿದೆ. ಕರ್ಮಧಾರಯಸಮಾಸವನ್ನು ಮಾಡುವಾಗ ಆ ವಿಶೇಷಣವಿಶೇಷ್ಯಗಳಿಗೆ ಅಭೇದವೇ ಇರುತ್ತದೆ. 'ಕೃಷ್ಣಸರ್ಪಃ' ಎಂದು ಶಬ್ದವನ್ನು ಪ್ರಯೋಗ ಮಾಡಿದಾಗ ಕಪ್ಪಾದ ಹಾವು ಎಂದು ಹಾವಿಗೂ ಅದರ ಕಪ್ಪು ಬಣ್ಣಕ್ಕೂ ಭೇದವಿರುವುದಿಲ್ಲ. ಅಭೇದ ಹಾಗೆಯೇ ಪರಾವರವಿದ್ಯೆ ಎಂದರೆ 'ಪರವೂ ಆದ ಅವರವೂ ಆದ ವಿದ್ಯೆ' ಎಂದು ಅಭಿಪ್ರಾಯ. ಹೀಗೆ ಪರಾವರಶಬ್ದದಲ್ಲಿರುವ ಸಮಾಸವೇ ಪರಾವರ ವಿದ್ಯೆಗಳಿಗೆ ಭೇದವಿಲ್ಲ, ಅಭೇದವಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ ಎಂಬುದು ಇಲ್ಲಿನ ಅಭಿಪ್ರಾಯ.

## ಅವಸ್ಥಾಭೇದದಿಂದಷ್ಟೇ ಭೇದ

ಪರೈವ ಪರಮಮುಖ್ಯಯಾ ವೃತ್ತ್ಯಾ ಭಗವತ್ಪ್ರತಿಪಾದಕತ್ವೋಪಾಧಿನಾ ಪರೈವ ಸತೀ ವಿದ್ಯಾ





ಅಮುಖ್ಯವೃತ್ತ್ಯಾ ಕರ್ಮಾದಿಪ್ರತಿಪಾದಕತ್ವೇನಾಪರಾ ಚ ಭವತಿ ನ ವಸ್ತುತೋ ವ್ಯಕ್ತಿಭೇದೋಽಸ್ತೀತಿ ಸೂಚಯಿತುಂ ಚೈವಶಬ್ದಃ ತಥಾಚ ಅವಸ್ಥಾಭೇದೇನೈವ ವಿದ್ಯಾ ದ್ವೈವಿಧ್ಯಂ ನ ವಸ್ತುತ ಇತಿ ಭಾವಃ ॥

ಅನುವಾದ - ಪರಮಮುಖ್ಯವೃತ್ತಿಯಿಂದ ಯಾವ ವಿದ್ಯೆಯು ಭಗವಂತನನ್ನು ಪ್ರತಿಪಾದನೆ ಮಾಡುತ್ತದೋ, ಅದೇ ಅಮುಖ್ಯವೃತ್ತಿಯಿಂದ ಕರ್ಮಾದಿಗಳನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ವಿವಕ್ಷಾಭೇದವನ್ನು ತಿಳಿಯಬೇಕು. ಹೊರತು, ಒಂದೇ ವಿದ್ಯೆಯೆಂಬ ವ್ಯಕ್ತಿಯಲ್ಲಿ ಭೇದವನ್ನು ತಿಳಿಯಬಾರದು. ಇದನ್ನು ತಿಳಿಸಲು 'ಚ' ಮತ್ತು 'ಏವ'ಶಬ್ದವನ್ನು ಉಪನಿಷತ್ತಿನಲ್ಲಿ ಪ್ರಯೋಗಿಸಲಾಗಿದೆ. ಆದ್ದರಿಂದ ಅವಸ್ಥಾಭೇದದಿಂದಷ್ಟೇ ವಿದ್ಯೆಯಲ್ಲಿ ದ್ವೈವಿಧ್ಯ ಹೊರತು ವಿದ್ಯೆಗತವಾಗಿ ಅಲ್ಲ ಎಂದಭಿಪ್ರಾಯ.

ವಿವರಣೆ – 'ಪರೈವ' ಎಂದರೆ ಪರಮಮುಖ್ಯವೃತ್ತಿಯಿಂದ ಭಗವಂತನನ್ನು ಪ್ರತಿಪಾದನೆ ಮಾಡುವ ವೃತ್ತಿಯು, ಅಮುಖ್ಯವೃತ್ತಿಯಿಂದ ಅಪರಾ ಎಂದು ಕರೆಸಿಕೊಳ್ಳುತ್ತದೆ. ಇಲ್ಲಿ ಉಪಾಧಿಯು ಬೇರೆ ಆಗಿದೆ. ಭಗವಂತನನ್ನು ಪ್ರತಿಪಾದನೆ ಮಾಡುವ ಭಗವತ್‌ಪ್ರತಿಪಾದಕತ್ವ ಎಂಬ ಉಪಾಧಿಯಿಂದ ಪರವಿದ್ಯಾ ಎಂಬುದಾಗಿ ವೇದಾದಿಶಾಸ್ತ್ರಗಳು ಕರೆಸಿಕೊಳ್ಳುತ್ತವೆ. ಅದೇ ಕರ್ಮಾದಿಪ್ರತಿಪಾದಕತ್ವ ಎಂಬ ಉಪಾಧಿಯಿಂದ ಗ್ರಸ್ತವಾದಾಗ ಅದೇ ಅಪರವಿದ್ಯಾ ಎಂಬುದಾಗಿ ಕರೆಸಿಕೊಳ್ಳುತ್ತವೆ, ವಸ್ತುತಃ ಸ್ವಾಭಾವಿಕಪರವಿದ್ಯೆ ಹಾಗೂ ಅಪರವಿದ್ಯೆಗಳಲ್ಲಿ ಭೇದವು ಇರುವುದಿಲ್ಲ ಎಂಬುದನ್ನು ಸೂಚನೆ ಮಾಡಲು ಉಪನಿಷತ್ತಿನಲ್ಲಿ 'ಚ' ಶಬ್ದವನ್ನು ಪ್ರಯೋಗ ಮಾಡಲಾಗಿದೆ. ಹಾಗಾಗಿ ಅವಸ್ಥಾಭೇದದಿಂದಷ್ಟೇ ವಿದ್ಯೆಯು ಎರಡುವಿಧ. ವಸ್ತುತಃ ವಿದ್ಯೆಯಲ್ಲಿ ವಿಭಾಗವು ಇರುವುದಿಲ್ಲವೆಂಬುದು 'ಚ' ಶಬ್ದದಿಂದ ಸೂಚಿತವಾದ ಅಭಿಪ್ರಾಯ.

## 'ಯದಾ ವಿಷ್ಣೋರ್ನ ವಾಚಕಾಃ' ಎಂಬುದಕ್ಕೆ ವ್ಯಾಖ್ಯಾನ

ಯದಾ ವಿಷ್ಣೋರ್ನ ವಾಚಕಾ ಇತಿ । ತ್ರೇತಾದಿಕಾಲಬಲೇನ ವಿಷ್ಣೋರನ್ಯತ್ರಾದರೇಣ ಸ್ವಕೀಯ-ಯೋಗ್ಯತಾವಶೇನ ಚ ಯದಾ ಋಗಾದ್ಯಾಃ ನ ವಿಷ್ಣೋರ್ವಾಚಕಾಃ ಕಿಂತು ಕರ್ಮಾದಿಪ್ರತಿಪಾದಕಾಃ ತದಾ ಋಗಾದ್ಯಾ ಅಪರಾ ವಿದ್ಯಾಃ । ಯದಾ ತು ಋಗಾದ್ಯಾಃ ಬ್ರಹ್ಮಮೀಮಾಂಸಾಶಾಸ್ತ್ರ-ವೃತ್ತ್ಯಾದಿತನ್ನ್ಯಾಯೋಪಕೃತಾ ಸಂತೋ ವಿಷ್ಣೋರ್ವಾಚಕಾಃ ತದಾ ತಾ ಏವ ಪರಮಾ ವಿದ್ಯಾಃ ಪರವಿದ್ಯಾ ಇತ್ಯರ್ಥಃ ।

ಅನುವಾದ - 'ಯದಾ ವಿಷ್ಣೋರ್ನ ವಾಚಕಾಃ' ಎಂಬುದಕ್ಕೆ ಹೀಗರ್ಥ - ತ್ರೇತಾದಿ ಕಾಲಬಲದಿಂದ ವಿಷ್ಣುವನ್ನು ಬಿಟ್ಟು ಬೇರೆಡೆ ತಮ್ಮ ಯೋಗ್ಯತೆಗೆ ಅನುಗುಣವಾಗಿ ಋಗಾದಿವಿದ್ಯೆಗಳು ವಿಷ್ಣುವನ್ನು ಪ್ರತಿಪಾದನೆ ಮಾಡಲಾರವು. ಕರ್ಮ, ದೇವತೆ ಮೊದಲಾದವುಗಳನ್ನು ಪ್ರತಿಪಾದನೆ ಮಾಡುವವು. ಆಗ ಆ ಋಗಾದಿವಿದ್ಯೆಗಳು

ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತವೆ. ಯಾವಾಗ ಅದೇ ಋಗಾದಿವಿದ್ಯೆಗಳು ಬ್ರಹ್ಮಮೀಮಾಂಸಾಶಾಸ್ತ್ರದಿಂದ ತಿಳಿಯಲ್ಪಡುವ ನ್ಯಾಯಗಳಿಂದ ಉಪಕೃತವಾಗುತ್ತವೋ, ಆಗ ವಿಷ್ಣುವಾಚಕಗಳಾಗುತ್ತವೆ. ಆಗಷ್ಟೇ ಪರವಿದ್ಯೆಯಾಗುತ್ತವೆ ಎಂದು.

**ವಿವರಣೆ** – 'ಯದಾ ವಿಷ್ಣೋ ನ ವಾಚಕಾಃ' ಅನ್ನುವ ಭಾಷ್ಯವಾಕ್ಯದ ಅಭಿಪ್ರಾಯ ಹೀಗಿದೆ - ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಅವರವರ ಯೋಗ್ಯತೆಗೆ ಅನುಗುಣವಾಗಿ ಸಾಧಕರು ಭಗವಂತನನ್ನು ಮಾತ್ರ ಆರಾಧನೆ ಮಾಡದೇ ಉಳಿದ ದೇವತೆಗಳನ್ನೂ ಸಹ ಆರಾಧನೆ ಮಾಡಲು ಪ್ರಾರಂಭಿಸಿದರು. ಭಗವಂತನನ್ನು ಬಿಟ್ಟು, ಉಳಿದ ದೇವತೆಗಳನ್ನು ಮತ್ತು ಕರ್ಮಾದಿಗಳನ್ನು ಯಾವಾಗ ಚಿಂತನೆ ಮಾಡಲು ಪ್ರಾರಂಭ ಮಾಡಿದರೋ, ಆಗ ಋಗಾದಿವಿದ್ಯೆಗಳು 'ಅಪರಾವಿದ್ಯಾ' ಎಂದು ಕರೆಸಿಕೊಳ್ಳಲು ಪ್ರಾರಂಭವಾದವು. ಕರ್ಮಾದಿಗಳನ್ನು ಪ್ರತಿಪಾದನೆ ಮಾಡುತ್ತವೆಂದು ವೇದಗಳನ್ನು ಚಿಂತನೆ ಮಾಡುವ ಕಾಲದಲ್ಲಿ ಆ ವೇದವಿದ್ಯೆಗೆ 'ಅಪರವಿದ್ಯೆ' ಎಂಬ ಹೆಸರು ಬಂದಿತು. ಇದೇ ವಿದ್ಯೆಯು ಭಗವಂತನನ್ನು ಮುಖ್ಯವಾಗಿ ತಿಳಿಸುತ್ತದೆ. ಹಾಗೇ ತಿಳಿಸುವಾಗ ಅದಕ್ಕೆ ಸಹಕಾರಿಯಾಗಿ ಬ್ರಹ್ಮಮೀಮಾಂಸಾಶಾಸ್ತ್ರವು ಬೇಕು. ವೇದದಲ್ಲಿರುವ ವಾಕ್ಯಗಳ ವಿರೋಧವನ್ನು ಪರಿಹಾರ ಮಾಡಿಕೊಂಡು ಮೀಮಾಂಸಾಶಾಸ್ತ್ರದಿಂದ ಸಿದ್ಧವಾದ ನ್ಯಾಯವನ್ನು ಆಧರಿಸಿ ವೇದಗಳು ಕೇವಲ ಭಗವದ್ವಾಚಕ ಎಂಬುದನ್ನು ಸಾಧಕನು ತಿಳಿಯುತ್ತಾನೆ. ಈ ರೀತಿ ತಿಳಿಯುವ ಸಂದರ್ಭದಲ್ಲಿ ಅದೇ ವೇದಗಳು 'ಪರಮಾ ವಿದ್ಯಾ' ಎಂದರೆ 'ಪರವಿದ್ಯಾ' ಎಂದು ಕರೆಸಿಕೊಂಡಿತು. ಹೀಗೆ ನ್ಯಾಯೋಪಕೃತವಾದ ಋಗಾದಿಗಳಿಗೆ ಪರವಿದ್ಯಾತ್ವವು, ನ್ಯಾಯಾನುಪಕೃತವಾದ ಕರ್ಮಾದಿ-ಪ್ರತಿಪಾದಕವಾದ ಋಗಾದಿಗಳಿಗೆ ಅಪರವಿದ್ಯಾತ್ವವು ಇಲ್ಲಿ ಸ್ಪಷ್ಟವಾಗಿದೆ.

## ಋಗಾದಿಗಳು ಕಾಲವಿಶೇಷದಲ್ಲಷ್ಟೇ ವಿಷ್ಣುವಾಚಕಗಳು

**ಯದಾ ವಿಷ್ಣೋಽಸ್ತು ವಾಚಕಾ ಇತಿ ಕಾಲವಿಶೇಷೇ ಋಗಾದೀನಾಂ ವಿಷ್ಣುವಾಚಕತ್ವಮುಕ್ತಮ್। ಯದಾ ಶಬ್ದಪ್ರಯೋಗಾತ್। ತತ್ಪ್ರಮಾಣೇನೈವೋಪಪಾದಯತಿ - ಪಂಚರಾತ್ರಮಿತಿ।**

**ಅನುವಾದ** - 'ಯದಾ ವಿಷ್ಣೋಽಸ್ತು ವಾಚಕಾಃ' ಎಂಬುದಾಗಿ ಕಾಲವಿಶೇಷದಲ್ಲಿ ಋಗಾದಿಗಳಿಗೆ ವಿಷ್ಣುವಾಚಕತ್ವವನ್ನು ಹೇಳಲಾಗಿದೆ. 'ಯದಾ' ಎಂಬ ಶಬ್ದಪ್ರಯೋಗದಿಂದ ಇದು ತಿಳಿಯುತ್ತದೆ. ಇದನ್ನೇ ಪ್ರಮಾಣಪುರಸ್ಸರವಾಗಿ ಉಪಪಾದನೆ ಮಾಡಲು 'ಪಂಚರಾತ್ರಂ' ಇತ್ಯಾದಿ ವಾಕ್ಯವು ಹೊರಟಿದೆ.

**ವಿವರಣೆ** - ಭಾಷ್ಯವಾಕ್ಯದಲ್ಲಿ ಕಾಲವನ್ನು ಸೂಚನೆ ಮಾಡುವ ಶಬ್ದವಿದೆ. ಕಾಲವಿಶೇಷವಾಚಕವಾದ 'ಯದಾ' ಎಂಬ ಶಬ್ದವು ಋಗಾದಿಗಳಿಗೆ ವಿಷ್ಣುವಾಚಕತ್ವವು ಯಾವ ಸಂದರ್ಭದಲ್ಲಿ ಎಂಬ ವಿಷಯವನ್ನು ತಿಳಿಸುತ್ತಿದೆ. ಕಾಲವಿಶೇಷದಲ್ಲಿ ಮಾತ್ರವೇ ಋಗಾದಿಗಳು ಕೇವಲ





ವಿಷ್ಣುವಾಚಕವಾಗಿದ್ದವು ಎಂಬ ಅಂಶವನ್ನು ತಿಳಿಸುವುದಕ್ಕೋಸ್ಕರ ಆಧಾರವಾದ ಪ್ರಮಾಣಗಳನ್ನು 'ಪಂಚರಾತ್ರಂ' ಇತ್ಯಾದಿ ವಾಕ್ಯಗಳಿಂದ ಆಚಾರ್ಯರು ಹೇಳಿದ್ದಾರೆ.

## ಮೂಲವೇದ ಎಂದರೇನು ?

**ತದೇತ್ಯಸ್ಯೈವ ವಿವರಣಂ ಕೃತಯುಗ ಇತಿ । ತತಶ್ಚ ಮೂಲವೇದಶಬ್ದೋ ಮೂಲಕಾರಣಮಾಚಷ್ಟೇ। ಮೂಲಕಾರಣಂ ಚ ವಿಷ್ಣುರೇವ । 'ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯಃ' ಇತಿ ನ್ಯಾಯಾತ್ । ಅತೋ ಮೂಲವೇದ ಇತಿ ಸಂಜ್ಞಾಬಲಾದೃಗಾದಿಕಂ ಸರ್ವಮೇಕವಿಷಯಮಿತಿ ಕಲ್ಪ್ಯತೇ ॥**

**ಅನುವಾದ –** 'ತದಾ' ಎಂಬುದರ ವಿವರಣೆಯನ್ನೇ 'ಕೃತಯುಗೇ' ಎಂಬುದರಿಂದ ಹೇಳಿದ್ದಾರೆ. ಆದ್ದರಿಂದ ಮೂಲವೇದಶಬ್ದವು ಮೂಲಕಾರಣವನ್ನು ಹೇಳುತ್ತದೆ. ವಿಷ್ಣುವೇ ಮೂಲಕಾರಣನಾಗಿದ್ದಾನೆ. ಮುಖ್ಯಾ-ಮುಖ್ಯಗಳಲ್ಲಿ ಮುಖ್ಯಾರ್ಥವನ್ನೇ ಸ್ವೀಕರಿಸಬೇಕಾದ್ದರಿಂದ ಮೂಲವೇದ ಎಂಬ ಶಬ್ದವು ಕೇವಲ ವಿಷ್ಣುಪರ ಎಂದು ನಿರ್ಣಯವಾಗುತ್ತದೆ. ಹೀಗೆ ಮೂಲವೇದ ಎಂಬ ಶಬ್ದದಿಂದಲೇ ಋಗಾದಿವಿದ್ಯೆಗಳು ಏಕವಿಷಯಕ-ವಾಗಿವೆ ಎಂದು ಊಹಿಸಬೇಕು.

**ವಿವರಣೆ –** 'ಯದಾ' ಎಂಬ ಶಬ್ದವು ಬಂದಾಗ ಅದಕ್ಕೆ ಅನುಗುಣವಾಗಿ 'ತದಾ' ಎಂಬ ಶಬ್ದವನ್ನೂ ಸಹ ಅಧ್ಯಾಹಾರ ಮಾಡಬೇಕು. 'ಯತ್' ಶಬ್ದದ ಪ್ರಯೋಗವಿದ್ದಲ್ಲಿ 'ತತ್' ಶಬ್ದದ ಅಧ್ಯಾಹಾರವು ಎಲ್ಲ ಶಾಸ್ತ್ರಗಳಲ್ಲೂ ಕೂಡ ಸಮ್ಮತವಾದದ್ದು. ಹೀಗಾಗಿ ಯಾವ ಕಾಲದಲ್ಲಿ ಭಗವಂತನನ್ನು ಮಾತ್ರವೇ ಶಾಸ್ತ್ರಗಳು ಪ್ರತಿಪಾದನೆ ಮಾಡುತ್ತಿದ್ದವು ಎನ್ನುವುದರ ವಿವರಣೆಯನ್ನು 'ಕೃತಯುಗೇ' ಮುಂತಾದ ಭಾಷ್ಯವಾಕ್ಯವು ತಿಳಿಸುತ್ತಿದೆ. ಕೃತಯುಗದಲ್ಲಿ ಆ ಶಾಸ್ತ್ರವಿದ್ಯೆಗಳಿಂದ ಪ್ರತಿಪಾದ್ಯನಾದವನು ಭಗವಂತ. ಉಳಿದ ಕಾಲಗಳಲ್ಲಿ ಉಳಿದ ದೇವತೆಗಳನ್ನು ಕರ್ಮ ಮುಂತಾದ-ವುಗಳನ್ನು ಸಾಧಕರು ಚಿಂತನೆ ಮಾಡಲು ಪ್ರಾರಂಭಿಸಿದರು ಎಂಬುದು ಇದರ ಅಭಿಪ್ರಾಯ.

'ಮೂಲವೇದ' ಎಂಬ ಶಬ್ದವು ಮೂಲಕಾರಣನಾದ ಭಗವಂತನನ್ನು ತಿಳಿಸುತ್ತಿದೆ. 'ಮೂಲವೇದ' = ಮೂಲಕಾರಣನಾದ ವಿಷ್ಣುವನ್ನು ತಿಳಿಸುವ ವೇದ ಎಂದರ್ಥ. ಕಾರಣವೇನೆಂದರೆ ಮುಖ್ಯ ಹಾಗೂ ಅಮುಖ್ಯ ವಿಷಯಗಳಲ್ಲಿ ಒಂದೇ ಶಬ್ದವು ಪ್ರಯುಕ್ತವಾದಾಗ ಯಾವ ಶಬ್ದವು ಮುಖ್ಯವಿಷಯವನ್ನು ತಿಳಿಸುತ್ತದೋ, ಅದನ್ನೇ ಸಂಗ್ರಹ ಮಾಡಬೇಕು ಎಂಬುದಾಗಿ ನ್ಯಾಯವು ಹೇಳುತ್ತದೆ. 'ಮುಖ್ಯ ಅಮುಖ್ಯೋಃ ಮುಖ್ಯೇ ಸಂಪ್ರತ್ಯಯಃ' ಎಂಬುದು ನ್ಯಾಯದ ಸ್ವರೂಪ. ವಿಶೇಷಣವನ್ನು ಕೊಟ್ಟು ಹೇಳಿದರೆ ಅದು ಅಮುಖ್ಯವಾದ ವಿಷಯವನ್ನು ತಿಳಿಸುತ್ತದೆ ಎಂದರ್ಥ. ಯಾವುದೇ ವಿಶೇಷಣಗಳಿಲ್ಲದೇ ಕೇವಲ ಶಬ್ದವನ್ನು ಪ್ರಯೋಗ ಮಾಡಿದಾಗ ಅದು ಮುಖ್ಯವಾದ

ವಿಷಯವನ್ನೇ ತಿಳಿಸುತ್ತದೆ. ಉದಾಹರಣೆ- ಗೀತಾ ಎಂದರೆ ಭಗವದ್ಗೀತೆಯ ಗ್ರಹಣವನ್ನೇ ಮಾಡುತ್ತೇವ ಭ್ರಮರಗೀತಾ, ಮಂಕಿಗೀತಾ, ಬೌದ್ಧಗೀತಾ ಇವುಗಳನ್ನು ಗ್ರಹಣ ಮಾಡುವುದಿಲ್ಲ. ಹಾಗೆಯೇ ಮೂಲವೇದ ಎಂದರೆ ಮೂಲಕಾರಣನಾದ ವಿಷ್ಣುವನ್ನು ತಿಳಿಸುವ ವೇದ ಎಂದರ್ಥ. ಬೇರೆ ಕಾಲದಲ್ಲಿ ಅಮುಖ್ಯವಾದ ವಿಷಯವನ್ನು ತಿಳಿಸುವುದಲ್ಲ. ಹೀಗೆ 'ಮೂಲವೇದ' ಎಂಬ ಶಬ್ದವೇ ಋಗಾದಿಗಳೆಲ್ಲವೂ ಸಹ ಕೇವಲ ಭಗವಂತನನ್ನು ಮಾತ್ರವೇ ವಿಷಯೀಕರಿಸುವ ಶಾಸ್ತ್ರ ಎಂದು ಹೇಳುತ್ತದೆ.

## ಕೃತಯುಗದ ವೇದ ವಿಷ್ಣುಮಾತ್ರ ಪರ

ಅಸ್ತು ಸರ್ವಮೇಕವಿಷಯಕಂ ತತಃ ಕಿಮಿತ್ಯತ ಆಹ - ತಸ್ಮಾದಿತಿ। ಕೃತಯುಗೇ ಸರ್ವಸ್ಯಾಪಿ ವೇದಸ್ಯ ವಿಷ್ಣ್ವೇಕವಿಷಯತ್ವಾತ್ ಕಿಂಚನ ವ್ಯಪದೇಶಭೇದಪ್ರಯುಕ್ತಂ ವಾ ಪ್ರತಿಪಾದ್ಯಭೇದಪ್ರಯುಕ್ತಂ ವಾ ಪೂಜ್ಯಭೇದಪ್ರಯುಕ್ತಂ ವಾ ಪಾರಾವರ್ಯಂ ಪರಾಪರವಿದ್ಯಾಭೇದಃ ವೇದೇ ನಾಸ್ತೀತ್ಯರ್ಥಃ।

ಅನುವಾದ – ಸಕಲವೇದವು 'ವಿಷ್ಣ್ವೇಕಪರ' ಎಂದು ಒಪ್ಪೋಣ. ಇದರಿಂದೇನಾಯಿತು ? ಎಂಬುದಕ್ಕೆ 'ತಸ್ಮಾತ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಕೃತಯುಗದಲ್ಲಿ ಸಕಲವೇದವು ವಿಷ್ಣ್ವೇಕಪರವಾಗಿರುತ್ತದೆ. ಹೆಸರಿನಲ್ಲಿ ಭೇದವಿರುವುದಿಲ್ಲ. ಪ್ರತಿಪಾದ್ಯವಿಷಯದಲ್ಲಿ ಭೇದವಿರುವುದಿಲ್ಲ. ಪೂಜ್ಯಪೂಜಕರಲ್ಲಿ ಭೇದವಿರುವುದಿಲ್ಲ. ಆದ್ದರಿಂದ 'ಪರಾವರ್ಯ' = ಪರವಿದ್ಯೆ ಅಪರವಿದ್ಯೆಗಳೆಂಬ ಭೇದವು ವೇದದಲ್ಲಿ ಇರುವುದಿಲ್ಲ ಎಂದರ್ಥ.

ವಿವರಣೆ – ಎಲ್ಲವೂ ಸಹ ಭಗವಂತನನ್ನು ಮಾತ್ರ ತಿಳಿಸುತ್ತದೆಂಬ ಪಕ್ಷದಲ್ಲಿ ಆದ ಹಾನಿಯೇನು ? ಕೇವಲ ಭಗವಂತನನ್ನು ಮಾತ್ರವೇ ಸಕಲ ವೇದವಾಙ್ಮಯವು ತಿಳಿಸುತ್ತದೆ ಎನ್ನುವ ಮಾತ್ರದಿಂದ ಆ ವೇದವಾಙ್ಮಯವು ಉಳಿದ ಕರ್ಮಾದಿಗಳನ್ನು ತಿಳಿಸುವುದಿಲ್ಲವೆಂದು ಸಿದ್ಧವಾಗು-ವುದಿಲ್ಲ ಎಂಬುದು ಆಕ್ಷೇಪದ ಅಭಿಪ್ರಾಯ. ಈ ಪ್ರಶ್ನೆಗೆ ಉತ್ತರವಾಗಿ 'ತಸ್ಮಾದ್ವೇಕಃ' ಎಂಬ ಭಾಷ್ಯವಾಕ್ಯವು ಹೊರಟಿದೆ. ಇದು ನಾರಾಯಣಸಂಹಿತೆಯಲ್ಲಿ ಪ್ರಯುಕ್ತವಾಗಿದೆ. ಕೃತಯುಗದಲ್ಲಿ ಎಲ್ಲಾ ವೇದವು ಕೇವಲ ವಿಷ್ಣುವನ್ನೇ ತಿಳಿಸುವ ಕಾರಣ ಅವುಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸವು ಇರಲಿಲ್ಲ. ಹೆಸರಿನ ಭೇದದಿಂದಾಗಲೀ, ಅಥವಾ ಪ್ರತಿಪಾದ್ಯವಾದ ವಿಷಯದಲ್ಲಿ ಭೇದದಿಂದಾಗಲೀ, ಅಥವಾ ಪೂಜ್ಯ ಪೂಜಕರ ವಿಷಯದಲ್ಲಿ ಭೇದವಿದ್ದ ಕಾರಣದಿಂದಾಗಲೀ ಯಾವುದೇ ರೀತಿಯ ಭೇದವು ಪರಾಪರವಿದ್ಯೆಯಲ್ಲಿ ಇರಲಿಲ್ಲ. ಹಾಗಾಗಿ ಅವು ಕೇವಲ ವಿಷ್ಣುವನ್ನೇ ತಿಳಿಸುತ್ತಿದ್ದವು ಎಂಬುದನ್ನು ಈ ವಾಕ್ಯವು ತಿಳಿಸುತ್ತಿದೆ.





## ವೇದದಲ್ಲಿ ಪಾರಾವರ್ಯ ಹೇಳಬಹುದೆ ?

**ತಥಾಪಿ ವಕ್ತೃಭೇದಾದ್ವೇದೇ ಪಾರಾವರ್ಯಂ ಭವಿಷ್ಯತೀತ್ಯತ ಆಹ। ಹರೇರಿತಿ। ಯಸ್ಮಾದೃಗಾದ್ಯಾ ಅನುವ್ಯಾಖ್ಯಾಂತಾಃ ನಿಃಶ್ವಸಿತಮೇದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನೀತಿ ಶ್ರುತ್ಯಕ್ತಗ್ರಂಥಾಃ ತುರಗಾನನಾದ್ಧರೇರುತ್ಥಿತಾಃ ತಸ್ಮಾದ್ವೇದೇ ಪಾರಾವರ್ಯಂ ನಾಸ್ತೀತ್ಯನ್ವಯಃ।**

**ಅನುವಾದ** - ಆದರೂ ಕೂಡ ವಕ್ತೃವಿನಲ್ಲಿ ಭೇದವಿರುವುದರಿಂದ ವೇದದಲ್ಲಿ ಪಾರಾವರ್ಯ (ಪರತ್ವ ಹಾಗೂ ಅವರತ್ವಗಳು) ಬರಬಹುದಲ್ಲವೇ? ಎಂಬ ಪ್ರಶ್ನೆಗೆ 'ಹರೇಃ' ಎಂಬುದರಿಂದ ಉತ್ತರಿಸಿದ್ದಾರೆ. ಯಾವ ಕಾರಣದಿಂದ ಋಗ್ವೇದದಿಂದ ಪ್ರಾರಂಭಿಸಿ ಅನುವ್ಯಾಖ್ಯಾನದ ತನಕ ಹಯಗ್ರೀವದೇವರ ಮುಖಕಮಲದಿಂದ ವೇದಗಳು ಹೊರಬಂದವೋ, ಆಕಾರಣದಿಂದ ವೇದವಿದ್ಯೆಗಳಲ್ಲಿ ಭೇದವಿರುವುದಿಲ್ಲ. ಪಾರಾವರ್ಯವಿರುವುದಿಲ್ಲ. ಇದನ್ನು 'ಏತದೃಗ್ವೇದೋ ಯಜುರ್ವೇದಃ' ಇತ್ಯಾದಿ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

**ವಿವರಣೆ - ಆಕ್ಷೇಪ** - ಕೆಲವು ವೇದಗಳು ಮಾತ್ರವೇ ಭಗವಂತನಿಂದ ಹೊರಹೊಮ್ಮಿದವು. ಸಕಲವೇದಗಳು ಭಗವಂತನಿಂದಲೇ ಹೊರಹೊಮ್ಮಿದವೆಂದು ಎಲ್ಲೂ ಉಲ್ಲೇಖ ಮಾಡಿಲ್ಲ. ಹೀಗಾಗಿ ವಕ್ತೃವು ಭಿನ್ನನಾದ ಕಾರಣ ವೇದಪುರುಷರು ಅನೇಕರಾದರು. ಒಬ್ಬ ವಕ್ತೃವಿನಿಂದ ಹೊರಹೊಮ್ಮಿದ ವೇದಭಾಗವು 'ಸಕಲವೇದಗಳು ಭಗವಂತನನ್ನು ಹೇಳುತ್ತದೆ' ಎನ್ನುವ ವಿಷಯವನ್ನು ಪ್ರತಿಪಾದನೆ ಮಾಡಲಿ. ಆದರೆ ಬೇರೊಬ್ಬ ವೇದಪುರುಷನಿಂದ ಹೊರಹೊಮ್ಮಿದ ವೇದಭಾಗದಲ್ಲಿ ಕರ್ಮಾದಿಗಳು, ಉಳಿದ ದೇವತೆಗಳು ಪ್ರತಿಪಾದ್ಯರಾಗಲಿ ?

**ಸಮಾಧಾನ** - ಇದಕ್ಕೆ ಉತ್ತರವಾಗಿ ಭಾಷ್ಯದಲ್ಲಿ 'ಹರೇಃ' ಎಂಬ ವಾಕ್ಯವು ಹೊರಟಿದೆ. 'ಹರೇಃ ಯಸ್ಮಾತ್ ಉತ್ಥಿತಾಃ ಉರಗಾನನಾತ್' ಎಂಬ ಭಾಷ್ಯವಾಕ್ಯವು ಸಕಲವೇದಗಳು ಭಗವಂತನಿಂದಲೇ ಹೊರಹೊಮ್ಮಿವೆ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತಿದೆ. ಛಾಂದೋಗ್ಯಭಾಷ್ಯದಲ್ಲಿ ಹೇಳಿದಂತೆ - ಹಯಗ್ರೀವದೇವರ ಮೂಗಿನ ಹೊಳ್ಳೆಗಳಿಂದ ಸಕಲವೇದಗಳು ಹೊರಹೊಮ್ಮಿವೆ. ವೇದಪುರುಷರಲ್ಲಿ ಭೇದವಿಲ್ಲ. ಸಕಲವೇದಗಳಿಗೂ ಸಹ ಮೂಲಪುರುಷ ಹಯಗ್ರೀವದೇವರು ಮಾತ್ರ . ವಕ್ತೃಭೇದನಿಮಿತ್ತಕವಾಗಿ 'ಪಾರವರ್ಯ' ಎನ್ನಬಾರದು ಎಂದರೆ ಒಂದು ವಿದ್ಯೆಯು ಪರವಿದ್ಯೆಯೂ. ಅಪರವಿದ್ಯೆಯೂ ಎಂಬುದಾಗಿ 'ಪಾರವರ್ಯ' ಇವರೆಡರಲ್ಲಿ ಭೇದವಿದೆ ಎಂಬುದಾಗಿ ಹೇಳಬಾರದು ಎಂಬುದು ಈ ಭಾಷ್ಯವಾಕ್ಯದ ಅಭಿಪ್ರಾಯ.

'ತಸ್ಮಾತ್' ಎಂಬ ಭಾಷ್ಯವಾಕ್ಯಕ್ಕೆ ಅನುಗುಣವಾಗಿ 'ಯಸ್ಮಾತ್' ಎಂಬ ಶಬ್ದವನ್ನು ಅಧ್ಯಾಹಾರ ಮಾಡಬೇಕು. ಯಾವಕಾರಣದಿಂದ ಋಗಾದಿಗಳಿಂದ ಆರಂಭಮಾಡಿಕೊಂಡು ಅನುವ್ಯಾಖ್ಯಾನದ-





ವರೆಗೆ ಎಲ್ಲವೂ ಸಹ ಹಯಗ್ರೀವ ಮುಖದಿಂದ ಹೊರಹೊಮ್ಮಿದೆ. 'ಋಗ್ವೇದಃ ಯಜುರ್ವೇದಃ ಸಾಮವೇದಃ ಅಥರ್ವಾಂಗೀರಸಃ ಇತಿಹಾಸಃ ಪುರಾಣಃ ಶ್ಲೋಕಾಃ ಸೂತ್ರಾಣಿ ಅನುವ್ಯಾಖ್ಯಾನಾನಿ' ಎಂಬುದಾಗಿ ಶ್ರುತಿಯಲ್ಲಿ ಹೇಳಿದಂತೆ ವೇದವಾಙ್ಮಯವೆಲ್ಲವು ಹಯಗ್ರೀವದೇವರಿಂದಲೇ ಹೊರಹೊಮ್ಮಿವೆಯೋ, ಆ ಕಾರಣದಿಂದ ವೇದದಲ್ಲಿ 'ಪಾರವರ್ಯಂ ನ ಕಿಂಚನ ಅಸ್ತಿ' ವೇದದಲ್ಲಿ ಪರವಿದ್ಯಾ, ಅಪರವಿದ್ಯಾ ಎಂಬ ವಿಭಾಗವು ಇರುವುದಿಲ್ಲ ಎಂಬುದಾಗಿ ಭಾಷ್ಯವಾಕ್ಯದಲ್ಲಿ ಅನ್ವಯವನ್ನು ತಿಳಿದುಕೊಳ್ಳಬೇಕು.

## ಕೃತಯುಗದಲ್ಲೂ ತ್ರಿವಿಧಜೀವರಿದ್ದಾರೆ

**ಕಾರ್ತಯುಗೋ ಜನಸ್ತ್ರಿವಿಧಃ ಉತ್ತಮಮಧ್ಯಮಾಧಮಭೇದಾತ್ । ತತ್ರೋತ್ತಮಃ ಸರ್ವೈರ್ಯಜೇತ್, ಮಧ್ಯಮೋ ಋಗಾದ್ಯೈಸ್ತಂ ಯಜೇತ್, ಅಧಮಸ್ತು ಪಂಚರಾತ್ರೇಣೇತ್ಯೇವಂ ವ್ಯವಸ್ಥಿತವಿಕಲ್ಪಸೂಚನಾರ್ಥಂ ಅಥವೇತ್ಯುಕ್ತಂ।**

**ಅನುವಾದ** - ಕೃತಯುಗದಲ್ಲಿರುವ ಜನರು ಮೂರುವಿಧ - ೧. ಉತ್ತಮ, ೨. ಮಧ್ಯಮ, ೩. ಅಧಮ ಎಂದು. ಉತ್ತಮರು ಸಕಲ ವೇದಗಳಿಂದ ಆರಾಧನೆ ಮಾಡುತ್ತಾರೆ. ಮಧ್ಯಮರು ಋಗಾದಿಗಳಿಂದ ಮಾತ್ರ ಆರಾಧನೆ ಮಾಡುತ್ತಾರೆ. ಅಧಮರು ಪಂಚರಾತ್ರದಿಂದಲೇ ಯಾಗ ಮಾಡುತ್ತಾರೆ. ಈ ವ್ಯವಸ್ಥಿವಿಕಲ್ಪವನ್ನು ಸೂಚನೆ ಮಾಡುವುದಕ್ಕಾಗಿ 'ಅಥವಾ' ಎಂದು ಹೇಳಿದ್ದಾರೆ.

**ವಿವರಣೆ** - ದೇವತೆಗಳ ಆರಾಧನೆಯ ಕ್ರಮವನ್ನು ಹೇಳುವ ಸಂದರ್ಭದಲ್ಲಿ ನಾಕು ಯುಗಗಳಲ್ಲಿ ಭಗವಂತನ ಆರಾಧನೆಯು ನಾಕುವಿಧವಾಗಿ ಆಗುತ್ತದೆ ಎಂಬ ಅಂಶವನ್ನು ಭಾಷ್ಯಕಾರರು ತಿಳಿಸಿದ್ದಾರೆ. ಅದರ ವಿವರಣೆ ಹೀಗಿದೆ - ಉತ್ತಮರು, ಮಧ್ಯಮರು, ಅಧಮರು ಎಂಬುದಾಗಿ ಕೃತಯುಗದಲ್ಲಿದ್ದ ಮೂರುವಿಧ ಜನರು ಭಗವಂತನ ಆರಾಧನೆಯನ್ನು ಮಾಡುತ್ತಿದ್ದರು. ಅದರಲ್ಲಿ ಉತ್ತಮನಾದ ಸಾಧಕನು ಎಲ್ಲಾ ವೇದಗಳಿಂದ ಭಗವಂತನನ್ನು ಚಿಂತನೆ ಮಾಡುತ್ತಿದ್ದನು. ಮಧ್ಯಮನಾದ ಅಧಿಕಾರಿಯು ಪಂಚರಾತ್ರ ಬಿಟ್ಟು ಉಳಿದ ವೇದಭಾಗಗಳಿಂದ ಭಗವಂತನನ್ನು ಆರಾಧನೆ ಮಾಡುತ್ತಿದ್ದನು. ಅಧಮನಾದ ಅಧಿಕಾರಿಯು ಪಂಚರಾತ್ರದಿಂದ ಮಾತ್ರವೇ ಭಗವಂತನನ್ನು ಆರಾಧನೆ ಮಾಡುತ್ತಿದ್ದನು. ಸಂಪೂರ್ಣ ವೇದವಿದ್ಯೆ ಎಂದರೆ ನಾಕುವೇದಗಳು ಹಾಗೂ ಪಂಚರಾತ್ರ . ಈ ರೀತಿಯಾಗಿ ಮೂರು ವಿಭಾಗವನ್ನು ಮಾಡಿಕೊಂಡು ಉತ್ತಮ, ಮಧ್ಯಮ, ಅಧಮ ಅಧಿಕಾರಿಭೇದದಿಂದ ಭಗವಂತನ ಆರಾಧನೆಯು ವ್ಯವಸ್ಥಿತವಾಗಿ ನಡೆಯುತ್ತಿತ್ತು ಎಂಬುದನ್ನು ತಿಳಿಸಲು 'ಅಥವಾ' ಎಂಬ ಭಾಷ್ಯವಾಕ್ಯವು ಹೊರಟಿದೆ.

## ವೇದವೇ ಪರವಿದ್ಯೆ ಎನ್ನಲು ವರಾಹಪುರಾಣದ ಆಧಾರ

ನನೂಕ್ತಪ್ರಮಾಣೈಃ ಸರ್ವವೇದಾನಾಂ ವಿಷ್ಣುಪರತ್ವಮುಪಪಾದ್ಯ ಪರಾವಿದ್ಯಾತ್ವಂ ಸಮರ್ಥಿತಂ, ತದಯುಕ್ತಂ ಸರ್ವವೇದವದ್-ಗ್ರಂಥಾಂತರಸ್ಯಾಪಿ ವಿಷ್ಣುಪ್ರತಿಪಾದಕತ್ವೇ ಕಿಂ ಋಗಾದ್ಯಾಃ ಪರವಿದ್ಯಾಃ? ಕಿಂ ವಾ ಗ್ರಂಥಾಂತರಮಿತಿ ಸಂದೇಹಾಪಾತಾತ್ । ಯಯಾ ತದಕ್ಷರಮಧಿಗಮ್ಯತ ಇತ್ಯುಕ್ತಾಕ್ಷರಾಧಿಗತಿಕರಣತ್ವಸ್ಯೋಭಯತ್ರ ಸಾಮ್ಯಾದಿತ್ಯತ ಆಹ । ವೇದೈಶ್ಚೇತಿ ।

ತಥಾ ಚಾನ್ಯಸ್ಯ ವಿಷ್ಣುಪ್ರತ್ಯಾಯಕತ್ವಾಭಾವಾದ್ವೇದಾದೀನಾಮೇವ ವಿಷ್ಣುಪ್ರತ್ಯಾಯಕತ್ವೇನ ಪರವಿದ್ಯಾತ್ವನಿರ್ಣಯೋಪಪತ್ತಿರಿತಿ ಭಾವಃ ।

ಅನುವಾದ - ಹಿಂದೆ ಹೇಳಿದ ಪ್ರಮಾಣಗಳಿಂದ ಸಕಲವೇದಗಳು ವಿಷ್ಣುಪರವಾಗಿವೆ ಎಂದು ಉಪಪಾದನೆ ಮಾಡಿದ್ದಾಯಿತು. ತನ್ಮೂಲಕ ಪರವಿದ್ಯಾತ್ವವು ಸಮರ್ಥಿತವಾಯಿತು. ಆದರೆ ಇದು ತಪ್ಪು. ಏಕೆಂದರೆ ಸಕಲ ವೇದಗಳಂತೆ ಇತರ ಗ್ರಂಥಗಳೂ ಕೂಡ ವಿಷ್ಣುಪ್ರತಿಪಾದಕವಾದಾಗ ಋಗಾದಿಗಳು ಪರವಿದ್ಯೆಯೆನಿಸುತ್ತವೋ? ಅಥವಾ ಬೇರೆ ಗ್ರಂಥಗಳು ಪರವಿದ್ಯೆಯೆನಿಸುತ್ತವೋ ? ಎಂಬ ಸಂದೇಹ ಬರುತ್ತದೆ. ಏಕೆಂದರೆ 'ಯಯಾ ತದಕ್ಷರಮಧಿಗಮ್ಯತೇ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರಾಧಿಗತಿಕರಣತ್ವವು ಎರಡೂ ಕಡೆ ಸಮಾನವಾಗಿದೆಯಲ್ಲವೇ ? ಈ ಪ್ರಶ್ನೆಗೆ 'ವೇದೈಶ್ಚ' ಎಂಬುದರಿಂದ ಉತ್ತರಿಸಿದ್ದಾರೆ.

ಆದ್ದರಿಂದ ಬೇರೆ ಗ್ರಂಥಗಳು ವಿಷ್ಣುಪ್ರತ್ಯಾಯಕವಾಗದ ಕಾರಣ ವೇದಾದಿಗಳಷ್ಟೇ ವಿಷ್ಣುಪ್ರತ್ಯಾಯಕವಾಗಿವೆ. ಇವು ಮಾತ್ರ ಪರವಿದ್ಯೆಯಾಗಿವೆ ಎಂದು ನಿರ್ಣಯವಾಗುತ್ತದೆ ಎಂದಭಿಪ್ರಾಯ.

ವಿವರಣೆ - ಆಕ್ಷೇಪ - ಹಿಂದೆ ಹೇಳಿದ ಪ್ರಮಾಣಗಳಿಂದ ಎಲ್ಲಾ ವೇದಗಳು ವಿಷ್ಣುಪರ ಎಂದು ಉಪಪಾದನೆ ಮಾಡಲಾಗಿದೆ. ಹಾಗೂ ಪರವಿದ್ಯಾತ್ವವನ್ನು ಸಮರ್ಥನೆ ಮಾಡಲಾಗಿದೆ. ಇದು ಸರಿಯಲ್ಲ. ವೇದಗಳಂತೆ ಬೇರೆ ಗ್ರಂಥಗಳೂ ಸಹ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತಿವೆ. ಆಗ ಕೇವಲ ಋಗಾದಿಗಳು ಪರವಿದ್ಯೆಯೋ ? ಅಥವಾ ಬೇರೆ ಗ್ರಂಥವೂ ಸಹ ಪರವಿದ್ಯೆಯೋ? ಎಂಬ ಸಂದೇಹವು ಬರುತ್ತದೆ. ಏಕೆಂದರೆ ಉಪನಿಷತ್ತಿನಲ್ಲಿ 'ಯಯಾ ತದಕ್ಷರಂ ಅಧಿಗಮ್ಯತೇ' ಯಾವ ವಿದ್ಯೆಯಿಂದ ಅಕ್ಷರನ ಜ್ಞಾನವಾಗುತ್ತದೆಂದು ಭಗವಂತನ ಜ್ಞಾನಕ್ಕೆ ಕರಣವಾದದ್ದನ್ನು 'ಪರವಿದ್ಯಾ' ಎಂಬುದಾಗಿ ಹೇಳಿದ್ದಾರೆ. ಋಗಾದಿಗಳಿಗೂ ಗ್ರಂಥಾಂತರಕ್ಕೂ ಸಹ ಸಾಮ್ಯವಾದ ಅಂಶ ಅಕ್ಷರಾಧಿಗತಿಕರಣತ್ವ. ಈ ಲಿಂಗದಿಂದ ಗ್ರಂಥಾಂತರವೂ ಸಹ ಪರವಿದ್ಯಾ ಆಗುತ್ತದೆಯೇ ?

ಸಮಾಧಾನ - ಇದಕ್ಕೆ ಉತ್ತರವಾಗಿ ವರಾಹ ಪುರಾಣದ ವಾಕ್ಯವು ಹೊರಟಿದೆ - 'ವೇದೈಶ್ಚ' ಇತ್ಯಾದಿಯಾಗಿ. ವೇದಾದಿಗಳನ್ನು ಬಿಟ್ಟು ಬೇರೆ ಯಾವ ಗ್ರಂಥಗಳೂ ಸಹ ವಿಷ್ಣುವನ್ನು ತಿಳಿಸಿಕೊಡಲು

ಸಾಧ್ಯವಿಲ್ಲ. ವೇದಗಳು ಮಾತ್ರ ಭಗವಂತನ ಜ್ಞಾನವನ್ನು ತಂದುಕೊಡುವ ಸಾಧನ. ಹಾಗಾಗಿ ಪರವಿದ್ಯಾ ಶಬ್ದದಿಂದ ಪ್ರತಿಪಾದ್ಯವಾದವು ಋಗಾದಿಗಳು ಮಾತ್ರ. ಉಳಿದ ಯಾವ ವಿದ್ಯೆಗಳೂ ಸಹ ಭಗವಂತನ ಜ್ಞಾನಕ್ಕೆ ಕರಣವೂ ಅಲ್ಲ. ಪರವಿದ್ಯೆಯೂ ಸಹ ಆಗುವುದಿಲ್ಲ ಎಂಬುದಾಗಿ ಇದರಿಂದ ಸ್ಪಷ್ಟವಾಗುತ್ತದೆ.

## ವೇದಕ್ಕೆ ಪರಾಪರವ್ಯವಸ್ಥೆ ಮಾಡಲು ಏನು ಆಧಾರ ?

ನಾನ್ಯಥಾ ದೃಶ್ಯಃ ಇತಿ । ವೇದಾದಿವ್ಯತಿರಿಕ್ತಗ್ರಂಥೇನ ಭಕ್ತ್ಯಾದ್ಯನ್ಯಸಾಧನೇನ ಚ ಜ್ಞೇಯೋ ನೇತ್ಯರ್ಥಃ॥ ಸ್ಯಾದೇತತ್ ಯದಿ ಪರಾಪರವಿದ್ಯಾವಿಭಾಗಕರ್ತುರಂಗಿರಸೋ ಮುನೇಃ ಋಗಾದೀನಾಮೇವ ಅವಸ್ಥಾಭೇದೇನ ಪರವಿದ್ಯಾತ್ವಮಪರವಿದ್ಯಾತ್ವಂ ಚೇತ್ಯತ್ರ ತಾತ್ಪರ್ಯಂ ಸ್ಯಾತ್, ತದೇವ ಕುತ ? ಇತ್ಯಾಶಂಕಾಂ ಪರಿಹರನ್ನೇವ ಅಪವ್ಯಾಖ್ಯಾನದ್ವಯೇ ದೋಷಾಂತರಂ ಸೂಚಯತಿ – ಅತ್ರಾಪೀತಿ।

ಅನುವಾದ – 'ನಾನ್ಯಥಾ ದೃಶ್ಯಃ' ಎಂಬುದಕ್ಕೆ ಹೀಗರ್ಥ - ವೇದಾದಿಗಳಿಗಿಂತ ಭಿನ್ನವಾದ ಗ್ರಂಥದಿಂದ ಮತ್ತು ಭಕ್ತ್ಯಾದಿಗಳನ್ನು ಬಿಟ್ಟು, ಬೇರೆ ಸಾಧನದಿಂದ ಪರಮಾತ್ಮನು ತಿಳಿಯುವುದಿಲ್ಲ ಎಂದು.

ನೀವು ಹೇಳಿದ್ದು ಯುಕ್ತವಾಗುತ್ತಿತ್ತು. ಒಂದು ವೇಳೆ ಪರಾಪರವಿದ್ಯೆಯ ವಿಭಾಗವನ್ನು ಮಾಡಲು ಪ್ರವೃತ್ತರಾದ ಅಂಗಿರಸಮುನಿಗಳಿಗೆ ಋಗಾದಿಗಳೇ ಅವಸ್ಥಾಭೇದದಿಂದ ಪರವಿದ್ಯೆ ಹಾಗೂ ಅಪರವಿದ್ಯೆ ಎಂಬಲ್ಲಿ ತಾತ್ಪರ್ಯವಿದ್ದಿದ್ದರೆ; ಆದರೆ ಅದನ್ನೇ ಹೇಗೆ ಸಮರ್ಥಿಸುತ್ತೀರಿ ? ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿಯೇ ಎರಡು ಅಪವ್ಯಾಖ್ಯಾನಗಳಲ್ಲಿ ಮತ್ತೊಂದು ದೋಷವನ್ನು 'ಅತ್ರಾಪಿ' ಎಂಬುದರಿಂದ ಸೂಚಿಸಿದ್ದಾರೆ.

ವಿವರಣೆ – ವರಾಹಪುರಾಣದ 'ನಾನ್ಯಥಾ ದೃಶ್ಯಃ' ಎಂಬುದರ ಅಭಿಪ್ರಾಯ ಹೀಗಿದೆ - ವೇದಾದಿಗಳಿಂದ ಹೊರತಾಗಿ ಬೇರೆ ಯಾವ ರೀತಿಯಲ್ಲೂ ಸಹ ನಾನು ದೃಶ್ಯನಲ್ಲ ಎಂಬ ಮಾತಿನ ಹಿನ್ನಲೆಯಲ್ಲಿ ಜ್ಞಾನ ಸಾಧನ ಯಾವುದು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಭಗವಂತನನ್ನು ತಿಳಿಯಲು ಭಕ್ತಿ ಹೇಗೆ ಮುಖ್ಯವೋ, ಹಾಗೇ ವೇದಾದಿಗಳೂ ಸಹ ಮುಖ್ಯ. ಭಕ್ತಿಯನ್ನು ಬಿಟ್ಟು ಬೇರೆ ಸಾಧನದಿಂದ ಭಗವಂತನು ಲಭ್ಯ ಅಲ್ಲ. ಇದನ್ನು 'ಕೇನ ಲಭ್ಯಃ' ಮುಂತಾದ ಪಂಚರಾತ್ರವಾಕ್ಯಗಳು ತಿಳಿಸುತ್ತಿವೆ. ಭಕ್ತಿಯೆಂಬ ಸಾಧನದ ಹೊರತಾಗಿ ಹೇಗೆ ನಾನು ಲಭ್ಯನಲ್ಲವೋ, ಅದರಂತೆ ವೇದಾದಿಗಳಿಂದ ಭಿನ್ನವಾದ ಬೇರೆ ಯಾವ ಗ್ರಂಥದಿಂದಲೂ ಸಹ ನಾನು ಲಭ್ಯನಲ್ಲ ಎಂಬುದು ಈ ಮಾತಿನ ಅಭಿಪ್ರಾಯ.

'ಅತ್ರಾಪಿ' ಎಂಬ ಭಾಷ್ಯದ ಹಿನ್ನಲೆ ಹೀಗಿದೆ - ಪರವಿದ್ಯಾ ಹಾಗೂ ಅಪರವಿದ್ಯಾ ಎಂಬ ವಿಭಾಗವನ್ನು ಅಂಗಿರಸರು ಮಾಡಿದ್ದಾರೆ. ಋಗಾದಿಗಳಿಗೆ ಅವಸ್ಥಾಭೇದದಿಂದ ಪರವಿದ್ಯಾತ್ವ ಹಾಗೂ




ಅಪರವಿದ್ಯಾತ್ವವಿದೆಯೆಂಬ ಅಭಿಪ್ರಾಯ ಇವರಿಗಿದೆ ಎಂಬ ಅಂಶವು ಸ್ಪಷ್ಟವಾಗುವುದಿಲ್ಲ. ಏಕೆಂದರೆ ಅಂಗಿರಸರ ಅಭಿಪ್ರಾಯದಿಂದಲೇ ಈ ಅವಸ್ಥಾಭೇದದಿಂದ ಪರಾಪರವಿದ್ಯಾತ್ವದ ನಿರ್ಣಯ ಇಲ್ಲಿ ನಡೆಯುತ್ತಿದೆ. ಅವರ ಅಭಿಪ್ರಾಯಕ್ಕೆ ಗಮಕವಾದ ಯಾವುದೇ ಅಂಶವೂ ಸಹ ಇಲ್ಲಿ ಸ್ಪಷ್ಟವಲ್ಲ ಎಂಬ ಪ್ರಶ್ನೆ ಮೂಡುತ್ತದೆ. ಇದಕ್ಕೆ ಉತ್ತರ ನೀಡುವ ಮುಖಾಂತರ ಅಪವ್ಯಾಖ್ಯಾನವನ್ನು ಮಾಡಿದರೆ ಅಲ್ಲಿರುವ ದೋಷವನ್ನು 'ಅತ್ರಾಪಿ' ಎಂಬ ಭಾಷ್ಯವಾಕ್ಯವು ತಿಳಿಸುತ್ತಿದೆ.

## ಅನ್ಯಥಾನುಪಪತ್ತಿಯೇ ಆಧಾರ

ಯದಿ ಋಗಾದ್ಯಾ ಏವ ಪರವಿದ್ಯಾ ಅಪರವಿದ್ಯಾಶ್ಚೇತ್ಯತ್ರ ಭಗವತೋ ಮುನೇಸ್ತಾತ್ಪರ್ಯಂ ನ ಸ್ಯಾತ್ ತರ್ಹ್ಯುತ್ತರತ್ರ ಕರ್ಮವಿಷಯಾಣಾಂ ಬ್ರಹ್ಮವಿಷಯಾಣಾಂ ಚ ಮಂತ್ರಾಣಾಮುಪನ್ಯಾಸೋ-ಽನುಪಪನ್ನಃ ಸ್ಯಾತ್ । ದ್ವೇ ವಿದ್ಯೇ ವೇದಿತವ್ಯೇ ಇತಿ ಯೇ ದ್ವೇ ವಿದ್ಯೇ ಪ್ರತಿಜ್ಞಾತೇ ತಯೋರೇವಾಗ್ರೇ ವಕ್ತವ್ಯತ್ವಾತ್ । ನಚೈವಂ, ಅತಃ ಕರ್ಮಬ್ರಹ್ಮವಿಷಯಾಣಾಂ ಮಂತ್ರಾಣಾಮೇವ ಪರಾಪರವಿದ್ಯಾತ್ವ-ಸಿದ್ಧಿಃ ।

**ಅನುವಾದ** - ಒಂದು ವೇಳೆ ಋಗಾದಿಗಳೇ ಅವಸ್ಥಾಭೇದದಿಂದ ಪರವಿದ್ಯೆ ಹಾಗೂ ಅಪರವಿದ್ಯೆಯೆನಿಸುತ್ತವೆ ಎಂಬ ವಿಷಯದಲ್ಲಿ ಜ್ಞಾನಿಗಳಾದ ಅಂಗಿರಸಮುನಿಗಳಿಗೆ ತಾತ್ಪರ್ಯವಿರದಿದ್ದರೆ ಮುಂದೆ ಕರ್ಮವಿಷಯಕವಾದ ಹಾಗೂ ಬ್ರಹ್ಮವಿಷಯವಾದ ಮಂತ್ರಗಳ ಉಲ್ಲೇಖವೇ ಅನುಪಪನ್ನವಾಗುತ್ತಿತ್ತು. 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಯಾವ ಎರಡು ವಿದ್ಯೆಗಳನ್ನು ಪ್ರತಿಜ್ಞೆ ಮಾಡಿದ್ದಾರೋ, ಅದನ್ನೇ ಪುನಃ ಉಲ್ಲೇಖ ಮಾಡಬೇಕಿತ್ತು. ಆದರೆ ಹಾಗೇ ಮಾಡಿಲ್ಲ. ಇದರಿಂದ ಕರ್ಮವಿಷಯಕವಾದ ಮಂತ್ರಗಳು 'ಪರವಿದ್ಯೆ' ಎಂದು, ಬ್ರಹ್ಮವಿಷಯಕವಾದ ಮಂತ್ರಗಳು 'ಅಪರವಿದ್ಯೆ' ಎಂದು ಸಿದ್ಧವಾಗುತ್ತದೆ.

**ವಿವರಣೆ** - ಒಂದು ವೇಳೆ ಋಗಾದಿಗಳು ಮಾತ್ರವೇ ಪರವಿದ್ಯಾ ಹಾಗೂ ಅಪರವಿದ್ಯಾ ಎಂಬ ಅಂಶದಲ್ಲಿ ಈ ಪೂಜ್ಯರಾದ ಅಂಗಿರಸರಿಗೆ ತಾತ್ಪರ್ಯವು ಇಲ್ಲದಿದ್ದ ಪಕ್ಷದಲ್ಲಿ ಮುಂದಿನ ಅವರ ನುಡಿ ಕೂಡುತ್ತಿರಲಿಲ್ಲ. ಕರ್ಮವಿಷಯಕವಾದ ಮಂತ್ರಗಳನ್ನು ಬ್ರಹ್ಮವಿಷಯಕವಾದ ಮಂತ್ರಗಳನ್ನು ಮುಂದಿನ ಉಪನಿಷತ್ತಿನ ಭಾಗದಲ್ಲಿ ಅಂಗಿರಸರು ಹೇಳಿದ್ದಾರೆ. ಕರ್ಮವಿಷಯಕವಾದ ವಿದ್ಯೆಯೇ ಬೇರೆ ಬ್ರಹ್ಮವಿಷಯಕವಾದ ವಿದ್ಯೆಯೇ ಬೇರೆ ಎಂದು ಅವರಿಗೆ ಅಭಿಪ್ರಾಯ ಇದ್ದಿದ್ದರೆ ಎರಡನ್ನೂ ಸಹ ಭಿನ್ನಭಿನ್ನವಾಗಿ ಹೇಳಬೇಕಾಗಿತ್ತು. ಆದರೆ ಒಟ್ಟಿಗೆ ಹೇಳಿದ್ದಾರೆ.

ಹಿಂದೆ ಎರಡು ವಿದ್ಯೆಗಳನ್ನು ತಿಳಿಯಬೇಕು ಎಂಬುದಾಗಿ 'ದ್ವೆ ವಿದ್ಯೇ ವೇದಿತವ್ಯೇ' ಎಂಬುದಾಗಿ ವಿದ್ಯಾದ್ವಯದ ಪ್ರತಿಜ್ಞೆ ಮಾಡಲಾಗಿದೆ. ಪ್ರತಿಜ್ಞೆಗೆ ಅನುಗುಣವಾಗಿ ಮುಂದೆ ಎರಡು ವಿದ್ಯೆಗಳನ್ನೂ ಸಹ ಹೇಳಬೇಕು. ಆದರೆ ಎರಡು ವಿದ್ಯೆಗಳನ್ನು ಪ್ರತ್ಯೇಕವಾಗಿ ಹೇಳದೇ ಒಟ್ಟಿಗೆ



ಕರ್ಮವಿಷಯಕವಾದ ಹಾಗೂ ಬ್ರಹ್ಮವಿಷಯಕವಾದ ಮಂತ್ರಗಳನ್ನು ಹೇಳಿದ್ದಾರೆ. ಇದರಿಂದ ಒಂದೇ ವಿದ್ಯೆಯೇ ಅವಸ್ಥಾಭೇದದಿಂದ 'ಪರಾಪರವಿದ್ಯಾ' ಎಂಬುದಾಗಿ ಸಿದ್ಧವಾಗುತ್ತದೆ.

## ಅನ್ಯಥಾನುಪಪತ್ತಿಯ ಸ್ವರೂಪ

ಅಯಂ ಭಾವಃ - ಅಂಗಿರಸಾ ತಾವದುಪಸಂಹಾರೇ ಋಗಾದೀನಾಂ ಬ್ರಹ್ಮವಿದ್ಯಾಯಾಶ್ಚೈಕಾಧಿಕಾರಿಕತ್ವಮುಕ್ತಂ। ತಚ್ಚ ಋಗಾದೀನಾಮೇವ ಬ್ರಹ್ಮವಿದ್ಯಾತ್ವರೂಪಪರವಿದ್ಯಾತ್ವೇ ಸಂಭವತಿ। ನಾನ್ಯಥಾ। ವಿಷಯಭೇದೇ ಅಧಿಕಾರ್ಯೈಕ್ಯಾಯೋಗಾತ್ ಅತಸ್ತತದನ್ಯಥಾನುಪಪತ್ತ್ಯಾ ಋಗಾದೀನಾಂ ಪರವಿದ್ಯಾತ್ವೇ ತಾತ್ಪರ್ಯಮವಗಮ್ಯತ ಇತಿ। .... ಅಗ್ರಾಹ್ಯಾಂ ಅನುಮಾನಪೌರುಷೇಯಾಗಮಾವೇದ್ಯಂ - ಇತಿ - (ಆಥರ್ವಣ ಉಮರ್ಜೀಯಟಿಪ್ಪಣಿಃ)

ಅನುವಾದ - ಇಷ್ಟು ಅಭಿಪ್ರಾಯ - ಅಂಗಿರಸ ಋಷಿಗಳು ಉಪಸಂಹಾರದಲ್ಲಿ ಋಗಾದಿವಿದ್ಯೆಗಳಿಗೆ ಮತ್ತು ಬ್ರಹ್ಮವಿದ್ಯೆಗೆ ಒಬ್ಬನೇ ಅಧಿಕಾರಿಯೆಂದು ಹೇಳಿದ್ದಾರೆ. ಋಗಾದಿಗಳೇ ಬ್ರಹ್ಮವಿದ್ಯೆಯಾದರೆ ಮಾತ್ರ ಇದು ಯುಕ್ತವಾಗುತ್ತದೆ. ಇಲ್ಲದಿದ್ದರೆ ಯುಕ್ತವಾಗುವುದಿಲ್ಲ. ವಿಷಯಭೇದವಿದ್ದಾಗ ಅಧಿಕಾರಿಯಲ್ಲಿ ಐಕ್ಯವು ಕೂಡುವುದಿಲ್ಲ. 'ವಿಷಯೈಕ್ಯಂ ಅನ್ಯಥಾ ಅಧಿಕಾರ್ಯೈಕ್ಯಂ ನೋಪಪದ್ಯತೇ' ಎಂಬ ಅನ್ಯಥಾನುಪಪತ್ತಿಯಿಂದ ಋಗಾದಿಗಳೇ ಪರವಿದ್ಯೆಯಾಗಿವೆ ಎಂಬುದರಲ್ಲಿ ಅಂಗಿರಸರಿಗೆ ತಾತ್ಪರ್ಯವಿದೆ ಎಂದು ತಿಳಿಯುತ್ತದೆ.

ವಿವರಣೆ - ಇದರ ಅಭಿಪ್ರಾಯ ಹೀಗಿದೆ - ಅಂಗಿರಸ ಋಷಿಗಳು ಉಪಸಂಹಾರದಲ್ಲಿ ಋಗಾದಿಗಳನ್ನು ಹಾಗೂ ಬ್ರಹ್ಮವಿದ್ಯೆಯನ್ನು ಹೇಳಿ ಇವುಗಳಿಗೆ ಅಧಿಕಾರಿಯು ಒಬ್ಬನೇ ಎಂಬುದಾಗಿ ಅಧಿಕಾರಿಯ ದ್ವೈವಿಧ್ಯವನ್ನು ಹೇಳಿಲ್ಲ. ಏಕಾಧಿಕಾರಿಕತ್ವವನ್ನು ಹೇಳಿದ್ದಾರೆ. ಈ ಏಕಾಧಿಕಾರಿಕತ್ವವು ಉಪಪನ್ನವಾಗಬೇಕಾದರೆ ಋಗಾದಿಗಳೇ ಪರಾಪರವಿದ್ಯೆ ಆಗಬೇಕು. ಬ್ರಹ್ಮವಿದ್ಯಾತ್ವ ಕರ್ಮವಿದ್ಯಾತ್ವ ಸಂಭವವಾಗಬೇಕಾದರೆ ಅವೆರಡೂ ಸಹ ಒಂದೇ ಆಗಬೇಕು. ವಿಷಯಗಳು ಭಿನ್ನವಾದರೆ, ಅಧಿಕಾರಿಯೂ ಸಹ ಭಿನ್ನವಾಗಲೇಬೇಕು. ಆದರೆ ಅಧಿಕಾರಿಯು ಒಬ್ಬನೇ ಆಗಿದ್ದಾನೆ. ಅಧಿಕಾರ್ಯೈಕ್ಯನ್ಯಥಾನುಪಪತ್ತಿಯಿಂದ ಋಗಾದಿಗಳಿಗೆ ಪರವಿದ್ಯಾತ್ವ ಹಾಗೂ ಅಪರವಿದ್ಯಾತ್ವಗಳೆರಡು ಕೂಡುತ್ತವೆ. ಹೀಗೆ ಆಥರ್ವಣೋಪನಿಷತ್ತಿನ ಉಮರ್ಜೀಯ ವ್ಯಾಖ್ಯಾನದಲ್ಲಿ ಒಂದೇ ವಿದ್ಯೆಗೆ ಅವಸ್ಥಾಭೇದದಿಂದ ಭೇದವಿದೆಯೇ ಹೊರತು, ವಸ್ತುತಃ ಅವುಗಳಿಗೆ ಭೇದ ಇಲ್ಲವೆಂದು ಸಮರ್ಥಿಸಿದ್ದಾರೆ.

## ವೇದಕ್ಕೆ ಪಾರಾವರ್ಯದ ನಿರಾಕರಣೆ

ತತ್ರಾಪರಾ ಋಗ್ವೇದೋ ಯಜುರ್ವೇದ ಇತ್ಯುಕ್ತ್ವಾ ಅಥ ಪರಾ ಯಯಾ ತದಕ್ಷರಮಧಿಗಮ್ಯತ






ಇತ್ಯುಕ್ತತ್ವಾತ್ ಋಗಾದಿವ್ಯತಿರಿಕ್ತಾ ಪರವಿದ್ಯೇತಿ ಪ್ರತೀಯತೇ । ಪರೈಸ್ತಥಾ ವ್ಯಾಖ್ಯಾತತ್ವಾಚ್ಚತ್ತಾಸ್ತಾಂ ನಿವಾರಯನ್ನಾಹ - ಋಗಾದ್ಯಾ ಇತಿ ।

ಆಪಾತತಃ ಪ್ರತೀತಾರ್ಥತಯಾ ಯದಾ ವಿಷ್ಣೋರ್ನ ವಾಚಕಾಃ, ಪರಮಯೋಗರೂಢ್ಯಾ ವಾಚಕಾಃ ಋಗಾದಯಃ ಸಾಕಲ್ಯೇನ ಭಗವತ್ಪ್ರತಿಪಾದಕಾಃ ಇತ್ಯುಕ್ತಂ ಪ್ರಮಾಣೈರ್ದ್ರಢಯತಿ – ಋಗ್ಭಿರಿತಿ ॥

ತಸ್ಮಾದ್ವೇದೇ ಪ್ರತಿಪಾದ್ಯಭೇದಾಭಾವಾತ್ಪರವಿದ್ಯಾ , ಅಪರವಿದ್ಯೇತಿ ಪಾರಾವರ್ಯಂ ಕಿಂಚನನಾಸ್ತಿ।

ಅನುವಾದ – 'ತತ್ರಾಪರಾ ಋಗ್ವೇದೋ ಯಜುರ್ವೇದಃ' ಎಂಬುದಾಗಿ ಹೇಳಿ, 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂದು ಆಥರ್ವಣವು ಹೇಳುತ್ತಿದೆ. ಇದರಿಂದ ಪರವಿದ್ಯೆಯು ಋಗಾದಿಗಳಿಗಿಂತ ಭಿನ್ನವೆಂದು ತಿಳಿಯುತ್ತದೆ. ಬೇರೆಯವರು ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ. ಇದನ್ನು ನಿರಾಕರಣೆ ಮಾಡುವುದಾಗಿ 'ಋಗಾದ್ಯಾಃ' ಇತ್ಯಾದಿ ಮಾತುಗಳು ಹೊರಟಿವೆ.

ಆಪಾತಪ್ರತೀತವಾದ ಅರ್ಥವನ್ನು ವಿವಕ್ಷಿಸಿ, ಋಗಾದಿಗಳು ವಿಷ್ಣುವಾಚಕಗಳಾಗುವುದಿಲ್ಲ. ಆದರೆ ಪರಮಯೋಗರೂಢಿಯಿಂದ ಅದೇ ಋಗಾದಿಗಳು ಸಾಕಲ್ಯೇನ ಭಗವತ್ಪ್ರತಿಪಾದಕವಾಗುತ್ತವೆ. ಈ ವಿಷಯವನ್ನು ಪ್ರಮಾಣದಿಂದ ಸಮರ್ಥಿಸಲು 'ಋಗ್ಭಿಃ' ಇತ್ಯಾದಿ ವಾಕ್ಯವು ಪ್ರವೃತ್ತವಾಗಿವೆ. ಆದ್ದರಿಂದ ವೇದದಲ್ಲಿ ಪ್ರತಿಪಾದ್ಯಭೇದವೇ ಇಲ್ಲದ ಕಾರಣ ಪರವಿದ್ಯಾ ಹಾಗೂ ಅಪರವಿದ್ಯೆ ಎಂಬ ಪಾರಾವರ್ಯಕ್ಕೆ ಅವಕಾಶವಿಲ್ಲ.

ವಿವರಣೆ – ಆಥರ್ವಣ ವ್ಯಾಸತೀರ್ಥರ ಟೀಕೆಯಲ್ಲಿ ಭಾಷ್ಯದ ವಾಕ್ಯಗಳಿಗೆ ಕೊಟ್ಟ ವಿವರಣೆ ಹೀಗಿದೆ – ಭಾಷ್ಯದ 'ಋಗಾದ್ಯಾಃ' ಎಂಬ ವಾಕ್ಯದ ಹಿನ್ನೆಲೆ ಹೀಗಿದೆ – 'ತತ್ರ ಅಪರಾ ಋಗ್ವೇದಃ ಯಜುರ್ವೇದಃ' ಎಂಬುದಾಗಿ ಉಪನಿಷತ್ತು ವೇದಗಳ ಬಗ್ಗೆ ಉಲ್ಲೇಖ ಮಾಡಿ ಅನಂತರ 'ಅಥ ಪರಾ ಯಯಾ ತದಕ್ಷರಂ ಅಧಿಗಮ್ಯತೇ' ಎಂಬುದಾಗಿ ಋಗಾದಿ ವ್ಯತಿರಿಕ್ತವಾದ ವಿದ್ಯೆಯನ್ನು ಪರವಿದ್ಯಾ ಎಂಬುದಾಗಿ ಉಲ್ಲೇಖ ಮಾಡಿದೆ. ಬೇರೆ ಭಾಷ್ಯಕಾರರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಇದನ್ನು ನಿರಾಕರಿಸಲು ಆಚಾರ್ಯರ ಭಾಷ್ಯವಾಕ್ಯವು ಹೊರಟಿದೆ.

ಆಥರ್ವಣದ ಶಾಂಕರಭಾಷ್ಯ ಹೀಗಿದೆ – 'ತತ್ರ ಕಾ ಪರಾ ಇತ್ಯುಚ್ಯತೇ ಋಗ್ವೇದಃ ಯಜುರ್ವೇದಃ ಸಾಮವೇದಃ ಅಥರ್ವವೇದಃ ಇತ್ಯೇತೇ ಚತ್ವಾರೋ ವೇದಾಃ ಶಿಕ್ಷಾ ಕಲ್ಪಃ ವ್ಯಾಕರಣಂ ನಿರುಕ್ತಂ ಛಂದಃ ಜ್ಯೋತಿಷಂ ಇತಿ ಅಂಗಾನಿ ಷಡೇಷಾ ಅಪರಾ ವಿದ್ಯಾ ಅಥ ಇದಾನೀಂ ಇಯಂ ಪರಾವಿದ್ಯಾ ಉಚ್ಯತೇ ಯಯಾ ತತ್ ವಕ್ಷ್ಯಮಾಣವಿಶೇಷಣಂ ಅಕ್ಷರಂ ಅಧಿಗಮ್ಯತೇ ಪ್ರಾಪ್ಯತೇ ಅಧಿಪೂರ್ವಸ್ಯ ಗಮೇಃ ಪ್ರಾಯಶಃ ಪ್ರಾಪ್ತ್ಯರ್ಥತ್ವಾತ್ ನಚ ಪರಪ್ರಾಪ್ತೇಃ ಅವಗಮಾರ್ಥಸ್ಯ ಭೇದಃ





ಅಸ್ತಿ ಅವಿದ್ಯಾಯಾಃ ಅಪಾಯ ಏವ ಹಿ ಪರಪ್ರಾಪ್ತಿಃ ನ ಅರ್ಥಾಂತರಂ ।''ನನು ಋಗ್ವೇದಾದಿ ಬಾಹ್ಯಾ ತರ್ಹಿ ಸಾ ಕಥಂ ಪರವಿದ್ಯಾ ಸ್ಯಾತ್ ಮೋಕ್ಷಸಾಧನಮ್ ಚ ।' 'ಯಾಃ ವೇದಬಾಹ್ಯಾಃ ಸ್ಮೃತಯೋ ಯಾಶ್ಚಕಾಶ್ಚ ಕುದೃಷ್ಟಯಃ । ಸರ್ವಾಸ್ತಾ ನಿಷ್ಫಲಾ ಪರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ ಇತಿ ಹಿ ಸ್ಮರಂತಿ । ಕುದೃಷ್ಟಿತ್ವಾತ್ ನಿಷ್ಫಲತ್ವಾತ್ ಅನಾದೇಯಾ ಸ್ಯಾತ್ । ಉಪನಿಷದಾಂ ಚ ಋಗ್ವೇದಾದಿಬಾಹ್ಯತ್ವಂ ಸ್ಯಾತ್ । ಋಗ್ವೇದಾದಿತ್ವೇ ತು ಪೃಥಕ್ಕರಣಂ ಅನರ್ಥಕಂ ಅಥ ಪರೇತಿ ।'

'ನ ವೇದ್ಯವಿಷಯವಿಜ್ಞಾನಸ್ಯ ವಿವಕ್ಷಿತತ್ವಾತ್ । ಉಪನಿಷದ್ವೇದ್ಯಾಕ್ಷರವಿಷಯಂ ಹಿ ವಿಜ್ಞಾನಂ ಇಹ ಪರಾ ವಿದ್ಯಾ ಇತಿ ಪ್ರಾಧಾನ್ಯೇನ ವಿವಕ್ಷಿತಂ । ನ ಉಪನಿಷಚ್ಛಬ್ದರಾಶಿಃ । ವೇದಶಬ್ದೇನ ತು ಸರ್ವತ್ರ ಶಬ್ದರಾಶಿಃ ವಿವಕ್ಷಿತಃ । ಶಬ್ದರಾಶ್ಯಧಿಗಮೇಪಿ ಯತ್ನಾಂತರಮಂತರೇಣ ಗುರ್ವಭಿ-ಗಮನಾದಿಲಕ್ಷಣಂ ವೈರಾಗ್ಯಂ ಚ ನ ಅಕ್ಷರಾಧಿಗಮಃ ಸಂಭವತೀತಿ ಪೃಥಕ್ಕರಣಂ ಬ್ರಹ್ಮವಿದ್ಯಾಯಾಃ ಪರಾ ವಿದ್ಯೇತಿ ಕಥನಂ ಚೇತಿ ।'

ಶಾಂಕರಭಾಷ್ಯದ ಅಭಿಪ್ರಾಯ ಹೀಗಿದೆ –

ಪ್ರಶ್ನೆ –ಪರವಿದ್ಯೆ ಎಂದರೆ ಯಾವುದು? ಅಪರವಿದ್ಯೆ ಎಂದರೆ ಯಾವುದು?

ಉತ್ತರ : ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವವೇದ ಈ ನಾಲ್ಕು ವೇದಗಳು ಹಾಗೂ ವೇದಾಂಗವಾದ ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು ಹಾಗೂ ಜ್ಯೋತಿಷ್ಯ ಇವೆಲ್ಲವೂ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ.

ಪ್ರಶ್ನೆ – ಪರವಿದ್ಯೆ ಎಂದು ಯಾವುದನ್ನು ಕರೆಯುತ್ತಾರೆ?

ಉತ್ತರ – ಯಾವ ವಿಶೇಷಣಗಳನ್ನು ತಿಳಿದಾಗ ಅಕ್ಷರನ ಅಧಿಗಮ ಆಗುತ್ತದೋ, ಯಾವುದರ ಜ್ಞಾನದಿಂದ ಅಕ್ಷರನ ಪ್ರಾಪ್ತಿಯು ಸಾಧ್ಯವೋ ಅಂತಹ ಪರಮಾತ್ಮ ಪ್ರಾಪ್ತಿ ಹಾಗೂ ಅವನ ಜ್ಞಾನಕ್ಕೆ ಕಾರಣವಾದುದು ಪರವಿದ್ಯೆ . ಅಧಿಗಮ ಹಾಗೂ ಪ್ರಾಪ್ತಿ ಈ ಎರಡೂ ಸಹ ಒಂದೇ.

ಪ್ರಶ್ನೆ – ಬ್ರಹ್ಮವಿದ್ಯೆಯು ಋಗ್ವೇದಾದಿಗಳಿಗಿಂತ ಬಾಹ್ಯವಾದರೆ ಪರವಿದ್ಯಾ ಅಥವಾ ಮೋಕ್ಷಸಾಧನೀಭೂತ ವಿದ್ಯೆಯು ಆಗಲು ಸಾಧ್ಯವೇ? ಕಾರಣವೇನೆಂದರೆ ವೇದಬಾಹ್ಯವಾದ ಸ್ಮೃತಿಗಳು ಹಾಗೂ ಕೆಟ್ಟವಿಚಾರಗಳು ನಿಷ್ಫಲವಾದದ್ದು. ಪರಲೋಕಕ್ಕೆ ಸಾಧನವಲ್ಲದೇ ಇರುವವು ಹಾಗೂ ನರಕಕ್ಕೆ ಸಾಧನವಾದವು ಎಂದು ಮನುಸ್ಮೃತಿಯು ಹೇಳುತ್ತಿದೆ. ಈ ಸ್ಮೃತಿಯ ಆಧಾರದಿಂದ ಋಗಾದಿ ವಿದ್ಯೆಗಳು ಬ್ರಹ್ಮವಿದ್ಯೆಯ ಹೊರತಾಗಿ ವಿದ್ಯೆ ಎನ್ನುವುದಾದರೆ ಅವುಗಳು ನರಕಕ್ಕೆ ಕಾರಣವೇ?

ಉತ್ತರ – ಉಪನಿಷತ್ ಮುಂತಾದವುಗಳು ಋಗ್ವೇದಾದಿಗಳಿಂದ ಬಾಹ್ಯವಲ್ಲ. ಏಕೆಂದರೆ ವೇದ್ಯವಾದ ವಿಷಯದ ಜ್ಞಾನದ ಬಗ್ಗೆ ಇಲ್ಲಿ ಈ ಪ್ರಕರಣವು ಹೊರಟಿದೆ. ಉಪನಿಷತ್ತಿನಿಂದ

ವೇದ್ಯನಾದ ಅಕ್ಷರನ ಸಂಬಂಧಿಯಾದ ವಿಜ್ಞಾನವೇ ಪರವಿದ್ಯಾ ಎಂಬ ಶಬ್ದದಿಂದ ಪ್ರಧಾನವಾಗಿ ಇಲ್ಲಿ ವಿವಕ್ಷಿತವಾಗಿದೆ ಹೊರತು ಕೇವಲ ಉಪನಿಷತ್ತಿನ ಶಬ್ದರಾಶಿಯಲ್ಲ. ಸಾಮಾನ್ಯವಾಗಿ ಎಲ್ಲಾ ಸ್ಥಳಗಳಲ್ಲಿ ವೇದ ಎಂಬ ಶಬ್ದದಿಂದ ಶಬ್ದರಾಶಿಯನ್ನು ವಿವಕ್ಷಿಸುತ್ತಾರೆ. ಶಬ್ದರಾಶಿಯನ್ನು ತಿಳಿದರೂ ಸಹ ಬೇರೆ ಪ್ರಯತ್ನವಿಲ್ಲದೇ ಗುರುಗಳ ಸೇವೆ ಮುಂತಾದವುಗಳನ್ನು ಮಾಡದೇ ವೈರಾಗ್ಯವೂ ಪಡೆಯದೆ ಅಕ್ಷರನ ಪ್ರಾಪ್ತಿಯು ಸಾಧ್ಯವಿಲ್ಲ. ಆಕಾರಣದಿಂದ ಬ್ರಹ್ಮವಿದ್ಯೆಯನ್ನು ಪ್ರತ್ಯೇಕವಾಗಿ ಪರವಿದ್ಯಾ ಎಂದು ಹೇಳಲಾಗಿದೆ.

ಹೀಗೆ ಶಾಂಕರಭಾಷ್ಯದಲ್ಲಿ ವ್ಯಾಖ್ಯಾನ ಮಾಡಿರುವ ಕಾರಣ ವೇದಾದಿವ್ಯತಿರಿಕ್ತವಾದುದು ಪರವಿದ್ಯೆಯೇ? ಇವೆರಡರಲ್ಲಿ ಭೇದವಿದೆಯೇ? ಎಂಬ ಪ್ರಶ್ನೆಯು ಸಹಜ. ಇದಕ್ಕೆ ಉತ್ತರವಾಗಿ ಋಗಾದ್ಯಾ: ಅಪರಾವಿದ್ಯಾ:' ಎಂಬ ಆಚಾರ್ಯರ ಭಾಷ್ಯವಾಕ್ಯ ಹೊರಟಿದೆ. ಆಪಾತತಃ ಕಾಣುವ ಅರ್ಥಗಳು ವಿಷ್ಣುವನ್ನು ಹೇಳುವುದಿಲ್ಲ. ಆದರೆ ಪರಮಯೋಗರೂಢಿಯಿಂದ ಭಗವಂತನನ್ನು ತಿಳಿಸುತ್ತವೆ. ಹಾಗಾಗಿ ಸಾಕಲ್ಯೇನ ಭಗವತ್ಪ್ರತಿಪಾದಕವಾಗಿರುವ ವಾಕ್ಯಗಳು ಪರವಿದ್ಯಾ ಎಂಬುದಾಗಿ ಸಿದ್ಧವಾಗುತ್ತದೆ. ಇದೇ ವಿಷಯವನ್ನೇ ಮುಂದಿನ 'ಋಗ್ಭಿಃ' ಮುಂತಾದ ವಾಕ್ಯಗಳೂ ಸಹ ತಿಳಿಸುತ್ತವೆ. ಒಂದು ವೇದದಲ್ಲಿ ಹೇಳಿರುವ ವಿಷಯವೇ ಬೇರೆ, ಮತ್ತೊಂದು ವೇದದಲ್ಲಿ ಪ್ರತಿಪಾದ್ಯ ವಿಷಯವೇ ಬೇರೆ ಎಂಬುದಾಗಿ ವೇದಪ್ರತಿಪಾದ್ಯದ ವಿಷಯಗಳಲ್ಲಿ ಭೇದವು ಇರುವುದಿಲ್ಲ. ಈ ಕಾರಣದಿಂದ ಪರವಿದ್ಯಾ ಹಾಗೂ ಅಪರವಿದ್ಯಾ ಎಂಬ ಪಾರಾವರ್ಯವು ಇಲ್ಲ ಎಂಬುದು ಭಾಷ್ಯವಾಕ್ಯದ ಅಭಿಪ್ರಾಯ.

## ವಕ್ತೃವಿನಲ್ಲಿ ಭೇದವಿಲ್ಲದ್ದರಿಂದಲೂ ಪಾರಾವರ್ಯವಿಲ್ಲ

ವಕ್ತೃಭೇದಾಭಾವಾಚ್ಚ ಪಾರಾವರ್ಯಂ ನಾಸ್ತೀತ್ಯಾಹ - ಯಸ್ಮಾದಿತಿ ... ಋಗಾದೀನಾಮೇವ ಪರವಿದ್ಯಾತ್ವೇ ನ ಪ್ರಮುದಿತವ್ಯಮಿತಿ ಭಾವೇನ ತತ್ರ ಮಾನಾಂತರಂ ಪಠತಿ - ವೇದೈರಿತಿ।

ಏತದುಪನಿಷದಃ ಪೂರ್ವೋತ್ತರಪರ್ಯಾಲೋಚನಯಾ ಋಗಾದೇರೇವ ವಿವಕ್ಷಾಭೇದೇನ ಪರವಿದ್ಯಾತ್ವಂ ಸಮರ್ಥಯತೇ। ಅತ್ರಾಪೀತಿ। ಮಂತ್ರಾತ್ಮಿಕಾಮೇವ ಕರ್ಮವಿಷಯಾಮಿತಿಗ್ರಾಹ್ಯಂ। ಆಥರ್ವಣಾನ್ ಮಂತ್ರಾನೇವ। ಇತೋಽಪಿ ಋಗಾದಯ ಏವ ವಿವಕ್ಷಾಭೇದೇನ ಪರವಿದ್ಯಾಃ ನ ಕೇವಲಮುಪನಿಷದಿತ್ಯಾಹ - ಚತುರ್ವೇದೇತಿ। - (ಆಥರ್ವಣ ವ್ಯಾಸತೀರ್ಥೀಯ ಟೀಕಾ)

ಅನುವಾದ - ವಕ್ತೃಭೇದವಿಲ್ಲದ ಕಾರಣದಿಂದಲೂ ವೇದದಲ್ಲಿ ಪಾರಾವರ್ಯವಿರುವುದಿಲ್ಲ. ಇದನ್ನು ತಿಳಿಸಲು 'ಯಸ್ಮಾತ್' ಇತ್ಯಾದಿ ಗ್ರಂಥವು ಹೊರಟಿದೆ. ಋಗಾದಿಗಳೇ ಪರವಿದ್ಯೆಯಾಗಿವೆ. ಈ ವಿಷಯದಲ್ಲಿ





ಅನ್ಯಥಾಜ್ಞಾನವನ್ನು ಹೊಂದಬಾರದು ಎಂಬ ಅಭಿಪ್ರಾಯದಿಂದ ಮತ್ತೊಂದು ಪ್ರಮಾಣವನ್ನು 'ವೇದ್ಯೈಃ' ಎಂಬುದರಿಂದ ಹೇಳುತ್ತಿದ್ದಾರೆ.

ಈ ಉಪನಿಷತ್ತಿನ ಪೌರ್ವಾಪರ್ಯವನ್ನು ಆಲೋಚನೆ ಮಾಡಿದಾಗ ವಿವಕ್ಷಾಭೇದದಿಂದ ಋಗಾದಿಗಳೇ ಪರವಿದ್ಯೆಯಾಗಿವೆ ಎಂಬುದನ್ನು ಸಮರ್ಥಿಸಲು 'ಅತ್ರಾಪಿ' ಎಂಬ ವಾಕ್ಯವು ಹೊರಟಿದೆ. ಮಂತ್ರಾತ್ಮಕವೇ ಆದ ಕರ್ಮವಿಷಯವಾದದ್ದನ್ನು ಇಲ್ಲಿ ವಿವಕ್ಷಿಸಬೇಕು. 'ಆಥರ್ವಣಾನ್ ಮಂತ್ರಾನೇವ' ಎಂದು ಹೇಳಿದ್ದರೂ ಋಗಾದಿಗಳೇ ವಿವಕ್ಷಾಭೇದದಿಂದ ಪರವಿದ್ಯೆಯಾಗುತ್ತವೆ. ಕೇವಲ ಉಪನಿಷತ್ತುಗಳು ಮಾತ್ರವಲ್ಲ ಎಂಬುದನ್ನು 'ಚತುರ್ವೇದ' ಎಂಬುದರಿಂದ ಹೇಳಿದ್ದಾರೆ.

**ವಿವರಣೆ** - ಸಕಲ ವೇದಗಳ ವಕ್ತಾರನು ಒಬ್ಬನೇ ಆದ ಕಾರಣದಿಂದಲೂ ಸಹ ಪಾರುವರ್ಯವು ಈ ವಿದ್ಯೆಯಲ್ಲಿ ಇಲ್ಲ ಎಂಬ ವಿಷಯವನ್ನು ಸ್ಪಷ್ಟಪಡಿಸಲು 'ಯಸ್ಮಾತ್' ಎಂಬ ಆಚಾರ್ಯರ ಭಾಷ್ಯವಾಕ್ಯವು ಹೊರಟಿದೆ. ಋಗಾದಿಗಳೇ ಪರವಿದ್ಯೆ ಎಂಬ ವಿಷಯದಲ್ಲಿ ಯಾವ ಕಾರಣದಿಂದಲೂ ಪ್ರಮಾದವು ಘಟಿಸಬಾರದು. ಈ ಕಾರಣದಿಂದ ಋಗಾದಿಗಳು ಪರವಿದ್ಯೆ ಎಂಬ ವಿಷಯವನ್ನು ಸಮರ್ಥಿಸುವ ಅನೇಕ ಪ್ರಮಾಣಗಳನ್ನು ಆಚಾರ್ಯರು ಉದಾಹರಿಸಲು 'ವೇದ್ಯೈಃ' ಎಂದು ಹೇಳಿದ್ದಾರೆ.

ಕೇವಲ ಬೇರೆ ಬೇರೆ ಉಪನಿಷತ್ತುಗಳ ಆಧಾರದಲ್ಲಿ ಬೇರೆ ಬೇರೆ ಪ್ರಮಾಣಗಳ ಆಧಾರದಿಂದ ಇಲ್ಲಿ ಪಠಿತವಾಗಿರುವ ವಿಷಯವು ಭಿನ್ನ ಎಂಬ ಅಂಶದಲ್ಲಿ ವ್ಯತ್ಯಾಸವಿದೆ ಎಂದಲ್ಲ. ಆಥರ್ವಣ ಉಪನಿಷತ್ತಿನ ಪೂರ್ವಾಪರ ವಿಚಾರವನ್ನು ಮಾಡಿದಾಗಲೂ ಸಹ ಇಲ್ಲಿ ಪರವಿದ್ಯೆ ಮತ್ತು ಅಪರವಿದ್ಯೆ ಎಂಬುದು ಸ್ಪಷ್ಟ ಎಂಬುದನ್ನು ಆಚಾರ್ಯರು 'ಅತ್ರಾಪಿ' ಎಂಬ ಭಾಷ್ಯವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. ಮಂತ್ರಗಳಲ್ಲಿ ಕರ್ಮಗಳನ್ನು ಪ್ರತಿಪಾದನೆ ಮಾಡುತ್ತಾರೆ. ಆ ಕರ್ಮಗಳು ಮಂತ್ರಾತ್ಮಕವಾದ ಕರ್ಮಗಳು ಎಂಬುದಾಗಿ ಇಲ್ಲಿ ತಿಳಿಯಬೇಕು. ಭಾಷ್ಯದಲ್ಲಿರುವ 'ಆಥರ್ವಣಾಮೇವ ಮಂತ್ರಾನ್' ಎಂಬಲ್ಲಿ ಮಂತ್ರಗಳು ಅಥರ್ವಣ ಉಪನಿಷತ್ತಿಗೆ ಸಂಬಂಧಿಯಾದದ್ದು ಎಂದು ಹೇಳಿದ ಕಾರಣದಿಂದ ಬೇರೆ ಬೇರೆ ಪ್ರಮಾಣಗಳಲ್ಲಿ ಮಾತ್ರ ವೇದವಿದ್ಯೆಯು ಹಾಗೂ ಪರವಿದ್ಯೆಯು ಒಂದೇ ಎಂಬ ಅಂಶವು ಸ್ಪಷ್ಟವಾಗುವುದು ಮಾತ್ರವಲ್ಲ ಇದೇ ಪ್ರಕಾರದಲ್ಲಿ ವೇದವಿದ್ಯೆ ಹಾಗೂ ಬ್ರಹ್ಮವಿದ್ಯೆಗೆ ಪರಸ್ಪರ ಭೇದವಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಋಗಾದಿ ವೇದವಿದ್ಯೆಗಳೇ ವಿವಕ್ಷಾ ಭೇದದಿಂದ ಪರವಿದ್ಯೆ ಹಾಗೂ ಅಪರವಿದ್ಯೆಗಳು ಆಗುತ್ತವೆ. ಕೇವಲ ಉಪನಿಷತ್ತು ಮಾತ್ರವೇ ಪರವಿದ್ಯೆ, ಅಪರವಿದ್ಯೆ ಎಂಬುದಾಗಿ ಅಲ್ಲ ಎಂಬುದನ್ನು ಸ್ಪಷ್ಟಪಡಿಸುವುದಕ್ಕೋಸ್ಕರ 'ಚತುರ್ವೇದ ಸಂಸ್ಕಾರವತಾಮ್' ಎಂಬ ಭಾಷ್ಯವಾಕ್ಯವು ಹೊರಟಿದೆ.

## ಪರಾಪರವಿದ್ಯೆಗಳ ಬಗ್ಗೆ ಶ್ರೀಮಂತ್ರಾಲಯ ಪ್ರಭುಗಳ ವಿವರಣೆ ಹೀಗಿದೆ

ಬ್ರಹ್ಮವಿದ್ಯಾಂ ವಿಶಿನಷ್ಟಿ- ಪರಾವರಾಮಿತಿ। ಪರಾ ಚ ಸಾಽವರಾ ಚ ತಾಂ ಪರಾವರಾಂ। ಏಕೈವ ವಿದ್ಯಾ ವಿವಕ್ಷಾಭೇದೇನ ಪರಾಽವರಾ ಚ ಭವತಿ। ಸಾ ಚ ಋಗಾದಿರೂಪೇತ್ಯಗ್ರೇ ವ್ಯಕ್ತಾ। ವಿದ್ಯಾ = ವಿತ್ತಿಜನಕಂ ಶಾಸ್ತ್ರಂ , ದ್ವೇ = ದ್ವಿವಿಧಮಿತ್ಯರ್ಥಃ। ಉಪಾಧಿದ್ವೈವಿಧ್ಯಾಭಿಪ್ರಾಯೇಣ ದ್ವಿವಚನೋಕ್ತಿಃ। ಇತಿ ಬ್ರಹ್ಮವಿದೋ ವದಂತಿ। ಸ್ಮಹೇತಿ ಪ್ರಸಿದ್ಧಮಿತ್ಯರ್ಥಃ। ತಥಾ ಚ ಸೂತ್ರಂ 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಂ' ಇತಿ।

ಅನುವಾದ - 'ಪರಾವರಾಂ' ಎಂಬುದಾಗಿ ಬ್ರಹ್ಮವಿದ್ಯೆಗೆ ವಿಶೇಷಣವನ್ನು ನೀಡಲಾಗಿದೆ. 'ಪರಾಚ ಸಾ ಅವರಾಚ ಪರಾವರಾ ತಾಂ ಪರಾವರಾಂ' ಎಂಬುದಾಗಿ ಇಲ್ಲಿ ಕರ್ಮಧಾರಯ ಸಮಾಸವನ್ನು ಮಾಡಲಾಗಿದೆ. ಇದರಿಂದ ಒಂದೇ ವಿದ್ಯೆಯೇ ವಿವಕ್ಷಾಭೇದದಿಂದ ಪರವೂ ಆಗುತ್ತದೆ, ಅವರವೂ ಆಗುತ್ತದೆ. ಇದನ್ನೇ ಮುಂದೆ 'ಋಗಾದಿ ರೂಪಾ' ಮುಂತಾದ ಉಪನಿಷತ್ ಭಾಗದಿಂದ ಸ್ಪಷ್ಟಪಡಿಸಲಾಗಿದೆ ಎಂದಭಿಪ್ರಾಯ.

ವಿದ್ಯಾ ಶಬ್ದಕ್ಕೆ ಜ್ಞಾನಜನಕವಾದ ಶಾಸ್ತ್ರ ಎಂದರ್ಥ. ವಿದಜ್ಞಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ವಿತ್ತಿಜನಕವಾದ ಶಾಸ್ತ್ರ ಎಂಬರ್ಥವನ್ನು ಈ ಪ್ರಕರಣದಲ್ಲಿ ಪಡೆದುಕೊಂಡಿದೆ. 'ದ್ವೇ ವಿದ್ಯೇ' ಎನ್ನುವ ಶಬ್ದಕ್ಕೆ ದ್ವಿವಿಧವಾದ ಜ್ಞಾನಜನಕವಾದ ಶಾಸ್ತ್ರಗಳು ಎಂದರ್ಥ. ಇಲ್ಲಿ ಉಪಾಧಿಗಳು ಎರಡು ವಿಧವಾದ್ದರಿಂದ 'ದ್ವೇ ವಿದ್ಯೇ' ಎಂಬುದಾಗಿ ದ್ವಿವಚನಪ್ರಯೋಗವನ್ನು ಮಾಡಲಾಗಿದೆ. 'ಇತಿ' ಎಂಬ ಶಬ್ದದ ಮುಂದೆ 'ಬ್ರಹ್ಮಜ್ಞಾನಿಗಳು ಹೀಗೆ ಹೇಳುತ್ತಾರೆ' ಎಂಬುದಾಗಿ ಅಧ್ಯಾಹಾರವನ್ನು ಮಾಡಿಕೊಳ್ಳಬೇಕು. 'ಸ್ಮ' ಹಾಗೂ 'ಹ' ಎಂಬ ಈ ಎರಡೂ ಅವ್ಯಯಗಳು 'ಪ್ರಸಿದ್ಧಿ' ಎಂಬ ಅರ್ಥವನ್ನು ತಿಳಿಸುತ್ತಿವೆ. ಈ ವಿಷಯವು ಪ್ರಸಿದ್ಧ ಎಂಬ ಅರ್ಥದಲ್ಲಿ ಬ್ರಹ್ಮಸೂತ್ರದ ಸಮ್ಮತಿಯೂ ಸಹ ಇದೆ ಎಂಬುದನ್ನು ಇಲ್ಲಿ ನಾವು ಮನಗಾಣಬೇಕು. ಏಕೆಂದರೆ 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಂ' ಇತ್ಯಾದಿ ಸೂತ್ರದಲ್ಲಿ ಇದೇ ರೀತಿಯ ಅರ್ಥವನ್ನು ನೀಡಲಾಗಿದೆ.

## ಪರಾಪರವಿದ್ಯೆಯಲ್ಲಿ ವ್ಯಕ್ತಿಶಃ ಭೇದವಿಲ್ಲ

ಪರಾ ಚೈವಾಪರಾ ಚೇತಿ, ಪರಮುಖ್ಯಾರ್ಥಬೋಧಕತ್ವೋಪಾಧಿನಾ ಪರೈವ ಸತೋ ವಿದ್ಯಾ ಅಪರಾ ಅಮುಖ್ಯಾರ್ಥಬೋಧಕತ್ವೋಪಾಧಿನಾ ಅಪರಾ ಚೇತ್ಯುಚ್ಯತೇ; ನ ವಸ್ತುತೋ ವ್ಯಕ್ತಿಭೇದೋಽಸ್ತಿತ್ಯೇವಕಾರಪ್ರಯೋಗಃ।

ಅಪರವಿದ್ಯೈವೋಪಾಧಿಭೇದೇನ ಪರವಿದ್ಯೇತಿ ಭಾವೇನ ಪ್ರಸ್ತಾವಪೂರ್ವಮಪರವಿದ್ಯಾ-





ಮಾಹ। ತತ್ರಾಪರೇತಿ। ಏತದೇವ ಋಗಾದಿಶಾಸ್ತ್ರಮಕ್ಷರಾಧಿಗತಿಹೇತುತ್ವೋಪಾಧಿನಾ ಪರವಿದ್ಯೇತಿ ಭಾವೇನಾಹ, ಅಥ ಪರೇತಿ। ಯದದ್ರೇಶ್ಯತ್ವಾದಿಗುಣಕಂ ತದಕ್ಷರಂ ಯಯಾ ವಿದ್ಯಯಾ ವ್ಯಕ್ತಿಜನಕ ಋಗಾದಿಶಾಸ್ತ್ರೇಣಾಧಿಗಮ್ಯತೇ ಸಾ ಅಕ್ಷರಜ್ಞಪ್ತಿಹೇತುತ್ವೋಪಾಧಿನಾ ಪರವಿದ್ಯೇತ್ಯುಚ್ಯತ ಇತ್ಯರ್ಥಃ।

ತದುಕ್ತಂ ಋಗಾದ್ಯಾ ಅಪರಾ ವಿದ್ಯಾ ಇತ್ಯಾದಿ - ತಾಂ ಋಗಾದಿಶಾಸ್ತ್ರರೂಪಾಂ ಬ್ರಹ್ಮವಿದ್ಯಾಂ ತತ್ವತಃ ಯಾಥಾತಥ್ಯೇನ ಪ್ರೋವಾಚೇತಿ; ಕರ್ಮದೇವತಾದಿಬೋಧಕತಯಾ ಶೌನಕೇನಾವಗತಾಂ ಋಗಾದಿವಿದ್ಯಾಂ ಪರಮಮುಖ್ಯವೃತ್ತಿಮಹಾತಾತ್ಪರ್ಯಾಭ್ಯಾಂ ಬ್ರಹ್ಮಜ್ಞಪ್ತಿಹೇತುತ್ವೇನ ಪರವಿದ್ಯಾ ಯಥಾ ಭವತಿ ತಥಾ ವ್ಯಾಚಖ್ಯಾವಿತಿ ಭಾವಃ। ಅಥ ಏವ ತತ್ವತ ಇತ್ಯುಕ್ತಿಃ। (ಆಥರ್ವಣ ಖಂಡಾರ್ಥಃ)

ಅನುವಾದ - 'ಪರಾ ಚೈವ ಅಪರಾ ಚ' ಎಂಬಲ್ಲಿರುವ ಏವ ಶಬ್ದದ ಅಭಿಪ್ರಾಯ ಹೀಗಿದೆ - ಒಂದೇ ವಿದ್ಯೆಗೆ ಉಪಾಧಿಗಳ ಭೇದದಿಂದ ಭೇದವಿದೆಯೇ ಹೊರತು ವಸ್ತುತಃ ವ್ಯಕ್ತಿಯ ಭೇದವು ಇರುವುದಿಲ್ಲ. ಅಮುಖ್ಯಾರ್ಥಬೋಧಕತ್ವ ಹಾಗೂ ಪರಮಮುಖ್ಯಾರ್ಥಬೋಧಕತ್ವ ಎಂಬುದು ಇಲ್ಲಿರುವ ಉಪಾಧಿಗಳು. ಪರಮಮುಖ್ಯವಾದ ಅರ್ಥ ಎಂದರೆ ಭಗವಂತ. ಅವನನ್ನು ತಿಳಿಸುವಾಗ ಪರವಿದ್ಯೆಯೆಂದು ಕರೆಸಿಕೊಳ್ಳುತ್ತದೆ. 'ಪರಾ ಚೈವ' ಎಂದರೆ ಪರವಾದ ವಿದ್ಯೆಯೇ ಅಮುಖ್ಯಾರ್ಥವಾದ ಕರ್ಮ ದೇವತಾದಿಗಳನ್ನು ಬೋಧಿಸುವ ಮುಖಾಂತರ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ. ಪರವಿದ್ಯೆಯೇ ಬೇರೆ, ಅಪರವಿದ್ಯೆಯೇ ಬೇರೆ ಎಂಬ ವ್ಯಕ್ತಿ ಭೇದವು ಇಲ್ಲ ಎಂಬುದನ್ನು ಉಪನಿಷತ್ತಿನಲ್ಲಿರುವ ಏವಕಾರವು ಸ್ಪಷ್ಟಪಡಿಸುತ್ತಿದೆ.

ಅಪರವಿದ್ಯೆಯೇ ಉಪಾಧಿಭೇದದಿಂದ ಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆಂಬುದಕ್ಕೆ ಪೀಠಿಕಾರೂಪವಾಗಿ ಪರವಿದ್ಯೆಯ ಸ್ವರೂಪವನ್ನು ಉಪನಿಷತ್ತು 'ತತ್ರ ಅಪರಾ' ಎಂಬ ಭಾಗದಿಂದ ತಿಳಿಸುತ್ತಿದೆ. ಅದೇ ಉಪನಿಷತ್ತಿನಲ್ಲೇ ಮುಂದೆ 'ಅಥ ಪರಾ' ಎಂಬ ವಾಕ್ಯವೂ ಸಹ ಬಂದಿದೆ. ಹಿಂದೆ ಪಠಿತವಾದ ಋಗಾದಿ ಶಾಸ್ತ್ರಗಳು 'ಅಕ್ಷರನ ಜ್ಞಾನಕ್ಕೆ ಕಾರಣ' ಎಂಬ ಉಪಾಧಿಯ ನಿಮಿತ್ತದಿಂದ ಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ ಎಂಬುದಾಗಿ ಈ ವಾಕ್ಯದ ಅಭಿಪ್ರಾಯ. ಮುಂದೆ ಹೇಳಲ್ಪಡುವ ಅದೃಶ್ಯತ್ವ, ಅಗ್ರಾಹ್ಯತ್ವ ಮುಂತಾದ ಗುಣಗಳುಳ್ಳ ಅಕ್ಷರನು ಯಾವ ವಿದ್ಯೆಯಿಂದ 'ಯಯಾ ತದಧಿಗಮ್ಯತೇ' ಯಯಾ = ವ್ಯಕ್ತಿಜನಕವಾದ ಋಗಾದಿ ಶಾಸ್ತ್ರದಿಂದ, ಅಧಿಗಮ್ಯತೇ = ತಿಳಿಯಲ್ಪಡುತ್ತಾನೋ, ಸಃ = ಅಕ್ಷರನ ಜ್ಞಾನಕ್ಕೆ ಹೇತು ಎಂಬ ಉಪಾಧಿಯಿಂದ ಆ ವಿದ್ಯೆಯು ಪರವಿದ್ಯಾ ಎಂಬುದಾಗಿ ಕರೆಸಿಕೊಳ್ಳಲ್ಪಡುತ್ತದೆ ಎಂದರ್ಥ. ಇದೇ ವಿಷಯವನ್ನೇ ಭಾಷ್ಯದಲ್ಲಿ ಪ್ರಮಾಣ ಪೂರ್ವಕವಾಗಿ 'ಋಗಾದ್ಯಾಃ ಅಪರವಿದ್ಯಾ' ಎಂದು ಉದಾಹರಿಸಿ ವಿವರಣೆ ನೀಡಲಾಗಿದೆ.

'ತಾಂ ತತ್ವತಃ ಪ್ರವದಂತಿ' ಎಂಬ ಉಪನಿಷತ್ತಿನ ಅಭಿಪ್ರಾಯ ಹೀಗಿದೆ - ತಾಂ = ಋಗಾದಿಶಾಸ್ತ್ರರೂಪವಾದ ಬ್ರಹ್ಮವಿದ್ಯೆಯನ್ನು, ತತ್ವತಃ = ಯಥಾರ್ಥವಾಗಿ, ಪ್ರೋವಾಚ = ಅಂಗಿರಸರು ಉಪದೇಶ ಮಾಡಿದರು.





ಕರ್ಮದೇವತಾದಿಗಳನ್ನು ತಿಳಿಸುತ್ತದೆಂಬುದಾಗಿ ಶೌನಕರು ಋಗಾದಿವಿದ್ಯೆಗಳನ್ನು ತಿಳಿದಿದ್ದರು. ಆದರೆ ಋಗಾದಿವಿದ್ಯೆಗಳು ಪರಮಮುಖ್ಯವೃತ್ತಿ ಹಾಗೂ ಮಹಾತಾತ್ಪರ್ಯದಿಂದ ಬ್ರಹ್ಮನ ಜ್ಞಾನಕ್ಕೆ ಕಾರಣವಾಗಿವೆ. ಈ ಕಾರಣದಿಂದಲೇ ಪರವಿದ್ಯಾ ಎಂಬುದಾಗಿ ಕರೆಸಿಕೊಳ್ಳುತ್ತದೆ. ಹೇಗೆ ಬ್ರಹ್ಮಪ್ರಾಪ್ತಿಗೆ ಕಾರಣವಾಗಿ ಇದು ಪರವಿದ್ಯೆಯಾಗುತ್ತದೋ, ಹಾಗೆ ಶೌನಕರಿಗೆ ಅಂಗಿರಸರು ಬ್ರಹ್ಮವಿದ್ಯೆಯನ್ನು ಉಪದೇಶ ಮಾಡಿದರು. ಇದನ್ನೇ ತತ್ವತಃ ಎಂಬ ಉಪನಿಷತ್ತಿನ ಶಬ್ದವು ತಿಳಿಸುತ್ತಿದೆ.

ಹೀಗೆ ಆಥರ್ವಣ ಉಪನಿಷತ್ತಿನ ಖಂಡಾರ್ಥದಲ್ಲಿ ಮಂತ್ರಾಲಯಪ್ರಭುಗಳಾದ ಶ್ರೀರಾಘವೇಂದ್ರ-ಗುರುಸಾರ್ವಭೌಮರು ಹೇಳಿದ್ದಾರೆ. ಋಗಾದಿ ವಿದ್ಯೆಯೇ ಪರವಿದ್ಯೆ , ಅದೇ ಕರ್ಮಾದಿಗಳನ್ನು ಬೋಧಿಸುವಾಗ ಅಪರವಿದ್ಯಾ ಎಂಬ ಶಬ್ದದಿಂದ ಕರೆಸಿಕೊಳ್ಳುತ್ತದೆ. ಪ್ರತ್ಯೇಕವಾದ ಎರಡು ವಿದ್ಯೆಗಳಿಲ್ಲ ಎಂಬ ಅಭಿಪ್ರಾಯ ಶ್ರೀರಾಘವೇಂದ್ರತೀರ್ಥರಿಗೂ ಸಹ ಸಮ್ಮತವಾಗಿದೆ.

## ವನಮಾಲಿಮಿಶ್ರರ ಪ್ರಕಾರವೂ ಕೂಡ ಪರಾಪರವಿದ್ಯೆಗಳಲ್ಲಿ ಭೇದವಿಲ್ಲ

ಚತುರ್ಮುಖಃ ಸರ್ವವಿದ್ಯಾಪ್ರತಿಷ್ಠಾಪಿಕಾಂ ಬ್ರಹ್ಮವಿದ್ಯಾಂ ಬ್ರಹ್ಮಪ್ರಮಿತಿಜನಕಶಬ್ದರಾಶಿಂ ವೈವಸ್ವತಮನ್ವಂತರೇ ಪ್ರಥಮತೋ ಜಾತಾಯ ಅಥರ್ವಣೇ ಪ್ರಾಹ। ಅಥರ್ವಮುನಿಸ್ತು ವಿವಕ್ಷಾಭೇದೇನ ಪರಾಪರವ್ಯಪದೇಶ್ಯಾಂ ತಾಮೇವ ಬ್ರಹ್ಮವಿದ್ಯಾಮಂಗಿರಮುನಯೇ, ಸ ಚ ಭಾರದ್ವಾಜಾಯ, ಸೋಽಪ್ಯಾಂಗಿರಸೇ ಉಪದಿದೇಶ।

ತಮೇತಮಾಂಗಿರಸಂ ಯಥಾ ವಿಧ್ಯುಪಸನ್ನಃ ಶೌನಕಃ ಹೇ ಪೂಜ್ಯಪಾದ ! ಸರ್ವಮಿದಂ ಕರ್ಮದೇವತಾದಿಕಂ ಮಯಾ ಜ್ಞಾತಮಸ್ತಿ; ತತ್ಜ್ಞಾನಂ ಕಸ್ಮಿನ್‌ವಿಜ್ಞಾತೇ ಸಫಲಂ ಭವತಿ ? ಯಜ್ಜ್ಞಾನಾರ್ಥಂ ಸನ್ಮೋಕ್ಷಾಖ್ಯಫಲವದ್ಭವತಿ, ತನ್ಮೇ ಬ್ರೂಹೀತಿ ಪ್ರಪಚ್ಛ

ಅಂಗಿರಾಸ್ತು ಕರ್ಮದೇವತಾದಿಜ್ಞಾನಂ ತದನುಷ್ಠಾನಾದಿನಾ ಬ್ರಹ್ಮಜ್ಞಾನಾರ್ಥ ಸನ್ಮೋಕ್ಷಾಖ್ಯ-ಫಲವದ್ಭವತೀತಿ 'ತದೇತತ್ಸರ್ವಂ ಮಂತ್ರೇಷು' ಇತ್ಯಾದಿನಾ ವಿವಕ್ಷುಃ ಬ್ರಹ್ಮಸ್ವರೂಪಂ ವಕ್ತುಮುಪೋದ್ಘಾತತಯಾ ವಿದ್ಯಾನಿರೂಪಣಮುಪಕ್ರಾಂತವಾನ್ - ದ್ವೇ ವಿದ್ಯೇ ಇತ್ಯಾದಿನಾ।

ಪರಮಮುಖ್ಯಾರ್ಥೋಪಪಾದಕತ್ವೋಪಾಧಿನಾ ಪರೇತ್ಯುಚ್ಯಮಾನೈವ ವಿದ್ಯಾ ಮುಖ್ಯಾರ್ಥೋಪಪಾದಕತ್ವೋಪಾಧಿನಾ ಅಪರಾ ಚೇತ್ಯುಚ್ಯತ ಇತಿ ತದರ್ಥಃ। ಏವಕಾರಪ್ರಯೋಗೇಣ ವಸ್ತುತೋ ವ್ಯಕ್ತಿಭೇದೋ ನಾಸ್ತೀತಿ ಚ ಸ್ಪಷ್ಟಂ। ವಿವೃತಂ ಚೇತ್ಥಮೇವ ಭಾಷ್ಯೇ : - ಋಗಾದ್ಯಾ ಅಪರಾ





ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ । ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥ ಇತಿ

ಅನುವಾದ - ವನಮಾಲಿಮಿಶ್ರರು 'ಬ್ರಹ್ಮಸೂತ್ರಸಿದ್ಧಾಂತಮುಕ್ತಾವಳಿಃ' ಎಂಬ ಗ್ರಂಥವನ್ನು ರಚನೆ ಮಾಡಿದ್ದಾರೆ. ಅದರಲ್ಲಿ ಬ್ರಹ್ಮಸೂತ್ರಗಳ ಅರ್ಥವನ್ನು ಹೇಳುವಾಗ ಪ್ರಾಸಂಗಿಕವಾಗಿ ಬಂದ ಉಪನಿಷತ್ತಿನ ಮಂತ್ರಗಳ ಅರ್ಥವನ್ನೂ ಸಹ ಹೇಳಿದ್ದಾರೆ. ಈ ಸಂದರ್ಭದಲ್ಲಿ ಅವರು ಮಾಡಿದ ಉಪನಿಷತ್ತಿನ ವಿವರಣೆ ಹೀಗಿದೆ –

ಚತುರ್ಮುಖಬ್ರಹ್ಮದೇವರು ಎಲ್ಲಾ ವಿದ್ಯೆಗೂ ಆಶ್ರಯವಾದ ಬ್ರಹ್ಮವಿದ್ಯೆಯನ್ನು (ಬ್ರಹ್ಮ ಯಥಾರ್ಥ-ಜ್ಞಾನವನ್ನು ಉಂಟುಮಾಡುವ ಶಬ್ದರಾಶಿಯನ್ನು) ವೈವಸ್ವತಮನ್ವಂತರದಲ್ಲಿ ಮೊಟ್ಟ ಮೊದಲಿಗೆ ತಮ್ಮಿಂದ ಹುಟ್ಟಿದ ಅಥರ್ವ ಎಂಬ ಮಗನಿಗೆ ಉಪದೇಶ ಮಾಡಿದರು. ಅಥರ್ವ ಮುನಿಗಳು ವಿವಕ್ಷಾಭೇದದಿಂದ ಪರ ಹಾಗೂ ಅಪರ ಎಂಬ ಹೆಸರುಳ್ಳ ಅದೇ ವಿದ್ಯೆಯನ್ನೇ ಅಂಗಿರ ಎಂಬ ಋಷಿಗಳಿಗೆ ಉಪದೇಶಿಸಿದರು. ಅವರು ಭರದ್ವಾಜರಿಗೆ, ಅವರೂ ಸಹ ತಮ್ಮ ಶಿಷ್ಯರಾದ ಅಂಗಿರಸರಿಗೆ ಉಪದೇಶಿಸಿದರು. ಹೀಗೆ ಈ ಉಪನಿಷತ್ತಿನ ಪರಂಪರೆಯು ಪ್ರಾರಂಭವಾಗಿದೆ.

ಇದೇ ವಿದ್ಯೆಯನ್ನು ಅಂಗಿರಸರು ಶೌನಕರ ಬಳಿ ಬಂದು ಪ್ರಶ್ನೆ ಮಾಡಿದ್ದಾರೆ. ಗುರುವು ಶಿಷ್ಯನನ್ನು ಹೇಗೆ ಅನುವೃತ್ತಿ ಮಾಡಿಕೊಂಡು ಬ್ರಹ್ಮವಿದ್ಯೆಯನ್ನು ಪಡೆಯಬೇಕೋ, ಅದರಂತೆ ಸಮಿತ್-ಪಾಣಿಯಾಗಿ ಬಂದು ಶೌನಕರ ಬಳಿ ಪ್ರಶ್ನೆ ಮಾಡುತ್ತಾರೆ. 'ಎಲೈ ಪೂಜ್ಯರೇ, ಈ ಕರ್ಮವಿಷಯಕವಾದ ದೇವತಾವಿಷಕವಾದ ಎಲ್ಲಾ ವೇದವಿದ್ಯೆಗಳನ್ನು ನಾನು ತಿಳಿದಿದ್ದೇನೆ. ಈ ಜ್ಞಾನವು ಯಾವುದನ್ನು ತಿಳಿದಾಗ ಸಫಲವಾಗುತ್ತದೆ? ನನ್ನ ಜ್ಞಾನವು ಮೋಕ್ಷರೂಪವಾದ ಫಲವನ್ನು ಪಡೆಯಬೇಕಾದರೆ ಅದಕ್ಕೆ ಸಾಧನಭೂತವಾದ ವಿದ್ಯೆಯನ್ನು ನನಗೆ ಉಪದೇಶ ಮಾಡಿರಿ!' ಎಂಬುದಾಗಿ ಪ್ರಶ್ನೆ ಮಾಡಿದರು.

ಕರ್ಮ, ದೇವತಾ ಮುಂತಾದವುಗಳ ಜ್ಞಾನದಿಂದ ಹಾಗೂ ಅವುಗಳ ಅನುಷ್ಠಾನಾದಿಗಳಿಂದ ಬ್ರಹ್ಮಜ್ಞಾನವು ಬರುತ್ತದೆ. ಬ್ರಹ್ಮಜ್ಞಾನವು ಮೋಕ್ಷಫಲವನ್ನು ಕೊಡುತ್ತದೆಂಬುದನ್ನು ಅಂಗಿರಸರು ತಿಳಿದಿದ್ದರು. ಏಕೆಂದರೆ 'ತದೇತತ್‌ಸರ್ವಂ ಮಂತ್ರೇಷು' ಎಂಬ ಉಪನಿಷದ್ಭಾಗವು ಬ್ರಹ್ಮಸ್ವರೂಪವನ್ನು ತಿಳಿಸಲು ಉಪೋದ್ಘಾತವಾಗಿ ಹೊರಟಿದೆ. ಅದನ್ನೇ 'ದ್ವೇ ವಿದ್ಯೇ' ಎಂಬುದಾಗಿ ಮುಂದೆ ವಿವರಿಸಲಾಗಿದೆ. ಪರಮ ಮುಖ್ಯಾರ್ಥವಾದ ಭಗವದ್ವಿಷಯವನ್ನು ಉಪಪಾದನೆ ಮಾಡುವಿಕೆ ಎಂಬುದೇ ಇಲ್ಲಿ ಉಪಾಧಿ. ಈ ಉಪಾಧಿಯ ನಿಮಿತ್ತಕ-ವಾಗಿಯೇ ಆ ವಿದ್ಯೆಯನ್ನು ಪರಾ ಎಂಬ ಶಬ್ದದಿಂದ ಕರೆಯಲಾಗುತ್ತದೆ. 'ಪರಮಮುಖ್ಯಾರ್ಥಪ್ರತಿಪಾದಕತ್ವ' ಎಂಬ ಉಪಾಧಿಯಿಂದ ಪರಾ ಎಂದು ಕರೆಸಿಕೊಳ್ಳುವ ಇದೇ ವಿದ್ಯೆಯೇ ಅಮುಖ್ಯಾರ್ಥೋಪಪಾದಕತ್ವ



ರೂಪವಾದ ಉಪಾಧಿಯಿಂದ ಅಪರಾ ಎಂದು ಕರೆಸಿಕೊಳ್ಳುತ್ತದೆ . ಇಲ್ಲಿರುವ 'ಪರಾ ಚೈವ' ಎಂಬಲ್ಲಿರುವ ಏವಕಾರವು ವಸ್ತುತಃ ಈ ವಿದ್ಯೆಯಲ್ಲಿ ಭೇದವು ಇಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಇದನ್ನೇ ಭಾಷ್ಯಕಾರರು 'ಋಗಾದ್ಯಾಃ ಅಪರಾ ವಿದ್ಯಾ' ಎಂಬ ವಾಕ್ಯದಿಂದ ವಿವರಿಸಿದ್ದಾರೆ ಎಂದು ವನಮಾಲಿಮಿಶ್ರರು ನಿರೂಪಣೆ ಮಾಡಿದ್ದಾರೆ.

## ವೇದದಲ್ಲಿ ಪಾರಾವರ್ಯವಿಲ್ಲವೆಂಬುದು ಸಕಲಜ್ಞಾನಿಗಳಿಗೂ ಸಮ್ಮತ

'ವೇದೇ' ಇತ್ಯಾದ್ಯುತ್ತರಭಾಷ್ಯೇಣ ಋಗಾದೀನಾಂ ವಿಷ್ಣುವಾಚಕತ್ವವಿವರಣಪರೇಣ, ಉದಾಹೃತ - ಶ್ರೀವ್ಯಾಸತೀರ್ಥೀಯ ಟೀಕಾ, ಉಮರ್ಜೀಯಟಿಪ್ಪಣೀ, ಶ್ರೀರಾಘವೇಂದ್ರತೀರ್ಥೀಯಖಂಡಾರ್ಥೇಷು, ಭಾಷ್ಯಸ್ಯ ವಾಚಕಪದಸ್ಯ ಪ್ರತಿಪಾದಕಬೋಧಕ ಇತ್ಯಾದಿಶಬ್ದೈರ್ವಿವರಣೇನ ಚ ವಾಚಕತ್ವಂ ಪದಶಕ್ತಿರೇವೇತಿ ಸ್ಪಷ್ಟಮೇವ ಭಾಷ್ಯಾದಿದರ್ಶಿನಾಮ್ ।

'ಯದಾ ವಿಷ್ಣೋಸ್ತು ವಾಚಕಾಃ' ಇತಿ ಭಾಷ್ಯಂ ಚ ಕೃತಯುಗೇ ಮೂಲಕಾರಣ ವಿಷ್ಣ್ವೇಕ-ಜ್ಞಾಪಕತ್ವನಿಮಿತ್ತೇನ ಮೂಲವೇದಸಂಜ್ಞಕಾನಾಂ ಋಗಾದೀನಾಂ ಪ್ರತಿಪಾದ್ಯಭೇದಾದಿಪ್ರಯುಕ್ತಂ ಪಾರಾವರ್ಯಂ = ಪರಾಪರವಿದ್ಯಾಭೇದಃ ವೇದೇ ನಾಸ್ತೀತಿ 'ತಸ್ಮಾದ್ವೇದೇ ನ ಕಿಂಚನ ಪಾರಾವರ್ಯಂ' ಇತ್ಯುತ್ತರಭಾಷ್ಯೇಣ ವ್ಯಾಖ್ಯಾತಮ್ ।

ಅನುವಾದ - 'ವೇದೇ ರಾಮಾಯಣೇ' ಮುಂತಾದ ಭಾಷ್ಯವಾಕ್ಯಗಳು ಋಗಾದಿಗಳನ್ನು ವಿಷ್ಣುವಾಚಕ ಎಂಬುದಾಗಿ ವಿವರಣೆಯನ್ನು ನೀಡುತ್ತದೆ. ಹಾಗೂ ಈ ಹಿಂದೆ ಹೇಳಿದ ವ್ಯಾಸತೀರ್ಥರ ಟೀಕೆ, ಉಮರ್ಜಿಯ ಟಿಪ್ಪಣಿ, ಶ್ರೀರಾಘವೇಂದ್ರತೀರ್ಥರ ಖಂಡಾರ್ಥ ಇವೆಲ್ಲವೂ ಸಹ ಭಾಷ್ಯದಲ್ಲಿರುವ ವಾಚಕ ಎಂಬ ಶಬ್ದಕ್ಕೆ ಪ್ರತಿಪಾದಕ, ಬೋಧಕ ಇತ್ಯಾದಿ ಶಬ್ದಗಳಿಂದ ವಿವರಣೆ ಮಾಡುತ್ತಿದೆ. ಇದರಿಂದ ವಾಚಕತ್ವವು ಪದಶಕ್ತಿಯೇ ಹೊರತು, ತಾತ್ಪರ್ಯಶಕ್ತಿಯಲ್ಲ ಎಂಬುದನ್ನು ಭಾಷ್ಯದ ಅರ್ಥವನ್ನು ಸೂಕ್ಷ್ಮವಾಗಿ ವಿವೇಚನೆ ಮಾಡುವವರಿಗೆ ತಿಳಿಯುತ್ತದೆ.

'ಯದಾ ವಿಷ್ಣೋಸ್ತು ವಾಚಕಾಃ' ಎಂಬ ಭಾಷ್ಯವಾಕ್ಯವು ಕೃತಯುಗದಲ್ಲಿ ಇರುವ ವಿಷಯವನ್ನು ತಿಳಿಸುತ್ತಿದೆ. ಎಲ್ಲಕ್ಕೂ ಮೂಲಕಾರಣನಾದ ವಿಷ್ಣುವನ್ನು ಮಾತ್ರವೇ ಜ್ಞಾಪನೆ ಮಾಡುತ್ತದೆ ಮೂಲಜ್ಞಾಪಕತ್ವ ಎಂಬ ನಿಮಿತ್ತದಿಂದ ಮೂಲವೇದ ಎಂಬ ಸಂಜ್ಞೆಯು ವೇದಗಳಿಗೆ ಬಂದಿದೆ. ಹೀಗಾಗಿ ಇವುಗಳಲ್ಲಿ ಮೂಲವೇದ ಎಂದು ಕರೆಸಿಕೊಳ್ಳುವ ಪ್ರಯುಕ್ತ ವಿಷ್ಣೇಕನಿಷ್ಠತ್ವ ಮಾತ್ರವಿದೆಯೆ? ಅಥವಾ ವಿಷ್ಣುವನ್ನು ಹೊರತು ಅನ್ಯಪ್ರತಿಪಾದಕತ್ವವೂ ಇವುಗಳಿಗೆ ಇದೆಯೇ? ಎಂಬ ಭೇದದ ಬಗ್ಗೆ ಸಂಶಯವು ಬಂದರೆ ಹೀಗೆ







ಉತ್ತರಿಸಲಾಗಿದೆ - ಪಾರಾವರ್ಯವು ವೇದದಲ್ಲಿ ಇಲ್ಲ. ಪಾರಾವರ್ಯ ಎಂದರೆ ಪರ ಮತ್ತು ಅಪರ ಎಂಬ ವಿದ್ಯಾಭೇದ ಎಂದರ್ಥ. ಇದು ವೇದದಲ್ಲಿ ಇಲ್ಲ ಎಂಬುದನ್ನು ಸ್ಪಷ್ಟಪಡಿಸಲು ಭಾಷ್ಯಕಾರರು 'ತಸ್ಮಾತ್ ವೇದೇ ನ ಕಿಂಚನ ಪಾರಾವರ್ಯಂ' ಎಂಬ ಮಾತನ್ನು ಉಲ್ಲೇಖ ಮಾಡಿದ್ದಾರೆ.

### ಈ ವಿಷಯದಲ್ಲಿ ಬಹಿರಂಗಪ್ರಮಾಣವಷ್ಟೇ ಅಲ್ಲ, ಅಂತರಂಗಪ್ರಮಾಣವೂ ಇದೆ

**ಏವಂ ಚ ಕಾರ್ತಯುಗಾ ಜನಾಃ ಋಗಾದಿಕಂ ಪರವಿದ್ಯೇತ್ಯೇವ ಜಾನಂತಿ। ಇತರಯುಗೇಷು ಚ ತ್ರೇತಾದಿಕಾಲಬಲೇನ ವಿಷ್ಣೋರನ್ಯತ್ರಾದರೇಣ ಸ್ವಕೀಯಯೋಗ್ಯತಾವಶೇನ ಚ ಯದಾ ಋಗಾದ್ಯಾ ಆಪಾತತಃ ಪ್ರತೀತಾರ್ಥತಯಾ ವಿಷ್ಣೋರ್ನ ವಾಚಕಾಃ, ಕಿಂತು ಕರ್ಮಾದಿಪ್ರತಿಪಾದಕಾ ಇತ್ಯನುಸಂಧೀಯಂತೇ, ತದಾ ಋಗಾದ್ಯಾ ಅಪರವಿದ್ಯಾ , ಯದಾ ತು ಋಗಾದ್ಯಾಃ ಪರಮ-ಯೋಗರೂಢ್ಯಾ ವಿಷ್ಣುವಾಚಕತ್ವೇನಾನುಸಂಹಿತಾಃ, ತದಾ ತಾ ಏವ ಪರವಿದ್ಯಾ ಇತಿ ಜಾನಂತೀತ್ಯರ್ಥಃ।**

**ಸಮರ್ಥಿತಶ್ಚಾಯಮೇವಾರ್ಥಃ । ಪ್ರಮಾಣೋದಾಹರಣಪೂರ್ವಕಂ 'ಋಗ್ಭಿಃ' ಇತ್ಯಾದಿ ಭಾಷ್ಯೇಣ।**

**ನ ಕೇವಲಮುಕ್ತಬಹಿರಂಗಸಾಧನೈರೇವ ಋಗಾದೀನಾಂ ವಿವಕ್ಷಾಭೇದೇನ ಪರಾಪರವಿದ್ಯಾತ್ವೇ , ಕಿಂತು ಅಂತರಂಗಸಾಧನಮಪ್ಯಮುಮೇವಾರ್ಥಂ ದ್ರಢಯತೀತ್ಯಾಹ - ಅತ್ರಾಪೀತಿ। ತಥಾಹಿ : - ಯದಿ ಪರಾಪರವಿದ್ಯಾವಿಭಾಗಕರ್ತುರಂಗಿರಸೋ ಮುನೇಃ ಋಗಾದ್ಯಾ ಏವ ಪರವಿದ್ಯಾ , ಅಪರವಿದ್ಯಾಶ್ಚೇತ್ಯತ್ರ ತಾತ್ಪರ್ಯಂ ನ ಸ್ಯಾತ್ ತರ್ಹ್ಯುತ್ತರತ್ರ ಕರ್ಮವಿಷಯಾಣಾಂ ಬ್ರಹ್ಮವಿಷಯಾಣಾಂ ಚ ಮಂತ್ರಾ-ಣಾಮುಪನ್ಯಾಸೋಽನುಪಪನ್ನಃ ಸ್ಯಾತ್; ದ್ವೇ ವಿದ್ಯೇ ವೇದಿತವ್ಯೇ ಇತಿ ಪ್ರತಿಜ್ಞಾತಯೋರೇವಾಗ್ರೇ ವಕ್ತವ್ಯತ್ವಾತ್ । 'ಕಿಂತು 'ತದೇತತ್ಸತ್ಯಂ ಮಂತ್ರೇಷು ಕರ್ಮಾಣಿ' ಇತ್ಯಾದಿನಾ ಕರ್ಮವಿಷಯಾಮ-ಪರವಿದ್ಯಾಮುಕ್ತ್ವಾ, ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಂ ಇತ್ಯಾರಭ್ಯ ಆಥರ್ವಣಾನೇವ ಮಂತ್ರಾನ್ ಪರವಿದ್ಯಾತ್ವೇನಾಹ ಇತಿ ಪೂರ್ವೋತ್ತರಸಂದರ್ಭ-ಪರ್ಯಾಲೋಚನಯಾಽಪಿ ಋಗಾದೀನಾಮೇವ ಪರಾಪರವಿದ್ಯಾತ್ವೇ ಸಿಧ್ಯತಃ।**

ಅನುವಾದ - ಹೀಗೆ ಕೃತಯುಗದ ಜನರು ಋಗಾದಿಗಳನ್ನು 'ಪರವಿದ್ಯಾ' ಎಂಬುದಾಗಿಯೇ ತಿಳಿಯುತ್ತಾರೆ. ಇತರ ಯುಗಗಳಲ್ಲಿ ತ್ರೇತಾ, ದ್ವಾಪರ, ಕಲಿ ಮುಂತಾದ ಕಾಲವಿಶೇಷದಿಂದಾಗಿ ಭಗವಂತನ ಹೊರತಾಗಿ ಬೇರೆ ದೇವತೆಗಳನ್ನೂ ಆದರ ಮಾಡುತ್ತಾರೆ. ಮತ್ತು ತಮ್ಮ ಯೋಗ್ಯತಾನುಗುಣವಾಗಿ ಆ ವೇದದ ಅರ್ಥಗಳನ್ನು ತಿಳಿಯುತ್ತಾರೆ. ಈ ಕಾರಣದಿಂದ ಋಗಾದಿಗಳು ಆಪಾತತಃ ಪ್ರತೀತವಾದ ಕರ್ಮಾದಿಗಳನ್ನು





ಪ್ರತಿಪಾದನೆ ಮಾಡುತ್ತವೆಂಬುದಾಗಿ ಬೇರೆಯ ಯುಗದ ಸಾಧಕರು ಅನುಸಂಧಾನ ಮಾಡುತ್ತಾರೆ. ಈ ಸಂದರ್ಭದಲ್ಲಿ ಋಗಾದಿಗಳು ಅಪರಾವಿದ್ಯಾ ಎಂದು ಕರೆಸಿಕೊಳ್ಳುತ್ತದೆ. ಒಂದುವೇಳೆ ಪರಮಯೋಗ-ರೂಢಿಯಿಂದ ವಿಷ್ಣುವಾಚಕ ಎಂದು ಅನುಸಂಧಾನ ಮಾಡಿದ ಪಕ್ಷದಲ್ಲಿ ಅದೇ ಋಗಾದಿಗಳೇ ಪರವಿದ್ಯಾ ಎಂಬುದಾಗಿ ಅವರು ತಿಳಿಯುತ್ತಾರೆ ಎಂಬುದಾಗಿ ಈ ವಾಕ್ಯದ ಅಭಿಪ್ರಾಯ. ಇದೇ ಅರ್ಥವನ್ನೇ ಪ್ರಮಾಣ ಉದಾಹರಣೆಯನ್ನು ಮಾಡುವುದರ ಮೂಲಕ 'ಋಗ್ಭಿ' ಇತ್ಯಾದಿ ಭಾಷ್ಯವಾಕ್ಯದಿಂದ ಆಚಾರ್ಯರು ಸಮರ್ಥನೆ ನೀಡಿದ್ದಾರೆ.

ಕೇವಲ ಹಿಂದೆ ಹೇಳಿದ ಬಹಿರಂಗಸಾಧನಗಳಿಂದ ಮಾತ್ರವೇ ಋಗಾದಿಗಳು ವಿವಕ್ಷಾಭೇದದಿಂದ ಪರಾಪರವಿದ್ಯೆ ಎಂಬುದು ಸ್ಪಷ್ಟವಾಗುವುದಲ್ಲ, ಬಹಿರಂಗ ಸಾಧನದಂತೆ ಅಂತರಂಗಸಾಧನವೂ ಸಹ ಈ ವಿಷಯದಲ್ಲಿ ಇದೆ ಎಂಬುದನ್ನು ದೃಢ ಪಡಿಸಲು ಆಚಾರ್ಯರ 'ಅತ್ರಾಪಿ' ಎಂಬ ಭಾಷ್ಯವಾಕ್ಯವು ಹೊರಟಿದೆ.

ಹಿಂದೆ ಹೇಳಿದ ಭಾರತ, ಪರಮಸಂಹಿತಾ ಇತ್ಯಾದಿ ಪ್ರಮಾಣಗಳೆಲ್ಲವೂ ಆಥರ್ವಣೋಪನಿಷತ್ತಿನ ವಾಕ್ಯಗಳಲ್ಲ. ಹಾಗಾಗಿ ಅವೆಲ್ಲವೂ ಬಹಿರಂಗಸಾಧನೆಗಳಾಗಿವೆ. ಆಥರ್ವಣ ಉಪನಿಷತ್ತಿನಲ್ಲೇ ಇರುವ ಪೂರ್ವಾಪರವಾಕ್ಯಗಳು ಅಂತರಂಗಸಾಧನೆಗಳಾಗಿವೆ. ಇವುಗಳನ್ನು ವಿವೇಚನೆ ಮಾಡಿದಾಗಲೂ ಪರಾಪರವಿದ್ಯೆ ಎಂಬುದು ಸ್ಪಷ್ಟ ಎಂದು ತಿಳಿಸಲು ಆಚಾರ್ಯರು ಆಥರ್ವಣ ಉಪನಿಷತ್ತಿನ ಸಮುದಾಯಾರ್ಥವನ್ನು 'ಅತ್ರಾಪಿ' ಎಂಬ ಭಾಷ್ಯವಾಕ್ಯದಲ್ಲಿ ನೀಡಿದ್ದಾರೆ.

ಅಂಗಿರಸಮುನಿಗಳು ಪರಾಪರವಿದ್ಯೆಗಳ ವಿಭಾಗ ಮಾಡುತ್ತಿದ್ದಾರೆ. ಒಂದು ವೇಳೆ ಇವರಿಗೆ ಋಗಾದಿಗಳೇ ಪರವಿದ್ಯೆ ಹಾಗೂ ಅಪರವಿದ್ಯೆ ಎಂಬುದರಲ್ಲಿ ತಾತ್ಪರ್ಯವಿಲ್ಲದೇ ಇದ್ದ ಪಕ್ಷದಲ್ಲಿ ಮುಂದೆ ಕರ್ಮವಿಷಯಕವಾದ ಹಾಗೂ ಬ್ರಹ್ಮವಿಷಯಕವಾದ ಮಂತ್ರಗಳನ್ನು ಉಪನ್ಯಾಸ ಮಾಡಿದ್ದು ಕೂಡುತ್ತಿರಲಿಲ್ಲ. ಏಕೆಂದರೆ ಹಿಂದೆ 'ದ್ವೇವಿದ್ಯೇ ವೇದಿತವ್ಯೇ' ಎಂಬುದಾಗಿ ಪ್ರತಿಜ್ಞೆಯನ್ನು ಮಾಡಲಾಗಿದೆ. ಎರಡು ವಿದ್ಯೆಗಳನ್ನು ಪ್ರತಿಜ್ಞೆ ಮಾಡಿ, ಮುಂದೆ ಉತ್ತರವನ್ನು ನೀಡುವಾಗ ಎರಡು ವಿದ್ಯೆಗಳನ್ನೂ ಸಹ ಹೇಳಬೇಕಾಗಿತ್ತು. ಆದರೆ ಎರಡು ವಿದ್ಯೆಯ ಪ್ರಸ್ತಾವನೆಯ ನಂತರ ಎರಡು ವಿದ್ಯೆಗಳ ವಿವರಣೆಯನ್ನು ನೀಡದೇ ಒಂದೇ ವಿದ್ಯೆಯ ವಿವರಣೆಯನ್ನು ನೀಡಿದ್ದಾರೆ. 'ತದೇತತ್ಸತ್ಯಂ ಮಂತ್ರೇಷು ಕರ್ಮಾಣಿ' ಮುಂತಾದ ಭಾಗದಿಂದ ಕರ್ಮ-ವಿಷಯಕವಾದ ಅಪರವಿದ್ಯೆಯನ್ನು ಹೇಳಿದ್ದಾರೆ. ಅಲ್ಲಿಂದ ಮುಂದೆ 'ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ವತಃ ಬ್ರಹ್ಮವಿದ್ಯಾಂ' ಎಂಬುದಾಗಿ ಆರಂಭ ಮಾಡಿಕೊಂಡು ಆಥರ್ವಣ ಮಂತ್ರಗಳನ್ನೇ ಪರವಿದ್ಯಾ ರೂಪವಾಗಿ ಹೇಳಿದ್ದಾರೆ. ಹೀಗೆ ಕರ್ಮವಿಷಯವಾದ ವಿದ್ಯೆಯನ್ನು ಹೇಳಿ ಮುಂದೆ ಬ್ರಹ್ಮವಿಷಯ-ವಾದ ವಿದ್ಯೆಗಳನ್ನು ಸ್ಪಷ್ಟಪಡಿಸಿದ್ದರಿಂದ ಈ ವಿಷಯಗಳು ಏಕಾಧಿಕಾರಿಕ, ಒಂದೇ ವಿಷಯವನ್ನು ತಿಳಿಸುತ್ತದೆಂದು





ತಿಳಿಯುತ್ತದೆ. ಹೀಗೆ ಪೂರ್ವೋತ್ತರಸಂದರ್ಭಗಳನ್ನು ವಿವೇಚನೆ ಮಾಡಿದಾಗ ಋಗಾದಿಗಳೇ ಪರ ಹಾಗೂ ಅಪರ ವಿದ್ಯಾ ಎಂಬುದಾಗಿ ಸಿದ್ಧವಾಗುತ್ತದೆ.

## ವನಮಾಲಿಮಿಶ್ರರ ಶ್ರುತಿಸಿದ್ಧಾಂತಸಂಗ್ರಹದ ನಿರ್ಣಯವೇನು?

ಕಿಂಚ ಅಂಗಿರಸಾ ತಾವದುಪಸಂಹಾರೇ ಋಗಾದೀನಾಂ ಬ್ರಹ್ಮವಿದ್ಯಾಯಾಶ್ಚೈಕಾಧಿಕಾರಿಕತ್ವೋಕ್ತ್ಯಾ ಋಗಾದೀನಾಮೇವ ಬ್ರಹ್ಮವಿದ್ಯಾತ್ವರೂಪಪರವಿದ್ಯಾತ್ವಮಭಿಪ್ರೇತಂ। ವಿದ್ಯಾಭೇದೇ ವಿಷಯಭೇದಾವಶ್ಯಂಭಾವೇನ ಅಧಿಕಾರ್ಯೈಕ್ಯಾಯೋಗಾತ್ । ಅತಸ್ತದನ್ಯಥಾऽನುಪಪತ್ತ್ಯಾಪಿ ಋಗಾದೀನಾಮೇವ ಪರವಿದ್ಯಾತ್ವೇ ತಾತ್ಪರ್ಯಮವಗಮ್ಯತೇ। 'ತಾ ಏವ' ಇತ್ಯವಧಾರಣಂ ಚಾತ್ರಾರ್ಥೇ ವಿಸ್ಪಷ್ಟಂ ಗಮಕಂ ॥

ಪರಯಾ ತ್ವಕ್ಷರಪ್ರಾಪ್ತಿಃ ಋಗ್ವೇದಾದಿಮಯಾ ಪರಾ । - (ವನಮಾಲಿಕೃತಬ್ರಹ್ಮಸೂತ್ರಸಿದ್ಧಾಂತ ಮುಕ್ತಾವಲಿಃ)

ಮಹಾತಾತ್ಪರ್ಯತೋ ವಿಷ್ಣುರ್ಯದಾ ವೇದೇನ ಬೋಧ್ಯತೇ।
ತದಾ ವಿದ್ಯಾ ಪರಾ ಸಾ ಸ್ಯಾದಪರಾ ತ್ವನ್ಯಬೋಧನೇ ॥

ವಿಷಯಪರತ್ವಾಪರತ್ವಾಭ್ಯಾಮೇವೈಕಸ್ಯೈವ ವೇದಸ್ಯ ಪರವಿದ್ಯಾತ್ವಾಪರವಿದ್ಯಾತ್ವೇ ಸ್ಯಾತಾಂ, ನ ತು ಗ್ರಂಥಭೇದೇನ ಇತಿ। - (ವನಮಾಲೀಯ ಶ್ರುತಿಸಿದ್ಧಾಂತಸಂಗ್ರಹಃ)

ಅನುವಾದ - ಅಂಗಿರಸರು ಉಪಸಂಹಾರದಲ್ಲಿ ಋಗಾದಿಗಳಿಗೂ, ಬ್ರಹ್ಮವಿದ್ಯೆಗೂ ಅಧಿಕಾರಿಯು ಒಬ್ಬನೇ ಎಂದು ತಿಳಿಸಿದ್ದಾರೆ. ಹಾಗಾಗಿ ಋಗಾದಿಗಳೇ ಬ್ರಹ್ಮವಿದ್ಯಾ ರೂಪವಾದ ಪರವಿದ್ಯಾ ಎಂಬುದು ಅಂಗಿರಸರಿಗೆ ಅಭಿಪ್ರೇತವಾಗಿದೆ. ಒಂದು ವೇಳೆ ಎರಡೂ ವಿದ್ಯೆಗಳು ಭಿನ್ನವಾದ ಪಕ್ಷದಲ್ಲಿ ವಿಷಯಗಳು ಭಿನ್ನವಾದ ಕಾರಣ ಅಧಿಕಾರಿಗಳೂ ಸಹ ಭಿನ್ನವಾಗಬೇಕಾಗಿತ್ತು. ಹೀಗೆ ಅಧಿಕಾರ್ಯೈಕ್ಯಾನ್ಯಥಾನುಪಪತ್ತಿ ಎಂಬ ಪ್ರಮಾಣದಿಂದ ಋಗಾದಿಗಳೇ ಪರವಿದ್ಯಾ ಎಂಬ ವಿಷಯದಲ್ಲಿ ಅಂಗಿರಸರಿಗೆ ತಾತ್ಪರ್ಯವಿದೆ ಎಂಬುದು ಸ್ಪಷ್ಟವಾಗುತ್ತದೆ. 'ತಾ ಏವ ಪರಮಾವಿದ್ಯಾಃ' ಎಂಬಲ್ಲಿರುವ ಏವ ಶಬ್ದವೂ ಸಹ ಈ ವಿಷಯದಲ್ಲಿ ಅತಿಸ್ಪಷ್ಟವಾದ ಗಮನಿಕೆಯಾಗಿದೆ. ಪರವಿದ್ಯೆಯಿಂದ ಅಕ್ಷರನ ಪ್ರಾಪ್ತಿಯಾಗುತ್ತದೆ. ಋಗ್ವೇದಾದಿಗಳೇ ಪರವಿದ್ಯೆ ಎಂಬುದು ಸ್ಪಷ್ಟವಾಯಿತು.

ವನಮಾಲಿಮಿಶ್ರರು ವೇದವಾಕ್ಯಗಳ ನಿರ್ಣಯವನ್ನು ಶ್ಲೋಕರೂಪವಾಗಿ ನಿರ್ಣಯಿಸಿ ಶ್ರುತಿಸಿದ್ಧಾಂತ-ಸಂಗ್ರಹ ಎಂಬ ಗ್ರಂಥವನ್ನು ರಚಿಸಿದ್ದಾರೆ. ಇದರಲ್ಲಿ ಆಥರ್ವಣದ ಈ ಪ್ರಕರಣವನ್ನು ನಿರ್ಣಯಿಸುವಾಗ





ಪರಾಪರ ವಿದ್ಯೆಗಳ ಸ್ವರೂಪವನ್ನು ಹೀಗೆ ನಿರೂಪಿಸಿದ್ದಾರೆ. ಸಂಪೂರ್ಣ ವೇದಗಳಿಗೆ ಮಹಾತಾತ್ಪರ್ಯವು ವಿಷ್ಣುವಿನಲ್ಲೇ ಇದೆ ಎಂಬುದಾಗಿ ಯಾವಾಗ ಸಾಧಕನು ತಿಳಿಯುತ್ತಾನೋ, ಅಂತಹ ವೇದವಿದ್ಯೆಯು ಪರವಿದ್ಯಾ ಎಂದು ಕರೆಸಿಕೊಳ್ಳುತ್ತದೆ. ಅದೇ ವೇದವಿದ್ಯೆಯು ವಿಷ್ಣುವಿನ ಹೊರತಾಗಿ ಕರ್ಮ, ದೇವತಾ, ವಿಧಿ ನಿಷೇಧಾದಿಗಳನ್ನು ಬೋಧಿಸಿದರೆ ಅದನ್ನು ಅಪರಾವಿದ್ಯಾ ಎಂದು ಕರೆಯಲಾಗುತ್ತದೆ. ಹೀಗೆ ವಿಷಯನಿಷ್ಠವಾಗಿ ಪರತ್ವ, ಅಪರತ್ವಗಳು ಒಂದೇ ವೇದಕ್ಕೆ ಸಂಗತವಾಗುತ್ತದೆ. ಹೀಗೆ ಪರವಿದ್ಯಾತ್ವ, ಅಪರವಿದ್ಯತ್ವಗಳು ಗ್ರಂಥಭೇದೇನ ಯುಕ್ತವಲ್ಲ, ವಿಷಯಭೇದದಿಂದಷ್ಟೇ ಒಂದೇ ವಿದ್ಯೆಗೆ ಬೇರೆ ಬೇರೆ ನಾಮಗಳು ಎಂಬುದಾಗಿ ತಿಳಿಯಬೇಕು.

## ಚಂದ್ರಿಕಾ ಪ್ರಕಾಶದಲ್ಲಿ ರಾಯರು ಕೊಟ್ಟ ನಿರ್ಣಯವೇನು?

ಪರಾಪರವಿದ್ಯಯೋರ್ವಿವಕ್ಷಾಭೇದಮಾತ್ರೇಣೈವ ಭೇದೇನ ತತ್‌ಸ್ವರೂಪೋಕ್ತ್ಯರ್ಥತ್ವೇನ ಪೂರ್ವಗ್ರಂಥಸಾರ್ಥಕ್ಯಾತ್ । - (ಚಂದ್ರಿಕಾಪ್ರಕಾಶಃ)

ಅಥ ಪರೇತಿ । ಋಗಾದಿಪರವಿದ್ಯಾವಿಷಯತ್ವರೂಪತದ್ಧರ್ಮಾಭಿಧಾನಾದಿತ್ಯರ್ಥಃ ।

- (ತತ್ವಪ್ರಕಾಶಿಕಾ - ಶರ್ಕರ ಶ್ರೀನಿವಾಸತೀರ್ಥೀಯಾ ।)

ಅನುವಾದ - ಪರಾಪರವಿದ್ಯೆಗಳಿಗೆ ವಿವಕ್ಷಾಭೇದದಿಂದಷ್ಟೇ ಭೇದವಿದೆ. ಆದ್ದರಿಂದ ಆ ಪರಾಪರವಿದ್ಯೆಗಳ ಸ್ವರೂಪವನ್ನು ಹೇಳುವುದಕ್ಕಾಗಿ ಪೂರ್ವಗ್ರಂಥವು ಸಾರ್ಥಕವಾಗಿದೆ.

'ಅಥ ಪರಾ' ಎಂಬುದಕ್ಕೆ ಋಗಾದಿಪರವಿದ್ಯಾ ವಿಷಯತ್ವವೆಂಬ ತದ್ಧರ್ಮವನ್ನು ಹೇಳುವುದರಿಂದ ಎಂದರ್ಥ.

ವಿವರಣೆ - ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ನಾಕನೆಯ ಪಾದದಲ್ಲಿ ಸಮಾಕರ್ಷಾಧಿಕರಣವು ಭಗವಂತನಲ್ಲೇ ಎಲ್ಲಾ ಶಬ್ದಗಳೂ ಮುಖ್ಯವೃತ್ತಿಯಿಂದ ಇರುತ್ತವೆಂದು ನಿರ್ಣಯಿಸಲಾಗಿದೆ. ಈ ಸಂದರ್ಭದಲ್ಲಿ ಚಂದ್ರಿಕಾಕಾರರು ಎಲ್ಲಾ ಸೂತ್ರಗಳ ವಿಷಯವನ್ನು ಸಂಗ್ರಹ ಮಾಡಿದ್ದಾರೆ. ಬ್ರಹ್ಮನಲ್ಲಿ ಇರುವ ಶಬ್ದಗಳನ್ನು ಬೇರೆ ವಿಷಯದಲ್ಲಿ ಹೇಗೆ ಪ್ರಯೋಗ ಮಾಡುವುದು? ಎಂಬ ಪ್ರಶ್ನೆಗೆ ಉತ್ತರ ಕೊಡಲು ವೈಶ್ವಾನರಾಧಿಕರಣವು ಹೊರಟಿದೆ. ಹಾನ ಉಪಾದಾನಾದಿ ವ್ಯವಹಾರಕ್ಕೋಸ್ಕರ ಬ್ರಹ್ಮನ ಹೊರತಾಗಿ ಬೇರೆಯ ವಸ್ತುಗಳಲ್ಲಿ ಶಬ್ದಗಳನ್ನು ಪ್ರಯೋಗಿಸುತ್ತಾರೆ.

ಪ್ರಶ್ನೆ - ಬ್ರಹ್ಮನನ್ನು ಹೇಳುವ ಶಬ್ದಗಳು ಬೇರೆ ವ್ಯಕ್ತಿಯನ್ನೂ ಹೇಳುವುದಾದರೆ ಅವ್ಯವಸ್ಥೆಯಾಗುವುದಿಲ್ಲವೇ?





ಉತ್ತರ - ಈಶ್ವರನ ಸಂಬಂಧವು ಇರುವುದರಿಂದ ಬ್ರಹ್ಮವಾಚಕವಾದ ಶಬ್ದಗಳು ಅನ್ಯವಾಚಕವೂ ಆಗುತ್ತವೆ. ಆದ್ದರಿಂದ ಅವ್ಯವಸ್ಥೆಯು ಆಗುವುದಿಲ್ಲ.

ಪ್ರಶ್ನೆ - ಕಬ್ಬಿಣದಲ್ಲಿ ದಗ್ಧ ಎಂಬ ಶಬ್ದವನ್ನು ಪ್ರಯೋಗ ಮಾಡುತ್ತಾರೆ. ಕಬ್ಬಿಣ ಸುಡುವುದಿಲ್ಲ. ಅಗ್ನಿಯೇ ಸುಡುವುದು. ಲಕ್ಷಣಯಾ ಕಬ್ಬಿಣದಲ್ಲಿ ಸುಡುವ ವ್ಯವಹಾರವನ್ನು ಮಾಡುವುದು ಕಂಡಿದೆ. ಇದರಂತೆ ಭಗವಂತನನ್ನು ಬೇರೆ ಶಬ್ದಗಳು ಮುಖ್ಯತಃ ಹೇಳಿದರೂ ಉಳಿದ ಕಡೆಯಲ್ಲಿ ಆ ಶಬ್ದಗಳಿಗೆ ಲಕ್ಷಣಾವನ್ನು ಮಾಡಬೇಕೇ ಹೊರತು ಮುಖ್ಯವೃತ್ತಿಯು ಕೂಡುವುದಿಲ್ಲ ಅಲ್ಲವೇ?

ಉತ್ತರ - ಬೇರೆ ಕಡೆಯಲ್ಲಿ ಲಕ್ಷಣಾ ಮಾಡುವ ಕ್ರಮವಿಲ್ಲ. ಶಾಸ್ತ್ರೀಯವಾದ ರೂಢಿಯನ್ನು ಇಟ್ಟುಕೊಂಡು ಬೇರೆ ಶಬ್ದಗಳೆಲ್ಲವೂ ಸಹ ಭಗವಂತನನ್ನು ಬಿಟ್ಟು ರೂಢಿಯಿಂದ ಅನ್ಯವಾಚಕವಾಗುತ್ತವೆ.

ಪ್ರಶ್ನೆ - ಬ್ರಹ್ಮನನ್ನು ಬಿಟ್ಟು ಬೇರೆ ಕಡೆಯಲ್ಲಿ ಶಬ್ದಗಳು ಪರಮಮುಖ್ಯವೃತ್ತಿಯಿಂದ ಇವೆಯೋ? ಅಥವಾ ಮುಖ್ಯವೃತ್ತಿಯಿಂದ ಇವೆಯೋ?

ಉತ್ತರ : ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಇರುತ್ತವೆ, ಉಳಿದ ಕಡೆಯಲ್ಲಿ ಮುಖ್ಯವೃತ್ತಿಯಿಂದ ಇರುತ್ತವೆ. ಇದು ಚಂದ್ರಿಕಾಕಾರರು ಭಗವಂತನ ವಾಚಕವಾದ ಸಕಲ ಶಬ್ದಗಳು, ಸಕಲ ವೇದಗಳೂ ಸಹ ಕೇವಲ ಭಗವದ್ವಾಚಕವೇ ಹೊರತು ಅನ್ಯವಾಚಕವಲ್ಲ ಎನ್ನುವ ಸಂದರ್ಭದಲ್ಲಿ ವಿವರಣೆ ನೀಡಿದ್ದಾರೆ. ಈ ಸಂದರ್ಭದಲ್ಲಿ ಚಂದ್ರಿಕಾಪ್ರಕಾಶದಲ್ಲಿ ರಾಮಾನುಜ ಮತದ ನಿರಾಕರಣೆಯನ್ನು ಹೀಗೆ ಮಾಡಲಾಗಿದೆ. ಸಮಾಕರ್ಷಾಧಿಕರಣದಲ್ಲಿ 'ದ್ವೇವಿದ್ಯೇ ವೇದಿತವ್ಯೇ' ಎಂಬ ವಿಷಯವನ್ನು ತೆಗೆದುಕೊಂಡು ಈ ವಿದ್ಯೆಗಳು ಯಾವ ಪ್ರಶ್ನೆಗೆ ಉತ್ತರವಾಗಿವೆ? ಒಂದು ವೇಳೆ ವಿದ್ಯೆಗಳು ಎರಡೋ, ಒಂದೋ ? ಎನ್ನುವ ಪ್ರಶ್ನೆಗೆ ಉತ್ತರವಾದರೆ ಆಗ 'ಅಥ ಪರಾ' ಎಂಬ ವಾಕ್ಯದ ಹಿಂದಿನ ವಾಕ್ಯದ ತನಕ ಇರುವ ಎಲ್ಲಾ ವಾಕ್ಯಗಳೂ ಕೂಡ ವ್ಯರ್ಥವಾಗುತ್ತವೆ. ಏಕೆಂದರೆ ಅನ್ಯಗತವಿಷಯತಾಪ್ರಯೋಜಕಜ್ಞಾನವಿಷಯಸ್ಯ ಪ್ರಸ್ತುತತಯಾ ತಸ್ಯೈವ ಪ್ರಶ್ನವಿಷಯತ್ವೌಚಿತ್ಯೇನ ಅನ್ಯಜ್ಞಾನಪ್ರಯೋಜನಭೂತಜ್ಞಾನವಿಷಯಸ್ಯ ಅಪ್ರಸ್ತುತತ್ವೇನ ತಸ್ಯ ಪ್ರಶ್ನವಿಷಯತ್ವಾಯೋಗಾತ್' ಎಂಬುದಾಗಿ ವಿವರಣೆಯನ್ನು ಕೊಟ್ಟಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಬೇರೆ ವಿಷಯವನ್ನು ಹೇಳಿ ಆ ವಿಷಯದ ಜ್ಞಾನವು ಇನ್ನೊಂದು ಜ್ಞಾನಕ್ಕೆ ಪ್ರಯೋಜಕ ಎಂದು ಹೇಳಿದರೆ ಇದು ಅಪ್ರಸ್ತುತ. ಆದ್ದರಿಂದ ಯಾವುದು ಪ್ರಶ್ನೆಗೆ ವಿಷಯವೋ, ಅದೇ ಉತ್ತರಕ್ಕೂ ಸಹ ವಿಷಯವಾಗಬೇಕು. ಪ್ರಶ್ನೆಗೆ ವಿಷಯವಾದದ್ದು ಬೇರೆ, ಉತ್ತರಕ್ಕೆ ವಿಷಯವಾದದ್ದು ಬೇರೆ ಎಂಬುದಾಗಿ ಹೇಳಿದರೆ ಮಧ್ಯದ ಎಲ್ಲಾ ಗ್ರಂಥಸಂದರ್ಭವೂ ಕೂಡ ವ್ಯರ್ಥವಾಗುತ್ತದೆಂದು ರಾಮಾನುಜರ ಆಕ್ಷೇಪ. ಇದಕ್ಕೆ ಪ್ರಕಾಶಕಾರರು ಕೊಟ್ಟ ಉತ್ತರ ಹೀಗಿದೆ –

'ಪರಾಪರವಿದ್ಯಯೋಃ ವಿವಕ್ಷಾಭೇದಮಾತ್ರೇಣೈವ ಭೇದೇನ ವ್ಯಕ್ತಿಭೇದಾಭಾವೇನ





ತತ್ಸ್ವರೂಪೋಪತ್ಯರ್ಥತ್ವೇನ ಪೂರ್ವಗ್ರಂಥಸಾರ್ಥಕ್ಯಾತ್' ಎಂದು. ಇದರ ಅಭಿಪ್ರಾಯ ಹೀಗಿದೆ– ಪ್ರಶ್ನೆ ಮತ್ತು ಉತ್ತರಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸವಿಲ್ಲ. ಪ್ರಶ್ನೆ ಮಾಡಿದ್ದು ಪರಾಪರವಿದ್ಯೆಗಳ ಬಗ್ಗೆ. 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಎರಡು ವಿದ್ಯೆಗಳ ಬಗ್ಗೆ ಪ್ರಸ್ತಾವನೆ ನೀಡಿ ಅನಂತರ ಒಂದೇ ವಿದ್ಯೆಯ ಉಪದೇಶವನ್ನು ಮುಂದೆ ಮಾಡಿದ್ದಾರೆ. ಆದರೂ ಸಹ ಇಲ್ಲಿ ವ್ಯಕ್ತಿಶಃ ಈ ಎರಡು ವಿದ್ಯೆಗಳಿಗೆ ಯಾವುದೇ ಭೇದವಿಲ್ಲ. ಪೂರ್ವಗ್ರಂಥವು 'ಅಥ ಪರಾ' ಇತ್ಯಾದಿಯಾಗಿ ಹೊರಟಿರುವ ಇಡೀ ಗ್ರಂಥಸಂದರ್ಭವು ಪರವಿದ್ಯೆ ಅಪರವಿದ್ಯೆಗಳ ಸ್ವರೂಪವನ್ನು ತಿಳಿಸಲು ಹೊರಟಿದೆ. ಇದರಿಂದ ಪೂರ್ವಗ್ರಂಥವೆಲ್ಲವೂ ಸಹ ಸಾರ್ಥಕವೇ ಆಗಿದೆ.

ಈ ಪ್ರಕರಣದಲ್ಲಿ ಪ್ರಕಾಶದಿಂದ ಸ್ಪಷ್ಟವಾಗುವ ಅಂಶ ಪರಾಪರವಿದ್ಯೆಗಳ ವಿಷಯದಲ್ಲಿ ಭೇದವೇ ಹೊರತು ವ್ಯಕ್ತಿಯಲ್ಲಿ ಭೇದವಿಲ್ಲ. ಹೀಗಾಗಿ ಪರಾಪರವಿದ್ಯೆ ಎಂಬುದು ಒಂದೇ ಹೊರತು ಎರಡು ವಿದ್ಯೆಗಳಲ್ಲ.

ತತ್ವಪ್ರಕಾಶಿಕಾ ಟಿಪ್ಪಣಿಯಲ್ಲಿ ಶರ್ಕರಾ ಶ್ರೀನಿವಾಸತೀರ್ಥರು ಈ 'ಅಥ ಪರಾ' ಎಂಬ ಉಪನಿಷತ್ ಭಾಗವನ್ನು ವ್ಯಾಖ್ಯಾನಿಸುವಾಗ ಋಗಾದಿಗಳು ಪರವಿದ್ಯೆಗೆ ವಿಷಯವಾಗಿವೆ. ಪರವಿದ್ಯೆ ಎಂದರೆ ಅದು ಭಗವಂತನ ಸ್ವರೂಪವನ್ನು ತಿಳಿಸುತ್ತದೆ. ಈ ಭಗವದ್-ವಾಚಕತ್ವ ಎಂಬುದು ಪರವಿದ್ಯಾವಿಷಯದ ಧರ್ಮ ಎಂಬುದಾಗಿ ಈ ಪರವಿದ್ಯೆ ಹಾಗೂ ಅಪರವಿದ್ಯೆಗಳ ಧರ್ಮವನ್ನು ಹೇಳಲಾಗಿದೆ. ಇಲ್ಲಿ ವ್ಯಕ್ತಿಭೇದವನ್ನು ಹೇಳಿಲ್ಲ ಎಂಬುದಾಗಿ ತಿಳಿಸಿದ್ದಾರೆ.

## ಭಾಷ್ಯಾದಿಗಳಿರಲಿ; ಉಪನಿಷತ್ತೇ ಸ್ಪಷ್ಟವಾಗಿ ಹೇಳಿದೆ

ನ ಕೇವಲಮುದಾಹೃತಾಥರ್ವಣಭಾಷ್ಯತಟ್ಟೀಕಾಭಿಃ ಗ್ರಂಥಾಂತರೈಶ್ಚಾವಿಸಂವಾದೇನ ಏಕಸ್ಯಾ ಏವ ಋಗಾದೇಃ ಪರವಿದ್ಯಾತ್ವಂ ; ಕಿಂತು ಅತ್ರೈವೋಪನಿಷದಿ 'ಯಯಾ ತದಕ್ಷರಮಧಿಗಮ್ಯತೇ' ಇತಿ ವಾಕ್ಯೇನ ಲಕ್ಷಣಮುಕ್ತ್ವಾ ತದುತ್ತರಗ್ರಂಥೇನ ಅಕ್ಷರಮಹಿಮೋಕ್ತಿಪೂರ್ವಕಂ ಋಗಾದೀನಾಮೇವ ಅಕ್ಷರ-ಶಬ್ದಿತವಿಷ್ಣುಬೋಧಕತ್ವೇನ ಪರವಿದ್ಯಾತ್ವಂ ಸ್ಪಷ್ಟಮುಕ್ತಂ। ವ್ಯಾಖ್ಯಾತಂ ಚ ತಥೈವ ಭಾಷ್ಯೇ ಇತಿ ಉಪನಿಷತ್ಸು ಅಯಮೇವಲಕ್ಷಣಮಭಿಧಾಯ ತತ್‌ಸಮನ್ವಯಪೂರ್ವಕಂ ಋಗಾದಿರೇವ ಪರವಿದ್ಯೇತಿ ಯದೋ-ದಾಜಹಾರ, ತಥೈವ ವಿವೃತಂ ಚ ಭಾಷ್ಯೇ ಸ್ವೋಪಷ್ಟಂಭಂ, ತದಾ ಕೋ ನಾಮ ಶಕ್ನುಯಾತ್ತದನ್ಯಥ-ಯಿತುಂ ?

ಅನುವಾದ – ಇಲ್ಲಿಯತನಕ ಉದಾಹರಿಸಿದ ಆಥರ್ವಣಭಾಷ್ಯ, ಟೀಕಾ, ಟಿಪ್ಪಣಿ, ಇತರ ಗ್ರಂಥ ಇಷ್ಟರಿಂದ ವಿಸಂವಾದವಿಲ್ಲದೇ, ಒಂದೇ ಋಗಾದಿಗಳಿಗೆ ಪರವಿದ್ಯಾತ್ವವು ಯುಕ್ತವಾಗುತ್ತದೆಂದಷ್ಟೇ ಅಲ್ಲ. ಕಿಂತು





ಇದೇ ಉಪನಿಷತ್ತು ಸ್ಪಷ್ಟವಾಗಿ ಹೀಗೆ ಹೇಳಿದೆ - 'ಯಯಾ ತದಕ್ಷರಮಧಿಗಮ್ಯತೇ' ಎಂಬ ವಾಕ್ಯದಿಂದ ಲಕ್ಷಣವನ್ನು ಹೇಳಿ, ಮುಂದಿನ ಗ್ರಂಥದಿಂದ ಅಕ್ಷರಮಹಿಮೆಯನ್ನು ಹೇಳುವ ಪೂರ್ವಕ ಋಗಾದಿಗಳೇ ಅಕ್ಷರಶಬ್ದಿತನಾದ ವಿಷ್ಣುಬೋಧಕಗಳಾಗಿವೆ. ಹೀಗೆ ಪರವಿದ್ಯಾತ್ವವನ್ನು ಸ್ಪಷ್ಟವಾಗಿ ಹೇಳಿದೆ. ಹಾಗೆಯೇ ಭಾಷ್ಯದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಹೀಗೆ ಉಪನಿಷತ್ತಿನಲ್ಲಿ ಪರವಿದ್ಯೆಯ ಲಕ್ಷಣವನ್ನು ಹೇಳಿ ತತ್ ಸಮನ್ವಯವನ್ನು ಮಾಡುವ ಮೂಲಕ ಋಗಾದಿಗಳೇ ಪರವಿದ್ಯೆಯಾಗಿವೆ ಎಂದು ಸ್ಪಷ್ಟವಾಗಿ ಹೇಳಿರುವಾಗ ಮತ್ತು ಭಾಷ್ಯದಲ್ಲಿ ಅದನ್ನೇ ಯುಕ್ತಿಬದ್ಧವಾಗಿ ವಿವರಿಸಿರುವಾಗ ಯಾರು ತಾನೇ ಇದನ್ನು ವ್ಯತ್ಯಾಸ ಮಾಡಲು ಸಮರ್ಥನಾಗುತ್ತಾನೆ?

ವಿವರಣೆ - ಹಿಂದೆ ಹೇಳಿದ ಆಥರ್ವಣೋಪನಿಷತ್ತಿನ ಭಾಷ್ಯ , ಅದರ ಟಿಪ್ಪಣಿಗಳು ಹಾಗೂ ಚಂದ್ರಿಕಾಪ್ರಕಾಶ ಮುಂತಾದ ಗ್ರಂಥಗಳ ಸಂವಾದದಿಂದ ನಿರ್ಣಯವಾಗುವ ಅಂಶ ಹೀಗಿದೆ – ಋಗಾದಿಗಳು ಪರವಿದ್ಯೆ . ಕೇವಲ ಋಗಾದಿಗಳು ಮಾತ್ರ ಪರವಿದ್ಯೆಯಲ್ಲ. ಇದೇ ಉಪನಿಷತ್ತಿನ 'ಅಥ ಪರಾ ಯಯಾ ತದಕ್ಷರಂ ಅಧಿಗಮ್ಯತೇ' ಎಂಬ ವಾಕ್ಯದಿಂದ ಲಕ್ಷಣವನ್ನೂ ಸಹ ಹೇಳಲಾಗಿದೆ. ಇದರಿಂದ 'ಅಕ್ಷರಾಧಿಗತಿಕರಣತ್ವ' ಎಂಬ ಲಿಂಗವನ್ನು ಸ್ವೀಕಾರ ಮಾಡಿ ಅಕ್ಷರನಾಮಕನಾದ ವಿಷ್ಣುವನ್ನು ಯಾವ ಯಾವ ಉಪನಿಷದ್ಭಾಗಗಳು ಬೋಧನೆ ಮಾಡುತ್ತವೋ, ಅವೆಲ್ಲವೂ ಸಹ ಪರವಿದ್ಯೆಯೇ ಆಗುತ್ತವೆ. ಲಕ್ಷಣವನ್ನು ಹೇಳಿ ಮುಂದಿನ ಗ್ರಂಥಸಂದರ್ಭದಿಂದ ಅಕ್ಷರನ ಮಹಿಮೆಯನ್ನೂ ಸಹ ಹೇಳಿ ಈ ಋಗಾದಿಗಳೇ ಅಕ್ಷರನಾಮಕನಾದ ವಿಷ್ಣುಬೋಧಕವಾಗಿವೆ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

ಈ ಭಾಗವನ್ನು ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಾ ಲಕ್ಷಣವನ್ನು ಹೇಳಿ, ಅದರ ಸಮನ್ವಯವನ್ನೂ ಸಹ ಮಾಡಿ ಋಗಾದಿಗಳೇ ಪರವಿದ್ಯೆ ಎಂಬುದಾಗಿ ಉದಾಹರಣೆ ಮಾಡಿದ್ದಾರೆ. ಹೀಗೆ ಉಪಷ್ಟಂಭಕ ನ್ಯಾಯಗಳನ್ನು ಹೇಳಿದ್ದರಿಂದ ಋಗಾದಿಗಳೇ ಪರವಿದ್ಯೆಯೆಂದು ನಿರ್ಣಯವಾಗುತ್ತದೆ. ಋಗಾದಿಗಳನ್ನು ಬಿಟ್ಟು ಪರವಿದ್ಯೆ ಬೇರೆ ಇದೆ ಎಂಬುದಾಗಿ ಯಾರು ತಾನೆ ನಿರ್ಣಯ ಮಾಡಲು ಸಾಧ್ಯ ?

## ಅದೃಶ್ಯತ್ವಾಧಿಕರಣದಲ್ಲಿ ಪರವಿದ್ಯಾತ್ವಸಮರ್ಥನೆ

ಕಿಂಚಾದೃಶ್ಯತ್ವಾಧಿಕರಣಸೂತ್ರಭಾಷ್ಯೇ 'ಅಥ ದ್ವೇ ವಾವ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ ತತ್ರ ಯೇ... ಸಾಽಪರಾ । ಅಥ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರಮಾತ್ಮಾ' ಇತಿ ಶ್ರುತ್ಯಂತರಮುದಾಹೃತಂ। ಇದಂ ಚ 'ದ್ವೇ ವಿದ್ಯೇ ವೇದಿತವ್ಯೇ' ಇತಿ ಮುಂಡಕಶ್ರುತೇಃ ಸಮಾಖ್ಯಾರೂಪಂ। ಮುಂಡಕಶ್ರುತೌ 'ಯಯಾ ತದಕ್ಷರಮಧಿಗಮ್ಯತೇ' ಇತ್ಯುಕ್ತಮೇವ






'ಯಯಾ ಸ ಹರಿರ್ವೇದಿತವ್ಯಃ' ಇತಿ ಸಮಾಖ್ಯಾತಮನಯಾ ಶ್ರುತ್ಯಾ । ಅತ್ರ ತತ್ವಪ್ರಕಾಶಿಕಾ 'ದ್ವೇ ವಿದ್ಯೇ ಇತ್ಯತ್ರ ಚ ಯದಾ ವೇದಾದ್ಯನ್ಯವಿಷಯತಯಾ ಯೋಜ್ಯತೇ, ತದಾ ತಸ್ಯಾಪರವಿದ್ಯಾತ್ವಂ ; ಯದಾ ಪುನರೇತೈಃ ಸ ಹರಿರ್ವೇದ್ಯೋ ಭವತಿ ತದಾ ಪರವಿದ್ಯಾತ್ವಮಿತಿ ಹರೇಃ ಪರವಿದ್ಯಾವಿಷಯತ್ವಮುಚ್ಯತೇ; ತದುಕ್ತಂ ಋಗಾದ್ಯಾ ..... ವಾಚಕಾಃ' ಇತಿ । ಭಾವದೀಪೇ ಚ :- 'ಪರಾಪರವಿದ್ಯಾಯೋರ್ಭೇದಭ್ರಾಂತಿಂ ನಿರಸ್ಯನ್ ಪರಾಪರವಿಷಯತ್ವರೂಪೋಪಾಧಿಕೃತಭೇದಮಾಹ 'ಯದೇತಿ' ಇತ್ಯವತಾರಿಕಾ ।

ಅನುವಾದ - ಅದೃಶ್ಯತ್ವಾಧಿಕರಣದ ಸೂತ್ರಭಾಷ್ಯದಲ್ಲಿ 'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವ ಅಪರಾ ಚ' ಇತ್ಯಾದಿ ಶ್ರುತಿಯನ್ನು ಉದಾಹರಣೆ ಮಾಡಿದ್ದಾರೆ. ಮುಂಡಕಶ್ರುತಿಗೆ ಈ ಶ್ರುತಿಯ ಸಮಾಖ್ಯಾರೂಪವಾಗಿದೆ. ಮುಂಡಕಶ್ರುತಿಯಲ್ಲಿ ಭಗವಂತನನ್ನು ತಿಳಿಯಲು ಯಾವ ವಿದ್ಯೆ ಕಾರಣ ಎಂಬ ಪ್ರಶ್ನೆಗೆ ಯಾವ ವಿಷಯವಾಕ್ಯವನ್ನು ಉದಾಹರಣೆ ಮಾಡಿದ್ದಾರೋ ಅದಕ್ಕೆ ಅನುಗುಣವಾಗಿ ಶ್ರುತ್ಯಂತರದಲ್ಲೂ 'ಯಯಾ ಸಃ ಹರಿಃ ವೇದಿತವ್ಯಃ' ಎಂಬುದಾಗಿ ಸಮಾಖ್ಯಾರೂಪವಾಗಿ ವಾಕ್ಯವನ್ನು ಉದಾಹರಣೆ ಮಾಡಲಾಗಿದೆ. ಮುಂಡಕ ಶ್ರುತಿಯಲ್ಲಿ ಹೇಗೆ ಭಗವಂತನಿಗೆ ಅದೃಶ್ಯತ್ವ ಇತ್ಯಾದಿ ಗುಣಗಳನ್ನು ಹೇಳಲಾಗಿದೆಯೋ, ಅದರಂತೆ ಸಮಾಖ್ಯಾ ಶ್ರುತಿಯಲ್ಲೂ ಸಹ 'ಅಸೌ ಅದೃಶ್ಯಃ ನಿರ್ಗುಣಃ ಪರಃ ಪರಮಾತ್ಮಾ' ಎಂಬುದಾಗಿ ಅದೃಶ್ಯತ್ವಾದಿಗುಣಗಳನ್ನು ಹೇಳಲಾಗಿದೆ.

ಈ ಪ್ರಕರಣದ ತತ್ವಪ್ರಕಾಶಿಕಾ ಹಾಗೂ ಭಾವದೀಪಗಳ ಅಭಿಪ್ರಾಯ ಹೀಗಿದೆ - 'ದ್ವೇ ವಿದ್ಯೇ' ಎಂಬ ಆಥರ್ವಣ ಭಾಗದ ಅಭಿಪ್ರಾಯ ಈ ರೀತಿಯಾಗಿದೆ. ವೇದಾದಿವಿದ್ಯೆಗಳು ಭಗವದ್‌ವಿಷಯಕವಾಗಿವೆ ಎಂದು ಹೇಳದೇ ಅನ್ಯವಿಷಯಕವೆಂದು ಹೇಳಿದ ಪಕ್ಷದಲ್ಲಿ ಆ ವೇದಾದಿಗಳು ಅಪರವಿದ್ಯಾ ಎಂದು ಕರೆಸಿಕೊಳ್ಳುತ್ತವೆ. ವೇದಾದಿಗಳಿಂದ ಭಗವಂತನು ವೇದ್ಯನಾದ ಪಕ್ಷದಲ್ಲಿ ಅವುಗಳು ಪರವಿದ್ಯಾ ಎಂಬುದಾಗಿ ಕರೆಸಿಕೊಳ್ಳುತ್ತವೆ. ಹೀಗೆ ಪರವಿದ್ಯಾವಿಷಯತ್ವವನ್ನು ಭಗವಂತನಿಗೆ ಹೇಳಲಾಗಿದೆ. ಇದನ್ನೇ ತದುಕ್ತಂ' ಎಂಬುದಾಗಿ ಆಥರ್ವಣಭಾಷ್ಯದಲ್ಲಿ 'ಋಗಾದ್ಯಾಃ' ಎಂಬ ವರಾಹಪುರಾಣದ ವಚನದ ಉದಾಹರಣೆಯ ಮೂಲಕ ಭಾಷ್ಯಕಾರರು ಸಮ್ಮತಿಸಿದ್ದಾರೆ ಇದರ ವಿವರಣೆಯನ್ನು ಭಾವದೀಪದಲ್ಲಿ ಹೀಗೆ ಮಾಡಿದ್ದಾರೆ - ಪರಾಪರವಿದ್ಯೆಗಳಿಗೆ ಭೇದವಿದೆ ಎಂಬ ಭ್ರಾಂತಿಯನ್ನು ಹೋಗಲಾಡಿಸಲು ಈ ವಿದ್ಯೆಯಲ್ಲಿ ಭೇದವು ಉಪಾಧಿ ಕೃತವಾದದ್ದೆಂದು ಒಪ್ಪಬೇಕು. ಆ ಉಪಾಧಿಯು ಪರವಿಷಯತ್ವ ಹಾಗೂ ಅಪರವಿಷಯತ್ವ ರೂಪವಾದದ್ದು. ಈ ಕಾರಣದಿಂದ ಉಪಾಧಿಕೃತವಾದ ಭೇದವಿದೆಯೇ ಹೊರತು, ಪರಸ್ಪರ ಪರಾಪರವಿದ್ಯೆಗಳಲ್ಲಿ ಭೇದವು ಇಲ್ಲ ಎಂಬುದನ್ನು ಸೂಚಿಸಲು 'ಯದಾ' ಎಂಬ ವಾಕ್ಯವನ್ನು ಟೀಕಾದಲ್ಲಿ ಉದಾಹರಿಸಲಾಗಿದೆ. ಹೀಗೆ ಭಾವದೀಪದಲ್ಲಿ ಅವತಾರಿಕೆಯನ್ನು ನೀಡಲಾಗಿದೆ.





ತತ್ವಪ್ರಕಾಶಿಕಾ ಹಾಗೂ ಭಾವದೀಪಗಳನ್ನು ವಿಚಾರ ಮಾಡಿದಾಗ ಪರಾಪರವಿದ್ಯೆಗಳಿಗೆ ಭೇದವಿದೆ ಎಂದು ತಿಳಿದರೆ ಅದು ಭ್ರಾಂತಿ. ವಸ್ತುತಃ ಅವುಗಳಲ್ಲಿ ಯಾವುದೇ ಭೇದವಿಲ್ಲ. ಅಲ್ಲಿ ಭೇದಕ್ಕೆ ಕಾರಣವಾದದ್ದು ಪರಾಪರವಿಷಯತ್ವರೂಪವಾದ ಉಪಾಧಿಯೇ ಹೊರತು, ಬೇರೆ ಯಾವುದೂ ಕಾರಣವಲ್ಲ ಎಂಬುದು.

## ಅದೃಶ್ಯತ್ವಾಧಿಕರಣದ ಚಂದ್ರಿಕಾ ಗ್ರಂಥದ ಅಭಿಪ್ರಾಯವೇನು?

ಚಂದ್ರಿಕಾಯಾಮಾಪಿ :- ಯುಕ್ತಂ ಚ ಋಗಾದಿವೇದ್ಯಸ್ಯಾಪಿ ವಿಷ್ಣೋಃ ಪರವಿದ್ಯಾವಿಷಯತ್ವಂ ಯತಃ 'ಪ್ರವೃತ್ತಂ ಚ ನಿವೃತ್ತಂ ಚ ಯಥೈಕಂ ಕರ್ಮ ಕಥ್ಯತೇ । ಉಪಾಧಿಭೇದಾದ್ವಿದ್ಯಾಪಿ ತಥೈವೈಕಾ ಪರಾಽಪರಾ॥ ಇತ್ಯಾದಿ

ಏವಂ ಚ ಸ್ವಕೀಯವಿವರಣೇನ, 'ದ್ವೇ ವಾವ' ಇತ್ಯಾದಿಶ್ರುತ್ಯಂತರಸಮಾಖ್ಯಯಾ, ಏತದ್ಭಾಷ್ಯಸೂತ್ರ ಭಾಷ್ಯಾಭ್ಯಾಂ, ಉದಾಹೃತತತ್ವಪ್ರಕಾಶಿಕಾದಿಭಿಃ ಋಗಾದಿರೇವ ಪರವಿದ್ಯಾ, ಅಕ್ಷರಾಧಿಗತಿಕರಣತ್ವಂ ಚ ವಿಷ್ಣುಪ್ರಬೋಧಜನಕತ್ವರೂಪಂ ವಿಷ್ಣುವಾಚಕತ್ವಮೇವ ಮುಂಡಕಾಭಿಪ್ರೇತಮಿತಿ ಸಿದ್ಧಂ ॥

ಅನುವಾದ – ಅದೃಶ್ಯತ್ವಾಧಿಕರಣದ ಚಂದ್ರಿಕಾಭಾಗದಲ್ಲೂ ಸಹ ಹೀಗೆ ಈ ವಿಷಯವನ್ನು ತಿಳಿಸಿದ್ದಾರೆ. ಋಗಾದಿ ವೇದಗಳಿಂದ ವೇದ್ಯನಾದ ಭಗವಂತನಿಗೆ ಪರವಿದ್ಯಾವಿಷಯತ್ವವು ಕೂಡುತ್ತದೆ. ಇದಕ್ಕೆ ದೃಷ್ಟಾಂತ ಹೀಗಿದೆ - ಒಂದೇ ಕರ್ಮವು ಪ್ರವೃತ್ತವೂ ಆಗುತ್ತದೆ, ನಿವೃತ್ತವೂ ಆಗುತ್ತದೆ. ಯಾವುದೇ ಕಾಮನೆಗಳಿಲ್ಲದೆ ಕೇವಲ ಹರಿಪ್ರೀತಿಗಾಗಿ ಕರ್ಮಾಚರಣೆ ಮಾಡಿದಾಗ ಆ ಕರ್ಮವು ನಿವೃತ್ತಕರ್ಮವಾಗುತ್ತದೆ. ಸಕಾಮಕವಾಗಿ ಮಾಡಿದ ಕರ್ಮವು ಪ್ರವೃತ್ತಕರ್ಮ ಎಂದು ಕರೆಸಿಕೊಳ್ಳುತ್ತದೆ. ಕರ್ಮ ಒಂದೇ ಆದರೂ ಸಹ ಉಪಾಧಿಭೇದದಿಂದ ಪ್ರವೃತ್ತಕರ್ಮ ಹಾಗೂ ನಿವೃತ್ತಕರ್ಮ ಎಂಬ ವಿಷಯವ್ಯತ್ಯಾಸಕ್ಕೆ ಹೇಗೆ ಕಾರಣವೋ? ಹಾಗೆ ವಿದ್ಯೆಯೂ ಕೂಡ ಒಂದೇ ಆದರೂ ಸಹ ಉಪಾಧಿಭೇದದಿಂದ ಪರವಿದ್ಯೆ ಹಾಗೂ ಅಪರವಿದ್ಯೆ ಎಂದು ಕರೆಸಿಕೊಳ್ಳುತ್ತದೆ.

ಹೀಗೆ ಅದೃಶ್ಯತ್ವಾಧಿಕರಣದ ಭಾಷ್ಯ ಹಾಗೂ ತತ್ವಪ್ರಕಾಶಿಕಾ, ಭಾವದೀಪ ಹಾಗೂ ಚಂದ್ರಿಕಾ ಈ ಗ್ರಂಥಗಳ ವಿವರಣೆಯನ್ನು ನೋಡಿದಾಗ ಹಾಗೂ 'ದ್ವೇ ವಾವ ವಿದ್ಯೆ' ಎಂಬ ಶ್ರುತ್ಯಂತರದ ಸಮಾಖ್ಯೆಯನ್ನು ನೋಡಿದಾಗ ಈ ವಿಷಯವು ಸ್ಪಷ್ಟವಾಗುತ್ತದೆ. ಆಥರ್ವಣ ಉಪನಿಷತ್ತಿಗೆ ಅಭಿಪ್ರೇತವಾದ ವಿಷಯವೇನೆಂದರೆ ಋಗಾದಿಗಳೇ ಪರವಿದ್ಯೆ. ಅಕ್ಷರಾಧಿಕರಣತ್ವ ಎಂದರೆ ಭಗವಂತನ ಜ್ಞಾನವನ್ನು ಉಂಟುಮಾಡುವ ಸಾಧನಗಳು. ವಿಷ್ಣುಪ್ರಬೋಧಜನಕತ್ವವು ವಿಷ್ಣುವಾಚಕತ್ವ ಎಂದು ಕರೆಸಿಕೊಳ್ಳುತ್ತದೆ. 'ಯದಾ ವಿಷ್ಣೋಸ್ತು ವಾಚಕಾಃ' ಎಂಬಲ್ಲಿರುವ ವಾಚಕ ಶಬ್ದವು ವಿಷ್ಣುವಿನ ಜ್ಞಾನವನ್ನು ಉಂಟುಮಾಡುವ ಅರ್ಥವನ್ನು ತಿಳಿಸುತ್ತಿದೆ. ಹೀಗಾಗಿ ವಿಷ್ಣುವಾಚಕವಾದ ಅಕ್ಷರಾಧಿಗತಿಕರಣವಾದ ಋಗಾದಿಗಳೇ ಪರವಿದ್ಯೆ ಎಂಬುದು ಮುಂಡಕದ ಅಭಿಪ್ರಾಯ.





## ಯದಾ ಎಂಬ ಶಬ್ದದ ವ್ಯಾಖ್ಯಾನ

ನನ್ವೇವಂ ಸತಿ 'ನಿತ್ಯಯೋಗೋಽಪಿ ಶಬ್ದಾನಾಮರ್ಥೇನೈವ ನಿಷಿಧ್ಯತೇ' ಇತಿ ವದದ್ಭಿರಾಚಾರ್ಯೈಃ 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ' ಇತ್ಯುಕ್ತಸ್ವಾಭಾವಿಕಸಂಬಂಧಸ್ಯೈವ ವಾಚ್ಯವಾಚಕಭಾವಲಕ್ಷಣಸ್ಯ ಶಬ್ದಾರ್ಥಯೋರಂಗೀಕಾರಾತ್, ಸ್ವಾಭಾವಿಕಸ್ಯ ಚ ಯಾವದಾಶ್ರಯಭಾವಿತ್ವೇನ ಋಗಾದೀನಾಂ ವಿಷ್ಣುವಾಚಕತ್ವಸ್ಯಾಪಿ ತಥಾತ್ವಾಪತ್ತ್ಯಾ ಸರ್ವದೈವ ಪರವಿದ್ಯಾತ್ವಮಿತಿ ಕಾಲಭೇದೇನ ಪರಾಪರವಿದ್ಯಾತ್ವಪರ 'ಯದಾ' ಇತ್ಯುಕ್ತಿರಯುಕ್ತೇತಿ ಚೇತ್; ಸತ್ಯಂ। ಋಗಾದೀನಿ ಪರಮಮುಖ್ಯವೃತ್ತ್ಯಾ ಮಹಾತಾತ್ಪರ್ಯೇಣ ಜಗಜ್ಜನ್ಮಾದಿಕಾರಣಂ ನಿರವಧಿಕಾನಂತಾನವದ್ಯಕಲ್ಯಾಣಗುಣಪರಿಪೂರ್ಣಂ ವಿಷ್ಣುಮೇವ ಬೋಧಯಂತಿ, ಅವಾಂತರತಾತ್ಪರ್ಯೇಣ ಮುಖ್ಯವೃತ್ತ್ಯಾ ತು ಕರ್ಮದೇವತಾದೀನಿ ಬೋಧಯಂತೀತಿ ವಿಭಿನ್ನವೃತ್ತ್ಯೈವ ಋಗಾದೀನಾಂ ವಿಷ್ಣುತದನ್ಯವಾಚಕತ್ವಮಿತಿ ಸಿದ್ಧಾಂತಃ।

ಅನುವಾದ - ಪ್ರಶ್ನೆ - ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ 'ನಿತ್ಯಯೋಗೋಪಿ ಶಬ್ದಾನಾಂ ಅರ್ಥೇನೈವ ನಿಷಿಧ್ಯತೇ' ಎಂಬುದಾಗಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಶಬ್ದಗಳು ನಿತ್ಯ , ವಸ್ತುವು ಅನಿತ್ಯ . ಆದ್ದರಿಂದ ಶಬ್ದಗಳಿಗೂ ಪದಾರ್ಥಕ್ಕೂ ಇರುವ ಸಂಬಂಧವು ನಿತ್ಯಸಂಬಂಧವಲ್ಲ ಎಂಬುದಾಗಿ. ಇದರಂತೆ ಆಚಾರ್ಯರ ಮತ್ತೊಂದು ವಾಕ್ಯ ಹೀಗಿದೆ - 'ಔತ್ಪತ್ತಿಕಸ್ತು ಶಬ್ದಸ್ಯ ಅರ್ಥೇನ ಸಂಬಂಧಃ' ಶಬ್ದಾರ್ಥಗಳ ಸಂಬಂಧವನ್ನು ಸ್ವಾಭಾವಿಕ ಎಂಬುದಾಗಿ ಮತ್ತೊಂದು ಕಡೆಯಲ್ಲಿ ಹೇಳಲಾಗಿದೆ. ಶಬ್ದಕ್ಕೂ , ಅರ್ಥಕ್ಕೂ ಇರುವ ಸಂಬಂಧ ವಾಚ್ಯವಾಚಕಭಾವ. ಶಬ್ದವು ವಾಚಕ, ಅರ್ಥವು ವಾಚ್ಯ . ಈ ವಾಚ್ಯವಾಚಕಗಳಿಗೆ ಇರುವ ಸಂಬಂಧವು ಸ್ವಾಭಾವಿಕ. ಸ್ವಾಭಾವಿಕ ಸಂಬಂಧವು ವಸ್ತುವು ಎಲ್ಲಿಯವರೆಗೆ ಇರುತ್ತದೋ, ಅಲ್ಲಿಯವರೆಗೂ ಇರುತ್ತದೆ. ಋಗಾದಿಗಳು ವಿಷ್ಣುವಾಚಕ ಎಂದು ಹೇಳಿದಾಗ ಆ ಋಗಾದಿಗಳಿಗೂ ವಿಷ್ಣುವಿಗೂ ವಾಚ್ಯವಾಚಕಭಾವರೂಪವಾದ ಸಂಬಂಧವನ್ನು ಅಂಗೀಕಾರ ಮಾಡಬೇಕು. ಈ ಸಂಬಂಧವು ಸ್ವಾಭಾವಿಕವೇ ಆಗುತ್ತದೆ. ಸ್ವಾಭಾವಿಕವಾದ ಸಂಬಂಧವನ್ನು ಕಾಲಿಕವಾಗಿ ಹೇಳಲು ಬರುವುದಿಲ್ಲ. ಆಚಾರ್ಯರ ಭಾಷ್ಯವಾಕ್ಯದಲ್ಲಿ 'ಯದಾ ವಿಷ್ಣೋಸ್ತು ವಾಚಕಾಃ' ಎಂಬುದಾಗಿ ಯದಾ ತದಾ ಶಬ್ದಗಳನ್ನು ಉಲ್ಲೇಖ ಮಾಡಲಾಗಿದೆ. ಯಾವಕಾಲದಲ್ಲಿ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುತ್ತವೋ ಆಗ ಪರವಿದ್ಯೆ , ವಿಷ್ಣುವಾಚಕವಾಗದೇ ಇದ್ದ ಪಕ್ಷದಲ್ಲಿ ಅಪರವಿದ್ಯೆ ಎಂಬುದಾಗಿ ಇಲ್ಲಿ ಕಾಲಭೇದೇನ ಪರಾಪರವಿದ್ಯೆಗಳಲ್ಲಿ ಭೇದವನ್ನು ಸೂಚನೆ ಮಾಡಲಾಗಿದೆ. ಹೀಗಾಗಿ ವಾಚ್ಯವಾಚಕಭಾವಸಂಬಂಧವು ಸ್ವಾಭಾವಿಕವಾದ ಕಾರಣ ಸಕಲ ಕಾಲದಲ್ಲಿಯೂ ಋಗಾದಿಗಳಿಗೆ ಪರವಿದ್ಯಾತ್ವವನ್ನು ಅಂಗೀಕಾರ ಮಾಡಬೇಕೇ ಹೊರತು ಕಾಲಭೇದದಿಂದ ಪರವಿದ್ಯಾತ್ವವನ್ನು ಅಥವಾ ಅಪರವಿದ್ಯಾತ್ವವನ್ನು ಅಂಗೀಕಾರ ಮಾಡುವುದು ಯುಕ್ತವಲ್ಲ. ಹಾಗಾಗಿ ಯದಾ ಎಂಬ ಕಾಲವಾಚಕವಾದ ಶಬ್ದಪ್ರಯೋಗವು ಸಾಧುವಲ್ಲ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.




ಸಿದ್ಧಾಂತದ ಅಭಿಪ್ರಾಯ ಹೀಗಿದೆ – ಋಗಾದಿಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಬೋಧನೆ ಮಾಡುತ್ತವೆ. ಜಗತ್ತಿನ ಸೃಷ್ಟಿ, ಸ್ಥಿತಿ ಮುಂತಾದವುಗಳಿಗೆ ಕಾರಣನಾದ, ನಿರವಧಿಕವಾದ ಅನಂತನಾದ ದೋಷರಹಿತವಾದ ಕಲ್ಯಾಣಗುಣಗಳಿಂದ ಪರಿಪೂರ್ಣನಾದ ವಿಷ್ಣುವಿನಲ್ಲೇ ಮಹಾತಾತ್ಪರ್ಯವು ಋಗಾದಿಗಳಿಗೆ ಪರಮಮುಖ್ಯವೃತ್ತಿಯಿಂದ ಇರುತ್ತದೆ. ಮುಖ್ಯವೃತ್ತಿಯಿಂದ ಕರ್ಮದೇವತಾದಿಬೋಧಕತ್ವವೂ ಸಹ ಇರುತ್ತದೆ. ಹೀಗೆ ಎರಡು ವೃತ್ತಿಗಳಿಂದ ಋಗಾದಿಗಳಿಗೆ ವಿಷ್ಣುವಾಚಕತ್ವ ಹಾಗೂ ಅನ್ಯವಾಚಕತ್ವವು ಅಂಗೀಕಾರ ಮಾಡಲಾಗಿದೆ. ಪರಮಮುಖ್ಯವೃತ್ತಿ ಹಾಗೂ ಮುಖ್ಯವೃತ್ತಿ ಎಂಬ ವಿಭಿನ್ನ ವೃತ್ತಿದ್ವಯಗಳಿಂದ ವಿಷ್ಣುತದನ್ಯವಾಚಕತ್ವವು ಇಲ್ಲಿ ಅಭಿಪ್ರೇತವಾಗಿದೆ.

## ಶಬ್ದಗಳು ಹೇಗೆ ಅರ್ಥವನ್ನು ತಿಳಿಸುತ್ತವೆ?

ನ ಹಿ ಚಕ್ಷುರಾದಿರಿವ ಶಬ್ದೋ ವೃತ್ತಿರ್ವಾ ಅಜ್ಞಾತಕರಣಂ, ಕಿಂತು ಜ್ಞಾತಮೇವ ಅರ್ಥಬೋಧಜನನಾಯೇಷ್ಟ ಇತಿ ಪ್ರಸಿದ್ಧಂ । ಏವಂ ಚ ವಿದಿತಮುಖ್ಯವೃತ್ತ್ಯವಾಂತರತಾತ್ಪರ್ಯಕೋಽಧಿಕಾರೀ ಋಗಾದೀನಿ ಕರ್ಮದೇವತಾದಿಬೋಧಕಾನೀತಿ ನಿಶ್ಚಿನೋತಿ, ಸ ಏವ ಅನ್ಯೋ ವಾ ಸಾತ್ತ್ವಿಕಪ್ರಕೃತಿಃ ವಿದಿತಪರಮಮುಖ್ಯವೃತ್ತಿಮಹಾತಾತ್ಪರ್ಯಃ ಋಗಾದೀನಿ ಪ್ರಾಧಾನ್ಯೇನ ವಿಷ್ಣುಬೋಧಕಾನೀತಿ ಮನ್ಯತೇ । ಏವಂ ವೃತ್ತಿದ್ವಯೇನ ಅರ್ಥದ್ವಯಬೋಧಕತ್ವಂ ನ ವಿರುದ್ಧಂ। ಸರ್ವಶಬ್ದಾನಾಂ ಭಗವದ್ವಾಚಿನಾಮಪಿ ಪ್ರಸಿದ್ಧಾರ್ಥಾಂತರವಾಚಕತ್ವಂ ಸಮಾಕರ್ಷಾಧಿಕರಣ ಸೂತ್ರಭಾಷ್ಯಾದೌ ನಿಪುಣತರಮುಪಪಾದಿತಮನುಸಂಧೇಯಮ್ । ಇತ್ಥಂ ಚ ಋಗಾದೀನಾಂ ಪರಮಮುಖ್ಯವೃತ್ತಿಭ್ಯಾಂ ವಿಷ್ಣುತದನ್ಯವಾಚಕತ್ವೇ ಸ್ವಾಭಾವಿಕೇ । ಅತ ಏವ ಸದಾತನೇ । ನ ಕೋಽಪಿ ತತ್ಪರಿಹರ್ತುಮೀಷ್ಟ ಇತಿ ವಿಷ್ಣುವಾಚಕತ್ವತದನ್ಯವಾಚಕತ್ವಾಭ್ಯಾಂ ಪರತ್ವಾಪರತ್ವೋಭಯಮಪಿ ಋಗಾದೀನಾಂ ಸರ್ವದಾ ಸಂಭವತ್ಯೇವ । 'ದ್ವೇ ವಿದ್ಯೇ ವೇದಿತವ್ಯೇ' ಇತ್ಯನೇನ ದ್ವಯೋರಪಿ ಜ್ಞಾತವ್ಯತ್ವಾಭಿಧಾನಮಪ್ಯನಯೋರವಿರೋಧಂ ಸೂಚಯತಿ । ವಿರುದ್ಧಯೋರ್ದ್ವಯೋರುಪಾದೇಯತ್ವಾಯೋಗಾತ್ ।

ಅನುವಾದ – ಕಣ್ಣು ಮೊದಲಾದ ಇಂದ್ರಿಯಗಳಿಂದ ಪದಾರ್ಥಜ್ಞಾನ ಬರುವಾಗ. ನನಗೆ ಕಣ್ಣಿದೆಯೆಂಬ ಅರಿವು ಬೇಡ. ಯಾರೂ ಸಹ ಇಂದ್ರಿಯಗಳನ್ನು ತಿಳಿದುಕೊಂಡ ನಂತರದಲ್ಲಿ ಪದಾರ್ಥದ ಜ್ಞಾನದ ಅನುಭವವನ್ನು ಪಡೆಯುವುದಿಲ್ಲ. ಆದರೆ ಚಕ್ಷುರಾದಿ ಇಂದ್ರಿಯಗಳು ಅಜ್ಞಾತಕರಣವಾದಂತೆ ಶಬ್ದವಾಗಲೀ, ವೃತ್ತಿಯಾಗಲಿ ಅಜ್ಞಾತಕರಣವಲ್ಲ. ಜ್ಞಾತವಾಗಿಯೇ ಅರ್ಥವನ್ನು ಬೋಧನೆ ಮಾಡುತ್ತವೆ. ಹೀಗಾಗಿ ಮುಖ್ಯವೃತ್ತಿಯಲ್ಲಿ ಅವಾಂತರತಾತ್ಪರ್ಯ ತಿಳಿದ ಅಧಿಕಾರಿಯು ಋಗಾದಿವೇದಗಳನ್ನು ಕರ್ಮದೇವತಾವಿಧಿ ನಿಷೇಧಾದಿಬೋಧಕಗಳು ಎಂಬುದಾಗಿ ನಿಶ್ಚಯ ಮಾಡುತ್ತಾನೆ. ಅನಂತರ ಸಾತ್ವಿಕಪ್ರಕೃತಿಯಾದಾಗ ಅದೇ









ಅಧಿಕಾರಿಯು, ಅಥವಾ ಬೇರೊಬ್ಬ ಅಧಿಕಾರಿಯು ಪರಮಮುಖ್ಯವೃತ್ತಿಯನ್ನು ಹಾಗೂ ಮಹಾತಾತ್ಪರ್ಯವನ್ನು ಶಬ್ದಗಳಿಗೆ ತಿಳಿದು ಪ್ರಧಾನತಃ ಋಗಾದಿಗಳೇ ವಿಷ್ಣುಬೋಧಕ ಎಂಬ ಅಂಶವನ್ನು ತಿಳಿಯುತ್ತಾನೆ.

ವೃತ್ತಿಗಳು ಎರಡಾದ ಕಾರಣ ಅರ್ಥವೂ ಸಹ ಎರಡು. ಎರಡು ವೃತ್ತಿಗಳಿಂದ ಎರಡು ಅರ್ಥಗಳು ಬೋಧಿತವಾಗುತ್ತವೆ ಎಂಬ ಅಂಶಕ್ಕೆ ಯಾವ ವಿರೋಧವೂ ಇರುವುದಿಲ್ಲ. ಎಲ್ಲಾ ಶಬ್ದಗಳು ಭಗವದ್ವಾಚಕವಾದರೂ ಪ್ರಸಿದ್ಧವಾದ ಅರ್ಥಾಂತರವನ್ನೂ ಹೇಳುತ್ತವೆ ಎಂಬ ಅಂಶಕ್ಕೆ ಬ್ರಹ್ಮಸೂತ್ರದ ಸಮಾಕರ್ಷಾಧಿಕರಣವು ಸಂವಾದಿಯಾಗಿದೆ. ಈ ಅಧಿಕರಣದ ಸೂತ್ರ ಹಾಗೂ ಭಾಷ್ಯ , ಟೀಕಾ, ಟಿಪ್ಪಣಿಗಳಲ್ಲಿ ಅರ್ಥಾಂತರವಾಚಕತ್ವವನ್ನು ನಿಪುಣತರವಾಗಿ ಅತ್ಯಂತ ಸೊಗಸಾಗಿ ಉಪಪಾದನೆ ಮಾಡಲಾಗಿದೆ. ಹೀಗೆ ವಿಷ್ಣುವಾಚಕತ್ವ ಹಾಗೂ ವಿಷ್ಣ್ವನ್ಯವಾಚಕತ್ವ ಇವೆರಡೂ ಸಹ ಋಗಾದಿವೇದಗಳಿಗೆ ಸ್ವಾಭಾವಿಕವಾಗಿಯೇ ಇದೆ. ಇದಕ್ಕೆ ಕಾರಣ ಪರಮಮುಖ್ಯವೃತ್ತಿ ಹಾಗೂ ಮುಖ್ಯವೃತ್ತಿಗಳು. ಆದ್ದರಿಂದ ಈ ಸ್ವಾಭಾವಿಕವಾದ ವೃತ್ತಿಗಳು ಅನಾದಿಕಾಲದಿಂದಲೂ ಸಹ ಇವೆ. ಇವೆರಡಕ್ಕೆ ಯಾವುದೇ ವಿರೋಧವಿಲ್ಲ. ಆದ್ದರಿಂದ ಇವೆರಡರ ವಿರೋಧವನ್ನು ಪರಿಹಾರ ಮಾಡಲು ಯಾರೂ ಸಹ ಪ್ರಯತ್ನ ಮಾಡಲಿಲ್ಲ. ಹೀಗೆ ವಿಷ್ಣುವಾಚಕತ್ವ ಹಾಗೂ ತದನ್ಯವಾಚಕತ್ವ ಎಂಬ ಉಪಾಧಿಯಿಂದ ಪರತ್ವ ಹಾಗೂ ಅಪರತ್ವ ಇವೆರಡೂ ಸಹ ಋಗಾದಿಗಳಿಗೆ ಸರ್ವಕಾಲದಲ್ಲಿಯೂ ಸಹ ಕೂಡುತ್ತದೆ.

ಉಪನಿಷತ್ತಿನ ಪ್ರಾರಂಭದಲ್ಲಿ ಎರಡು ವಿದ್ಯೆಗಳ ಬಗ್ಗೆ ಪ್ರಸ್ತಾವನೆ ಬಂದಿದ್ದು, ಎರಡೂ ವಿದ್ಯೆಗಳನ್ನು ತಿಳಿಯಬೇಕು ಎಂಬುದಾಗಿ 'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಾಕ್ಯವು ಹೇಳುತ್ತಿದೆ. ಒಂದುವೇಳೆ ಎರಡು ವಿದ್ಯೆಗಳ ಮಧ್ಯದಲ್ಲಿ ಪರಸ್ಪರ ವಿರೋಧವಿದ್ದರೆ, ಎರಡೂ ವಿದ್ಯೆಗಳ ಜ್ಞಾನವನ್ನು ಪಡೆಯಬೇಕೆಂದು ಹೇಳಿದ್ದು ವಿರುದ್ಧವಾಗುತ್ತಿತ್ತು. ಎರಡು ವಿರುದ್ಧವಾದ ವಿದ್ಯೆಗಳನ್ನು ಉಪನಿಷತ್ತು ಉಲ್ಲೇಖ ಮಾಡುವುದೂ ಸಹ ಅಸಂಗತವಾಗುತ್ತಿತ್ತು. ಆದ್ದರಿಂದ ಉಪನಿಷತ್ತಿನಲ್ಲೇ ಎರಡು ವಿದ್ಯೆಗಳ ಜ್ಞಾನವು ಆವಶ್ಯಕ ಎಂಬುದಾಗಿ ತಿಳಿಯುತ್ತದೆ. ಎರಡಕ್ಕೂ ಯಾವುದೇ ವಿರೋಧವಿಲ್ಲ ಎಂಬ ಅಂಶವೂ ಸಹ ಸ್ಪಷ್ಟವಾಗುತ್ತದೆ.

## 'ಯದಾ' ಎಂಬ ಶಬ್ದದ ಸಾಧುತ್ವದ ಪ್ರಶ್ನೆ ಹಾಗೂ ಪರಿಹಾರಗಳು

ನನ್ವೇವಂ ತರ್ಹಿ 'ಯದೇ'ತ್ಯುಕ್ತಿಃ ಕಥಂ ಸಂಗಚ್ಛತ ಇತಿ ಚೇತ್ ಶ್ರುಣು; ವಿಷ್ಣುವಾಚಕತ್ವತದಭಾವೌ ಪರಾಪರವಿದ್ಯಾತ್ವಪ್ರಯೋಜಕತಯಾಽತ್ರ ನ ವಿವಕ್ಷಿತೌ; ಕಿಂತು ವಿಷ್ಣುವಾಚಕತ್ವೇನಾನುಸಂಧೀಯ-ಮಾನತ್ವ ತದಭಾವಾವೇವ ಪರಾಪರವಿದ್ಯಾತ್ವವ್ಯವಹಾರಪ್ರಯೋಜಕತಯಾ ವಿವಕ್ಷಿತೌ । ನ ಹಿ ವಿಷ್ಣುವಾಚಕತ್ವಂ ತದನ್ಯವಾಚಕತ್ವಂ ವಾ ಋಗಾದೀನಾಮವಿದ್ಯಮಾನಪರಾಪರವಿದ್ಯಾತ್ವೋತ್ಪಾದಕಂ ಭವೇತ್, ಕಿಂತು ಉಕ್ತರೀತ್ಯಾ ವಿದ್ಯಮಾನಸ್ಯೈವ ಪರವಿದ್ಯಾತ್ವಾದೇಃ ಪರಿಚಾಯಕಮೇವೇತಿ ಕ ಕಶ್ಚಿತ್







ಕುದ್ರೋಪದ್ರವಃ। ಉಕ್ತಂ ಚಾಭಿನವಚಂದ್ರಿಕಾಯಾಂ - 'ಯದಾ ವಿಷ್ಣೋರ್ನ ವಾಚಕಾ ಇತಿ। ಯದಾ ವಿಷ್ಣುವಾಚಕತ್ವೇನಾನನುಸಂಹಿತಾಃ ಅನ್ಯವಾಚಕತ್ವೇನಾನುಸಂಹಿತಾಃ ತದಾ ಅನ್ಯಬೋಧಜನಕತ್ವಾದ-ಪರವಿದ್ಯಾಃ, ಯದಾ ಭಗವದ್ವಾಚಕತ್ವೇನಾನುಸಂಹಿತಾಃ ತದಾ ಪರಪ್ರಬೋಧಜನಕತ್ವಾತ್ ಪರವಿದ್ಯಾ ಇತ್ಯುಚ್ಯತ ಇತ್ಯರ್ಥಃ। ಏತೇನ ವಾಚಕತ್ವಸ್ಯ ಸ್ವಾಭಾವಿಕತ್ವೇನ ಸದಾತನತ್ವಾತ್ ಯದಾ ವಾಚಕಾಃ ಯದಾ ನ ವಾಚಕಾಃ ಇತ್ಯುಕ್ತಿರಯುಕ್ತೇತಿ ಪರಾಸ್ತಮ್' ಇತಿ।

ಅನುವಾದ - ಪ್ರಶ್ನೆ - ಕಾಲಿಕವಾದ ವಾಚಕತ್ವವನ್ನು ಹೇಳುವ ಯದಾ ಶಬ್ದವು ಭಾಷ್ಯವಾಕ್ಯದಲ್ಲಿ ಇದೆ. ಶಬ್ದಾರ್ಥಗಳ ಸಂಬಂಧವು ಸ್ವಾಭಾವಿಕವಾದ ಮೇಲೆ ಕಾಲಿಕವಾದ ಯದಾ ಶಬ್ದದ ಪ್ರಯೋಗವು ಭಾಷ್ಯದಲ್ಲಿ ಹೇಗೆ ಸಂಗತ?

ಉತ್ತರ - ಪರವಿದ್ಯೆಗೆ ಪ್ರಯೋಜಕವಾದದ್ದು ವಿಷ್ಣುವಾಚಕತ್ವ ಅಪರವಿದ್ಯೆಗೆ ಪ್ರಯೋಜಕವಾದದ್ದು ವಿಷ್ಣ್ವವಾಚಕತ್ವ ಎಂಬುದು ನಮಗೆ ವಿವಕ್ಷಿತವಲ್ಲ. ವಿಷ್ಣುವಾಚಕತ್ವೇನ ಅನುಸಂಧೀಯಮಾನತ್ವ ಪರವಿದ್ಯಾತ್ವಕ್ಕೆ ಪ್ರಯೋಜಕ. ವಿಷ್ಣುವಾಚಕತ್ವೇನ ಅನನುಸಂಧೀಯಮಾನತ್ವವು ಅಪರವಿದ್ಯಾತ್ವಕ್ಕೆ, ಪ್ರಯೋಜಕ ಎಂಬುದಾಗಿ ವಿವಕ್ಷಿಸುತ್ತೇವೆ. ಕಾಲವಾಚಕವಾದ ಪಕ್ಷದಲ್ಲಿ ವಿಷ್ಣುವಾಚಕತ್ವ ಒಂದು ಕಾಲದಲ್ಲಿ, ವಿಷ್ಣುವಾಚಕತ್ವದ ಅಭಾವವು ಮತ್ತೊಂದು ಕಾಲದಲ್ಲಿ ಎಂಬುದಾಗಿ ಅರ್ಥಮಾಡಿದಾಗ ಅದು ಅಸಂಗತವಾಗುತ್ತದೆ. ಪ್ರಕೃತ ವಿಷ್ಣುವಾಚಕತ್ವ-ವನ್ನಾಗಲಿ ಅಥವಾ ವಿಷ್ಣುಭಿನ್ನಕರ್ಮದೇವತಾದಿ ವಾಚಕತ್ವವಾಗಲಿ ಇಲ್ಲಿ ಪ್ರಸ್ತುತವೇ ಅಲ್ಲ. ಋಗಾದಿಗಳಲ್ಲಿ ಇಲ್ಲದೇ ಇರುವ ಪರಾಪರವಿದ್ಯಾತ್ವವನ್ನು ಹೇಳಲು ಇವುಗಳು ಕಾರಣವೂ ಅಲ್ಲ. ಪರಾಪರವಿದ್ಯಾತ್ವವು ಸ್ವಾಭಾವಿಕವಾಗಿಯೇ ಋಗಾದಿಗಳಲ್ಲಿ ಇದೆ. ಯಾರು ವೇದವಿದ್ಯೆಯನ್ನು ಭಗವತ್ಪರವಾಗಿ ಅನುಸಂಧಾನ ಮಾಡುತ್ತಾನೋ ಆಗ ಅವುಗಳು ಪರವಿದ್ಯಾ ಎಂದು ಕರೆಸಿಕೊಳ್ಳುತ್ತವೆ. ಯಾರು ಅನುಸಂಧಾನ ಮಾಡುವುದಿಲ್ಲವೋ ಆ ಸಂದರ್ಭದಲ್ಲಿ ಋಗಾದಿಗಳು ಅಪರವಿದ್ಯಾ ಎಂದು ಕರೆಸಿಕೊಳ್ಳುತ್ತವೆ. ಹೀಗೆ ಅನುಸಂಧಾನವೇ ಇಲ್ಲಿ ಪ್ರಯೋಜಕ ಹೊರತು ವಾಚಕತ್ವವು ಪ್ರಯೋಜಕವಲ್ಲ.

'ಯದಾ ವಿಷ್ಣೋಸ್ತು ವಾಚಕಾಃ' ಎಂಬ ವಾಕ್ಯದ ವಿವರಣೆಯನ್ನು ಅಭಿನವಚಂದ್ರಿಕಾದಲ್ಲಿ ಸತ್ಯನಾಥರು ಹೀಗೆ ನಿರೂಪಣೆ ಮಾಡಿದ್ದಾರೆ - ವಿಷ್ಣುವಾಚಕ ಎಂಬುದಾಗಿ ಅನುಸಂಧಾನ ಮಾಡದೇ ಇರುವ ಸಂದರ್ಭದಲ್ಲಿ ಹಾಗೂ ಅನ್ಯವಾಚಕ ಎಂದು ಅನುಸಂಧಾನ ಮಾಡಿದ ಸಂದರ್ಭದಲ್ಲಿ ವೇದವಿದ್ಯೆಗಳು ಭಗವಂತನಿಗಿಂತ ಭಿನ್ನವಾದ ಕರ್ಮದೇವತಾದಿಜ್ಞಾನಜನಕವಾದ್ದರಿಂದ ಅಪರವಿದ್ಯಾ ಎಂದು ಕರೆಸಿಕೊಳ್ಳುತ್ತವೆ. 'ಯದಾ' ಎಂದರೆ ಭಗವದ್ವಾಚಕ ಎಂದು ಅನುಸಂಧಾನ ಮಾಡಿದಾಗ ಭಗವಂತನ ಜ್ಞಾನವನ್ನೇ ಉಂಟು ಮಾಡುತ್ತಿರುವುದರಿಂದ, ಪರ = ಸರ್ವೋತ್ತಮನಾದ ಭಗವಂತನ ಜ್ಞಾನವನ್ನು ಉಂಟು ಮಾಡುವುದರಿಂದ 'ಪರವಿದ್ಯಾ' ಎಂದು







ಕರೆಸಿಕೊಳ್ಳುತ್ತವೆ. ವಿದ್ಯಾ ಶಬ್ದಕ್ಕೆ ಜ್ಞಾನಜನಕ ಎಂಬ ಅರ್ಥ ಇದೆ. (ಪರವಿಷಯಕವಾದ ಜ್ಞಾನಜನಕವಾದ್ದರಿಂದ ಪರವಿದ್ಯಾ ಎಂಬುದಾಗಿ ಈ ಶಬ್ದಪ್ರಯೋಗವು ಕೂಡುತ್ತದೆ. 'ವಾಚಕತ್ವವು ಸ್ವಾಭಾವಿಕವಾದ್ದರಿಂದ 'ಯದಾ ವಾಚಕಾಃ, ಯದಾ ನ ವಾಚಕಾಃ' ಎಂಬ ವಾಕ್ಯಪ್ರಯೋಗವು ಯೋಗ್ಯವಲ್ಲ' ಎಂಬ ಆಕ್ಷೇಪವನ್ನೂ ಸಹ ನಿರಾಕರಣೆ ಮಾಡಿದಂತಾಯಿತು).

## ವಾಚಕ ಶಬ್ದದ ಸಾಧುತ್ವಸಮರ್ಥನೆ

ಅಯಂ ಭಾವಃ - ವಾಚಕತ್ವಸ್ಯ ಸದಾತನತ್ವೇಽಪಿ ನ ತದನುಸಂಧಾನಂ ಸರ್ವದಾ ಸರ್ವೇಷಾಂ; ತದನುಸಂಧಾನಸ್ಯೋಕ್ತರೀತ್ಯಾ ವೃತ್ತಿತಾತ್ಪರ್ಯಜ್ಞಾನಾಧೀನತ್ವಾತ್ । ನ ಹಿ ಸರ್ವೇಽಪಿ ಸರ್ವದಾ ತಥಾವಿಧಜ್ಞಾನವಂತಃ ಕಾಲವೈಷಮ್ಯಾತ್, ಅಧಿಕಾರವೈಚಿತ್ರ್ಯಾಚ್ಚ ಕೃತಯುಗೇ ಸರ್ವೇಽಪಿ ಜನಾಃ ವಿಷ್ಣುವಾಚಕತ್ವಾನುಸಂಧಾನವಂತಃ; ತ್ರೇತಾದೌ ಚ ನ ಸರ್ವೇ, ನಾಪಿ ಸರ್ವದಾ ತಥಾಽನುಸಂಧಾನವಂತಃ, ಕಿಂತು ಕಾಲಬಲೇನ ವಿಷ್ಣೋರನ್ಯತ್ರಾದರೇಣ, ಸ್ವಕೀಯಯೋಗ್ಯತಾವಶೇನ ಚ ಅನುಸಂಹಿತ ಬ್ರಹ್ಮಮೀಮಾಂಸಾಶಾಸ್ತ್ರವ್ಯುತ್ಪಾದಿತನ್ಯಾಯಾಃ ಸಾತ್ವಿಕಾಧಿಕಾರಿಣ ಏವ ಕಾಲವಿಶೇಷೇ ಋಗಾದೀನಾಂ ವಿಷ್ಣುವಾಚಕತಾಮನುಸಂದಧತೇ । ಇತ್ಯಸಾರ್ವಕಾಲಿಕಾನುಸಂಧಾನಘಟಿತ-ತ್ವಾದುಪಾಧೇಃ ತನ್ಮೂಲಕಃ ಪರಾಽಪರವಿದ್ಯಾತ್ವವ್ಯವಹಾರೋಽಪ್ಯಸಾರ್ವಕಾಲಿಕ ಇತಿ ಯದೇತ್ಯುಕ್ತಭಿಪ್ರಾಯಃ । ಸರ್ವಮಿದಂ 'ಪಂಚರಾತ್ರಂ ಋಗಾದ್ಯಾಶ್ಚ' ಇತ್ಯಾದಿ ಮುಂಡಕಭಾಷ್ಯೇಣ, 'ನಾರಾಯಣಾದ್ವಿನಿಷ್ಪನ್ನಂ ಜ್ಞಾನಂ ಕೃತಯುಗೇ ಸ್ಥಿತಮ್ ಕಿಂಚಿತ್ತದನ್ಯಥಾಜಾತಂ ತ್ರೇತಾಯಾಂ ದ್ವಾಪರೇಽಖಿಲಮ್ ॥' ಇತಿ ಸ್ಕಾಂದವಚನೇನ ಚ ಸ್ಪಷ್ಟಮವಗಮ್ಯತೇ ।

ಅನುವಾದ - ಶಬ್ದಗಳಿಗೆ ವಾಚ್ಯವಾಚಕಭಾವವು ಸ್ವಾಭಾವಿಕ. ಆದರೂ ಸಹ ಅದರ ಅನುಸಂಧಾನವು ಎಲ್ಲರಿಗೂ ಎಲ್ಲಾ ಕಾಲದಲ್ಲೂ ಇರುವುದಿಲ್ಲ. ಅನುಸಂಧಾನವು ಬರಬೇಕಾದರೆ ಆ ಶಬ್ದಗಳಿಗೆ ಯಾವ ಅರ್ಥದಲ್ಲಿ ತಾತ್ಪರ್ಯವಿದೆ ಹಾಗೂ ಯಾವ ಅರ್ಥದಲ್ಲಿ ಮುಖ್ಯವೃತ್ತಿಯಿಂದ ಪ್ರಯೋಗವಿದೆ ಎಂಬುದರ ಜ್ಞಾನವು ಮೊದಲು ಇರಬೇಕಾಗುತ್ತದೆ. ಎಲ್ಲರಿಗೂ ಎಲ್ಲಾ ಕಾಲದಲ್ಲಿಯೂ ವೃತ್ತಿ ಅಥವಾ ತಾತ್ಪರ್ಯದ ಜ್ಞಾನವು ಇರುವುದಿಲ್ಲ. ಇದಕ್ಕೆ ಕಾಲವೂ ಕಾರಣ. ಅಧಿಕಾರಿಗಳೂ ಕಾರಣ. ಅಧಿಕಾರಿಗಳ ಭೇದದಿಂದ ವೃತ್ತಿಜ್ಞಾನವು, ತಾತ್ಪರ್ಯಜ್ಞಾನವು ಭಿನ್ನಭಿನ್ನವಾಗುತ್ತವೆ. ಕಾಲವಿಶೇಷದಿಂದಲೂ ಸಹ ವೃತ್ತಿ ಮತ್ತು ತಾತ್ಪರ್ಯಗಳ ಜ್ಞಾನವು ಭಿನ್ನಭಿನ್ನವಾಗುತ್ತವೆ.

ಕೃತಯುಗದಲ್ಲಿ ಎಲ್ಲಾ ಜನರಿಗೆ ವೇದಾದಿಗಳು ಕೇವಲ ವಿಷ್ಣುವಾಚಕವೇ ಆಗಿರುತ್ತವೆಂಬ ಅನುಸಂಧಾನ ಇರುತ್ತದೆ. ತ್ರೇತಾಯುಗದಲ್ಲಿ ಎಲ್ಲರಿಗೂ ಈ ಅನುಸಂಧಾನ ಇರುವುದಿಲ್ಲ. ಹಾಗೂ ಎಲ್ಲಾ ಕಾಲದಲ್ಲಿಯೂ







ಈ ಅನುಸಂಧಾನ ಇರುವುದಿಲ್ಲ. ಕಾಲಬಲದಿಂದ ಭಗವಂತನ ಹೊರತಾಗಿ ಉಳಿದ ಅಧಿಕಾರಿಗಳು ತಮ್ಮ ಯೋಗ್ಯತಾನುಸಾರವಾಗಿ ವಿಷ್ಣುವಾಚಕತ್ವವನ್ನು ಕೆಲವು ಕಾಲದಲ್ಲಿ ಮಾತ್ರ ತಿಳಿದು ಬೇರೆ ಕಾಲದಲ್ಲಿ ವಿಷ್ಣುವಾಚಕತ್ವವನ್ನು ತಿಳಿಯುತ್ತಿರಲಿಲ್ಲ. ಬ್ರಹ್ಮಮೀಮಾಂಸಾಶಾಸ್ತ್ರದ ನ್ಯಾಯಗಳನ್ನು ಅನುಸರಿಸಿ ಅವುಗಳ ಸಹಾಯದಿಂದ ಸಾತ್ವಿಕ ಅಧಿಕಾರಿಗಳು ಮಾತ್ರವೇ ತ್ರೇತಾದಿಯುಗಗಳಲ್ಲೂ ಸಹ ಋಗಾದಿಗಳನ್ನು ಕೇವಲ ವಿಷ್ಣುವಾಚಕ ಎಂದು ಅನುಸಂಧಾನ ಮಾಡುತ್ತಾರೆ. ಮಧ್ಯಮಾಧಿಕಾರಿಗಳು ವಿಷ್ಣುಭಿನ್ನವಾದ ಕರ್ಮಾದಿಗಳನ್ನೂ ಸಹ ವೇದದಿಂದ ಪ್ರತಿಪಾದ್ಯ ಎಂದು ಚಿಂತನೆ ಮಾಡುತ್ತಾರೆ. ಹೀಗೆ ಸಾರ್ವಕಾಲಿಕವಾದ ಅನುಸಂಧಾನವು ಇಲ್ಲವಾದ್ದರಿಂದ ಉಪಾಧಿಮೂಲಕವಾಗಿ ಈ ಋಗಾದಿವಿದ್ಯೆಗಳಿಗೆ ಪರವಿದ್ಯಾ ಹಾಗೂ ಅಪರವಿದ್ಯಾ ಎಂಬ ವ್ಯವಹಾರವು ಬಂದಿದೆ. ಯದಾ ಎಂಬ ಶಬ್ದದ ಅಭಿಪ್ರಾಯ ವಿದ್ಯೆಗೆ ಪರಾಪರವಿದ್ಯಾತ್ವದ ವ್ಯವಹಾರವು ಅಸಾರ್ವಕಾಲಿಕ ಎಂದಷ್ಟೇ ಅರ್ಥ ಹೊರತು ಅದರಲ್ಲಿರುವ ಭೇದವನ್ನು ಸೂಚನೆ ಮಾಡುವುದಲ್ಲ.

ಈ ಮೇಲೆ ಹೇಳಿದ ಎಲ್ಲಾ ಅಂಶಗಳು ಸ್ವಕಪೋಲಕಲ್ಪಿತವಲ್ಲ. ಮುಂಡಕೋಪನಿಷತ್ತಿನ ಭಾಷ್ಯದಲ್ಲಿ ಆಚಾರ್ಯರು ಉದಾಹರಣೆ ಮಾಡಿದ 'ಪಂಚರಾತ್ರಂ ಋಗಾದ್ಯಾಶ್ಚ' ಮುಂತಾದ ವಾಕ್ಯಗಳು ಹಾಗೂ ಬ್ರಹ್ಮಸೂತ್ರಭಾಷ್ಯದ ಜಜ್ಞಾಸಾಧಿಕರಣದಲ್ಲಿ ಉದಾಹರಣೆ ಮಾಡಿದ 'ನಾರಾಯಣಾದ್- ವಿನಿಷ್ಪನ್ನಂ' ಇತ್ಯಾದಿ ಸ್ಕಾಂದಪುರಾಣದ ವಾಕ್ಯಗಳು ಈ ವಿಷಯವನ್ನು ಸಮರ್ಥಿಸುತ್ತಿವೆ.

ಆಥರ್ವಣಭಾಷ್ಯದಲ್ಲಿ ಹೇಳಿದ 'ಪಂಚರಾತ್ರಂ ಋಗಾದ್ಯಾಶ್ಚ' ಇತ್ಯಾದಿ ವಾಕ್ಯಗಳಿಗೆ ಸೂತ್ರಭಾಷ್ಯವು ಸಂವಾದಿಯಾಗಿದೆ. ಕೃತಯುಗದಲ್ಲಿ ಭಗವಂತನಿಂದ ಉತ್ಪನ್ನವಾದ ಜ್ಞಾನವು ತ್ರೇತಾದಿಯುಗಗಳಲ್ಲಿ ಸಂಶಯಕ್ಕೆ ಕಾರಣವಾಯಿತು. ಅನ್ಯಥಾಭೂತವಾಗಿ ಆ ವೇದವಿದ್ಯೆಯು ಬದಲುಗೊಂಡಿತು. ಆಗಿನ ಕಾಲದ ಅಧಿಕಾರಿಗಳು ಕಾಲಬಲದಿಂದ ಭಗವದ್ವಿಷಯಕವಾದ ಜ್ಞಾನವನ್ನು ಪಡೆಯದೇ ಅನೇಕ ರೀತಿಯ ಬೇರೆ ಬೇರೆ ದೇವತೆಗಳ ಉಪಾಸನೆಯನ್ನೂ ಸಹ ಮಾಡಿದರು. ಇತ್ಯಾದಿ ಅಂಶಗಳು ಸ್ಕಾಂದಪುರಾಣದ ವಚನದಲ್ಲಿ ಸ್ಪಷ್ಟವಾಗಿದೆ. ಇದರಿಂದ ಕಾಲಕ್ಕೆ ಅನುಗುಣವಾಗಿ ಹಾಗೂ ಅಧಿಕಾರಿಗಳಿಗೆ ಅನುಗುಣವಾಗಿ ಯೋಗ್ಯತಾನುಸಾರವಾಗಿ ವೇದವಿದ್ಯೆಗಳು ಬ್ರಹ್ಮವಾಚಕಗಳಾದರೂ ಸಹ ಬ್ರಹ್ಮವಾಚಕವಲ್ಲ ಎಂಬ ಜ್ಞಾನಕ್ಕೂ ವಿಷಯವಾಗುತ್ತವೆ. ಈ ಎಲ್ಲಾ ಕಾರಣಗಳಿಂದ ಒಂದೇ ವಿದ್ಯೆಯು ಪರವಿದ್ಯಾ ಹಾಗೂ ಅಪರವಿದ್ಯಾ ಎಂಬ ವ್ಯವಹಾರಕ್ಕೆ ವಿಷಯವಾಗಿದೆ. ಅದರಲ್ಲಿ ಯಾವುದೇ ರೀತಿಯ ವಿದ್ಯಾಭೇದವು ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.

## ಸರ್ವೋತ್ತಮ ಶಾಸ್ತ್ರ ಯಾವುದು?

ವೇದಸ್ಯ ನ ಕೇವಲಮುಕ್ತರೀತ್ಯಾ ಸರ್ವೋತ್ತಮಾರ್ಥಪ್ರತಿಪಾದಕತ್ವೇನ ಅರ್ಥತ ಆಧಿಕ್ಯಂ, ಕಿಂತು ಸ್ವರೂಪತೋऽಪಿ ವೇದ ಏವ ಸರ್ವೋತ್ತಮ; ಅಪೌರುಷೇಯತ್ವೇನಾನಾಶಂಕಿತಪ್ರಾಮಾಣ್ಯಕತ್ವಾತ್,

  



ಕೃತ್ಸ್ನಪೌರುಷೇಯೋಪಜೀವ್ಯತ್ವಾತ್, ಇತಿಹಾಸಪುರಾಣಾದೌ ಮೂಲಟೀಕಾದೌ ಚ ಶಾಸ್ತ್ರಪರಿಗಣನಾವಸರೇ ಸರ್ವತ್ರ 'ಋಗ್ಯಜುಃ ಸಾಮಾಥರ್ವಾಶ್ಚ' ಇತ್ಯಾದಿನಾ ವೇದಸ್ಯೈವ ಪ್ರಾಥಮ್ಯೇನ ನಿರ್ದೇಶಾತ್; ಸರ್ವಾಸ್ತಿಕದರ್ಶನಮೂಲತ್ವಾಚ್ಚ। ಶಪಥಪೂರ್ವಕಂ ನಿರ್ಣೀತಂ ಚ ಭಗವತ್ಪಾದೈಃ –

'ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ।
ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ॥

- ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯಃ ಅಧ್ಯಾಯಃ ೨

ಅನುವಾದ - ವೇದಗಳು ಸರ್ವೋತ್ತಮನಾದ ಭಗವಂತನನ್ನು ಪ್ರತಿಪಾದನೆ ಮಾಡುವ ಮುಖಾಂತರ ಅರ್ಥತಃ ಉತ್ತಮ ಎಂದಷ್ಟೇ ಅಲ್ಲ, ಸ್ವರೂಪತಃ ಕೂಡ ಆಧಿಕ್ಯ ಇರುತ್ತದೆ. ಸಾಮಾನ್ಯವಾಗಿ ಯಾವುದೇ ಒಂದು ವಸ್ತುವಿಗೆ ಉತ್ತಮತ್ವವನ್ನು ಹೇಳುವಾಗ ಸ್ವರೂಪತಃ ಉತ್ತಮತ್ವ ಅಥವಾ ಅರ್ಥತಃ ಉತ್ತಮತ್ವವೆಂದು ಎರಡು ರೀತಿಯ ಉತ್ತಮತ್ವವನ್ನು ಶಾಸ್ತ್ರಗಳಲ್ಲಿ ವ್ಯವಹಾರ ಮಾಡಲಾಗುತ್ತದೆ. ವೇದಗಳು ಸರ್ವೋತ್ತಮನಾದ ಭಗವಂತನನ್ನು ಪ್ರತಿಪಾದನೆ ಮಾಡುವುದರಿಂದ ಉತ್ತಮವಾದ ಅರ್ಥಪ್ರತಿಪಾದಕತ್ವನಿಮಿತ್ತಕವಾಗಿ ಅರ್ಥತಃ ಆಧಿಕ್ಯವನ್ನು ಹೊಂದಿವೆ. ಸ್ವರೂಪತೋಽಪಿ ವೇದವು ಸರ್ವೋತ್ತಮವಾಗಿದೆ ಎಂಬ ಅಂಶವು ಈ ಪ್ರಕರಣದಲ್ಲಿ ಸ್ಪಷ್ಟಪಡಿಸಲಾಗಿದೆ. ವೇದಕ್ಕೆ ಸ್ವರೂಪತಃ ಉತ್ತಮತ್ವಕ್ಕೆ ಕಾರಣವು ಅನೇಕ. ಅವುಗಳು ಹೀಗಿವೆ - (೧) ವೇದವು ಅಪೌರುಷೇಯವಾದ್ದರಿಂದ ಅದರಲ್ಲಿ ಯಾವುದೇ ರೀತಿಯ ಅಪ್ರಾಮಾಣ್ಯ ಶಂಕೆಯು ಇಲ್ಲ. (೨) ಎಲ್ಲಾ ಪೌರುಷೇಯ ಗ್ರಂಥಗಳಿಗೆ ವೇದವು ಉಪಜೀವ್ಯವಾಗಿದೆ. (೩) ಇತಿಹಾಸ, ಪುರಾಣ, ಭಾಷ್ಯ, ಟೀಕಾ ಇತ್ಯಾದಿಗಳಲ್ಲಿ ಶಾಸ್ತ್ರಗಳನ್ನು ಗಣನೆ ಮಾಡುವಾಗ ಪ್ರಥಮತಃ ವೇದಗಳನ್ನೇ ನಿರ್ದೇಶ ಮಾಡಲಾಗಿದೆ. 'ಋಗ್ ಯಜುಸ್ಸಾಮಾಥರ್ವಾಶ್ಚ' ಇತ್ಯಾದಿ ಪ್ರಮಾಣಗಳಲ್ಲಿ ಪ್ರಾಥಮ್ಯ ನಿರ್ದೇಶವು ವೇದಗಳಿಗೆ ಇದೆಯೇ ಹೊರತು ಇತಿಹಾಸಾದಿಗಳಿಗೆ ಇಲ್ಲ. (೪) ಎಲ್ಲಾ ಆಸ್ತಿಕದರ್ಶನಗಳಿಗೂ ಸಹ ಮೂಲಭೂತವಾದದ್ದು ವೇದವೇ ಆಗಿದೆ.

ಹೀಗೆ ನಾಲ್ಕು ಕಾರಣಗಳಿಂದ ವೇದವು ಸ್ವರೂಪತಃ ಉತ್ತಮವಾಗಿದೆ.

### ತಾತ್ಪರ್ಯನಿರ್ಣಯದಲ್ಲಿ ಆಚಾರ್ಯರ ವಚನ

ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು ಸಕಲ ವೇದಗಳು ಸರ್ವೋತ್ತಮವಾಗಿವೆ. ವೇದಶಾಸ್ತ್ರಕ್ಕಿಂತ ಉತ್ತಮವಾದ ಶಾಸ್ತ್ರವಿಲ್ಲ ಎಂಬಂಶವನ್ನು ಶಪಥ ಮಾಡಿ ನಿರ್ಣಯ ಮಾಡಿದ್ದಾರೆ. ಸತ್ಯ, ಸತ್ಯ ಮತ್ತೂ ಸಹ ಸತ್ಯ. ಎರಡೂ ಕೈಗಳನ್ನು ಮೇಲೆತ್ತಿ ಹೇಳುತ್ತೇವೆ ವೇದಶಾಸ್ತ್ರಕ್ಕಿಂತ ಉತ್ತಮವಾದ ಮತ್ತೊಂದು ಶಾಸ್ತ್ರವಿಲ್ಲ. ಕೇಶವನಿಗಿಂತ ಉತ್ತಮವಾದ ದೈವವಿಲ್ಲ.





ನನು ಅಪೌರುಷೇಯೋ ವೇದಃ ಪ್ರಮಾಣಮಸ್ತು। ಕಿಮಿತಿ ಪುರಾಣಾದಿಷ್ವಾದರ ಕ್ರಿಯತ ಇತಿ ? ಉಚ್ಯತೇ। ವೇದಾನುಸಾರಿತ್ವಾತ್, ವೇದಾನುಗೃಹೀತತ್ವಾಚ್ಚ। - ತತ್ವಪ್ರದೀಪ.

ತತ್ರ ವೇದಾರಣ್ಯಕಸ್ಯೋಪೌರುಷೇಯತ್ವೇನೋತ್ಕರ್ಷೇ ವಕ್ತವ್ಯೇ .... ಇತ್ಯಾದಿ

- ಸತ್ತರ್ಕದೀಪಾವಳಿ 1-1-3

ಉತ್ತರಾಧಿಕರಣನ್ಯಾಯೇನ ತು ಶ್ರುತೇರನಾಶಂಕಿತದೋಷತಯಾ ಸ್ವತ ಏವಾಧಿಕ್ಯಸಿದ್ಧೌ ಇತ್ಯಾದಿ

- ತಾತ್ಪರ್ಯಚಂದ್ರಿಕಾ ೨-೧-೧.

ಸ್ವೋಕ್ತಾಶ್ವಾಸಾಯ ಯಾಂ ವ್ಯಾಸಃ ಸೂತ್ರೇ ಸೂತ್ರೇ ಜಗೌ ಹರಿಃ।
ತಾಂ ಶ್ರುತಿಂ ಕೋಽಪರಃ ಕುರ್ಯಾನ್ಮಾನಂ ವಾ ಕಿಂ ತತೋಽಧಿಕಂ ॥

- ಯುಕ್ತಿಮಲ್ಲಿಕಾಗುಣಸೌರಭಃ

ನ ವಿಷ್ಣುಸದೃಶೋ ದೇವೋ ನ ಮೋಕ್ಷಸದೃಶಂ ಸುಖಂ।
ನ ವೇದಸದೃಶಂ ವಾಕ್ಯಂ ವರ್ಣ ಓಂಕಾರಸಮ್ಮಿತಃ ॥ ಇತಿ

- ಶ್ರುತಿಸಿದ್ಧಾಂತಸಂಗ್ರಹಃ

'ವೇದ ಏವ ಹಿ ಶಾಸ್ತ್ರಪದೇನೋಚ್ಯತೇ' - ಬ್ರಹ್ಮಸೂತ್ರಸಿದ್ಧಾಂತಮುಕ್ತಾವಳಿಃ

ಉದ್ಯೆದಿತಿ ಪರಮಹಿಮ್ನಾ ಇಂದಿರಾಸಾಮ್ಯೇನೇತರವಿದ್ಯಾನಾಂ ಪೃಥಗುಕ್ತೇಶ್ಚ ವೇದವಿದ್ಯೈವ ವಿದ್ಯಾ - ತತ್ವಪ್ರಕಾಶಿಕಾಟಿಪ್ಪಣೌ ಗುರ್ವರ್ಥದೀಪಿಕಾ.

ಅನುವಾದ - ತತ್ವಪ್ರದೀಪದಲ್ಲೂ ಸಹ ವೇದಗಳಿಗೆ ಉತ್ತಮತ್ವವನ್ನು ಹೀಗೆ ಹೇಳಿದ್ದಾರೆ.

ಪ್ರಶ್ನೆ - ಅಪೌರುಷೇಯವಾದ ವೇದವು ಪ್ರಮಾಣ ಎಂದು ಅಂಗೀಕಾರ ಮಾಡುತ್ತೇವೆ. ಆದರೆ ಪುರಾಣಾದಿಗಳು ಪೌರುಷೇಯ. ಅವುಗಳಲ್ಲಿ ಏಕೆ ಆದರವನ್ನು ಮಾಡಬೇಕು?

ಉತ್ತರ - ಪುರಾಣಾದಿಗಳು ವೇದಾನುಸಾರಿಯಾಗಿವೆ ಹಾಗೂ ವೇದಾನುಗೃಹೀತವಾಗಿವೆ. ಈ ಕಾರಣದಿಂದ ಪುರಾಣಾದಿಗಳಲ್ಲೂ ಸಹ ಆದರವನ್ನು ಮಾಡಬೇಕು.

ವೇದ ಆರಣ್ಯಕಗಳನ್ನು ಅಪೌರುಷೇಯ ಎಂಬ ಕಾರಣದಿಂದ ಶ್ರೇಷ್ಠವೆಂದು ಹೇಳಬೇಕು. ಇದು ಸತ್ತರ್ಕದೀಪಾವಳಿಯಲ್ಲಿ ಪದ್ಮನಾಭತೀರ್ಥರ ಮಾತು. ತಾತ್ಪರ್ಯಚಂದ್ರಿಕೆಯಲ್ಲೂ ಸಹ ಹೀಗೆ ಹೇಳಿದ್ದಾರೆ.




ಶ್ರುತಿಯಲ್ಲಿ ಯಾವುದೇ ದೋಷದ ಶಂಕೆಯು ಇರುವುದಿಲ್ಲ. ಮೀಮಾಂಸಾದಲ್ಲಿ ಬಂದ ಉತ್ತರಾಧಿಕರಣದ ನ್ಯಾಯದ ಅನುಸಾರವಾಗಿ ದೋಷಶಂಕಾ ಇಲ್ಲದೇ ಇರುವ ಸ್ಥಳದಲ್ಲಿ ಸ್ವತಃ ಏವ ಉತ್ತಮತ್ವವು ಸಿದ್ಧವಾಗುತ್ತದೆ. ಆದಕಾರಣ ಶ್ರುತಿಯಲ್ಲಿ ಆಧಿಕ್ಯವು ಸ್ವಾಭಾವಿಕ ಎಂಬುದಾಗಿ.

ಯುಕ್ತಿಮಲ್ಲಿಕೆಯ ಗುಣಸೌರಭದಲ್ಲಿ ವಾದಿರಾಜರು ವೇದದ ಬಗ್ಗೆ ಆಡಿದ ಉದ್ಗಾರ ಇದು - ವೇದವ್ಯಾಸರು ತಾವು ಹೇಳಿದ ಮಾತುಗಳಲ್ಲಿ ವಿಶ್ವಾಸವನ್ನು ಭರಿಸುವುದಕ್ಕೋಸ್ಕರ ಪ್ರತಿಸೂತ್ರದಲ್ಲೂ ಸಹ ವೇದಗಳನ್ನು ಉದಾಹರಿಸಿದ್ದಾರೆ. ವೇದವ್ಯಾಸರೇ ಇಂತಹ ಶ್ರುತಿಗೆ ಗೌರವವನ್ನು ನೀಡಿದಾಗ ಇದಕ್ಕೆ ಬೇರೆ ಯಾರು ತಾನೇ ಅವಮಾನ ಮಾಡಲು ಸಾಧ್ಯ . ಅಥವಾ ಈ ಶ್ರುತಿಗಿಂತಲೂ ಸಹ ಅಧಿಕವಾದ ಪ್ರಮಾಣವನ್ನು ಬೇರೆ ಯಾರು ತಾನೇ ನೀಡಲು ಸಾಧ್ಯ .

ಶ್ರುತಿಸಿದ್ಧಾಂತಸಂಗ್ರಹದಲ್ಲಿ ವನಮಾಲಿಮಿಶ್ರರು ಹೇಳಿದ ಮಾತಿದು - ವಿಷ್ಣುಸದೃಶನಾದ ದೇವನಿಲ್ಲ. ಮೋಕ್ಷಸದೃಶವಾದ ಸುಖವಿಲ್ಲ. ವೇದಸದೃಶವಾದ ವಾಕ್ಯವಿಲ್ಲ. ಓಂಕಾರಕ್ಕೆ ಸಮನಾದ ವರ್ಣವಿಲ್ಲ.

ಶಾಸ್ತ್ರ ಎಂಬ ಶಬ್ದದಿಂದ ವೇದವನ್ನೇ ಹೇಳಬೇಕು ಎಂಬುದು ಬ್ರಹ್ಮಸೂತ್ರಸಿದ್ಧಾಂತಮುಕ್ತಾವಳಿಯಲ್ಲಿ ವನಮಾಲಿಮಿಶ್ರರು ಆಡಿದ ಮಾತು. ಇದರಂತೆ ತತ್ವಪ್ರಕಾಶಿಕಾ ಟಿಪ್ಪಣಿಯಾದ ಗುರ್ವರ್ಥದೀಪಿಕೆಯಲ್ಲೂ ಸಹ ವಾದಿರಾಜರು ವಿದ್ಯಾ ಎಂದರೆ ವೇದವಿದ್ಯೆಯೇ ಆಗಿದೆ ಎಂಬುದನ್ನು ಹೀಗೆ ಉಪಪಾದನೆ ಮಾಡಿದ್ದಾರೆ - 'ಉದೈತ್ ವಿದ್ಯೇಂದಿರಾ' ಲಕ್ಷ್ಮೀದೇವಿಯು ಸಮುದ್ರದಲ್ಲಿ ಉದಯಿಸಿದಂತೆ ವೇದವ್ಯಾಸರಿಂದ ಶ್ರುತಿವಿದ್ಯೆಯು ಉದಯಿಸಿದಳು ಎಂಬ ಶಬ್ದವನ್ನು ತತ್ವಪ್ರಕಾಶಿಕೆಯಲ್ಲಿ ಪ್ರಯೋಗ ಮಾಡಲಾಗಿದೆ. ಇದರಿಂದ ಲಕ್ಷ್ಮೀದೇವಿಗೆ ಸಮವಾಗಿ ವಿದ್ಯೆಯನ್ನು ಹೇಳಿದ ಕಾರಣ ಲಕ್ಷ್ಮೀದೇವಿಯಿಂದ ಅಭಿಮನ್ಯವಾದ ವೇದವಿದ್ಯೆಯೇ ಮುಖ್ಯವಾದ ವಿದ್ಯೆ ಎಂದು ಕರೆಸಿಕೊಳ್ಳುತ್ತದೆ. ಉಳಿದ ಎಲ್ಲಾ ಪೌರುಷೇಯ ಗ್ರಂಥಗಳೂ ಕೂಡ ಪ್ರತ್ಯೇಕವಾಗಿ ಈ ಪ್ರಕರಣದಲ್ಲಿ ಗಣಿತವಾಗಿದೆ. ಆದ್ದರಿಂದ ವಿದ್ಯಾ ಎಂದರೆ ವೇದವಿದ್ಯೆಯೇ. ಈ ಎಲ್ಲಾ ಪ್ರಕರಣದಿಂದ ಸಿದ್ಧವಾಗುವ ಅಂಶವೇನೆಂದರೆ ವೇದಗಳೇ ಮುಖ್ಯವಾದ ವಿದ್ಯೆ . ಪರವಿದ್ಯಾ ಎಂದರೆ ಪರಬ್ರಹ್ಮಪ್ರತಿಪಾದಕವಾದ ವಿದ್ಯೆ . ಸರ್ವೋತ್ತಮವಾದ ವಿದ್ಯೆ . ಭಗವಂತನ ಸರ್ವೋತ್ತಮತ್ವವನ್ನು ಎಲ್ಲೆಲ್ಲಿ ಹೇಳಲಾಗಿದೆಯೋ ಆ ಎಲ್ಲಾ ಪ್ರಕರಣಗಳಲ್ಲೂ ಸಹ ಸಹಪಂಕ್ತಿಯಲ್ಲಿ ವೇದವಿದ್ಯೆಯನ್ನು ಹೇಳಲಾಗಿದೆ. ಹೀಗಾಗಿ ಸಹಪಠಿತತ್ವರೂಪವಾದ ಲಿಂಗದಿಂದ ವೇದವಿದ್ಯೆಗೆ ಸಮವಾದ ಮತ್ತೊಂದು ವಿದ್ಯೆ ಇಲ್ಲ ಎಂಬ ಅಂಶವು ಸ್ಪಷ್ಟವಾಗುತ್ತದೆ.

## ಬ್ರಹ್ಮಸೂತ್ರವೇ ಶ್ರೇಷ್ಠವೆಂದು ಅನುವ್ಯಾಖ್ಯಾನದಲ್ಲಿ ಹೇಗೆ ಹೇಳಿದರು ?

ನನು ಅನುವ್ಯಾಖ್ಯಾನೇ 'ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಂ। ಪರಮಾಖ್ಯವಿದ್ಯಾವ್ಯಾಖ್ಯಾಂ







ಕರೋಮಿ' ಇತಿ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಪರವಿದ್ಯಾತ್ವ-ಸರ್ವಶಾಸ್ತ್ರೋತ್ತಮತ್ವಯೋರುಕ್ತೇರ್ವೇದಸ್ಯ ಕಥಂ ಸರ್ವಶಾಸ್ತ್ರೋತ್ತಮತ್ವಮಿತಿ ಚೇತ್,

ಅನುವಾದ - ಪ್ರಶ್ನೆ - ಅನುವ್ಯಾಖ್ಯಾನದಲ್ಲಿ 'ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಂ' ಎಂಬುದಾಗಿ ಮತ್ತು 'ಪರಮಾಖ್ಯವಿದ್ಯಾವ್ಯಾಖ್ಯಾಂ ಕರೋಮಿ' ಎಂಬುದಾಗಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವನ್ನು ಹಾಗೂ ಸರ್ವಶಾಸ್ತ್ರೋತ್ತಮತ್ವವನ್ನು ಹೇಳಿದ್ದಾರೆ. ಹೀಗಿರುವಾಗ ವೇದಕ್ಕೆ ಸರ್ವಶಾಸ್ತ್ರೋತ್ತಮತ್ವವನ್ನು ಹೇಗೆ ಹೇಳುತ್ತೀರಿ ?

ವಿವರಣೆ - ಶ್ರೀಮದಾಚಾರ್ಯರು ಅನುವ್ಯಾಖ್ಯಾನದ ಮಂಗಳಾಚರಣೆಯಲ್ಲಿ 'ಪರವಿದಾಖ್ಯಂ ಚಕ್ರೇ ಶಾಸ್ತ್ರಮನುತ್ತಮಂ' ಎಂಬುದಾಗಿ ಹೇಳಿದ್ದಾರೆ. ಹಾಗೂ 'ಪರಮಾಖ್ಯ-ವಿದ್ಯಾವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ' ಎಂಬುದಾಗಿ ಪ್ರತಿಜ್ಞೆ ಮಾಡಿದ್ದಾರೆ. ವೇದವ್ಯಾಸರು ಪರವಿದ್ಯಾ ಎಂಬ ಅತ್ಯುತ್ತಮವಾದ ಶಾಸ್ತ್ರವನ್ನು ರಚನೆ ಮಾಡಿದರು ಎಂಬುದು ಮೊದಲನೆಯ ವಾಕ್ಯದ ಅರ್ಥ. 'ನಾನು ಪರವಿದ್ಯೆಯ ವ್ಯಾಖ್ಯಾನವನ್ನು ಮಾಡುತ್ತೇನೆ' ಎಂಬುದು ಎರಡನೆಯ ವಾಕ್ಯದ ಅರ್ಥ. ಇವುಗಳಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಅನುತ್ತಮಶಾಸ್ತ್ರ = ಸರ್ವೋತ್ತಮಶಾಸ್ತ್ರ ಎಂದು ತಿಳಿಯುತ್ತದೆ. ಹಾಗೂ ಪರಮಾಖ್ಯವಿದ್ಯಾ ಎಂಬ ಶಬ್ದದಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವು ಇದೆ ಎಂಬುದಾಗಿ ತೋರುತ್ತಿದೆ. ಋಗಾದಿ ವಿದ್ಯೆಗಳು ಪರವಿದ್ಯೆಯಾದರೆ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಬ್ರಹ್ಮಮೀಮಾಂಸಾಶಾಸ್ತ್ರವು ಪರವಿದ್ಯೆ ಆಗುವುದು ಹೇಗೆ?

## ಬ್ರಹ್ಮಸೂತ್ರಗಳ ಸಹಾಯವಿದ್ದ ವೇದಗಳು ಮಾತ್ರ ವಿಷ್ಣುವಾಚಕಗಳು

ಉಚ್ಯತೇ । 'ಋಗಾದ್ಯಾ ಅಪರಾ ... ವಾಚಕಾಃ ।' ಇತಿ ಭಗವತ್ಪಾದೀಯಂ ವ್ಯಾಖ್ಯಾನ-ಮಪ್ಯೇತಮೇವಾರ್ಥಂ ಸೂಚಯತಿ; ಬ್ರಹ್ಮಮೀಮಾಂಸಾಶಾಸ್ತ್ರವ್ಯುತ್ಪಾದಿತನ್ಯಾಯಾನುಪಕೃತಾ ಹಿ ವೇದಾದಯೋ ವಿಷ್ಣೋರವಾಚಕಾಃ, ತದುಪಕೃತಾಶ್ಚ ತಸ್ಯ ವಾಚಕಾ ಭವಂತೀತಿ' ಇತಿ ಸುಧಾಯಾಮೇವಾನಯೋರೈಕಕಂಠ್ಯಮುಪಪಾದಿತಂ।

ಅನುವಾದ - ಉತ್ತರ - 'ಋಗಾದ್ಯಾ ಅಪರಾ ವಿದ್ಯಾಃ' ಎಂಬ ಶ್ರೀಮದಾಚಾರ್ಯರ ವ್ಯಾಖ್ಯಾನವೂ ಸಹ ಇದೇ ಅರ್ಥವನ್ನು ಸೂಚಿಸುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರಗಳಿಂದ ವ್ಯುತ್ಪಾದಿತವಾದ ಯಾವ ನ್ಯಾಯಗಳಿವೆಯೋ, ಅವುಗಳಿಂದ ಉಪಕಾರವನ್ನು ಹೊಂದದೇ ಇರುವ ವೇದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲ. ಬ್ರಹ್ಮಮೀಮಾಂಸಾಶಾಸ್ತ್ರದ ನ್ಯಾಯಗಳಿಂದ ಉಪಕೃತವಾದ ವೇದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ. ಆಚಾರ್ಯರ ಈ ವಾಕ್ಯಗಳು ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುತ್ತಿವೆ. ಈ ರೀತಿಯಾದ ಉತ್ತರವನ್ನು ನ್ಯಾಯಸುಧೆಯಲ್ಲಿ ನೀಡಿರುತ್ತಾರೆ.





ವಿವರಣೆ – 'ಚಕ್ರೇ ಶಾಸ್ತ್ರಮನುತ್ತಮಮ್' ಎಂಬ ವಾಕ್ಯದ ವಿವರಣೆಯನ್ನು ಸುಧಾಕಾರರು ಹೀಗೆ ನೀಡಿದ್ದಾರೆ. ಪರವಿದ್ಯೆ , ಅಪರವಿದ್ಯೆ ಎಂದು ಎರಡು ವಿಧವಾದ ವಿದ್ಯೆಗಳಿವೆ. ಈ ಎರಡೂ ವಿದ್ಯೆಗಳನ್ನು ನಿರ್ದೇಶಿಸಿ ಉಪನಿಷತ್ತು ಅಪರವಿದ್ಯೆಯ ಸ್ವರೂಪವನ್ನು ತಿಳಿಸುತ್ತಾ ಶಿಕ್ಷಾ ಮೊದಲಾದ ಷಡಂಗಗಳಿರುವ ನಾಲ್ಕು ವೇದಗಳನ್ನು ಅಪರವಿದ್ಯಾ ಎಂದು ಹೇಳಿ ಮುಂದೆ ಅವಿನಾಶಿಯಾದ ಭಗವತ್ತತ್ವವನ್ನು ಯಾವ ವಿದ್ಯೆ ತಿಳಿಸುವುದೋ ಅದನ್ನು ಪರವಿದ್ಯಾ ಎಂಬುದಾಗಿ ಪರವಿದ್ಯೆಯ ಸ್ವರೂಪವನ್ನು ಹೇಳಿದೆ. ಪ್ರಕೃತ ವೇದಾದಿಶಾಸ್ತ್ರದ ಪ್ರಕರಣ ಬಲದಿಂದ ಹಾಗೂ ಅಕ್ಷರನ ಅಧಿಗತಿಗೆ ಸಾಧನವಾಗಿದೆ ಎಂಬ ಕಾರಣದಿಂದಲೂ ಸಹ ಬ್ರಹ್ಮಮೀಮಾಂಸಾಶಾಸ್ತ್ರವೇ ಪರವಿದ್ಯೆ ಆಗಲು ಯೋಗ್ಯವಾಗುತ್ತದೆ.

ಇಲ್ಲಿ ಕೆಲವರು ಭಗವಂತನ ಅಪರೋಕ್ಷಜ್ಞಾನವೇ ಪರವಿದ್ಯೆ ಎಂದು ಹೇಳಿದ್ದಾರೆ. ಆದರೆ ಹಾಗೆ ಒಪ್ಪಿದರೆ ಅನುಪಪತ್ತಿ ಇದೆ. 'ದ್ವೇ ವಿದ್ಯೇ' ಎಂಬಲ್ಲಿ ವಿದ್ಯಾಶಬ್ದವು ಒಮ್ಮೆ ಪಠಿತವಾಗಿದೆ. ಈ ಶಬ್ದಕ್ಕೆ ಶಾಸ್ತ್ರ ಎಂಬುದಾಗಿ ಒಂದು ಅರ್ಥ. ಜ್ಞಾನ ಎಂಬುದಾಗಿ ಮತ್ತೊಂದು ಅರ್ಥ. ಹೀಗೆ ಅನೇಕ ಅರ್ಥಗಳನ್ನು ಕಲ್ಪನೆ ಮಾಡುವುದು ಯುಕ್ತವಲ್ಲವಾದ್ದರಿಂದ ಅಪರೋಕ್ಷಜ್ಞಾನ ಎಂಬರ್ಥವನ್ನು ಹೇಳಬಾರದು. ಹಾಗಾಗಿ ಪರವಿದ್ಯಾ ಶಬ್ದದಿಂದ ಅಪರೋಕ್ಷ ಜ್ಞಾನವನ್ನು ಹೇಳದೆ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಹೇಳಬೇಕು. ಇದು ಶಾಸ್ತ್ರವಾದ್ದರಿಂದ ಪ್ರಾಮಾಣಿಕ. ಶಾಸ್ತ್ರ ಹಾಗೂ ಪ್ರಮಾಣ ಇವೆರಡೂ ಸಹ ಪರ್ಯಾಯ ಪದಗಳು. ಹೀಗೆ ನ್ಯಾಯಸುಧಾಕಾರರು ಬ್ರಹ್ಮ-ಮೀಮಾಂಸಾಶಾಸ್ತ್ರವನ್ನು ಪರವಿದ್ಯಾ ಎಂದು ನಿರ್ಧಾರ ಮಾಡಿದ್ದಾರೆ.

ಈ ಬ್ರಹ್ಮಮೀಮಾಂಸಾಶಾಸ್ತ್ರವು ಪರವಿದ್ಯೆಯಾದರೆ ಆಥರ್ವಣಭಾಷ್ಯದಲ್ಲಿ ಹೇಳಿದ ಋಗಾದಿಗಳ ಪರವಿದ್ಯಾತ್ವಕ್ಕೆ ವಿರೋಧ ಬರುವುದಿಲ್ಲವೇ? ಎಂಬ ಪ್ರಶ್ನೆಯನ್ನು ಸುಧಾಕಾರರೇ ಪರಿಹಾರ ಮಾಡಿದ್ದಾರೆ – 'ಯದ್ಯಪಿ ವಿದ್ಯಾಶಾಸ್ತ್ರಶಬ್ದೌ ಶಿಷ್ಯ-ಆಚಾರ್ಯ-ವ್ಯಾಪಾರ-ಅನು-ಬಂಧಿನೌ । ತಥಾಪಿ ಉಭಯಾನುಗತ ತತ್ವಜ್ಞಾನಕರಣತ್ವಂ ಉಪಾದಾಯ ದ್ವಯೋಃ ಐಕಾರ್ಥ್ಯಂ ಉಕ್ತಮಿತಿ ಅವಗಂತವ್ಯಮ್ । ಋಗಾದ್ಯಾಃ ಅಪರಾಃ ವಿದ್ಯಾಃ ಯದಾ ವಿಷ್ಣೋಃ ನ ವಾಚಕಾಃ । ತಾಃ ಏವ ಪರಮಾಃ ವಿದ್ಯಾಃ ಯದಾ ವಿಷ್ಣೋಽಸ್ತು ವಾಚಕಾಃ ॥ ಇತಿ ಭಗವತ್ಪಾದೀಯಂ ವ್ಯಾಖ್ಯಾನಮಪಿ ಏತಮೇವ ಅರ್ಥಂ ಸೂಚಯತಿ' ಎಂಬುದಾಗಿ. ಇದರ ಅಭಿಪ್ರಾಯ ಹೀಗಿದೆ –

ವಿದ್ಯಾ ಶಬ್ದ ಹಾಗೂ ಶಾಸ್ತ್ರಶಬ್ದಗಳು ಮೂಲತಃ ವಿಚಾರ ಮಾಡಿದಾಗ ಬೇರೆ ಬೇರೆ ಅರ್ಥವನ್ನು ನೀಡುತ್ತವೆ. ಶಿಷ್ಯನ ಪ್ರಯತ್ನದಿಂದ ಉಂಟಾಗುವ 'ವೇದನಾ' ವಿದ್ಯೆ ಎನಿಸುತ್ತದೆ. ಗುರುವಿನ ಪ್ರಯತ್ನದಿಂದ ಉಂಟಾಗುವ 'ಶಾಸನ' ಶಾಸ್ತ್ರ ಎನಿಸುತ್ತದೆ. ಜ್ಞಾನಕ್ಕೆ ಸಾಧನವಾದದ್ದು ವಿದ್ಯೆಯಾದರೆ, ಉಪದೇಶಕ್ಕೆ ಸಾಧನವಾದದ್ದು ಶಾಸ್ತ್ರ. ವಿದ್ಯಾ ಶಬ್ದ ಹಾಗೂ ಶಾಸ್ತ್ರ ಶಬ್ದಗಳಿಗೆ ಭಿನ್ನಭಿನ್ನ



ಅರ್ಥಗಳಿವೆ. ಹೀಗಿರುವಾಗ 'ಪರವಿದ್ಯಾಖ್ಯಂ' ಎಂಬ ಹಾಗೂ 'ಅನುತ್ತಮಶಾಸ್ತ್ರಂ' ಎಂಬ ಆಚಾರ್ಯರ ವಾಕ್ಯವು ಮಾತು ಹೇಗೆ ಸಮಂಜಸವಾಗುತ್ತದೆ?

ಈ ಪ್ರಶ್ನೆಗೆ ಉತ್ತರ ಹೀಗಿದೆ - ಶಿಷ್ಯನ ಪ್ರಯತ್ನ ಅಥವಾ ಆಚಾರ್ಯರ ಪ್ರಯತ್ನ ಎಂಬ ಈ ಎರಡು ಅಂಶಗಳನ್ನು ಬಿಟ್ಟಾಗ ಎರಡರಲ್ಲೂ ತತ್ವಜ್ಞಾನತ್ವ ಎಂಬ ಧರ್ಮವು ಸಮಾನವಾಗಿದೆ. ತತ್ವಜ್ಞಾನಕ್ಕೆ ಶಿಷ್ಯನ ಪ್ರಯತ್ನವೂ ಆವಶ್ಯಕ, ಆಚಾರ್ಯನ ಪ್ರಯತ್ನವೂ ಆವಶ್ಯಕ. ಆದ್ದರಿಂದ ಈ ಶಾಸ್ತ್ರಶಬ್ದದಲ್ಲಿ ಮತ್ತು ವಿದ್ಯಾಶಬ್ದದಲ್ಲಿ ತತ್ವಜ್ಞಾನಜನಕತ್ವ ಎಂಬ ಸಮಾನಧರ್ಮವಿದೆ. ಹೀಗಾಗಿ ಈ ಎರಡೂ ಶಬ್ದಗಳು ಸಮಾನಾರ್ಥಕವಾಗಿದೆ. ಆದ್ದರಿಂದ 'ಪರವಿದ್ಯಾಖ್ಯಂ' 'ಅನುತ್ತಮಶಾಸ್ತ್ರಂ' ಎಂಬ ಆಚಾರ್ಯರ ಮಾತು ಯುಕ್ತವಾಗಿದೆ.

## ಆಥರ್ವಣೋಪನಿಷದ್‌ಭಾಷ್ಯದ ವಿರೋಧ ಪರಿಹಾರ

ಪ್ರಶ್ನೆ - ಭಗವತ್ಪಾದರು ಆಥರ್ವಣಭಾಷ್ಯದಲ್ಲಿ ಋಗ್ವೇದಾದಿಶಾಸ್ತ್ರಗಳನ್ನು ಪರವಿದ್ಯಾ ಎಂದು ಹೆಸರಿಸಿದ್ದಾರೆ. ಅನುವ್ಯಾಖ್ಯಾನದಲ್ಲಿ ಶಾಸ್ತ್ರವನ್ನು ಪರವಿದ್ಯಾ ಎಂದು ಕರೆದಿದ್ದಾರೆ. ಹೀಗಾಗಿ ಆಚಾರ್ಯರ ಮಾತುಗಳಿಗೆ ಪರಸ್ಪರ ವಿರೋಧವಿದೆಯಲ್ಲವೆ?

ಉತ್ತರ – ಋಗ್ವೇದಾದಿಗಳು ವಿಷ್ಣುವನ್ನು ಯಾವಾಗ ತಿಳಿಸುತ್ತವೋ, ವಿಷ್ಣುವಾಚಕವಾಗುತ್ತವೋ ಆಗ ಪರವಿದ್ಯಾ ಎಂದು ಕರೆಸಿಕೊಳ್ಳುತ್ತವೆ. ವಿಷ್ಣುವಾಚಕವಾಗದೇ ಇದ್ದಾಗ ಪರವಿದ್ಯಾ ಎಂದು ಕರೆಸಿಕೊಳ್ಳುತ್ತವೆ. ಹೀಗೆ ಆಚಾರ್ಯರ ಮಾತೇ ಈ ವಿರೋಧವನ್ನು ಪರಿಹಾರ ಮಾಡುತ್ತಿದೆ. ಬ್ರಹ್ಮಸೂತ್ರದಲ್ಲಿ ಹೇಳಿದ ನ್ಯಾಯಗಳ ಸಹಕಾರವಿದ್ದಾಗ ಮಾತ್ರವೇ ವೇದಗಳಿಗೆ ವಿಷ್ಣುವಾಚಕತ್ವವು ಸ್ಪಷ್ಟವಾಗುವುದು. ಹೀಗೆ ನ್ಯಾಯಗಳಿಂದ ಉಪಕೃತವಾದ ವೇದಾದಿಗಳು ವಿಷ್ಣುವಾಚಕವಾದರೆ ಪರವಿದ್ಯೆಯೆಂದು , ನ್ಯಾಯಗಳಿಂದ ಅನುಪಕೃತವಾದರೆ ಅಪರವಿದ್ಯೆ ಎಂದಾಗುತ್ತವೆ. ಹೀಗೆ ಬ್ರಹ್ಮಸೂತ್ರದಿಂದ ಉಪಕೃತವಾದ ವೇದಗಳನ್ನೇ ಪರವಿದ್ಯಾ ಎಂದು ಕರೆಯಲಾಗಿದೆ. ಹೀಗೆ ಉಪಕಾರಕಪ್ರಾಧಾನ್ಯವಿವಕ್ಷೆಯಿಂದ ಬ್ರಹ್ಮಸೂತ್ರವನ್ನೂ ಪರವಿದ್ಯೆ ಎಂದು ಹೇಳಿದಂತಾಗುತ್ತದೆ. ಆದ್ದರಿಂದ ವಿರೋಧ ಬರುವುದಿಲ್ಲ.

ಹೀಗೆ ಅನುವ್ಯಾಖ್ಯಾನ ಹಾಗೂ ಆಥರ್ವಣೋಪನಿಷತ್ತಿದ್‌ಭಾಷ್ಯದ ವಿರೋಧಪರಿಹಾರವನ್ನು ಸುಧಾಕಾರರೇ ಮಾಡಿದ್ದಾರೆ.

## ಬ್ರಹ್ಮಸೂತ್ರಗಳು ಸಾಕ್ಷಾತ್ತಾಗಿ ವಿಷ್ಣುಬೋಧಕಗಳಲ್ಲ

ಬ್ರಹ್ಮಸೂತ್ರೇಣ ಸಾಕ್ಷಾತ್ ನ್ಯಾಯಾ ಏವ ವ್ಯುತ್ಪಾದ್ಯಂತೇ; ತೇ ಚ ನ್ಯಾಯಾಃ ತಾತ್ಪರ್ಯಜ್ಞಾಪನೇನ




ವೇದಸ್ಯ ವಿಷ್ಣುವಾಚಕತ್ವಂ ಜ್ಞಾಪಯಂತೀತಿ ವೇದಾನಾಂ ವಿಷ್ಣುವಾಚಕತ್ವೇ ಬ್ರಹ್ಮತಂತ್ರಮಿತಿಕರ್ತವ್ಯತೈವ, ನ ತು ಸಾಕ್ಷಾತ್ ವಿಷ್ಣುಬೋಧಕಂ ಇತಿ ತದರ್ಥಃ।

ಅನುವಾದ - ಬ್ರಹ್ಮಸೂತ್ರದಿಂದ ನ್ಯಾಯಗಳು ಸಾಕ್ಷಾತ್ತಾಗಿಯೇ ಹೇಳಲ್ಪಟ್ಟಿವೆ. ಈ ನ್ಯಾಯಗಳು ತಾತ್ಪರ್ಯಜ್ಞಾನವನ್ನು ಉಂಟುಮಾಡುವ ಮೂಲಕ ವೇದಕ್ಕೆ ವಿಷ್ಣುವಾಚಕತ್ವವನ್ನು ತಿಳಿಸುತ್ತವೆ. ಹೀಗೆ ಬ್ರಹ್ಮಸೂತ್ರಗಳು ವೇದಗಳು ವಿಷ್ಣುವಾಚಕವಾಗಲು ಇತಿಕರ್ತವ್ಯತಾರೂಪಗಳಾಗಿವೆಯೇ ಹೊರತು, ಸಾಕ್ಷಾತ್ತಾಗಿ ವಿಷ್ಣುಬೋಧಕಗಳಾಗಿಲ್ಲ ಎಂಬುದು ಅದರರ್ಥ.

ವಿವರಣೆ - ಬ್ರಹ್ಮಸೂತ್ರಗಳು ಕೇವಲ ನ್ಯಾಯಗಳನ್ನು ಮಾತ್ರವೇ ವ್ಯುತ್ಪಾದನೆ ಮಾಡುತ್ತವೆ. ಬ್ರಹ್ಮಸೂತ್ರದಲ್ಲಿ ವೇದಗಳು ವಿಷ್ಣುವನ್ನು ಹೇಗೆ ಪ್ರತಿಪಾದನೆ ಮಾಡುತ್ತವೆ ಎಂಬುದರ ವಿವರಣೆಯು ದೊರೆಯುವುದಿಲ್ಲ. ಬ್ರಹ್ಮಸೂತ್ರದಿಂದ ಸಿದ್ಧವಾದ ನ್ಯಾಯಗಳನ್ನು ವಿಮರ್ಶೆ ಮಾಡಿದಾಗ ವೇದಗಳ ತಾತ್ಪರ್ಯವು ಎಲ್ಲಿದೆ ಎಂಬುದು ಸ್ಪಷ್ಟವಾಗುತ್ತದೆ. ತಾತ್ಪರ್ಯಜ್ಞಾನದಿಂದ ವೇದದ ವಿಷ್ಣುವಾಚಕತ್ವವು ಸಿದ್ಧವಾಗುವ ಕಾರಣ ಇತಿಕರ್ತವ್ಯತಾರೂಪವಾಗಿ ಮೀಮಾಂಸಾಶಾಸ್ತ್ರವು ಇದೆಯೇ ಹೊರತು ಸಾಕ್ಷಾತ್ತಾಗಿ ವಿಷ್ಣುವನ್ನು ಬ್ರಹ್ಮಮೀಮಾಂಸಾಶಾಸ್ತ್ರವು ತಿಳಿಸುವುದಿಲ್ಲ. ಹೀಗೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇತಿಕರ್ತವ್ಯತಾತ್ವ ಇದೆಯೇ ಹೊರತು ಸಾಕ್ಷಾತ್ ವಿಷ್ಣುಬೋಧಕತ್ವವು ಇಲ್ಲ ಎಂಬ ಅಂಶವನ್ನು ಗಮನಿಸಬೇಕು.

## ವೇದವೇ ಮುಖ್ಯಪರವಿದ್ಯೆ ಬ್ರಹ್ಮಸೂತ್ರವು ಅಮುಖ್ಯಪರವಿದ್ಯೆ

ಏವಂ ಚ ವೇದಸ್ಯ ಪರವಿದ್ಯಾತ್ವವ್ಯವಹಾರೌಪಯಿಕವಿಷ್ಣುವಾಚಕತ್ವಜ್ಞಾಪಕತ್ವಾತ್ ಪರಂಪರಯಾ ವಿಷ್ಣುಬೋಧೋದ್ದೇಶ್ಯತ್ವಮಾತ್ರೇಣ ಗೌಣಪರವಿದ್ಯಾತ್ವಾಭಿಪ್ರಾಯೇಣೈವ ಪರವಿದ್ಯಾಖ್ಯಮಿತ್ಯುಕ್ತಿಃ; ಮುಖ್ಯಪರವಿದ್ಯಾತ್ವಸ್ಯೈವ ಭಗವತ್ಪಾದಾಭಿಮತತ್ವೇ ಪರವಿದ್ಯಾಂ, ಪರಮವಿದ್ಯಾಂ' ಇತ್ಯೇವಾವಕ್ಷ್ಯತ್, ನತೂಭಯತ್ರ ಆಖ್ಯಾಪದಘಟನಾ। ಸಾಕ್ಷಾದ್ವಿಷ್ಣುವಾಚಕತ್ವಸ್ಯಾನೌಪಚಾರಿಕಸ್ಯ ಬ್ರಹ್ಮತಂತ್ರೇ ಕಥಮಪ್ಯ-ಸಂಭವಾತ್ತಸ್ಯ ಮುಖ್ಯಪರವಿದ್ಯಾತ್ವಮಸಂಭವದುಕ್ತಿಕಮೇವ; ತಥಾಚ ಸುಧಾ -'ನನು ವೇದಾನಾ-ಮೀಶ್ವರಪ್ರತಿಪತ್ತಿಜನಕತ್ವಾದ್ಭವತು ತದ್ವಿಷಯತ್ವಂ; ಶಾಸ್ತ್ರಂ ತು ತೇಷಾಮೀಶ್ವರಪ್ರತಿಪಾದನಾನು-ಸಾರಣೋಪಾಯನ್ಯಾಯವಿಷಯಂ ಕಥಮೀಶ್ವರಪರಮುಚ್ಯತೇ। ಮೈವಂ; ವೇದಾನಾಮೀಶ್ವರಮವ-ಬೋಧಯತಾಮಿತಿಕರ್ತವ್ಯತಾ ಹಿ ಮೀಮಾಂಸಾ; ತೇನೋಪಕಾರಾತ್ತಾದ್ಭವತಿ ತದ್ವಿಷಯಾ। ತದ್‌ದ್ವಾರಾ ಶಾಸ್ತ್ರಮಪಿ। ನ ಹಿ ಬೀಜಸ್ಯಾಂಕುರಂ ಜನಯತಃ ಸಹಕಾರಿಣೋ ಜಲಾದೇರಂಕುರೋ ನ ಕಾರ್ಯಂ'

ಅನುವಾದ - 'ವೇದವು ಪರವಿದ್ಯೆಯಾಗಿದೆ' ಎಂಬ ವ್ಯವಹಾರಕ್ಕೆ ವಿಷ್ಣುವಾಚಕತ್ವಜ್ಞಾಪಕತ್ವವು







ಉಪಯುಕ್ತವಾಗಿದೆ. ಇದನ್ನು ಬ್ರಹ್ಮಸೂತ್ರವು ತಿಳಿಸುತ್ತದೆ. ಹೀಗೆ ಪರಂಪರೆಯಿಂದ ವಿಷ್ಣುಬೋಧೋದ್ದೇಶ್ಯತ್ವ ಮಾತ್ರದಿಂದಷ್ಟೇ ಗೌಣಪರವಿದ್ಯಾತ್ವವು ಬ್ರಹ್ಮಸೂತ್ರಗಳಲ್ಲಿದೆ. ಈ ಅಭಿಪ್ರಾಯದಿಂದಲೇ ಅನುವ್ಯಾಖ್ಯಾನದಲ್ಲಿ 'ಪರವಿದ್ಯಾಖ್ಯಮ್' ಎಂದು ಹೇಳಿದ್ದಾರೆ. ಒಂದು ವೇಳೆ ಮುಖ್ಯಪರವಿದ್ಯಾತ್ವವೇ ಶ್ರೀಮದಾಚಾರ್ಯರ ಅಭಿಪ್ರಾಯವಾಗಿದ್ದಲ್ಲಿ 'ಪರವಿದ್ಯಾಂ' ಎಂದು ಅಥವಾ 'ಪರಮವಿದ್ಯಾಂ' ಎಂದು ಹೇಳುತ್ತಿದ್ದರು. ಎರಡೂ ಕಡೆ 'ಆಖ್ಯಾ' ಎಂಬ ಪದವನ್ನು ಸೇರಿಸುತ್ತಿರಲಿಲ್ಲ. ಮುಖ್ಯವಾದ ಸಾಕ್ಷಾತ್ ವಿಷ್ಣುವಾಚಕತ್ವವು ಬ್ರಹ್ಮಸೂತ್ರಗಳಲ್ಲಿ ಯಾವರೀತಿಯಿಂದಲೂ ಕೂಡ ಯುಕ್ತವಾಗುವುದಿಲ್ಲ. ಆದ್ದರಿಂದ ಮುಖ್ಯಪರವಿದ್ಯಾತ್ವವು ಬ್ರಹ್ಮಸೂತ್ರಗಳಿಗೆ ಅಸಂಭಾವಿತವೇ ಆಗಿದೆ. ಈ ದೃಷ್ಟಿಯಿಂದ ನ್ಯಾಯಸುಧಾವಾಕ್ಯವು ಹೀಗೆ ಹೇಳುತ್ತಿದೆ - ವೇದಗಳು ಈಶ್ವರಜ್ಞಾನಕ್ಕೆ ಜನಕವಾಗಿರುವುದರಿಂದ ಈಶ್ವರವಿಷಯಕವಾಗಲೀ, ಶಾಸ್ತ್ರಗಳು ಈಶ್ವರಪ್ರತಿಪಾದನೆಗೆ ಉಪಕಾರಿಯಾದ ನ್ಯಾಯಗಳನ್ನು ವಿಷಯೀಕರಿಸುತ್ತಿರುವುದರಿಂದ ಹೇಗೆ ಈಶ್ವರಪರವಾಗುತ್ತವೆ ? ಈ ಪ್ರಶ್ನೆಗೆ ಉತ್ತರವನ್ನು ಹೀಗೆ ನೀಡಿದ್ದಾರೆ - ವೇದಗಳು ಈಶ್ವರಪ್ರತಿಪಾದಕವಾಗಿವೆ ಎಂಬುದಕ್ಕೆ ಮೀಮಾಂಸೆಯು ಸಹಕಾರಿಯಾಗಿದೆ. ಆದ್ದರಿಂದ ಈಶ್ವರಪ್ರತಿಪಾದಕತ್ವಕ್ಕೆ ಉಪಕಾರಕವಾಗಿರುವುದರಿಂದ ಶಾಸ್ತ್ರಗಳೂ ಕೂಡ ಈಶ್ವರವಿಷಯಕವಾಗುತ್ತವೆ. ಅಂಕುರಕ್ಕೆ ಬೀಜವು ಜನಕವಾಗಿದೆ. ಅದಕ್ಕೆ ನೀರು ಸಹಕಾರಿಯಾಗಿದೆ. ಅಂಕುರವು ಬೀಜದ ಕಾರ್ಯ ಎಂದು ಹೇಳುವಂತೆ ನೀರಿನ ಕಾರ್ಯವೆಂದೂ ಕೂಡ ಹೇಳುತ್ತಾರೆ. ನೀರಿನ ಕಾರ್ಯ- ವಲ್ಲವೆಂದು ಯಾರೂ ಹೇಳುವುದಿಲ್ಲ. ಅದರಂತೆ ಪ್ರಕೃತ ಸಹಕಾರಿಯಾದ ಬ್ರಹ್ಮಸೂತ್ರಗಳಿಗೂ ಕೂಡ ಈಶ್ವರನು ವಿಷಯನಾಗುತ್ತಾನೆಂದು ಹೇಳಬಹುದು.

**ವಿವರಣೆ** - ವೇದಗಳನ್ನು ಪರವಿದ್ಯಾ ಎಂದು ವ್ಯವಹಾರ ಮಾಡಬೇಕಾದರೆ ಅವುಗಳು ವಿಷ್ಣುವಾಚಕ ಎಂಬುದನ್ನು ತಿಳಿದುಕೊಳ್ಳಬೇಕು. ಇದನ್ನು ತಿಳಿಸುವುದು ಬ್ರಹ್ಮಮೀಮಾಂಸಾಶಾಸ್ತ್ರ. ಪರಂಪರಯಾ ವಿಷ್ಣುವಿನ ಜ್ಞಾನಕ್ಕೆ ಬ್ರಹ್ಮಮೀಮಾಂಸಾಶಾಸ್ತ್ರವು ಸಹಕಾರಿಯಾಗಿದೆ. ಹಾಗಾಗಿ ಗೌಣಪರವಿದ್ಯಾ ಎಂಬುದಾಗಿ ಬ್ರಹ್ಮಮೀಮಾಂಸಾಶಾಸ್ತ್ರವನ್ನು ವ್ಯವಹಾರ ಮಾಡಬೇಕು. ಇದನ್ನು ತಿಳಿಸಲು ಆಚಾರ್ಯರು ಅನುವ್ಯಾಖ್ಯಾನದಲ್ಲಿ 'ಪರಮಾಖ್ಯಾವಿದ್ಯಾಂ' 'ಪರವಿದ್ಯಾಖ್ಯಾಂ' ಎಂಬುದಾಗಿ ಆಖ್ಯಾ ಎಂಬ ಶಬ್ದವನ್ನು ಉಲ್ಲೇಖ ಮಾಡಿದ್ದಾರೆ. ಮುಖ್ಯವಾದ ಪರವಿದ್ಯೆಯೇ ಬ್ರಹ್ಮಮೀಮಾಂಸಾಶಾಸ್ತ್ರ ಎಂದು ಆಚಾರ್ಯರಿಗೆ ಅಭಿಪ್ರೇತವಾಗಿದ್ದರೆ 'ಪರವಿದ್ಯಾಂ ಪರಮವಿದ್ಯಾಂ' ಎಂಬುದಾಗಿ ಉಲ್ಲೇಖ ಮಾಡಬೇಕಾಗಿತ್ತು. 'ಪರವಿದ್ಯಾಖ್ಯಾಂ' 'ಪರಮಾಖ್ಯವಿದ್ಯಾಂ' ಎಂಬುದಾಗಿ ಆಖ್ಯಾಪದ ಘಟಿತವಾದ ಶಬ್ದವನ್ನು ಉಲ್ಲೇಖ ಮಾಡಬಾರದಿತ್ತು. ಆಖ್ಯಾ ಶಬ್ದದ ಉಲ್ಲೇಖದಿಂದ ಈ ವಿಷಯವು ಸ್ಪಷ್ಟವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಯಾವುದೇ ರೀತಿಯಲ್ಲೂ ಸಹ ಸಾಕ್ಷಾತ್ ವಿಷ್ಣುವಾಚಕತ್ವವು ಕೂಡುವುದಿಲ್ಲ. ಆದ್ದರಿಂದ ಔಪಚಾರಿಕವಾದ ವಿಷ್ಣುವಾಚಕತ್ವವನ್ನು ಅಂಗೀಕಾರ ಮಾಡಬೇಕು. ಮುಖ್ಯಪರವಿದ್ಯಾತ್ವವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಯಾವುದೇ ರೀತಿಯಲ್ಲೂ ಸಹ





ಸಂಗತವಾಗುವುದಿಲ್ಲ. ಈ ಕಾರಣದಿಂದಲೇ ಬ್ರಹ್ಮಮೀಮಾಂಸಾಶಾಸ್ತ್ರವನ್ನು 'ಪರಮಾಖ್ಯವಿದ್ಯಾ' ಎಂಬ ಶಬ್ದದಿಂದ ವ್ಯವಹಾರ ಮಾಡಲಾಗಿದೆ.

ಈ ವಿಷಯವನ್ನು ನ್ಯಾಯಸುಧೆಯೂ ಸಹ ಈ ರೀತಿ ಉಪಪಾದನೆ ಮಾಡಿದೆ.

ಪ್ರಶ್ನೆ – ವೇದಗಳು ಈಶ್ವರನ ಜ್ಞಾನವನ್ನು ಉಂಟು ಮಾಡುವುದರಿಂದ ಈಶ್ವರವಿಷಯಕ-ವಾಗಲಿ. ಆದರೆ ಬ್ರಹ್ಮಮೀಮಾಂಸಾಶಾಸ್ತ್ರವು ಹೇಗೆ ಈಶ್ವರಪರವಾಗುತ್ತದೆ? ಏಕೆಂದರೆ ಈಶ್ವರನ ಜ್ಞಾನಕ್ಕೆ ಉಪಯುಕ್ತವಾದ ನ್ಯಾಯಗಳನ್ನು ಮಾತ್ರ ತಿಳಿಸುತ್ತದೆ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಈಶ್ವರಪರತ್ವವು ಯುಕ್ತವಲ್ಲ ಅಲ್ಲವೆ?

ಉತ್ತರ : ಈ ವಾದವು ಸರಿಯಲ್ಲ. ವೇದಗಳಿಗೆ ಈಶ್ವರಬೋಧಕತ್ವವನ್ನು ಇತಿಕರ್ತವ್ಯತಾ ರೂಪವಾಗಿ ತಿಳಿಸುವುದೇ ಮೀಮಾಂಸಾ. ಮೀಮಾಂಸೆಯು ಉಪಕಾರಕವಾದ್ದರಿಂದ ಈಶ್ವರವಿಷಯಕವಾಗಿದೆ. ತದ್‌ದ್ವಾರಾ ಬ್ರಹ್ಮಮೀಮಾಂಸಾಗ್ರಂಥವನ್ನು ಶಾಸ್ತ್ರ ಎಂದು ವ್ಯವಹಾರ ಮಾಡುತ್ತೇವೆ. ಕೇವಲ ಸಹಕಾರಿಯಾದದ್ದರಲ್ಲೂ ಜನಕ ಎಂಬ ವ್ಯವಹಾರವಿದೆ. ಉದಾಹರಣೆ - ಬೀಜವು ಅಂಕುರವನ್ನು ಉಂಟುಮಾಡುತ್ತದೆ. ಅದಕ್ಕೆ ನೀರು ಸಹಕಾರಿಯಾಗಿದೆ. ಈ ನೀರನ್ನು ಅಂಕುರ ಜನಕವಲ್ಲವೆಂದು ಯಾರೂ ಹೇಳುವುದಿಲ್ಲ. ಆದರಂತೆ ಸಹಕಾರಿಯಾದ ಬ್ರಹ್ಮಸೂತ್ರಗಳಿಗೆ ಈಶ್ವರನು ವಿಷಯನೆಂದು ಹೇಳಬಹುದು.

## ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಈಶ್ವರನು ವಿಷಯನಾಗುತ್ತಾನೆ

ನನು ಮೀಮಾಂಸಾಪಿ ಸಂಭಾವನಾದಿವಿಷಯಾ, ಕಥಮೀಶ್ವರವಿಷಯಾ ಭವತಿ ? ಮೈವಂ ... ಮೀಮಾಂಸಾವ್ಯಾಪಾರಸ್ಯಾಪಿ ಪ್ರಮಾಣಾದಿಸಂಭಾವನಾದ್ವಾರೇಣೇಶ್ವರಾವಬೋಧ ಏವೋದ್ದೇಶ್ಯ ಇತಿ ಭವತಿ ತತ್ಕರ್ಮತಾ । ... ತಥಾಪಿ ಪ್ರತಿಬಂಧನಿವೃತ್ತೌ ಸತ್ಯಾಮೇವ ನಿರ್ಣಯ ಇತಿ ಪ್ರತಿಬಂಧಕನಿರಾಸಹೇತೋರಪಿ ವಿಚಾರಸ್ಯೋಪಚಾರೇಣ ನಿರ್ಣಯಹೇತುತ್ವಾದುಪಪನ್ನಮೀಶ್ವರ-ವಿಷಯತ್ವಂ ಇತಿ।

ಅನುವಾದ – ಮೀಮಾಂಸೆಯೂ ಕೂಡ ಈಶ್ವರನ ವಿಷಯದಲ್ಲಿ ಸಂಭಾವನಾ ರೂಪವಾಗಿ ಮಾತ್ರ ಪ್ರಮಾಣವಾಗಿದೆ. ಆದ್ದರಿಂದ ಈಶ್ವರವಿಷಯಕವೆಂದು ಹೇಗೆ ನಿರ್ಣಯ ಮಾಡುವಿರಿ ?

ಇದು ತಪ್ಪು. ಮೀಮಾಂಸಾವ್ಯಾಪಾರಕ್ಕೂ ಕೂಡ ಪ್ರಮಾಣಾದಿಸಂಭಾವನೆಯ ಮೂಲಕ ಈಶ್ವರನನ್ನು ತಿಳಿಸುವುದೇ ಮುಖ್ಯಉದ್ದೇಶವಾಗಿದೆ. ಆದ್ದರಿಂದ ಈ ಮೀಮಾಂಸಾಶಾಸ್ತ್ರಕ್ಕೆ ಈಶ್ವರನು ವಿಷಯನಾಗುತ್ತಾನೆ.

ಆದರೂ ಕೂಡ ಪ್ರತಿಬಂಧಕವು ಪರಿಹಾರವಾದ ಮೇಲೆ ಮಾತ್ರ ನಿರ್ಣಯವಾಗಲು ಸಾಧ್ಯ. ಈ

ಪ್ರತಿಬಂಧಕವನ್ನು ಪರಿಹಾರ ಮಾಡಲು ಯಾವುದು ಕಾರಣವಾಗಿದೆಯೋ, ಅದನ್ನೂ ಕೂಡ ಔಪಚಾರಿಕವಾಗಿ ನಿರ್ಣಯಕ್ಕೆ ಕಾರಣವೆಂದು ಕರೆಯಲಾಗಿದೆ. ಪ್ರಕೃತ ಬ್ರಹ್ಮಮೀಮಾಂಸಾಶಾಸ್ತ್ರವು ಈಶ್ವರಪ್ರತಿಪಾದಕತ್ವಕ್ಕೆ ಯಾವ ಪ್ರತಿಬಂಧಕವಿದೆಯೋ, ಅದನ್ನು ಪರಿಹಾರ ಮಾಡುತ್ತಿರುವುದರಿಂದ ಈಶ್ವರವಿಷಯಕವೆಂದು ಹೇಳಿದ್ದು ಯುಕ್ತವಾಗಿದೆ.

ವಿವರಣೆ - ಪ್ರಶ್ನೆ - ಮೀಮಾಂಸಾ ಎಂದರೆ ವಿಚಾರ. ನ್ಯಾಯ ಅಥವಾ ಯುಕ್ತಿಯ ಅನುಸಂಧಾನವನ್ನು ಮೀಮಾಂಸಾ ಶಬ್ದದಿಂದ ಶಾಸ್ತ್ರದಲ್ಲಿ ವ್ಯವಹಾರ ಮಾಡುತ್ತಾರೆ. ಪ್ರಮಾಣದ ಅಥವಾ ಪ್ರಮೇಯದ ವಿಷಯದಲ್ಲಿ ಸಂಶಯ ಬಂದಾಗ ಇದು ಪ್ರಮಾಣವೋ? ಅಲ್ಲವೋ? ಅಥವಾ ಈ ಪ್ರಮಾಣದಿಂದ ಇಂತಹ ಪ್ರಮೇಯವು ಸಿದ್ಧವಾಗುತ್ತದೋ, ಇಲ್ಲವೋ? ಮುಂತಾದ ಸಂಶಯಗಳು ಬಂದಾಗ ಮೀಮಾಂಸಾಶಾಸ್ತ್ರವು ಆ ಪ್ರಮಾಣದ ಸಂಭವನೀಯತೆಯನ್ನು ಪ್ರತಿಪಾದನೆ ಮಾಡುತ್ತದೆ. ಇದರಿಂದ ಮೀಮಾಂಸಾಶಾಸ್ತ್ರಕ್ಕೆ ವಿಷಯದ ಸಂಭಾವ್ಯತೆ, ಪ್ರಮಾಣಪ್ರಮೇಯಗಳ ಸಂಭಾವ್ಯತೆಯೇ ಉದ್ದೇಶವಾಗಿದೆ. ಹೊರತು ಈಶ್ವರನು ವಿಷಯವಾಗುವುದಿಲ್ಲ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಈಶ್ವರನು ಹೇಗೆ ವಿಷಯನಾಗುತ್ತಾನೆ?

ಉತ್ತರ - ಜಿಜ್ಞಾಸು ಕರ್ತೃ ಎನಿಸುತ್ತಾನೆ. ಮೀಮಾಂಸಾ ಅಥವಾ ವಿಚಾರ ಎಂಬುದು ಜಿಜ್ಞಾಸುವಿನ ಕ್ರಿಯೆ ಎನಿಸುತ್ತದೆ. ಉದ್ದೇಶ್ಯವಾದ ಜ್ಞಾನವು ಇಲ್ಲಿ ಫಲ ಎನಿಸುತ್ತದೆ. ಜ್ಞಾನಕ್ಕೆ ವಿಷಯನಾದವನು ಈಶ್ವರನು ಕರ್ಮ ಎನಿಸುತ್ತಾನೆ. ಸಾಧನವಾದ ಈಶ್ವರಜ್ಞಾನಕ್ಕೆ ವೇದವು ಕರಣ ಎಂದು ಕರೆಸಿಕೊಳ್ಳುತ್ತದೆ. ಮೀಮಾಂಸೆಯಿಂದ ವೇದವು ಈಶ್ವರನ ಜ್ಞಾನಕ್ಕೆ ಕರಣ ಎಂದು ನಿಶ್ಚಿತವಾಗುತ್ತದೆ. ಈಶ್ವರವಿಷಯದಲ್ಲಿ ಯಾವುದು ಪ್ರಮಾಣ ? ಎಂಬ ಜಿಜ್ಞಾಸೆ ಬಂದಾಗ ವೇದವು ಪ್ರಮಾಣ, ವೇದವು ಈಶ್ವರಪ್ರತಿಪಾದಕ ಎಂಬುದಾಗಿ ವೇದದ ಸಂಭಾವನಾ ಅಥವಾ ಈಶ್ವರಪ್ರತಿಪಾದಕತ್ವ ರೂಪವಾದ ವ್ಯಾಪಾರವನ್ನು ಮೀಮಾಂಸೆಯು ತಿಳಿಸುತ್ತಿದೆ. ಇಂತಹ ವ್ಯಾಪಾರದ ಮೂಲಕ ಈಶ್ವರನ ಜ್ಞಾನವು ಬರುತ್ತದೆ. ಈ ರೀತಿಯಾಗಿ ಕರ್ತೃವಿನ ಮೀಮಾಂಸಾರೂಪವಾದ ವ್ಯಾಪಾರಕ್ಕೆ ಈಶ್ವರನು ವಿಷಯನಾಗುತ್ತಾನೆ. ಇದಕ್ಕೆ ದೃಷ್ಟಾಂತ ಹೀಗಿದೆ -

ಒಬ್ಬನು ಮರವನ್ನು ಕೊಡಲಿಯಿಂದ ಕಡಿಯುತ್ತಾನೆ. ಇದರ ಉದ್ದೇಶ ಮರದ ಭೇದನ. ಮರವು ಕಡಿಯುವವನ ಕ್ರಿಯೆಗೆ ಕರ್ಮವಾಗಿದೆ. ಕುಠಾರವೂ ಸಹ ಕರ್ಮವಾಗಿದೆ. ಇಲ್ಲಿ ಫಲವು ಮರದ ಭೇದನ. ಈ ಭೇದನವು ಕರ್ತೃವಿನ ವ್ಯಾಪಾರದ ನಂತರದ ಕ್ಷಣದಲ್ಲಿಯೇ ಸಿದ್ಧವಾಗುವುದಿಲ್ಲ. ಮಧ್ಯದಲ್ಲಿ ಅವಾಂತರ ವ್ಯಾಪಾರವಿದೆ. ಅದೇ ಕೊಡಲಿಯ ಕ್ರಿಯೆ. ಹೀಗೆ ಕರ್ತೃವಿನ ವ್ಯಾಪಾರಕ್ಕೂ ಭೇದನರೂಪವಾದ ಕ್ರಿಯೆಗೂ ಮಧ್ಯದಲ್ಲಿ ಕುಠಾರದ ವ್ಯಾಪಾರವಿದ್ದು, ಕುಠಾರವೂ ಕರ್ಮ, ಮರವೂ ಕರ್ಮ ಎಂಬುದಾಗಿ ಕರೆಸಿಕೊಳ್ಳುತ್ತದೆ.





ಇದರಂತೆ ವೇದ, ಈಶ್ವರ, ಜಿಜ್ಞಾಸು, ಜ್ಞಾನ ಇವುಗಳನ್ನು ವಿಚಾರ ಮಾಡಿದಾಗ ಈಶ್ವರನು ವೇದ ವ್ಯಾಪಾರದ ಮೂಲಕ ಮೀಮಾಂಸೆಗೆ ವಿಷಯನಾಗಿದ್ದಾನೆ. ಛೇದನರೂಪವಾದ ಫಲವು ಕುಠಾರವೆಂಬ ಅವಾಂತರ-ವ್ಯಾಪಾರದ್ವಾರಾ ಹೇಗೆ ವಿಷಯವೋ ಹಾಗೇ ಕರ್ತೃಎನ ಮೀಮಾಂಸೆಗೆ ಈಶ್ವರನು ವೇದವ್ಯಾಪಾರದ್ವಾರಾ ವಿಷಯನಾಗುತ್ತಾನೆ.

ಪ್ರಶ್ನೆ – ವೇದವು ವಿಚಾರಕ್ಕೆ ಸಹಕಾರಿಕಾರಣವೇ ಹೊರತು ಮೂಲಕಾರಣವಲ್ಲ. ಶಬ್ದವು ಅರ್ಥವನ್ನು ತಿಳಿಸಿಕೊಡಲು ಶಬ್ದಾರ್ಥಗಳ ಸಂಬಂಧಜ್ಞಾನವೇ ಸಾಕು. ವಿಚಾರ ಆವಶ್ಯಕವಲ್ಲ. ಆದ್ದರಿಂದ ಈಶ್ವರನನ್ನು ತಿಳಿಯಲು ಬ್ರಹ್ಮಮೀಮಾಂಸಾಶಾಸ್ತ್ರ ಏಕೆ ಬೇಕು?

ಉತ್ತರ – ಈ ಪ್ರಶ್ನೆಗೆ ಉತ್ತರವನ್ನು ನ್ಯಾಯಸುಧೆಯಲ್ಲಿ ಹೀಗೆ ನೀಡಿದ್ದಾರೆ – ಪ್ರತಿಬಂಧಕವಾದ ಯಾವುದೇ ವಿಷಯಗಳಿದ್ದರೂ ಅದಕ್ಕೆ ನಿವರ್ತಕವಾದದ್ದನ್ನು ಅಂಗೀಕಾರ ಮಾಡಬೇಕು. ಪ್ರತಿಬಂಧಕನಿವರ್ತಕವಾದದ್ದು ಮೀಮಾಂಸಾ. ಹೀಗೆ ಮೀಮಾಂಸಾಶಾಸ್ತ್ರವು ಉಪಕಾರಿಯಾದ್ದರಿಂದ ಆವಶ್ಯಕವಾಗಿದೆ.

ಒಂದು ಕಾರ್ಯಕ್ಕೆ ಅನೇಕ ಉಪಕಾರಕಗಳು ಇರುತ್ತವೆ. ಕೆಲವು ಕಾರ್ಯದ ಉತ್ಪತ್ತಿಗೆ ಉಪಕಾರಕವಾದರೆ ಮತ್ತೆ ಕೆಲವು ಕಾರ್ಯದ ಉತ್ಪತ್ತಿಗೆ ಅಡ್ಡಿಯಾಗುವ ದೋಷಗಳನ್ನು ನಿರಾಕರಣೆ ಮಾಡುತ್ತವೆ. ಇವು ಪ್ರಯೋಜಕ ಎಂದು ಕರೆಸಿಕೊಳ್ಳುತ್ತವೆ. ಈ ಪ್ರಯೋಜಕಗಳೂ ಸಹ ಅತ್ಯಂತ ಆವಶ್ಯಕ. ಇದನ್ನು ಕಾರಣದ ಸಮುದಾಯದಲ್ಲಿ ಸೇರಿಸುವುದಿಲ್ಲ.

ಅಜ್ಞಾನ, ಭ್ರಮ ಇತ್ಯಾದಿಗಳನ್ನು ನಿರಾಸ ಮಾಡುವುದು ಬ್ರಹ್ಮಮೀಮಾಂಸಾಶಾಸ್ತ್ರದ ಕಾರ್ಯ. ಹೀಗೆ ಸಾಕ್ಷಾತ್ ಈಶ್ವರನ ಜ್ಞಾನಕ್ಕೆ ಮೀಮಾಂಸಾಶಾಸ್ತ್ರವು ಕಾರಣವಾಗದೇ ಇದ್ದರೂ ಸಹ ಪ್ರಯೋಜಕವಾಗಿದೆ. ಪ್ರತಿಬಂಧಕ ದೂರವಾಗದೇ ಯಾವ ಕಾರ್ಯವೂ ಸಹ ಆಗುವುದಿಲ್ಲ. ಇದಕ್ಕೆ ಮೀಮಾಂಸೆಯು ಅವಶ್ಯ ಬೇಕೇಬೇಕು. ಆದ್ದರಿಂದ ಈಶ್ವರನು ವೇದಾದಿಗಳಿಗೂ ವಿಷಯನಾಗುತ್ತಾನೆ, ಮೀಮಾಂಸಾಶಾಸ್ತ್ರಕ್ಕೂ ವಿಷಯನಾಗುತ್ತಾನೆ. ಇಷ್ಟು ನ್ಯಾಯಸುಧಾಗ್ರಂಥದ ಸಾರಾಂಶ.

## ವಾಕ್ಯಾರ್ಥಚಂದ್ರಿಕಾಕಾರರ ವಿವರಣೆ

'ಅತ್ರ ಜಿಜ್ಞಾಸಾಯಾ ವಿಷಯಸಂಬಂಧಸಿದ್ಧೌ ಶಾಸ್ತ್ರಸ್ಯಾಪಿ ತತ್ಸಂಬಂಧಸಿದ್ಧಿರಿತ್ಯಾಶಯೇನ ಜಿಜ್ಞಾಸ್ಯೋಽಯಮಿತಿಬ್ರುವತಾ ಭಾಷ್ಯಕಾರೇಣ ಶಾಸ್ತ್ರಸ್ಯ ನ ಸ್ವಾತಂತ್ರ್ಯೇಣ ಬ್ರಹ್ಮರೂಪವಿಷಯ-ಸಂಬಂಧೋಽಪಿ ತು ಜಿಜ್ಞಾಸಾದ್ವಾರೈವೇತ್ಯರ್ಥಸೂಚನಾತ್ ತನ್ನಿವರ್ತ್ಯಾಶಂಕಾಂ ದರ್ಶಯತಿ।' ...





'ಏವಂ ವಿಚಾರಸ್ಯಾಂಗತ್ವಂ ವದತಃ ಕಿಂ ದೋಷಸಹಿತಶಬ್ದಸ್ಯಾನ್ಯಥಾಜ್ಞಾನಜನಕತ್ವಂ , ವಿಚಾರಸ್ಯ ಚ ದೋಷನಿರಾಸೇನ ಪ್ರಮಿತಿಜನಕತ್ವಮಭಿಮತಂ ? ಉತ ಸಮ್ಯಗ್ ಜ್ಞಾನಜನಕತ್ವಂ ಶಬ್ದಸ್ವಭಾವೋ ದೋಷಾಚ್ಚಾನ್ಯಥಾಜ್ಞಾನೇ ಸಮುತ್ಪನ್ನೇ ವಿಚಾರೇಣ ಚ ನಿವೃತ್ತೇ ಶಬ್ದಾದೇವ ನಿರ್ಣಯ ಇತ್ಯಭಿಮತಂ ? ನಾದ್ಯಃ ; ಶಬ್ದಸ್ಯ ವಿಚಾರಸಾಪೇಕ್ಷಸ್ಯ ಪ್ರಮಿತಿಹೇತುತ್ವೇ ಪ್ರಾಮಾಣ್ಯಸ್ಯ ಸ್ವತಸ್ತ್ವಭಂಗ ಇತ್ಯಾಶಯೇನಾಹ । ಯತಸ್ತತ್ರಾಪೀತಿ। ತರ್ಹಿ ದ್ವಿತೀಯೋಂಗೀಕಾರ್ಯಃ ಕಿಮಿತ್ಯಾಶಂಕತೇ; ಕಿನ್ನಾಮೇತಿ । ಅಂಗೀಕಾರೇಣ ಸಮಾಧತ್ತೇ - ಪ್ರತಿಬಂಧೇತಿ । ... ನಿರ್ಣಯೋಪಕಾರಕತ್ವಸ್ಯ ಪ್ರಕೃತೇ ವಿವಕ್ಷಿತತ್ವಾತ್ ತಾವತೈವ ನಿರ್ಣೇಯವಿಷಯತ್ವಂ ಯುಕ್ತಮಿತ್ಯಾಶಯೇನ ಸಮಾಧತ್ತೇ, ಅತ್ರೋಚ್ಯತ ಇತಿ । - (ವಾಕ್ಯಾರ್ಥ-ಚಂದ್ರಿಕಾ)

ಅನುವಾದ –'ನನು ಮೀಮಾಂಸಾಪಿ' ಎಂಬ ಸುಧಾವಾಕ್ಯಕ್ಕೆ ವಾಕ್ಯಾರ್ಥಚಂದ್ರಿಕಾದಲ್ಲಿ ನೀಡಿದ ಅವತಾರಿಕೆ ಹೀಗಿದೆ – ಜಿಜ್ಞಾಸೆಯಿಂದ ವಿಷಯದ ಸಂಬಂಧವು ಸಿದ್ಧವಾಗುತ್ತಿದೆ. ಇದರಿಂದ ಶಾಸ್ತ್ರಕ್ಕೂ ಸಹ ಜಿಜ್ಞಾಸೆಯ ಸಂಬಂಧ ಸಿದ್ಧವಾಗುತ್ತದೆ. ಈ ಕಾರಣದಿಂದಲೇ ಆಚಾರ್ಯರು 'ಜಿಜ್ಞಾಸ್ಯೋಽಯಂ ವಿಧೀಯತೇ' ಎಂಬುದಾಗಿ ಪ್ರಯೋಗ ಮಾಡಿದ್ದಾರೆ. ಶಾಸ್ತ್ರಕ್ಕೆ ಸಾಕ್ಷಾತ್ತಾಗಿ ಬ್ರಹ್ಮರೂಪವಾದ ವಿಷಯದ ಜೊತೆಗೆ ಸಂಬಂಧವು ಇರುವುದಿಲ್ಲ. ಜಿಜ್ಞಾಸಾದ್ವಾರವಾಗಿಯೇ ಸಂಬಂಧವಿರುತ್ತದೆ ಎಂಬ ಅರ್ಥವು ಸೂಚಿತವಾಗಿದೆ. ಆದ್ದರಿಂದ ಈ ವಿಷಯಕವಾದ ಸಂಶಯವನ್ನು ಪರಿಹಾರ ಮಾಡುವ ಅದಕ್ಕೆ ಅನುಗುಣವಾದ ಶಂಕೆಯನ್ನು 'ನನು' ಎಂಬ ವಾಕ್ಯದಿಂದ ತೋರಿಸಲಾಗಿದೆ.

ಈ ವಾಕ್ಯಕ್ಕೆ ವಾಕ್ಯಾರ್ಥರತ್ನಮಾಲಾಕಾರರು ವಿವರಣೆ ನೀಡುವಾಗ 'ತನ್ನಿವರ್ತ್ಯಾಶಂಕಾಂ ಇತಿ । ಪರಮಾಖ್ಯವಿದ್ಯಾ ಇತ್ಯೇತದ್ವ್ಯಾಖ್ಯಾನಾವಸರೇ ವೇದಾದಿತಿಕರ್ತವ್ಯತಾರೂಪಸ್ಯ ಅಸ್ಯ ಪೃಥಕ್ ಪ್ರಾಮಾಣ್ಯಾನಭ್ಯುಪಗಮಾತ್ ಇತ್ಯುಕ್ತಂ ಉಪಪಾದಯಿತುಂ ಇತಿ ಪೂರಣೀಯಂ' ಎಂದು ವಿವರಣೆಯನ್ನು ನೀಡಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – 'ಪರಮಾಖ್ಯವಿದ್ಯಾ' ಎಂಬ ವಾಕ್ಯದ ವಿವರಣೆಯನ್ನು ನೀಡುವಾಗ ಮೀಮಾಂಸಾಶಾಸ್ತ್ರವು ವೇದಾದಿಗಳ ಇತಿಕರ್ತವ್ಯತಾರೂಪವಾಗಿದೆ. ಇದಕ್ಕೆ ಪ್ರತ್ಯೇಕವಾಗಿ ಪ್ರಾಮಾಣ್ಯವನ್ನು ಅಂಗೀಕಾರ ಮಾಡಿಲ್ಲ. ಆದ್ದರಿಂದ ಇದನ್ನು ಉಪಪಾದನೆ ಮಾಡಲು ಈ ಮುಂದಿನ ಟೀಕಾಭಾಗವು ಹೊರಟಿದೆ ಎಂದು.

'ಯತಸ್ತತ್ರಾಪಿ' ಎಂಬ ಟೀಕಾವಾಕ್ಯಕ್ಕೆ ವಾಕ್ಯಾರ್ಥಚಂದ್ರಿಕೆಯಲ್ಲಿ ಕೊಟ್ಟ ಅವತಾರಿಕೆ ಹೀಗಿದೆ – ವೇದವು ಸಾಕ್ಷಾತ್ ಅಂಗ. ಅದಕ್ಕೆ ಅಂಗವಾದದ್ದು ಮೀಮಾಂಸಾಶಾಸ್ತ್ರ. ಇದು ಹೇಗೆ ಜ್ಞಾನಜನಕ ಎಂಬುದರ ಬಗ್ಗೆ ಇಲ್ಲಿ ವಿಕಲ್ಪವನ್ನು ಮಾಡಲಾಗಿದೆ. ದೋಷವಿರುವ ಶಬ್ದವು ಅನ್ಯಥಾಜ್ಞಾನವನ್ನು ಉಂಟು ಮಾಡುತ್ತದೆ. ವಿಚಾರವು ಈ ದೋಷವನ್ನು ನಿರಾಸ ಮಾಡುವ ಮುಖಾಂತರ ಜ್ಞಾನಜನಕವಾಗಿದೆ ಎಂದು ಅಭಿಪ್ರಾಯವೋ? ಅಥವಾ

ಶಬ್ದದ ಸ್ವಭಾವ ಯಥಾರ್ಥಜ್ಞಾನವನ್ನು ಉಂಟು ಮಾಡುವಿಕೆ. ಇಂತಹ ಸಮ್ಯಕ್‌ಜ್ಞಾನಜನಕತ್ವರೂಪವಾದ ಶಬ್ದದ ಸ್ವಭಾವವು ದೋಷವಶಾತ್ ಅನ್ಯಥಾಭೂತವಾಗುತ್ತದೆ. ಆಗ ಯಥಾರ್ಥಜ್ಞಾನವು ಉಂಟಾಗುವುದಿಲ್ಲ. ವಿಚಾರ ಮಾಡಿದಾಗ ಶಬ್ದದಿಂದ ಸಮ್ಯಗ್‌ಜ್ಞಾನಜನಕತ್ವ- ರೂಪವಾದ ಅರ್ಥವು ನಿರ್ಣಯವಾಗುತ್ತದೆ. ವಿಚಾರದಿಂದ ಅನ್ಯಥಾಜ್ಞಾನವು ನಿವೃತ್ತವಾದಾಗ ಶಬ್ದದಿಂದ ಸ್ವಾಭಾವಿಕವಾಗಿಯೇ ಯಥಾರ್ಥಜ್ಞಾನವು ಉಂಟಾಗುತ್ತದೆ ಎಂದೋ? ಹೀಗೆ ಎರಡು ವಿಕಲ್ಪಗಳನ್ನು ಮಾಡಿದ್ದರೆ. ಈ ಎರಡೂ ವಿಕಲ್ಪಗಳು ಸರಿಯಲ್ಲ. ಏಕೆಂದರೆ ಶಬ್ದವು ವಿಚಾರವನ್ನು ಅಪೇಕ್ಷಿಸಿ ಜ್ಞಾನಕ್ಕೆ ಕಾರಣವಾಗಿದೆ ಎಂದು ಒಪ್ಪಿದರೆ ಪ್ರಾಮಾಣ್ಯಸ್ವತಸ್ತ್ವವು ಭಂಗವಾಗುತ್ತದೆ. ಈ ದೃಷ್ಟಿಯಿಂದ 'ಯತಃ ತತ್ರಾಪಿ' ಎಂಬ ಟೀಕಾವಾಕ್ಯವು ಹೊರಟದೆ.

ಶಬ್ದದಲ್ಲಿರುವ ಅನ್ಯಥಾಜ್ಞಾನದ ನಿವಾರಣೆಗಾಗಿ ವಿಚಾರವು ಆವಶ್ಯಕ ಎಂಬುದನ್ನು ಅಂಗೀಕಾರ ಮಾಡಲಾಗುತ್ತದೆಯೇ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಕಿಂನಾಮ' ಎಂಬ ಟೀಕಾವಾಕ್ಯವು ಹೊರಟದೆ. ಟೀಕೆಯಲ್ಲಿ 'ಕಿಂ ನಾಮ ಪ್ರತಿಬಂಧಮಾತ್ರಂ ವಿಚಾರೇಣ ಅಪನೀಯತೇ ನಹಿ ಇತಿಕರ್ತವ್ಯತಾ ಏವಂ' ಎಂಬ ವಾಕ್ಯವು ಇದೆ. ಇದರ ಅಭಿಪ್ರಾಯ ಹೀಗಿದೆ – ವೇದದಿಂದ ಯಾವ ಅರ್ಥದ ಬಗ್ಗೆ ಸಂಶಯ ಬರುತ್ತದೆಯೋ, ಅದಕ್ಕೆ ಪ್ರತಿಬಂಧಕವಾದ ದೋಷಗಳನ್ನು ಮಾತ್ರ ಮೀಮಾಂಸೆಯು ನಿವಾರಣೆ ಮಾಡುತ್ತದೆ. ಇಲ್ಲಿ ಅಂಗಗಳು ಎರಡು ವಿಧವಾಗಿವೆ ಅರ್ಥಕರ್ಮಕವಾದದ್ದು ಹಾಗೂ ಸಂಸ್ಕಾರಕರ್ಮಕವಾದದ್ದು. ಅವುಗಳ ಮಧ್ಯದಲ್ಲಿ ದ್ರವ್ಯವನ್ನು ದ್ವಾರ ಮಾಡಿಕೊಳ್ಳದೇ ಅಪೂರ್ವದ ಮುಖಾಂತರ ಫಲೋಪಕಾರಿಯಾದಂತಹ ಆರಾದುಪಕಾರಿಯಾದ ಪ್ರಯಾಜಾದಿಗಳು ಅರ್ಥಕರ್ಮಕವಾದ ಅಂಗಗಳು. ದ್ರವ್ಯದ ದ್ವಾರಾ ಯಾಗೋಪ-ಕಾರಿಯಾದ ಸನ್ನಿಪತ್ಯ ಉಪಕಾರಿಯಾದ ಪ್ರೋಕ್ಷಣಾದಿಗಳು ಸಂಸ್ಕಾರಕರ್ಮಗಳು ಎಂದು ಕರೆಸಿಕೊಳ್ಳುತ್ತವೆ. ಹೀಗೆ ಇತಿಕರ್ತವ್ಯತಾರೂಪವಾಗಿ ಪ್ರಯೋಜಕವಾದದ್ದು ಕರ್ಮಗಳಲ್ಲಿ ಕಂಡಿದೆ. ಅದರಂತೆ ಇಲ್ಲೂ ಸಹ ಮೀಮಾಂಸೆಯು ಎರಡು ವಿಧ. ಪ್ರಮಾಣಮೀಮಾಂಸಾ ಹಾಗೂ ಪ್ರಮೇಯಮೀಮಾಂಸಾ ಎಂಬುದಾಗಿ. ಪ್ರಮಾಣಮೀಮಾಂಸಾದಲ್ಲಿ ಶಕ್ತಿ ಹಾಗೂ ತಾತ್ಪರ್ಯಗಳು ನಿರ್ಣೀತವಾಗಿರುತ್ತವೆ. ಇಂತಹ ನಿರ್ಣೀತವಾದ ಶಕ್ತಿತಾತ್ಪರ್ಯವಿಶಿಷ್ಟವಾದ ಶಬ್ದವೇ ಕರಣವಾಗಿದೆ. ಇಲ್ಲಿ ನಿರ್ಣಯವು ವಿಚಾರದ ಅಧೀನ. ಈ ವಿಚಾರರೂಪವಾದ ಮೀಮಾಂಸೆಯು ಬ್ರಹ್ಮಜ್ಞಾನಕ್ಕೆ ಅಂಗವಾಗಿದೆ. ಯಾಗವನ್ನು ಕುರಿತು ಸಂಸ್ಕಾರ, ಕರ್ಮ, ಪ್ರೋಕ್ಷಣಾದಿಗಳು ಯಾಗದ ಸ್ವರೂಪವನ್ನು ನಿಷ್ಪಾದನೆ ಮಾಡುವ ಮುಖಾಂತರ ಹೇಗೆ ಅಂಗವೋ, ಹಾಗೆ ಭಗವಂತನ ಸ್ವರೂಪವನ್ನು ತಿಳಿಸಲು ಈ ಮೀಮಾಂಸಾಶಾಸ್ತ್ರವು ಸನ್ನಿಪತ್ಯೋಪಕಾರಿಯಾದ ಅಂಗವಾಗಿದೆ.

ಹೀಗೆ ಮೀಮಾಂಸೆಯು ಸಂಭಾವನಾ ಹಾಗೂ ವಿಪರೀತಭಾವನಾ ಇವುಗಳನ್ನು ನಿವೃತ್ತಿ ಮಾಡುವ ಮುಖಾಂತರ ಬ್ರಹ್ಮಜ್ಞಾನಕ್ಕೆ ಉಪಕಾರಿಯಾಗಿದೆ. ಪ್ರಯಾಜಾದಿಗಳು ಹೇಗೆ ಅಂಗವೋ ಅದರಂತೆ ಬ್ರಹ್ಮಜ್ಞಾನರೂಪವಾದ ಫಲಕ್ಕೆ ಉಪಕಾರಿತಯಾ ಅಂಗವಾಗಿದೆ.





'ಏವಂ ವಿಚಾರಸ್ಯಾಂಗತ್ವಂ ವದತಃ ಕಿಂ ದೋಷಸಹಿತಶಬ್ದಸ್ಯಾನ್ಯಥಾಜ್ಞಾನಜನಕತ್ವಂ , ವಿಚಾರಸ್ಯ ಚ ದೋಷನಿರಾಸೇನ ಪ್ರಮಿತಿಜನಕತ್ವಮಭಿಮತಂ ? ಉತ ಸಮ್ಯಗ್ ಜ್ಞಾನಜನಕತ್ವಂ ಶಬ್ದಸ್ವಭಾವೋ ದೋಷಾಚಾನ್ಯಥಾಜ್ಞಾನೇ ಸಮುತ್ಪನ್ನೇ ವಿಚಾರೇಣ ಚ ನಿವೃತ್ತೇ ಶಬ್ದಾದೇವ ನಿರ್ಣಯ ಇತ್ಯಭಿಮತಂ ? ನಾದ್ಯಃ ; ಶಬ್ದಸ್ಯ ವಿಚಾರಸಾಪೇಕ್ಷಸ್ಯ ಪ್ರಮಿತಿಹೇತುತ್ವೇ ಪ್ರಾಮಾಣ್ಯಸ್ಯ ಸ್ವತಸ್ತ್ವಭಂಗ ಇತ್ಯಾಶಯೇನಾಹ । ಯತಸ್ತತ್ರಾಪೀತಿ। ತರ್ಹಿ ದ್ವಿತೀಯೋಂಗೀಕಾರ್ಯಃ ಕಿಮಿತ್ಯಾಶಂಕತೇ; ಕಿನ್ನಾಮೇತಿ । ಅಂಗೀಕಾರೇಣ ಸಮಾಧತ್ತೇ - ಪ್ರತಿಬಂಧೇತಿ । ... ನಿರ್ಣಯೋಪಕಾರಕತ್ವಸ್ಯ ಪ್ರಕೃತೇ ವಿವಕ್ಷಿತತ್ವಾತ್ ತಾವತ್ತೈವ ನಿರ್ಣೇಯವಿಷಯತ್ವಂ ಯುಕ್ತಮಿತ್ಯಾಶಯೇನ ಸಮಾಧತ್ತೇ, ಅತ್ರೋಚ್ಯತ ಇತಿ । - (ವಾಕ್ಯಾರ್ಥ-ಚಂದ್ರಿಕಾ)

ಅನುವಾದ –'ನನು ಮೀಮಾಂಸಾಪಿ' ಎಂಬ ಸುಧಾವಾಕ್ಯಕ್ಕೆ ವಾಕ್ಯಾರ್ಥಚಂದ್ರಿಕಾದಲ್ಲಿ ನೀಡಿದ ಅವತಾರಿಕೆ ಹೀಗಿದೆ – ಜಿಜ್ಞಾಸೆಯಿಂದ ವಿಷಯದ ಸಂಬಂಧವು ಸಿದ್ಧವಾಗುತ್ತಿದೆ. ಇದರಿಂದ ಶಾಸ್ತ್ರಕ್ಕೂ ಸಹ ಜಿಜ್ಞಾಸೆಯ ಸಂಬಂಧ ಸಿದ್ಧವಾಗುತ್ತದೆ. ಈ ಕಾರಣದಿಂದಲೇ ಆಚಾರ್ಯರು 'ಜಿಜ್ಞಾಸ್ಯೋಽಯಂ ವಿಧೀಯತೇ' ಎಂಬುದಾಗಿ ಪ್ರಯೋಗ ಮಾಡಿದ್ದಾರೆ. ಶಾಸ್ತ್ರಕ್ಕೆ ಸಾಕ್ಷಾತ್ತಾಗಿ ಬ್ರಹ್ಮರೂಪವಾದ ವಿಷಯದ ಜೊತೆಗೆ ಸಂಬಂಧವು ಇರುವುದಿಲ್ಲ. ಜಿಜ್ಞಾಸಾದ್ವಾರವಾಗಿಯೇ ಸಂಬಂಧವಿರುತ್ತದೆ ಎಂಬ ಅರ್ಥವು ಸೂಚಿತವಾಗಿದೆ. ಆದ್ದರಿಂದ ಈ ವಿಷಯಕವಾದ ಸಂಶಯವನ್ನು ಪರಿಹಾರ ಮಾಡುವ ಅದಕ್ಕೆ ಅನುಗುಣವಾದ ಶಂಕೆಯನ್ನು 'ನನು' ಎಂಬ ವಾಕ್ಯದಿಂದ ತೋರಿಸಲಾಗಿದೆ.

ಈ ವಾಕ್ಯಕ್ಕೆ ವಾಕ್ಯಾರ್ಥರತ್ನಮಾಲಾಕಾರರು ವಿವರಣೆ ನೀಡುವಾಗ 'ತನ್ನಿವರ್ತ್ಯಾಶಂಕಾಂ ಇತಿ । ಪರಮಾಖ್ಯವಿದ್ಯಾ ಇತ್ಯೇತದ್ವ್ಯಾಖ್ಯಾನಾವಸರೇ ವೇದಾದಿತಿಕರ್ತವ್ಯತಾರೂಪಸ್ಯ ಅಸ್ಯ ಪೃಥಕ್ ಪ್ರಾಮಾಣ್ಯಾ-ನಭ್ಯುಪಗಮಾತ್ ಇತ್ಯುಕ್ತಂ ಉಪಪಾದಯಿತುಂ ಇತಿ ಪೂರಣೀಯಂ' ಎಂದು ವಿವರಣೆಯನ್ನು ನೀಡಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – 'ಪರಮಾಖ್ಯವಿದ್ಯಾ' ಎಂಬ ವಾಕ್ಯದ ವಿವರಣೆಯನ್ನು ನೀಡುವಾಗ ಮೀಮಾಂಸಾಶಾಸ್ತ್ರವು ವೇದಾದಿಗಳ ಇತಿಕರ್ತವ್ಯತಾರೂಪವಾಗಿದೆ. ಇದಕ್ಕೆ ಪ್ರತ್ಯೇಕವಾಗಿ ಪ್ರಾಮಾಣ್ಯವನ್ನು ಅಂಗೀಕಾರ ಮಾಡಿಲ್ಲ. ಆದ್ದರಿಂದ ಇದನ್ನು ಉಪಪಾದನೆ ಮಾಡಲು ಈ ಮುಂದಿನ ಟೀಕಾಭಾಗವು ಹೊರಟಿದೆ ಎಂದು.

'ಯತಸ್ತತ್ರಾಪಿ' ಎಂಬ ಟೀಕಾವಾಕ್ಯಕ್ಕೆ ವಾಕ್ಯಾರ್ಥಚಂದ್ರಿಕೆಯಲ್ಲಿ ಕೊಟ್ಟ ಅವತಾರಿಕೆ ಹೀಗಿದೆ – ವೇದವು ಸಾಕ್ಷಾತ್ ಅಂಗ. ಅದಕ್ಕೆ ಅಂಗವಾದದ್ದು ಮೀಮಾಂಸಾಶಾಸ್ತ್ರ. ಇದು ಹೇಗೆ ಜ್ಞಾನಜನಕ ಎಂಬುದರ ಬಗ್ಗೆ ಇಲ್ಲಿ ವಿಕಲ್ಪವನ್ನು ಮಾಡಲಾಗಿದೆ. ದೋಷವಿರುವ ಶಬ್ದವು ಅನ್ಯಥಾಜ್ಞಾನವನ್ನು ಉಂಟು ಮಾಡುತ್ತದೆ. ವಿಚಾರವು ಈ ದೋಷವನ್ನು ನಿರಾಸ ಮಾಡುವ ಮುಖಾಂತರ ಜ್ಞಾನಜನಕವಾಗಿದೆ ಎಂದು ಅಭಿಪ್ರಾಯವೋ? ಅಥವಾ





ಶಬ್ದದ ಸ್ವಭಾವ ಯಥಾರ್ಥಜ್ಞಾನವನ್ನು ಉಂಟು ಮಾಡುವಿಕೆ . ಇಂತಹ ಸಮ್ಯಕ್‌ಜ್ಞಾನಜನಕತ್ವರೂಪವಾದ ಶಬ್ದದ ಸ್ವಭಾವವು ದೋಷವಶಾತ್ ಅನ್ಯಥಾಭೂತವಾಗುತ್ತದೆ. ಆಗ ಯಥಾರ್ಥಜ್ಞಾನವು ಉಂಟಾಗುವುದಿಲ್ಲ. ವಿಚಾರ ಮಾಡಿದಾಗ ಶಬ್ದದಿಂದ ಸಮ್ಯಗ್‌ಜ್ಞಾನಜನಕತ್ವ- ರೂಪವಾದ ಅರ್ಥವು ನಿರ್ಣಯವಾಗುತ್ತದೆ. ವಿಚಾರದಿಂದ ಅನ್ಯಥಾಜ್ಞಾನವು ನಿವೃತ್ತವಾದಾಗ ಶಬ್ದದಿಂದ ಸ್ವಾಭಾವಿಕವಾಗಿಯೇ ಯಥಾರ್ಥಜ್ಞಾನವು ಉಂಟಾಗುತ್ತದೆ ಎಂದೋ? ಹೀಗೆ ಎರಡು ವಿಕಲ್ಪಗಳನ್ನು ಮಾಡಿದ್ದರೆ. ಈ ಎರಡೂ ವಿಕಲ್ಪಗಳು ಸರಿಯಲ್ಲ. ಏಕೆಂದರೆ ಶಬ್ದವು ವಿಚಾರವನ್ನು ಅಪೇಕ್ಷಿಸಿ ಜ್ಞಾನಕ್ಕೆ ಕಾರಣವಾಗಿದೆ ಎಂದು ಒಪ್ಪಿದರೆ ಪ್ರಾಮಾಣ್ಯಸ್ವತಸ್ತ್ವವು ಭಂಗವಾಗುತ್ತದೆ. ಈ ದೃಷ್ಟಿಯಿಂದ 'ಯತಃ ತತ್ರಾಪಿ' ಎಂಬ ಟೀಕಾವಾಕ್ಯವು ಹೊರಟಿದೆ.

ಶಬ್ದದಲ್ಲಿರುವ ಅನ್ಯಥಾಜ್ಞಾನದ ನಿವಾರಣೆಗಾಗಿ ವಿಚಾರವು ಆವಶ್ಯಕ ಎಂಬುದನ್ನು ಅಂಗೀಕಾರ ಮಾಡಲಾಗುತ್ತದೆಯೇ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಕಿಂನಾಮ' ಎಂಬ ಟೀಕಾವಾಕ್ಯವು ಹೊರಟಿದೆ. ಟೀಕೆಯಲ್ಲಿ 'ಕಿಂ ನಾಮ ಪ್ರತಿಬಂಧಮಾತ್ರಂ ವಿಚಾರೇಣ ಅಪನೀಯತೇ ನಹಿ ಇತಿಕರ್ತವ್ಯತಾ ಏವಂ' ಎಂಬ ವಾಕ್ಯವು ಇದೆ. ಇದರ ಅಭಿಪ್ರಾಯ ಹೀಗಿದೆ – ವೇದದಿಂದ ಯಾವ ಅರ್ಥದ ಬಗ್ಗೆ ಸಂಶಯ ಬರುತ್ತದೆಯೋ, ಅದಕ್ಕೆ ಪ್ರತಿಬಂಧಕವಾದ ದೋಷಗಳನ್ನು ಮಾತ್ರ ಮೀಮಾಂಸೆಯು ನಿವಾರಣೆ ಮಾಡುತ್ತದೆ. ಇಲ್ಲಿ ಅಂಗಗಳು ಎರಡು ವಿಧವಾಗಿವೆ ಅರ್ಥಕರ್ಮಕವಾದದ್ದು ಹಾಗೂ ಸಂಸ್ಕಾರಕರ್ಮಕವಾದದ್ದು. ಅವುಗಳ ಮಧ್ಯದಲ್ಲಿ ದ್ರವ್ಯವನ್ನು ದ್ವಾರ ಮಾಡಿಕೊಳ್ಳದೇ ಅಪೂರ್ವದ ಮುಖಾಂತರ ಫಲೋಪಕಾರಿಯಾದಂತಹ ಆರಾದುಪಕಾರಿಯಾದ ಪ್ರಯಾಜಾದಿಗಳು ಅರ್ಥಕರ್ಮಕವಾದ ಅಂಗಗಳು. ದ್ರವ್ಯದ ದ್ವಾರಾ ಯಾಗೋಪ-ಕಾರಿಯಾದ ಸನ್ನಿಪತ್ಯ ಉಪಕಾರಿಯಾದ ಪ್ರೋಕ್ಷಣಾದಿಗಳು ಸಂಸ್ಕಾರಕರ್ಮಗಳು ಎಂದು ಕರೆಸಿಕೊಳ್ಳುತ್ತವೆ. ಹೀಗೆ ಇತಿಕರ್ತವ್ಯತಾರೂಪವಾಗಿ ಪ್ರಯೋಜಕವಾದದ್ದು ಕರ್ಮಗಳಲ್ಲಿ ಕಂಡಿದೆ. ಅದರಂತೆ ಇಲ್ಲೂ ಸಹ ಮೀಮಾಂಸೆಯು ಎರಡು ವಿಧ. ಪ್ರಮಾಣಮೀಮಾಂಸಾ ಹಾಗೂ ಪ್ರಮೇಯಮೀಮಾಂಸಾ ಎಂಬುದಾಗಿ. ಪ್ರಮಾಣಮೀಮಾಂಸಾದಲ್ಲಿ ಶಕ್ತಿ ಹಾಗೂ ತಾತ್ಪರ್ಯಗಳು ನಿರ್ಣೀತವಾಗಿರುತ್ತವೆ. ಇಂತಹ ನಿರ್ಣೀತವಾದ ಶಕ್ತಿತಾತ್ಪರ್ಯವಿಶಿಷ್ಟವಾದ ಶಬ್ದವೇ ಕರಣವಾಗಿದೆ. ಇಲ್ಲಿ ನಿರ್ಣಯವು ವಿಚಾರದ ಅಧೀನ. ಈ ವಿಚಾರರೂಪವಾದ ಮೀಮಾಂಸೆಯು ಬ್ರಹ್ಮಜ್ಞಾನಕ್ಕೆ ಅಂಗವಾಗಿದೆ. ಯಾಗವನ್ನು ಕುರಿತು ಸಂಸ್ಕಾರ, ಕರ್ಮ, ಪ್ರೋಕ್ಷಣಾದಿಗಳು ಯಾಗದ ಸ್ವರೂಪವನ್ನು ನಿಷ್ಪಾದನೆ ಮಾಡುವ ಮುಖಾಂತರ ಹೇಗೆ ಅಂಗವೋ, ಹಾಗೆ ಭಗವಂತನ ಸ್ವರೂಪವನ್ನು ತಿಳಿಸಲು ಈ ಮೀಮಾಂಸಾಶಾಸ್ತ್ರವು ಸನ್ನಿಪತ್ಯೋಪಕಾರಿಯಾದ ಅಂಗವಾಗಿದೆ.

ಹೀಗೆ ಮೀಮಾಂಸೆಯು ಸಂಭಾವನಾ ಹಾಗೂ ವಿಪರೀತಭಾವನಾ ಇವುಗಳನ್ನು ನಿವೃತ್ತಿ ಮಾಡುವ ಮುಖಾಂತರ ಬ್ರಹ್ಮಜ್ಞಾನಕ್ಕೆ ಉಪಕಾರಿಯಾಗಿದೆ. ಪ್ರಯಾಜಾದಿಗಳು ಹೇಗೆ ಅಂಗವೋ ಅದರಂತೆ ಬ್ರಹ್ಮಜ್ಞಾನರೂಪವಾದ ಫಲಕ್ಕೆ ಉಪಕಾರಿತಯಾ ಅಂಗವಾಗಿದೆ.





## ಬ್ರಹ್ಮಮೀಮಾಂಸೆಗೆ ಪರಂಪರೆಯಿಂದ ವಿಷ್ಣುಬೋಧಕತ್ವ

**ಮೀಮಾಂಸಾಯಾಸ್ತತ್ಕರ್ಮಕರ್ತಾ - ಈಶ್ವರಕರ್ಮಕತಾ ಪರಂಪರಯಾ ಭವತೀತ್ಯರ್ಥಃ - (ಸುಧಾ ಶ್ರೀನಿವಾಸತೀರ್ಥೀಯಾ)**

**ತಥಾಚ ಮೀಮಾಂಸಾಯಾಃ ಪರಂಪರಯೇಶ್ವರಬೋಧಜನಕತ್ವಾದೇವ ತದ್ವಿಷಯತ್ವಮಿತಿ ಭಾವಃ। - (ಸುಧಾಕಾಶಿಕಾ ಟಿಪ್ಪಣೀ)**

ಅನುವಾದ - ಸುಧಾವ್ಯಾಖ್ಯಾನವಾದ ಶ್ರೀನಿವಾಸತೀರ್ಥೀಯದಲ್ಲಿ ಹೀಗಿದೆ - ಮೀಮಾಂಸೆಯು ಈಶ್ವರಕರ್ಮಕ ಎಂಬುದನ್ನು ವಿವರಣೆ ಮಾಡುವಾಗ ತತ್ಕರ್ಮತಾ ಶಬ್ದಕ್ಕೆ 'ಈಶ್ವರಕರ್ಮಕತಾ ಪರಂಪರಯಾ ಭವತಿ' ಎಂಬುದಾಗಿ ಉಲ್ಲೇಖ ಮಾಡಿದ್ದಾರೆ. ಮೀಮಾಂಸೆಯು ಸಾಕ್ಷಾತ್ತಾಗಿ ಈಶ್ವರವಿಷಯಕವಲ್ಲ ಎಂದು. ಇದರಂತೆ ಕಾಶೀಟಿಪ್ಪಣಿಯಲ್ಲೂ ಸಹ ಮೀಮಾಂಸೆಯು ಪರಂಪರಯಾ ಈಶ್ವರಬೋಧವನ್ನು ಉಂಟುಮಾಡುವುದರಿಂದ 'ಮೀಮಾಂಸೆಗೆ ಈಶ್ವರನು ವಿಷಯನಾಗಿದ್ದಾನೆ' ಎಂದು ಹೇಳಿದ್ದಾರೆ. ಸಾಕ್ಷಾತ್ತಾಗಿ ಈಶ್ವರವಿಷಯತ್ವವನ್ನು ಮೀಮಾಂಸೆಗೆ ಅಂಗೀಕಾರ ಮಾಡಿಲ್ಲ.

## ಇದು ಎಲ್ಲಾ ಜ್ಞಾನಿಗಳಿಗೂ ಸಮ್ಮತ

**ಅತ್ರ 'ತದ್-ದ್ವಾರಾ, ಸಂಭಾವನಾದ್ವಾರೇಣ' ಉಪಚಾರೇಣ' ಇತಿ ಅಸಕೃದುಕ್ತ್ಯಾ, ಉಕ್ತವ್ಯಾಖ್ಯಾನೈಶ್ಚ ಬ್ರಹ್ಮತಂತ್ರಸ್ಯ ಸಾಕ್ಷಾನ್ನೇಶ್ವರವಿಷಯಕತ್ವಂ , ಕಿಂತು ಪರಂಪರಯೈವ, ತದಪ್ಯೌಪಚಾರಿಕಂ, ಇತಿ ಸತಾತ್ಪರ್ಯಮುಪಪಾದಿತತ್ವಾತ್ ಉಕ್ತರೀತ್ಯಾ ವೇದೇತಿಕರ್ತವ್ಯತಾತ್ವೇನಾಸ್ಯ ಶಾಸ್ತ್ರಸ್ಯ ಪರವಿದ್ಯಾತ್ವ-ವ್ಯವಹಾರೋ ಗೌಣ ಇತಿ ಸ್ಫುಟಮೇವ ದಾರ್ಶನಿಕಾನಾಮ್ ।**

ಅನುವಾದ - ಮೇಲೆ ಹೇಳಿದ ಟೀಕಾಟಿಪ್ಪಣಿಗಳನ್ನು ಅವಲೋಕನೆ ಮಾಡಿದಾಗ ತಿಳಿಯುವ ವಿಷಯ ಇಷ್ಟು - ಬ್ರಹ್ಮಮೀಮಾಂಸಾಶಾಸ್ತ್ರವು ಭಗವದ್ವಿಷಯಕವಾಗಿದೆ ಎಂಬ ಅಂಶವನ್ನು ಎಲ್ಲರೂ ಅಂಗೀಕಾರ ಮಾಡಿದ್ದಾರೆ. ಅಂಗೀಕಾರ ಮಾಡುವ ಪ್ರಸಂಗದಲ್ಲಿ 'ತದ್-ದ್ವಾರಾ' 'ಸಂಭಾವನಾಮಾತ್ರೇಣ' 'ಉಪಚಾರೇಣ' ಇತ್ಯಾದಿಯಾಗಿ ಪದಪ್ರಯೋಗಗಳನ್ನು ಮಾಡಿದ್ದಾರೆ. ಸಾಕ್ಷಾತ್ ಈಶ್ವರವಿಷಯಕತ್ವವನ್ನು ಯಾವ ಟಿಪ್ಪಣಿಕಾರರೂ ಸಹ ಒಪ್ಪಿಕೊಂಡಿಲ್ಲ. ಪರಂಪರಯಾ ಈಶ್ವರವಿಷಯಕತ್ವವನ್ನು ಅಂಗೀಕಾರ ಮಾಡಿ ಅದನ್ನೂ ಕೂಡ ಔಪಚಾರಿಕ ಎಂಬುದಾಗಿ ಉಪಪಾದನೆ ಮಾಡಿದ್ದಾರೆ. ಈ ಎಲ್ಲಾ ಕಾರಣದಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವದ ವ್ಯವಹಾರವು ಕಂಡುಬಂದಲ್ಲಿ ಅದು ಗೌಣವೇ ಹೊರತು ಮುಖ್ಯವಲ್ಲ ಎಂಬುದು ಎಲ್ಲಾ ಜ್ಞಾನಿಗಳ ಅಭಿಪ್ರಾಯವಾಗಿದೆ.

## ತಾಮ್ರಪರ್ಣಿ ಸುಬ್ಬಾಚಾರ್ಯರ ಪ್ರಶ್ನೆಗೆ ಸಮಾಧಾನ

**ಸತಿ ಚೈವಂ ಇಮಾನ್ಯೇವ ನ್ಯಾಯಸುಧಾವಾಕ್ಯಾನ್ಯುದಾಹೃತ್ಯ ಕೋಯಮುತ್ತೂರುವಾಸ್ತವ್ಯಃ ತಾಮ್ರಪರ್ಣೀ ಸುಬ್ಬಾಚಾರ್ಯಃ ಬ್ರಹ್ಮಮೀಮಾಂಸಾಶಾಸ್ತ್ರಸ್ಯೈವ ಮುಖ್ಯಪರವಿದ್ಯಾತ್ವಮಿತ್ಯುದ್ಘೋಷಯತ್ । ತಸ್ಯೇದಮೇವೋತ್ತರಂ :- ಉದಾಹೃತವಾಕ್ಯಗತಾನಿ ತದ್‌ದ್ವಾರಾ, ಸಂಭವನಾದ್ವಾರೇಣ, ಉಪಚಾರೇಣ' - ಇತಿ ಪದಾನಿ, ಉದಾಹೃತವ್ಯಾಖ್ಯಾನಾನಿ ಚ ಪಶ್ಯ । ಸಾಕ್ಷಾತ್‌ಪರಮಮುಖ್ಯವೃತ್ತ್ಯಾ ವಿಷ್ಣುಬೋಧಕಪರಂಪರಯಾ ಉಪಚಾರೇಣ ವಿಷ್ಣುಬೋಧಕಯೋರ್ಮುಖ್ಯಾಮುಖ್ಯಭಾವಂ ವಿವೇಚಯ ಚೇತಿ ।**

ಪ್ರಶ್ನೆ - ಒಂದುವೇಳೆ ನೀವು ಹೇಳಿದ್ದೇ ನ್ಯಾಯಸುಧಾವಾಕ್ಯದ ಅಭಿಪ್ರಾಯವಾಗಿದ್ದರೆ ಕೊಯಮುತ್ತೂರಿನಲ್ಲಿ ವಾಸ್ತವ್ಯ ಮಾಡಿರುವ ತಾಮ್ರಪರ್ಣಿ ಸುಬ್ಬಾಚಾರ್ಯರು ಬ್ರಹ್ಮಮೀಮಾಂಸಾಶಾಸ್ತ್ರವೇ ಮುಖ್ಯಪರವಿದ್ಯಾ ಎಂಬುದನ್ನು ಉಪಪಾದನೆ ಮಾಡಲು ಇದೇ ನ್ಯಾಯಸುಧಾವಾಕ್ಯಗಳನ್ನು ಉಲ್ಲೇಖ ಮಾಡಿದ್ದಾರೆ. ಇದು ಹೇಗೆ ಸಂಗತವಾಗುತ್ತದೆ?

ಉತ್ತರ - ಅವರಿಗೂ ಸಹ ಇದೇ ಉತ್ತರ. ಹಿಂದೆ ಹೇಳಿದ ವಾಕ್ಯಗಳಲ್ಲಿ ಸ್ಪಷ್ಟವಾಗಿ 'ತದ್-ದ್ವಾರಾ', 'ಸಂಭಾವನಾಮಾತ್ರೇಣ', 'ಉಪಚಾರೇಣ' ಮುಂತಾದ ಪದಗಳಿವೆ. ಈ ಪದಗಳಿಗೆ ಅವರು ಸ್ಪಷ್ಟ ವ್ಯಾಖ್ಯಾನ ಮಾಡಿಲ್ಲ. ಹಿಂದೆ ಹೇಳಿದಂತೆ ವ್ಯಾಖ್ಯಾನಗಳನ್ನು ಕೂಲಂಕಷವಾಗಿ ಗಮನಿಸಿದಾಗ ನಮ್ಮ ಅಭಿಪ್ರಾಯವೇ ಸಾಧುವೆಂದು ಸ್ಪಷ್ಟವಾಗುತ್ತದೆ. ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನು ತಿಳಿಸುವ ಶಾಸ್ತ್ರ ಹಾಗೂ ಗೌಣವಾಗಿ ವಿಷ್ಣುವನ್ನು ತಿಳಿಸುವ ಶಾಸ್ತ್ರ ಈ ಎರಡು ಶಾಸ್ತ್ರಗಳಲ್ಲಿ ಯಾವುದು ಮುಖ್ಯ, ಯಾವುದು ಅಮುಖ್ಯ ಎಂಬ ಪ್ರಶ್ನೆ ಬಂದರೆ ವಿವೇಕಿಗಳು ಸಾಕ್ಷಾತ್ ವಿಷ್ಣುಬೋಧಕವಾದ ಶಾಸ್ತ್ರವನ್ನೇ ಮುಖ್ಯ ಎಂದು ಗ್ರಹಣೆ ಮಾಡುತ್ತಾರೆ. ಔಪಚಾರಿಕವಾಗಿ ವಿಷ್ಣುಬೋಧಕವಾದ ಗ್ರಂಥವನ್ನು ಅಮುಖ್ಯ ಎಂದೇ ಪರಿಗಣಿಸುತ್ತಾರೆ. ಆದ್ದರಿಂದ ಸಾಕ್ಷಾತ್ ವಿಷ್ಣುಬೋಧಕವಾದ ವೇದಾದಿಗಳೇ ಮುಖ್ಯವಾದ ಪರವಿದ್ಯೆ ಎನಿಸುತ್ತವೆ. ಬ್ರಹ್ಮಮೀಮಾಂಸಾಶಾಸ್ತ್ರವು ಅಮುಖ್ಯಪರವಿದ್ಯೆ ಎನಿಸುತ್ತದೆ.

## ವಾಚಕತ್ವದ ಸ್ವರೂಪದ ಬಗ್ಗೆ ವಿಮರ್ಶೆ

**ಯದತ್ರೋಕ್ತಂ 'ಯಯಾ ತದಕ್ಷರಮಧಿಗಮ್ಯತೇ' ಇತ್ಯುಪನಿಷದಾ ವಿವಕ್ಷಿತಮಕ್ಷರಾಧಿಗತಿಕರಣತ್ವಂ ನ ಪದಶಕ್ತಿರೂಪಂ ವಾಚಕತ್ವಂ ; ಅಪಿ ತು ಫಲಾಯೋಗವ್ಯವಚ್ಛಿನ್ನತ್ವರೂಪಂ ವಿಷ್ಣ್ವಧಿಗತಿಕರಣತ್ವಮೇವ । ತಚ್ಚ ಬ್ರಹ್ಮತಂತ್ರಸ್ಯೈವ ಸಂಭವತೀತ್ಯಾದಿ । ತತ್ತು ಅಧಿಗಮ್ಯತ ಇತ್ಯಸ್ಯ ಶ್ರುತ್ಯಂತರಸಮಾಖ್ಯಾ,**

ಉಪನಿಷದ್ಭಾಷ್ಯ, ಸೂತ್ರಭಾಷ್ಯ, ಟೀಕಾಟಿಪ್ಪಣ್ಯಾದಿ ಬಹುಪ್ರಮಾಣೈರ್ವಾಚಕತ್ವಾರ್ಥಸ್ಯ ಸಮರ್ಥಿತತ್ವೇನ ಪ್ರಾಗೇವ ನಿರಸ್ತಮನುಸಂಧೇಯಂ।

ಅನುವಾದ - ಪ್ರಶ್ನೆ - 'ಯಯಾ ತದಕ್ಷರಂ ಅಧಿಗಮ್ಯತೇ' ಎಂಬುದಾಗಿ ಉಪನಿಷತ್ತು ಅಕ್ಷರಾ-ಧಿಗತಿಕರಣತ್ವವನ್ನು ಹೇಳಿದೆ. ಇದು ಪದಶಕ್ತಿರೂಪವಾದದ್ದಲ್ಲ. ಮತ್ತೇನೆಂದರೆ ವಿಷ್ಣ್ವಧಿಗತಿಕರಣತ್ವ-ರೂಪವಾದದ್ದು. ಇಲ್ಲಿ ಫಲಾಯೋಗವ್ಯವಚ್ಛೇದರೂಪವಾದ ಅಧಿಗತಿಕರಣತ್ವವನ್ನು ಅಂಗೀಕಾರ ಮಾಡುತ್ತೇವೆ. ಬೇರೆ ಫಲವನ್ನು ಬಿಟ್ಟು ಕೇವಲ ಭಗವಂತನ ಜ್ಞಾನಕ್ಕೆ ಯಾವುದು ಸಾಧನವೋ ಅದೇ ವಿದ್ಯೆಯು ಪರವಿದ್ಯೆ ಎಂಬುದು ಇದರ ಅಭಿಪ್ರಾಯ. ಇಂತಹ ಫಲಾಯೋಗವ್ಯವಚ್ಛಿನ್ನತ್ವರೂಪವಾದ ಅಧಿಗತಿಕರಣತ್ವವು ಬ್ರಹ್ಮತಂತ್ರವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಯುಕ್ತವಾಗುತ್ತದೆಯೇ ಹೊರತು ಋಗಾದಿಗಳಿಗೆ ಅಲ್ಲ.

ಉತ್ತರ - ಇದು ಸರಿಯಲ್ಲ. ಅದೃಶ್ಯತ್ವಾಧಿಕರಣದ ಶ್ರುತ್ಯಂತರದ ಸಮಾಖ್ಯೆ, ಉಪನಿಷದ್‌ಭಾಷ್ಯ, ಸೂತ್ರಭಾಷ್ಯ, ಟೀಕಾ, ಟಿಪ್ಪಣಿ ಮುಂತಾದ ಅನೇಕ ಪ್ರಮಾಣಗಳ ಅನುಸಾರವಾಗಿ 'ಅಧಿಗಮ್ಯತೇ' ಎಂಬ ಉಪನಿಷತ್ತು ವಿವಕ್ಷಿಸಿದ ಅರ್ಥವು ವಾಚಕತ್ವರೂಪವಾದದ್ದೆಂದು ಸಮರ್ಥಿಸಲಾಗಿದೆ. ಆದ್ದರಿಂದ ಪದಶಕ್ತಿ-ರೂಪವಾದ ವಾಚಕತ್ವವನ್ನೇ ಇಲ್ಲಿ ಅಂಗೀಕರಿಸಬೇಕು. ಕರಣತ್ವರೂಪವಾದ ಅರ್ಥವು ಯುಕ್ತವಲ್ಲ.

ಯದಪ್ಯತ್ರೋಕ್ತಂ ಪ್ರತಿಲೇಖೇ (1) 'ಅಕ್ಷರಾಗಧಿಗತಿಕರಣತ್ವಂ ಚೇತ್ ಕಾರಣತ್ವಸ್ಯಾಸಾಧಾರಣ-ಕಾರಣರೂಪತ್ವೇ ಯಥಾಕಥಮಪಿ ಬ್ರಹ್ಮಸೂತ್ರಂ ಪರವಿದ್ಯಾ ನ ಸ್ಯಾತ್; ನ ಹಿ ಋಗಾದಿ-ಸಹಕಾರೇಣಾಪ್ಯಸ್ಯಾಸಾಧಾರಣಕಾರಣತ್ವಂ ಸಂಭವತಿ; ಅಮುಖ್ಯತಃ ಪರವಿದ್ಯಾತ್ವಂ ಕಥಂ ? ನ ಹಿ ವೇದಸ್ಯಾಕ್ಷರಪ್ರತಿಪಾದಕತ್ವೇ ಸಹಕಾರಿಭೂತಂ ಅಮುಖ್ಯತಃ ಪರವಿದ್ಯೇತಿ ಕುತ್ರಾಪ್ಯುಕ್ತಂ (2) ಕಿಂತು ಅಕ್ಷರಗತ್ಯಯೋಗವ್ಯವಚ್ಛಿನ್ನತ್ವರೂಪಂ ಕಾರಣತ್ವಂ ವಕ್ತವ್ಯಂ ತಚ್ಚ ಬ್ರಹ್ಮಸೂತ್ರವಿಶಿಷ್ಟವೇದಾನಾಮೇವ ಭವತ್ಪರವಿದ್ಯಾತ್ವಂ ವಿಶಿಷ್ಟೇ ವಿಧಿನಿಷೇಧೌ ವಿಶೇಷಣಮುಪಸಂಕ್ರಾಮತ ಇತಿ ನ್ಯಾಯಾತ್ ಬ್ರಹ್ಮಸೂತ್ರೇಷು ಪರ್ಯವಸ್ಯತೀತಿ ಕೋ ವಿರೋಧಃ' ಇತಿ.

ಅನುವಾದ - ಈ ಸಂದರ್ಭವನ್ನು ಪೂರ್ವಪಕ್ಷಿಗಳು ಹೀಗೆ ಬರೆದಿದ್ದಾರೆ - ಅಕ್ಷರಾಧಿಗತಿಕರಣತ್ವವು ಎರಡುವಿಧ. ಅಸಾಧಾರಣಕಾರಣತ್ವ ಮತ್ತು ಅಯೋಗವ್ಯವಚ್ಛಿನ್ನತ್ವರೂಪವಾದ ಕಾರಣತ್ವ ಎಂದು. ಅಕ್ಷರಾಧಿ-ಕರಣತ್ವವು ಅಸಾಧಾರಣಕಾರಣರೂಪ ಎಂದು ಹೇಳಿದರೆ ಯಾವುದೇ ರೀತಿಯಲ್ಲೂ ಸಹ ಬ್ರಹ್ಮಸೂತ್ರಕ್ಕೆ ಪರವಿದ್ಯಾತ್ವವನ್ನು ಸಮರ್ಥಿಸಲು ಸಾಧ್ಯವಿಲ್ಲ. ಏಕೆಂದರೆ ಋಗಾದಿಗಳ ಸಹಕಾರವಿದ್ದರೂ ಸಹ ಅಸಾಧಾರಣಕಾರಣತ್ವವನ್ನು ಬ್ರಹ್ಮಸೂತ್ರಕ್ಕೆ ಹೇಳಲು ಬರುವುದಿಲ್ಲ. ಸಹಕಾರವಿದ್ದರೂ ಹೇಳಲು ಬಾರದ ಪರವಿದ್ಯಾತ್ವವು ಅಮುಖ್ಯತಃ ಹೇಗೆ ತಾನೇ ಹೇಳಲು ಸಾಧ್ಯ ? ವೇದಗಳು ಅಕ್ಷರನನ್ನು ಪ್ರತಿಪಾದನೆ ಮಾಡುವ







ಪಕ್ಷದಲ್ಲಿ ಸಹಕಾರಿಭೂತವಾದದ್ದು ಅಮುಖ್ಯತಃ ಪರವಿದ್ಯೆಯಾಗುತ್ತದೆಂದು ಯಾವ ಪ್ರಕರಣದಲ್ಲೂ ಸಹ ಹೇಳಿಲ್ಲ. ಈ ಕಾರಣದಿಂದ ಅಸಾಧಾರಣಕಾರಣತ್ವರೂಪವಾದ ಅಕ್ಷರಾಧಿಕರಣತ್ವವನ್ನು ಅಂಗೀಕಾರ ಮಾಡಲು ಸಾಧ್ಯವಿಲ್ಲ.

ಹೀಗಾಗಿ ಎರಡನೆಯ ಪಕ್ಷವಾದ ಅಯೋಗವ್ಯವಚ್ಛಿನ್ನತ್ವರೂಪವಾದ ಕಾರಣತ್ವವನ್ನು ಅಂಗೀಕಾರ ಮಾಡಬೇಕು. ಅಕ್ಷರನ ಜ್ಞಾನಕ್ಕೆ ಇದನ್ನು ಹೊರತಾಗಿ ಬೇರೆ ಯಾವುದೂ ಸಹ ಕಾರಣವಲ್ಲ. ಇಂತಹ ಕಾರಣತ್ವವು ಪ್ರಕೃತದಲ್ಲಿ ವಿವಕ್ಷಿತವಾಗಿದೆ. ಬ್ರಹ್ಮಸೂತ್ರವಿಶಿಷ್ಟವಾದ ವೇದಗಳಿಗೆ ಇಂತಹ ಕಾರಣತ್ವವು ಬರುತ್ತದೆ. ಪರವಿದ್ಯಾತ್ವವು ಬ್ರಹ್ಮಸೂತ್ರವಿಶಿಷ್ಟವೇದಗಳಿಗೇ ಬರುತ್ತದೆ. ಇದಕ್ಕೆ ನ್ಯಾಯವೂ ಸಹ ಸಹಕಾರಿ. 'ವಿಶಿಷ್ಟೇ ವಿಧಿ ನಿಷೇಧೌ ವಿಶೇಷಣಂ ಉಪಸಂಕ್ರಾಮತಃ' ಎಂಬುದಾಗಿ ನ್ಯಾಯಶಾಸ್ತ್ರಕಾರರು ಅಂಗೀಕಾರ ಮಾಡಿದ್ದಾರೆ. ವಿಶಿಷ್ಟಪದಾರ್ಥಕ್ಕೆ ಯಾವುದೇ ವಿಧಿಯನ್ನಾಗಲಿ, ನಿಷೇಧವನ್ನಾಗಲಿ ಮಾಡಿದಾಗ ಆ ವಿಧಿನಿಷೇಧಗಳು ವಿಶೇಷಣದಲ್ಲಿ ಪರ್ಯವಸಾನವಾಗುತ್ತವೆ ಎಂಬುದು ಇದರ ಅಭಿಪ್ರಾಯ. ಬ್ರಹ್ಮಸೂತ್ರವಿಶಿಷ್ಟವಾದ ವೇದಗಳಿಗೆ ಭಗವತ್ಪರವಾದ ಅರ್ಥವನ್ನು ಹೇಳಿದಾಗ ಮಾತ್ರ ವೇದಗಳಿಗೆ ಪರವಿದ್ಯಾತ್ವ ಬರುತ್ತದೆ. ವಿಶಿಷ್ಟವಾದ ವೇದಗಳಿಗೆ ಪರವಿದ್ಯಾತ್ವ ಹೇಳಿದಾಗ ವಿಶೇಷಣವಾದ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವು ಪ್ರಾಪ್ತವಾಗಿದೆ. ಈ ಅಂಶದಲ್ಲಿ ಯಾವುದೇ ವಿರೋಧ ಇರುವುದಿಲ್ಲ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

## ಕಾರಣತ್ವ ಎಂದರೆ ಯಾವುದು ?

ತತ್ತು ನ ವಿಚಾರಸಹಂ;ಕಾರಣತ್ವಂ ಅಸಾಧಾರಣಕಾರಣತ್ವಂ ವಾ, ಅಕ್ಷರಗತ್ಯಯೋಗವ್ಯವಚ್ಛಿನ್ನತ್ವಂ ವೇತಿ ದ್ವೇಧಾ ವಿಕಲ್ಪ್ಯ ಬ್ರಹ್ಮತಂತ್ರಸ್ಯ ಅಕ್ಷರಗತ್ಯಸಾಧಾರಣಕಾರಣತ್ವಂ ನಿರಸ್ಯ, ಅಕ್ಷರಗತ್ಯ-ಯೋಗವ್ಯವಚ್ಛಿನ್ನತ್ವರೂಪಕಾರಣತ್ವಂ ಸಂಭವತೀತ್ಯುಪಪಾದಯತಃ ಅಸಾಧಾರಣಕಾರಣತ್ವಾದಿ-ಪರಿಭಾಷೈವ ನಾವಬುದ್ಧಾ।

ಅನುವಾದ - ಈ ವಿಚಾರ ಸರಿಯಲ್ಲ. ಕಾರಣತ್ವವನ್ನು ಎರಡು ರೀತಿಯಾಗಿ ವಿಕಲ್ಪ ಮಾಡಲಾಗಿದೆ. ಅಸಾಧಾರಣಕಾರಣತ್ವವೋ? ಅಥವಾ ಅಕ್ಷರಗತ್ಯಯೋಗವ್ಯವಚ್ಛಿನ್ನತ್ವವೋ? ಎಂಬುದಾಗಿ. ಈ ಎರಡರಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಸಾಧಾರಣಕಾರಣತ್ವವು ಇಲ್ಲ ಎಂದು ಪ್ರಥಮಪಕ್ಷವನ್ನು ನಿರಾಕರಣೆ ಮಾಡಿದ್ದಾಗಿದೆ. ಮುಂದೆ ಎರಡನೆಯ ಅಕ್ಷರಾಧಿಗತ್ಯಯೋಗವ್ಯವಚ್ಛಿನ್ನತ್ವರೂಪವಾದ ಕಾರಣತ್ವವೇ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇದೆ ಎಂಬುದಾಗಿ ಉಪಪಾದನೆ ಮಾಡುತ್ತಾರೆ. ಆ ಸಂದರ್ಭದಲ್ಲಿ ಅಸಾಧಾರಣಕಾರಣತ್ವದ ಪರಿಭಾಷೆಯನ್ನು ಸ್ಪಷ್ಟವಾಗಿ ತಿಳಿದಿಲ್ಲವೆಂದು ಸಮರ್ಥಿಸಲಾಗಿದೆ.





## ಅಸಾಧಾರಣಕಾರಣತ್ವದ ಲಕ್ಷಣವೇನು?

ವಿಶೇಷಧರ್ಮಾವಚ್ಛಿನ್ನಕಾರ್ಯತಾನಿರೂಪಿತಕಾರಣತ್ವಮೇವ ಅಸಾಧಾರಣಕಾರಣತ್ವಮಿತಿ ಪ್ರಕರಣಗ್ರಂಥ ಏವ ಸ್ಪಷ್ಟಂ; ಪ್ರಕೃತೇ ಅಕ್ಷರಾಧಿಗತಿತ್ವಮೇವ ತಾದೃಶವಿಶೇಷಧರ್ಮಃ, ತದವಚ್ಛಿನ್ನಕಾರ್ಯತಾನಿರೂಪಿತಕಾರಣತ್ವಂ ಚ ಅಕ್ಷರಗತೇಃ ಸಹಕಾರಿಣಃ ಶಾಸ್ತ್ರಸ್ಯ ಸರ್ವಥಾ ಸಂಭವತ್ಯೇವೇತಿ ತನ್ನಿರಾಕರಣಮಸಂಗತಮೇವ; ಉಕ್ತಂ ಚ ತತ್ರೈವ ಸುಧಾಯಾಂ। 'ನಹಿ ಬೀಜಸ್ಯಾಂಕುರಂ ಜನಯತಃ ಸಹಕಾರಿಣೋ ಜಲಾದೇರಂಕುರೋ ನ ಕಾರ್ಯಂ' ಇತಿ।

ಅನುವಾದ - ಪ್ರಕರಣ ಗ್ರಂಥಗಳಲ್ಲಿ ಅಸಾಧಾರಣಕಾರಣತ್ವದ ಲಕ್ಷಣವನ್ನು ಹೀಗೆ ಹೇಳಿದ್ದಾರೆ - 'ವಿಶೇಷಧರ್ಮಾವಚ್ಛಿನ್ನಕಾರ್ಯತಾನಿರೂಪಿತಕಾರಣತ್ವಂ ಅಸಾಧಾರಣಕಾರಣತ್ವಂ' ಎಂದು. ಒಂದು ಕಾರ್ಯವು ಕಾರಣವನ್ನು ನಿರೂಪಣೆ ಮಾಡುವಾಗ ಆ ಕಾರ್ಯದಲ್ಲಿ ವಿಶೇಷ ಧರ್ಮವೂ ಸಹ ಅಡಗಿರಬೇಕು. ವಿಶೇಷಧರ್ಮಸಹಿತವಾದ ಕಾರ್ಯತಾದಿಂದ ಯಾವ ಕಾರಣತ್ವವು ನಿರೂಪಿತವಾಗಿದೆಯೋ ಇಂತಹ ಕಾರಣತ್ವವನ್ನು ಅಸಾಧಾರಣಕಾರಣ ಎಂಬ ಶಬ್ದದಿಂದ ಶಾಸ್ತ್ರಕಾರರು ವ್ಯವಹಾರ ಮಾಡುತ್ತಾರೆ. ಅಕ್ಷರನ ಜ್ಞಾನವು ಈ ಪ್ರಕರಣದಲ್ಲಿ ವಿಶೇಷಧರ್ಮವಾಗಿದೆ. ವಿಶೇಷ ಧರ್ಮಾವಚ್ಛಿನ್ನಕಾರ್ಯತಾನಿರೂಪಿತಕಾರಣತ್ವ ಎಂದರೆ ಅಕ್ಷರಾಧಿಗತಿತ್ವರೂಪಧರ್ಮಾವಚ್ಛಿನ್ನಕಾರ್ಯತಾನಿರೂಪಿತಕಾರಣತ್ವ ಎಂದರ್ಥ. ಇದು ಅಕ್ಷರನ ಜ್ಞಾನಕ್ಕೆ ಯಾವುದು ಸಹಕಾರಿಯೋ ಅಂತಹ ಶಾಸ್ತ್ರಕ್ಕೆ ಸರ್ವಥಾ ಯುಕ್ತವೇ ಆಗಿದೆ. ಆದ್ದರಿಂದ ಅಸಾಧಾರಣಕಾರಣತ್ವವು ಪ್ರಕೃತದಲ್ಲಿ ಸಂಗತವಾಗುವುದಿಲ್ಲ ಎಂಬ ಪೂರ್ವಪಕ್ಷಿಗಳ ಅಭಿಪ್ರಾಯ ಯುಕ್ತವಲ್ಲ. ಆದ್ದರಿಂದ ಎರಡನೆಯ ಪಕ್ಷವನ್ನಾಗಲಿ, ಮೊದಲನೆಯ ಪಕ್ಷವನ್ನಾಗಲಿ ನಿರಾಕರಣೆ ಮಾಡಲು ಪೂರ್ವಪಕ್ಷಗಳಿಗೆ ಸಾಧ್ಯವಿಲ್ಲ.

ಈ ವಿಚಾರದಾಟಿಗೆ ನ್ಯಾಯಸುಧೆಯ ಸಂವಾದವೂ ಸಹ ಇದೆ. 'ಅಂಕುರವನ್ನು ಹುಟ್ಟಿಸುವ ಬೀಜಕ್ಕೆ ಸಹಕಾರಿಯಾದ ಜಲಾದಿಗಳು ಅಂಕುರದ ಕಾರಣ ಎಂದು ವ್ಯವಹರಿಸುತ್ತಾರೆ. ಅಂಕುರಗಳು ಜಲಾದಿಗಳ ಕಾರ್ಯವಲ್ಲ' ಎಂದು ಹೇಳುವುದಿಲ್ಲ. ಈ ಕಾರಣದಿಂದ ಅಸಾಧಾರಣಕಾರಣತ್ವವು ಅಕ್ಷರಾಧಿಕರಣತ್ವಕ್ಕೆ ಇರುವುದಿಲ್ಲ ಎಂಬ ಪೂರ್ವಪಕ್ಷವು ಯುಕ್ತವಾಗುವುದಿಲ್ಲ.

## ಅಸಾಧಾರಣಕಾರಣತ್ವವನ್ನು ಹೇಳಿದರೆ ವ್ಯಾಹತಿ ಹೀಗೆ

ವ್ಯಾಹತಂ ಚಾಸಾಧಾರಣಕಾರಣತ್ವಂ ನಿರಾಕೃತ್ಯಾಕ್ಷರಗತ್ಯಯೋಗವ್ಯವಚ್ಛಿನ್ನತ್ವೋರರೀಕರಣಂ। ಅಸಾಧಾರಣಕಾರಣತ್ವಂ ಸಾಮಾನ್ಯಧರ್ಮಃ ಅಯೋಗವ್ಯವಚ್ಛಿನ್ನತ್ವಂ ವಿಶೇಷ ಇತಿ ಖಲು ದರ್ಶನತತ್ವಂ। ಆಲೋಚಯ; ಸಾಮಾನ್ಯಧರ್ಮಂ ನಿರಾಕೃತ್ಯ ವಿಶೇಷಾಂಗೀಕರಣಂ ಕಥಂ ನ ವ್ಯಾಹತಮಿತಿ।



ಅನುವಾದ - ಅಸಾಧಾರಣಕಾರಣತ್ವವು ಅಕ್ಷರಾಧಿಗತಿಕರಣತ್ವಕ್ಕೆ ಇಲ್ಲ ಎಂಬುದಾಗಿ ನಿರಾಕರಣೆ ಮಾಡಿ ಅಯೋಗವ್ಯವಚ್ಛಿನ್ನತ್ವವನ್ನು ಅಂಗೀಕಾರ ಮಾಡಿದರೆ ಇದು ಪರಸ್ಪರ ವ್ಯಾಹತವಾಗುತ್ತದೆ. ಸಾಮಾನ್ಯಧರ್ಮವನ್ನು ಅಂಗೀಕಾರ ಮಾಡಿ ವಿಶೇಷಧರ್ಮವನ್ನು ಇಲ್ಲ ಎಂಬುದಾಗಿ ನಿರಾಕರಣೆ ಮಾಡಲು ಬರುತ್ತದೆ. ವಿಶೇಷಧರ್ಮವೂ ಇಲ್ಲ ಎಂದು ಹೇಳಿ ಸಾಮಾನ್ಯಧರ್ಮವೂ ಇಲ್ಲ ಎಂದು ಹೇಳಬಹುದು. ಆದರೆ ಸಾಮಾನ್ಯಧರ್ಮವನ್ನೇ ಅಲ್ಲಗಳೆದು ವಿಶೇಷಧರ್ಮವನ್ನು ಅಂಗೀಕಾರ ಮಾಡಲು ಸಾಧ್ಯವಿಲ್ಲ. ಪ್ರಕೃತ ಅಸಾಧಾರಣಕಾರಣತ್ವ ಎಂಬುದು ಸಾಮಾನ್ಯಧರ್ಮ. ಅಯೋಗವ್ಯವಚ್ಛಿನ್ನತ್ವ ಎಂಬುದು ವಿಶೇಷಧರ್ಮ. ಇವುಗಳಲ್ಲಿ ಸಾಮಾನ್ಯಧರ್ಮವೇ ಇಲ್ಲವಾದಲ್ಲಿ ವಿಶೇಷಧರ್ಮವನ್ನಾದರೂ ಹೇಗೆ ಅಂಗೀಕರಿಸಲು ಸಾಧ್ಯ ? ಒಂದು ವೇಳೆ ಸಾಮಾನ್ಯಧರ್ಮವನ್ನು ನಿರಾಕರಿಸಿ ವಿಶೇಷ ಧರ್ಮವನ್ನು ಅಂಗೀಕಾರ ಮಾಡಿದರೆ ವ್ಯಾಹತಿ ಹೇಗೆ ತಾನೆ ಬರದೇ ಇದ್ದೀತು?

## ನ್ಯಾಯದ ಸಂಚಾರವೂ ಸಹ ಸರಿಯಲ್ಲ

'ವಿಶಿಷ್ಟೇ ವಿಧಿನಿಷೇಧೌ ವಿಶೇಷಣಮುಪಸಂಕ್ರಾಮತಃ' ಇತಿ ನ್ಯಾಯಸಂಚರಣಂ ಚಾತ್ರ ಸರ್ವಥಾ ನ ಯುಕ್ತಂ । ಸತಿ ವಿಶೇಷ್ಯೇ ಬಾಧ ಏವ ಹಿ ವಿಶೇಷಣೋಪಸಂಕ್ರಾಂತೇರವಸರಃ, ಬ್ರಹ್ಮಸೂತ್ರ-ವಿಶಿಷ್ಟವೇದಮುದ್ದಿಶ್ಯ ವಿಧೀಯಮಾನಂ ಬ್ರಹ್ಮಸೂತ್ರೇ ಪರ್ಯವಸ್ಯತೀತಿ ಖಲು ತವಾಶಯಃ।

ಅನುವಾದ - ಪೂರ್ವಪಕ್ಷವನ್ನು ಮಾಡುವಾಗ 'ವಿಶಿಷ್ಟೇ ವಿಧಿನಿಷೇಧೌ ವಿಶೇಷಣಂ ಉಪಸಂಕ್ರಾಮತಃ' ಎಂಬ ನ್ಯಾಯವನ್ನು ಅಂಗೀಕಾರ ಮಾಡಿ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವನ್ನು ಸಮರ್ಥಿಸಲಾಗಿದೆ. ಆದರೆ ಈ ನ್ಯಾಯವನ್ನು ಈ ಸಂದರ್ಭದಲ್ಲಿ ಪ್ರಯೋಗಿಸಲು ಸಾಧ್ಯವಿಲ್ಲ. ವಿಶೇಷ್ಯಕ್ಕೆ ಬಾಧ ದೋಷವಿದ್ದರೆ ಮಾತ್ರವೇ ವಿಶೇಷಣದ ಉಪಯೋಗವನ್ನು ಮಾಡಲು ಅವಕಾಶವಿದೆ. ವಿಶೇಷ್ಯಕ್ಕೆ ಬಾಧವೇ ಇಲ್ಲದಿದ್ದ ಪಕ್ಷದಲ್ಲಿ ವಿಶೇಷಣದ ಉಪಯೋಗವು ಯುಕ್ತವಲ್ಲ. ಪ್ರಕೃತದಲ್ಲಿ ಬ್ರಹ್ಮಸೂತ್ರವಿಶಿಷ್ಟವಾದ ವೇದಕ್ಕೆ ಪರವಿದ್ಯಾತ್ವವನ್ನು ವಿಧಾನ ಮಾಡಲಾಗಿದೆ. ಇಲ್ಲಿ ವಿಶಿಷ್ಟವಾದ ವೇದಕ್ಕೆ ಪರವಿದ್ಯಾತ್ವವನ್ನು ವಿಧಾನ ಮಾಡಿದಾಗ ವಿಶೇಷಣವಾದ ಬ್ರಹ್ಮಸೂತ್ರಕ್ಕೆ ಪರವಿದ್ಯಾತ್ವವು ಯುಕ್ತ ಎಂಬುದು ಪೂರ್ವಪಕ್ಷಿಯ ಅಭಿಪ್ರಾಯ.

## ವಿಶೇಷ್ಯದಲ್ಲಿ ಬಾಧವಿಲ್ಲದಿದ್ದಾಗ ವಿಶೇಷಣದಲ್ಲೇಕೆ ಉಪಸಂಕ್ರಮಣ ?

ಅತ್ರ ವಿಶೇಷಣವಿಶೇಷ್ಯೇ ವಿವೇಚನೀಯೇ; ಬ್ರಹ್ಮಸೂತ್ರಂ ವಿಶೇಷಣಂ; ವೇದೋ ವಿಶೇಷ್ಯಃ; ವೇದೇ ಚ ಗುಣಪೂರ್ಣತ್ವಾದಿವಿಶಿಷ್ಟವಿಷ್ಣುವಾಚಕತ್ವಂ ಸ್ವಾಭಾವಿಕಮಿತಿ ಸಪ್ರಮಾಣಮುಪಪಾದಿತಂ ಪ್ರಾಗೇವೇತಿ ವಿಶೇಷ್ಯೇ ಬಾಧಸ್ಯೈವಾಭಾವೇನ ವಿಶೇಷಣೋಪಸಂಕ್ರಾಂತೇರ್ನಾವಸರಃ। 'ವಿಶೇಷ್ಯಭೂತಾ







ಬ್ರಹ್ಮಮೀಮಾಂಸಾಶಾಸ್ತ್ರವ್ಯುತ್ಪಾದಿತನ್ಯಾಯಾನುಪಕೃತಾಃ ಕೇವಲವೇದಾದಯ ವಿಷ್ಣೋರವಾಚಕಾಃ' ಇತಿ ಬಾಧೋಪಪಾದನಂ ತು ವಿವೇಚನಶೂನ್ಯಮೇವ ।

ಅನುವಾದ - ಈ ಪ್ರಕರಣದಲ್ಲಿ ವಿಶೇಷಣ ಹಾಗೂ ವಿಶೇಷ್ಯಗಳು ಯಾವುದು ಎಂಬುದಾಗಿ ತಿಳಿಯಬೇಕು. ಬ್ರಹ್ಮಸೂತ್ರವು ವಿಶೇಷಣ, ವೇದವು ವಿಶೇಷ್ಯ . ವಿಶೇಷ್ಯವಾದ ವೇದದಲ್ಲಿ ವಿಷ್ಣುವಾಚಕತ್ವವು ಸ್ವಾಭಾವಿಕವಾಗಿದೆ. ಆ ವಿಷ್ಣುವು ಗುಣಪೂರ್ಣತ್ವಾದಿಗುಣವಿಶಿಷ್ಟನಾಗಿದ್ದಾನೆ. ಇದನ್ನು ಪ್ರಮಾಣಪೂರ್ವಕವಾಗಿ ಹಿಂದೆಯೇ ಉಪಪಾದಿಸಲಾಗಿದೆ. ವಿಶೇಷ್ಯವಾದ ವೇದಕ್ಕೆ ವಿಷ್ಣುವಾಚಕತ್ವವು ಸ್ವಾಭಾವಿಕವಾಗಿರುವಾಗ ವೇದಕ್ಕೆ ಪರವಿದ್ಯಾತ್ವವನ್ನು ವಿಧಾನ ಮಾಡಲು ಯಾವುದೇ ಬಾಧವು ಬರುವುದಿಲ್ಲ. ವಿಶೇಷ್ಯದಲ್ಲಿ ಬಾಧವಿಲ್ಲದ ಪಕ್ಷದಲ್ಲಿ ವಿಶೇಷಣದವರೆಗೂ ವಿಧಿಯನ್ನು ಉನ್ನಯನ ಮಾಡುವುದು ಯುಕ್ತವಲ್ಲ. ಆದ್ದರಿಂದ ವಿಶೇಷಣವಾದ ಬ್ರಹ್ಮಸೂತ್ರಕ್ಕೆ ಪರವಿದ್ಯಾತ್ವದ ಯೋಜನೆಯು ಯುಕ್ತವಲ್ಲ.

ಪ್ರಶ್ನೆ - ಬಾಧವನ್ನು ಇಲ್ಲಿ ಉಪಪಾದನೆ ಮಾಡಬಹುದು . ವಿಶೇಷ್ಯವಾದ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿರುವ ನ್ಯಾಯವು ವೇದಕ್ಕೆ ಉಪಕಾರ ಮಾಡುತ್ತದೆ. ಈ ನ್ಯಾಯಗಳಿಂದ ಉಪಕೃತವಾದ ವೇದವೇ ವಿಷ್ಣುವಾಚಕವಾಗುತ್ತದೆ. ನ್ಯಾಯ ಅನುಪಕೃತವಾದ ವೇದವು ವಿಷ್ಣುವಾಚಕ ಆಗುವುದಿಲ್ಲ. ಆದ್ದರಿಂದ ನ್ಯಾಯಗಳಿಂದ ಅನುಪಕೃತವಾದ ಕೇವಲ ವೇದಾದಿಗಳಿಗೆ ಪರವಿದ್ಯಾತ್ವವು ಇಲ್ಲ ಎಂಬುದಾಗಿ ಬಾಧವನ್ನು ಹೇಳಬೇಕು. ಹೀಗೆ ಬಾಧವಿರುವುದರಿಂದ ವಿಶೇಷಣವಾದ ಬ್ರಹ್ಮಸೂತ್ರಕ್ಕೆ ಪರವಿದ್ಯಾತ್ವವು ಯುಕ್ತವಾಗಿದೆ ಎಂಬುದಾಗಿ ಉಪಪಾದನೆ ಮಾಡಬೇಕು.

ಉತ್ತರ - ಆದರೆ ಸರಿಯಾದ ವಿವೇಚನೆ ಇಲ್ಲದವರು ಮಾತ್ರ ಈ ರೀತಿ ಬಾಧವನ್ನು ಉಪಪಾದನೆ ಮಾಡಲು ಸಾಧ್ಯ.

## ಅನುಪಕೃತವೆಂದು ಹೇಳಿದ ಮೇಲೆ 'ಕೇವಲ' ಎನ್ನಲಾಗದು

ಅನುಪಕೃತಾ ಇತಿ ವಿಶೇಷಣಮುಕ್ತ್ವಾ ಪುನಃ ಕೇವಲೇತ್ಯುಚ್ಯತೇ ತ್ವಯಾ । ವಿಶೇಷಣರಾಹಿತ್ಯಂ ಖಲು ಕೈವಲ್ಯಂ , ಅನುಪಕೃತೇತಿ ವಿಶೇಷಣೋಕ್ತ್ಯನಂತರಂ ಕೈವಲ್ಯಂ ಕಥಂ ಸಂಭವತೀತ್ಯಾಲೋಚಯ। ಅನುಪಕೃತೇತ್ಯಂಶಪರಿತ್ಯಾಗೇ ಚ ವೇದಾದಯಃ ವಿಷ್ಣೋರವಾಚಕಾ ಇತ್ಯೇವೋಕ್ತಂ ಸ್ಯಾತ್ ತಚ್ಚ ಪ್ರಮಾಣವಿರುದ್ಧಂ ವೇದೇ ವಿಷ್ಣುವಾಚಕತ್ವಸ್ಯ ಸ್ವಾಭಾವಿಕತ್ವಾತ್, ಇತಿ ಕಥಮಿತಿ ವಿಶೇಷ್ಯೇ ಬಾಧಾಸಂಭವಾದೇತತ್ ನ್ಯಾಯಸಂಚರಣಮಯುಕ್ತಮೇವ ।

ಅನುವಾದ - ಹೀಗೆ ಬಾಧವನ್ನು ಹೇಳುವ ಸಂದರ್ಭದಲ್ಲಿ ಪೂರ್ವಪಕ್ಷಿಗಳು ಎರಡು ಬಗೆಯಲ್ಲಿ





ಶಬ್ದಗಳನ್ನು ಪ್ರಯೋಗ ಮಾಡುತ್ತಾರೆ. ೧) ಅನುಪಕೃತ, (೨) ಕೇವಲ ಎಂದು. ಈ ಎರಡೂ ಸಹ ಅವರಿಗೆ ಬಾಧಕವಾಗಿದೆ. ಕೇವಲ ಎಂಬ ಶಬ್ದಕ್ಕೆ ವಿಶೇಷಣರಹಿತ ಎಂದರ್ಥ. ಅನುಪಕೃತ ಎಂದು ಹೇಳಿದಾಗ ವಿಶೇಷಣವನ್ನು ಹೇಳಿದಂತಾಗುತ್ತಿದೆ. ಆಗ ಅನುಪಕೃತವಾದ ಕೇವಲ ವೇದಾದಿಗಳು ಎಂಬ ಮಾತು ವ್ಯಾಹತವಾಗುತ್ತದೆ. ಅನುಪಕೃತ ಎಂಬ ವಿಶೇಷಣವನ್ನು ಹೇಳಿ 'ಕೇವಲ' ಎಂಬ ಶಬ್ದದಿಂದ ವಿಶೇಷಣ-ರಹಿತವೆಂದು ಹೇಳುವುದು ಹೇಗೆ ಸರಿಯಾಗುತ್ತದೆಂಬುದನ್ನು ಇದನ್ನು ಪೂರ್ವಪಕ್ಷಿಗಳು ಆಲೋಚನೆ ಮಾಡಬೇಕು.

ಒಂದುವೇಳೆ ಅನುಪಕೃತ ಎಂಬ ಅಂಶವನ್ನು ಬಿಟ್ಟು 'ಕೇವಲ ವೇದಾದಿಗಳು ವಿಷ್ಣುವಿಗೆ ವಾಚಕವಲ್ಲ', ಇಷ್ಟೇ ಅಂಶವನ್ನು ಹೇಳಿದರೆ ಪ್ರಮಾಣದ ವಿರೋಧವು ಬರುತ್ತದೆ. ವೇದಗಳಿಗೆ ವಿಷ್ಣುವಾಚಕತ್ವವು ಸ್ವಾಭಾವಿಕವಾಗಿದೆ. ಹೀಗಾಗಿ ವಿಶೇಷ್ಯವಾದ ವೇದಕ್ಕೆ ಬಾಧವನ್ನು ಯಾವುದೇ ಕಾರಣದಿಂದಲೂ ಸಹ ನಿರೂಪಿಸಲು ಸಾಧ್ಯವಿಲ್ಲ. ಈ ಎಲ್ಲ ಕಾರಣಗಳಿಂದ ವಿಶಿಷ್ಟವಸ್ತುವಿಗೆ ಹೇಳಿದ ವಿಧಿನಿಷೇಧಗಳು ವಿಶೇಷಣದಲ್ಲಿ ಪರ್ಯವಸಾನವಾಗುತ್ತದೆಂಬ ನ್ಯಾಯಸಂಚಾರವನ್ನು ಈ ಸಂದರ್ಭದಲ್ಲಿ ಈ ಪ್ರಕರಣಕ್ಕೆ ಯೋಜನೆ ಮಾಡುವುದು ಸರಿಯಲ್ಲ.

## ಸುಧಾವಾಕ್ಯಕ್ಕೆ ವ್ಯಾಖ್ಯಾನ

ಯಚ್ಚ ಬ್ರಹ್ಮಸೂತ್ರಸ್ಯೈವ ಮುಖ್ಯಪರವಿದ್ಯಾತ್ವೇ ತಚ್ಚಾನುತ್ತಮಂ ಶಾಸ್ತ್ರಮಿದಮೇವ ವಿವಕ್ಷಿತಂ ಇತಿ ಸುಧಾವಾಕ್ಯಂ ಪ್ರಮಾಣೀಕೃತಂ । ತದಪ್ಯಸಾಧಕಮೇವ । ತಚ್ಚೇತಿ ವಾಕ್ಯಾನಂತರಂ 'ನಿರ್ಣೀತವ್ಯಾರ್ಥಾನಾಂ ಋಗಾದಿಪದೋಪಲಕ್ಷಿತಾನಾಮಶೇಷಶಾಸ್ತ್ರಾಣಾಮಪರವಿದ್ಯಾತ್ವೇ-ನೋಕ್ತತ್ವಾತ್ । ಅನ್ಯಸ್ಯಾಪ್ರಸಂಗಾತ್- ಪರತ್ವಾಸಂಭವಾಚ್ಚ; ಸಂಭವತಿ ತ್ವಸ್ಯ ಪರತ್ವಮನುಗ್ರಾಹಕತ್ವಾತ್ ಇತೀಮಾನಿ ವಾಕ್ಯಾನಿ ತದ್ವಿವರಣಪರಾಣಿ ಸಂತಿ ।

ಅನುವಾದ - ಪ್ರಶ್ನೆ - ಬ್ರಹ್ಮಸೂತ್ರವು ಮುಖ್ಯವಾದ ಪರವಿದ್ಯೆಯಾಗಿದೆ. ಇದಕ್ಕೆ 'ಅನುತ್ತಮಂ ಶಾಸ್ತ್ರಂ ಇದಮೇವ ವಿವಕ್ಷಿತಂ' ಎಂಬ ಸುಧಾವಾಕ್ಯವೇ ಪ್ರಮಾಣ.

ಉತ್ತರ:- ಇದೂ ಸಹ ಸರಿಯಲ್ಲ. ಏಕೆಂದರೆ ಸುಧಾಗ್ರಂಥದಲ್ಲಿಯೇ 'ತಚ್ಚ ಅನುತ್ತಮಂ' ಎಂಬ ವಾಕ್ಯದ ಮುಂದೆ ಈ ಅರ್ಥವನ್ನು ವಿವರಿಸುವ ಮತ್ತೆರಡು ವಾಕ್ಯಗಳು ಹೀಗಿವೆ – 'ನಿರ್ಣೀತವ್ಯಾರ್ಥಾನಾಂ ಋಗಾದಿಪದೋಪಲಕ್ಷಿತಾನಾಮಶೇಷಶಾಸ್ತ್ರಾಣಾಪರವಿದ್ಯಾತ್ವೇನೋಕ್ತತ್ವಾತ್ । ಅನ್ಯಸ್ಯಾಪ್ರಸಂಗಾತ್ಪರತ್ವಾ-ಸಂಭವಾಚ್ಚ; ಸಂಭವತಿ ತ್ವಸ್ಯ ಪರತ್ವಮನುಗ್ರಾಹಕತ್ವಾತ್' ಎಂಬುದಾಗಿ. ಇದರ ಅಭಿಪ್ರಾಯ ಹೀಗಿದೆ –

ಋಗಾದಿಪದದಿಂದ ಎಲ್ಲಾ ಶಾಸ್ತ್ರಗಳನ್ನು ಉಪಲಕ್ಷಣಯಾ ವಿವಕ್ಷಿಸಲಾಗಿದೆ. ಇವೆಲ್ಲವೂ ಸಹ ನಿರ್ಣೀತವ್ಯವಾಗಿವೆ. ಇವುಗಳನ್ನು ಅಪರವಿದ್ಯಾ ಎಂಬ ಶಬ್ದದಿಂದ ಉಪನಿಷತ್ತಿನಲ್ಲಿ ವ್ಯವಹಾರ ಮಾಡಲಾಗಿದೆ. ಪ್ರಕೃತದಲ್ಲಿ ಋಗಾದಿಗಳಿಂತ ಬೇರೆ ಶಾಸ್ತ್ರಗಳಿಗೆ ಪ್ರಸಕ್ತಿಯೂ ಇಲ್ಲ. ಹಾಗೂ ಬೇರೆ ಶಾಸ್ತ್ರಗಳು ಪರವಿದ್ಯೆ ಆಗಲೂ ಸಾಧ್ಯವಿಲ್ಲ. ಆದ್ದರಿಂದ ಋಗಾದಿಗಳಿಗೆ ಪರತ್ವವನ್ನು ಹೇಳಬೇಕಾದರೆ ಬ್ರಹ್ಮಮೀಮಾಂಸಾಶಾಸ್ತ್ರವು ಅನುಗ್ರಾಹಕವಾಗಿದೆ ಎಂಬುದು ಸುಧಾವಾಕ್ಯದ ಅಭಿಪ್ರಾಯ.

## 'ಇದಮೇವ ವಿವಕ್ಷಿತಮ್' ಎಂಬುದಕ್ಕೆ ವ್ಯಾಖ್ಯಾನ

ಅನೇನೇದಮೇವೇತ್ಯೇವಕಾರವ್ಯವಚ್ಛೇದ್ಯಂ ವಿಷ್ಣುವಿಷಯತ್ವೇನಾನಿರ್ಣೀತತ್ವದಶಾಪನ್ನಮೇವ ಋಗಾದಿಕಂ, ನ ತು ನಿರ್ಣೀತಂ ತತ್ ಇತ್ಯುಕ್ತ್ವಾಽಸ್ಯ ಶಾಸ್ತ್ರಸ್ಯ ಸಾಕ್ಷಾದಕ್ಷರಾಧಿಗತ್ಯಕರಣತ್ವೇಽಪಿ ತದಿತಿಕರ್ತವ್ಯತಾರೂಪತ್ವಾತ್ ಪರವಿದ್ಯಾಭೂತಕೃತ್ಸ್ನವೇದಾನುಗ್ರಾಹಕತ್ವರೂಪಂ ಪರತ್ವಂ ಸಂಭವತೀತಿ ತಚ್ಚೇತಿ ವಾಕ್ಯಾರ್ಥ ಉಕ್ತೋ ಭವತಿ ।

ಅನುವಾದ - 'ಇದಮೇವ' ಎಂಬ ಸುಧಾವಾಕ್ಯದಲ್ಲಿರುವ ಏವಕಾರವು ಯಾವ ಅಂಶವನ್ನು ವ್ಯವಚ್ಛೇದ ಮಾಡುತ್ತದೆಂಬುದನ್ನು ಎಂದು ಸ್ಪಷ್ಟವಾಗಿ ತಿಳಿಯಬೇಕು. ಯಾವ ಕಾಲದಲ್ಲಿ ವೇದಗಳಿಗೆ ವಿಷ್ಣುಪರತ್ವವು ನಿರ್ಣೀತವಾಗಿರುವುದಿಲ್ಲವೋ, ಅಂತಹ ಅನಿರ್ಣೀತದಶಾಪನ್ನ ಋಗಾದಿಗಳನ್ನು ವ್ಯವಚ್ಛೇದ ಮಾಡುತ್ತಿದೆ. ವಿಷ್ಣುವಿಷಯತ್ವೇನ ನಿರ್ಣೀತದಶಾಪನ್ನ ವೇದಾದಿಗಳನ್ನು ವ್ಯವಚ್ಛೇದ ಮಾಡುತ್ತಿಲ್ಲ. ಆದ್ದರಿಂದ ಈ ಶಾಸ್ತ್ರವು ಸಾಕ್ಷಾತ್ತಾಗಿ ಅಕ್ಷರದ ಅಧಿಗತಿ = ಜ್ಞಾನಕರಣವಾದರೂ ಸಹ ಇತಿಕರ್ತವ್ಯತಾರೂಪವಾಗಿದೆ. ಪರವಿದ್ಯಾ ಭೂತವಾದ ಸಕಲವೇದಗಳಿಗೆ ಅನುಗ್ರಾಹಕತ್ವರೂಪವಾದ ಪರತ್ವವನ್ನು ಇಲ್ಲಿ ಅಂಗೀಕಾರ ಮಾಡಲಾಗಿದೆ. ಇದು 'ತಚ್ಚ' ಎಂಬ ಟೀಕಾವಾಕ್ಯದ ಅಭಿಪ್ರಾಯವಾಗಿದೆ.

## ಅನುಗ್ರಾಹಕತ್ವವು ಪರತ್ವ ಎನಿಸುತ್ತದೆ

ಇತ್ಥಂ ಚಾನುಗ್ರಾಹಕತ್ವರೂಪಪರತ್ವಮುಕ್ತರೀತ್ಯಾ ಗೌಣಮೇವೇತಿ ಕಥಮಿದಮಸ್ಯ ಶಾಸ್ತ್ರಸ್ಯ ಮುಖ್ಯಪರವಿದ್ಯಾತ್ವಂ ಸಾಧಯೇತ್' ವಿವೇಚಯಂತು ಸುಧಿಯಃ । ಉಕ್ತಂ ಚ ಸುಧಾಯಾಮೇವ । 'ಸಂಭವತಿ ತ್ವಸ್ಯ ಪರತ್ವಂ ಅನುಗ್ರಾಹಕತ್ವಾತ್' ಇತಿ । ಅತ್ರ ಪಂಚಮ್ಯಾ ಅಭೇದಾರ್ಥಕತ್ವೇನ ಬ್ರಹ್ಮಸೂತ್ರಸ್ಯ ವೇದಾನುಗ್ರಾಹಕತ್ವರೂಪಂ ಪರತ್ವಂ ಸಂಭವತೀತ್ಯರ್ಥಃ ಸ್ಫುಟ ಏವೇತಿ ।

ಅನುವಾದ - ಹೀಗೆ ಅನುಗ್ರಾಹಕತ್ವರೂಪವಾದ ಪರತ್ವವು ಹಿಂದೆ ಹೇಳಿದಂತೆ ಗೌಣವೇ ಆಗಿದೆ. ಆದ್ದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಮುಖ್ಯವಾದ ಪರವಿದ್ಯಾತ್ವವನ್ನು ಹೇಗೆ ತಾನೇ ಹೇಳಲು ಸಾಧ್ಯ ?





ಇದನ್ನು ಸುಜ್ಞಾನಿಗಳು ವಿವೇಚನೆ ಮಾಡಬೇಕು. ಇದೇ ವಿಷಯವನ್ನೇ ಸುಧಾದಲ್ಲಿ ಮತ್ತೊಂದು ವಾಕ್ಯವೂ ಸಹ ಸ್ಪಷ್ಟಪಡಿಸುತ್ತಿದೆ. 'ಸಂಭವತಿ ತು ಅಸ್ಯ ಪರತ್ವಂ ಅನುಗ್ರಾಹಕತ್ವಾತ್' ಎಂಬ ಈ ವಾಕ್ಯದಲ್ಲಿ ಪಂಚಮೀ ವಿಭಕ್ತಿಯು ಉದ್ದಿಷ್ಟವಾಗಿದೆ. ಅನುಗ್ರಾಹಕ ಎಂಬ ಕಾರಣದಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರತ್ವವನ್ನು ಹೇಳುವಾಗ ಬ್ರಹ್ಮಸೂತ್ರಕ್ಕೆ ಪರತ್ವವು ವೇದಾನುಗ್ರಾಹಕತ್ವರೂಪವಾಗಿದೆ ಎಂಬುದು ಈ ವಿಭಕ್ತಿಯಿಂದ ಸ್ಫುಟವಾಗುತ್ತದೆ. ಪಂಚಮೀವಿಭಕ್ತಿಗೆ ಅಭೇದದಲ್ಲಿ ತಾತ್ಪರ್ಯವಿದೆ. ಬ್ರಹ್ಮಸೂತ್ರಕ್ಕೆ ವೇದಾನುಗ್ರಾಹಕತ್ವವೇ ಪರತ್ವ. ಇಂತಹ ಪರತ್ವವು ಬ್ರಹ್ಮಸೂತ್ರಕ್ಕೆ ಇದೆ ಎಂದಾದಾಗ ಮುಖ್ಯವಾದ ಪರವಿದ್ಯಾತ್ವವು ಇಲ್ಲ ಎಂಬ ಅಂಶವು ಸ್ಫುಟವಾಯಿತು.

## ಸುಧೆಯಲ್ಲಿ ಪೃಥಕ್‌ಪ್ರಾಮಾಣ್ಯವನ್ನು ಸೂತ್ರಗಳಿಗೆ ಒಪ್ಪಿಲ್ಲ

ಏತತ್ ಪ್ರಕರಣಸ್ಯೋಪಸಂಹಾರಸುಧಾ ಚಾಮುಮೇವಾರ್ಥಂ ದ್ರಢಯತಿ। 'ತಥಾऽಪಿ ಕೇವಲಸ್ಯ ನ ಪರವಿದ್ಯಾತ್ವಂ ಲಭ್ಯತ ಇತಿ ಚೇತ್, ಮಾಲಾಭಿ। ವೇದಾದೀತಿಕರ್ತವ್ಯತಾರೂಪಸ್ಯಾಸ್ಯ ಪೃಥಕ್ ಪ್ರಾಮಾಣ್ಯಾನಭ್ಯುಪಗಮಾತ್'। ಇತ್ಯುಪಸಂಹಾರವಾಕ್ಯಂ।

ಅನುವಾದ - ಈ ಪ್ರಕರಣವನ್ನು ಉಪಸಂಹಾರ ಮಾಡುವಾಗ ಸುಧಾವಾಕ್ಯವು ಇದೇ ವಿಷಯವನ್ನು ಮತ್ತಷ್ಟು ದೃಢಪಡಿಸಿದೆ – ಬ್ರಹ್ಮಮೀಮಾಂಸೆಯಿಂದ ಅನುಪಕೃತವಾದ ಋಗಾದಿಗಳಿಗೆ ಪರವಿದ್ಯಾತ್ವವು ಬರುವುದಿಲ್ಲವಲ್ಲ? ಎಂಬ ಪ್ರಶ್ನೆಗೆ ಬೇಕಾಗಿಲ್ಲ, ವೇದಾದಿತಿಕರ್ತವ್ಯತಾರೂಪವಾದ ಇದಕ್ಕೆ ಪ್ರತ್ಯೇಕವಾದ ಪ್ರಾಮಾಣ್ಯವನ್ನು ಒಪ್ಪಿರುವುದಿಲ್ಲ ಎಂಬುದಾಗಿ ಸುಧಾದಲ್ಲಿನ ಉಪಸಂಹಾರ ವಾಕ್ಯ.

## ಉಪಸಂಹಾರವಾಕ್ಯಕ್ಕೆ ವಿವರಣೆ ನೀಡುವ ಟಿಪ್ಪಣಿಗಳ ಸಾರಾಂಶ

ಅತ್ರಟಿಪ್ಪಣ್ಯ: - 'ನನ್ವೇವಂ ತರ್ಹಿ ವಸ್ತುತ ಉಪಕೃತಸ್ಯ ಋಗಾದೇರನುಪಕೃತಋಗಾದ್ಯಪೇಕ್ಷಯಾ ಪರವಿದ್ಯಾತ್ವಂ ಸಿಧ್ಯೇತ್; ನ ತೂಪಕಾರಕಪ್ರಾಧಾನ್ಯವಿವಕ್ಷಾಮಾತ್ರೇಣ ಭವದಭಿಮತಮುಪಕಾರಸ್ಯೈವ ಪರವಿದ್ಯಾತ್ವಮಿತ್ಯಾಶಂಕಾಂ ಸಯುಕ್ತಿಕಮನಂಗೀಕಾರೇಣ ಪರಿಹರತಿ। ತಥಾಪೀತಿ।'- (ವಾಕ್ಯಾರ್ಥ-ಚಂದ್ರಿಕಾ).

ಅನುವಾದ - ವಾಕ್ಯಾರ್ಥಚಂದ್ರಿಕಾ, ಕಂಬಾಲೂರು ರಾಮಚಂದ್ರತೀರ್ಥೀಯ, ಕಾಶೀಟಿಪ್ಪಣಿ ಮುಂತಾದವುಗಳಲ್ಲಿ ಈ ಉಪಸಂಹಾರವಾಕ್ಯದ ವಿವರಣೆಯನ್ನು ನೀಡಲಾಗಿದೆ. ಮೊದಲಿಗೆ ವಾಕ್ಯಾರ್ಥಚಂದ್ರಿಕಾ ವಿಷಯವನ್ನು ನೋಡೋಣ –





ಪ್ರಶ್ನೆ – ಋಗಾದಿಗಳಿಗೆ ಬ್ರಹ್ಮಮೀಮಾಂಸಾಶಾಸ್ತ್ರದ ಉಪಕಾರವಿದೆ ಎನ್ನುವುದಾದರೆ ಅನುಪಕೃತವಾದ ಋಗಾದಿಗಳ ಅಪೇಕ್ಷೆಯಿಂದ ಬ್ರಹ್ಮಮೀಮಾಂಸೆಗೆ ಪರವಿದ್ಯಾತ್ವವು ಏಕೆ ತಾನೇ ಸಿದ್ಧವಾಗುವುದಿಲ್ಲ? ಉಪಕಾರಕಪ್ರಾಧಾನ್ಯದ ವಿವಕ್ಷೆ ಇಟ್ಟುಕೊಂಡು ಉಪಕಾರಕಕ್ಕೆ ಮಾತ್ರವೇ ಪರವಿದ್ಯಾತ್ವವನ್ನು ಹೇಗೆ ಹೇಳಲು ಸಾಧ್ಯ ? ಎಂಬ ಪ್ರಶ್ನೆಗೆ ಉತ್ತರವಾಗಿ ಯುಕ್ತಿಯುಕ್ತವಾಗಿ ಕೇವಲ ಉಪಕಾರಕಕ್ಕೆ ಮಾತ್ರವೇ ಪರವಿದ್ಯಾತ್ವವಲ್ಲ ಎಂಬ ಅಂಶವನ್ನು ಹೇಳುವ ಮುಖಾಂತರ ಪ್ರಶ್ನೆಯನ್ನು ನಿರಾಕರಣೆ ಮಾಡುತ್ತಿದ್ದಾರೆ. 'ತಥಾಪಿ' ಇತ್ಯಾದಿ ಎಂಬ ವಾಕ್ಯದಿಂದ. ಇದು ವಾಕ್ಯಾರ್ಥಚಂದ್ರಿಕಾಕಾರರ ವಿವರಣೆ.

## ಕಂಬಾಲೂರು ಟಿಪ್ಪಣಿಯ ಅಭಿಪ್ರಾಯ

ನನು ಯದಿ ಬ್ರಹ್ಮಮೀಮಾಂಸಾಶಾಸ್ತ್ರವ್ಯುತ್ಪಾದಿತನ್ಯಾಯೋಪಕೃತಾನಾಂ ವಿಷ್ಣುಪ್ರತಿಪಾದಕತ್ವಂ ತರ್ಹಿ ಕೇವಲಸ್ಯ ಬ್ರಹ್ಮಮೀಮಾಂಸಾಶಾಸ್ತ್ರಸ್ಯಾಕ್ಷರಶಬ್ದಿತವಿಷ್ಣ್ವಧಿಗತಿಸಾಧನತ್ವಾಭಾವೇನ ಕೇವಲಸ್ಯ ಪರವಿದ್ಯಾತ್ವಂ ನ ಲಬ್ಧಮಿತ್ಯಭಿಪ್ರೇತ್ಯ ಶಂಕತೇ - ತಥಾಪೀತಿ।

ಇಷ್ಟಾಪತ್ತ್ಯಾ ಪರಿಹರತಿ । ಮಾ ಲಾಭೀತಿ । ವೇದೇತಿ ಕರ್ತವ್ಯತಾರೂಪಸ್ಯಾಸ್ಯವೇದಾನುಗ್ರಾಹಕತಾಮಂತರೇಣ ಬ್ರಹ್ಮಪ್ರಮಿತಿಜನಕತ್ವಾಭಾವಾತ್ ಕೇವಲ ವೇಷೇಣ ಪರವಿದ್ಯಾತ್ವಾಭಾವೇಽಪಿ ವೇದಾನುಗ್ರಾಹಕತ್ವವಿಶಿಷ್ಟವೇಷೇಣ ತಜ್ಜನಕತ್ವಾತ್ ಸ್ವಾಭಿಮತಂ ಪರವಿದ್ಯಾತ್ವಂ ಯುಕ್ತಮಿತಿ ಭಾವಃ। - (ಕಂಬಾಲೂರು ರಾಮಚಂದ್ರತೀರ್ಥೀಯ)

ಅನುವಾದ - ಶಂಕಾ -ಒಂದು ವೇಳೆ ಬ್ರಹ್ಮಮೀಮಾಂಸಾಶಾಸ್ತ್ರದಿಂದ ವ್ಯುತ್ಪಾದಿತವಾದ ನ್ಯಾಯಗಳ ಉಪಕಾರವು ವೇದಾದಿಗಳಿಗೆ ಇದ್ದು ಅಂತಹ ವೇದಾದಿಗಳೇ ವಿಷ್ಣುಪ್ರತಿಪಾದಕವಾದರೆ ಕೇವಲವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಕ್ಷರಶಬ್ದಿತನಾದ ವಿಷ್ಣುವಿನ ಅಧಿಗತಿಗೆ ಸಾಧನತ್ವವು ಇರುವುದಿಲ್ಲ. ಇದರಿಂದ ಕೇವಲ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವು ಯುಕ್ತವಾಗುವುದಿಲ್ಲವೇ? ಎಂಬ ಅಭಿಪ್ರಾಯದಿಂದ ಪ್ರಶ್ನೆಯನ್ನು ಮಾಡುತ್ತಿದ್ದಾರೆ. 'ತಥಾಪಿ ಇತಿ' ಎಂಬ ವಾಕ್ಯದಿಂದ.

ಈ ಆಕ್ಷೇಪವನ್ನು ಇಷ್ಟಾಪತ್ತಿಯೆಂದು ಪರಿಹಾರ ಮಾಡುತ್ತಿದ್ದಾರೆ. 'ಮಾ ಲಾಭಿ' ಎಂಬ ವಾಕ್ಯದಿಂದ. ವೇದಗಳ ಇತಿಕರ್ತವ್ಯತಾರೂಪವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವೇದಾನುಗ್ರಾಹಕತ್ವ ಬಿಟ್ಟು ಬ್ರಹ್ಮಪ್ರಮಿತಿಜನಕತ್ವವು ಇಲ್ಲವೇ ಇಲ್ಲ. ಆದ್ದರಿಂದ ಕೇವಲ ರೂಪದಿಂದ ಪರವಿದ್ಯಾತ್ವವು ಇಲ್ಲದಿದ್ದರೂ ಸಹ ವೇದಾನುಗ್ರಹಾಕತ್ವ ಎಂಬ ವಿಶಿಷ್ಟರೂಪದಿಂದ ಬ್ರಹ್ಮಪ್ರಮಿತಿಜನಕತ್ವವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇದೆ. ಆದ್ದರಿಂದ ನಮಗೆ ಅಭಿಮತವಾದ ಪರವಿದ್ಯಾತ್ವವು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಯುಕ್ತವೇ ಆಗಿದೆ ಎಂದಭಿಪ್ರಾಯ.







## ಕಾಶಿಟಿಪ್ಪಣಿಯ ಅಭಿಪ್ರಾಯ

ತಥಾಚೈತಮೇವಾರ್ಥಮಿತ್ಯುಕ್ತಂ । 'ತಚ್ಚೇತಿ' ವಾಕ್ಯೇ ನ ಕೇವಲಸ್ಯ ಪರವಿದ್ಯಾತ್ವಮಿತ್ಯರ್ಥಸ್ಯೈವೋಕ್ತತ್ವಾದೇತತ್ ಶಬ್ದೇನ ತಸ್ಯೈವ ಪರಾಮರ್ಶಾದಿತಿ ಭಾವಃ। ಸ್ಯಾದೇವಂ ಯದಿ ಕೇವಲಸ್ಯ ಪರವಿದ್ಯಾತ್ವಮುಕ್ತಂ ಸ್ಯಾತ್, ನ ಚೈವಂ ತಚ್ಚೇತಿವಾಕ್ಯೇ 'ಇದಮೇವ' ಇತ್ಯೇವಕಾರೇಣ ವಿಷ್ಣುವಿಷಯತ್ವೇನಾನಿರ್ಣೀತತತ್ವದಶಾಪನ್ನಸ್ಯೈವ ವೇದಾದೇರ್ವ್ಯವಚ್ಛಿನ್ನತ್ವಾತ್ ।

ಅನುವಾದ - ಕಾಶೀ ಟಿಪ್ಪಣಿಯಲ್ಲಿ ಸುಧಾ ವಾಕ್ಯಗಳಿಗೆ ನೀಡಿದ ವಿವರಣೆ ಹೀಗಿದೆ – ಟೀಕೆಯಲ್ಲಿ 'ತಚ್ಚ' ಎಂಬ ವಾಕ್ಯವನ್ನು ಹೇಳಲಾಗಿದೆ. ಈ ವಾಕ್ಯದಲ್ಲಿ ಕೇವಲವಾದ ವೇದಕ್ಕೆ ಪರವಿದ್ಯಾತ್ವವು ಇಲ್ಲ ಎಂದಷ್ಟೇ ಹೇಳಿರುವುದರಿಂದ ಮುಂದೂ ಸಹ ಏತತ್ ಶಬದಿಂದ ಹಿಂದೆ ಪ್ರಕೃತವಾದ ವೇದಾದಿಗಳನ್ನೇ ಪರಾಮರ್ಶೆ ಮಾಡಬೇಕು ಎಂದು ಸ್ಪಷ್ಟವಾಗುತ್ತದೆ. ಒಂದು ವೇಳೆ ಕೇವಲವಾದ ವೇದಾದಿಗಳಿಗೆ ಪರವಿದ್ಯಾತ್ವವನ್ನು ಹೇಳಿದ ಪಕ್ಷದಲ್ಲಿ ಈ ರೀತಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವು ಯುಕ್ತವಾಗುತ್ತಿತ್ತು. ಆದರೆ 'ತಚ್ಚ' ಎಂಬ ವಾಕ್ಯದಲ್ಲಿ 'ಇದಮೇವ' ಎಂದು ಏವಕಾರವನ್ನು ಪ್ರಯೋಗ ಮಾಡಲಾಗಿದೆ. ಆದ್ದರಿಂದ ವಿಷ್ಣುವಿಷಯವಾಗಿ ನಿರ್ಣಯವಾಗದೇ ಇರುವ ವೇದಗಳಿಗೆ ಮಾತ್ರ ಪರವಿದ್ಯಾತ್ವ ಇಲ್ಲ ಎಂಬುದನ್ನು ಹೇಳಲಾಗಿದೆ.

ಅತ ಏವ ತತ್ರ ನಿರ್ಣೀತವಾಕ್ಯಾರ್ಥಾನಾಮಿತ್ಯುಕ್ತಮಿತ್ಯಾಶಯೇನ ಸಮಾಧತ್ತೇ - ಮಾ ಲಾಭೀತಿ ಇತಿಕರ್ತವ್ಯತಾರೂಪಸ್ಯ ಸಹಕಾರಿರೂಪಸ್ಯ ಪೃಥಗ್ವೇದಾದಿವ್ಯವಚ್ಛೇದೇನ ವಿಷ್ಣುಪ್ರಮಿತಿಪರ್ಯಸಾಧನತ್ವಾನುಪಗಮಾದಿತ್ಯರ್ಥಃ - (ಕಾಶೀ ಟಿಪ್ಪಣಿ)

ಅನುವಾದ - ಈ ಕಾರಣದಿಂದಲೇ ಟೀಕಾದಲ್ಲಿ 'ನಿರ್ಣೀತವ್ಯಾರ್ಥಾನಾಂ' ಎಂಬುದಾಗಿ ವೇದಗಳಿಗೆ ವಿಶೇಷಣವನ್ನು ನೀಡಿದ್ದಾರೆ. ನಿರ್ಣೀತವಾದ ವೇದಗಳಿಗೆ ಪರವಿದ್ಯಾತ್ವವು ಯುಕ್ತವಾಗುತ್ತದೆ. ಈ ಅಂಶವನ್ನು ಒಳಗೊಂಡು ಪೂರ್ವಪಕ್ಷಕ್ಕೆ ಉತ್ತರವನ್ನು 'ಮಾ ಲಾಭಿ' ಎಂಬ ಟೀಕೆಯಲ್ಲಿ ನೀಡಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ಇತಿಕರ್ತವ್ಯತಾರೂಪವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರತ್ಯೇಕವಾಗಿ ವಿಷ್ಣುಪ್ರಮತಿಸಾಧನತ್ವವನ್ನು ಅಂಗೀಕಾರ ಮಾಡಿಲ್ಲ. ಈ ಕಾರಣದಿಂದ ಸಾಕ್ಷಾತ್ ಪರವಿದ್ಯಾತ್ವವು ವೇದಾದಿಗಳಿಗೆ ಹೊರತು ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಯುಕ್ತವಲ್ಲ ಎಂಬುದು ಅಭಿಪ್ರಾಯ.

## ವೇದಕ್ಕೆ ಮುಖ್ಯಪರವಿದ್ಯಾತ್ವವು ಸ್ಥಾಪಿತವಾಯಿತು

'ಏವಂ ಚ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಸಾಕ್ಷಾದ್ವಿಷ್ಣುಪ್ರತಿಪಾದಕತ್ವಂ ನಾಸ್ತಿ। ಅತಃ ಕೇವಲಸ್ಯಾಸ್ಯ ಪರವಿದ್ಯಾತ್ವಂ ನಾನುಮತಂ। ಕಿಂತೂಕ್ತರೀತ್ಯಾ ವೇದೇತಿಕರ್ತವ್ಯತಾತ್ವಮೇವ ಸಾಕ್ಷಾದ್ವಿಷ್ಣುವಾಚಕತ್ವಾತ್ಮಕ-







ವೇದನಿಷ್ಠಪರವಿದ್ಯಾತ್ವವ್ಯಂಜಕತ್ವರೂಪಮೇಷ್ಟವ್ಯಂ । ಇದಮೇವ ಚ ತಸ್ಯ ಪರವಿದ್ಯೇತಿ ವ್ಯವಹಾರೇ ನಿಮಿತ್ತಂ । 'ವೇದೇತಿಕರ್ತವ್ಯತಾರೂಪಸ್ಯಾಸ್ಯ ಪೃಥಕ್‌ಪ್ರಾಮಾಣ್ಯಾನಭ್ಯುಪಗಮಾತ್' ಇತಿ ಖಲೂಕ್ತಂ । ತದರ್ಥಸ್ತು ನ ಸಾಕ್ಷಾದ್ವಿಷ್ಣುಪ್ರಮಿತಿಜನಕಮಿದಂ । ಕಿಂತು ವಿಷ್ಣುಪ್ರಮಿತಿಜನಕಸ್ಯ ವೇದಸ್ಯಾಂಗಮೇವ । ಅಂಗಂ ತು ಅಂಗಿನಿಷ್ಠಕಾರ್ಯಜನನಶಕ್ತಿನಿಯಾಮಕಮೇವ । ನ ತ್ವಂಗೀಕಾರ್ಯಾತಿರಿಕ್ತಪ್ರಧಾನಕಾರ್ಯಜನಕಮಿತ್ಯೇವಂ ವೇದಸ್ಯ ವಿಷ್ಣುಪ್ರಮಿತಿಜನಕತ್ವಮುಪಕುರ್ವತೋಽಸ್ಯ ಶಾಸ್ತ್ರಸ್ಯ ಅಂಗಿವೇದವಿಷಯಾತಿರಿಕ್ತವಿಷಯಃ ಪ್ರಧಾನೋ ನಾಸ್ತಿ । ಕಿಂತು ಸ ಏವ ಪರಂಪರಯಾ ವಿಷಯೋ ಭವತಿ । ಅತ ಏವಾಸ್ಯ ಗೌಣಂ ಪರವಿದ್ಯಾತ್ವಂ । ಮುಖ್ಯಪರವಿದ್ಯಾತ್ವಂ ತು ವೇದಸ್ಯೈವೇತಿ 'ತಾ ಏವ ಪರಮಾ ವಿದ್ಯಾ' ಇತ್ಯಾಥರ್ವಣಭಾಷ್ಯಾದಿನಾ ಏಕಕಂಠ್ಯಮ್ 'ಪರವಿದ್ಯಾಖ್ಯಮ್' ಇತ್ಯಾದೇರಿತಿ ನಾನುಪಪತ್ತಿಃ । ಶಾಸ್ತ್ರಶ್ರುತ್ಯೋರಂಗಾಂಗಿಭಾವೋಽಪಿ ಮೂಲಟೀಕಾದಾವೇವೋಕ್ತಃ ।

ಏವಂ ಹಿ ಪ್ರಯೋಗೇ ಅಂಗಾಂಗಿಭಾವೋಽಪ್ಯಧಿಕೋ ವಿಜ್ಞಾಯತೇ । - (ನ್ಯಾಯಸುಧಾ)

ಅನುವಾದ - ಹೀಗೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಾಕ್ಷಾತ್ತಾಗಿ ವಿಷ್ಣುವಿನ ವಿಷಯವನ್ನು ನಿರೂಪಣೆ ಮಾಡುವ ಅಭಿಪ್ರಾಯವು ಇರುವುದಿಲ್ಲ. ಹಾಗಾಗಿ ಕೇವಲವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪರವಿದ್ಯಾತ್ವವು ಸಮ್ಮತವಲ್ಲ. ಮತ್ತೇನೆಂದರೆ ಹಿಂದೆ ಹೇಳಿದ ರೀತಿಯಲ್ಲಿ ವೇದೇತಿಕರ್ತವ್ಯತ್ವವೇ ಅಂಗೀಕಾರ ಮಾಡಬೇಕು. ಸಾಕ್ಷಾತ್ ವಿಷ್ಣುವಾಚಕತ್ವವನ್ನು ಹೇಳುವ ಪರವಿದ್ಯಾತ್ವವು ವೇದಗಳಿಗೆ ಇದೆ. ಇಂತಹ ವೇದನಿಷ್ಠವಾದ ಪರವಿದ್ಯಾತ್ವಕ್ಕೆ ಬ್ರಹ್ಮಸೂತ್ರ ವ್ಯಂಜಕವಾಗಿದೆ. ಪರವಿದ್ಯಾವ್ಯಂಜಕತ್ವರೂಪವಾದ ಪರವಿದ್ಯೆಯನ್ನೇ ಬ್ರಹ್ಮಸೂತ್ರಗಳಿಗೆ ತಿಳಿಯಬೇಕು. ಇದಕ್ಕೆ ಪೂರಕವಾಗಿ ಟೀಕಾವಾಕ್ಯವು ಹೀಗಿದೆ – 'ವೇದಾತಿಕರ್ತವ್ಯತಾರೂಪಸ್ಯ ಅಸ್ಯ ಪೃಥಕ್ ಪ್ರಾಮಾಣ್ಯಾನಭ್ಯುಪಗಮಾತ್' ಎಂಬುದಾಗಿ.

ಸುಧಾ ವಾಕ್ಯದ ಅಭಿಪ್ರಾಯ ಹೀಗಿದೆ – ಈ ಬ್ರಹ್ಮಮೀಮಾಂಸಾಶಾಸ್ತ್ರವು ಸಾಕ್ಷಾತ್ತಾಗಿ ವಿಷ್ಣುವಿನ ಪ್ರಮಿತಿಯನ್ನು ಉಂಟುಮಾಡುವುದಿಲ್ಲ. ಕಿಂತು ವಿಷ್ಣುವಿನ ಪ್ರಮಿತಿಯನ್ನು ಉಂಟುಮಾಡುವ ವೇದಕ್ಕೆ ಅಂಗವಷ್ಟೇ. ಅಂಗವು ಅಂಗಿಯಲ್ಲಿ ಇರುವ ಕಾರ್ಯಜನನಶಕ್ತಿಗೆ ನಿಯಾಮಕವಾಗುತ್ತದೆಯೇ ಹೊರತು ಪ್ರತ್ಯೇಕವಾದ ಯಾವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಅಂಗಿಯ ಕಾರ್ಯಕ್ಕಿಂತ ಅತಿರಿಕ್ತವಾದ ಪ್ರಧಾನಕಾರ್ಯಜನಕವಾಗಲು ಸಾಧ್ಯವಿಲ್ಲ. ಪ್ರಕೃತ ವೇದವು ಅಂಗಿ, ಬ್ರಹ್ಮಸೂತ್ರವು ಅಂಗ. ವೇದಕ್ಕೆ ವಿಷ್ಣುಪ್ರಮಿತಿಜನಕತ್ವರೂಪವಾದ ಮುಖ್ಯಕಾರ್ಯವನ್ನುಂಟು ಮಾಡುವ ಬ್ರಹ್ಮಮೀಮಾಂಸಾಶಾಸ್ತ್ರವು ಪ್ರಧಾನವಾಗುವುದಿಲ್ಲ. ಅಂಗಿಯಾದ ವೇದಕ್ಕೆ ಯಾವುದು ವಿಷಯವೋ ಅದಕ್ಕಿಂತ ಭಿನ್ನವಾದ ವಿಷಯವು





ಅಂಗಕ್ಕೆ ಹೇಳಲು ಸಾಧ್ಯವಿಲ್ಲ. ಅಂಗಿಗೆ ವಿಷಯವಾದದ್ದೇ ಅಂಗಕ್ಕೂ ಸಹ ವಿಷಯ. ಹೀಗೆ ಪರಂಪರೆಯಿಂದ ವೇದಕ್ಕೆ ವಿಷಯನಾದ ಬ್ರಹ್ಮನು ಅಂಗವಾದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೂ ಸಹ ವಿಷಯನಾಗುತ್ತಾನೆ. ಆದ್ದರಿಂದಲೇ ಈ ಪ್ರಕರಣದಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಗೌಣವಾದ ಪರವಿದ್ಯಾತ್ವವನ್ನು ಹೇಳಲಾಗಿದೆ. ಮುಖ್ಯವಾದ ಪರವಿದ್ಯಾತ್ವವು ವೇದಕ್ಕೇ ಹೊರತು ಬೇರೆ ಯಾವ ಶಾಸ್ತ್ರಕ್ಕೂ ಸಹ ಇಲ್ಲ. ಇದಕ್ಕೆ ಸಹಕಾರಿಯಾಗಿ ಆಥರ್ವಣಭಾಷ್ಯವೂ ಸಹ 'ತಾ ಏವ ಪರಮಾ ವಿದ್ಯಾ:' ಎಂಬುದಾಗಿ ಹೇಳುತ್ತಿದೆ. ಹೀಗೆ ಆಥರ್ವಣಭಾಷ್ಯಕ್ಕೂ, ಅನುವ್ಯಾಖ್ಯಾನಕ್ಕೂ ಯಾವುದೇ ವಿರೋಧವಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ 'ಪರವಿದ್ಯಾಖ್ಯಂ' ಎಂಬ ವಾಕ್ಯಪ್ರಯೋಗವು ಸಾಧುವಾಗಿದೆ. ಅದರಲ್ಲಿ ಯಾವುದೇ ಅನುಪಪತ್ತಿಯೂ ಸಹ ಇಲ್ಲ. ಮೂಲ ಹಾಗೂ ಟೀಕಾದಿಗಳಲ್ಲಿ ಶಾಸ್ತ್ರಕ್ಕೂ, ಶ್ರುತಿಗೂ ಅಂಗಾಂಗಿಭಾವವು ಸ್ಪಷ್ಟವಾಗಿದೆ. ಇದಕ್ಕೆ ಪೂರಕವಾಗಿ ನ್ಯಾಯಸುಧಾವಾಕ್ಯವೂ ಹೀಗಿದೆ – 'ಏವಂ ಹಿ ಪ್ರಯೋಗೇ ಅಂಗಾಂಗಿಭಾವಃ ಅಪಿ ಅಧಿಕಃ ವಿಜ್ಞಾಯತೇ' ಎಂಬುದಾಗಿ. ಇದರ ಅಭಿಪ್ರಾಯ ಹೀಗೆ – ಬ್ರಹ್ಮಮೀಮಾಂಸಾಶಾಸ್ತ್ರವನ್ನು ಅಂಗ ಎಂದು ಹೇಳಿ, ವೇದವನ್ನು ಅಂಗಿ ಎಂದು ಹೇಳಿದಾಗ ಇವುಗಳಿಗೆ ಪರಸ್ಪರವಾಗಿ ಅಂಗಾಂಗಿಭಾವವಿದೆ ಎಂಬ ಅಂಶವು ಹೆಚ್ಚು ಸ್ಪಷ್ಟವಾಗುತ್ತದೆ ಎಂಬುದಾಗಿ.

## ನ್ಯಾಯಸುಧಾವಾಕ್ಯಕ್ಕೆ ಪರಿಮಳದಲ್ಲಿ ವಿವರಣೆ

**ಶ್ರುತಿಮೂಲತಯೇತಿ ಪ್ರಯೋಗೇ ಹಿ ತದ್ವಿಚಾರಪರತ್ವಾತ್ ಶಾಸ್ತ್ರಂಮಗಂ। ಅಂಗಿ ತು ಶ್ರುತಯ ಇತ್ಯೇವಂ ವಿಜ್ಞಾಯತೇ । ಮೂಲಮೂಲಿನೋರಂಗಾಂಗಿತ್ವಸ್ಯ ಕಾವ್ಯಟೀಕಾದೌ ಪ್ರಸಿದ್ಧೇಃ - (ನ್ಯಾಯಸುಧಾಪರಿಮಳ)**

ಅನುವಾದ - ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ತ್ರಿವಿಧವಾದ ಪ್ರಾಮಾಣ್ಯವನ್ನು ಹೇಳುವ ಸಂದರ್ಭದಲ್ಲಿ ಶ್ರುತಿಮೂಲತಯಾ ಪ್ರಮಾಣ್ಯವನ್ನು ಹೇಳಲಾಗಿದೆ. ಈರೀತಿ ಶ್ರುತಿಮೂಲತ್ವವನ್ನು ಹೇಳಿದಾಗ ಸ್ಪಷ್ಟವಾಗುವ ಮತ್ತೊಂದು ಅಂಶವೇನೆಂದರೆ ಶ್ರುತಿವಿಚಾರಕವಾದ್ದರಿಂದ ಶಾಸ್ತ್ರವು ಅಂಗ, ಶ್ರುತಿಗಳು ಅಂಗಿ ಎಂಬುದಾಗಿ. ಮೂಲ ಹಾಗೂ ಮೂಲಿ ಇವುಗಳಿಗೆ ಪರಸ್ಪರವಾಗಿ ಅಂಗಾಂಗಿಭಾವವು ಇದೆ ಎಂಬುದು ಭಾಷ್ಯ, ಟೀಕಾ ಮುಂತಾದವುಗಳಲ್ಲಿ ಪ್ರಸಿದ್ಧವಾಗಿದೆ ಎಂಬುದಾಗಿ ಪರಿಮಳದ ವಾಕ್ಯದ ಅಭಿಪ್ರಾಯ.

## ಸರ್ವಟಿಪ್ಪಣಿಕಾರರ ಅಭಿಪ್ರಾಯ ಒಂದೇ

**ಏವಮೇವ ವ್ಯಾಕ್ಯಾರ್ಥಚಂದ್ರಿಕಾ ಯಾದುಪತ್ಯ ಕಾಶೀಟಿಪ್ಪಣೀ ಗುರ್ವರ್ಥದೀಪಿಕಾದಿ ಸರ್ವಟಿಪ್ಪಣೀಕಾರೈರಪ್ಯವಿಗೀತತಯಾऽಂಗಾಂಗಿಭಾವಃ ಸೂತ್ರಶ್ರುತ್ಯೋರ್ವ್ಯಾಖ್ಯಾತಃ । ತಥಾಚ**





ಶ್ರುತೇರಂಗಿತ್ವೇನ ಪ್ರಾಧಾನ್ಯಂ , ಶಾಸ್ತ್ರಸ್ಯಾಂಗತ್ವೇನಾಪ್ರಾಧಾನ್ಯಂ ಚ ಸ್ಫುಟಮಿತಿ ಶ್ರುತಿಶಾಸ್ತ್ರಯೋ-ರ್ಮುಖ್ಯಾಮುಖ್ಯ ಪರವಿದ್ಯಾತ್ವೇ ಏವೇತಿ ಸಿದ್ಧಂ।

ಅನುವಾದ - ಇದೇ ರೀತಿಯಾಗಿಯೇ ವಾಕ್ಯಾರ್ಥಚಂದ್ರಿಕಾ, ಯಾದುಪತ್ಯ , ಕಾಶೀಟಿಪ್ಪಣ, ಗುರ್ವರ್ಥದೀಪಿಕಾ ಮುಂತಾದ ಎಲ್ಲಾ ಟಿಪ್ಪಣೀಕಾರರು ಸಹ ಸೂತ್ರ ಹಾಗೂ ಶ್ರುತಿಗಳಿಗೆ ಅಂಗಾಂಗಿಭಾವವಿದೆ. ಇದರಲ್ಲಿ ಯಾವುದೇ ವಿವಾದವಿಲ್ಲ ಎಂಬುದನ್ನು ವ್ಯಾಖ್ಯಾನ ಮಾಡಿದ್ದಾರೆ. ಹೀಗಾಗಿ ಅಂಗಾಂಗಿಗಳಲ್ಲಿ ಪ್ರಧಾನವಾದದ್ದು ಅಂಗಿ, ಗೌಣವಾದದ್ದು ಅಂಗ. ಪ್ರಕೃತದಲ್ಲಿ ಶ್ರುತಿ ಹಾಗೂ ಸೂತ್ರಗಳಲ್ಲಿ ಶ್ರುತಿಯು ಅಂಗವಾದ್ದರಿಂದ ಅದು ಪ್ರಧಾನ, ಶಾಸ್ತ್ರವು ಅಂಗವಾದ್ದರಿಂದ ಅಪ್ರಧಾನ. ಪ್ರಧಾನವಾದ ಶ್ರುತಿಗೆ ಮುಖ್ಯವಾದ ಪರವಿದ್ಯಾತ್ವವು, ಅಪ್ರಧಾನವಾದ ಶಾಸ್ತ್ರಕ್ಕೆ ಅಮುಖ್ಯವಾದ ಪರವಿದ್ಯಾತ್ವವು ಇದೆ ಎಂಬುದು ಈ ಪ್ರಕರಣದಿಂದ ಸ್ಪಷ್ಟವಾಗುತ್ತದೆ.

## ವಿದ್ಯಾವಿವೇಚನ ಗ್ರಂಥದ ಪೂರ್ವಪಕ್ಷ ಹಾಗೂ ಸಿದ್ಧಾಂತ

ಅತ್ರ ಪ್ರತಿವಿಹಿತಂ ಸುಬ್ಬಾಚಾರ್ಯೇಣ 'ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪೀತಿ (ಬ್ರಹ್ಮಸೂತ್ರ ತೃತೀಯಾಧ್ಯಾಯ ತೃತೀಯಪಾದೇ) ಪ್ರಧಾನಸ್ಯ ಬಲವತ್ತ್ವೇ ... ಇತ್ಯಾದಿ ಸಿದ್ಧಾಂತಿತಂ ನ್ಯಾಯಮುಕ್ತಾವಲ್ಯಾಂ। ಅತೋಂಗಜಸ್ಯ ದೌರ್ಬಲ್ಯಂ ನ ಸಾರ್ವತ್ರಿಕಮಿತಿ ಜ್ಞಾಯತೇ' ಇತಿ

- (ವಿದ್ಯಾವಿವೇಚನವಿಚಾರ)

ಅನುವಾದ - ಸುಬ್ಬಾಚಾರ್ಯರು 'ವಿದ್ಯಾವಿವೇಚನವಿಚಾರ' ಎಂಬ ಗ್ರಂಥದಲ್ಲಿ ಬ್ರಹ್ಮಸೂತ್ರದ ಮೂರನೆಯ ಅಧ್ಯಾಯದ ಮೂರನೇ ಪಾದದ ಲಿಂಗಭೂಯಸ್ತ್ವಾಧಿಕರಣದ ವಿಷಯವನ್ನು ಹೇಳುವಾಗ ಅಂಗಕ್ಕೆ ದೌರ್ಬಲ್ಯವು ಸಾರ್ವತ್ರಿಕವಲ್ಲ ಎಂಬ ಅಂಶವನ್ನು ನ್ಯಾಯಮುಕ್ತಾವಳಿಯಲ್ಲಿ ಹೇಳಿದ್ದಾರೆಂಬುದಾಗಿ ಪೂರ್ವಪಕ್ಷವನ್ನು ಮಾಡಿದ್ದಾರೆ.

ತದಪಿ ಲಿಂಗಭೂಯಸ್ತ್ವಾಧಿಕರಣ ತತ್ವಪ್ರಕಾಶಿಕಾ, ಉದಾಹೃತನ್ಯಾಯಮುಕ್ತಾವಲೀಭಾವಾನವ-ಬೋಧವಿಜೃಂಭಿತಂ । ತದ್ಭಾವಶ್ಚ ಸವಿಮರ್ಶಂ ನಿರೂಪಿತಃ ಪ್ರಾಚೀನಾಚಾರ್ಯೈರೇವೇತಿ ತದೇವಾತ್ರಾನೂದ್ಯತೇ।

ಅನುವಾದ - ಲಿಂಗಭೂಯಸ್ತ್ವಾಧಿಕರಣದ ತತ್ವಪ್ರಕಾಶಿಕಾ ಹಾಗೂ ಹಿಂದೆ ಉದಾಹರಣೆ ಮಾಡಿದ ನ್ಯಾಯಮುಕ್ತಾವಳಿ ಗ್ರಂಥದ ಪ್ರಮೇಯವು ಸುಬ್ಬಾಚಾರ್ಯರಿಗೆ ಅರ್ಥವೇ ಆಗಿಲ್ಲ. ಆದ್ದರಿಂದ ಅವುಗಳ





ಅಭಿಪ್ರಾಯವನ್ನು ವಿಮರ್ಶಾಪೂರ್ವಕವಾಗಿ ಪ್ರಾಚೀನಾಚಾರ್ಯರು ನಿರೂಪಣೆ ಮಾಡಿದ್ದನ್ನೇ ಮುಂದೆ ಸ್ಪಷ್ಟಪಡಿಸಿ ತೋರಿಸಲಾಗುತ್ತದೆ.

## ಅಭಿನವ ಚಂದ್ರಿಕಾಕಾರರ ಅಭಿಪ್ರಾಯ

'ಬಲೀಯಸ್ತ್ವಸಮರ್ಥನಾದಿತಿ । ಪ್ರಧಾನಗತಕಾರ್ಯಜನನಶಕ್ತಿನಿಯಾಮಕತ್ವಸಮರ್ಥನಾದಿತ್ಯರ್ಥಃ । ಲೋಕೇ ಹಿ ದ್ವಿವಿಧಮಂಗಂ ದೃಶ್ಯತೇ । ಕಿಂಚಿತ್ ಪ್ರಧಾನಗತಕಾರ್ಯಜನನಶಕ್ತಿನಿಯಾಮಕಂ ಯಥೋಪನಯನಾದಿ । ತೇನ ವಿನಾ ಪ್ರಧಾನಸ್ಯ ವೇದಾಧ್ಯಯನಸ್ಯ ಕ್ವಾಪಿ ಧರ್ಮಜನಕತ್ವಾಭಾವಾತ್ । ಪ್ರತ್ಯುತಾಧರ್ಮಸ್ಯೈವ ಜನನಾತ್ । ಕಿಂಚಿತ್‌ಸೌಷ್ಠವಾಪಾದಕಂ ಯಥಾ ಪ್ರಾಙ್ಮುಖತ್ವಾದಿ । ತೇನ ವಿನಾಽಪಿ ಧರ್ಮಜನಕತ್ವಾತ್ । ಗುರುಪ್ರದಾನಂ ತು ನ ಪ್ರಾಙ್ಮುಖತ್ವಾದಿವತ್ ಸೌಷ್ಠವಾಪಾದಕಂ, ಕಿಂತೂಪನಯನಾದಿವತ್ ಪ್ರಧಾನಶಕ್ತಿನಿಯಾಮಕಮೇವೇತಿ ಸಮರ್ಥ್ಯತ ಇತಿ ಭಾವಃ ಏತೇನ ಅಂಗಂ ಭವತಿ ಪ್ರಧಾನಾತ್‌ಪ್ರಬಲಂ ಚೇತಿ ವ್ಯಾಹತಮಿತಿ ಪರಾಸ್ತಂ' ಇತ್ಯಾದಿ।- ಅಭಿನವಚಂದ್ರಿಕಾ (ಅಧ್ಯಾಯ 3-3-27-45)

ಅನುವಾದ - ಅಂಗಾಂಗಿಗಳಲ್ಲಿ ಪ್ರಾಬಲ್ಯದೌರ್ಬಲ್ಯಗಳನ್ನು ವಿಚಾರ ಮಾಡುವ ಸಂದರ್ಭದಲ್ಲಿ ಅಭಿನವಚಂದ್ರಿಕಾಕಾರರು ಇದರ ವಿವರಣೆಯನ್ನು ಹೀಗೆ ನೀಡಿದ್ದಾರೆ - ಪ್ರಧಾನದಲ್ಲಿ ಕಾರ್ಯಜನನಶಕ್ತಿ ಕಂಡಿರುತ್ತದೆ. ಈ ಶಕ್ತಿನಿಯಾಮಕತ್ವವು ಹಿಂದೆ ಸ್ಪಷ್ಟವಾಗಿದೆ ಎಂದರ್ಥ. ಲೋಕದಲ್ಲಿ ಅಂಗಗಳನ್ನು ಎರಡು ರೀತಿಯಾಗಿ ವಿಭಾಗ ಮಾಡುತ್ತಾರೆ.

೧) ಪ್ರಧಾನವಾದ ಕಾರ್ಯಜನನ ಶಕ್ತಿಗೆ ನಿಯಾಮಕವಾದದ್ದು, ೨) ಸೌಷ್ಠವಾಪಾದಕವಾದದ್ದು.

ಉದಾ : ೧) ಉಪನಯನ ಮುಂತಾದವುಗಳು ಪ್ರಧಾನವಾದ ಕಾರ್ಯಜನನಶಕ್ತಿಗೆ ನಿಯಾಮಕವಾಗಿವೆ. ಪ್ರಧಾನವಾದದ್ದು ವೇದಾಧ್ಯಯನ. ಈ ವೇದಾಧ್ಯಯನಕ್ಕೆ ಬೇಕಾದ ಸಂಸ್ಕಾರರೂಪವಾದ ಶಕ್ತಿಗೆ ನಿಯಾಮಕವಾದದ್ದು ಉಪನಯನ. ಉಪನಯನ ರೂಪವಾದ ಅಂಗವಿಲ್ಲದೇ ಅಂಗಿಯಾದ ವೇದಾಧ್ಯಯನ ಆಗಲು ಸಾಧ್ಯವಿಲ್ಲ. ಅಂಗವಿಲ್ಲದೇ ಅಂಗಿಯ ಆಚರಣೆ ಮಾಡಿದ ಪಕ್ಷದಲ್ಲಿ ಅಧರ್ಮವೇ ಉಂಟಾಗುತ್ತದೆ.

೨) ಸೌಷ್ಠವಾಪಾದಕವಾದದ್ದೂ ಸಹ ಅಂಗ ಎಂಬುದಾಗಿ ಲೋಕದಲ್ಲಿ ವ್ಯವಹರಿಸಲಾಗುತ್ತದೆ. ವೇದಾಧ್ಯಯನಕ್ಕೆ 'ಪೂರ್ವಕ್ಕೆ ಅಭಿಮುಖವಾಗಿ ಕುಳಿತುಕೊಳ್ಳುವಿಕೆ' ಎಂಬುದು ಒಂದು ಧರ್ಮ. ಇದು ಹಿಂದಿನ ಧರ್ಮದಂತೆ ಅಲ್ಲ. ಪ್ರಾಙ್ಮುಖತ್ವಾದಿಧರ್ಮ ಇಲ್ಲದೇ ಇದ್ದರೂ ಸಹ ಧರ್ಮಜನಕತ್ವವು ವೇದಾಧ್ಯಯನಕ್ಕೆ ಇದೆ. ಆದರೆ ಗುರುಪ್ರಧಾನವು ಪ್ರಾಙ್ಮುಖತ್ವದಂತೆ ಸೌಷ್ಠವಾಪಾದಕವಲ್ಲ, ಕಿಂತು ಉಪನಯನಾದಿಗಳಂತೆ





ಪ್ರಧಾನಶಕ್ತಿಗೆ ನಿಯಾಮಕವೇ ಆಗಿದೆ. ಗುರುಗಳ ಅನುಗ್ರಹವಿಲ್ಲದೇ ಯಾವುದೇ ರೀತಿಯ ಧರ್ಮಸಾಧನತ್ವವು ವೇದಾಧ್ಯಯನಕ್ಕೆ ಇರುವುದಿಲ್ಲ. ಇದರಿಂದ ಅಂಗವು ಪ್ರಧಾನಕ್ಕಿಂತಲೂ ಸಹ ಪ್ರಬಲ ಎಂಬುದು ವ್ಯಾಹತ ಎಂಬ ಅಂಶವನ್ನು ನಿರಾಕರಣೆ ಮಾಡಲಾಗಿದೆ. ಇದು ಅಭಿನವ ಚಂದ್ರಿಕಾಕಾರರ ಅಭಿಪ್ರಾಯ.

## ಅದ್ವೈತಕಾಲಾನಲದ ಸಮ್ಮತಿ ಈ ಅಂಶದಲ್ಲಿ ಹೀಗೆ

'ಪ್ರಧಾನವದೇವ ಹಿ ತದುಕ್ತಮ್' ಇತಿ ಸೂತ್ರೇ ಶ್ರವಣಗುರುಪ್ರದಾನಯೋಃ ಪ್ರಧಾನೇತಿ-ಕರ್ತವ್ಯತಾರೂಪಯೋರ್ಗುರುಪ್ರದಾನಂ ಬಲವದಿತ್ಯುಪಪಾದನಾರ್ಥಂ ತತ್ತ್ವಪ್ರಕಾಶಿಕಾ 'ನ ಚೇತಿಕರ್ತವ್ಯತಾತ್ವೇನ ದೌರ್ಬಲ್ಯಂ, ಯಾಗೀಯಹಿಂಸಾಯಾಮಿತಿಕರ್ತವ್ಯತಾಯಾ ಏವ ಪ್ರಾಬಲ್ಯದರ್ಶನಾತ್' ಇತಿ । ತತ್ರಾಪಿ ಕೋ ವಿರೋಧಃ ? ನ ಹಿ ಕರಣೇತಿಕರ್ತವ್ಯತಯೋಃ ಪ್ರಧಾನಗುಣಭಾವೋऽತ್ರ ಪ್ರಸಿದ್ಧಃ । ಕಿಂತು ನ ಹಿಂಸ್ಯಾತ್ ಸರ್ವಾ ಭೂತಾನಿ' ಇತಿ ಶ್ರುತೇಃ ಪಾಪ-ಸಾಧನಂ ಹಿಂಸೈವ ಪ್ರಧಾನಂ ಕರ್ಮ; ತಚ್ಚ ಯಜ್ಞೇ 'ಪಶುಮಾಲಭೇತ' ಇತಿ ವಿಹಿತತ್ವಾತ್ ಕ್ರಿಯತೇ । ತತ್ರ ಚೋಪಾಕರಣಾದಿಸಂಸ್ಕಾರವಿಶೇಷಃ ತದೀಯಾಂ ಪಾಪಸಾಧನತಾಶಕ್ತಿಂ ಪ್ರತಿಬಧ್ನಾತಿ ।

ಅನುವಾದ – ಪ್ರಧಾನಾಧಿಕರಣದಲ್ಲಿ ಶ್ರವಣ ಹಾಗೂ ಗುರುಪ್ರದಾನಗಳ ಬಗ್ಗೆ ಉಲ್ಲೇಖ ಮಾಡಲಾಗಿದೆ. ಪ್ರಧಾನಕ್ಕೆ ಇತಿಕರ್ತವ್ಯತಾರೂಪವಾದ ಶ್ರವಣವು ಬಲವತ್ತಾಗಿದೆ ಎಂಬುದನ್ನು ಉಪಪಾದನೆ ಮಾಡಲಾಗಿದೆ. ಇಲ್ಲಿ ತತ್ವಪ್ರಕಾಶಿಕೆಯು ಹೀಗೆ ವಿವರಣೆಯನ್ನು ನೀಡುತ್ತಿದೆ. ಕೇವಲ ಇತಿಕರ್ತವ್ಯತಾರೂಪವಾದ್ದರಿಂದ ದೌರ್ಬಲ್ಯವನ್ನು ಚಿಂತನೆ ಮಾಡಬಾರದು. ಏಕೆಂದರೆ ಯಾಗೀಯಹಿಂಸಾದಲ್ಲಿ ಇತಿಕರ್ತವ್ಯತಾ ರೂಪವಾದದ್ದಕ್ಕೇ ಪ್ರಾಬಲ್ಯವು ಕಂಡಿದೆ.

ಈ ಅಂಶದಲ್ಲೂ ಸಹ ಯಾವ ವಿರೋಧವನ್ನು ತಾನೇ ಹೇಳಲು ಸಾಧ್ಯ ? ಕರಣಕ್ಕೂ ಇತಿಕರ್ತವ್ಯಕ್ಕೂ ಎಲ್ಲೂ ಸಹ ಗುಣಗುಣಿಭಾವ ಅಥವಾ ಪ್ರಧಾನ ಅಂಗಭಾವವು ಪ್ರಸಿದ್ಧವಾಗಿಲ್ಲ. ವೇದದಲ್ಲಿ ಯಾವ ಭೂತಗಳನ್ನೂ ಸಹ ಹಿಂಸೆ ಮಾಡಬಾರದು ಎಂಬುದಾಗಿ ಹಿಂಸೆಯು ಪಾಪಕ್ಕೆ ಸಾಧನ ಎಂಬ ಅಂಶವನ್ನು ಉಲ್ಲೇಖ ಮಾಡಲಾಗಿದೆ. ಇದರಲ್ಲಿ ಹಿಂಸೆಯು ಪ್ರಧಾನವಾದ ಕರ್ಮವಾಗಿದೆ. ಯಜ್ಞದಲ್ಲಿ 'ಪಶುಮಾಲಭೇತ' ಎಂಬ ಶ್ರುತಿಯು ಹಿಂಸಾರೂಪವಾದ ಪ್ರಧಾನಕರ್ಮವನ್ನು ವಿಧಾನ ಮಾಡುತ್ತಿದೆ. ಹೀಗೆ ಶ್ರುತಿವಿಹಿತವಾದ್ದರಿಂದ ಪಾಪಸಾಧನ ಎಂದು ಮೇಲ್ನೋಟಕ್ಕೆ ತೋರಿದ ಕರ್ಮವನ್ನು ಮಾಡಲಾಗುತ್ತದೆ. ಆದರೆ ಇಲ್ಲಿ ಉಪಾಕರಣ ಮುಂತಾದ ಸಂಸ್ಕಾರವಿಶೇಷವು ಹಿಂಸೆಯಿಂದ ಆಗುವ ಪಾಪಸಾಧನತ್ವವನ್ನು ಪ್ರತಿಬಂಧನೆ ಮಾಡುತ್ತದೆ. ಲೋಕದಲ್ಲಿ ಪ್ರಾಣಿಗಳನ್ನು ಹಿಂಸೆ ಮಾಡಿದರೆ ಅದರಿಂದ ಪಾಪವು ಬರುತ್ತದೆ. ಆದರೆ ಯಜ್ಞದಲ್ಲಿ ಪಶುವಿನ ಆಲಂಭನೆ ಮಾಡುವಾಗ ಉಪಾಕರಣ ಮುಂತಾದ ಸಂಸ್ಕಾರಗಳನ್ನು ಮಾಡಲಾಗುತ್ತದೆ. ಈ ಸಂಸ್ಕಾರಗಳು ಆ ಹಿಂಸೆಯಿಂದ ಆಗುವ ಪಾಪಸಾಧನತ್ವವನ್ನು ನಿವಾರಿಸಿ ಪುಣ್ಯಸಾಧನತ್ವವನ್ನು ತಂದುಕೊಡುತ್ತವೆ.





ನ ಚ ಯಾಗೇನೈವ ಸಾಽಪೋದಿತೇತಿ ವಾಚ್ಯಂ। ಯಥೋಕ್ತೇತಿಕರ್ತವ್ಯತಾವಿಕಲಸ್ಯ ಯಾಗಸ್ಯ ತದಪವಾದಕತ್ವಾಭಾವಾತ್ ... ಜ್ಯಾಯಸ್ತ್ವೋಕ್ತೇರಪ್ಯಭಿಪ್ರಾಯ ಉಕ್ತಃ। ಪ್ರಧಾನೇನ ಫಲೇ ಜನನೀಯೇ ಉಪಕಾರಕತ್ವಮೇವ ಜ್ಯಾಯಸ್ತ್ವಂ । ತದನುಪಕೃತೇನ ಪ್ರಧಾನಮಾತ್ರೇಣ ಫಲಲೇಶಸ್ಯಾ-ಪ್ಯುತ್ಪಾದಯಿತುಮಶಕ್ಯತ್ವಾತ್। ಯತ್ತ್ವನರೇತಸ್ಯಾಂಗತ್ವೇನಾಪ್ರಾಧಾನ್ಯಂ ಯಾಗಸ್ಯಾಂಗಿತ್ವೇನ ಪ್ರಾಧಾನ್ಯಂ ತದನುಮತಮೇವ .... ಯಥಾ ಹಿ 'ರಾಜಪುರುಷಮಾನಯ' ಇತ್ಯತ್ರ ರಾಜ್ಞೋ ವಿಶೇಷಣತ್ವೇನ ಕ್ರಿಯಾನ್ವಯರಾಹಿತ್ಯೇನಾಪ್ರಧಾನ್ಯೇಽಪಿ ಪುರುಷಂ ಪ್ರತಿ ಸ್ವಾಮಿತಾರೂಪಪ್ರಧಾನ್ಯಸ್ಯ ನ ಹಾನಿಃ। ಪುರುಷಸ್ಯಾಪಿ ವಿಶೇಷ್ಯತ್ವೇನ ಕ್ರಿಯಾನ್ವಯಿತ್ವೇನ ಚ ಪ್ರಾಧಾನ್ಯೇಽಪಿ ಭೃತ್ಯತಾರೂಪಸ್ಯಾಪ್ರಾಧಾನ್ಯಸ್ಯ ನ ಹಾನಿಃ। ತಥಾಽತ್ರ ಕರಣೇತಿಕರ್ತವ್ಯತಾರೂಪಯೋಃ ಪ್ರಾಧಾನ್ಯಾಪ್ರಾಧಾನ್ಯಯೋರ್ನ ಹಾನಿರಿತಿ .... ಟೀಕಾಭಿಪ್ರಾಯಃ। - (ಅದ್ವೈತಕಾಲಾನಲಃ)

ಅನುವಾದ - ಪ್ರಶ್ನೆ - ಸಂಸ್ಕಾರವಿಶೇಷವು ಪಾಪಸಾಧನತ್ವವನ್ನು ಪ್ರತಿಬಂಧನೆ ಮಾಡುತ್ತದೆ ಎಂಬುದನ್ನು ಏಕೆ ಅಂಗೀಕಾರ ಮಾಡಬೇಕು. ಯಾಗವೇ ಪಾಪಸಾಧನತ್ವವನ್ನು ಪ್ರತಿಬಂಧನೆ ಮಾಡುತ್ತದೆಂದು ಏಕೆ ಅಂಗೀಕಾರ ಮಾಡಬಾರದು?

ಉತ್ತರ - ಹಿಂದೆ ಹೇಳಿದಂತೆ ಇತಿಕರ್ತವ್ಯತಾರಹಿತವಾದ ಯಾಗವು ಅಪವಾದಕವಾಗುವುದಿಲ್ಲ. ಆದ್ದರಿಂದ ಇತಿಕರ್ತವ್ಯತಾರೂಪವಾದ ಉಪಾಕರಣಾದಿಸಂಸ್ಕರಣವಿಶೇಷವಿಶಿಷ್ಟವಾದ ಯಾಗವೇ ಪಾಪಸಾಧನ ಶಕ್ತಿಯನ್ನು ಪ್ರತಿಬಂಧನೆ ಮಾಡುತ್ತದೆ ಎಂದು ಅಂಗೀಕರಿಸಬೇಕು.

'ಜ್ಯಾಯಸ್ತ್ವೋಕ್ತೇಃ' ಎಂಬ ಟೀಕಾವಾಕ್ಯದ ಅಭಿಪ್ರಾಯವು ಹೀಗಿದೆ - ಪ್ರಧಾನಫಲವು ಹುಟ್ಟಬೇಕಾದರೆ ಯಾವುದು ಉಪಕಾರಕವೋ ಅದೇ ಜ್ಯಾಯಾನ್ ಎಂಬುದಾಗಿ ಕರೆಸಿಕೊಳ್ಳುತ್ತದೆ. ಅದೇ ಪ್ರಧಾನವಾಗುತ್ತದೆ. ಉಪಕಾರವಾಗದೇ ಇದ್ದಾಗ ಅನುಪಕೃತವಾದ ಕೇವಲ ಪ್ರಧಾನದಿಂದ ಫಲದ ಒಂದು ತುಣುಕೂ ಸಹ ಹುಟ್ಟಲು ಸಾಧ್ಯವಿಲ್ಲ. ಅಂಗವು ಅಪ್ರಧಾನ, ಅಂಗಿಯಾದ ಯಾಗವು ಪ್ರಧಾನ ಎಂಬ ಅಂಶವನ್ನು ಅಂಗೀಕಾರ ಮಾಡುತ್ತೇವೆ. ಇದಕ್ಕೆ ದೃಷ್ಟಾಂತ ಹೀಗಿದೆ – ರಾಜಪುರುಷನನ್ನು ಕರೆದುಕೊಂಡು ಬಾ ಎಂದು ಹೇಳಿದಾಗ ರಾಜನು ವಿಶೇಷಣ. ಆನಯನರೂಪವಾದ ಕ್ರಿಯೆಯಲ್ಲಿ ರಾಜನಿಗೆ ಯಾವುದೇ ರೀತಿಯ ಅನ್ವಯವು ಇರುವುದಿಲ್ಲ. ಆದ್ದರಿಂದ ರಾಜನು ಅಪ್ರಧಾನನಾದರೂ ಸಹ ಪುರುಷನನ್ನು ಕುರಿತು ಪ್ರಾಧಾನ್ಯವು ಇದ್ದೇ ಇದೆ. ಸ್ವಾಮಿತ್ವವೇ ಇಲ್ಲಿ ಪ್ರಧಾನಧರ್ಮ. ಪುರುಷನು ವಿಶೇಷ್ಯನಾದ್ದರಿಂದ ಹಾಗೂ ಕ್ರಿಯೆಯಲ್ಲಿ ಅನ್ವಯವನ್ನು ಹೊಂದುವುದರಿಂದ ಪ್ರಧಾನನಾದರೂ ಭೃತ್ಯನಾದ್ದರಿಂದ ವಸ್ತುತಃ ಅಪ್ರಧಾನನೇ ಆಗಿದ್ದಾನೆ. ಈ ಪ್ರಸಂಗದಲ್ಲಿ ಕರಣಕ್ಕೂ ಇತಿಕರ್ತವ್ಯತ್ವಕ್ಕೂ ಯಾವುದೇ ರೀತಿಯ ಹಾನಿ ಇಲ್ಲ. ಪ್ರಾಧಾನ್ಯಕ್ಕೂ ಅಪ್ರಾಧಾನ್ಯಕ್ಕೂ ಯಾವುದೇ ರೀತಿಯ ಹಾನಿಯಿಲ್ಲ. ಅದರಂತೆ ಪ್ರಕೃತದಲ್ಲೂ ಸಹ ಇತಿಕರ್ತವ್ಯತಾರೂಪವಾದ ವೇದಾದಿಗಳಿಗೂ





ಬ್ರಹ್ಮಮೀಮಾಂಸಾಶಾಸ್ತ್ರಕ್ಕೂ ಗುಣಪ್ರಧಾನ ಭಾವವನ್ನು ಹೇಳಿದಾಗ ಯಾವುದೇ ವಿರೋಧವಿಲ್ಲ ಎಂಬುದು ಈ ಪ್ರಕರಣದ ಅಭಿಪ್ರಾಯ.

## ಇತಿಕರ್ತವ್ಯಕ್ಕೆ ಪ್ರಾಧಾನ್ಯ ಎಂದೂ ಬರುವುದಿಲ್ಲ

ಇತ್ಥಂ ಚ ಕರಣೇತಿಕರ್ತವ್ಯತಯೋಃ ಪ್ರಧಾನಗುಣಭಾವವ್ಯತ್ಯಾಸಂ ವಿನೈವ ಲಿಂಗಭೂಯಸ್ತ್ವಾಧಿ-ಕರಣ ಟೀಕಾಟಪ್ಪಣ್ಯಾದಿವಾಕ್ಯಾನಾಮುಪಪದ್ಯಮಾನತ್ವಾತ್, ತಥೈವ ನೇಯತ್ವಾಚ್ಚ ನೈತದ್ವಾಕ್ಯ-ಬಲಾದಪೀತಿಕರ್ತವ್ಯತಾರೂಪಬ್ರಹ್ಮಸೂತ್ರಸ್ಯ ಪ್ರಾಧಾನ್ಯಂ ಸಿಧ್ಯತಿ।

ಅನುವಾದ – ಹೀಗೆ ಲಿಂಗಭೂಯಸ್ತ್ವಾಧಿಕರಣದ ಟೀಕಾ, ಟಿಪ್ಪಣಿ ಮುಂತಾದ ವಾಕ್ಯಗಳನ್ನು ಸರಿಯಾಗಿ ವಿವೇಕ ಮಾಡಿಕೊಂಡಾಗ ಕರಣ ಹಾಗೂ ಇತಿಕರ್ತವ್ಯತಾಗಳಲ್ಲಿ ಪ್ರಧಾನ ಗುಣಭಾವರೂಪವಾದ ವ್ಯತ್ಯಾಸವನ್ನು ಹೇಳದೆಯೇ, ಅವುಗಳಿಗೆ ಪ್ರಾಧಾನ್ಯ ಅಪ್ರಾಧಾನ್ಯವನ್ನು ಕೂಡಿಸಲು ಬರುತ್ತದೆ. ಇದೇ ರೀತಿಯಾಗಿಯೇ ಇವುಗಳಲ್ಲಿ ಪ್ರಧಾನ ಗುಣಭಾವವನ್ನು ಕೂಡಿಸಲು ಬರುವಾಗ ಈ ವಾಕ್ಯದ ಆಧಾರದಿಂದ ಇತಿಕರ್ತವ್ಯತಾ ರೂಪವಾದ ಬ್ರಹ್ಮಸೂತ್ರಕ್ಕೆ ಪ್ರಾಧಾನ್ಯವನ್ನು ಹೇಳಲು ಸಾಧ್ಯವಿಲ್ಲ.

## 'ಬ್ರಹ್ಮಸೂತ್ರವು ಸರ್ವೋತ್ತಮ ಪ್ರಮಾಣ' ಎಂಬುದಕ್ಕೆ ವ್ಯಾಖ್ಯಾನ

ಯಚ್ಚೋಕ್ತಂ 'ಅತೋ ನೈತಾದೃಶಂ ಕಿಂಚಿತ್‌ಪ್ರಮಾಣತಮಮಿಷ್ಯತೇ' ಇತಿ ಪ್ರಾಮಾಣ್ಯ-ಪ್ರಕಾರಣೋಪಸಂಹಾರವಾಕ್ಯಂ ಬ್ರಹ್ಮಸೂತ್ರಸ್ಯ ಸರ್ವೋತ್ತಮಪ್ರಾಮಾಣ್ಯೇ, ವೇದಾದಪ್ಯುತ್ತಮತ್ವೇ ಪ್ರಮಾಣಮಿತಿ । ತದಪಿ ಸಂದರ್ಭಾಪರಿಜ್ಞಾನನಿಬಂಧನಂ । ತಥಾಹಿ 'ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ । ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್ । ದೃಶ್ಯತೇ ಬ್ರಹ್ಮಸೂತ್ರಾಣಾಮೇಕಧಾಽನ್ಯತ್ರ ಸರ್ವಶಃ। ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ।' ಇತಿ ಹಿ ಪ್ರಕರಣಂ।

ಏವಂ ಚ ಆಪ್ತಿಮೂಲತ್ವಾದಿನಾ ಪ್ರಾಮಾಣ್ಯಂ ಸಾಧಯತಾ ಪೌರುಷೇಯಗ್ರಂಥಪ್ರಾಮಾಣ್ಯ-ಸಾಧನಮೇವೋಪಕ್ರಾಂತಮಿತಿ ಪೌರುಷೇಯಗ್ರಂಥಾನಾಮೇವ ಪ್ರಾಮಾಣ್ಯತಾರತಮ್ಯಪ್ರದರ್ಶನ-ಪರಮಿದಂ ಪ್ರಕರಣಮಿತಿ ಕ್ವ ವೇದಪ್ರಾಮಾಣ್ಯಪ್ರಸಂಗಸ್ಯಾವಸರಃ ?

ಅತ ಏವ 'ನೈಕಾಧಾಽನ್ಯತ್ರ ಸರ್ವಶಃ' ಇತ್ಯನೇನ ಮನುವಾಕ್ಯಾದಿರೂಪಪೌರುಷೇಯ-ಗ್ರಂಥಾನಾಮೇವ ವ್ಯಾವೃತ್ತಿಂ ಪ್ರದರ್ಶ್ಯ ,

ಮಹದಾಪ್ತಿಮೂಲತ್ವಾದಿಮದ್ ಬ್ರಹ್ಮಸೂತ್ರಂ ಪ್ರಮಾಣತಮಮಿತ್ಯಭಿಹಿತಂ ಸುಧಾಯಾಂ, ಇತಿ ಕಥಮಿದಂ ಬ್ರಹ್ಮಸೂತ್ರಸ್ಯ ವೇದೋತ್ತಮತ್ವಂ ಸಾಧಯೇತ್ ?

ಅನುವಾದ - ಪ್ರಶ್ನೆ - ಅನುವ್ಯಾಖ್ಯಾನದಲ್ಲಿ ಬಂದ ಉಪಸಂಹಾರದ ವಾಕ್ಯ ಹೀಗಿದೆ - 'ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ' ಎಂದು. ಈ ವಾಕ್ಯವು ಬ್ರಹ್ಮಸೂತ್ರವು ಸರ್ವೋತ್ತಮಪ್ರಮಾಣ. ವೇದಕ್ಕಿಂತಲೂ ಸಹ ಅತ್ಯುತ್ತಮಪ್ರಮಾಣ ಎನ್ನುವ ವಿಷಯದಲ್ಲಿ ಪ್ರಮಾಣಭೂತವಾಗಿದೆ. ಉಪಸಂಹಾರದ ಪ್ರಕರಣದಲ್ಲಿ ಬಂದ ಈ ವಾಕ್ಯವು ವೇದಕ್ಕಿಂತಲೂ ಸಹ ಬ್ರಹ್ಮಸೂತ್ರಕ್ಕೆ ಪ್ರಾಧಾನ್ಯವನ್ನು ಹೇಳುತ್ತಿದೆಯಲ್ಲವೇ?

ಉತ್ತರ - ಇದೂ ಸಹ ಸರಿಯಲ್ಲ. ಈ ವಾಕ್ಯದ ಸಂದರ್ಭವನ್ನು ತಿಳಿಯದೇ ಆಡಿದ ಮಾತಿದು. ಏಕೆಂದರೆ ಈ ಪ್ರಕರಣವು ಹೀಗೆ ಪ್ರಸ್ತುತವಾಗಿದೆ. ಪ್ರಾಮಾಣ್ಯವು ಮೂರುವಿಧವಾಗಿದೆ. ೧) ಆಪ್ತವಾಕ್ಯತ್ವೇನ ೨) ಶ್ರುತಿಮೂಲತ್ವೇನ , ೩) ಯುಕ್ತಿಮೂಲತ್ವೇನ ಎಂದು . ಈ ಮೂರುವಿಧ ಪ್ರಾಮಾಣ್ಯಗಳಲ್ಲಿ ಕೆಲವು ಸ್ಥಳಗಳಲ್ಲಿ ಆಪ್ತವಾಕ್ಯತ್ವೇನ ಪ್ರಾಮಾಣ್ಯವಿದೆ. ಮತ್ತು ಕೆಲವು ಸ್ಥಳಗಳಲ್ಲಿ ಶ್ರುತಿಮೂಲತ್ವೇನ ಪ್ರಾಮಾಣ್ಯವಿದೆ, ಮತ್ತೆ ಕೆಲವು ಸ್ಥಳಗಳಲ್ಲಿ ಯುಕ್ತಿಮೂಲತ್ವೇನ ಪ್ರಾಮಾಣ್ಯವಿದೆ. ಮತ್ತೆ ಕೆಲವು ಸ್ಥಳಗಳಲ್ಲಿ ಎರಡು ಧರ್ಮಗಳ ಮೂಲಕ ಪ್ರಾಮಾಣ್ಯವಿದೆ. ಆದರೆ ತ್ರಿವಿಧವಾದ ಪ್ರಾಮಾಣ್ಯ ಇರುವುದು ಬ್ರಹ್ಮಸೂತ್ರಕ್ಕೆ ಮಾತ್ರವೇ ಎಂಬುದಾಗಿ ಈ ಪ್ರಕರಣವು ಹೊರಟಿದೆ.

### ಪೌರುಷೇಯಗ್ರಂಥಗಳಲ್ಲಿ ಪ್ರಾಮಾಣ್ಯ ತಾರತಮ್ಯವಷ್ಟೇ ಪ್ರಸಕ್ತವಾಗಿದೆ

ಅತ್ರ ಆಪ್ತಿ-ಶ್ರುತಿ-ಯುಕ್ತಿಮೂಲತ್ವಾತ್ಮಕೈಸ್ತ್ರಿಭಿಃ ಪ್ರಮಾಣೈಃ ಪ್ರಾಮಾಣ್ಯಸಾಧನಂ ಖಲೂಪಕ್ರಾಂತಂ । ಸಾಧಕತಯೋಪನ್ಯಸ್ತಪ್ರಮಾಣಾನಿ ಯತ್ರ ಸಂಭಾವಿತಾನಿ ತೇಷಾಮೇವಾತ್ರ ಪ್ರಾಮಾಣ್ಯಂ ಪ್ರತಿಪಿಪಾದಯಿಷಿತಮಿತ್ಯತ್ರ ನ ವಿವಾದಃ । ಆಪ್ತಿಮೂಲತ್ವಾದಿಪ್ರಮಾಣಾನಿ ಚ ಪೌರುಷೇಯಗ್ರಂಥೇಷ್ವೇವ, ನಾಪೌರುಷೇಯವೇದ ಇತಿ ಚ ಸಂಪ್ರತಿಪನ್ನಂ । ಏವಂ ಚ ಆಪ್ತಿಮೂಲತ್ವಾದಿನಾ ಪ್ರಾಮಾಣ್ಯಂ ಸಾಧಯತಾ ಪೌರುಷೇಯಗ್ರಂಥಪ್ರಾಮಾಣ್ಯಸಾಧನಮೇವೋ-ಪಕ್ರಾಂತಮಿತಿ ಪೌರುಷೇಯಗ್ರಂಥಾನಾಮೇವ ಪ್ರಾಮಾಣ್ಯತಾರತಮ್ಯಪ್ರದರ್ಶನಪರಮಿದಂ ಪ್ರಕರಣ-ಮಿತಿ ಕ್ವ ವೇದಪ್ರಾಮಾಣ್ಯಪ್ರಸಂಗಸ್ಯಾವಸರಃ ? ಅತ ಏವ 'ನೈಕಧಾಽನ್ಯತ್ರ ಸರ್ವಶಃ' ಇತ್ಯನೇನ ಮನುವಾಕ್ಯಾದಿ ರೂಪ ಪೌರುಷೇಯಗ್ರಂಥಾನಾಮೇವ ವ್ಯಾವೃತ್ತಿಂ ಪ್ರದರ್ಶ್ಯ, ಮಹದಾಪ್ತಿ-ಮೂಲತ್ವಾದಿಮದ್‌ಬ್ರಹ್ಮಸೂತ್ರಂ ಪ್ರಮಾಣತಮಮಿತ್ಯಭಿಹಿತಂ ಸುಧಾಯಾಂ, ಇತಿ ಕಥಮಿದಂ ಬ್ರಹ್ಮಸೂತ್ರಸ್ಯ ವೇದೋತ್ತಮತ್ವಂ ಸಾಧಯೇತ್ ?

ಅನುವಾದ - ಪರವಿದ್ಯಾವಿಷಯದ ಪ್ರಸಂಗದಲ್ಲಿ ಆಪ್ತಿಮೂಲತ್ವ , ಶ್ರುತಿಮೂಲತ್ವ , ಯುಕ್ತಿಮೂಲತ್ವ





ಎಂಬ ಮೂರುಬಗೆಯ ಪ್ರಮಾಣಗಳಿಂದ ಪ್ರಾಮಾಣ್ಯಸಾಧನೆ ಮಾಡುವುದೇ ಪ್ರಸಕ್ತವಾಗಿದೆ. ಸಾಧಕವಾಗಿ ಹೇಳಲ್ಪಟ್ಟ ಈ ಮೂರುಬಗೆಯ ಪ್ರಾಮಾಣ್ಯಗಳು ಎಲ್ಲಿ ಸಂಭಾವಿತವಾಗುತ್ತವೋ ಆ ಪ್ರಮಾಣಗಳು ಮಾತ್ರ ಪ್ರಾಮಾಣ್ಯವನ್ನು ಪ್ರತಿಪಾದನೆ ಮಾಡಲು ಅಪೇಕ್ಷಿತವಾಗಿರುತ್ತದೆ. ಈ ವಿಷಯದಲ್ಲಿ ವಿವಾದವಿಲ್ಲ. ಆದ್ದರಿಂದ ಆಪ್ತಿಮೂಲತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವ ಎಂಬ ಪ್ರಮಾಣಗಳು ಪೌರುಷೇಯಗ್ರಂಥಗಳಲ್ಲಷ್ಟೇ ಸಂಭಾವಿತವಾಗಿದೆ. ಅಪೌರುಷೇಯಗ್ರಂಥಗಳಲ್ಲಿ ಸಂಭಾವಿತವಾಗಿರುವುದಿಲ್ಲ. ಅಂಥ ಪೌರುಷೇಯ-ಗ್ರಂಥಗಳಲ್ಲಷ್ಟೇ ಪ್ರಾಮಾಣ್ಯಪ್ರತಿಪಾದನೆಯ ಅಪೇಕ್ಷೆ ಇರುತ್ತದೆ. ಅಪೌರುಷೇಯಗ್ರಂಥಗಳಲ್ಲಿ ಇರುವುದಿಲ್ಲ. ಈ ವಿಷಯವು ಇಬ್ಬರಿಗೂ ಕೂಡ ಸಮ್ಮತವೇ ಆಗಿದೆ. ಆದ್ದರಿಂದ ಆಪ್ತಿಮೂಲತ್ವಾದಿ ಯುಕ್ತಿಗಳಿಂದ ಪ್ರಾಮಾಣ್ಯವನ್ನು ಸಾಧನೆ ಮಾಡಲು ಹೊರಟಾಗ ಪೌರುಷೇಯಗ್ರಂಥ ಪ್ರಾಮಾಣ್ಯಸಾಧನವೇ ಪ್ರಸಕ್ತವಾಗಿದೆ. ಪೌರುಷೇಯಗ್ರಂಥಗಳಲ್ಲಿ ಪ್ರಾಮಾಣ್ಯತಾರತಮ್ಯವನ್ನು ಆ ಗ್ರಂಥಸಂದರ್ಭವು ಹೊರಟಿದೆ. ವೇದ-ಪ್ರಾಮಾಣ್ಯಪ್ರಸಂಗಕ್ಕೆ ಇಲ್ಲಿ ಅವಕಾಶವೇ ಇಲ್ಲ. ಆದ್ದರಿಂದಲೇ 'ನೈಕಥಾऽನ್ಯತ್ರ ಸರ್ವಶಃ' ಎಂಬ ಶ್ರೀಮದಾಚಾರ್ಯರ ಮಾತಿನಿಂದ ಮನುಸ್ಮೃತಿ ಮೊದಲಾದ ಬೇರೆ ಪೌರುಷೇಯ ಗ್ರಂಥಗಳ ವ್ಯಾವೃತ್ತಿಯನ್ನು ತೋರಿಸಲಾಗಿದೆ. ಏಕೆಂದರೆ ಮನುಸ್ಮೃತಿಗಳಿಗಿಂತಲೂ ಹೆಚ್ಚಿನ ಆಪ್ತಿಮೂಲತ್ವಾದಿಗಳು ಬ್ರಹ್ಮಸೂತ್ರಗಳಲ್ಲಿವೆ. ಮನುಸ್ಮೃತಿ ಮೊದಲಾದವುಗಳು ಪ್ರಮಾಣವೆನಿಸಿದರೆ ಬ್ರಹ್ಮಸೂತ್ರಗಳು ಪ್ರಮಾಣತಮ ಎನಿಸುತ್ತವೆ. ಹೀಗೆಯೇ ನ್ಯಾಯಸುಧೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ಪೌರುಷೇಯಗ್ರಂಥಗಳಲ್ಲಿರುವ ತಾರತಮ್ಯವನ್ನು ಪ್ರತಿಪಾದನೆ ಮಾಡಲು ಹೊರಟಿರುವ ಗ್ರಂಥಸಂದರ್ಭವು ಅಪೌರುಷೇಯವೇದದಲ್ಲಿ ಉತ್ತಮ-ಪ್ರಾಮಾಣ್ಯವನ್ನು ಹೇಗೆ ತಾನೆ ಸಾಧಿಸುತ್ತದೆ ?

**ವಿವರಣೆ** – ಈ ಪ್ರಕರಣದಲ್ಲಿ ಪ್ರಾಮಾಣ್ಯದ ಸಾಧನೆಯನ್ನು ಮಾಡಲು ಹೊರಟಿದ್ದಾರೆ. ಆಪ್ತಿಮೂಲಕ, ಶ್ರುತಿಮೂಲಕ, ಯುಕ್ತಿಮೂಲಕ ಎಂದು ಮೂರುವಿಧವಾದ ಪ್ರಮಾಣಗಳಿಂದ ಪ್ರಾಮಾಣ್ಯಸಾಧನೆಯು ಪ್ರಕೃತವಾಗಿದೆ. ಈ ಮೂರೂ ಪ್ರಮಾಣಗಳು ಎಲ್ಲಿ ಸಂಭಾವಿತ-ವಾಗಿದೆಯೋ, ಅಂತಹ ಸ್ಥಳಗಳಲ್ಲಿ ಪ್ರಾಮಾಣ್ಯವನ್ನು ಪ್ರತಿಪಾದನೆ ಮಾಡಬೇಕು ಎಂಬ ವಿಷಯದಲ್ಲಿ ಯಾವುದೇ ವಿವಾದವಿಲ್ಲ. ಆಪ್ತಿಮೂಲತ್ವ, ಶ್ರುತಿಮೂಲತ್ವ, ಯುಕ್ತಿಮೂಲತ್ವ ಎಂಬ ಪ್ರಮಾಣಗಳು ಪೌರುಷೇಯಗ್ರಂಥಗಳ ಪ್ರಾಮಾಣ್ಯದ ವಿಷಯದಲ್ಲಿ ಸಂಭಾವಿತವೇ ಹೊರತು ಅಪೌರುಷೇಯವಾದ ವೇದದ ವಿಷಯದಲ್ಲಿ ಅಲ್ಲ. ಇದು ಇಬ್ಬರೂ ವಾದಿಗಳಿಗೆ ಸಮ್ಮತವಾದ ವಿಷಯ.

ಹೀಗೆ ಆಪ್ತಿಮೂಲತ್ವಾದಿ ಕಾರಣಗಳಿಂದ ಪ್ರಾಮಾಣ್ಯವನ್ನು ಸಾಧನೆ ಮಾಡುವ ಪ್ರಸಂಗದಲ್ಲಿ ಪೌರುಷೇಯ ಗ್ರಂಥದ ಪ್ರಾಮಾಣ್ಯದ ಸಾಧನೆಯು ಪ್ರಸ್ತುತವಾಗಿದೆಯೇ ಹೊರತು ವೇದಪ್ರಾಮಾಣ್ಯದ ಸಾಧನೆಯು ಪ್ರಸ್ತುತವಾಗಿಲ್ಲ. ಆದ್ದರಿಂದ ಯಾವ ಪೌರುಷೇಯ ಗ್ರಂಥಗಳಲ್ಲಿ





ಎರಡು ವಿಧವಾದ, ಮೂರು ವಿಧವಾದ ಅಥವಾ ಒಂದೇ ರೀತಿಯಾದ ಪ್ರಾಮಾಣ್ಯವಿದೆಯೋ ಅವುಗಳಲ್ಲಿ ತಾರತಮ್ಯವನ್ನು ತೋರಿಸಲು ಈ ಪ್ರಕರಣವು ಹೊರಟದೆ. ಆದ್ದರಿಂದ ವೇದ-ಪ್ರಾಮಾಣ್ಯದ ಈ ಪ್ರಕರಣದಲ್ಲಿ ಸಾಂಗತ್ಯವೇ ಇರುವುದಿಲ್ಲ.

ಈ ಕಾರಣದಿಂದಲೇ 'ನೈಕದಾ ಅನ್ಯತ್ರ ಸರ್ವಶಃ' ಎಂಬ ಆಚಾರ್ಯರ ವಾಕ್ಯವು ಬ್ರಹ್ಮಸೂತ್ರವು ಪರಮಪ್ರಮಾಣವಾಗಿದೆ ಎಂಬುದನ್ನು ತಿಳಿಸುತ್ತಿದೆ. ಬ್ರಹ್ಮಸೂತ್ರಕ್ಕೆ ಮನುಸ್ಮೃತಿ ಅಥವಾ ಆಪ್ತವಾಕ್ಯ ಇತ್ಯಾದಿ ಪ್ರಮಾಣಭೂತವಾದ ವಾಕ್ಯಗಳ ದೃಷ್ಟಿಯಿಂದ ಹೆಚ್ಚಿಗೆ ಪ್ರಾಮಾಣ್ಯವಿದೆ. ಇಂಥ ಪೌರುಷೇಯಗ್ರಂಥಗಳನ್ನು ವ್ಯಾವೃತ್ತಿ ಮಾಡಿ ತ್ರಿವಿಧವಾದ ಪ್ರಾಮಾಣ್ಯವು ಕೇವಲ ಬ್ರಹ್ಮಸೂತ್ರದಲ್ಲಿ ಮಾತ್ರವೇ ಹೊರತು ಪೌರುಷೇಯಗ್ರಂಥಗಳಲ್ಲಿ ಇಲ್ಲ ಎಂಬುದನ್ನು ಪ್ರತಿಪಾದಿಸುತ್ತಿದೆ. ಆದ್ದರಿಂದ ಈ ಪ್ರಕರಣವು ಬ್ರಹ್ಮಸೂತ್ರವು ವೇದಕ್ಕಿಂತಲೂ ಸಹ ಉತ್ತಮ ಎಂಬುದನ್ನು ಸಾಧನೆ ಮಾಡಲು ಹೇಗೆ ತಾನೇ ಸಾಧ್ಯ ?

## ಬ್ರಹ್ಮಸೂತ್ರಕ್ಕೆ ಶ್ರುತಿಯು ಉಪಜೀವ್ಯವಾಗಿದೆ

ಕಿಂ ಚಾತ ಇತ್ಯನೇನ ಶ್ರುತಿಸಂವಾದಿತ್ವಘಟಿತಪ್ರಮಾಣತ್ರಯಾವಸಿತಪ್ರಾಮಾಣ್ಯಕತ್ವಮೇವ ಬ್ರಹ್ಮಸೂತ್ರಸ್ಯೋತ್ತಮತ್ವೇ ನಿಮಿತ್ತಮುಕ್ತಂ। ಶ್ರುತಿಸಂವಾದಾಭಾವೇ ಚ ತ್ರಿವಿಧಪ್ರಾಮಾಣ್ಯಾಸಂಭವೇ-ನೋತ್ತಮತ್ವಂ ನ ಸೇತ್ಸ್ಯತೀತಿ ಬ್ರಹ್ಮಸೂತ್ರಪ್ರಾಮಾಣ್ಯೇ ಶ್ರುತಿಪ್ರಾಮಾಣ್ಯಸ್ಯ ಪ್ರಯೋಜಕತ್ವೇನ ಶ್ರುತಿರುಪಜೀವ್ಯೇತ್ಯುಕ್ತಂ ಭವತಿ। ಉಕ್ತಂ ಚ ನ್ಯಾಯಾಮೃತೇ 'ಯತ್ ಪ್ರಾಮಾಣ್ಯಂ ಸ್ವರೂಪಸಿದ್ಧ್ಯರ್ಥಂ ಅಪವಾದನಿರಾಸಾರ್ಥಂ ವಾ ಯತ್ ಪ್ರಾಮಾಣ್ಯಾಯತ್ತಂ ತತ್ತಸ್ಯೋಪಜೀವ್ಯಂ' ಇತಿ । ತಥಾಚ ಬ್ರಹ್ಮತಂತ್ರಂ ಸ್ವೋಪಜೀವ್ಯಭೂತಾಂ ಶ್ರುತಿಮೇವ ಕಥಮಧಃ ಕುರ್ಯಾತ್ ? ವಿಮೃಶಂತು ವಿಮರ್ಶಕಾಃ॥

ಅನುವಾದ - 'ಅತಃ' ಎಂಬ ಪದದಿಂದ ಶ್ರುತಿಸಂವಾದಿತ್ವದಿಂದ ಮೂರು ಪ್ರಮಾಣಗಳಲ್ಲಿ ಪರ್ಯವಸಾನಗೊಳ್ಳುವ ಪ್ರಾಮಾಣ್ಯವು ಬ್ರಹ್ಮಸೂತ್ರದಲ್ಲಿದೆ. ಇಂಥ ಪ್ರಾಮಾಣ್ಯವೇ ಬ್ರಹ್ಮಸೂತ್ರದ ಉತ್ತಮತ್ವಕ್ಕೆ ನಿಮಿತ್ತವಾಗಿದೆ ಎಂದು ಹೇಳಿದ್ದಾರೆ. ಈ ಮೂರರಲ್ಲಿ ಶ್ರುತಿಸಂವಾದವು ಇಲ್ಲದಿದ್ದರೆ ತ್ರಿವಿಧಪ್ರಾಮಾಣ್ಯವೇ ಅಸಂಭಾವಿತವಾಗುತ್ತವೆ. ಆಗ ತನ್ಮೂಲಕವಾದ ಉತ್ತಮತ್ವವೂ ಕೂಡ ಪ್ರಾಪ್ತವಾಗುವುದಿಲ್ಲ. ಹೀಗೆ ಬ್ರಹ್ಮಸೂತ್ರಪ್ರಾಮಾಣ್ಯದಲ್ಲಿ ಶ್ರುತಿಪ್ರಾಮಾಣ್ಯವು ಪ್ರಯೋಜಕವಾಗುತ್ತದೆ. ಅರ್ಥಾತ್ ಶ್ರುತಿಯು ಬ್ರಹ್ಮಸೂತ್ರಗಳಿಗೆ ಉಪಜೀವ್ಯ ಎಂದು ಹೇಳಿದಂತಾಯಿತು. ಯಾವುದು 'ಉಪಜೀವ್ಯ' ಎಂಬುದರ ಬಗ್ಗೆ ನ್ಯಾಯಾಮೃತದ ವಚನ ಹೀಗಿದೆ - 'ಯತ್ ಪ್ರಾಮಾಣ್ಯಂ ಸ್ವರೂಪಸಿದ್ಧ್ಯರ್ಥಂ ಅಪವಾದನಿರಾಸಾರ್ಥಂ ವಾ ಯತ್ಪ್ರಾಮಾಣ್ಯಾಯತ್ತಂ ತತ್ತಸ್ಯೋಪಜೀವ್ಯಂ' ಯಾವುದರ ಪ್ರಾಮಾಣ್ಯವು ತನ್ನ ಸ್ವರೂಪದ ನಿರ್ಧಾರಕ್ಕಾಗಿ ಅಥವಾ ಅಪವಾದ ನಿರಾಸಕ್ಕಾಗಿ ಯಾವ ಪ್ರಾಮಾಣ್ಯದ ಅಧೀನವಾಗಿದೆಯೋ, ಅದು ಅದಕ್ಕೆ ಉಪಜೀವ್ಯ-



ವಾಗಿರುತ್ತದೆ ಎಂದು. ಪ್ರಕೃತ ಬ್ರಹ್ಮಸೂತ್ರದ ಪ್ರಾಮಾಣ್ಯವು ಶ್ರುತಿಪ್ರಾಮಾಣ್ಯದ ಅಧೀನವಾಗಿರುವುದರಿಂದ ಬ್ರಹ್ಮಸೂತ್ರಕ್ಕೆ ಶ್ರುತಿಯು ಉಪಜೀವ್ಯವಾಗಿದೆ. ಹೀಗಿರುವಾಗ ಬ್ರಹ್ಮಸೂತ್ರವು ತನಗೆ ಉಪಜೀವ್ಯವಾದ ಶ್ರುತಿಯನ್ನೇ ತನಗಿಂತ ಕೆಳಗೆ ಹಾಕಲು ಹೇಗೆ ಸಾಧ್ಯ ? ವಿಮರ್ಶಕರೇ ಇದರ ಬಗ್ಗೆ ಆಲೋಚಿಸಿರಿ.

**ವಿವರಣೆ** – ಅನುವ್ಯಾಖ್ಯಾನದಲ್ಲಿ 'ಅತೋ ನೈತಾದೃಶಂ' ಎಂಬ ವಾಕ್ಯದಲ್ಲಿ 'ಅತಃ' ಎಂಬ ಶಬ್ದವನ್ನು ಪ್ರಯೋಗ ಮಾಡಿದ್ದಾರೆ. ಇದರಿಂದ ಬ್ರಹ್ಮಸೂತ್ರವು ಉತ್ತಮ ಎಂಬ ವಿಷಯದಲ್ಲಿ ನಿಮಿತ್ತವನ್ನು ತೋರಿಸಲಾಗಿದೆ. ಶ್ರುತಿಸಂವಾದಿತ್ವದಿಂದ ಕೂಡಿದ ಆಪ್ತಮೂಲಕತ್ವಾದಿ ಮೂರು ಪ್ರಮಾಣಗಳಿಂದ ಸಿದ್ಧವಾದ ಪ್ರಾಮಾಣ್ಯ ಯಾವುದಕ್ಕೆ ಇದೆಯೋ ಅಂತಹ ಬ್ರಹ್ಮಸೂತ್ರವು ಉತ್ತಮ ಎಂಬುದಾಗಿ ಪ್ರಮಾಣತ್ರಯಾವಸಿತಪ್ರಾಮಾಣ್ಯಕತ್ವವು ನಿಮಿತ್ತ ಎಂಬುದನ್ನು ತೋರಿಸಲಾಗಿದೆ. ಒಂದು ವೇಳೆ ಶ್ರುತಿಯ ಸಂವಾದವು ಬ್ರಹ್ಮಸೂತ್ರಗಳಿಗೆ ಇಲ್ಲ ಎಂದಾದರೆ ತ್ರಿವಿಧವಾದ ಪ್ರಾಮಾಣ್ಯವು ಬ್ರಹ್ಮಸೂತ್ರಗಳಿಗೆ ಕೂಡುವುದಿಲ್ಲ. ಆದರಿಂದ ಬ್ರಹ್ಮಸೂತ್ರಕ್ಕೆ ತ್ರಿವಿಧಪ್ರಾಮಾಣ್ಯಪ್ರಯುಕ್ತವಾದ ಉತ್ತಮತ್ವವೂ ಸಹ ಕೂಡುವುದಿಲ್ಲ. ಆದ್ದರಿಂದ ಬ್ರಹ್ಮಸೂತ್ರ ಪ್ರಾಮಾಣ್ಯದ ವಿಷಯದಲ್ಲಿ ಪ್ರಯೋಜಕವಾದದ್ದು ಶ್ರುತಿಯ ಪ್ರಾಮಾಣ್ಯ . ಈ ಕಾರಣದಿಂದ ಶ್ರುತಿಯು ಉಪಜೀವ್ಯ ಎಂಬುದಾಗಿ ಹೇಳಿದಂತಾಗುತ್ತದೆ.

ಈ ವಿಷಯವನ್ನು ನ್ಯಾಯಾಮೃತಕಾರರೂ ಸಹ ಹೇಳಿದ್ದಾರೆ. ಉಪಜೀವ್ಯದ ಲಕ್ಷಣವನ್ನು ಹೇಳುವಾಗ ಯಾವುದು ಯಾವುದಕ್ಕೆ ಉಪಜೀವ್ಯ ಎಂಬುದನ್ನು ಹೀಗೆ ತಿಳಿಯಬೇಕು. ಯಾವುದರ ಪ್ರಾಮಾಣ್ಯವು ಆ ವಸ್ತುವಿನ ಸ್ವರೂಪದ ನಿಶ್ಚಯಕ್ಕೋಸ್ಕರ ಅಥವಾ ಆ ವಸ್ತುವಿನ ಮೇಲೆ ಬರಬಹುದಾದ ಅಪವಾದ (ಸಂಶಯಾದಿಗಳು) ಇವುಗಳನ್ನು ನಿರಾಸ ಮಾಡುವುದಕ್ಕೋಸ್ಕರ ಮತ್ತೊಂದರ ಪ್ರಾಮಾಣ್ಯವನ್ನು ಆಧರಿಸಿದೆಯೋ ಅದು ಅದಕ್ಕೆ ಉಪಜೀವ್ಯ ಎಂಬುದಾಗಿ. ಪ್ರಕೃತದಲ್ಲಿ ಬ್ರಹ್ಮಸೂತ್ರದ ಪ್ರಾಮಾಣ್ಯವು ಶ್ರುತಿ ಪ್ರಾಮಾಣ್ಯದ ಅಧೀನವಾಗಿದೆ. ಶ್ರುತಿಪ್ರಾಮಾಣ್ಯವು ಸಿದ್ಧವಾಗದೇ ಬ್ರಹ್ಮಸೂತ್ರದ ಪ್ರಾಮಾಣ್ಯ ಹಾಗೂ ಬ್ರಹ್ಮಸೂತ್ರದ ಸರ್ವೋತ್ತಮತ್ವ ರೂಪವಾದ ಸ್ವರೂಪವೂ ಸಹ ಸಿದ್ಧವಾಗುವುದಿಲ್ಲ. ಆದ್ದರಿಂದ ಬ್ರಹ್ಮತಂತ್ರಕ್ಕೆ ಶ್ರುತಿಯು ಉಪಜೀವ್ಯ ಎಂದಾಗುತ್ತದೆ. ಇಂತಹ ಬ್ರಹ್ಮತಂತ್ರಸಿದ್ಧಾಂತವು ತನಗೆ ಉಪಜೀವ್ಯವಾದ ಶ್ರುತಿಯನ್ನು ಹೇಗೆ ತಾನೇ ತನಗಿಂತ ಅಧಮ ಎಂದು ಹೇಳೀತು? ಇದನ್ನು ಎಲ್ಲಾ ವಿಮರ್ಶಕರೂ ಸಹ ಸರಿಯಾಗಿ ಪರಾಮರ್ಶೆ ಮಾಡಬೇಕು.

**ಪೂರ್ವಪಕ್ಷಿಗಳೇ ! ಭಾರತಾರ್ಥನಿರ್ಣಯಕ್ಕೆ ಯಾವ ಅಧಿಕರಣ ಹೊರಟಿದೆ ತೋರಿಸಿರಿ !!**

ಯತ್ತು ಭೂಮಿಕಾಯಾಂ VI ಶ್ರುತಿಸಂವಾದಿತ್ವಂ ಚ ಶ್ರುತ್ಯನುಕ್ತಾರ್ಥಪ್ರತಿಪಾದಕ-ಭಾರತಾರ್ಥನಿರ್ಣಾಯಕತ್ವೇನ ಸೂತ್ರಾಣಾಂ ಸರ್ವತ್ರ ನ ಸಂಭವತಿ ಚ' ಇತ್ಯುಕ್ತಂ। ದುರುಕ್ತಂ ತತ್ ।





'ಪುನಸ್ತಸ್ಯಾರ್ಥವಿತ್ತಯೇ ಚಕಾರ ಬ್ರಹ್ಮಸೂತ್ರಾಣಿ' ಇತ್ಯಾದಿ ಬಹುಪ್ರಮಾಣೈಃ ಶ್ರುತ್ಯರ್ಥನಿರ್ಣಯಾಯೈವ ಬ್ರಹ್ಮಸೂತ್ರಪ್ರಣಯನಸ್ಯಾವಗಮಾತ್ । ಕಿಂಚ ತ್ರಯೋವಿಂಶತ್ಯಧಿಕದ್ವಿಶತಾಧಿಕರಣತಯಾ ವಿಭಕ್ತೇ ಬ್ರಹ್ಮತಂತ್ರೇ ನೈಕಸ್ಯಾಪ್ಯಧಿಕರಣಸ್ಯ ಶ್ರುತ್ಯತಿರಿಕ್ತಂ ವಿಷಯವಾಕ್ಯಂ ಪ್ರಾದರ್ಶಿ ಭಾಷ್ಯೇ । ಸರ್ವತ್ರಾಪಿ ಶ್ರುತಿರೇವ ವಿಷಯವಾಕ್ಯತಯಾ ಉದಾಹೃತೇತಿ ಸರ್ವೇಷಾಮೇವಾಧಿಕರಣಾನಾಂ ಶ್ರುತ್ಯರ್ಥ-ನಿರ್ಣಾಯಕತ್ವಂ ಸ್ಫುಟಮೇವ । ಅಥಾಪಿ ಶ್ರುತಿಸಂವಾದಿತ್ವಸ್ಯ ಕ್ವಾಚಿತ್ಕತಾಂ ವದಸಿ ಚೇತ್ ಶ್ರುತ್ಯರ್ಥಾನಿರ್ಣಾಯಕಂ ಕೇವಲಮಹಾಭಾರತಾರ್ಥನಿರ್ಣಯಾಯೈವ ಪ್ರವೃತ್ತಂ ಕಿಂಚಿದಧಿಕರಣಂ ಶೃಂಗಗ್ರಾಹಿಕಯಾ ಪ್ರದರ್ಶ್ಯ ಸಫಲೀಕುರು ತ್ವದೀಯಂ ಮನೋರಥಂ ; ನಹಿ ಪ್ರತಿಜ್ಞಾಮಾತ್ರೇಣೇಷ್ಟಸಿದ್ಧಿಃ

ಕಿಂಚೈವಂ ಸತಿ ಆಚಾರ್ಯೋಕ್ತಶ್ರುತಿಸಂವಾದಿತ್ವಘಟಿತತ್ರಿವಿಧಪ್ರಾಮಾಣ್ಯವತ್ವಹೇತೋಸ್ತ್ವದುಕ್ತ-ಕೇವಲಶ್ರುತ್ಯತಿರಿಕ್ತಾರ್ಥನಿರ್ಣಾಯಕಸೂತ್ರಭಾಗೇಽಸಿದ್ಧ್ಯಾ, ತೇನ ಪ್ರಮಾಣಮತ್ವಸಾಧನಮಪಿ ದೂಷಿತಂ ಸ್ಯಾದಿತಿ ಮೂಲೋಚ್ಛೇದಾಪತ್ತೇಃ ವೃದ್ಧಿಮಿಚ್ಛತೋ ಮೂಲಹಾನಿರಿತಿ ನ್ಯಾಯಾಪಾತಃ।

ಅನುವಾದ - ಪೂರ್ವಪಕ್ಷಕಾರರ ಗ್ರಂಥದ ಭೂಮಿಕೆಯಲ್ಲಿ ಹೀಗೆ ಹೇಳಿದ್ದಾರೆ. ಶ್ರುತಿಸಂವಾದಿತ್ವವು ಎಲ್ಲಾ ಅಧಿಕರಣಗಳಿಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಶ್ರುತಿಯಲ್ಲಿ ಹೇಳದೇ ಇರುವ ಮಹಾಭಾರತದಲ್ಲಿ ಹೇಳಲ್ಪಟ್ಟ ಅರ್ಥನಿರ್ಣಾಯಕತ್ವವು ಕೆಲವು ಅಧಿಕರಣಗಳಲ್ಲಿದೆ ಎಂದು.

ಇದು ಸರಿಯಲ್ಲ. 'ಪುನಸ್ತಸ್ಯಾರ್ಥವಿತ್ತಯೇ ಚಕಾರ ಬ್ರಹ್ಮಸೂತ್ರಾಣಿ' ಇತ್ಯಾದಿ ಅದೇ ಪ್ರಮಾಣಗಳನ್ನು ಆಲೋಚನೆ ಮಾಡಿದಾಗ ಬ್ರಹ್ಮಸೂತ್ರಗಳು ಶ್ರುತ್ಯರ್ಥನಿರ್ಣಾಯಕ್ಕೋಸ್ಕರವೇ ಹೊರಟದೆ ಎಂಬುದು ಮನದಟ್ಟಾಗುತ್ತದೆ. ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿರುವ ೨೨೩ ಅಧಿಕರಣಗಳಲ್ಲಿ ಒಂದೇ ಒಂದು ಅಧಿಕರಣವೂ ಕೂಡ ಶ್ರುತ್ಯತಿರಿಕ್ತವಾದ ವಿಷಯವಾಕ್ಯವನ್ನು ಹೊಂದಿದೆ ಎಂದು ಭಾಷ್ಯದಲ್ಲಿ ಹೇಳಿರುವುದಿಲ್ಲ. ಪ್ರತಿಯೊಂದು ಅಧಿಕರಣಗಳಲ್ಲೂ ಶ್ರುತಿವಾಕ್ಯಗಳೇ ವಿಷಯವಾಗಿವೆ ಎಂಬುದಾಗಿ ಉದಾಹರಿಸಿದ್ದಾರೆ. ಆದ್ದರಿಂದ ಎಲ್ಲಾ ಅಧಿಕರಣಗಳಿಗೂ ಶ್ರುತ್ಯರ್ಥನಿರ್ಣಾಯಕತ್ವವು ಸ್ಫುಟವಾಗಿ ಗೋಚರಿಸುತ್ತಿದೆ. ಇಷ್ಟಾದರೂ ಶ್ರುತಿಸಂವಾದಿತ್ವವು ಕೆಲವೆಡೆ ಮಾತ್ರ ಎಂದು ಹೇಳುವುದಾದರೆ ಶ್ರುತ್ಯರ್ಥವನ್ನು ನಿರ್ಣಯ ಮಾಡದಿರುವ ಕೇವಲ ಮಹಾಭಾರತಾರ್ಥವನ್ನು ನಿರ್ಣಯ ಮಾಡಲು ಹೊರಟಿರುವ ಒಂದೇ ಒಂದು ಅಧಿಕರಣವನ್ನು ಶೃಂಗಗ್ರಾಹಿಕಯಾ ತೋರಿಸಿರಿ. ತನ್ಮೂಲಕ ನಿಮ್ಮ ಮನೋರಥವನ್ನು ಸಫಲವನ್ನಾಗಿ ಮಾಡಿಕೊಳ್ಳಿರಿ. ಪ್ರತಿಜ್ಞೆ ಮಾಡಿದ ಮಾತ್ರಕ್ಕೆ ಅರ್ಥಸಿದ್ಧವು ಆಗುವುದಿಲ್ಲವಷ್ಟೇ.

ಮತ್ತೊಂದು ದೋಷ - ಶ್ರೀಮದಾಚಾರ್ಯರು ಶ್ರುತಿಸಂವಾದಿತ್ವದಿಂದ ಸೇರಿದ ತ್ರಿವಿಧ ಪ್ರಾಮಾಣ್ಯವನ್ನು ಬ್ರಹ್ಮಸೂತ್ರಗಳಿಗೆ ಸಮರ್ಥಿಸಿದ್ದಾರೆ. ಈ ತ್ರಿವಿಧಪ್ರಾಮಾಣ್ಯವೆಂಬ ಹೇತುವು ನೀವು ಹೇಳಿದ ಶ್ರುತ್ಯತಿ-







ರಿಶ್ರುತ್ಯರ್ಥನಿರ್ಣಾಯಕ ಸೂತ್ರಭಾಗದಲ್ಲಿ ಇರುವುದಿಲ್ಲ. ಆದ್ದರಿಂದ ಭಾಗಾಸಿದ್ಧಿ ದೋಷವು ಬರುತ್ತದೆ. ಇದರಿಂದ ಪ್ರಮಾಣತಮತ್ವವನ್ನು ಬ್ರಹ್ಮಸೂತ್ರಗಳಿಗೆ ಸಾಧನೆ ಮಾಡಿದಂತಾಗಲಿಲ್ಲ. ತನ್ಮೂಲಕ ಮೂಲಕ್ಷತಿದೋಷವು ಪ್ರಾಪ್ತವಾಯಿತು. ಬ್ರಹ್ಮಸೂತ್ರಗಳಿಗೆ ಅಧಿಕಪ್ರಾಮಾಣ್ಯದ ಮೂಲಕ ವೃದ್ಧಿಯನ್ನು ಅಪೇಕ್ಷಿಸುವ ನಿಮಗೆ ಬುಡವೇ ಬಿದ್ದುಹೋಯಿತು. 'ವೃದ್ಧಿಮಿಚ್ಛತಃ ಮೂಲಹಾನಿಃ' ಎಂಬ ನ್ಯಾಯಕ್ಕೆ ವಿಷಯರಾದಿರಿ.

**ವಿವರಣೆ –** ಪೂರ್ವಪಕ್ಷದ ಗ್ರಂಥದಲ್ಲಿ ಭೂಮಿಕಾ ಪ್ರಸಂಗದಲ್ಲಿ ಈ ವಾಕ್ಯವನ್ನು ಪ್ರಯೋಗ ಮಾಡಿದ್ದಾರೆ. ಶ್ರುತಿಸಂವಾದಿ ಎಂದರೆ ಶ್ರುತಿಯಲ್ಲಿ ಹೇಳದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವ ಭಾರತಕ್ಕೆ ಸಮ್ಮತವಾದ ಅರ್ಥವನ್ನು ಬ್ರಹ್ಮಸೂತ್ರಗಳು ನಿರ್ಣಯ ಮಾಡುವುದರಿಂದ ಇಂತಹ ನಿರ್ಣಾಯಕತ್ವವು ಎಲ್ಲಾ ಸ್ಥಳಗಳಲ್ಲೂ ಸಹ ಯುಕ್ತವಾಗುವುದಿಲ್ಲ ಎಂಬುದಾಗಿ. ಈ ವಾಕ್ಯವನ್ನು ಸಹನೆ ಮಾಡಲು ಸಾಧ್ಯವಿಲ್ಲ. ಬ್ರಹ್ಮಸೂತ್ರರಚನೆಯ ಉದ್ದೇಶವೇ ಶ್ರುತಿಯ ಅರ್ಥವನ್ನು ನಿರ್ಣಯ ಮಾಡುವುದು. ಬ್ರಹ್ಮಸೂತ್ರಭಾಷ್ಯದಲ್ಲಿ ಸ್ಕಂದಪುರಾಣದ ವಾಕ್ಯದ ಆಧಾರವನ್ನು ಕೊಟ್ಟು 'ಪುನಃ ತಸ್ಯಾರ್ಥವಿತ್ತಯೇ ಚಕಾರ ಬ್ರಹ್ಮಸೂತ್ರಾಣಿ' 'ಮತ್ತೆ ವೇದದ ಅರ್ಥಜ್ಞಾನಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ವೇದವ್ಯಾಸರು ರಚಿಸಿದರು' ಎಂಬುದಾಗಿ. ಇದೇ ಮೊದಲಾದ ಅನೇಕ ಪ್ರಮಾಣಗಳನ್ನು ನೀಡಿ ಬ್ರಹ್ಮಸೂತ್ರದ ರಚನೆಗೆ ಪ್ರಯೋಜನವನ್ನು ಶ್ರುತ್ಯರ್ಥನಿರ್ಣಯವೇ ಎಂದು ನಿಶ್ಚಯಿಸಲಾಗಿದೆ. ಆದ್ದರಿಂದ ಶ್ರುತಿಯಲ್ಲಿ ಹೇಳದೇ ಇರುವ ಅರ್ಥವನ್ನು ಪ್ರತಿಪಾದನೆ ಮಾಡುವ ಭಾರತದ ಅರ್ಥವನ್ನು ಬ್ರಹ್ಮಸೂತ್ರಗಳು ಮಾಡುತ್ತವೆ ಇತ್ಯಾದಿ ಮಾತುಗಳು ಪರಸ್ಪರ ಅಸಂಗತವಾಗುತ್ತದೆ.

ಬ್ರಹ್ಮತಂತ್ರವು ಇನ್ನೂರ ಇಪ್ಪತ್ತೂರು ಅಧಿಕರಣಗಳಾಗಿ ವಿಭಾಗಿಸಲಾಗಿದೆ. ಇದರಲ್ಲಿ ಯಾವುದೇ ಅಧಿಕರಣದಲ್ಲೂ ಸಹ ವಿಷಯವಾಕ್ಯವನ್ನು ತೋರಿಸುವಾಗ ವೇದವಾಕ್ಯದ ಹೊರತಾಗಿ ಬೇರೆ ವಿಷಯವಾಕ್ಯಗಳು ಪ್ರಸ್ತುತವಾಗಿಲ್ಲ. ಹೀಗಾಗಿ ಎಲ್ಲಾ ಅಧಿಕರಣಗಳಲ್ಲೂ ಸಹ ಇಡೀ ಬ್ರಹ್ಮತಂತ್ರ ಸಿದ್ಧಾಂತದಲ್ಲಿ ವಿಷಯವಾಕ್ಯವಾಗಿ ಉದಾಹರಣೆ ಮಾಡಲ್ಪಟ್ಟಿದ್ದು ಶ್ರುತಿಯೇ. ಆದ್ದರಿಂದ ಎಲ್ಲಾ ಅಧಿಕರಣಗಳೂ ಸಹ ಶ್ರುತ್ಯರ್ಥನಿರ್ಣಾಯಕವೇ ಎಂಬುದು ಅತ್ಯಂತ ಸ್ಪಷ್ಟವಾಗಿದೆ.

ಒಂದು ವೇಳೆ ಕೆಲವೊಮ್ಮೆ ಮಾತ್ರ ಕೆಲವು ಸ್ಥಳಗಳಲ್ಲಿ ಮಾತ್ರವೇ ಶ್ರುತಿಸಂವಾದಿತ್ವವನ್ನು ಹೇಳಬೇಕು ಎಂದು ಪೂರ್ವಪಕ್ಷದವರು ಹೇಳಿದರೆ ಆಗ ಶ್ರುತ್ಯರ್ಥವನ್ನು ನಿರ್ಣಯ ಮಾಡದೇ ಕೇವಲ ಮಹಾಭಾರತದ ಅರ್ಥವನ್ನು ನಿರ್ಣಯ ಮಾಡುವುದಕ್ಕೋಸ್ಕರವೇ ಹೊರಟ ಯಾವುದೇ ಒಂದು ಅಧಿಕರಣವನ್ನು ತೋರಿಸಬೇಕು. ಹಸುವನ್ನು ತೋರಿಸುವಾಗ ಕೊಂಬು ಹಿಡಿದು ಇದು ಹಸು ಎಂದು ತೋರಿಸುವಂತೆ ಈ ಅಧಿಕರಣದಲ್ಲಿ ಮಹಾಭಾರತದ ಅರ್ಥನಿರ್ಣಯ ಮಾತ್ರವೇ ಇದೆ, ಶ್ರುತ್ಯರ್ಥದ ನಿರ್ಣಯವು ಇಲ್ಲ ಎಂಬುದನ್ನು ಪೂರ್ವಪಕ್ಷಿಯು ತೋರಿಸಿ ಅವನ ಮನೋರಥವನ್ನು ಸಫಲವನ್ನಾಗಿ ಮಾಡಿಕೊಳ್ಳಬಹುದು. ಆದರೆ ಯಾವುದೇ ಅಧಿಕರಣವೂ ಸಹ



ಪ್ರಸಕ್ತವಾಗಿಲ್ಲ. ಕೇವಲ ಪ್ರತಿಜ್ಞೆ ಮಾತ್ರದಿಂದಲೇ ಪೂರ್ವಪಕ್ಷಿಯ ಮನೋರಥವು ಸಿದ್ಧವಾಗುವುದಿಲ್ಲ.

ಈ ಪಕ್ಷಕ್ಕೆ ಮತ್ತೊಂದು ದೋಷವು ಇದೆ. ಬ್ರಹ್ಮಸೂತ್ರಗಳು ಶ್ರುತಿಯಿಂದ ಭಿನ್ನವಾದ ಮತ್ತೊಂದು ವಸ್ತುವಿನ ನಿರ್ಣಯವನ್ನು ಮಾಡುತ್ತದೆ ಎಂದು ಹೇಳಿದರೆ ಆಚಾರ್ಯರು ಹೇಳಿದ ತ್ರಿವಿಧಪ್ರಾಮಾಣ್ಯವು ಬರುವುದಿಲ್ಲ. ಶ್ರುತಿಸಂವಾದಿತ್ವವನ್ನೂ ಸಹ ಸೇರಿಸಿ ತ್ರಿವಿಧಪ್ರಾಮಾಣ್ಯವು ಬ್ರಹ್ಮಸೂತ್ರಗಳಿಗೆ ಇದೆ ಎಂದು ಅನುವ್ಯಾಖ್ಯಾನದಲ್ಲಿ ಉಪಪಾದನೆ ಮಾಡಿದ್ದಾರೆ. ಒಂದು ವೇಳೆ ಕೇವಲ ಶ್ರುತ್ಯತಿರಿಕ್ತವಾದ ಅರ್ಥನಿರ್ಣಾಯಕತ್ವವು ಬ್ರಹ್ಮಸೂತ್ರಕ್ಕೆ ಒಪ್ಪಿದರೆ ಭಾಗಾಸಿದ್ಧಿರೂಪವಾದ ದೋಷ ಬರುತ್ತದೆ. ಅದರಿಂದ ಬ್ರಹ್ಮಸೂತ್ರವನ್ನು ಪ್ರಮಾಣತಮ ಎಂದು ಸಾಧನೆ ಮಾಡಿದ್ದೂ ಸಹ ಸಂಗತವಾಗುವುದಿಲ್ಲ. ಅಂತತಃ ಬ್ರಹ್ಮಸೂತ್ರಕ್ಕೆ ಅತ್ಯುತ್ತಮ ಪ್ರಾಮಾಣ್ಯದ ವಿಷಯಕ್ಕೆ ಕೊಡಲಿಯನ್ನು ಹಾಕಿದಂತಾಗುತ್ತದೆ. ಆದ್ದರಿಂದ ಮರವನ್ನು ಬೆಳೆಸಲು ಇಚ್ಛಿಸುವ ವ್ಯಕ್ತಿ ಅದಕ್ಕೆ ನೀರು ಹಾಕುವ ಬದಲು ಮರದ ಬುಡಕ್ಕೆ ಕೊಡಲಿಯನ್ನು ಹಾಕಿದರೆ ಹೇಗೋ ಹಾಗೆ ಬ್ರಹ್ಮಸೂತ್ರದ ಪ್ರಾಮಾಣ್ಯವನ್ನು ಹೇಳಲು ಹೊರಟವರು ಬ್ರಹ್ಮಸೂತ್ರದ ಮಹತ್ವವನ್ನು ಸಾಧಿಸುವುದರ ಬದಲಿಗೆ ಪ್ರಾಮಾಣ್ಯವನ್ನೇ ನಾಶ ಮಾಡುತ್ತಿದ್ದಾರೆ.

## ವಾಕ್ಯಾರ್ಥಚಂದ್ರಿಕೆಯ ವಾಕ್ಯಗಳು ನಮಗೆ ವಿರುದ್ಧವಾಗಿಲ್ಲ

ಯತ್ತು ಬ್ರಹ್ಮಸೂತ್ರಸ್ಯೈವಾಸಂಕುಚಿತಸರ್ವಶಾಸ್ತ್ರೋತ್ತಮತ್ವೇ ಸಾಧಕತ್ವೇನೋಪನ್ಯಸ್ತಂ ವಾಕ್ಯಾರ್ಥಚಂದ್ರಿಕಾವಾಕ್ಯಜಾತಂ ತದಪ್ಯಸಾಧಕಮೇವ; ಪ್ರತ್ಯುತಾಸ್ಮದುಕ್ತನಿರ್ಣಾಯಕ-ಶಾಸ್ತ್ರೋತ್ತಮತ್ವಮೇವ ದ್ರಢಯತಿ। ತಥಾಹಿ :- 'ಏಕಲ್ಪೇನ ಭಗವದ್ವಾಚಕೇಷ್ವಪಿ ಋಗಾದಿಷು ಯದಾ ತದಾಶಬ್ದಪ್ರಯೋಗಾದುಪಕಾರಕವಿಶೇಷಸಾಹಿತ್ಯ-ತದಭಾವ-ವಿವಕ್ಷಾಯಾಃ ಸೂಚಿತತ್ವಾದುಪಕೃತಾನಾಂ ಪರವಿದ್ಯಾತ್ವೇ ಪರಿಶೇಷಣೇಯೋಪಕಾರಕಪ್ರಾಧಾನ್ಯವಿವಕ್ಷಯಾ ಪ್ರಸಕ್ತಪ್ರತಿಷೇಧೇನ ಪರಿಶೇಷೋ ನಾನುಪಪನ್ನ ಇತ್ಯಾಹ 'ಋಗಾದ್ಯಾ' ಇತಿ' ಇತಿ । ನಾತ್ರ ತ್ವದಭಿಮತೋಪಕಾರಕಸ್ಯೈವ ಪರವಿದ್ಯಾತ್ವಾಭಿಧಾಯಕಂ ಕಿಂಚಿತ್ ಶ್ರೂಯತೇ। 'ಉಪಕೃತಾನಾಂ ಪರವಿದ್ಯಾತ್ವೇ' ಇತ್ಯನೇನೋ-ಪಕೃತಸ್ಯಾಪಿ ಪರವಿದ್ಯಾತ್ವಾಭಿಧಾನಾತ್। ಬ್ರಹ್ಮತಂತ್ರಸ್ಯೋಪಕಾರಕಪ್ರಧಾನ್ಯವಿವಕ್ಷಯಾ ಪರವಿದ್ಯಾತ್ವಂ ತೂಕ್ತಂ। ನೈತಾವತಾ ತಸ್ಯೈವ ಪರವಿದ್ಯಾತ್ವಮಿತಿ ಗ್ರಂಥಾಶಯಃ। ನ ಹಿ ವಿವಕ್ಷಾಧೀನಂ ತತ್ವಂ ; ವ್ಯವಹಾರಃ ಪರಂ ವಿವಕ್ಷಯಾ ನಿರ್ವೋಢುಂ ಶಕ್ಯಃ। ತಥಾಹಿ :- ಋಗಾದೀನಾಮೇವ ಪರವಿದ್ಯಾತ್ವಾತ್ ಬ್ರಹ್ಮತಂತ್ರಂ ಪರವಿದ್ಯೇತ್ಯಾಚಾರ್ಯೈಃ ಕಥಮುಕ್ತಮಿತಿ ಸಂಭಾವಿತಾಶಂಕಾ-ಪರಿಹಾರಾಯೋಪಕಾರಕಪ್ರಧಾನ್ಯ-ವಿವಕ್ಷಯಾ ಬ್ರಹ್ಮತಂತ್ರಮಪಿ ಉಕ್ತರೀತ್ಯಾ ಪರವಿದ್ಯೇತ್ಯಾಚಾರ್ಯಾಶಯಾವಿಷ್ಕರಣಮೇವೈತದ್ವಾಕ್ಯ-ಸಂದರ್ಭಾಶಯಃ । ಸ್ಪಷ್ಟೀಕೃತಂ ಚಾನುಪದಮೇವ । 'ನನ್ವೇವಂ ತರ್ಹಿ ವಸ್ತುತ ಉಪಕೃತಸ್ಯ



ಋಗಾದೇರನುಪಕೃತಋಗಾದ್ಯಪೇಕ್ಷಯಾ ಪರವಿದ್ಯಾತ್ವಂ ಸಿದ್ಧ್ಯೇತ್, ನ ತೂಪಕಾರಕಪ್ರಧಾನ್ಯ-ವಿವಕ್ಷಾಮಾತ್ರೇಣ ಭವದಭಿಮತಮುಪಕಾರಕಸ್ಯೈವ ಪರವಿದ್ಯಾತ್ವಮಿತ್ಯಾಶಂಕಾಂ ಸಯುಕ್ತಿಕ-ಮನಂಗೀಕಾರೇಣ ಪರಿಹರತಿ' ಇತ್ಯುತ್ತರವಾಕ್ಯೇನ ।

ಅನುವಾದ - ಪೂರ್ವಪಕ್ಷಿಗಳ ಮತ್ತೊಂದು ಸಮರ್ಥನೆ ಹೀಗಿದೆ - ಬ್ರಹ್ಮಸೂತ್ರವೇ ಸಂಕುಚಿತವಾದ ಸರ್ವಶಾಸ್ತ್ರೋತ್ತಮವಾಗಿದೆ ಎಂಬ ವಿಷಯದಲ್ಲಿ ವಾಕ್ಯಾರ್ಥಚಂದ್ರಿಕೆಯಲ್ಲಿರುವ ವಾಕ್ಯಗಳ ಸಮೂಹವನ್ನು ಸಾಧಕವನ್ನಾಗಿ ಹೇಳಿರುತ್ತಾರೆ. ಆದರೆ ಇದೂ ಕೂಡ ಅಸಾಧಕವೇ ಆಗಿದೆ. ವಿಪರೀತವಾಗಿ ನಾವು ಹೇಳುವ ನಿರ್ಣಾಯಕಶಾಸ್ತ್ರೋತ್ತಮತ್ವವನ್ನೇ ದೃಢಪಡಿಸುತ್ತಿದೆ. ಅದು ಹೀಗೆ - ಭಗವದ್ವಾಚಕವಾದ ಋಗಾದಿಗಳು ಯಾವಾಗ ಬ್ರಹ್ಮಸೂತ್ರಗಳ ಸಹಾಯವನ್ನು ಹೊಂದಿರುತ್ತವೋ, ಆಗ ಪರವಿದ್ಯೆಯೆನಿಸುತ್ತವೆ. ಯಾವಾಗ ಬ್ರಹ್ಮಸೂತ್ರಗಳ ಸಹಾಯ ಹೊಂದಿರುವುದಿಲ್ಲವೋ, ಆಗ ಅಪರವಿದ್ಯೆಯೆನಿಸುತ್ತವೆ. 'ಯದಾ' ಮತ್ತು 'ತದಾ' ಎಂಬ ಶಬ್ದಪ್ರಯೋಗವನ್ನು ಮಾಡಿರುವುದರಿಂದ ಉಪಕಾರವಿಶೇಷಸಾಹಿತ್ಯ ಮತ್ತು ತದಭಾವಗಳ ವಿವಕ್ಷೆಯನ್ನು ಸೂಚಿಸಲಾಗಿದೆ. ಹೀಗೆ ಉಪಕೃತವಾದ ಋಗಾದಿ ವೇದಗಳು ಪರವಿದ್ಯೆಯನಿಸಿದಾಗ ಅದಕ್ಕೆ ಉಪಕಾರಿಯಾದ ಬ್ರಹ್ಮಸೂತ್ರಗಳು ಮುಖ್ಯಪರವಿದ್ಯೆಯೆಂದು ಕರೆಸಿಕೊಳ್ಳುತ್ತವೆ. ಪರಿಶೇಷಪ್ರಮಾಣದಿಂದ ಋಗಾದಿಗಳಿಗೆ ಪರವಿದ್ಯಾತ್ವವು ಯುಕ್ತವಾಗುವುದಿಲ್ಲ ಎಂದು ಪೂರ್ವಪಕ್ಷ ಮಾಡಿಕೊಂಡು 'ಋಗಾದ್ಯಾಃ' ಎಂಬುದರಿಂದ ಉತ್ತರಿಸಲಾಗಿದೆ.

ಈ ವಾಕ್ಯಾರ್ಥಚಂದ್ರಿಕೆಯ ವಾಕ್ಯಗಳನ್ನು ಗಮನಿಸಿದಾಗ ನಿಮಗೆ ಅಭಿಪ್ರೇತವಾದ ಉಪಕಾರಕವೆನಿಸಿದ ಬ್ರಹ್ಮಸೂತ್ರವೇ ಪರವಿದ್ಯೆಯಾಗಿದೆ ಎಂದು ಹೇಳುವ ಯಾವುದೇ ವಾಕ್ಯಗಳು ವಾಕ್ಯಾರ್ಥಚಂದ್ರಿಕೆಯಲ್ಲಿ ಕೇಳಿಸುತ್ತಿಲ್ಲ. 'ಉಪಕೃತಾನಾಂ ಪರವಿದ್ಯಾತ್ವೇ' ಎಂಬ ವಾಕ್ಯದಿಂದ ಉಪಕೃತವಾದ ವೇದಗಳಿಗೂ ಕೂಡ ಪರವಿದ್ಯಾತ್ವವನ್ನು ಹೇಳಿದ್ದಾರೆ. ಬ್ರಹ್ಮತಂತ್ರಕ್ಕೆ ಉಪಕಾರಕಪ್ರಾಧಾನ್ಯವಿವಕ್ಷೆಯಿಂದ ಪರವಿದ್ಯಾತ್ವವನ್ನು ಹೇಳಿರುವುದು ಸತ್ಯ . ಅಂದಮಾತ್ರಕ್ಕೆ ಬ್ರಹ್ಮಸೂತ್ರಕ್ಕೆ ಮಾತ್ರ ಪರವಿದ್ಯಾತ್ವವಿದೆ ಎಂಬುದು ಗ್ರಂಥಕಾರರ ಅಭಿಪ್ರಾಯವಲ್ಲ. ತತ್ವವು ನಿಮ್ಮ ವಿವಕ್ಷಾಧೀನವಲ್ಲ. ವ್ಯವಹಾರವನ್ನು ವಿವಕ್ಷೆಗೆ ಅನುಗುಣವಾಗಿ ನಿರ್ವಹಿಸಬೇಕು. ಪ್ರಕೃತ ಋಗಾದಿಗಳೇ ಪರವಿದ್ಯೆಯಾಗಿರುವುದರಿಂದ ಬ್ರಹ್ಮಸೂತ್ರವನ್ನು ಪರವಿದ್ಯೆಯೆಂದು ಆಚಾರ್ಯರು ಹೇಗೆ ಹೇಳಿದರು ? ಎಂದು ಪ್ರಶ್ನಿಸಿದರೆ ಸಂಭಾವಿತವಾದ ಆಶಂಕೆಯ ಪರಿಹಾರಕ್ಕೋಸ್ಕರ ಉಪಕಾರಕಪ್ರಾಧಾನ್ಯವಿವಕ್ಷೆಯಿಂದ ಬ್ರಹ್ಮತಂತ್ರವೂ ಕೂಡ ಹಿಂದೆ ಹೇಳಿದಂತೆ ಪರವಿದ್ಯೆಯಾಗಿದೆ ಎಂಬುದು ಆಚಾರ್ಯರ ಅಭಿಪ್ರಾಯವಾಗಿದೆ. ಇದನ್ನು ಆವಿಷ್ಕಾರ ಮಾಡುವುದಕ್ಕಾಗಿ ಈ ವಾಕ್ಯಸಂದರ್ಭವು ಹೊರಟಿದೆ. ಈ ವಿಷಯವನ್ನು ಮುಂದಿನ ವಾಕ್ಯಗಳಲ್ಲೇ ಸ್ಪಷ್ಟಮಾಡಿದ್ದಾರೆ - ಆ ಮುಂದಿನ ವಾಕ್ಯಸಂದರ್ಭ ಹೀಗಿದೆ - 'ನನ್ವೇವಂ ತರ್ಹಿ ವಸ್ತುತ ಉಪಕೃತಸ್ಯ ಋಗಾದೇರನುಪಕೃತಋಗಾದ್ಯಪೇಕ್ಷಯಾ ಪರವಿದ್ಯಾತ್ವಂ ಸಿದ್ಧ್ಯೇತ್, ನ

ತೂಪಕಾರಕಪ್ರಧಾನ್ಯವಿವಕ್ಷಾಮಾತ್ರೇಣ ಭವದಭಿಮತಮುಪಕಾರಕಸ್ಯೈವ ಪರವಿದ್ಯಾತ್ವಮಿತ್ಯಾಶಂಕಾಂ ಸಯುಕ್ತಿಕಮನಂಗೀಕಾರೇಣ ಪರಿಹರತಿ' ವಾಸ್ತವಿಕವಾಗಿ ಉಪಕೃತವಾದ ಋಗಾದಿಗಳಿಗೆ ಅನುಪಕೃತವಾದ ಋಗಾದಿಗಳಿಗಿಂತ ಪರವಿದ್ಯಾತ್ವವು ಇರುತ್ತದೆ ಎಂದು ಹೇಳುತ್ತಿದ್ದೀರಿ. ಉಪಕಾರಕ ಪ್ರಧಾನ್ಯವಿವಕ್ಷಾಮಾತ್ರದಿಂದ ನಿಮಗೆ ಅಭಿಮತವಾದ ಉಪಕಾರಕಕ್ಕೆ ಮುಖ್ಯವಾದ ಪರವಿದ್ಯಾತ್ವವಿದೆ ಎಂಬುದು ಕೂಡುವುದಿಲ್ಲ ಎಂಬ ಆಶಂಕೆಯನ್ನು ಯುಕ್ತಿಬದ್ಧವಾಗಿ ಅಂಗೀಕಾರ ಮಾಡದೇ ಪರಿಹಾರ ಮಾಡುತ್ತಿದ್ದಾರೆ. ಈ ಮುಂದಿನ ವಾಕ್ಯದಿಂದ ನಾವು ಹೇಳಿದ ವಿಷಯವು ಸಾಧುವೆಂದು ಸ್ಪಷ್ಟವಾಗುತ್ತದೆ.

**ವಿವರಣೆ** – ಬ್ರಹ್ಮಸೂತ್ರವು ಅಸಂಕುಚಿತವಾದ ಸರ್ವಶಾಸ್ತ್ರಗಳಿಗಿಂತಲೂ ಸಹ ಉತ್ತಮ ಎನ್ನುವ ವಿಷಯದಲ್ಲಿ ವಾಕ್ಯಾರ್ಥಚಂದ್ರಿಕಾ ವಾಕ್ಯಗಳನ್ನು ಪ್ರಮಾಣವನ್ನಾಗಿ ನೀಡಲಾಗಿದೆ. ಆದರೆ ಈ ವಾಕ್ಯಗಳು ಪ್ರಕೃತ ಅರ್ಥಕ್ಕೆ ಸಾಧಕವಾಗಿಲ್ಲ. ಹೊರತಾಗಿ ನಾವು ಹೇಳಿದ ಅರ್ಥವನ್ನೇ ಬ್ರಹ್ಮಸೂತ್ರಕ್ಕೆ ದೃಢ ಮಾಡಿಸುತ್ತದೆ. ನಿರ್ಣಾಯಕವಾದ ಸರ್ವಶಾಸ್ತ್ರಗಳಿಗಿಂತಲೂ ಸಹ ಬ್ರಹ್ಮಸೂತ್ರವು ಉತ್ತಮ ಎಂಬ ಅಂಶವು ಈ ರೀತಿ ವಾಕ್ಯಗಳನ್ನು ವಿವೇಕ ಮಾಡಿಕೊಂಡಾಗ ಸ್ಪಷ್ಟವಾಗುತ್ತದೆ.

ಋಗಾದಿವಾಕ್ಯಗಳು ವೈಕಲ್ಪಿಕವಾಗಿ ಭಗವಂತನನ್ನು ಹೇಳುತ್ತವೆ ಮತ್ತು ಹೇಳುವುದಿಲ್ಲ ಎಂಬುದನ್ನು ಒಪ್ಪಿದರೆ ಋಗಾದಿ ವಾಕ್ಯಗಳು ಉಪಕೃತವಾದಾಗ ಪರವಿದ್ಯಾ ಎಂದಾಗುತ್ತದೆ. ಶಬ್ದಪ್ರಯೋಗವು ಉಪಕಾರಕವಾದ ಋಗಾದಿಗಳನ್ನು ಸೇರಿಸಿಕೊಂಡಾಗ ಉಪಕಾರವಿಶೇಷ ಸಹಿತವಾದಾಗ ಹಾಗೂ ಉಪಕಾರ ವಿಶೇಷ ಸಹಿತವಾಗದೇ ಇದ್ದಾಗ ಉಪಕೃತವಾದದ್ದು ಪರವಿದ್ಯಾ , ಉಪಕೃತವಾಗದೇ ಇದ್ದದ್ದು ಪರವಿದ್ಯಾ ಆಗುವುದಿಲ್ಲ ಎಂಬ ಪ್ರಶ್ನೆಯನ್ನು ಮಾಡಿಕೊಂಡು ಉಪಕಾರಕ ಪ್ರಾಧಾನ್ಯವನ್ನು ಅಂಗೀಕಾರ ಮಾಡಿ ಪ್ರಸಕ್ತವಾದಂತಹ ಅಂಶವನ್ನು ನಿರಾಕರಣೆ ಮಾಡಿ ಪರಿಶೇಷತಃ ಋಗಾದಿಗಳಿಗೆ ಪರವಿದ್ಯಾತ್ವವು ಯುಕ್ತವಲ್ಲ ಎಂಬ ಅಂಶವನ್ನೂ ಸಹ ಪೂರ್ವಪಕ್ಷ ಮಾಡಿಕೊಂಡು ಅದಕ್ಕೆ ಉತ್ತರವಾಗಿ 'ಋಗಾದ್ಯಾಃ' ಎಂಬ ಆಥರ್ವಣಭಾಷ್ಯದ ವಾಕ್ಯವು ಹೊರಟಿದೆ ಎಂದು ವಾಕ್ಯಾರ್ಥಚಂದ್ರಿಕಾದಲ್ಲಿ ಹೇಳಿದ್ದಾರೆ. ಆದರೆ ಮೇಲೆ ಹೇಳಿದ ವಾಕ್ಯಾರ್ಥಚಂದ್ರಿಕಾದ ವಾಕ್ಯಗಳಲ್ಲಿ ಉಪಕಾರಕ್ಕೆ ಪರವಿದ್ಯಾತ್ವವನ್ನು ಹೇಳುವ ಯಾವ ಶಬ್ದವೂ ಸಹ ಇಲ್ಲ. ಈ ವಾಕ್ಯಜಾತದಲ್ಲಿ 'ಉಪಕೃತಾನಾಂ ಪರವಿದ್ಯಾತ್ವೇ' ಎಂಬ ಶಬ್ದವಿದೆ. ಇದು ಉಪಕೃತವಾದದ್ದು ಪರವಿದ್ಯಾ ಎಂಬುದನ್ನು ತಿಳಿಸುತ್ತಿದೆ. ಬ್ರಹ್ಮತಂತ್ರಕ್ಕೆ ಉಪಕಾರಕಪ್ರಾಧಾನ್ಯ ವಿವಕ್ಷೆಯಿಂದ ಪರವಿದ್ಯಾ ಎಂಬುದನ್ನು ಹಿಂದೆ ಹೇಳಲಾಗಿದೆ. ಇಷ್ಟು ಮಾತ್ರದಿಂದ ಕೇವಲ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವ ಇದೆ ಎಂದು ಗ್ರಂಥಕಾರರ ಅಭಿಪ್ರಾಯವಲ್ಲ. ಶಬ್ದಪ್ರಯೋಗ ಮಾಡಿದಾಗ ಶಬ್ದ ಪ್ರಯೋಗದ ಹಿಂದಿನ ವ್ಯವಹಾರವು ಯಾವ ಸಿದ್ಧಾಂತವನ್ನು ಮೂಲತತ್ವವನ್ನು ಅಪೇಕ್ಷಿಸಿ ಹೊರಟಿದೆಯೋ ಅದಕ್ಕೆ ಅನುಗುಣವಾಗಿ ಅದರ ಅರ್ಥವನ್ನು ನಿರ್ವಾಹ ಮಾಡಬೇಕು. ವಸ್ತುಸ್ಥಿತಿಯು ಅವರವರ ವಿವಕ್ಷೆಗೆ ಅಧೀನವಾದದ್ದಲ್ಲ. ಅದರಂತೆ ವ್ಯವಹಾರವನ್ನೂ ಸಹ ವಿವಕ್ಷೆಯಿಂದ ಮಾಡಬೇಕಾಗಿದೆ. ಪ್ರಕೃತದಲ್ಲಿ ಈ ವಾಕ್ಯದ





ಸಂದರ್ಭದ ಅಭಿಪ್ರಾಯವು ಹೀಗಿದೆ. ಋಗಾದಿಗಳೇ ಪರವಿದ್ಯಾ ಆದಕಾರಣ ಬ್ರಹ್ಮಸೂತ್ರಗಳು ಪರವಿದ್ಯಾ ಎಂಬುದಾಗಿ ಆಚಾರ್ಯರು ಹೇಗೆ ಹೇಳಿದರು? ಎಂಬ ಶಂಕೆಗೆ ಪರಿಹಾರ ರೂಪವಾಗಿ ಬ್ರಹ್ಮಸೂತ್ರವೂ ಸಹ ಪರವಿದ್ಯಾ ಆಗುತ್ತದೆ. ಅದಕ್ಕೆ ಕಾರಣ ಉಪಕಾರಪ್ರಾಧಾನ್ಯವನ್ನು ಇಲ್ಲಿ ಅಂಗೀಕಾರ ಮಾಡಲಾಗಿದೆ ಎಂಬುದಾಗಿ ಇದು ಶ್ರೀಮದಾಚಾರ್ಯರ ಅಭಿಪ್ರಾಯ ಎಂಬುದನ್ನು ತಿಳಿಸಲು ಈ ಪ್ರಕರಣ ಹೊರಟಿದೆ. ಈ ವಿಷಯವು ಮುಂದಿನ ವಾಕ್ಯದಲ್ಲಿ ಮತ್ತೂ ಸ್ಪಷ್ಟವಾಗುತ್ತದೆ. ಸುಧಾವಾಕ್ಯಗಳು ಈ ಅಭಿಪ್ರಾಯವನ್ನು ಕೊಡುತ್ತಿದೆ.

ಪ್ರಶ್ನೆ – ಹಾಗಾದರೆ ವಸ್ತುತಃ ಉಪಕೃತವಾದ ಋಗಾದಿಗಳು ಅನುಪಕೃತವಾದ ಋಗಾದಿಗಳಿಗಿಂತ ಭಿನ್ನವಾದರೆ ಆ ಋಗಾದಿಗಳಿಗೆ ಪರವಿದ್ಯಾತ್ವವು ಸಿದ್ಧವಾಗುವುದಿಲ್ಲ. ಉಪಕಾರಕ ಪ್ರಾಧಾನ್ಯವನ್ನು ಇಟ್ಟುಕೊಳ್ಳದೇ ಉಪಕಾರಕಕ್ಕೇ ಪರವಿದ್ಯಾತ್ವವನ್ನು ಹೇಗೆ ಹೇಳುವುದು? ಎಂಬ ಪ್ರಶ್ನೆಯನ್ನು ಅಂಗೀಕಾರ ಮಾಡದೇ ಅದಕ್ಕೆ ಉತ್ತರವನ್ನು ಯುಕ್ತಿಯುಕ್ತವಾಗಿ ನೀಡುತ್ತಿದ್ದಾರೆ. ಈ ವಾಕ್ಯಾರ್ಥಚಂದ್ರಿಕಾ ವಾಕ್ಯದಿಂದ ಮೇಲೆ ಹೇಳಿದ ಅರ್ಥವು ಸ್ಪಷ್ಟವಾಗುತ್ತದೆ.

## ವಾಕ್ಯಾರ್ಥರತ್ನಮಾಲಾದಲ್ಲಿ ವ್ಯಾಕ್ಯಾರ್ಥಚಂದ್ರಿಕೆಯ ಅಭಿಪ್ರಾಯ

**ಕಿಂಚೈತದರ್ಥಕತಯೈವ ವ್ಯಾಖ್ಯಾತಶ್ಚಾಯಂ ಗ್ರಂಥಸಂದರ್ಭಃ ಪೂರ್ವಾಚಾರ್ಯೈರೇವೇತಿ ನೇದಂ ತತ್ಕಲ್ಪಸಾಧಕಂ। ತಥಾಹಿ:-**

**'ಪ್ರಸಕ್ತಪ್ರತಿಷೇಧೇನೇತಿ। ಪ್ರಸಕ್ತಪ್ರತಿಷೇಧಕರಣೇನ; ಋಗಾದಿಕಂ ಪರವಿದ್ಯಾಶಬ್ದೋಕ್ತಂ ನೇತಿ ಪ್ರಸಕ್ತಪ್ರತಿಷೇಧಸ್ಯೋಪಕಾರಕಪ್ರಧಾನ್ಯವಿವಕ್ಷಯಾ ಕರಣೇನೇತಿ ಯಾವತ್'। - (ವಾಕ್ಯಾರ್ಥರತ್ನಮಾಲಾ - ವಾಕ್ಯಾರ್ಥಚಂದ್ರಿಕಾವ್ಯಾಖ್ಯಾ, ಲಿಖಿತಾ ಸಿ. 938 (ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು)**

ಅನುವಾದ – ಈ ಪ್ರಸಂಗದ ವ್ಯಾಖ್ಯಾನಗಳನ್ನು ನೋಡುವಾಗ ವಾಕ್ಯಾರ್ಥಚಂದ್ರಿಕಾ ವ್ಯಾಖ್ಯಾನವಾದ ವಾಕ್ಯಾರ್ಥ ರತ್ನಮಾಲಾಕಾರರು ಈ ವಿಷಯವನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸಿ ಪೂರ್ವಪಕ್ಷಿಗಳು ಹೇಳಿದ ಅಭಿಪ್ರಾಯವು ಅವರಿಗೆ ಸಮ್ಮತವಲ್ಲ ಅನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

ವಾಕ್ಯಸಂದರ್ಭವು ಹೀಗಿದೆ – 'ಪ್ರಸಕ್ತ ಪ್ರತಿಷೇಧೇನ' ಎಂಬುದರ ವ್ಯಾಖ್ಯಾನವನ್ನು ಮಾಡುವಾಗ ಋಗಾದಿಗಳು ಪರವಿದ್ಯಾ ಶಬ್ದದಿಂದ ವಾಚ್ಯವಲ್ಲ ಎಂಬುದು ಯಾವ ಕಾರಣದಿಂದ ? ಎಂಬ ಪ್ರಶ್ನೆಗೆ ಪ್ರಸಕ್ತ ಪ್ರತಿಷೇಧೇನ ಎಂಬುದು ಉತ್ತರವಾಗಿದೆ. ಇದರ ಅಭಿಪ್ರಾಯ ಹೀಗಿದೆ – ಪ್ರಸಕ್ತಪ್ರತಿಷೇಧವು ಉಪಕಾರಕ ಪ್ರಾಧಾನ್ಯ ವಿವಕ್ಷೆಯಿಂದ ಎಂಬ ಕಾರಣದಿಂದ ಹೊರಟಿದೆ ಎಂಬುದಾಗಿ.





## ಉಪಕಾರಕವು ಅಪ್ರಧಾನ ಎನ್ನಲು ದೃಷ್ಟಾಂತ

ಉಕ್ತಂ ಚ ವಿವಕ್ಷಾಯಾ ವ್ಯವಹಾರಮಾತ್ರನಿರ್ವಾಹಕತ್ವಂ ಪ್ರಮಾಣಪದ್ಧತೌ 'ತತ್ರಾವಾಂತರವ್ಯಾಪಾರಪ್ರಾಧಾನ್ಯವಿವಕ್ಷಯಾಽರ್ಥೇಂದ್ರಿಯಸನ್ನಿಕರ್ಷಃ ಪ್ರತ್ಯಕ್ಷಮಿತ್ಯುಚ್ಯತೇ । ಕ್ವಚಿತ್ತು ಧರ್ಮಿಪ್ರಧಾನ್ಯವಿವಕ್ಷಯಾ ಸ್ವಸ್ವವಿಷಯಸನ್ನಿಕೃಷ್ಟಮಿಂದ್ರಿಯಂ ಪ್ರತ್ಯಕ್ಷಮಿತ್ಯುಚ್ಯತೇ' ಇತಿ । ಏವಂಚ ವಿವಕ್ಷಾಭೇದೇನ ವ್ಯವಹಾರಭೇದೇಽಪಿ ನ ತತ್ತ್ವವೈಪರೀತ್ಯಂ। ಅಸ್ಮನ್ಮತೇ ಇಂದ್ರಿಯಮೇವ ಪ್ರಧಾನಂ, ಕರಣಂ ಚ। ಸನ್ನಿಕರ್ಷೋಽವಾಂತರವ್ಯಾಪಾರೋಽಪ್ರಧಾನ ಏವೇತಿ ತತ್ತ್ವಮ್ ।

ಅನುವಾದ - ಪ್ರಮಾಣಪದ್ಧತಿಯಲ್ಲೂ ಸಹ ಟೀಕಾಕಾರರು ವಿವಕ್ಷಾಭೇದವು ವ್ಯವಹಾರಕ್ಕೆ ಮಾತ್ರವೇ ಕಾರಣ ಹೊರತು ಅದರ ಮೂಲಸ್ವರೂಪದ ದ್ವೈವಿಧ್ಯಕ್ಕೆ ಕಾರಣವಲ್ಲ ಎಂಬ ಅಂಶವನ್ನು ಬೇರೊಂದು ಪ್ರಸಂಗದಲ್ಲಿ ತಿಳಿಸಿಕೊಟ್ಟಿದ್ದಾರೆ.

ಪ್ರತ್ಯಕ್ಷದ ವಿಷಯವನ್ನು ಹೇಳುವಾಗ ಅವಾಂತರ ವ್ಯಾಪಾರವನ್ನು ಪ್ರಧಾನವಾಗಿ ತೆಗೆದುಕೊಂಡಾಗ ಪದಾರ್ಥ ಹಾಗೂ ಇಂದ್ರಿಯಗಳ ಸನ್ನಿಕರ್ಷವನ್ನೇ ಪ್ರತ್ಯಕ್ಷ ಎಂಬುದಾಗಿ ಕರೆಯುತ್ತೇವೆ. ಮತ್ತೆ ಕೆಲವು ಕಡೆ ಧರ್ಮಿಯನ್ನು ಪ್ರಧಾನ ಎಂದು ತೆಗೆದುಕೊಂಡಾಗ ಇಂದ್ರಿಯವನ್ನು ಪ್ರತ್ಯಕ್ಷ ಎಂಬುದಾಗಿ ಕರೆಯುತ್ತೇವೆ. ಇಂದ್ರಿಯವು ಸನ್ನಿಕೃಷ್ಟವಾದ ವಿಷಯಗಳನ್ನು ಗ್ರಹಣ ಮಾಡುವುದರಿಂದ ವಿಷಯಸನ್ನಿಕೃಷ್ಟವಾದ ಇಂದ್ರಿಯವೇ ಪ್ರತ್ಯಕ್ಷ ಎಂದು ಇಲ್ಲಿ ಸ್ಪಷ್ಟವಾಗುತ್ತದೆ. ಹೀಗೆ ವಿವಕ್ಷಾಭೇದದಿಂದ ವ್ಯವಹಾರಗಳು ಭಿನ್ನಭಿನ್ನವಾದರೂ ಸಹ ತತ್ತ್ವದಲ್ಲಿ ಯಾವುದೇ ರೀತಿಯ ವ್ಯತ್ಯಾಸವು ಇಲ್ಲ. ಒಂದೆಡೆ ಸನ್ನಿಕರ್ಷವನ್ನು ಪ್ರತ್ಯಕ್ಷ ಎಂದು, ಇನ್ನೊಂದೆಡೆ ಇಂದ್ರಿಯವನ್ನು ಪ್ರತ್ಯಕ್ಷ ಎಂದು ಕರೆದರೂ ಸಹ ಮೂಲತತ್ತ್ವಕ್ಕೆ ಯಾವುದೇ ರೀತಿಯ ವ್ಯತ್ಯಾಸವು ಇರುವುದಿಲ್ಲ. ನಮ್ಮ ಸಿದ್ಧಾಂತದಂತೆ ಇಂದ್ರಿಯವೇ ಪ್ರಧಾನವಾದದ್ದು, ಕರಣವೂ ಸಹ ಆಗಿದೆ. ಸನ್ನಿಕರ್ಷವು ಅವಾಂತರ ವ್ಯಾಪಾರ ಹಾಗೂ ಅಪ್ರಧಾನವಾದದ್ದು. ಇದೇ ದೃಷ್ಟಾಂತವನ್ನು ಪ್ರಕೃತದಲ್ಲೂ ಸಹ ತೋರಿಸಬಹುದು. ಉಪಕಾರಕವಾದದ್ದು ಅಪ್ರಧಾನ, ಉಪಕೃತವಾದದ್ದು ಪ್ರಧಾನ ಎಂಬುದಾಗಿ.

## ಪೂರ್ವಪಕ್ಷಿಗಳಿಗೆ ಅನುಗ್ರಾಹಕವಾಗದ ಬ್ರಹ್ಮಸೂತ್ರ ಪ್ರಮಾಣವೇ ಅಲ್ಲ

ಯದಪಿ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಸರ್ವದಾ ಪರವಿದ್ಯಾತ್ವಮೇವ । ಋಗಾದೀನಾಂ ತು ದಶಾಭೇದೇನೇತಿ ಬ್ರಹ್ಮತಂತ್ರಮಾಹಾತ್ಮ್ಯವರ್ಣನಪ್ರಸಂಗೇ 'ಋಗಾದೀನಾಂ ಕರ್ಮಪ್ರತಿಪಾದಕತ್ವದಶಾಯಾಂ ಬ್ರಹ್ಮಸೂತ್ರಾಣಾಮನನುಗ್ರಾಹಕತ್ವಾತ್, ಅನನುಗ್ರಾಹಕತ್ವದಶಾಯಾಂ ಚ ಬ್ರಹ್ಮಸೂತ್ರಾಣಾಂ ಪ್ರಾಮಾಣ್ಯಮೇವ ನಾಸ್ತಿ....ವಿದ್ಯಾತ್ವದಶಾಯಾಂ ಸರ್ವದಾ ಪರವಿದ್ಯಾತ್ವರೂಪಮಹಿಮಾ





ಸಂದರ್ಭದ ಅಭಿಪ್ರಾಯವು ಹೀಗಿದೆ. ಋಗಾದಿಗಳೇ ಪರವಿದ್ಯಾ ಆದಕಾರಣ ಬ್ರಹ್ಮಸೂತ್ರಗಳು ಪರವಿದ್ಯಾ ಎಂಬುದಾಗಿ ಆಚಾರ್ಯರು ಹೇಗೆ ಹೇಳಿದರು? ಎಂಬ ಶಂಕೆಗೆ ಪರಿಹಾರ ರೂಪವಾಗಿ ಬ್ರಹ್ಮಸೂತ್ರವೂ ಸಹ ಪರವಿದ್ಯಾ ಆಗುತ್ತದೆ. ಅದಕ್ಕೆ ಕಾರಣ ಉಪಕಾರಪ್ರಾಧಾನ್ಯವನ್ನು ಇಲ್ಲಿ ಅಂಗೀಕಾರ ಮಾಡಲಾಗಿದೆ ಎಂಬುದಾಗಿ ಇದು ಶ್ರೀಮದಾಚಾರ್ಯರ ಅಭಿಪ್ರಾಯ ಎಂಬುದನ್ನು ತಿಳಿಸಲು ಈ ಪ್ರಕರಣ ಹೊರಟಿದೆ. ಈ ವಿಷಯವು ಮುಂದಿನ ವಾಕ್ಯದಲ್ಲಿ ಮತ್ತೂ ಸ್ಪಷ್ಟವಾಗುತ್ತದೆ. ಸುಧಾವಾಕ್ಯಗಳು ಈ ಅಭಿಪ್ರಾಯವನ್ನು ಕೊಡುತ್ತಿದೆ.

ಪ್ರಶ್ನೆ – ಹಾಗಾದರೆ ವಸ್ತುತಃ ಉಪಕೃತವಾದ ಋಗಾದಿಗಳು ಅನುಪಕೃತವಾದ ಋಗಾದಿಗಳಿಗಿಂತ ಭಿನ್ನವಾದರೆ ಆ ಋಗಾದಿಗಳಿಗೆ ಪರವಿದ್ಯಾತ್ವವು ಸಿದ್ಧವಾಗುವುದಿಲ್ಲ. ಉಪಕಾರಕ ಪ್ರಾಧಾನ್ಯವನ್ನು ಇಟ್ಟುಕೊಳ್ಳದೇ ಉಪಕಾರಕಕ್ಕೇ ಪರವಿದ್ಯಾತ್ವವನ್ನು ಹೇಗೆ ಹೇಳುವುದು? ಎಂಬ ಪ್ರಶ್ನೆಯನ್ನು ಅಂಗೀಕಾರ ಮಾಡದೇ ಅದಕ್ಕೆ ಉತ್ತರವನ್ನು ಯುಕ್ತಿಯುಕ್ತವಾಗಿ ನೀಡುತ್ತಿದ್ದಾರೆ. ಈ ವಾಕ್ಯಾರ್ಥಚಂದ್ರಿಕಾ ವಾಕ್ಯದಿಂದ ಮೇಲೆ ಹೇಳಿದ ಅರ್ಥವು ಸ್ಪಷ್ಟವಾಗುತ್ತದೆ.

## ವಾಕ್ಯಾರ್ಥರತ್ನಮಾಲಾದಲ್ಲಿ ವ್ಯಾಕ್ಯಾರ್ಥಚಂದ್ರಿಕೆಯ ಅಭಿಪ್ರಾಯ

**ಕಿಂಚೈತದರ್ಥಕತಯೈವ ವ್ಯಾಖ್ಯಾತಶ್ಚಾಯಂ ಗ್ರಂಥಸಂದರ್ಭಃ ಪೂರ್ವಾಚಾರ್ಯೈರೇವೇತಿ ನೇದಂ ತತ್ಪಕ್ಷಸಾಧಕಂ। ತಥಾಹಿ:-**

**'ಪ್ರಸಕ್ತಪ್ರತಿಷೇಧೇನೇತಿ। ಪ್ರಸಕ್ತಪ್ರತಿಷೇಧಕರಣೇನ; ಋಗಾದಿಕಂ ಪರವಿದ್ಯಾಶಬ್ದೋಕ್ತಂ ನೇತಿ ಪ್ರಸಕ್ತಪ್ರತಿಷೇಧಸ್ಯೋಪಕಾರಕಪ್ರಧಾನ್ಯವಿವಕ್ಷಯಾ ಕರಣೇನೇತಿ ಯಾವತ್'। - (ವಾಕ್ಯಾರ್ಥರತ್ನಮಾಲಾ - ವಾಕ್ಯಾರ್ಥಚಂದ್ರಿಕಾವ್ಯಾಖ್ಯಾ, ಲಿಖಿತಾ ಸಿ. 938 (ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು)**

ಅನುವಾದ – ಈ ಪ್ರಸಂಗದ ವ್ಯಾಖ್ಯಾನಗಳನ್ನು ನೋಡುವಾಗ ವಾಕ್ಯಾರ್ಥಚಂದ್ರಿಕಾ ವ್ಯಾಖ್ಯಾನವಾದ ವಾಕ್ಯಾರ್ಥ ರತ್ನಮಾಲಾಕಾರರು ಈ ವಿಷಯವನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸಿ ಪೂರ್ವಪಕ್ಷಿಗಳು ಹೇಳಿದ ಅಭಿಪ್ರಾಯವು ಅವರಿಗೆ ಸಮ್ಮತವಲ್ಲ ಅನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

ವಾಕ್ಯಸಂದರ್ಭವು ಹೀಗಿದೆ – 'ಪ್ರಸಕ್ತ ಪ್ರತಿಷೇಧೇನ' ಎಂಬುದರ ವ್ಯಾಖ್ಯಾನವನ್ನು ಮಾಡುವಾಗ ಋಗಾದಿಗಳು ಪರವಿದ್ಯಾ ಶಬ್ದದಿಂದ ವಾಚ್ಯವಲ್ಲ ಎಂಬುದು ಯಾವ ಕಾರಣದಿಂದ ? ಎಂಬ ಪ್ರಶ್ನೆಗೆ ಪ್ರಸಕ್ತ ಪ್ರತಿಷೇಧೇನ ಎಂಬುದು ಉತ್ತರವಾಗಿದೆ. ಇದರ ಅಭಿಪ್ರಾಯ ಹೀಗಿದೆ – ಪ್ರಸಕ್ತಪ್ರತಿಷೇಧವು ಉಪಕಾರಕ ಪ್ರಾಧಾನ್ಯ ವಿವಕ್ಷೆಯಿಂದ ಎಂಬ ಕಾರಣದಿಂದ ಹೊರಟಿದೆ ಎಂಬುದಾಗಿ.

## ಉಪಕಾರಕವು ಅಪ್ರಧಾನ ಎನ್ನಲು ದೃಷ್ಟಾಂತ

ಉಕ್ತಂ ಚ ವಿವಕ್ಷಾಯಾ ವ್ಯವಹಾರಮಾತ್ರನಿರ್ವಾಹಕತ್ವಂ ಪ್ರಮಾಣಪದ್ಧತೌ 'ತತ್ರಾವಾಂತರ-ವ್ಯಾಪಾರಪ್ರಾಧಾನ್ಯವಿವಕ್ಷಯಾಽರ್ಥೇಂದ್ರಿಯಸನ್ನಿಕರ್ಷಃ ಪ್ರತ್ಯಕ್ಷಮಿತ್ಯುಚ್ಯತೇ । ಕ್ವಚಿತ್ತು ಧರ್ಮಿ-ಪ್ರಧಾನ್ಯವಿವಕ್ಷಯಾ ಸ್ವಸ್ವವಿಷಯಸನ್ನಿಕೃಷ್ಟಮಿಂದ್ರಿಯಂ ಪ್ರತ್ಯಕ್ಷಮಿತ್ಯುಚ್ಯತೇ' ಇತಿ । ಏವಂಚ ವಿವಕ್ಷಾಭೇದೇನ ವ್ಯವಹಾರಭೇದೇಽಪಿ ನ ತತ್ತ್ವವೈಪರೀತ್ಯಂ । ಅಸ್ಮನ್ಮತೇ ಇಂದ್ರಿಯಮೇವ ಪ್ರಧಾನಂ, ಕರಣಂ ಚ । ಸನ್ನಿಕರ್ಷೋಽವಾಂತರವ್ಯಾಪಾರೋಽಪ್ರಧಾನ ಏವೇತಿ ತತ್ತ್ವಮ್ ।

ಅನುವಾದ – ಪ್ರಮಾಣಪದ್ಧತಿಯಲ್ಲೂ ಸಹ ಟೀಕಾಕಾರರು ವಿವಕ್ಷಾಭೇದವು ವ್ಯವಹಾರಕ್ಕೆ ಮಾತ್ರವೇ ಕಾರಣ ಹೊರತು ಅದರ ಮೂಲಸ್ವರೂಪದ ದ್ವೈವಿಧ್ಯಕ್ಕೆ ಕಾರಣವಲ್ಲ ಎಂಬ ಅಂಶವನ್ನು ಬೇರೊಂದು ಪ್ರಸಂಗದಲ್ಲಿ ತಿಳಿಸಿಕೊಟ್ಟಿದ್ದಾರೆ.

ಪ್ರತ್ಯಕ್ಷದ ವಿಷಯವನ್ನು ಹೇಳುವಾಗ ಅವಾಂತರ ವ್ಯಾಪಾರವನ್ನು ಪ್ರಧಾನವಾಗಿ ತೆಗೆದುಕೊಂಡಾಗ ಪದಾರ್ಥ ಹಾಗೂ ಇಂದ್ರಿಯಗಳ ಸನ್ನಿಕರ್ಷವನ್ನೇ ಪ್ರತ್ಯಕ್ಷ ಎಂಬುದಾಗಿ ಕರೆಯುತ್ತೇವೆ. ಮತ್ತೆ ಕೆಲವು ಕಡೆ ಧರ್ಮಿಯನ್ನು ಪ್ರಧಾನ ಎಂದು ತೆಗೆದುಕೊಂಡಾಗ ಇಂದ್ರಿಯವನ್ನು ಪ್ರತ್ಯಕ್ಷ ಎಂಬುದಾಗಿ ಕರೆಯುತ್ತೇವೆ. ಇಂದ್ರಿಯವು ಸನ್ನಿಕೃಷ್ಟವಾದ ವಿಷಯಗಳನ್ನು ಗ್ರಹಣ ಮಾಡುವುದರಿಂದ ವಿಷಯಸನ್ನಿಕೃಷ್ಟವಾದ ಇಂದ್ರಿಯವೇ ಪ್ರತ್ಯಕ್ಷ ಎಂದು ಇಲ್ಲಿ ಸ್ಪಷ್ಟವಾಗುತ್ತದೆ. ಹೀಗೆ ವಿವಕ್ಷಾಭೇದದಿಂದ ವ್ಯವಹಾರಗಳು ಭಿನ್ನಭಿನ್ನವಾದರೂ ಸಹ ತತ್ವದಲ್ಲಿ ಯಾವುದೇ ರೀತಿಯ ವ್ಯತ್ಯಾಸವು ಇಲ್ಲ. ಒಂದೆಡೆ ಸನ್ನಿಕರ್ಷವನ್ನು ಪ್ರತ್ಯಕ್ಷ ಎಂದು, ಇನ್ನೊಂದೆಡೆ ಇಂದ್ರಿಯವನ್ನು ಪ್ರತ್ಯಕ್ಷ ಎಂದು ಕರೆದರೂ ಸಹ ಮೂಲತತ್ವಕ್ಕೆ ಯಾವುದೇ ರೀತಿಯ ವ್ಯತ್ಯಾಸವು ಇರುವುದಿಲ್ಲ. ನಮ್ಮ ಸಿದ್ಧಾಂತದಂತೆ ಇಂದ್ರಿಯವೇ ಪ್ರಧಾನವಾದದ್ದು, ಕರಣವೂ ಸಹ ಆಗಿದೆ. ಸನ್ನಿಕರ್ಷವು ಅವಾಂತರ ವ್ಯಾಪಾರ ಹಾಗೂ ಅಪ್ರಧಾನವಾದದ್ದು. ಇದೇ ದೃಷ್ಟಾಂತವನ್ನು ಪ್ರಕೃತದಲ್ಲೂ ಸಹ ತೋರಿಸಬಹುದು. ಉಪಕಾರಕವಾದದ್ದು ಅಪ್ರಧಾನ, ಉಪಕೃತವಾದದ್ದು ಪ್ರಧಾನ ಎಂಬುದಾಗಿ.

## ಪೂರ್ವಪಕ್ಷಿಗಳಿಗೆ ಅನುಗ್ರಾಹಕವಾಗದ ಬ್ರಹ್ಮಸೂತ್ರ ಪ್ರಮಾಣವೇ ಅಲ್ಲ

ಯದಪಿ ಬ್ರಹ್ಮಮೀಮಾಂಸಾಶಾಸ್ತ್ರಸ್ಯ ಸರ್ವದಾ ಪರವಿದ್ಯಾತ್ವಮೇವ । ಋಗಾದೀನಾಂ ತು ದಶಾಭೇದೇನೇತಿ ಬ್ರಹ್ಮತಂತ್ರಮಾಹಾತ್ಮ್ಯವರ್ಣನಪ್ರಸಂಗೇ 'ಋಗಾದೀನಾಂ ಕರ್ಮಪ್ರತಿಪಾದಕತ್ವ-ದಶಾಯಾಂ ಬ್ರಹ್ಮಸೂತ್ರಾಣಾಮನನುಗ್ರಾಹಕತ್ವಾತ್, ಅನನುಗ್ರಾಹಕತ್ವದಶಾಯಾಂ ಚ ಬ್ರಹ್ಮಸೂತ್ರಾಣಾಂ ಪ್ರಾಮಾಣ್ಯಮೇವ ನಾಸ್ತಿ....ವಿದ್ಯಾತ್ವದಶಾಯಾಂ ಸರ್ವದಾ ಪರವಿದ್ಯಾತ್ವರೂಪಮಹಿಮಾ

ಬ್ರಹ್ಮಸೂತ್ರಾಣಾಮೇವೇತಿ' ಕ್ವಚಿತ್ (V) ಭೂಮಿಕಾ, ವೇದವ್ಯತಿರೇಕೇಣ ವಿದ್ಯಾತ್ವಸ್ಯೈವಾಭಾವೇನ ವಿದ್ಯಾತ್ವದಶಾಯಾಂ ಚ ಪರವಿದ್ಯಾತ್ವಮೇವೇತಿ ಬ್ರಹ್ಮಸೂತ್ರಾಣಾಮುತ್ತಮತ್ವಂ ಸೂಚಿತಂ।

ಅನುವಾದ - ಪೂರ್ವಪಕ್ಷಕಾರರು ತಮ್ಮ ಪೂರ್ವಪಕ್ಷ ಗ್ರಂಥದ ಭೂಮಿಕಾದಲ್ಲಿ ಅಸಂಬದ್ಧವಾದ ಪರಸ್ಪರ ವ್ಯಾಹತವಾದ ಮಾತುಗಳನ್ನು ಹೇಳಿರುವುದು ಕಂಡುಬರುತ್ತದೆ.

ಬ್ರಹ್ಮಮೀಮಾಂಸಾಶಾಸ್ತ್ರವು ಯಾವಾಗಲೂ ಸಹ ಪರವಿದ್ಯೆಯೇ ಆಗಿದೆ. ಯುಗಾದಿಗಳಿಗೆ ಪರವಿದ್ಯಾತ್ವವು ದಶಾಭೇದದಿಂದ (ಅವಸ್ಥಾಭೇದದಿಂದ) ಹೇಳಬೇಕು ಎಂಬುದಾಗಿ ಬ್ರಹ್ಮಸೂತ್ರದ ಮಹಾತ್ಮ್ಯೆಯನ್ನು ಹೇಳುವ ಪ್ರಸಂಗದಲ್ಲಿ ಈ ವಾಕ್ಯವನ್ನು ಪ್ರಯೋಗ ಮಾಡಿದ್ದಾರೆ. 'ಯುಗಾದೀನಾಂ ಕರ್ಮಪ್ರತಿಪಾದಕತ್ವದಶಾಯಾಂ ಬ್ರಹ್ಮಸೂತ್ರಾಣಾಮನನುಗ್ರಾಹಕತ್ವಾತ್, ಅನುಗ್ರಾಹಕತ್ವದಶಾಯಾಂ ಚ ಬ್ರಹ್ಮಸೂತ್ರಾಣಾಂ ಪ್ರಾಮ್ಯಾಣ್ಯಮೇವ ನಾಸ್ತಿ .....ವಿದ್ಯಾತ್ವದಶಾಯಾಂ ಸರ್ವದಾ ಪರವಿದ್ಯಾತ್ವ- ರೂಪಮಹಿಮಾ ಬ್ರಹ್ಮಸೂತ್ರಾಣಾಮೇವೇತಿ' ಎಂಬುದಾಗಿ. ಯುಗಾದಿಗಳು ಕರ್ಮಪ್ರತಿಪಾದನೆ ಮಾಡುವ ಸಂದರ್ಭದಲ್ಲಿ ಬ್ರಹ್ಮಸೂತ್ರಗಳು ಅನುಗ್ರಾಹಕ-ವಾಗುವುದಿಲ್ಲ. ಇಂತಹ ಅನನುಗ್ರಾಹಕತ್ವ ಅವಸ್ಥೆಯಲ್ಲಿ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವೇ ಇರುವುದಿಲ್ಲ....... ವಿದ್ಯಾತ್ವ ದಶಾದಲ್ಲಿ ಯಾವಾಗಲೂ ಪರವಿದ್ಯಾತ್ವರೂಪವಾದ ಮಹಿಮೆಯು ಬ್ರಹ್ಮಸೂತ್ರಗಳಿಗೇ ಇರುತ್ತದೆ. ಈ ಭಾಗವು ಐದನೆಯ ಪತ್ರದ ಭೂಮಿಕಾದಲ್ಲಿ ಇದೆ. ಇದರಿಂದ ವೇದವಿದ್ಯೆಯನ್ನು ಹೊರತು ಬ್ರಹ್ಮಸೂತ್ರಗಳಿಗೆ ಕೇವಲ ವಿದ್ಯಾತ್ವವೇ ಇಲ್ಲ. ವಿದ್ಯಾತ್ವ ಇದ್ದಾಗ ಪರವಿದ್ಯಾತ್ವವು ಬ್ರಹ್ಮಸೂತ್ರಗಳಿಗೆ ಇದ್ದೇ ಇದೆ ಎಂಬುದಾಗಿ ಬ್ರಹ್ಮಸೂತ್ರಗಳಿಗೆ ಉತ್ತಮತ್ವವನ್ನು ಸೂಚನೆ ಮಾಡಲಾಗಿದೆ.

## ಪೂರ್ವಪಕ್ಷಕಾರರಿಗೆ ಸ್ವವ್ಯಾಹತಿ

'ಕಿಂಚಾಸ್ಯ ಶಾಸ್ತ್ರಸ್ಯ ಸಹಕಾರಿರೂಪತ್ವಾತ್ ವೇದಾದ್ಯನನುಗ್ರಾಹಕತ್ವದಶಾಯಾ ಏವಾಭಾವಾತ್ ಸದಾಽಸ್ಯ ಶಾಸ್ತ್ರಸ್ಯ ಪರವಿದ್ಯಾತ್ವಂ' ಇತ್ಯನ್ಯತ್ರ (ಪಿ-೯) 'ಭಾಷ್ಯಟೀಕಾದಿಸದ್ಗ್ರಂಥಪ್ರತಿಪಾದಿತಾರ್ಥಾ-ನವಗಮೇ ಬ್ರಹ್ಮತಂತ್ರಸ್ಯಾಪ್ಯಪ್ರಾಮಾಣ್ಯಾಪತ್ತ್ಯಾ ವಿದ್ಯಾತ್ವಮೇವ ನಾಸ್ತಿ' ಇತಿ ಚಾಪರತ್ರ (ಪಿ-೩೯) ಇತಿ ಬಹುಧಾ ಲಿಖಿತಂ ದೃಶ್ಯತೇ। ಅತ್ರ ಬ್ರಹ್ಮಸೂತ್ರಸ್ಯಾನನುಗ್ರಾಹಕತ್ವದಶಾ ಆದ್ಯವಾಕ್ಯೇನಾಭ್ಯುಪಗತಾ; ತೃತೀಯವಾಕ್ಯೇನಾನನುಗ್ರಾಹಕತ್ವದಶಾಭಾವ ಉಕ್ತ ಇತಿ ಸ್ವವ್ಯಾಹತಿಃ।

ಅನುವಾದ - ಇದರಂತೆ ಭೂಮಿಕಾದ ಒಂಬತ್ತನೆಯ ಪತ್ರದಲ್ಲಿ ಈ ವಾಕ್ಯವನ್ನು ಪ್ರಯೋಗ ಮಾಡಿದ್ದಾರೆ 'ಕಿಂಚ ಅಸ್ಯ ಶಾಸ್ತ್ರಸ್ಯ ಸಹಕಾರಿರೂಪತ್ವಾತ್ ವೇದಾದ್ಯನುಗ್ರಾಹಕತ್ವದಶಾಯಾ ಏವಾಭಾವಾತ್ ಸದಾಽಸ್ಯ





ಶಾಸ್ತ್ರಸ್ಯ ಪರವಿದ್ಯಾತ್ವಂ' ಈ ಶಾಸ್ತ್ರವು ಸಹಕಾರಿಯಾದ್ದರಿಂದ ವೇದಾದಿಗಳಿಗೆ ಅನನುಗ್ರಾಹಕವಾದ ಅವಸ್ಥೆಯೇ ಶಾಸ್ತ್ರಕ್ಕೆ ಇರುವುದಿಲ್ಲ. ಈ ಕಾರಣದಿಂದ ಸರ್ವದಾ ಶಾಸ್ತ್ರವು ಪರವಿದ್ಯೆಯೇ ಆಗುತ್ತದೆ.

ಇದೇ ಗ್ರಂಥದ ೩೭ನೆಯ ಪತ್ರದಲ್ಲಿ ಮತ್ತೊಂದು ವಾಕ್ಯ ಹೀಗಿದೆ – 'ಭಾಷ್ಯಟೀಕಾದಿ ಸದ್ಗ್ರಂಥಪ್ರತಿಪಾದಿತಾರ್ಥಾನವಗಮೇ ಬ್ರಹ್ಮತಂತ್ರಸ್ಯಾಪ್ಯಪ್ರಾಮಾಣ್ಯಾಪತ್ತ್ಯಾ ವಿದ್ಯಾತ್ವಮೇವ ನಾಸ್ತಿ' ಭಾಷ್ಯ ಟೀಕಾ ಮುಂತಾದ ಉತ್ತಮ ಗ್ರಂಥಗಳ ಅಭಿಪ್ರಾಯವನ್ನು ತಿಳಿಯದೇ ಇದ್ದ ಪಕ್ಷದಲ್ಲಿ ಬ್ರಹ್ಮಸೂತ್ರವು ಅಪ್ರಮಾಣವಾಗುವುದರಿಂದ ಬ್ರಹ್ಮಸೂತ್ರಗಳಿಗೆ ವಿದ್ಯಾತ್ವವೇ ಇಲ್ಲ. ಹೀಗೆ ಐದು, ಒಂಬತ್ತು, ಮೂವತ್ತೇಳು ಈ ಪತ್ರಗಳಲ್ಲಿ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವು ಇದೆ, ಇಲ್ಲ ಎಂಬುದಾಗಿ ಬೇರೆ ಬೇರೆ ಅಭಿಪ್ರಾಯಗಳನ್ನು ಬರೆದಿರುವುದು ಕಂಡುಬರುತ್ತಿದೆ.

ಈ ಮೂರು ಪ್ರಕರಣಗಳನ್ನು ನೋಡಿದಾಗ ಬ್ರಹ್ಮಸೂತ್ರಗಳಿಗೆ ಅನನುಗ್ರಾಹಕತ್ವವು ಇದೆ ಎಂಬುದನ್ನು ಐದನೆಯ ಪತ್ರದ ವಾಕ್ಯಗಳು ತಿಳಿಸುತ್ತಿವೆ. ಮೂವತ್ತೇಳನೆಯ ಪತ್ರದಲ್ಲಿ ಅನನುಗ್ರಾಹಕತ್ವ ದೆಶೆಯೇ ಇಲ್ಲ ಎಂಬುದಾಗಿ ಹೇಳುತ್ತಿದ್ದಾರೆ. ಹೀಗೆ ಪೂರ್ವಾಪರಗಳ ವಿರೋಧವು ಈ ಪ್ರಸಂಗದಲ್ಲಿ ಕಂಡುಬರುತ್ತಿದೆ.

## ಬ್ರಹ್ಮಸೂತ್ರಗಳಿಗೆ ಅಪಕರ್ಷ ಒಪ್ಪಿದ ಪೂರ್ವಪಕ್ಷಿಗಳು

**ಕಿಂಚ ಬ್ರಹ್ಮಸೂತ್ರಮಹಿಮಾವರ್ಣನಮುಪಕ್ರಮ್ಯ ತದುಪಷ್ಟಂಭಕತಯಾ ವೇದವ್ಯತಿರೇಕೇಣ ತಸ್ಯ ವಿದ್ಯಾತ್ವಮೇವ ನಾಸ್ತೀತಿ ವದತಾ ತಸ್ಯಾಪಕರ್ಷ ಏವ ಸ್ಪಷ್ಟೀಕೃತಃ। ಪ್ರಧಾನವಿಷಯೋಭೂತವಿಷ್ಣುಪ್ರಮಿತಿಜನಕತ್ವಂ ವೇದಸ್ಯೈವ, ತತ್ರೇದಂ ಸಹಕಾರೀತಿ, ಅಸ್ಯಾಸಂಕೀರ್ಣಪ್ರಧಾನವಿಷಯೋ ನಾಸ್ತೀತಿ ಹಿ ತದರ್ಥಃ। ಏವಂ ಚ ಬ್ರಹ್ಮಸೂತ್ರಸ್ಯ ಸ್ವತಃ ಪ್ರಧಾನವಿಷಯಸ್ಯೈವಾಭಾವೇ ಸಾಕ್ಷಾತ್‌ಪ್ರಧಾನವಿಷಯಪ್ರತಿಪಾದಕವೇದಾದುತ್ಕರ್ಷೋ ವಾ ಕಥಂ ಸಿದ್ಧ್ಯೇದಿತಿ ವಿರೋಧಶ್ಚ।**

**ಅನುವಾದ** - ಬ್ರಹ್ಮಸೂತ್ರದ ಮಹಿಮೆಯನ್ನು ವರ್ಣನೆ ಮಾಡಲು ಹೊರಟು ಅದಕ್ಕೆ ಪೂರಕವಾಗಿ ವೇದವನ್ನು ಹೊರತಾಗಿ ವೇದದ ಸಹಕಾರವಿಲ್ಲದೇ ಇದ್ದರೆ ಬ್ರಹ್ಮಸೂತ್ರಗಳಿಗೆ ವಿದ್ಯಾತ್ವವೇ ಇರುವುದಿಲ್ಲ ಎಂದು ಹೇಳಿದರೆ ಬ್ರಹ್ಮಸೂತ್ರಗಳಿಗೆ ಉತ್ತಮತ್ವದ ಸ್ಥಾಪನೆ ಮಾಡುವುದರ ಬದಲಿಗೆ ಬ್ರಹ್ಮಸೂತ್ರಕ್ಕೆ ಅಪಕರ್ಷವನ್ನೇ ಸ್ಪಷ್ಟಮಾಡಿದಂತಾಗುತ್ತದೆ.

ಪ್ರಧಾನವಾದ ವಿಷಯ ವಿಷ್ಣು. ಇಂತಹ ವಿಷ್ಣುವಿನ ಪ್ರಮಾಜನನಶಕ್ತಿಯು ವೇದಕ್ಕೇ ಇರುವುದು. ಇಂತಹ ಪ್ರಮಿತಿಜನಕತ್ವಕ್ಕೆ ಸಹಕಾರಿಯಾದದ್ದು ಬ್ರಹ್ಮಸೂತ್ರ. ಬ್ರಹ್ಮಸೂತ್ರಕ್ಕೆ ಅಸಂಕೀರ್ಣವಾದಂತಹ ಪ್ರಧಾನವಾದ ವಿಷಯವೇ ಇಲ್ಲ ಎಂಬುದು ಈ ಪ್ರಸಂಗದ ಅಭಿಪ್ರಾಯ. ಹೀಗೆ ಒಪ್ಪಿದರೆ ಬ್ರಹ್ಮಸೂತ್ರಗಳಿಗೆ ಸ್ವಾಭಾವಿಕವಾಗಿ ಪ್ರಧಾನವಾದ ವಿಷಯವೇ ಇಲ್ಲ ಎಂಬುದಾಗಿ ಆಗುತ್ತದೆ. ಹೀಗೆ ಒಪ್ಪಿದಾಗ ಸಾಕ್ಷಾತ್ತಾಗಿ ಪ್ರಧಾನ ವಿಷಯವಾದ

ವಿಷ್ಣುವಿನ ಜ್ಞಾನವನ್ನು ಪ್ರತಿಪಾದನೆ ಮಾಡುವ ವೇದಕ್ಕಿಂತ ಬ್ರಹ್ಮಸೂತ್ರಗಳಿಗೆ ಉತ್ಕರ್ಷವನ್ನು ಹೇಗೆ ತಾನೇ ಸಾಧನೆ ಮಾಡಲು ಸಾಧ್ಯ ? ಆದ್ದರಿಂದ ಪೂರ್ವಾಪರ ವ್ಯಾಹತಿಯ ಜೊತೆಗೆ ವಿರೋಧವೂ ಸಹ ಬರುತ್ತಿದೆ.

## ವಿದ್ಯೆಯೇ ಆಗದ ಬ್ರಹ್ಮಸೂತ್ರ ವೇದೋತ್ತಮವಾಗಲು ಹೇಗೆ ಸಾಧ್ಯ ?

ವೇದವ್ಯತಿರೇಕೇಣ ವಿದ್ಯಾತ್ವಮೇವಾನಾಪನ್ನಂ ಬ್ರಹ್ಮತಂತ್ರಂ ಕಥಂ ವೇದಾದುತ್ತಮಂ ಭವೇತ್ ? ಪೃಥಕ್‌ವಿದ್ಯಾತ್ವಸಂಭವ ಏವ ಹಿ ತಾರತಮ್ಯವಿಚಾರಸ್ಯಾವಸರಃ। ಅತೋಽನಯೋಃ ಪೃಥಕ್ -ವಿದ್ಯಾತ್ವಮನಾಪನ್ನಯೋಸ್ತಾರತಮ್ಯಚಿಂತೈವ ನ ಪ್ರಸರತೀತ್ಯವಧೇಯಂ। ಏತೇನ ನಿರ್ಣಾಯಕ-ನಿರ್ಣೇಯಯೋರ್ನಿರ್ಣಾಯಕಸ್ಯೈವ ಪ್ರಾಬಲ್ಯೋಕ್ತಿಃ ಪರಾಸ್ತಾ।

ಅನುವಾದ - ವೇದವನ್ನು ಬಿಟ್ಟು ಬ್ರಹ್ಮಸೂತ್ರಕ್ಕೆ ಪ್ರತ್ಯೇಕವಾಗಿ ವಿದ್ಯಾತ್ವವೇ ಇಲ್ಲದಿದ್ದ ಪಕ್ಷದಲ್ಲಿ ಅಂತಹ ಬ್ರಹ್ಮಸೂತ್ರವು ಹೇಗೆ ತಾನೇ ವೇದಕ್ಕಿಂತಲೂ ಸಹ ಉತ್ತಮವಾಗಲು ಸಾಧ್ಯ ? ಪ್ರತ್ಯೇಕವಾಗಿ ಎರಡು ವಿದ್ಯೆಗಳಿದ್ದರೆ ಅವರೆಡರಲ್ಲಿ ಯಾವುದು ಉತ್ತಮ, ಯಾವುದು ಕನಿಷ್ಠ? ಎಂಬುದಾಗಿ ತಾರತಮ್ಯದ ವಿಚಾರ ಮಾಡಲು ಬರುತ್ತದೆ. ಆದರೆ ಪ್ರತ್ಯೇಕವಾಗಿ ಬ್ರಹ್ಮಸೂತ್ರಗಳಿಗೆ ವಿದ್ಯಾತ್ವವೇ ಇಲ್ಲದಿದ್ದರೆ ವಿದ್ಯೆಯೇ ಅಲ್ಲದ ಬ್ರಹ್ಮಸೂತ್ರವನ್ನು ವಿದ್ಯೆಯಾದ ವೇದದ ಜೊತೆ ಸೇರಿಸಿ ಇವೆರಡರಲ್ಲೂ ತಾರತಮ್ಯವನ್ನು ಚಿಂತನೆ ಮಾಡುವುದೇ ಅಸಂಗತ. ಹೀಗೆ ಈ ಪ್ರಸಂಗವು ಸಂಪೂರ್ಣವಾಗಿ ಅಸಂಗತವಾಗುತ್ತದೆ.

ಈ ಪ್ರಸಂಗದಿಂದ ನಿರ್ಣಾಯಕ ಹಾಗೂ ನಿರ್ಣೇಯ ಗ್ರಂಥಗಳಲ್ಲಿ ನಿರ್ಣಾಯಕವೇ ಪ್ರಧಾನ ಎಂಬ ವಾದವೂ ಸಹ ಸರಿಯಲ್ಲ ಎಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ ನಿರ್ಣಾಯಕ ಹಾಗೂ ನಿರ್ಣೇಯಗಳಿಗೆ ಪರಸ್ಪರ ಸಮಾನವಾದ ಒಂದು ಅಂಶವೇ ಇಲ್ಲ. ಪ್ರಾಬಲ್ಯ ದೌರ್ಬಲ್ಯಗಳನ್ನು ಹೇಳುವಾಗ ಸಮಾನ ಅಂಶಗಳಿದ್ದರೆ ಮಾತ್ರವೇ ಇದನ್ನು ನಿಶ್ಚಯ ಮಾಡಲು ಸಾಧ್ಯವಾಗುತ್ತದೆ.

## ವೇದಾತಿರಿಕ್ತ ವಿಷಯಪ್ರಯೋಜನಗಳಿರಲು ಸಾಧ್ಯವೇ ಇಲ್ಲ

ಯದಪಿ 'ನನು ಸುಧಾಯಾಂ ಪ್ರಾಮಾಣ್ಯಸ್ಯ ಸ್ವತಸ್ತ್ವೇಽಪ್ಯಪ್ರಾಮಾಣ್ಯಶಂಕಾ-ನಿರಾಸಾರ್ಥೋಽಯಂ ಪ್ರಯತ್ನ ಇತ್ಯುಕ್ತ್ವಾ ವೇದಸ್ಯಾಪೌರುಷೇಯತ್ವೇನಾಪ್ರಾಮಾಣ್ಯಶಂಕೈವ ನಾಸ್ತೀತಿ ವೇದಾಪೇಕ್ಷಯಾ ಪೌರುಷೇಯಗ್ರಂಥಸ್ಯೋತ್ತಮತ್ವಂ ಕಥಮಿತಿ ಚೇದಿತ್ಥಂ - ತಥಾಹಿ :- ವಿಷಯ-ಪ್ರಯೋಜನವಶೇನಾಪ್ಯತಿಶಯೋ ದ್ರಷ್ಟವ್ಯಃ । ಯಥಾ ಭಾರತಸ್ಯ ವೇದಾದ್ಯಪೇಕ್ಷಯೋತ್ತಮತ್ವಂ' (ಪು-೧೦) ಇತ್ಯಾದಿ ವಲ್ಗಿತಂ; ತದಪಿ ಶಾಸ್ತ್ರಮರ್ಯಾದಾನಭಿಜ್ಞಾನಾದೇವ; ತಥಾಹಿ; ವೇದವಿಷಯಾಪೇಕ್ಷಯಾಽತಿಶಯಿತೋ ವಿಷಯಃ, ಅತಿಶಯಿತಂ ಪ್ರಯೋಜನಂ ಚ ಬ್ರಹ್ಮಸೂತ್ರ-





ಭಾರತಯೋರಸ್ತೀತಿ ಪೌರುಷೇಯಯೋರಪಿ ತಯೋರ್ವೇದಾದುತ್ತಮತ್ವಮಿತಿ ಹ್ಯಸ್ಯಾಶಯಃ । ಸ ಚಾಪ್ರಾಮಾಣಿಕಃ, ವೇದಾರ್ಥನಿರ್ಣಯಾಯ ಪ್ರವೃತ್ತಸ್ಯ ಸೂತ್ರಸ್ಯ ಪೃಥಕ್ಪ್ರಾಮಾಣ್ಯಾಭಾವಸ್ಯೈವ ಸುಧೋಕ್ತತ್ವೇನಾತಿರಿಕ್ತವಿಷಯಸ್ಯೈವಾಭಾವೇನ ಕ್ವಾತಿಶಯಿತವಿಷಯಕತ್ವಂ ಸೂತ್ರಾದೇಃ । ವಿಷ್ಣು-ಸರ್ವೋತ್ತಮತ್ವಸಿದ್ಧಾಂತೇ ವಿಷ್ಣೋರತಿಶಯಿತಸ್ಯ ಶಶವಿಷಾಣಾಯಮಾನತ್ವಾತ್, ವೇದವಿಷಯವಿಷ್ಣು-ವಿಷಯಕಸ್ಯ ಭಾರತಸ್ಯಾಪ್ಯತಿಶಯಿತವಿಷಯಕತ್ವಮಸದೇವ । ಏವಮೇವ ಅತ್ಯುತ್ತಮಮೋಕ್ಷ-ಪ್ರಯೋಜನಕತ್ವಂ ಚ ತ್ರಯಾಣಾಂ ಸಮಾನಮಿತಿ ವಿಷಯಪ್ರಯೋಜನಾತಿಶಯಃ ಖಪುಷ್ಪತುಲ್ಯ ಇತಿ ತೇನಾಪಿ ವೇದಾದಾಧಿಸಾಧನಮಸಂಭವದುಕ್ತಿಕಮೇವಾತೋಽನಾಶಂಕಿತಪ್ರಾಮಾಣ್ಯಕೋಽ-ಪೌರುಷೇಯ ವೇದ ಏವ ಸರ್ವೋತ್ತಮಂ ಶಾಸ್ತ್ರಮಿತಿ ಸುಧಿಯೋ ವಿಭಾವಯಂತು ।

ಅನುವಾದ - ಪೂರ್ವಪಕ್ಷ ಹೀಗಿದೆ – ಸುಧಾದಲ್ಲಿ ಪ್ರಾಮಾಣ್ಯಸ್ವತಸ್ತ್ವದ ಪ್ರಸಂಗದಲ್ಲಿ ಅಪ್ರಾಮಾಣ್ಯಶಂಕಾನಿರಾಸಕ್ಕೋಸ್ಕರ ಈ ಪ್ರಯತ್ನವನ್ನು ಮಾಡಲಾಗಿದೆ ಎಂಬುದಾಗಿ ಹೇಳಿದ್ದಾರೆ. ಅಪ್ರಾಮಾಣ್ಯವು ಪರತಃ ಎಂದು ಅಂಗೀಕಾರ ಮಾಡುವಾಗ ಇದು ಪ್ರಾಮಾಣ್ಯದ ಸ್ವತಸ್ತ್ವ ಸಿದ್ಧಿಗಾಗಿ ಎಂಬುದು ಅಲ್ಲಿ ಅಭಿಪ್ರೇತವಾದದ್ದು. ಇದರಂತೆ ವೇದವು ಅಪೌರುಷೇಯವಾದ್ದರಿಂದ ಅಪ್ರಾಮಾಣ್ಯ ಶಂಕೆಯೇ ಬರುವುದಿಲ್ಲ. ಆದ್ದರಿಂದ ವೇದದ ದೃಷ್ಟಿಯಿಂದ ಪೌರುಷೇಯ ಗ್ರಂಥಕ್ಕೆ ಉತ್ತಮತ್ವವನ್ನು ಹೇಗೆ ತಾನೇ ನಿರ್ಣಯ ಮಾಡಲು ಸಾಧ್ಯ ?

ಪೂರ್ವಪಕ್ಷಿಗಳ ಉತ್ತರ ಹೀಗಿದೆ – ವಿಷಯ ಹಾಗೂ ಪ್ರಯೋಜನಗಳನ್ನು ನೋಡಿದಾಗ ಇವುಗಳಿಂದ ಅತಿಶಯವನ್ನು ಹೇಳಲು ಸಾಧ್ಯವಿದೆ. ಉದಾಹರಣೆಗೆ ಭಾರತಕ್ಕೆ ವೇದಾಪೇಕ್ಷಯಾ ಉತ್ತಮತ್ವವು ಸಿದ್ಧವಾಗಿದೆ. ಹೀಗೆ ಪೂರ್ವಪಕ್ಷಿಗಳು ತಮ್ಮ ಗ್ರಂಥದ ಹತ್ತನೆಯ ಪುಟದಲ್ಲಿ ಹೇಳಿದ್ದಾರೆ. ಇವೆಲ್ಲವೂ ಸಹ ಶಾಸ್ತ್ರದ ಮರ್ಯಾದೆ ತಿಳಿಯದೇ ಆಡಿದ ಮಾತುಗಳು.

ಇದರ ಅಭಿಪ್ರಾಯ ಹೀಗೆ – ವೇದಕ್ಕೆ ಯಾವುದು ವಿಷಯವೋ ಅದಕ್ಕಿಂತ ಅತಿಶಯಿತವಾದ ವಿಷಯ ಹಾಗೂ ಅತಿಶಯಿತವಾದ ಪ್ರಯೋಜನವನ್ನು ಬ್ರಹ್ಮಸೂತ್ರಗಳಿಗೆ ಹಾಗೂ ಭಾರತಕ್ಕೆ ಇದೆ ಆದ್ದರಿಂದ ಪೌರುಷೇಯವಾದ ಗ್ರಂಥಗಳಾದ ಬ್ರಹ್ಮಸೂತ್ರ ಹಾಗೂ ಭಾರತಗಳು ವೇದಕ್ಕಿಂತಲೂ ಉತ್ತಮ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

ಈ ಪೂರ್ವಪಕ್ಷಿಗಳ ಅಭಿಪ್ರಾಯವು ಅಪ್ರಾಮಾಣಿಕವಾಗಿದೆ. ವೇದದ ಅರ್ಥವನ್ನು ನಿರ್ಣಯ ಮಾಡಲು ಹೊರಟಿರುವುದು ಬ್ರಹ್ಮಸೂತ್ರ . ಇಂತಹ ಸೂತ್ರಕ್ಕೆ ಪ್ರತ್ಯೇಕವಾದ ಪ್ರಾಮಾಣ್ಯವೇ ಇಲ್ಲ ಎಂಬುದು ಸುಧಾದಲ್ಲಿ

ಹೇಳಿದ್ದಾರೆ. ಆದ್ದರಿಂದ ವೇದಾತಿರಿಕ್ತವಾದ ವಿಷಯವೇ ಇಲ್ಲದಿರುವುದರಿಂದ ಅತಿರಿಕ್ತ ವಿಷಯವನ್ನು ಸೂತ್ರಕ್ಕಾಗಲಿ, ಮಹಾಭಾರತಕ್ಕಾಗಲಿ ಹೇಗೆ ತಾನೇ ಹೇಳಲು ಸಾಧ್ಯ ?

ಭಗವಂತನು ಸರ್ವೋತ್ತಮ ಎಂಬುದು ಸಿದ್ಧಾಂತದ ವಿಷಯ ಹಾಗೂ ಸಿದ್ಧಾಂತದ ಜ್ಞಾನದ ಫಲ. ಇದಕ್ಕಿಂತಲೂ ಸಹ ಅತಿಶಯಿತವಾದ ವಿಷಯವಾಗಲಿ ಪ್ರಯೋಜನವಾಗಲಿ ಮಧ್ವಸಿದ್ಧಾಂತದಲ್ಲಿ ಇಲ್ಲ. ಒಂದು ವೇಳೆ ಹೇಳಿದರೆ ಅದು ಮೊಲದ ಕೊಂಬಿನಂತೆ ಆಗುತ್ತದೆ. ವೇದಕ್ಕೆ ವಿಷಯನಾದ ವಿಷ್ಣುವೇ ಮಹಾಭಾರತಕ್ಕೂ ಸಹ ವಿಷಯನಾಗಿದ್ದಾನೆ. ಆದ್ದರಿಂದ ಭಾರತಕ್ಕೆ ಅತಿಶಯಿತವಾದ ವಿಷಯತ್ವವನ್ನು ಹೇಳುವುದು ಸರಿಯಲ್ಲ. ಇದರಂತೆ ಮೋಕ್ಷವೇ ಈ ಸಿದ್ಧಾಂತದ ಪ್ರಯೋಜನ. ಅತ್ಯುತ್ತಮವಾದ ಮೋಕ್ಷರೂಪವಾದ ಪ್ರಯೋಜನವು ವೇದ, ಮಹಾಭಾರತ, ಬ್ರಹ್ಮಸೂತ್ರ ಈ ಮೂರಕ್ಕೂ ಕೂಡ ಸಮಾನವಾಗಿದೆ. ಇದಕ್ಕಿಂತಲೂ ಸಹ ಅತಿಶಯಿತವಾದ ಪ್ರಯೋಜನವನ್ನು ಹೇಳಿದರೆ ಆಕಾಶದಲ್ಲಿನ ಕಮಲದಂತೆ ಅದು ಅಸಂಗತ. ಆದ್ದರಿಂದ ಅತಿಶಯಿತವಾದ ಪ್ರಯೋಜನ ಹಾಗೂ, ವಿಷಯಗಳನ್ನು, ಬ್ರಹ್ಮಸೂತ್ರ, ಭಾರತಗಳಿಗೆ ಹೇಳಿ ಆ ಅತಿಶಯಿತವಾದ ಪ್ರಯೋಜನವಿರುವ ಕಾರಣದಿಂದ ವೇದಕ್ಕಿಂತಲೂ ಸಹ ಬ್ರಹ್ಮಸೂತ್ರ, ಭಾರತಗಳಿಗೆ ಆಧಿಕ್ಯವನ್ನು ಸಂಪಾದನೆ ಮಾಡುವುದು ಅತ್ಯಂತ ಅಸಂಗತವಾದದ್ದು. ಆದ್ದರಿಂದ ಯಾವುದೇ ರೀತಿಯ ಶಂಕಾ ರಹಿತವಾದ ಅಪೌರುಷೇಯ ವೇದವೇ ಸರ್ವೋತ್ತಮವಾದ ಶಾಸ್ತ್ರ ಎಂಬುದನ್ನು ಜ್ಞಾನಿಗಳು ತಿಳಿಯಬೇಕು.

## ಪೂರ್ವಪಕ್ಷಿಗಳಿಗೆ ಚಂದ್ರಿಕೆಯ ಸಮ್ಮತಿ ಇಲ್ಲ

ಯತ್ತು ಕಿಂಚ ಚಂದ್ರಿಕಾಯಾಂ ... (ಪು-೧೩) ಇತ್ಯಾದಿನಾ ಅದೃಶ್ಯತ್ವಾಧಿಕರಣಚಂದ್ರಿಕಾವಾಕ್ಯಮನೂದ್ಯ ತಸ್ಯ ಋಗಾದ್ಯತಿರಿಕ್ತಬ್ರಹ್ಮಸೂತ್ರಸ್ಯೈವ ಪರವಿದ್ಯಾತ್ವಾಭಿಪ್ರಾಯಕತ್ವವರ್ಣನಮ್ । ತದತ್ಯಂತಾಸಂಗತಮಿತಿ ತದ್ವಾಕ್ಯದರ್ಶಿನಾಂ ಸ್ಪಷ್ಟಮೇವ ।

ಅನುವಾದ – ವ್ಯಾಸರಾಜರು ಚಂದ್ರಿಕಾಗ್ರಂಥದಲ್ಲಿ ಈ ರೀತಿ ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾರೆ ಎಂಬುದಾಗಿ ಪೂರ್ವಪಕ್ಷಕಾರರು ಹದಿಮೂರನೆಯ ಪುಟದಲ್ಲಿ ಅದೃಶ್ಯತ್ವಾಧಿಕರಣದ ಚಂದ್ರಿಕಾದಿ ವಾಕ್ಯಗಳನ್ನು ಉಲ್ಲೇಖ ಮಾಡಿ ಋಗಾದಿಗಳಿಂದ ಭಿನ್ನವಾದ ಬ್ರಹ್ಮಸೂತ್ರಕ್ಕೆ ಪರವಿದ್ಯಾತ್ವವನ್ನು ಹೇಳಿ ಇದು ವ್ಯಾಸರಾಜರಿಗೂ ಸಹ ಸಮ್ಮತ ಎಂಬುದನ್ನು ತೋರಿಸಲು ಪ್ರಯತ್ನ ಮಾಡಿದ್ದಾರೆ. ಈ ಪ್ರಯತ್ನವು ಅತ್ಯಂತ ಅಸಂಗತವಾದದ್ದು ಎಂಬುದು ಆ ವಾಕ್ಯಗಳ ಪೂರ್ವಾಪರವನ್ನು ವಿಮರ್ಶೆ ಮಾಡಿದಾಗ ವಿಮರ್ಶಕರಿಗೆ ಸ್ಪಷ್ಟವೇ ಆಗುತ್ತದೆ.

## ಚಂದ್ರಿಕಾ ಹಾಗೂ ಪ್ರಕಾಶ ವಾಕ್ಯಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಿರಿ

ಇತ್ಥಂ ಹಿ ಚಂದ್ರಿಕಾ 'ಪ್ರವೃತ್ತಂ ಚ ನಿವೃತ್ತಂ ಚ ಯದ್ವೈಕಂ ಕರ್ಮ ಕಥ್ಯತೇ । ಉಪಾಧಿ-

ಭೇದಾದ್ವಿದ್ಯಾಽಪಿ ತಥೈವೈಕಾ ಪರಾಽಪರಾ ॥... ಯಥೈಕಮೇವಾನ್ನಮುಪಾಧಿಭೇದಾತ್ ಪಥ್ಯಮಪಥ್ಯಂ ಚ ತಥಾ ಋಗಾದಿರೂಪೈಕೈವ ಸನ್‌ನ್ಯಾಯೈಃ ಪ್ರಮಿತಬ್ರಹ್ಮವಿಷಯಕಶಕ್ತಿತಾತ್ಪರ್ಯೋಪಾಧಿನಾ ಪರಾ ... ಅನ್ಯಥಾ ತ್ವಪರಾ .... ತದುಕ್ತಂ ಋಗಾದ್ಯಾ... ವಾಚಕಾಃ । ಇತಿ ॥ ಅತ್ರೋಪಾಧಿಭೇದಾದ್ವಿಭಿನ್ನಪದೋದಿತೈಕಕರ್ಮ- ಏಕಾನ್ನದೃಷ್ಟಾಂತಪ್ರದರ್ಶನಪೂರ್ವಕಮುಪಾಧಿಭೇದಾದೇಕಸ್ಯೈವ ಋಗಾದೇಃ ಪರಾಪರವ್ಯವಹಾರವಿಷಯತ್ವಂ ಸ್ವೀಕೃತಂ । ಪ್ರಮಾಣೀಕೃತಂ ಚ ಸಾವಧಾರಣಮಾಥರ್ವಣಭಾಷ್ಯಂ । ದೃಷ್ಟಾಂತದಾರ್ಷ್ಟಾಂತಿಕಯೋರೇಕಶಬ್ದಶ್ಚ ಪ್ರಯುಕ್ತಃ । ತದುತ್ತರವಾಕ್ಯಾವತಾರಿಕಾಯಾಂ 'ಸ್ವಮತೇ ಪರಾಽಪರವಿದ್ಯಾತ್ವಮುಪಾಧಿಭೇದೇನೈಕಸ್ಯೈವ ಟೀಕಾದ್ಯುಕ್ತಂ ವ್ಯಕ್ತಾವ್ಯ' ಇತಿ ಪ್ರಕಾಶೇ ಭಾವವರ್ಣನಂ ಚ ಕೃತಂ। ಸತಿ ಚೈವಂ ಋಗಾದ್ಯದಿತಿರಿಕ್ತಸ್ಯ ಬ್ರಹ್ಮಸೂತ್ರಸ್ಯೈವ ವಿದ್ಯಾತ್ವಮುಕ್ತವಾಕ್ಯಾರ್ಥ ಇತ್ಯುಕ್ತಿಃ ಭಾವಾನವಬೋಧಮೂಲಾ ವಾ ? ಅಸದಾಗ್ರಹಮೂಲಾ ವೇತಿ ವಿವೇಚಯಂತು ವಿವೇಚಕಾಃ।

ಅನುವಾದ – ಚಂದ್ರಿಕಾವಾಕ್ಯಗಳು ಹೀಗಿವೆ – 'ಇತ್ಥಂ ಹಿ ಚಂದ್ರಿಕಾ .......... ಒಂದೇ ಕರ್ಮವು ಪ್ರವೃತ್ತ ಹಾಗೂ ನಿವೃತ್ತ ಎಂಬುದಾಗಿ ಉಪಾಧಿಭೇದದಿಂದ ಎರಡು ವಿಧವಾಗಿ ಹೇಗೆ ಕರೆಸಿಕೊಳ್ಳಲ್ಪಡುತ್ತದೋ ಅದರಂತೆ ವಿದ್ಯೆಯೂ ಸಹ ಉಪಾಧಿಭೇದದಿಂದ ಪರವಿದ್ಯೆ ಹಾಗೂ ಅಪರವಿದ್ಯೆ ಎಂದು ಕರೆಸಿಕೊಳ್ಳಲ್ಪಡುತ್ತವೆ.

ಒಂದೇ ಅನ್ನವು ಉಪಾಧಿಭೇದದಿಂದ ಪಥ್ಯವೂ ಆಗುತ್ತದೆ, ಅಪಥ್ಯವೂ ಆಗುತ್ತದೆ. ಹಾಗೆಯೇ ಋಗಾದಿ ರೂಪವಾದ ವಿದ್ಯೆಯು ನ್ಯಾಯಗಳಿಂದ ಸೇರಿಕೊಂಡು ಬ್ರಹ್ಮವಿಷಯಕವಾದ ಶಕ್ತಿ ತಾತ್ಪರ್ಯಗಳನ್ನು ಪಡೆದಾಗ ಪರವಿದ್ಯೆ ಎಂದು, ಇಲ್ಲದೇ ಇದ್ದ ಸಂದರ್ಭದಲ್ಲಿ ಅಪರವಿದ್ಯೆ ಎಂದು ಕರೆಸಿಕೊಳ್ಳಲ್ಪಡುತ್ತದೆ. ಇದನ್ನು ಆಥರ್ವಣಭಾಷ್ಯದ 'ಋಗಾದ್ಯಾಃ' ಎಂಬ ವಾಕ್ಯವು ಸ್ಪಷ್ಟಪಡಿಸುತ್ತಿದೆ ಎಂಬುದಾಗಿ ಚಂದ್ರಿಕಾವಾಕ್ಯವು ಹೇಳುತ್ತಿದೆ.

ಈ ಪ್ರಸಂಗದಲ್ಲಿ ಉಪಾಧಿಭೇದದಿಂದ ವಿಭಿನ್ನವಾದ ಎರಡು ಪದಗಳಿಂದ ವಾಚ್ಯವಾದದ್ದು ಒಂದೇ ಕರ್ಮವೇ ಆಗಿದೆ. ಅದರಂತೆ ಅನ್ನದ ದೃಷ್ಟಾಂತವನ್ನು ಕೊಡಲಾಗಿದೆ. ಹೀಗೆ ಕರ್ಮ ಹಾಗೂ ಅನ್ನದ ದೃಷ್ಟಾಂತ ಪೂರ್ವಕವಾಗಿ ಉಪಾಧಿ ಭೇದವನ್ನು ಒಪ್ಪಿ ಒಂದೇ ಋಗಾದಿಗಳಿಗೆ ಪರಾಪರ ವ್ಯವಹಾರವಿಷಯತ್ವವು ಇದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಇದಕ್ಕೆ ಆಥರ್ವಣಭಾಷ್ಯದ ವಾಕ್ಯವನ್ನು ಉದಾಹರಿಸಿ 'ತಾ ಏವ' ಎಂಬುದಾಗಿ ಅವಧಾರಣ ಘಟಿತವಾದ ವಾಕ್ಯದಿಂದ ಈ ವಿಷಯದಲ್ಲಿ ಯಾವುದೇ ವ್ಯತ್ಯಾಸವಿಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸಲಾಗಿದೆ ಹಾಗೂ ದೃಷ್ಟಾಂತ ದಾರ್ಷ್ಟಾಂತಿಕಗಳಲ್ಲಿ ಸಾಮ್ಯವನ್ನು ತೋರಿಸಲು ಏಕ ಎಂಬ ಶಬ್ದವನ್ನೂ ಸಹ ಪ್ರಯೋಗ ಮಾಡಲಾಗಿದೆ.





ಈ ಪ್ರಸಂಗದಲ್ಲಿ ರಾಘವೇಂದ್ರಗುರುಸಾರ್ವಭೌಮರು ಚಂದ್ರಿಕಾಭಾವವನ್ನು ತಮ್ಮ ಪ್ರಕಾಶದಲ್ಲಿ ಈ ರೀತಿ ಸ್ಪಷ್ಟಪಡಿಸಿದ್ದಾರೆ. ನಮ್ಮ ಮತದಂತೆ ಪರವಿದ್ಯೆ-ಅಪರವಿದ್ಯೆ ಎಂಬ ಭೇದವು ಉಪಾಧಿಭೇದದಿಂದಲೇ. ಇದನ್ನು ಟೀಕಾಕಾರರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ. ಇದನ್ನೇ ವ್ಯಾಸರಾಜರು ಚಂದ್ರಿಕಾದಲ್ಲಿ ಸಮರ್ಥನೆ ಮಾಡಿ ತೋರಿಸಿದ್ದಾರೆ. ಹೀಗಿರಬೇಕಾದರೆ ಋಗಾದಿಗಳಿಗಿಂತ ಭಿನ್ನವಾದ ಬ್ರಹ್ಮಸೂತ್ರಕ್ಕೆ ವಿದ್ಯಾತ್ವವು ಇದೆ ಎಂಬುದು ಹಿಂದೆ ಹೇಳಿದ ವಾಕ್ಯಗಳ ಅಭಿಪ್ರಾಯ ಎಂದು ಪೂರ್ವಪಕ್ಷಕಾರರು ಹೇಳುತ್ತಿದ್ದಾರೆ. ಮೂಲ ಹಾಗೂ ಟೀಕೆಗಳ ನಿಜವಾದ ಅಭಿಪ್ರಾಯವನ್ನು ತಿಳಿಯದೇ ವ್ಯಾಸರಾಜರ, ರಾಯರ ವಾಕ್ಯಗಳನ್ನು ವಿಮರ್ಶೆ ಮಾಡದೇ ಅಥವಾ ಕೇವಲ ದುಷ್ಟ ಆಗ್ರಹ ಮೂಲಕವಾದದ್ದು ಅಥವಾ ಇದು ಎಷ್ಟು ಸಮಂಜಸ ಎಂಬುದನ್ನು ವಿವೇಕಿಗಳು ತಿಳಿದುಕೊಳ್ಳಲಿ.

## ವ್ಯಾಹತಭಾಷಿತ್ವವನ್ನು ವಿಮರ್ಶಕರು ತಿಳಿಯಲಿ

ಏವಂ ಬ್ರಹ್ಮಸೂತ್ರಸ್ಯೈವ ಪರವಿದ್ಯಾತ್ವೇ ಸಾಧಕತ್ವೇನ ತದುಪನ್ಯಸ್ತಂ, ಪರಪಕ್ಷೇ ಬಾಧಕತ್ವೇನೋದಾಹೃತಂ ಸರ್ವಮಪಿ ವ್ಯಾಹತ್ಯಾದಿದೋಷದುಷ್ಟತಯಾಽಸಂಬದ್ಧಪ್ರಲಾಪ ಏವೇತಿ ವ್ಯುತ್ಪನ್ನವಿಮರ್ಶಕಾ ವಿದಾಂಕುರ್ವಂತು ।

ಅನುವಾದ - ಹೀಗೆ ಬ್ರಹ್ಮಸೂತ್ರವೇ ಪರವಿದ್ಯೆ ಎಂಬ ವಿಷಯದಲ್ಲಿ ಪ್ರಮಾಣವನ್ನು ಹೇಳಲಾಗಿದೆ ಹಾಗೂ ಪೂರ್ವಪಕ್ಷಿಗಳ ವಿಷಯಕ್ಕೆ ಬಾಧಕವಾದ ಪ್ರಮಾಣಗಳನ್ನೂ ಸಹ ಹೇಳಲಾಗಿದೆ. ಪೂರ್ವಪಕ್ಷಿಗಳ ವಾಕ್ಯದಲ್ಲಿ ವ್ಯಾಹತ್ಯಾದಿ ದೋಷಗಳಿರುವುದನ್ನೂ ಸಹ ವಿವೇಕಿಗಳು, ವ್ಯುತ್ಪನ್ನರಾದವರು, ವಿಮರ್ಶಕರು ವಿಚಾರ ಮಾಡಬೇಕು ಈ ಪ್ರಸಂಗದಲ್ಲಿ.

## ಗುರ್ವರ್ಥದೀಪಿಕೆಯಲ್ಲಿ ಏನು ಹೇಳಿದ್ದಾರೆ ?

ಅಪರಂ ಚ 'ಕಿಂಚ ಶ್ರೀಶ್ರೀಮದ್ವಾದಿರಾಜತೀರ್ಥಶ್ರೀಮಚ್ಚರಣಾಃ ಸುಧಾಟಿಪ್ಪಣ್ಯಾಂ ಅಪರವಿದ್ಯಾತ್ವೇನೋಕ್ತವೇದವಿದ್ಯಾಪ್ಯಪೌರುಷೇಯತ್ವಾದ್ಯದಾ ಪ್ರಮಾಣಂ ತದಾ ತತೋಽತ್ಯುತ್ತಮ-ವಿದ್ಯಾತ್ವೇನೋಕ್ತಾಕ್ಷರ ವಿದ್ಯಾರೂಪಬ್ರಹ್ಮಮೀಮಾಂಸಾಯಾಃ ಪ್ರಾಮಾಣ್ಯಂ ಕಿಂ ವಕ್ತವ್ಯಮಿತಿ ಭಾವ ಇತಿ ವೇದಾದಪಿ ಬ್ರಹ್ಮಮೀಮಾಂಸಾಶಾಸ್ತ್ರಸ್ಯೋತ್ತಮತ್ವಂ ಕಂಠತ ಏವೋಕ್ತವಂತಃ' (ಪು-೧೩) ಇತ್ಯುದಾಹೃತಂ। ತದಪಿ ಭಾವಾನವಬೋಧವಿಜೃಂಭಿತಮ್ ।

ಅನುವಾದ - ಪೂರ್ವಪಕ್ಷಿಗಳು ತಮ್ಮ ಗ್ರಂಥದ ಹದಿಮೂರನೆಯ ಪತ್ರದಲ್ಲಿ ವಾದಿರಾಜರ ಸುಧಾಟಿಪ್ಪಣಿಯ ವಾಕ್ಯಗಳನ್ನು ಹೇಳಿ ವಾದಿರಾಜರಿಗೂ ಸಹ ಅಪರವಿದ್ಯಾತ್ವವು ಸಮ್ಮತವಾಗಿದೆ ಎಂಬುದನ್ನು

ಹೇಳಿದ್ದಾರೆ. ಅಪರವಿದ್ಯಾ ಎಂದು ವೇದವಿದ್ಯೆಯು ಕರೆಸಿಕೊಳ್ಳುತ್ತದೆ. ಇದು ಅಪೌರುಷೇಯವಾದ ಕಾರಣ ಪ್ರಮಾಣವಾಗಿದೆ. ಇದಕ್ಕಿಂತಲೂ ಸಹ ಉತ್ತಮತ್ವವು ಅಕ್ಷರವಿದ್ಯಾರೂಪವಾದ ಬ್ರಹ್ಮಮೀಮಾಂಸೆಗೆ ಇದೆ. ಆದ್ದರಿಂದ ಅಪರವಿದ್ಯೆಯಾದ ವೇದವು ಅಪೌರುಷೇಯವಾದ ಕಾರಣ ಯಾವಾಗ ಪ್ರಮಾಣವೆನಿಸುತ್ತದೋ, ಅದಕ್ಕಿಂತಲೂ ಉತ್ತಮವೆನಿಸಿದ ಬ್ರಹ್ಮಮೀಮಾಂಸೆಗೆ ಪ್ರಾಮಾಣ್ಯವನ್ನು ಪ್ರತ್ಯೇಕವಾಗಿ ಹೇಳಬೇಕೇನು? ಎಂಬುದನ್ನು ಕಂಠತಃ ಹೇಳಿದ್ದಾರೆಂಬುದನ್ನು ಉದಾಹರಿಸಿದ್ದಾರೆ. ಇದೂ ಸಹ ವಾದಿರಾಜರ ನಿಜವಾದ ಹಾರ್ದವನ್ನು ತಿಳಿಯದೇ ಆಡಿದ ಮಾತುಗಳು.

## ಭಾವೀಸಮೀರರ ಮಾತುಗಳಲ್ಲಿ ವೈರುಧ್ಯ ಕಲ್ಪನೆ ಅಯುಕ್ತ

ತಥಾಹಿ - ಶ್ರೀಮದ್ವಾದಿರಾಜಪೂಜ್ಯಪಾದೈರೇವ ವಿರಚಿತಾಯಾಂ ತತ್ವಪ್ರಕಾಶಿಕಾಟಿಪ್ಪಣ್ಯಾಂ 'ಉದ್ಯೈದಿತಿ ಪದಮಹಿಮ್ನಾ ಇಂದಿರಾಸಾಮ್ಯೇನೇತರವಿದ್ಯಾನಾಂ ಪೃಥಗುಕ್ತೇಶ್ಚ ವೇದವಿದ್ಯೈವ ವಿದ್ಯಾ' (ಪು-೪) ತತ್ರೈವ ಅಥೇತ್ಯಾರಭ್ಯ ಚಕಾರೇತ್ಯಂತಂ ಭಾಷ್ಯಂ ತು ವೇದಸ್ಯೇಷ್ಟಸಾಧನ-ಬೋಧಕತಾಮನಾದಿತ್ವೇನ ಸರ್ವೋತ್ತಮಪ್ರಾಮಾಣ್ಯಂ ಚ ಪ್ರದರ್ಶ್ಯ, ತದರ್ಥನಿರ್ಣಯಾಯೇತಿ ವಚನಾದ್ ಬ್ರಹ್ಮಸೂತ್ರಾಣಾಮಪೀಷ್ಟಸಾಧನಾವಬೋಧಕತ್ವಂ ಶ್ರುತಿಮೂಲತಯಾ, ಶ್ರೌತಯುಕ್ತಿ-ಮೂಲತಯಾ ಚ ಸರ್ವೋತ್ತಮಪ್ರಾಮಾಣ್ಯಂ ಚ ಪ್ರಸಾದಯಿತುಂ ಪ್ರವೃತ್ತಮಿತಿ ಹೃದಯಂ (ಪು-೫) ಇತಿ ವರ್ಣಿತಂ। ಭಾವಿಸಮೀರತ್ವೇನ ಸಂಭಾವಿತಾನಾಮೇತೇಷಾಂ ಪೂಜ್ಯಪಾದಾನಾಂ ವಚನಮತಿ-ಗಂಭೀರತಯಾ ಭಾವಗರ್ಭಿತಮಿತಿ ಸಂಪ್ರತಿಪನ್ನಮ್। ಉಕ್ತಸುಧಾಟಿಪ್ಪಣೀವಾಕ್ಯಂ ಚ ಉಕ್ತಸ್ಥಲದ್ವಯಗತ ತತ್ವಪ್ರಕಾಶಿಕಾಟಿಪ್ಪಣೀವಾಕ್ಯಾವಿರೋಧೇನೈವ ನೇತವ್ಯಂ । ನ ಹೀದೃಶಮಹಾನಾನುಭಾವನಾಂ ವಿರುದ್ಧವಚನಂ ಸಂಭಾವಿತಂ। ಉದ್ಯೈದಿತ್ಯಾದಿ ಪ್ರಥಮವಾಕ್ಯೇನ ಸಯುಕ್ತಿಕಂ ವೇದಸ್ಯೈವ ವಿದ್ಯಾತ್ವಂ ನಿರ್ಧಾರಿತಮವಧಾರಣೇನೇತಿ ಸ್ಪಷ್ಟಂ। ಅನೇನ ಸರ್ವಾಸು ವಿದ್ಯಾಸು ವೇದಸ್ಯ ಪ್ರಾಧಾನ್ಯಮಭಿಪ್ರೇಯತ ಇತಿ ಸಿದ್ಧಂ।

ಅನುವಾದ - ವಾದಿರಾಜರ ಅಭಿಪ್ರಾಯವನ್ನು ತತ್ವಪ್ರಕಾಶಿಕೆಯಲ್ಲೇ ನಾವು ಕಾಣಬಹುದು. ತತ್ವಪ್ರಕಾಶಿಕೆಯ ಮಂಗಳಾಚರಣೆಯಲ್ಲಿ 'ಯತ ಉದ್ಯೈತ್ ವಿದ್ಯೇಂದಿರಾ' ಎಂಬ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ ಎರಡು ವಿಷಯಗಳನ್ನು ಗುರ್ವರ್ಥ ದೀಪಿಕೆಯಲ್ಲಿ ಉಲ್ಲೇಖ ಮಾಡಿದ್ದಾರೆ.

೧) ಉದ್ಯೈತ್ ಎಂಬ ಪದದ ಮಹಿಮೆಯಿಂದ ವೇದವಿದ್ಯೆಯೇ ವಿದ್ಯೆಯೆಂದು ತಿಳಿಯುತ್ತದೆ. ಲಕ್ಷ್ಮೀದೇವಿಯ ಸಾಮ್ಯವನ್ನು ವೇದವಿದ್ಯೆಗೆ ಕೊಟ್ಟು ಹಾಗೂ ಬೇರೆ ವಿದ್ಯೆಗಳನ್ನು ಪ್ರತ್ಯೇಕವಾಗಿ ಹೇಳಿರುವ ಕಾರಣ ವಿದ್ಯಾಶಬ್ದ ವಾಚ್ಯತ್ವವು ಸಾಕ್ಷಾತ್ ವೇದವಿದ್ಯೆಗೇ ಇರುತ್ತದೆ.

೨) ಅಥ ಎಂಬಲ್ಲಿಂದ ಆರಂಭ ಮಾಡಿಕೊಂಡು ಚಕಾರ ಎಂಬಲ್ಲಿನವರೆಗಿನ ಭಾಷ್ಯವು ವೇದಕ್ಕೆ ಸರ್ವೋತ್ತಮ ಪ್ರಾಮಾಣ್ಯವನ್ನು ತೋರಿಸುತ್ತಿದೆ. ಹಾಗೂ ಇಷ್ಟಸಾಧನವಾದ ಭಗವಂತನನ್ನು ಬೋಧನೆ ಮಾಡುತ್ತಿದೆ ಹಾಗೂ ಅನಾದಿಯಾಗಿದೆ. ಇಂತಹ ವೇದದ ಅರ್ಥದ ನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ರಚನೆ ಮಾಡಿದ್ದಾರೆ. ಬ್ರಹ್ಮಸೂತ್ರಗಳೂ ಸಹ ಇಷ್ಟಸಾಧನವನ್ನು ತಿಳಿಸುತ್ತಿವೆ. ಶ್ರುತಿಮೂಲಕವಾಗಿವೆ. ಹಾಗೂ ಶ್ರುತ್ಯುಕ್ತವಾದ ಯುಕ್ತಿಮೂಲಕವಾಗಿವೆ. ಆದ್ದರಿಂದ ಸರ್ವೋತ್ತಮ- ಪ್ರಾಮಾಣ್ಯವನ್ನು ಸಾಧನೆ ಮಾಡಲು ಮೇಲೆ ಹೇಳಿದ ಭಾಷ್ಯವಾಕ್ಯವು ಪ್ರವೃತ್ತವಾಗಿದೆ ಎಂದು ವರ್ಣಿಸಲಾಗಿದೆ.

ಹೀಗೆ ಎರಡು ಸ್ಥಳಗಳಲ್ಲಿ ಗುರ್ವರ್ಥದೀಪಿಕೆಯು ತನ್ನ ನಿಜವಾದ ಅಭಿಪ್ರಾಯವನ್ನು ಸ್ಪಷ್ಟಪಡಿಸಿದೆ. ಭಾವೀಸಮೀರರೆಂದು ಸಂಭಾವಿತರಾದ ಪೂಜ್ಯರಾದ ಶ್ರೀವಾದಿರಾಜ ಶ್ರೀಮಚ್ಚರಣರ ವಚನವು ಅತ್ಯಂತ ಗಂಭೀರವಾಗಿ ಅನೇಕ ಅಭಿಪ್ರಾಯಗಳನ್ನು ಒಳಗೊಂಡಿರುವುದಾಗಿ ಎಲ್ಲರೂ ಸಹ ಅಂಗೀಕಾರ ಮಾಡಿದ್ದಾರೆ. ಆದ್ದರಿಂದ ಹಿಂದೆ ಹೇಳಿದ ಸುಧಾಟಿಪ್ಪಣಿಯ ವಾಕ್ಯವನ್ನೂ ಸಹ ತತ್ವಪ್ರಕಾಶಿಕಾ ಟಿಪ್ಪಣಿಗೆ ಅವಿರುದ್ಧವಾಗಿಯೇ ಅರ್ಥೈಸಬೇಕು. ಶ್ರೀವಾದಿರಾಜ ಶ್ರೀಮಚ್ಚರಣರಂತಹ ಮಹಾನುಭಾವರ ಮಾತಿಗೆ ವಿರುದ್ಧವಾದ ಅಭಿಪ್ರಾಯವು ಯಾರಿಗೂ ಸಹ ಸಂಭಾವಿತವಲ್ಲ.

ಉದ್ಧೃತ್ ಮುಂತಾದ ಮೊದಲನೆಯ ವಾಕ್ಯದಿಂದ ವೇದವಿದ್ಯೆಗೆ ವಿದ್ಯಾತ್ವವನ್ನು ಯುಕ್ತಿಯುಕ್ತವಾಗಿ ನಿರ್ಧಾರ ಮಾಡಲಾಗಿದೆ. ಅಲ್ಲಿರುವ ಅವಧಾರಣವಾಚಕವಾದ ಏವ ಶಬ್ದವು ಸಹ ಇದನ್ನು ಸ್ಪಷ್ಟಪಡಿಸಿ ತೋರಿಸುತ್ತಿದೆ. ಇದರಿಂದ ಎಲ್ಲಾ ವಿದ್ಯೆಗಳ ನಡುವೆ ವೇದವೇ ಪ್ರಧಾನ ಎಂಬುದು ಶ್ರೀವಾದಿರಾಜರಿಗೆ ಅಭಿಪ್ರೇತವಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

## ಶ್ರೀವಾದಿರಾಜರ ಮಾತಿಗೆ ಯಥಾರ್ಥವ್ಯಾಖ್ಯಾನ

ಉದಾಹೃತದ್ವಿತೀಯವಾಕ್ಯೇನ ಚ ವೇದಸ್ಯಾನಾದಿತ್ವೇನ ಸರ್ವೋತ್ತಮಪ್ರಾಮಾಣ್ಯಮುಕ್ತ್ವಾ, ತನ್ಮೂಲತ್ವಾದಿನಾ ಬ್ರಹ್ಮಸೂತ್ರಾಣಾಂ ಸರ್ವೋತ್ತಮಪ್ರಾಮಾಣ್ಯಸಾಧನಂ ಭಾಷ್ಯಭಾವ ಇತಿ ವರ್ಣಿತಂ। ಅತ್ರೋಭಯೋರ್ವೇದಸೂತ್ರಯೋಃ ಸರ್ವೋತ್ತಮಪ್ರಾಮಾಣ್ಯಮಿತ್ಯೇವ ಶ್ರೂಯತೇ । ಉಭಯೋಃಸರ್ವೋತ್ತಮತ್ವಂ ಚ ನ ಸಂಭವತಿ, ವಿಲಕ್ಷಣತ್ವಾತ್ । ಅತಃ ಸಂಕೋಚಃ ಕಾರ್ಯಃ । ವೇದಪ್ರಾಮಾಣ್ಯೇ ಸಂಕೋಚಸ್ತು ಕರ್ತುಮಶಕ್ಯಃ; ತಸ್ಯಾನಾದಿತ್ವೇನಾನಾಶಂಕಿತಪ್ರಾಮಾಣ್ಯಕತ್ವ-ಮಹಿಮ್ನೋಽನಿತರಸಾಧಾರಣತ್ವಾದತಃ ಪರಿಶೇಷಾದ್ವೇದಮೂಲತ್ವಾದಿನಾ ಪ್ರಾಮಾಣ್ಯಮಶ್ನುವತೋ ಬ್ರಹ್ಮಸೂತ್ರಸ್ಯೋಪಜೀವ್ಯವೇದಾದುತ್ತಮತ್ವಸ್ಯಾಸಂಭಾವಿತತ್ವಾಚ್ಚ ನಿರ್ಣಾಯಕಸರ್ವಗ್ರಂಥೇಷ್ವೇತತ್ ಸೂತ್ರಸ್ಯೈವೋತ್ತಮತ್ವಮಿತಿ ಸೂತ್ರಾಣಾಮುತ್ತಮತ್ವಮೇವ ಸಂಕೋಚಯಿತವ್ಯಂ। ಸೂಚಿತಂ ಚೈವಂ





ಸಂಕೋಚಕರಣಮುತ್ತರತ್ರ 'ಇತರಸೂತ್ರೇಭ್ಯೋಽಪ್ಯಾಂಜಸ್ಯಂ ಸರ್ವಶಬ್ದನಿರ್ಣಾಯಕತ್ವಂ ಚಾಸ್ತೀತಿ ಭಾವೇನ - ' ಇತ್ಯಾದಿವದದ್ಭಿಃ ಪೂಜ್ಯಪಾದೈರೇವ । ಏವಂ ಚ ವೇದಸ್ಯ ಸರ್ವವಿದ್ಯಾಪ್ರಾಧಾನ್ಯಂ ಬ್ರಹ್ಮಸೂತ್ರಸ್ಯ ನಿರ್ಣಾಯಕೋತ್ತಮತ್ವಂ ಚೋಕ್ತವತಾಂ ಪೂಜ್ಯಪಾದಾನಾಂ ತದ್ವಿರುದ್ಧಾರ್ಥ-ವರ್ಣನಮಸಂಗತಮೇವ । ಅತಃ ಸುಧಾಟಿಪ್ಪಣೀವಾಕ್ಯಮಪಿ ತದೇಕವಾಕ್ಯತಯಾ ವ್ಯಾಖ್ಯೇಯಂ ।

ಅನುವಾದ - ಮೇಲೆ ಹೇಳಿದ ಗುರ್ವರ್ಥದೀಪಿಕೆಯ ಎರಡನೆಯ ವಾಕ್ಯದಿಂದ ಸೂತ್ರಭಾಷ್ಯದ ಅಭಿಪ್ರಾಯವು ವರ್ಣಿತವಾಗಿದೆ. ವೇದವು ಅನಾದಿಯಾದ್ದರಿಂದ ಸರ್ವೋತ್ತಮಪ್ರಮಾಣ. ತನ್ಮೂಲಕವಾದ್ದರಿಂದ ಬ್ರಹ್ಮಸೂತ್ರವೂ ಸಹ ಸರ್ವೋತ್ತಮ ಪ್ರಮಾಣ ಎಂಬುದು ಇಲ್ಲಿನ ಭಾಷ್ಯದ ಅಭಿಪ್ರಾಯ. ಇಲ್ಲಿ ವೇದ ಹಾಗೂ ಸೂತ್ರಗಳಿಗೆ ಸರ್ವೋತ್ತಮ ಪ್ರಾಮಾಣ್ಯವು ಇದೆ ಎಂದು ಕೇಳಿಸುತ್ತಿದೆ. ಆದರೆ ಎರಡು ಪದಾರ್ಥಗಳು ಸರ್ವೋತ್ತಮವಾಗಲು ಸಾಧ್ಯವಿಲ್ಲ, ವಿಲಕ್ಷಣವಾದ್ದರಿಂದ. ಆದ್ದರಿಂದ ಎರಡರ ಸರ್ವೋತ್ತಮತ್ವದ ವಿಷಯದಲ್ಲಿ ಯಾವುದಾದರು ಒಂದನ್ನು ಸಂಕೋಚ ಮಾಡಬೇಕು. ಇವೆರಡರಲ್ಲಿ ವೇದದ ಪ್ರಾಮಾಣ್ಯದ ವಿಷಯದಲ್ಲಿ ಸಂಕೋಚವನ್ನು ಮಾಡಲು ಸಾಧ್ಯವಿಲ್ಲ. ವೇದವು ಅನಾದಿಯಾಗಿದೆ. ಈ ಕಾರಣದಿಂದಲೇ ಅದರ ಪ್ರಾಮಾಣ್ಯದ ವಿಷಯದಲ್ಲಿ ಯಾವುದೇ ರೀತಿಯ ಸಂಶಯ ಬರುವುದಿಲ್ಲ ಎಂಬುದು ಇದರ ಹಿರಿಮೆ. ಇದು ಅನಿತರಸಾಧಾರಣವಾಗಿದೆ. ಆದ್ದರಿಂದ ವೇದದ ವಿಷಯದಲ್ಲಿ ಸಂಕೋಚವನ್ನು ಮಾಡಲು ಸಾಧ್ಯವಿಲ್ಲ. ಹಾಗಾದರೆ ಬ್ರಹ್ಮಸೂತ್ರದ ವಿಷಯದಲ್ಲೇ ಸರ್ವೋತ್ತಮತ್ವವನ್ನು ಸಂಕೋಚ ಮಾಡಬೇಕು. ಬ್ರಹ್ಮಸೂತ್ರಗಳು ವೇದಮೂಲತ್ವೇನ ಪ್ರಾಮಾಣ್ಯವನ್ನು ಪಡೆಯುತ್ತವೆ. ಆದ್ದರಿಂದ ಉಪಜೀವ್ಯವಾದ ವೇದಕ್ಕಿಂತಲೂ ಸಹ ಬ್ರಹ್ಮಸೂತ್ರವು ಉತ್ತಮವಾಗಲು ಸಾಧ್ಯವಿಲ್ಲ. ಆದ್ದರಿಂದ ನಿರ್ಣಾಯಕವಾದ ಎಲ್ಲಾ ಗ್ರಂಥಗಳ ನಡುವೆ ಈ ಬ್ರಹ್ಮಸೂತ್ರವೇ ಉತ್ತಮವಾದದ್ದು ಎಂದು ಸಂಕೋಚ ಮಾಡಬೇಕು. ಇದಕ್ಕೆ ಕಾರಣವನ್ನೂ ಸಹ ಮುಂದೆ ಅವರೇ ಸೂಚನೆ ಮಾಡಿದ್ದಾರೆ - 'ಇತರ ಸೂತ್ರಗಳಿಗಿಂತ ವಿಶೇಷತೆಯು ಈ ಬ್ರಹ್ಮಸೂತ್ರಗಳಿಗೆ ಇದೆ. ಸರ್ವಶಬ್ದನಿರ್ಣಾಯಕತ್ವವೂ ಸಹ ಇದೆ' ಎಂದು ಪೂಜ್ಯಪಾದರಾದ ಶ್ರೀವಾದಿರಾಜರೇ ಹೇಳಿದ್ದಾರೆ. ಹೀಗೆ ವೇದವು ಸರ್ವವಿದ್ಯೆಗಳಲ್ಲಿ ಸಹ ಪ್ರಧಾನವಾಗಿದೆ . ಬ್ರಹ್ಮಸೂತ್ರವು ನಿರ್ಣಾಯಕಗಳಲ್ಲಿ ಪ್ರಧಾನವಾಗಿದೆ. ಈ ಅಭಿಪ್ರಾಯವನ್ನು ಹೇಳಿರುವ ಪೂಜ್ಯಪಾದರಾದ ಶ್ರೀವಾದಿರಾಜರ ಮಾತಿಗೆ ವಿರುದ್ಧಾರ್ಥವನ್ನು ವರ್ಣಿಸುವುದು ಅಸಂಗತವಾಗಿದೆ. ಆದ್ದರಿಂದ ವಾದಿರಾಜರ ಸುಧಾ ಟಿಪ್ಪಣಿಯನ್ನೂ ಸಹ ತತ್ವಪ್ರಕಾಶಿಕಾ ವಾಕ್ಯಕ್ಕೆ ಅನುಗುಣವಾಗಿಯೇ ವ್ಯಾಖ್ಯಾನ ಮಾಡಬೇಕು.

## ವೇದಗಳೇ ಮುಖ್ಯಪರವಿದ್ಯೆ ಎಂಬುದು ರಾಜರ ಅಭಿಪ್ರಾಯ

ತಥಾಹಿ - ಏತದ್ವಾಕ್ಯೇ ವೇದವಿದ್ಯೇತ್ಯತಃ ಪ್ರಾಕ್ ನಿರ್ಣೀತವ್ಯಾರ್ಥೇತಿ ಯೋಜ್ಯಂ। ಅಕ್ಷರವಿದ್ಯೇತಿ ಭಾವಪ್ರಧಾನೋ ನಿರ್ದೇಶಃ । ರೂಪಶಬ್ದೋ ರೂಪ್ಯತೇಽನೇನೇತಿ ವ್ಯುತ್ಪತ್ತ್ಯಾ ಜ್ಞಾಪಕಪರಃ । ತಥಾ ಚ

ನಿರ್ಣೀತವ್ಯಾರ್ಥವೇದವಿದ್ಯಾತೋಽಪ್ಯುತ್ತಮವಿದ್ಯಾತ್ವೇನೋಕ್ತಾಯಾಸ್ತಸ್ಯಾ ಏವ ವೇದವಿದ್ಯಾಯಾ ಅಕ್ಷರವಿದ್ಯಾತ್ವ(ಅಕ್ಷರಬೋಧಕತ್ವ) ಜ್ಞಾಪಕಬ್ರಹ್ಮಮೀಮಾಂಸಾಯಾಃ ಪ್ರಾಮಾಣ್ಯಂ ಕಿಂ ವಕ್ತವ್ಯಮಿತ್ಯೇವ ಪೂಜ್ಯಪಾದಾನಾಮಾಶಯ ಇತಿ ಬ್ರಹ್ಮಸೂತ್ರಸ್ಯ ವೇದಾದುತ್ತಮತ್ವೇ ನೇದಂ ಸಾಧಕಂ। ಪ್ರತ್ಯುತ ವೇದಸ್ಯ ಸರ್ವೋತ್ತಮತ್ವಮೇವ ದೃಢಯತೀತಿ ವೇದಸ್ಯ ಸ್ವರೂಪತೋಽರ್ಥತಶ್ಚ ಸರ್ವಶಾಸ್ತ್ರೋತ್ತಮತ್ವೇನ ತಸ್ಯೈವ ಪರವಿದ್ಯಾತ್ವಂ ಪ್ರಧಾನಂ । ತದರ್ಥನಿರ್ಣಾಯಕತ್ವಾದಿನಾಽಪ್ರಧಾನ್ಯೇನ ಬ್ರಹ್ಮಸೂತ್ರಾದೀನಾಂ ಪರವಿದ್ಯಾತ್ವವ್ಯಪದೇಶಶ್ಚೇತಿ ಸರ್ವಂ ಸಮಂಜಸಂ ॥

**ಅನುವಾದ** - ಸುಧಾವಾಕ್ಯವನ್ನು ತತ್ವಪ್ರಕಾಶಿಕಾವಾಕ್ಯಕ್ಕೆ ಅನುಗುಣವಾಗಿ ವ್ಯಾಖ್ಯಾನ ಮಾಡಬೇಕು. ಅದು ಹೀಗೆ - ಸುಧಾಟಿಪ್ಪಣವಾಕ್ಯದಲ್ಲಿ ವೇದವಿದ್ಯಾ ಎಂಬ ಪದಕ್ಕಿಂತ ಮೊದಲು ನಿರ್ಣೀತವ್ಯಾರ್ಥಾ ಎಂಬುದನ್ನು ಯೋಜನೆ ಮಾಡಬೇಕು. ಅಕ್ಷರವಿದ್ಯಾ ಎಂಬುದು ಭಾವಪ್ರಧಾನನಿರ್ದೇಶವಾಗಿದೆ. ರೂಪ್ಯತೇ ಅನೇನ' ಎಂಬ ವ್ಯುತ್ಪತ್ತಿಯಿಂದ ರೂಪಶಬ್ದಕ್ಕೆ ಜ್ಞಾಪಕ ಎಂದರ್ಥ. ಆದ್ದರಿಂದ ಈ ಅರ್ಥವನ್ನು ಹೇಳಿದಂತಾಗುತ್ತದೆ - 'ವೇದವಿದ್ಯೆಯು ನಿರ್ಣೀತವ್ಯವಾದ ಅರ್ಥವುಳ್ಳದ್ದಾಗಿದೆ. ಇಂಥ ವೇದಕ್ಕಿಂತಲೂ ಕೂಡ ಬ್ರಹ್ಮಸೂತ್ರವು ಉತ್ತಮವಿದ್ಯೆ ಎಂದು ಹೇಳಲಾಗಿದೆ. ಮತ್ತು ಆ ವೇದವಿದ್ಯೆಯು ಅಕ್ಷರಬೋಧಕವಾಗಿದೆ ಎಂಬುದಕ್ಕೆ ಜ್ಞಾಪಕವೂ ಕೂಡ ಆಗಿದೆ. ಇಂಥ ಬ್ರಹ್ಮಮೀಮಾಂಸೆಗೆ ಪ್ರಾಮಾಣ್ಯವನ್ನು ಪ್ರತ್ಯೇಕವಾಗಿ ಹೇಳಬೇಕೇನು ?' ಪೂಜ್ಯಪಾದರಾದ ಶ್ರೀವಾದಿರಾಜರ ಅಭಿಪ್ರಾಯ ಇದೇ ಆಗಿದೆ. ಹಾಗಾಗಿ ವೇದಕ್ಕಿಂತಲೂ ಬ್ರಹ್ಮಸೂತ್ರವು ಶ್ರೇಷ್ಠವಾಗಿದೆ ಎಂಬಲ್ಲಿ ಈ ವಾಕ್ಯವು ಸಾಧಕವಾಗುವುದಿಲ್ಲ. ನಿಮ್ಮ ಅಭಿಪ್ರಾಯಕ್ಕೆ ವಿಪರೀತವಾದದ್ದಕ್ಕೆ ಸಾಧಕವಾಗಿದೆ - ವೇದಕ್ಕೆ ಸರ್ವೋತ್ತಮತ್ವವನ್ನು ಈ ಬ್ರಹ್ಮಸೂತ್ರವು ಸಮರ್ಥನೆ ಮಾಡುತ್ತಿದೆ. ಸ್ವರೂಪತಃ ಮತ್ತು ಅರ್ಥತಃ ವೇದವು ಸರ್ವಶಾಸ್ತ್ರೋತ್ತಮವಾಗಿದೆ. ಅಂಥ ವೇದಕ್ಕೆ ಮಾತ್ರ ಮುಖ್ಯವಾದ ಪರವಿದ್ಯಾತ್ವವಿದೆ. ತದರ್ಥನಿರ್ಣಾಯಕತ್ವಾದಿಗಳಿಂದ ಬ್ರಹ್ಮಸೂತ್ರಕ್ಕೆ ಅಮುಖ್ಯವಾದ ಪರವಿದ್ಯಾತ್ವವಿದೆ. ಆದ್ದರಿಂದ ಎಲ್ಲಾ ಸಮಸ್ಯೆಗಳೂ ಕೂಡ ಪರಿಹಾರವಾಗಿ ಸಮಂಜಸವಾದ ಪ್ರಮೇಯವು ನಿರ್ಧಾರವಾಗುತ್ತದೆ.

**ವಿವರಣೆ** - ಮೇಲೆ ಹೇಳಿದ ಗುರ್ವರ್ಥದೀಪಿಕೆಯ ವಾಕ್ಯದಲ್ಲಿ 'ವೇದವಿದ್ಯಾ' ಎಂಬ ಶಬ್ದದ ಮೊದಲು 'ನಿರ್ಣೀತವ್ಯಾರ್ಥಾ' ಎಂಬ ಶಬ್ದವನ್ನು ಸೇರಿಸಿಕೊಳ್ಳಬೇಕು. ಅಕ್ಷರವಿದ್ಯಾ ಎಂಬುದು ಭಾವಪ್ರಧಾನವಾಗಿ ನಿರ್ದೇಶ ಮಾಡಲಾಗಿದೆ. ರೂಪ ಶಬ್ದಕ್ಕೆ ಜ್ಞಾಪಕ ಎಂದರ್ಥ. ರೂಪ್ಯತೇ ಅನೇನ ಎಂಬುದಾಗಿ ವ್ಯುತ್ಪತ್ತಿಯು ಈ ಅರ್ಥಕ್ಕೆ ಗಮಕವಾಗಿದೆ. ಹೀಗಾಗಿ ನಿರ್ಣೀತವ್ಯವಾದ ಅರ್ಥವುಳ್ಳದ್ದು ವೇದ. ಇಂತಹ ವೇದವಿದ್ಯೆಗಿಂತಲೂ ಸಹ ಉತ್ತಮವಿದ್ಯಾ ಎಂದು ಹೇಳಲ್ಪಟ್ಟ ವಿದ್ಯೆಯು ಅಕ್ಷರವಿದ್ಯೆ . ಈ ಅಕ್ಷರವಿದ್ಯೆಯನ್ನು ತಿಳಿಸುತ್ತದೆ ಬ್ರಹ್ಮಮೀಮಾಂಸಾಶಾಸ್ತ್ರ. ಆದ್ದರಿಂದ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಪ್ರತ್ಯೇಕವಾಗಿ ಏಕೆ ಹೇಳಬೇಕು? ಬ್ರಹ್ಮಮೀಮಾಂಸಾಶಾಸ್ತ್ರವೂ ಸಹ ಸ್ವತಃ ಪ್ರಮಾಣ ಎಂಬುದು ಪೂಜ್ಯರಾದ ವಾದಿರಾಜರ ಅಭಿಪ್ರಾಯ ಎಂಬುದಾಗಿ ತಿಳಿದುಬರುತ್ತದೆ. ಇದರಿಂದ





ಬ್ರಹ್ಮಸೂತ್ರವು ವೇದಕ್ಕಿಂತಲೂ ಸಹ ಉತ್ತಮ ಅನ್ನುವ ಅಂಶದಲ್ಲಿ ಇದು ಸಾಧಕ ಪ್ರಮಾಣವೂ ಆಗುವುದಿಲ್ಲ. ಮತ್ತೇನೆಂದರೆ ವೇದವು ಸರ್ವೋತ್ತಮ ಎಂಬ ಅಂಶವನ್ನು ಮಾತ್ರವೇ ಇದು ದೃಢಪಡಿಸುತ್ತದೆ. ವೇದವು ಸ್ವರೂಪತಃ ಹಾಗೂ ಅರ್ಥತಃ ಎಲ್ಲಾ ಶಾಸ್ತ್ರಗಳಿಗಿಂತಲೂ ಸಹ ಉತ್ತಮವಾದ್ದರಿಂದ ಅದೇ ಪರವಿದ್ಯಾ ಹಾಗೂ ಪ್ರಧಾನವಾಗಿದೆ. ಅದರ ಅರ್ಥವನ್ನು ನಿರ್ಣಯ ಮಾಡುವುದರಿಂದ ಅಪ್ರಧಾನವಾದದ್ದು ಬ್ರಹ್ಮಸೂತ್ರಗಳು. ಇಂತಹ ಬ್ರಹ್ಮಸೂತ್ರಗಳಿಗೆ ಪರವಿದ್ಯಾತ್ವವು ಅಪ್ರಧಾನವಾಗಿ ಇದೆ. ಹೀಗೆ ಈ ಮೇಲೆ ಹೇಳಿದ ಎಲ್ಲಾ ಟಿಪ್ಪಣಿ ವಾಕ್ಯಗಳ ಅಭಿಪ್ರಾಯವನ್ನು ಯೋಗ್ಯವಾಗಿ ತಿಳಿದುಕೊಳ್ಳಬೇಕು.

## ವಾಕ್ಯಾರ್ಥಚಂದ್ರಿಕೆಯ ಪಂಕ್ತಿಗಳಿಗೆ ವ್ಯಾಖ್ಯಾನ

ಅನ್ಯಚ್ಚ 'ದ್ವೇ ವಿದ್ಯೇ ವೇದಿತವ್ಯೇ ಇತಿ ಶ್ರುತೌ ಋಗಾದಿಪದೋಪಲಕ್ಷಿತಾಶೇಷ-ಶಾಸ್ತ್ರಾಣಾಮಪರವಿದ್ಯಾತ್ವೋಕ್ತ್ಯಾ ಅನುಗ್ರಾಹಕತ್ವೇನಾಸ್ಯೈವ ಪರವಿದ್ಯಾತ್ವೋಕ್ತ್ಯಾ ಲಿಂಗತ್ರಯಾ-ವಸಿತತ್ವರೂಪಸ್ಯ ಮಹತ್ವಸ್ಯಾತ್ರೈವ ಸಂಭವೇನಾಸ್ಯೈವ ಶಾಸ್ತ್ರಸ್ಯ ಭಾರತಾಪೇಕ್ಷಯಾ ಉತ್ತಮತ್ವೇಪಿ, ಭಾರತಸ್ಯೋತ್ತಮತ್ವೋಕ್ತಿರ್ನಿರ್ಣೀತವ್ಯಾಂತರಾಪೇಕ್ಷಯಾ ಸಂಕೋಚಯಿತವ್ಯೇತ್ಯಾಹ ।' - ಇತಿ ವಾಕ್ಯಾರ್ಥಚಂದ್ರಿಕಾವಾಕ್ಯಂ ಸಾಧಕತಯೋದಾಹೃತಂ । ತದಪ್ಯಸಾಧಕಮೇವ । ತಥಾಹಿ - ಋಗಾದಿಪದೋಪಲಕ್ಷಿತಾಶೇಷಶಾಸ್ತ್ರಾಣಾಮಿತ್ಯತಃ ಪ್ರಾಕ್ ಸುಧೋಕ್ತಂ 'ನಿರ್ಣೀತವ್ಯಾರ್ಥಾನಾಂ' ಇತಿ ಪದಂ ಯೋಜ್ಯಂ । ಅನುಗ್ರಾಹಕತ್ವೇನೇತಿ ತೃತೀಯಾಯಾ 'ಧಾನ್ಯೇನ ಧನವಾನ್' ಇತ್ಯಾದಾ-ವಿವಾಭೇದೋಽರ್ಥಃ । ಅತ್ರೈವೇತ್ಯಸ್ಯಾನುಗ್ರಾಹಕಾಣಾಂ ಮಧ್ಯೇಽತ್ರೈವೇತ್ಯರ್ಥಃ । ಯಥಾ ಶ್ರುತೇ ಏವಕಾರಾರ್ಥಾಸಂಗತೇಃ । ಲಿಂಗತ್ರಯಾವಸಿತತ್ವರೂಪಮಹತ್ವಂ ಬ್ರಹ್ಮಸೂತ್ರ ಏವ ಸಂಭವತಿ ನಾನ್ಯತ್ರೇತಿ ಯಥಾಶ್ರುತಾರ್ಥಃ, ಸಚಾಯುಕ್ತಃ, ಭಾರತೇಽಪಿ ಲಿಂಗತ್ರಯಾವಸಿತತ್ವರೂಪಮಹತ್ವಸ್ಯ ಮಹದಾಪ್ತಿ-ಮೂಲತ್ವಾದೇಃ ಸೂಪಪನ್ನತ್ವಾತ್ । ತಥಾಹಿ : - ಬ್ರಹ್ಮಸೂತ್ರಭಾರತಯೋರಪ್ಯೇಕಕರ್ತೃಕತ್ವೇನ ಸಮಮಾಪ್ತಿಮೂಲತ್ವಂ । ನ ಹಿ ಭಾರತೋಕ್ತಂ ಯುಕ್ತಿವಿರುದ್ಧಂ; ಕಿಂತು ತತ್ಸಂವಾದ್ಯೇವೇತಿ ಯುಕ್ತಿಮೂಲತ್ವಮವ್ಯಾಹತಂ, ಶ್ರುತಿಸಂವಾದಿತ್ವಂ ತು ತದರ್ಥವಿವರಣರೂಪತ್ವಾನ್ನಿರಾಬಾಧಂ, ಇತಿ ಯಥಾಶ್ರುತಾರ್ಥಸ್ಯ ಬಾಧಿತತ್ವಾತ್, ಅನುಗ್ರಾಹಕಾಣಾಂ ಮಧ್ಯೇಽತ್ರೈವೇತ್ಯರ್ಥೋಽಂಗೀಕರ್ತವ್ಯ ಏವ। ಏವಂಚೋಕ್ತವಾಕ್ಯಾದ್ ಬ್ರಹ್ಮತಂತ್ರಸ್ಯಾನುಗ್ರಾಹಕತ್ವರೂಪಮೇವ ಗೌಣಂ ಪರವಿದ್ಯಾತ್ವಂ। ತತ್ರಾಪಿ ಕೃತ್ಸ್ನವೇದಾನುಗ್ರಾಹಕತ್ವಾತ್ ಲಿಂಗತ್ರಯಾವಸಿತಮಹತ್ವವತ್ವಾಚ್ಚಾನುಗ್ರಾಹಕೋತ್ತಮಂ ಬ್ರಹ್ಮತಂತ್ರಂ।. ಅನುಗ್ರಾಹ್ಯ (ನಿರ್ಣೇತವ್ಯ) ಪೌರುಷೇಯಶಾಸ್ತ್ರೇಷು ಮಹಾಭಾರತಮುತ್ತಮಮ್; ಇತ್ಯರ್ಥಃ ಸಂಪನ್ನಃ ಇತಿ ಬ್ರಹ್ಮಸೂತ್ರಸ್ಯ ವೇದಾದಿಸರ್ವಶಾಸ್ತ್ರೋತ್ತಮತ್ವೇ ಕಥಮಿದಂ ಸಾಧಕಮಿತಿ ವಿವೇಚನೀಯಂ ಸೂರಿಭಿಃ ।





ಅನುವಾದ - ಪೂರ್ವಪಕ್ಷಕಾರರು ವಾಕ್ಯಾರ್ಥಚಂದ್ರಿಕೆಯ ಮಾತುಗಳು ತಮಗೆ ಸಾಧಕವಾಗಿದೆ ಎಂಬುದನ್ನು ಸಮರ್ಥನೆ ಮಾಡಿಕೊಂಡಿದ್ದರು. ಆ ವಾಕ್ಯಾರ್ಥಚಂದ್ರಿಕೆಯ ಮಾತುಗಳು ಹೀಗಿವೆ - 'ದ್ವೇ ವಿದ್ಯೇ ವೇದಿತವ್ಯೇ ಇತಿ ಶ್ರುತೌ ಋಗಾದಿಪದೋಪಲಕ್ಷಿತಾಶೇಷಶಾಸ್ತ್ರಾಣಾಮಪರವಿದ್ಯಾತ್ವೋಕ್ತ್ಯಾ ಅನುಗ್ರಾಹಕತ್ವೇನಾಸ್ಯೈವ ಪರವಿದ್ಯಾತ್ವೋಕ್ತ್ಯಾ ಲಿಂಗತ್ರಯಾವಸಿತತ್ವರೂಪಸ್ಯ ಮಹತ್ವಸ್ಯಾತ್ರೈವ ಸಂಭವೇನಾಸ್ಯೈವ ಶಾಸ್ತ್ರಸ್ಯ ಭಾರತಾಪೇಕ್ಷಯಾ ಉತ್ತಮತ್ವೇಽಪಿ, ಭಾರತಸ್ಯೋತ್ತಮತ್ವೋಕ್ತಿರ್ನಿರ್ಣೀತವ್ಯಾಂತರಾಪೇಕ್ಷಯಾ ಸಂಕೋಚಯಿತವ್ಯೇತ್ಯಾಹ ।' ''ದ್ವೇವಿದ್ಯೇ ವೇದಿತವ್ಯೇ' ಎಂಬ ಶ್ರುತಿಯಲ್ಲಿ ಋಗಾದಿಪದದಿಂದ ಉಪಲಕ್ಷಿತವಾದ ಸಕಲಶಾಸ್ತ್ರಗಳನ್ನು ಅಪರವಿದ್ಯೆಯೆಂದು ವಿವಕ್ಷಿಸಲಾಗಿದೆ. ಅನುಗ್ರಾಹಕವಾದ ಈ ಬ್ರಹ್ಮಸೂತ್ರವನ್ನಷ್ಟೇ ಪರವಿದ್ಯೆಯೆಂದು ಹೇಳಲಾಗಿದೆ. ಏಕೆಂದರೆ ಆಪ್ತಿಮೂಲಕತ್ವ, ಶ್ರುತಿಮೂಲಕತ್ವ, ಯುಕ್ತಿಮೂಲಕತ್ವವೆಂಬ ಲಿಂಗತ್ರಯಾವಸಿತತ್ವ ಎಂಬ ಮಹತ್ವವು ಬ್ರಹ್ಮಸೂತ್ರಕ್ಕಷ್ಟೇ ಪ್ರಾಪ್ತವಾಗುತ್ತದೆ. ಆದ್ದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರವಷ್ಟೇ ಮಹಾಭಾರತಕ್ಕಿಂತಲೂ ಉತ್ತಮವಾಗುತ್ತದೆ. ಆದರೂ ಕೂಡ ಮಹಾಭಾರತವನ್ನು ಉತ್ತಮವೆಂದು ಹೇಳಿದ್ದಾರೆ. ನಿರ್ಣೇಯಗ್ರಂಥಗಳಲ್ಲಿ ಮಹಾಭಾರತವು ಉತ್ತಮವಾಗಿದೆ ಎಂದು ಆ ಮಾತಿಗೆ ಸಂಕೋಚವನ್ನು ಮಾಡಬೇಕು.'

ಈ ವಾಕ್ಯಾರ್ಥಚಂದ್ರಿಕೆಯ ಮಾತೂ ಕೂಡ ಪೂರ್ವಪಕ್ಷಿಗಳಿಗೆ ಸಾಧಕವಾಗುವುದಿಲ್ಲ. ಅದು ಹೀಗೆ - ಮೇಲಿನ ವಾಕ್ಯಾರ್ಥಚಂದ್ರಿಕೆಯ ವಾಕ್ಯದಲ್ಲಿ 'ಋಗಾದಿಪದೋಪಲಕ್ಷಿತಾಶೇಷಶಾಸ್ತ್ರಾಣಾಮ್' ಎಂಬುದರ ಮೊದಲು ನ್ಯಾಯಸುಧೆಯಲ್ಲಿರುವ 'ನಿರ್ಣೇತವ್ಯಾರ್ಥಾನಾಂ' ಎಂಬ ಪದವನ್ನು ಯೋಜನೆ ಮಾಡಿಕೊಳ್ಳಬೇಕು. 'ಅನುಗ್ರಾಹಕತ್ವೇನ' ಎಂಬಲ್ಲಿರುವ ತೃತೀಯಾವಿಭಕ್ತಿಗೆ ಅಭೇದ ಎಂಬರ್ಥವನ್ನು ವಿವಕ್ಷಿಸಬೇಕು. 'ಧಾನ್ಯೇನ ಧನವಾನ್' 'ಧಾನ್ಯದಿಂದ ಧನವುಳ್ಳವನಾಗಿದ್ದಾನೆ' ಎಂದು ಹೇಳಿದಾಗ ಧಾನ್ಯರೂಪವಾದ ಧನವುಳ್ಳವನು ಎಂದರ್ಥ. ಇಲ್ಲಿ ಧಾನ್ಯಕ್ಕೂ ಧನಕ್ಕೂ ಹೇಗೆ ಅಭೇದವಿದೆಯೋ, ಅದರಂತೆ ಅನುಗ್ರಾಹಕತ್ವೇನ ಪರವಿದ್ಯಾ ಎಂದು ಹೇಳಿದಾಗ ಅನುಗ್ರಾಹಕರೂಪವಾದ ಪರವಿದ್ಯೆಯಾಗಿದೆ ಎಂಬರ್ಥವನ್ನು ಹೇಳಿದಂತಾಗುತ್ತದೆ. 'ಅತ್ರೈವ' ಎಂಬುದಕ್ಕೆ ಅನುಗ್ರಾಹಕಗಳ ಮಧ್ಯದಲ್ಲಿ ಎಂದರ್ಥ. ಈ ಅರ್ಥವನ್ನು ವಿವಕ್ಷಿಸಿದಾಗ ಮಾತ್ರ 'ಏವ' ಶಬ್ದವು ಸ್ವರಸವಾಗುತ್ತದೆ. ಯಥಾಶ್ರುತವಾದ ಅರ್ಥವನ್ನೇ ವಾಕ್ಯಾರ್ಥಚಂದ್ರಿಕೆಗೆ ವಿವಕ್ಷಿಸಿದರೆ ಈ ಏವಕಾರಾರ್ಥವು ಅಸಂಗತವಾಗುತ್ತದೆ. ಅದು ಹೀಗೆ - 'ಲಿಂಗತ್ರಯಾವಸಿತತ್ವ' ಎಂಬ ಮಹತ್ವವು ಬ್ರಹ್ಮಸೂತ್ರದಲ್ಲಿ ಮಾತ್ರ ಪ್ರಾಪ್ತವಾಗುತ್ತದೆ. ಬೇರೆಡೆ ಪ್ರಾಪ್ತವಾಗುವುದಿಲ್ಲ ಎಂಬುದೇ ಯಥಾಶ್ರುತವಾದ ಅರ್ಥವಾಗಿದೆ. ಆದರೆ ಇದು ಕೂಡುವುದಿಲ್ಲ. ಬ್ರಹ್ಮಸೂತ್ರದಂತೆ ಮಹಾಭಾರತದಲ್ಲೂ ಕೂಡ ಲಿಂಗತ್ರಯಾವಸಿತತ್ವವೆಂಬ ಮಹತ್ವವು ಇದ್ದೇ ಇದೆ. ಆಪ್ತಿಮೂಲತ್ವಾದಿಗಳು ಅಲ್ಲೂ ಕೂಡ ಸಮಾನವಾಗಿದೆ. ಹೇಗೆಂದರೆ ಬ್ರಹ್ಮಸೂತ್ರವನ್ನು ಯಾರು ರಚನೆ ಮಾಡಿದ್ದಾರೋ, ಆ ವೇದವ್ಯಾಸದೇವರೇ ಮಹಾಭಾರತವನ್ನೂ

ಕೂಡ ರಚನೆ ಮಾಡಿದ್ದಾರೆ. ಆದ್ದರಿಂದ ಆಪ್ತಿಮೂಲತ್ವವು ಸಮಾನವಾಗಿದೆ. ಮಹಾಭಾರತದಲ್ಲಿ ಹೇಳಿದ ಯಾವುದೇ ವಿಷಯವೂ ಕೂಡ ಯುಕ್ತಿವಿರುದ್ಧವಾಗಿಲ್ಲ. ಯುಕ್ತಿಗೆ ಸಂವಾದಿಯೇ ಆಗಿದೆ. ಆದ್ದರಿಂದ ಬ್ರಹ್ಮಸೂತ್ರದಂತೆ ಮಹಾಭಾರತದಲ್ಲೂ ಕೂಡ ಯುಕ್ತಿಮೂಲತ್ವವು ಸಮಾನವಾಗಿದೆ. ಶ್ರುತಿಸಂವಾದಿತ್ವ ಎಂದರೆ ವೇದಾರ್ಥದ ವಿವರಣೆ ಮಾಡುವಿಕೆ ಎಂದರ್ಥ. ಇದೂ ಕೂಡ ಅಬಾಧಿತವಾಗಿ ಮಹಾಭಾರತದಲ್ಲಿದೆ. ಹೀಗೆ ಆಪ್ತಿಮೂಲತ್ವ, ಯುಕ್ತಿಮೂಲತ್ವ, ಶ್ರುತಿಮೂಲತ್ವಗಳೆಂಬ ಲಿಂಗತ್ರಯಾವಸಿತತ್ವವೆಂಬ ಮಹತ್ವವು ಬ್ರಹ್ಮಸೂತ್ರದಲ್ಲಿರುವಂತೆ ಮಹಾಭಾರತದಲ್ಲೂ ಇದೆ ಎಂಬುದು ಸ್ಪಷ್ಟವಾಯಿತು. ಹೀಗಿರುವಾಗ ವಾಕ್ಯಾರ್ಥ-ಚಂದ್ರಿಕೆಯ ಮಾತುಗಳಿಂದ ಯಥಾಶ್ರುತವಾದ ಅರ್ಥವನ್ನು ವಿವಕ್ಷಿಸುವುದು ಹೇಗೆ ಸರಿಯಾಗುತ್ತದೆ ? 'ಅತ್ರೈವ' ಎಂಬುದಕ್ಕೆ ಅನುಗ್ರಾಹಕಗಳ ಮಧ್ಯದಲ್ಲಿ ಎಂಬರ್ಥವನ್ನೇ ಸ್ವೀಕಾರ ಮಾಡಬೇಕು. ಆದ್ದರಿಂದ ಮೇಲೆ ಹೇಳಿದ ಮಾತಿನಂತೆ ಬ್ರಹ್ಮಸೂತ್ರವು ಅನುಗ್ರಾಹಕತ್ವ ಎಂಬ ಗೌಣವಾದ ಪರವಿದ್ಯಾತ್ವವನ್ನು ಹೊಂದಿದೆ. ಅದರಲ್ಲೂ ಕೂಡ ಸಮಗ್ರ ವೇದಗಳಿಗೆ ಅನುಗ್ರಾಹಕವಾಗಿರುವುದರಿಂದ ಲಿಂಗತ್ರಯಾವಸಿತತ್ವವೆಂಬ ಮಹತ್ವವನ್ನು ಹೊಂದಿರುವುದರಿಂದಲೂ ಅನುಗ್ರಾಹಕಗಳಲ್ಲೇ ಇದು ಶ್ರೇಷ್ಠವಾಗಿದೆ. ಮಹಾಭಾರತವು ಅನುಗ್ರಾಹ್ಯವಾದ (ನಿರ್ಣೇತವ್ಯವಾದ) ಪೌರುಷೇಯಶಾಸ್ತ್ರಗಳಲ್ಲಿ ಉತ್ತಮವಾಗಿದೆ ಎಂಬ ಪ್ರಮೇಯವು ಸಿದ್ಧವಾಯಿತು. ಆದ್ದರಿಂದ ಬ್ರಹ್ಮಸೂತ್ರಕ್ಕೆ ವೇದಾದಿ ಸಕಲಶಾಸ್ತ್ರೋತ್ತಮತ್ವವಿಷಯದಲ್ಲಿ ನೀವು ಹೇಳಿದ ವಾಕ್ಯಾರ್ಥಚಂದ್ರಿಕೆಯ ಮಾತು ಹೇಗೆ ತಾನೆ ಸಾರ್ಥಕವಾಗುತ್ತದೆ ? ಜ್ಞಾನಿಜನರು ಇದನ್ನು ವಿವೇಚನೆ ಮಾಡಿ ತಿಳಿದುಕೊಳ್ಳಿರಿ.

ವಿವರಣೆ – ಏಕೆಂದರೆ ಈ ವಾಕ್ಯಗಳಲ್ಲಿ ಶಬ್ದಗಳ ಯೋಜನೆಯನ್ನು ಮಾಡಿಕೊಳ್ಳುವ ಕ್ರಮ ಹೀಗಿದೆ – ಸುಧಾದಲ್ಲಿ ಹೇಳಿದ 'ನಿರ್ಣೇತವ್ಯಾರ್ಥಾನಾಂ' ಎಂಬ ಪದವನ್ನು ಟಿಪ್ಪಣಿಯಲ್ಲಿರುವ ಶ್ರುತ್ಯಾ ಎಂಬ ಶಬ್ದದ ಮುಂದೆ 'ಋಗಾದಿಪದೋಪಲಕ್ಷಿತ ಅಶೇಷಶಾಸ್ತ್ರಾಣಾಂ' ಎಂಬ ಶಬ್ದಕ್ಕಿಂತ ಪೂರ್ವದಲ್ಲಿ ಯೋಜನೆ ಮಾಡಿಕೊಳ್ಳಬೇಕು. ಮುಂದೆ ಅನುಗ್ರಾಹಕತ್ವೇನ ಎಂಬಲ್ಲಿರುವ ತೃತೀಯಾ ವಿಭಕ್ತಿಗೆ ಅಭೇದ ರೂಪವಾದ ಅರ್ಥವನ್ನು ವಿವಕ್ಷೆ ಮಾಡಬೇಕು. ಧಾನ್ಯದಿಂದ ಸಂಪತ್ತಿರುವವನು ಎಂದು ಹೇಳಿದಾಗ ಧಾನ್ಯರೂಪವಾದ ಸಂಪತ್ತುಳ್ಳವನು ಎಂದು ಹೇಗೆ ಧಾನ್ಯಕ್ಕೂ ಧನಕ್ಕೂ ಅಭೇದರೂಪವಾದ ಅರ್ಥವನ್ನೇ ಹೇಳುತ್ತೇವೋ, ಹಾಗೆ ಅನುಗ್ರಾಹಕತ್ವೇನ ಪರವಿದ್ಯಾ ಎಂದು ಹೇಳಿದಾಗ ಅನುಗ್ರಾಹಕರೂಪವಾದ ಪರವಿದ್ಯಾ ಎಂಬುದಾಗಿ ಅಭೇದಾರ್ಥವನ್ನು ಸ್ವೀಕಾರ ಮಾಡಬೇಕು. ಅತ್ರೈವ ಎಂಬ ಶಬ್ದಕ್ಕೆ ಅನುಗ್ರಾಹಕಗಳ ಮಧ್ಯದಲ್ಲಿ ಎಂದರ್ಥ. ಏವ ಶಬ್ದಕ್ಕೆ ಹೀಗೆ ಅರ್ಥವನ್ನು ಹೇಳಿದಾಗ ಮಾತ್ರವೇ ಸಂಗತವಾಗುತ್ತದೆ. ಬ್ರಹ್ಮಸೂತ್ರಗಳಿಗೆ ಮಹತ್ವವು ಉಪಪಾದನೆ ಮಾಡುವ ಪ್ರಸಂಗದಲ್ಲಿ ಲಿಂಗತ್ರಯವಸಿತತ್ವರೂಪವಾದ ಮಹತ್ವವನ್ನು ಹೇಳಲಾಗಿದೆ. ಇದು ಬ್ರಹ್ಮಸೂತ್ರಗಳಲ್ಲೇ ಹೊರತು ಬೇರೆ ಕಡೆಯಲ್ಲಿ ಇಲ್ಲ ಎಂಬುದು ಯಥಾಶ್ರುತವಾದ ಅರ್ಥ. ಆದರೆ ಇಂತಹ ಅರ್ಥವನ್ನು ಸ್ವೀಕಾರ ಮಾಡಬಾರದು. ಭಾರತದಲ್ಲೂ ಸಹ ಮಹತ್ವವನ್ನು ಹೇಳಲು





ಬರುತ್ತದೆ. ಮಹಾದಾಪ್ತಿಮೂಲತ್ವಾದಿಗಳು ಮಹಾಭಾರತದಲ್ಲೂ ಸಹ ಇವೆ. ಬ್ರಹ್ಮಸೂತ್ರಕ್ಕೆ ಯಾರು ಕರ್ತೃವೋ ಅವನೇ ಮಹಾಭಾರತಕ್ಕೂ ಸಹ ಕರ್ತೃವಾಗಿದ್ದಾನೆ. ವೇದವ್ಯಾಸದೇವರೇ ಇವೆರಡರ ರಚನೆ ಮಾಡಿದವರಾದ್ದರಿಂದ ಆಪ್ತಿಮೂಲತ್ವವು ಭಾರತ ಹಾಗೂ ಬ್ರಹ್ಮಸೂತ್ರಗಳಲ್ಲಿ ಸಮಾನವಾದ ಅಂಶ. ಭಾರತೋಕ್ತವಾದ ವಿಷಯಗಳು ಯುಕ್ತಿವಿರುದ್ಧವಾಗಿಲ್ಲ. ಯುಕ್ತಿಸಂವಾದಿಯೇ ಆಗಿದೆ. ಆದ್ದರಿಂದ ಭಾರತಕ್ಕೂ ಸಹ ಯುಕ್ತಿಮೂಲತ್ವವು ವ್ಯಾಹತವಲ್ಲ. ಶ್ರುತಿಸಂವಾದವನ್ನು ಬ್ರಹ್ಮಸೂತ್ರ-ಗಳಿಗೆ ಹೇಳಿದಂತೆ ಮಹಾಭಾರತಕ್ಕೂ ಸಹ ಹೇಳಲು ಬರುತ್ತದೆ. ಶ್ರುತಿಸಂವಾದಿ ಎಂದರೆ ವೇದದ ಅರ್ಥದ ವಿವರಣೆ ರೂಪವಾದದ್ದು ಎಂದರ್ಥ. ಇದು ಮಹಾಭಾರತದಲ್ಲೂ ಸಹ ಸಮಾನ. ಆದ್ದರಿಂದ ಅತ್ರೈವ ಎಂಬ ಶಬ್ದಕ್ಕೆ ಅನುಗ್ರಾಹಕಗಳ ಮಧ್ಯದಲ್ಲಿ ಎಂದೇ ಅರ್ಥವನ್ನು ಸ್ವೀಕಾರ ಮಾಡಬೇಕು ಹೊರತು ಎಲ್ಲಾ ಶಾಸ್ತ್ರಗಳ ಮಧ್ಯದಲ್ಲಿ ಎಂಬ ಯಥಾಶ್ರುತವಾದ ಅರ್ಥವನ್ನು ಸ್ವೀಕಾರ ಮಾಡಬಾರದು.

ಹೀಗೆ ಮೇಲೆ ಹೇಳಿದ ಕ್ರಮದಲ್ಲಿ ಎಲ್ಲಾ ವೇದಗಳೂ ಸಹ ಅನುಗ್ರಾಹ್ಯವಾಗಿವೆ. ಬ್ರಹ್ಮಸೂತ್ರವು ಅನುಗ್ರಾಹಕವಾಗಿದೆ. ಆದ್ದರಿಂದ ಮಹತ್ವವೂ ಸಹ ಬ್ರಹ್ಮಸೂತ್ರಕ್ಕೆ ಇದೆ. ಲಿಂಗತ್ರಯ ಅವಸಿತವಾದ ಮಹತ್ವ ಹಾಗೂ ಅನುಗ್ರಾಹಕ ಉತ್ತಮತ್ವ ಇವೆರಡೂ ಸಹ ಬ್ರಹ್ಮಸೂತ್ರಕ್ಕೆ ಇದೆ. ಅನುಗ್ರಾಹ್ಯವಾದ, ನಿರ್ಣೀತವ್ಯವಾದ ಪೌರುಷೇಯ ಶಾಸ್ತ್ರಗಳಲ್ಲಿ ಮಹಾಭಾರತವು ಉತ್ತಮವಾಗಿದೆ. ಹೀಗೆ ಈ ವಾಕ್ಯಾರ್ಥಚಂದ್ರಿಕಾ ವಾಕ್ಯದ ಅಭಿಪ್ರಾಯ. ಆದ್ದರಿಂದ ಬ್ರಹ್ಮಸೂತ್ರವು ಸರ್ವಶಾಸ್ತ್ರೋತ್ತಮ ಎಂಬ ವಿಷಯದಲ್ಲಿ ಮೇಲೆ ಹೇಳಿದ ವಾಕ್ಯಾರ್ಥಚಂದ್ರಿಕಾ ವಾಕ್ಯವು ಹೇಗೆ ಸಾಧಕ ಎಂಬುದನ್ನು ಜ್ಞಾನಿಗಳು ವಿವೇಚನೆ ಮಾಡಬೇಕು.

ಇದರಂತೆಯೇ ಎಲ್ಲಾ ವಾಕ್ಯಗಳೂ ಸಹ ಪೂರ್ವಪಕ್ಷಿಗಳು ಹೇಳಿದ ಯಾವ ವಿಷಯವನ್ನೂ ಸಹ ಸಾಧನೆ ಮಾಡುವುದಿಲ್ಲ ಎಂಬುದು ಸ್ಪಷ್ಟವೇ ಆಗಿದೆ. ಇದು ಶಾಸ್ತ್ರದ ವಾಕ್ಯಗಳ ಅರ್ಥ ವಿವೇಚನೆ ಮಾಡುವ ಕ್ರಮ ತಿಳಿದವರಿಗೆ ಸ್ಪಷ್ಟವಾಗಿದೆ.

ಕಂಬಾಲೂರು ರಾಮಚಂದ್ರತೀರ್ಥರೂ ಸಹ ಸುಧಾವಾಕ್ಯದ ಅಭಿಪ್ರಾಯವನ್ನು ಹೇಳುವಾಗ ಈ ರೀತಿ ಸ್ಪಷ್ಟಪಡಿಸಿದ್ದಾರೆ. ನಿರ್ಣೇತವ್ಯವಾದ ಅರ್ಥಗಳಲ್ಲಿ ಭಾರತವು ಉತ್ತಮವಾದದ್ದು. ನಿರ್ಣಾಯಕವಾದ ಗ್ರಂಥಗಳಲ್ಲಿ ಬ್ರಹ್ಮಸೂತ್ರವೇ ಉತ್ತಮವಾದದ್ದು. ಇದನ್ನೇ ಮುಂದೆ ಹೇಳುತ್ತೇವೆ. ಆದ್ದರಿಂದ ಪರಸ್ಪರ ವಿರೋಧವಿಲ್ಲ ಎಂದು ಸುಧಾವಾಕ್ಯದ ಅಭಿಪ್ರಾಯ ಎಂಬುದಾಗಿ.

ಹೀಗೆ ಹಿಂದೆ ಹೇಳಿದ ವಾಕ್ಯಾರ್ಥಚಂದ್ರಿಕಾ ವಾಕ್ಯಕ್ಕೆ ಹಾಗೂ ರಾಮಚಂದ್ರತೀರ್ಥರ ವಾಕ್ಯಗಳಿಗೆ ಅರ್ಥವನ್ನು ನಿರ್ಣಯ ಮಾಡಲು ಬರುತ್ತಿರುವಾಗ ಬ್ರಹ್ಮಸೂತ್ರಕ್ಕೆ ಸರ್ವಶಾಸ್ತ್ರೋ-ತ್ತಮತ್ವಪರತ್ವವು ವಾಕ್ಯಾರ್ಥಚಂದ್ರಿಕಾದ ಅಭಿಪ್ರಾಯ. ರಾಮಚಂದ್ರತೀರ್ಥರ ವಾಕ್ಯವು ವಸ್ತುಸ್ಥಿತಿ-ಯನ್ನು ಹೇಳುತ್ತಿದೆ ಎಂಬ ಮಾತು 'ಅಬದ್ಧವನ್ನು ಹೇಳಿ ಕುಚೋದ್ಯ ಮಾಡುತ್ತಾರ' ಎಂಬ ನ್ಯಾಯಕ್ಕೆ ಅನುಗುಣವಾಗಿದೆ. ತಪ್ಪು ಹೇಳಿ, ತಪ್ಪಿನ ಮೇಲೆ ಮತ್ತೆ ಪ್ರಶ್ನೆ ಮಾಡಿದಂತಾಗುತ್ತದೆ.



## 'ಅಬದ್ಧಂ ಪಠಿತ್ವಾ ಕುಚೋದ್ಯಂ ಕರೋತಿ' ಎಂದಂತಾಯಿತು

ಏವಮೇವ ತದುದಾಹೃತಂ ಸರ್ವಮಪ್ಯಸಾಧಕಮೇವೇತಿ ಸ್ಫುಟಮೇವ ಶಾಸ್ತ್ರಮರ್ಯಾದಾಭಿಜ್ಞಾನಮ್। 'ವಿಚಾರ್ಯೇಷು ಶಾಸ್ತ್ರೇಷು ತತ್' ಇತ್ಯಾದೇಃ ಸುಧಾವಾಕ್ಯಸ್ಯಾಯಮೇವಾಶಯಃ ರಾಮಚಂದ್ರತೀರ್ಥೀಯೇಪ್ಯುಕ್ತಃ - 'ನಿರ್ಣೇತವ್ಯಾರ್ಥೇಷು ಶಾಸ್ತ್ರೇಷು ಭಾರತಸ್ಯೋತ್ತಮತ್ವೇಽಪಿ ನಿರ್ಣಾಯಕೇಷು ಬ್ರಹ್ಮಸೂತ್ರಾಣಾಮೇವೋತ್ತಮತ್ವಮುಚ್ಯಮಾನಂ ನ ವಿರುದ್ಧಮಿತಿ ಭಾವಃ' ಇತಿ। ಸತಿ ಚೈವಮುದಾಹೃತವಾಕ್ಯಾರ್ಥಚಂದ್ರಿಕಾವಾಕ್ಯಸ್ಯ ಬ್ರಹ್ಮಸೂತ್ರಸ್ಯೈವ ಸರ್ವಶಾಸ್ತ್ರೋತ್ತಮತ್ವಪರತಾಂ ಪ್ರಕಲ್ಪ್ಯ, ರಾಮಚಂದ್ರತೀರ್ಥೀಯವಾಕ್ಯಸ್ಯ ವಸ್ತುಸ್ಥಿತಿಕಥನತ್ವವರ್ಣನಂ 'ಅಬದ್ಧಂ ಪಠಿತ್ವಾ ಕುಚೋದ್ಯಂ ಕರೋತಿ' ಇತಿ ನ್ಯಾಯಮನುಕರೋತಿ।

ಸರ್ವೇಷಾಮಪಿ ಪೂರ್ವಾಚಾರ್ಯಾಣಾಮಯಮೇವಾರ್ಥಃ ಸಂಪ್ರತಿಪನ್ನಃ। ತಥಾಹಿ:- 'ನ ಚಾನುವ್ಯಾಖ್ಯಾನೇ ಬ್ರಹ್ಮಸೂತ್ರಸ್ಯ ಪರವಿದ್ಯಾತ್ವೋಕ್ತಿವಿರೋಧಃ। ಅನುಗ್ರಾಹ್ಯತಯಾ ಋಗಾದೀನಾಮನುಗ್ರಾಹಕತಯಾ ಬ್ರಹ್ಮಸೂತ್ರಸ್ಯ ಚ ಪರವಿದ್ಯಾತ್ವೋಪಪತ್ತೇಃ' ಇತಿ - (ಭಾಷ್ಯದೀಪಿಕಾ-1-2-6)

ಅನುವಾದ - ಇದೇ ಕ್ರಮದಲ್ಲಿ ಪೂರ್ವಪಕ್ಷಿಗಳು ಉದಾಹರಿಸಿದ ಎಲ್ಲಾ ಟಿಪ್ಪಣಿಗಳ ಮಾತುಗಳು ಅವರಿಗೆ ಅಸಾಧಕವೇ ಆಗಿದೆ. ಶಾಸ್ತ್ರಮಾರ್ಯಾದೆಯನ್ನು ತಿಳಿದಿರುವ ವಿದ್ವಾಂಸರಿಗೆ ಈ ವಿಷಯವು ಮನದಟ್ಟಾಗುತ್ತದೆ.

'ವಿಚಾರ್ಯೇಷು ಶಾಸ್ತ್ರೇಷು ತತ್' ಇತ್ಯಾದಿ ಸುಧಾವಾಕ್ಯಕ್ಕೆ ನಾವು ಹೇಳಿದ ಅಭಿಪ್ರಾಯವೇ ಯುಕ್ತವಾಗುತ್ತದೆ. ಕಂಬಾಲೂರು ರಾಮಚಂದ್ರತೀರ್ಥರು ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ - 'ನಿರ್ಣೇತವ್ಯಾರ್ಥೇಷು ಶಾಸ್ತ್ರೇಷು ಭಾರತಸ್ಯೋತ್ತಮತ್ವೇಽಪಿ ನಿರ್ಣಾಯಕೇಷು ಬ್ರಹ್ಮಸೂತ್ರಾಣಾಮೇವ ಉತ್ತಮತ್ವಮುಚ್ಯಮಾನಂ ನ ವಿರುದ್ಧಮಿತಿ ಭಾವಃ' 'ನಿರ್ಣೇಯಗ್ರಂಥಗಳಲ್ಲಿ ಮಹಾಭಾರತವು ಉತ್ತಮವಾಗಿದ್ದರೂ ಕೂಡ ನಿರ್ಣಾಯಕಗ್ರಂಥಗಳಲ್ಲಿ ಬ್ರಹ್ಮಸೂತ್ರವು ಉತ್ತಮವಾಗಿದೆ. ಆದ್ದರಿಂದ ಯಾವುದೇ ವಿರೋಧವಿಲ್ಲ ಎಂಬುದು ಸುಧಾವಾಕ್ಯದ ಅಭಿಪ್ರಾಯ'. ಹೀಗೆ ಉದಾಹರಿಸಿದ ವಾಕ್ಯಾರ್ಥಚಂದ್ರಿಕಾವಾಕ್ಯಕ್ಕೆ ನಾವು ಹೇಳಿದ ಅರ್ಥವೇ ಸಾಧುವಾಗಿದೆ. ಇದಕ್ಕೆ ವಿಪರೀತವಾಗಿ ಬ್ರಹ್ಮಸೂತ್ರದ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವುದಕ್ಕಾಗಿ ವಾಕ್ಯಾರ್ಥಚಂದ್ರಿಕೆಯ ವಾಕ್ಯವು ಹೊರಟಿದೆ ಎಂದು ಕಲ್ಪನೆ ಮಾಡುವುದಾದರೆ ಕಂಬಾಲೂರು ರಾಮಚಂದ್ರತೀರ್ಥರ ವಾಕ್ಯವು ಅಸಂಗತವಾಗುತ್ತದೆ. ಆಗ ಇದು ವಸ್ತುಸ್ಥಿತಿಕಥನಪರವಾಗಿದೆ ಎಂದು ಹೇಳಬೇಕು. 'ಅಬದ್ಧಂ ಪಠಿತ್ವಾ ಕುಚೋದ್ಯಂ ಕರೋತಿ' ಎಂಬ ನ್ಯಾಯವನ್ನು ಅನುಸರಿಸಿದಂತಾಯಿತಷ್ಟೇ. ಬೇರೆ ಯಾವ ಪ್ರಮೇಯವೂ ಸಿದ್ಧವಾಗಲಿಲ್ಲ.





ಎಲ್ಲಾ ಪೂರ್ವಾಚಾರ್ಯರಿಗೂ ಕೂಡ ನಾವು ಹೇಳಿದ ಪ್ರಮೇಯವೇ ಸಮ್ಮತವಾಗಿದೆ. ಭಾಷ್ಯದೀಪಿಕಾದ ಪ್ರಥಮಾಧ್ಯಾಯದ ಎರಡನೆಯ ಪಾದದ ಆರನೇ ಅಧಿಕರಣದಲ್ಲಿ ಈ ಮಾತು ಕೇಳಿಸುತ್ತಿದೆ - 'ನ ಚಾನುವ್ಯಾಖ್ಯಾನೇ ಬ್ರಹ್ಮಸೂತ್ರಸ್ಯ ಪರವಿದ್ಯಾತ್ವೋಕ್ತಿವಿರೋಧಃ । ಅನುಗ್ರಾಹ್ಯತಯಾ ಋಗಾದೀನಾ-ಮನುಗ್ರಾಹಕತಯಾ ಬ್ರಹ್ಮಸೂತ್ರಸ್ಯ ಚ ಪರವಿದ್ಯಾತ್ವೋಪಪತ್ತೇಃ' ಅನುವ್ಯಾಖ್ಯಾನದಲ್ಲಿ ಬ್ರಹ್ಮಸೂತ್ರಕ್ಕೆ ಪರವಿದ್ಯಾತ್ವವನ್ನು ಹೇಳಿದ್ದು ವಿರುದ್ಧವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ವೇದಗಳು ಅನುಗ್ರಾಹ್ಯವಾದ್ದರಿಂದ ಪರವಿದ್ಯೆಯೆನಿಸುತ್ತದೆ. ಬ್ರಹ್ಮಸೂತ್ರವು ಅನುಗ್ರಾಹಕವಾದ್ದರಿಂದ ಪರವಿದ್ಯೆಯೆನಿಸುತ್ತದೆ. ಆದ್ದರಿಂದ ವಿರೋಧ ಬರುವುದಿಲ್ಲ ಎಂದು.

**ವಿವರಣೆ –** ಎಲ್ಲಾ ಟೀಕಾ ಟಿಪ್ಪಣಿಕಾರರೆಲ್ಲರೂ ಸಹ ಇದೇ ಅರ್ಥವನ್ನೇ ಸ್ಪಷ್ಟವಾಗಿ ತಮ್ಮ ತಮ್ಮ ಗ್ರಂಥಗಳಲ್ಲಿ ನೀಡಿದ್ದಾರೆ. ಭಾಷ್ಯದೀಪಿಕಾಕಾರರಾದ ಜಗನ್ನಾಥತೀರ್ಥರು ಎರಡನೆಯ ಪಾದದಲ್ಲಿ ಆರನೆಯ ಅಧಿಕರಣದಲ್ಲಿ ಹೀಗೆ ಹೇಳುತ್ತಾರೆ – ಅನುವ್ಯಾಖ್ಯಾನದಲ್ಲಿ ಬ್ರಹ್ಮಸೂತ್ರವನ್ನು ಪರವಿದ್ಯೆ ಎಂದು ಹೇಳಲಾಗಿದೆ. ಅದರ ವಿರೋಧ ಈ ಪ್ರಸಂಗಕ್ಕೆ ಬರುವುದಿಲ್ಲವೇ? ಎಂಬ ಪ್ರಶ್ನೆಗೆ ಉತ್ತರವಾಗಿ ಋಗಾದಿಗಳು ಅನುಗ್ರಾಹ್ಯವಾದದ್ದು. ಬ್ರಹ್ಮಸೂತ್ರವು ಅನುಗ್ರಾಹಕವಾಗಿದೆ. ಆದ್ದರಿಂದ ಬ್ರಹ್ಮಸೂತ್ರವು ಪರವಿದ್ಯೆಯಾಗುತ್ತದೆ. ಈ ಕಾರಣದಿಂದ ವಿರೋಧವಿಲ್ಲ ಎಂಬುದನ್ನು ಹೇಳಿದ್ದಾರೆ.

ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಇರುವ ಅಪ್ರಕಟಿತ ಹಸ್ತಪ್ರತಿಯಲ್ಲಿ ಗೀತಾಭಾಷ್ಯದ ವಿರೋಧ ಪರಿಹಾರವನ್ನು ಅನುವ್ಯಾಖ್ಯಾನಕ್ಕೆ ಮಾಡುವಾಗ ಈ ಪ್ರಕರಣವು ಪ್ರಾಪ್ತವಾಗಿದೆ. ಗೀತಾಭಾಷ್ಯ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಮಹಾಭಾರತವನ್ನು ಸರ್ವೋತ್ತಮ ಎಂದು ಹೇಳಿದ್ದಾರೆ. ಅನುವ್ಯಾಖ್ಯಾನದಲ್ಲಿ 'ಅತೋ ನೈತಾದೃಶಂ' ಎಂಬ ವಾಕ್ಯದಿಂದ ಬ್ರಹ್ಮಸೂತ್ರವನ್ನು ಸರ್ವೋತ್ತಮಶಾಸ್ತ್ರ ಎಂದು ಹೇಳಿದ್ದಾರೆ. ಆದ್ದರಿಂದ ಆಚಾರ್ಯರ ಎರಡು ಗ್ರಂಥಗಳಿಗೆ ವಿರೋಧ ಎಂಬುದಾಗಿ ಪೂರ್ವಪಕ್ಷ.

**ಸಿದ್ಧಾಂತ –** ನಿರ್ಣಯ ಗ್ರಂಥಗಳಲ್ಲಿ ಭಾರತವು ಸರ್ವಶಾಸ್ತ್ರೋತ್ತಮವಾಗಿದೆ. ನಿರ್ಣಾಯಕ ಗ್ರಂಥಗಳಲ್ಲಿ ಬ್ರಹ್ಮಸೂತ್ರವು ಸರ್ವಶಾಸ್ತ್ರೋತ್ತಮವಾಗಿದೆ. ಆದ್ದರಿಂದ ಯಾವುದೇ ವಿರೋಧವಿಲ್ಲ. ಇದನ್ನೇ ಸುಧಾದಲ್ಲಿ 'ವಿಚಾರ್ಯೇಷು ತತ್' ಎಂಬ ವಾಕ್ಯದಿಂದ ಹೇಳಿದ್ದಾರೆ ಎಂಬುದಾಗಿ. ಮಹಾಭಾರತ ತಾತ್ಪರ್ಯನಿರ್ಣಯದ ಜನಾರ್ದನ ಭಟ್ಟರ ವ್ಯಾಖ್ಯಾನದಲ್ಲೂ ಸಹ ಇದೇ ಅಂಶವೇ ಪ್ರಸ್ತುತವಾಗಿದೆ. ಗೀತಾತಾತ್ಪರ್ಯ ಹಾಗೂ ಭಾಷ್ಯಗಳಲ್ಲಿ ಮಹಾಭಾರತವನ್ನು ಉತ್ತಮ ಎಂಬುದಾಗಿ ಹೇಳಲಾಗಿದೆ. ಅದಕ್ಕೆ ಸಾಧಕವಾಗಿ ಅತ್ಯರಿಚ್ಯತ ಭಾರತಂ' ಎಂಬ ಪ್ರಮಾಣವಾಕ್ಯವನ್ನು ನೀಡಲಾಗಿದೆ. ಅನುವ್ಯಾಖ್ಯಾನದಲ್ಲಿ 'ಅತೋ ನೈತಾದೃಶಂ' ಎಂಬ ವಾಕ್ಯದಿಂದ ಬ್ರಹ್ಮಸೂತ್ರವನ್ನು ಉತ್ತಮ ಎಂದು ಹೇಳಲಾಗಿದೆ. ಹೀಗೆ ಎರಡು ಗ್ರಂಥಗಳಿಗೆ ಉತ್ತಮತ್ವವನ್ನು ಹೇಳಿರುವುದು ಹೇಗೆ ಸಂಗತ? ಈ

ಪ್ರಶ್ನೆಗೆ ಪರಿಹಾರ ಹೀಗಿದೆ – ನಿರ್ಣಾಯಕಶಾಸ್ತ್ರಗಳಲ್ಲಿ ಬ್ರಹ್ಮಸೂತ್ರವು ಉತ್ತಮ, ನಿರ್ಣೇಯಗ್ರಂಥಗಳಲ್ಲಿ ಭಾರತವು ಉತ್ತಮ. ಇದನ್ನೇ ಜಯತೀರ್ಥರು 'ವಿಚಾರ್ಯೇಷು ಶಾಸ್ತ್ರೇಷು ತತ್' ಎಂದು ಹೇಳಿದ್ದಾರೆ ಎಂಬುದಾಗಿ.

ಈ ಪ್ರಕರಣಗಳಿಂದ ನಿರ್ಣಾಯಕಗ್ರಂಥಗಳಲ್ಲಿ ಬ್ರಹ್ಮಸೂತ್ರವು ಉತ್ತಮ. ನಿರ್ಣೇಯ ಶಾಸ್ತ್ರಗಳಲ್ಲಿ ಮಹಾಭಾರತವು ಉತ್ತಮ ಎಂದು ಹೇಳಿದಂತಾಯಿತು. ಹೀಗೆ ಒಪ್ಪಿದಾಗ ನಿರ್ಣೇಯ ಶಾಸ್ತ್ರದಲ್ಲಿ ವೇದವೂ ಸಹ ಸೇರಿದೆ. ಆದ್ದರಿಂದ ವೇದಕ್ಕಿಂತಲೂ ಸಹ ಭಾರತವು ಉತ್ತಮ ಎಂದು ಹೇಳಿದಂತಾಗುವುದಿಲ್ಲವೇ? ಎಂದು ಸಂಶಯ ಪಡಬಾರದು. ಹಿಂದೆ ಹೇಳಿದಂತೆ ಅನುವ್ಯಾಖ್ಯಾನ ಹಾಗೂ ನ್ಯಾಯಸುಧಾ ಗ್ರಂಥದ ಪ್ರಕರಣವು ಪ್ರಾಮಾಣ್ಯದ ಪ್ರಕರಣವಾಗಿದೆ. ಇದು ಕೇವಲ ಪೌರುಷೇಯಗ್ರಂಥದ ಪ್ರಾಮಾಣ್ಯದ ನಿರೂಪಣೆಯಲ್ಲೇ ಪರಿಸಮಾಪ್ತಿಯಾಗುತ್ತದೆ. ಈ ಪ್ರಕರಣದಲ್ಲಿ ಅಪೌರುಷೇಯವಾದ ವೇದವನ್ನು ತರುವುದು ಸಮುಚಿತವಲ್ಲ. ಆದ್ದರಿಂದ ವೇದಕ್ಕಿಂತಲೂ ಸಹ ಭಾರತಕ್ಕೆ ಉತ್ತಮತ್ವವು ಇದೆ ಎಂಬ ಸಂಶಯವೇ ಇಲ್ಲಿ ಸರಿಯಾಗುವುದಿಲ್ಲ.

## ನಿರ್ಣೇಯ ಗ್ರಂಥಗಳಲ್ಲಿ ಮಹಾಭಾರತ ಶ್ರೇಷ್ಠ ನಿರ್ಣಾಯಕ ಗ್ರಂಥಗಳಲ್ಲಿ ಬ್ರಹ್ಮಸೂತ್ರ ಶ್ರೇಷ್ಠ

'ಗೀತಾಭಾಷ್ಯತಾತ್ಪರ್ಯನಿರ್ಣಯಯೋರ್ಭಾರತಸ್ಯ ಸರ್ವೋತ್ತಮತ್ವಮುಕ್ತಂ 'ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ ।' ಇತ್ಯನುವ್ಯಾಖ್ಯಾನೇ ಬ್ರಹ್ಮಸೂತ್ರಸ್ಯ ಸರ್ವಶಾಸ್ತ್ರೋತ್ತಮತ್ವಮುಕ್ತಮತೋ ವಿರೋಧಃ, ಸತ್ಯಂ; ನಿರ್ಣೇಯಗ್ರಂಥೇಷು ಭಾರತಸ್ಯ ಸರ್ವಶಾಸ್ತ್ರೋತ್ತಮತ್ವಮುಕ್ತಂ, ನಿರ್ಣಾಯಕೇಷು ಬ್ರಹ್ಮಸೂತ್ರಸ್ಯ ಸರ್ವಶಾಸ್ತ್ರೋತ್ತಮತ್ವಮುಕ್ತಮಿತಿ ನ ವಿರೋಧಃ। ಏವಮೇವೋಕ್ತಂ ಸುಧಾಯಾಂ 'ವಿಚಾರ್ಯೇಷ್ವಿತ್ಯಾದಿನಾ'- (ಲಿಖಿತ - ಗೀತಾಭಾಷ್ಯ-ವಿರೋಧಪರಿಹಾರಃ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು)

'ನನು ಗೀತಾತಾತ್ಪರ್ಯಭಾಷ್ಯಯೋರತ್ರ ಚಾತ್ಯರಿಚ್ಯತ ಭಾರತಮಿತಿ ಭಾರತಸ್ಯೋತ್ತಮತ್ವಂ; ಅನುವ್ಯಾಖ್ಯಾನೇ 'ಅತೋ ನೈತಾದೃಶಂ ಕಿಂಚಾತ್‌ಪ್ರಮಾಣಮತಮಿಷ್ಯತೇ' ಇತ್ಯನೇನ ಸೂತ್ರಸ್ಯೋತ್ತಮತ್ವಮುಚ್ಯತೇ; ತತ್‌ಕಥಮುತ್ತಮತ್ವಭಯೋರಿತಿಚೇದಿತ್ಥಂ: ನಿರ್ಣಾಯಕೇಷು ಸೂತ್ರಸ್ಯ ನಿರ್ಣೇಯೇಷು ಭಾರತಸ್ಯೇತಿ। ಇದಮುಕ್ತಂ ಜಯತೀರ್ಥಾರ್ಯೈಃ 'ವಿಚಾರ್ಯೇಷು ಶಾಸ್ತ್ರೇಷು ತತ್' ಇತಿ' - (ಮಹಾಭಾರತ ತಾತ್ಪರ್ಯನಿರ್ಣಯಜನಾರ್ದನಭಟ್ಟೀಯಾ)

ಅನುವಾದ – ಮೈಸೂರಿನಲ್ಲಿ ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿ 'ಗೀತಾಭಾಷ್ಯವಿರೋಧ ಪರಿಹಾರ'





ಎಂಬ ಹಸ್ತಲಿಖಿತವಾದ ಪ್ರತಿಯೊಂದಿದೆ. ಅದರಲ್ಲಿ ಸಮರ್ಥಿಸಿದ ವಿಚಾರ ಹೀಗಿದೆ - ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯನಿರ್ಣಯ ಈ ಎರಡು ಗ್ರಂಥಗಳು ಮಹಾಭಾರತವೇ ಸರ್ವೋತ್ತಮ ಎಂದು ಪ್ರತಿಪಾದನೆ ಮಾಡಿವೆ. ಆದರೆ ಅನುವ್ಯಾಖ್ಯಾನದಲ್ಲಿ 'ಅತೋ ನೈತಾದೃಶಂ ಕಿಂ ಚಿತ್‌ಪ್ರಮಾಣತಮಮಿಷ್ಯತೇ' ಎಂಬುದಾಗಿ ಬ್ರಹ್ಮಸೂತ್ರವೇ ಸರ್ವೋತ್ತಮವೆಂದು ಹೇಳಿದ್ದಾರೆ. ಆದ್ದರಿಂದ ಈ ಎರಡು ವಾಕ್ಯಗಳಿಗೆ ಪರಸ್ಪರವಿರೋಧ ಬರುತ್ತದಲ್ಲವೇ?

ವಿರೋಧಕ್ಕೆ ಅವಕಾಶವಿಲ್ಲ. ನಿರ್ಣೇಯಗ್ರಂಥಗಳ ನಡುವೆ ಮಹಾಭಾರತವೇ ಸರ್ವಶಾಸ್ತ್ರೋತ್ತಮ-ವಾಗಿದೆ. ನಿರ್ಣಾಯಕಗ್ರಂಥಗಳ ನಡುವೆ ಬ್ರಹ್ಮಸೂತ್ರವೇ ಸರ್ವಶಾಸ್ತ್ರೋತ್ತಮವಾಗಿದೆ. ಆದ್ದರಿಂದ ಇರೋಧವಿಲ್ಲ. ಇದನ್ನೇ ನ್ಯಾಯಸುಧೆಯಲ್ಲಿ 'ವಿಚಾರ್ಯೇಷು ಶಾಸ್ತ್ರೇಷು ತತ್' ಎಂಬುದಾಗಿ ಹೇಳಿರುತ್ತಾರೆ ಎಂದು.

ಗೀತಾತಾತ್ಪರ್ಯನಿರ್ಣಯದ ಜನಾರ್ದನ ಟಿಪ್ಪಣಿಯಲ್ಲೂ ಕೂಡ ಇದೇ ವಿಷಯವನ್ನೇ ಸಮರ್ಥನೆ ಮಾಡಿದ್ದಾರೆ. ಗೀತಾತಾತ್ಪರ್ಯ ಹಾಗೂ ಗೀತಾಭಾಷ್ಯಗಳಲ್ಲಿ 'ಅತಿರಿಚ್ಯತ ಭಾರತಮ್' ಇತ್ಯಾದಿ ಮಾತುಗಳಿಂದ ಮಹಾಭಾರತವನ್ನೇ ಸರ್ವೋತ್ತಮವೆಂದು ಹೇಳಲಾಗಿದೆ. ಆದರೆ ಅನುವ್ಯಾಖ್ಯಾನದಲ್ಲಿ 'ಅತೋ ನೈತಾದೃಶಂ ಕಿಂಚಾತ್‌ಪ್ರಮಾಣಮತಮಿಷ್ಯತೇ' ಎಂಬ ವಾಕ್ಯದಿಂದ ಬ್ರಹ್ಮಸೂತ್ರವನ್ನೇ ಸರ್ವೋತ್ತಮ ಎಂಬುದಾಗಿ ಹೇಳಿದ್ದಾರೆ. ಎರಡೂ ಕೂಡ ಉತ್ತಮವಾಗಲು ಹೇಗೆ ಸಾಧ್ಯ ?

ಉತ್ತರವನ್ನು ಹೀಗೆ ತಿಳಿಯಬೇಕು - ನಿರ್ಣಾಯಕ ಗ್ರಂಥಗಳಲ್ಲಿ ಬ್ರಹ್ಮಸೂತ್ರವೇ ಶ್ರೇಷ್ಠವಾಗಿದೆ. ನಿರ್ಣಯಗ್ರಂಥಗಳಲ್ಲಿ ಮಹಾಭಾರತವು ಶ್ರೇಷ್ಠವಾಗಿವೆ. ಇದನ್ನೇ ಶ್ರೀಜಯತೀರ್ಥರು 'ವಿಚಾರ್ಯೇಷು ಶಾಸ್ತ್ರೇಷು ತತ್' ಇತ್ಯಾದಿ ವಾಕ್ಯಗಳಿಂದ ನ್ಯಾಯಸುಧೆಯಲ್ಲಿ ಸಮರ್ಥನೆ ಮಾಡಿದ್ದಾರೆ ಎಂದು.

## ಮಹಾಭಾರತವು ವೇದಗಳಿಗಿಂತಲೂ ಕೂಡ ಶ್ರೇಷ್ಠವೇ ?
## (ಒಂದು ವಿಮರ್ಶೆ)

'ಅಥೈತಾವತಾ ನಿರ್ಣಾಯಕೇಷು ಬ್ರಹ್ಮಸೂತ್ರಮುತ್ತಮಂ, ನಿರ್ಣೇಯೇಷು ಮಹಾಭಾರತ-ಮುತ್ತಮಮಿತ್ಯುಕ್ತ್ಯಾ ನಿರ್ಣೇಯಶಾಸ್ತ್ರಾಂತಃಪಾತಿನೋವೇದಾದಪಿ ಭಾರತಸ್ಯೋತ್ತಮತ್ವಮುಕ್ತಂ ಸ್ಯಾದಿತಿ ನ ಭ್ರಮಿತವ್ಯಂ । ಅನುವ್ಯಾಖ್ಯಾನಸುಧಯೋಃ ಪ್ರಾಮಾಣ್ಯಪ್ರಕರಣಸ್ಯ ಕೇವಲ ಪೌರುಷೇಯ-ಗ್ರಂಥಪ್ರಾಮಾಣ್ಯನಿರೂಪಣಪರತ್ವಸ್ಯ ಸಾಧಿತತ್ವೇನ (ಪಿ-೨೦) ಅಪೌರುಷೇಯವೇದೋತ್ತಮತ್ವ-ಸ್ಯಾತ್ರಶಂಕಿತುಮಪ್ಯಶಕ್ಯತ್ವಾತ್ ।

ನನು ತರ್ಹಿ ಗೀತಾಭಾಷ್ಯಗೀತಾತಾತ್ಪರ್ಯನಿರ್ಣಯವಿರೋಧೋ ದುರ್ವಾರಃ। ತತ್ರ ಭಾರತಸ್ಯ ಸ್ಪಷ್ಟಂ ವೇದಾದುತ್ತಮತ್ವೋಕ್ತೇಃ। ತಥಾಹಿ - 'ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಂ।' ..ಶಾಸ್ತ್ರಪುಂಗವಃ' ಇತಿ ನಾರಾಯಣಾಷ್ಟಾಕ್ಷರಕಲ್ಪೇ । ಭಾರತಂ ಚಾಪಿ ಕೃತವಾನ್ ಪಂಚಮಂ ವೇದಮುತ್ತಮಂ। ವೇದಾದಪ್ಯುತ್ತಮಂ ಚ ಯತ್ । - ಇತಿ ಸ್ಕಾಂದೇ

'ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ।
ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಂ।
ಮಹತ್ತ್ವಾದ್ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ॥
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ। ಇತ್ಯಾದಿ - (ಗೀತಾಭಾಷ್ಯಂ)
'ಶಾಸ್ತ್ರೇಷು ಭಾರತಂ ಸಾರಂ ತತ್ರ ನಾಮಸಹಸ್ರಕಂ।
ವೈಷ್ಣವಂ ಕೃಷ್ಣಗೀತಾ ಚ ತತ್ ಜ್ಞಾನಾತ್ ಮುಚ್ಯತೇಽಂಜಸಾ ॥
ನ ಭಾರತಸಮಂ ಶಾಸ್ತ್ರಂ ಕುತ ಏವಾನಯೋಃ ಸಮಂ।
ಭಾರತಂ ಸರ್ವವೇದಾಶ್ಚ... ಭಾರತಂ ॥
ಮಹತ್ತ್ವಾತ್ ... ಪ್ರಮುಚ್ಯತೇ ॥ ಸ್ವಯಂ ನಾರಾಯಣೋ ...।
ಚಕಾರ ಪಂಚಮಂ ವೇದಂ ಮಹಾಭಾರತಸಂಜ್ಞಿತಂ। ಇತಿ ಬ್ರಹ್ಮಾಂಡೇ ॥

-(ಗೀತಾತಾತ್ಪರ್ಯನಿರ್ಣಯಃ)

ಅನುವಾದ - ಪ್ರಶ್ನೆ - ಇಲ್ಲಿಯ ತನಕ ನಿರ್ಣಾಯಕಗ್ರಂಥಗಳಲ್ಲಿ ಬ್ರಹ್ಮಸೂತ್ರವೇ ಶ್ರೇಷ್ಠವೆಂದು ಹೇಳಿದಿರಿ. ನಿರ್ಣೇಯಗ್ರಂಥಗಳಲ್ಲಿ ಮಹಾಭಾರತವೇ ಶ್ರೇಷ್ಠವಾಗಿದೆ ಎಂದು ಹೇಳಿದಿರಿ. ನಿರ್ಣೇಯಶಾಸ್ತ್ರಗಳ ನಡುವೆ ವೇದವೂ ಕೂಡ ಸೇರಿವೆ. ಅಂಥ ವೇದಕ್ಕಿಂತಲೂ ಮಹಾಭಾರತವನ್ನು ಶ್ರೇಷ್ಠವೆಂದು ಒಪ್ಪಿದಂತಾಯಿತಲ್ಲವೇ?

ಉತ್ತರ - ಹೀಗೆ ಭ್ರಮೆ ಪಡಬಾರದು. ಅನುವ್ಯಾಖ್ಯಾನ ಹಾಗೂ ನ್ಯಾಯಸುಧಾಗ್ರಂಥಗಳಲ್ಲಿ ಪೌರುಷೇಯಗ್ರಂಥಗಳ ವಿಷಯದಲ್ಲಷ್ಟೇ ಪ್ರಾಮಾಣ್ಯನಿರೂಪಣೆಯ ಸಂದರ್ಭ ಪ್ರಾಪ್ತವಾಗಿದೆ. ಅಪೌರುಷೇಯವಾದ ವೇದಗಳ ಪ್ರಾಮಾಣ್ಯವಿಷಯವು ಪ್ರಸಕ್ತವೇ ಆಗಿಲ್ಲ. ಆದ್ದರಿಂದ ಅಪೌರುಷೇಯವಾದ ವೇದಗಳಿಗಿಂತಲೂ ಹೆಚ್ಚಿನ ಪ್ರಾಮಾಣ್ಯವನ್ನು ಅನುವ್ಯಾಖ್ಯಾನ ಹಾಗೂ ನ್ಯಾಯಸುಧೆಗಳಲ್ಲಿ ಸಮರ್ಥನೆ ಮಾಡಿದ್ದಾರೆಂದು ಆಶಂಕಿಸಲು ಸಾಧ್ಯವಿಲ್ಲ.

ಪ್ರಶ್ನೆ – ಹಾಗಾದರೆ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯನಿರ್ಣಯಗಳ ವಿರೋಧ ಬರುತ್ತದೆ. ಏಕೆಂದರೆ ಅಲ್ಲಿ ಮಹಾಭಾರತವೇ ಶ್ರೇಷ್ಠವಾಗಿದೆ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಅದು ಹೀಗೆ - 'ವೇದಾದಪಿ ಪರಂ ಚಕ್ರೇ ಪಂಚಮಂ ವೇದಮುತ್ತಮಂ ।' ವೇದಕ್ಕಿಂತಲೂ ಶ್ರೇಷ್ಠವಾದ ಪಂಚಮವೇದವೆನಿಸಿದ ಮಹಾಭಾರತವನ್ನು ರಚನೆ ಮಾಡಿದರು. ಹೀಗೆ ನಾರಾಣಾಷ್ಟಾಕ್ಷರಕಲ್ಪದಲ್ಲಿ ಹೇಳಲಾಗಿದೆ. 'ಭಾರತಂ ಚಾಪಿ ಕೃತವಾನ್ ಪಂಚಮಂ ವೇದಮುತ್ತಮಂ । ವೇದಾದಪ್ಯುತ್ತಮಂ ಚ ಯತ್ ।' ಪಂಚಮವೇದವೆನಿಸಿದ ಮಹಾಭಾರತವನ್ನು ರಚನೆ ಮಾಡಿದರು. ಇದು ವೇದಕ್ಕಿಂತಲೂ ಕೂಡ ಶ್ರೇಷ್ಠವಾಗಿದೆ ಎಂಬುದಾಗಿ ಸ್ಕಾಂದಪುರಾಣದಲ್ಲಿ ಹೇಳಲಾಗಿದೆ.

'ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ ।
ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಂ ।
ಮಹತ್ವಾದ್ಭಾರವತ್ವಾಚ್ಚ ಮಹಾಭಾರತಮುಚ್ಯತೇ ॥
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ।'

ಮಹಾಭಾರತ ಹಾಗೂ ಸಕಲವೇದಗಳನ್ನು ವೇದವ್ಯಾಸರ ಆಜ್ಞೆಯಂತೆ ತಕ್ಕಡಿಯಲ್ಲಿ ಇಡಲಾಯಿತು. ಆಗ ಅತ್ಯಂತ ಭಾರವಾಗಿರುವುದರಿಂದ ಮಹಾಭಾರತವೇ ಶ್ರೇಷ್ಠವೆಂದು ನಿರ್ಣಯವಾಗಿದೆ. ಆದ್ದರಿಂದಲೇ ಮಹಾಭಾರತ ಎಂಬ ಹೆಸರು ಸಾರ್ಥಕವಾಯಿತು. ಈ ಗ್ರಂಥದಿಂದ ಸಕಲ ಪಾಪಗಳು ಪರಿಹಾರವಾಗುತ್ತವೆ. ಇಷ್ಟು ವಿಚಾರವು ಗೀತಾಭಾಷ್ಯದಿಂದ ತಿಳಿಯುತ್ತದೆ.

## ಸಕಲಶಾಸ್ತ್ರಗಳ ತಿರುಳು

ಗೀತಾತಾತ್ಪರ್ಯನಿರ್ಣಯದಲ್ಲಿ ಇರುವ ವಾಕ್ಯಗಳು ಹೀಗಿವೆ -

'ಶಾಸ್ತ್ರೇಷು ಭಾರತಂ ಸಾರಂ ತತ್ರ ನಾಮಸಹಸ್ರಕಂ ।
ವೈಷ್ಣವಂ ಕೃಷ್ಣಗೀತಾ ಚ ತಜ್ಜ್ಞಾನಾನ್ಮುಚ್ಯತೇಽಞ್ಜಸಾ ॥'

## ನ ಭಾರತಸಮಂ ಶಾಸ್ತ್ರಂ

ಅನುವಾದ - ಸಕಲ ಶಾಸ್ತ್ರಗಳ ಸಾರ ಮಹಾಭಾರತ. ಅದರಲ್ಲೂ ವಿಷ್ಣುಸಹಸ್ರನಾಮ ಹಾಗೂ ಭಗವದ್ಗೀತೆಗಳು ಸಾರಭಾಗವಾಗಿವೆ. ಇವುಗಳ ಜ್ಞಾನದಿಂದ ಮೋಕ್ಷವೇ ಲಭಿಸುತ್ತದೆ.

'ನ ಭಾರತಸಮಂ ಶಾಸ್ತ್ರಂ ಕುತ ಏವಾನಯೋಃ ಸಮಂ ।
ಭಾರತಂ ಸರ್ವವೇದಾಶ್ಚ... ಭಾರತಂ ॥'

ಅನುವಾದ - ಮಹಾಭಾರತಕ್ಕೆ ಸರಿಸಾಟಿಯಾದ ಮತ್ತೊಂದು ಗ್ರಂಥವಿಲ್ಲ. ಸಕಲ ವೇದಗಳಿಗಿಂತಲೂ ಕೂಡ ಶ್ರೇಷ್ಠವಾಗಿದೆ.

'ಮಹತ್ತ್ವಾತ್ ... ಪ್ರಮುಚ್ಯತೇ ॥ ಸ್ವಯಂ ನಾರಾಯಣೋ ...। ಚಕಾರಂ ಪಂಚಮಂ ವೇದಂ ಮಹಾಭಾರತಸಂಜ್ಞಿತಂ ।' ಹೆಸರೇ ಹೇಳುವಂತೆ ಇದು ಸಕಲ ಶಾಸ್ತ್ರಗಳಿಂದ ಉತ್ತಮವಾಗಿದೆ. ಸ್ವತಃ ನಾರಾಯಣನೇ ಇದನ್ನು ರಚನೆ ಮಾಡಿರುತ್ತಾನೆ. ಮಹಾಭಾರತವೆಂಬುದು ಐದನೆಯ ವೇದವೆಂಬ ಹೆಸರು ಪಡೆದಿದೆ. ಹೀಗೆ ಬ್ರಹ್ಮಾಂಡಪುರಾಣವು ಹೇಳುತ್ತಿದೆ ಎಂದು.

### ಇದು ಆಪಾತಪ್ರತೀತಾರ್ಥ

ಉದಾಹೃತಭಾಷ್ಯತಾತ್ಪರ್ಯಯೋರ್ವೇದಾದಪಿ ಪರಂ ಚಕ್ರೇ, ನ ಭಾರತಸಮಂ ಶಾಸ್ತ್ರಂ ವೇದಾದಪ್ಯುತ್ತಮಂ ಚ ಯತ್ ।' ಇತ್ಯಾದಿವಾಕ್ಯೈರಾಪಾತತೋ ವೇದಾದಿಸರ್ವಶಾಸ್ತ್ರೋತ್ತಮಂ ಭಾರತಮಿತಿ ಪ್ರತೀಯತೇ। ನ ಹ್ಯಾಪಾತಪ್ರತೀತ ಏವ ವಾಕ್ಯಾರ್ಥೋ ಭವಿತುಮರ್ಹತಿ; ಮೀಮಾಂಸಾವೈಯರ್ಥ್ಯಾಪತ್ತೇಃ ಅತೋಽತ್ರ ವಿಚಾರಃ ಕರ್ತವ್ಯಃ, ಪ್ರಕರಣಂ ಚ ಪರ್ಯಾಲೋಚನೀಯಂ।

ಅನುವಾದ - ಉತ್ತರ - ಮೇಲೆ ಉದಾಹರಿಸಿದ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯನಿರ್ಣಯಗಳ ಮಾತಿನಿಂದ ವೇದಕ್ಕಿಂತಲೂ ಶ್ರೇಷ್ಠವಾದ ಮಹಾಭಾರತವನ್ನು ರಚನೆ ಮಾಡಿದರು. ಆದ್ದರಿಂದ ಮಹಾಭಾರತಕ್ಕೆ ಸರಿಸಾಟಿಯಾದ ಗ್ರಂಥ ಮತ್ತೊಂದಿಲ್ಲ. ವೇದಗಳಿಗಿಂತಲೂ ಕೂಡ ಉತ್ತಮವಾಗಿದೆ ಇತ್ಯಾದಿ ವಿಚಾರವು ಆಪಾತತಃ ಪ್ರತೀತವಾಗುತ್ತದೆ. ಸಕಲಶಾಸ್ತ್ರಗಳಿಗಿಂತಲೂ ಕೂಡ ಮಹಾಭಾರತವೇ ಶ್ರೇಷ್ಠ ಎಂಬ ವಿಚಾರವೂ ಕೂಡ ಆಪಾತತಃ ಕಾಣಸುತ್ತದೆ. ಆದರೆ ಆಪಾತತಃ ಪ್ರತೀತವಾದ ಅರ್ಥವು ವಾಕ್ಯಾರ್ಥವಾಗಲು ಸಾಧ್ಯವಿಲ್ಲ. ಹಾಗಾದಲ್ಲಿ ಮೀಮಾಂಸಾಶಾಸ್ತ್ರವೇ ವ್ಯರ್ಥವಾಗುತ್ತದೆ. ಆದ್ದರಿಂದ ಈ ವಾಕ್ಯಗಳ ನಿಜವಾದ ಅಭಿಪ್ರಾಯವೇನು ? ಎಂಬುದನ್ನು ವಿಚಾರ ಮಾಡಬೇಕು. ಆ ಪ್ರಕರಣವನ್ನು ಕೂಲಂಕಷವಾಗಿ ವಿಮರ್ಶಿಸಬೇಕು. ಈಗ ಅದರ ವಿಮರ್ಶೆಯನ್ನು ಮಾಡೋಣ -

ವಿವರಣೆ - ಪ್ರಶ್ನೆ - ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯನಿರ್ಣಯಗಳಲ್ಲಿ ವೇದಕ್ಕಿಂತಲೂ ಸಹ ಮಹಾಭಾರತ ಉತ್ತಮ ಎಂದು ಹೇಳಿದ್ದಾರೆ. ಆದ್ದರಿಂದ ಮಹಾಭಾರತವು ವೇದಕ್ಕಿಂತಲೂ ಸಹ ಉತ್ತಮವಾಗುವುದಿಲ್ಲವೇ?

ಇದಕ್ಕೆ ಆಧಾರವಾಗಿ ಗೀತಾಭಾಷ್ಯದ ನಾರಾಯಣಾಷ್ಟಾಕ್ಷರಕಲ್ಪ, ಸ್ಕಂದಪುರಾಣ ಹಾಗೂ ಮಹಾಭಾರತದ ವಾಕ್ಯಗಳು ಸಂವಾದಿಯಾಗಿವೆ. ಆ ವಾಕ್ಯಗಳು ಹೀಗಿವೆ –





ಲೋಕಪಾಲಕರಾದ ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ಸಹ ಸಂಸಾರದಲ್ಲಿ ದುಃಖಪಡುತ್ತಿದ್ದ ಜನರನ್ನು ನೋಡಿ ಹಾಗೂ ವೇದಾಧಿಕಾರ ಇಲ್ಲದ ಸ್ತ್ರೀಯರೇ ಮೊದಲಾದ ಸಜ್ಜನರನ್ನೂ ಸಹ ನೋಡಿ ಭಗವಂತನ ಬಳಿ ಪ್ರಾರ್ಥಿಸಿದರು. ಆಗ ಭಗವಂತನು ಪ್ರಸನ್ನನಾಗಿ ಅವತಾರ ಮಾಡಿ ವೇದವ್ಯಾಸ ರೂಪದಿಂದ ಹಾಗೂ ಹಯಗ್ರೀವ ಮುಂತಾದ ಬೇರೆ ರೂಪಗಳಿಂದಲೂ ಸಹ ವೇದದಲ್ಲಿ ಹೇಳದೇ ಇರುವ ಅನೇಕ ಅರ್ಥಗಳು ತುಂಬಿದ ಗ್ರಂಥವನ್ನು ರಚನೆ ಮಾಡಿದ. ಇದನ್ನು ಪಂಚಮವೇದ ಎಂದು ಕರೆಯುತ್ತಾರೆ. ಈ ಪಂಚಮವೇದವು ವೇದದ ಅರ್ಥವನ್ನೂ ಒಳಗೊಂಡಿದೆ. ಕೇವಲ ಭಗವಂತನ ಜ್ಞಾನದಿಂದಲೇ ರಚಿತವಾದದ್ದು. ಈ ಭಾರತ, ಪಂಚರಾತ್ರ, ಮೂಲರಾಮಾಯಣ, ಭಾಗವತ ಪುರಾಣ ಇವೆಲ್ಲವೂ ಕೂಡ ಶ್ರೇಷ್ಠವಾಗಿರುವ ಗ್ರಂಥಗಳು. ಇಂತಹ ಗ್ರಂಥಗಳು ಅತ್ಯಂತ ಪೂಜ್ಯವಾದವು. ಇಷ್ಟು ನಾರಾಯಣಾಷ್ಟಾಕ್ಷರಕಲ್ಪದ ವಾಕ್ಯದ ಅಭಿಪ್ರಾಯ.

ಸ್ಕಂದ ಪುರಾಣದಲ್ಲಿ ಹೀಗೆ ಹೇಳಿದ್ದಾರೆ – ಭಗವಂತನು ಉತ್ತಮವಾದ ಮಹಾಭಾರತವನ್ನೂ ಸಹ ರಚನೆ ಮಾಡಿದನು. ಇದಕ್ಕೆ ಪಂಚಮವೇದ ಎಂದು ಹೆಸರು. ಇದರಲ್ಲಿ ಒಂದೊಂದು ಶ್ಲೋಕಗಳಿಗೂ ಸಹ ಹತ್ತಕ್ಕೆ ಕಡಿಮೆ ಇಲ್ಲದೇ ಅರ್ಥವಿದೆ. ಇಡೀ ಮಹಾಭಾರತದ ಎಲ್ಲಾ ಪ್ರಕರಣವೂ ಸಹ ಕೇವಲ ಭಗವಂತನ ವಿಷಯವನ್ನೇ ಬೋಧನೆ ಮಾಡುತ್ತದೆ. ಎಲ್ಲಾ ಕಡೆಯಲ್ಲಿಯೂ ಸಹ ಪರೋಕ್ಷ ಅರ್ಥವು ಇದರಲ್ಲಿ ಇದೆ. ಇಂತಹ ಮಹಾಭಾರತವು 'ವೇದಾದಪಿ ಉತ್ತಮಂ' ವೇದಕ್ಕಿಂತಲೂ ಸಹ ಅತ್ಯುತ್ತಮವಾಗಿದೆ.

ಇದರಂತೆ ಮಹಾಭಾರತದಲ್ಲೇ ಬಂದ ಮತ್ತೂ ಕೆಲವು ವಾಕ್ಯಗಳು ಭಾರತಕ್ಕಿಂತಲೂ ಸಹ ಉತ್ತಮವಾದದ್ದು ಯಾವುದೂ ಸಹ ಇಲ್ಲ ಎಂದು ತೋರಿಸುತ್ತದೆ. ಗೀತಾತಾತ್ಪರ್ಯದಲ್ಲಿ ಬಂದ ಬ್ರಹ್ಮಾಂಡಪುರಾಣದ ವಾಕ್ಯವು ಮಹಾಭಾರತ ಹಾಗೂ ವೇದಗಳ ಸಾಮ್ಯತೆಯನ್ನು ನಿರಾಕರಣೆ ಮಾಡುತ್ತಿದೆ. ಶಾಸ್ತ್ರಗಳಲ್ಲಿ ಅತ್ಯಂತ ಸಾರಭೂತವಾದದ್ದು ಮಹಾಭಾರತ. ಅದರಲ್ಲೂ ಸಹ ವಿಷ್ಣುಸಹಸ್ರನಾಮವು ಅತ್ಯಂತ ಶ್ರೇಷ್ಠವಾದದ್ದು. ಅದರಂತೆ ಶ್ರೀಕೃಷ್ಣ ಉಪದೇಶ ಮಾಡಿದ ಗೀತೆಯೂ ಸಹ ಅತ್ಯಂತ ಸಾರಭೂತವಾದದ್ದು. ಮಹಾಭಾರತದ ವಿಷ್ಣುಸಹಸ್ರನಾಮ ಹಾಗೂ ಗೀತೆಗಳನ್ನು ತಿಳಿದಾಗ ಅವುಗಳ ಜ್ಞಾನದಿಂದ ಮೋಕ್ಷವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಹಿಂದೆ ಬ್ರಹ್ಮಾದಿ ದೇವತೆಗಳು ಹಾಗೂ ಋಷಿಗಳು ಮಹಾಭಾರತ ಹಾಗೂ ವೇದಗಳ ಬಗ್ಗೆ ಅವುಗಳ ತಾರತಮ್ಯದ ಬಗ್ಗೆ ಭಗವಂತನ ಬಳಿ ಪ್ರಾರ್ಥನೆ ಮಾಡಿದರು. ಆಗ ವೇದವ್ಯಾಸರು ಮಹಾಭಾರತದ ಭಾರವು ಶ್ರೇಷ್ಠವಾದ್ದರಿಂದ ಅದರ ಪ್ರಾಮಾಣ್ಯವು ಉಳಿದ ಗ್ರಂಥಗಳಿಗೆ ಸಮವಾಗಿ ತೂಗುವುದು ಸರಿಯಲ್ಲ ಎಂಬ ದೃಷ್ಟಿಯಿಂದ ಆ ಮಹಾಭಾರತವನ್ನು ಪ್ರತ್ಯೇಕವಾಗಿ ತೆಗೆಸಿಟ್ಟರು. ಉಳಿದ ಗ್ರಂಥಗಳನ್ನು ಮಾತ್ರ ತಕ್ಕಡಿಯಲ್ಲಿ ಹಾಕಿ ತೂಗಿ ನೋಡಿದರು. ಈ ಸಂದರ್ಭದಲ್ಲಿ ಮಹಾಭಾರತವು ಒಂದು ಕಡೆ, ಉಳಿದ ವೇದಗಳು ಒಂದು ಕಡೆ ಇಟ್ಟಾಗ ಮಹಾಭಾರತದ ತೂಕವೇ ಹೆಚ್ಚಾಗಿದೆ. ಮಹಾಭಾರತವು ಅತ್ಯಂತ

ಮಹತ್ವಪೂರ್ಣವಾದದ್ದು ಹಾಗೂ ಭಾರವತ್ ಆದ್ದರಿಂದ ಇದಕ್ಕೆ ಮಹಾಭಾರತ ಎಂಬ ಹೆಸರು ಬಂದಿದೆ. ಸ್ವತಃ ನಾರಾಯಣದೇವರೇ ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳ ಪ್ರಾರ್ಥನೆಗೆ ಅನುಗುಣವಾಗಿ ಅವತಾರ ಮಾಡಿ ವೇದವ್ಯಾಸ ರೂಪದಿಂದ ಮಹಾಭಾರತ ಗ್ರಂಥವನ್ನು ರಚನೆ ಮಾಡಿದ್ದಾರೆ. ಈ ಮಹಾಭಾರತವು ಕೇವಲ ತತ್ವನಿರ್ಣಯದ ಉದ್ದೇಶದಿಂದಲೇ ರಚಿತವಾಗಿದೆ. ಆದಕ್ಕಾಗಿಯೇ ಇದನ್ನು ಪಂಚಮವೇದ ಎಂದು ಕರೆಯಲಾಗಿದೆ. ಹೀಗೆ ಬ್ರಹ್ಮಾಂಡಪುರಾಣದ ವಾಕ್ಯವು ತಿಳಿಸುತ್ತಿದೆ.

ಇದರಂತೆ ಮಹಾಭಾರತದ ನಿರುಕ್ತಿಯನ್ನು ಹೇಳುವಾಗ 'ಮಹತ್ವಾತ್ ಭಾರವತ್ವಾಚ್ಚ' ಎಂಬ ವಾಕ್ಯವನ್ನು ಗೀತಾಭಾಷ್ಯವು ಉಲ್ಲೇಖ ಮಾಡಿದೆ. ಭಾರತ ಹಾಗೂ ಎಲ್ಲಾ ವೇದಗಳನ್ನು ಸೇರಿ ಋಷಿಗಳು ತಕ್ಕಡಿಯಲ್ಲಿ ಇಟ್ಟಾಗ ವೇದವ್ಯಾಸರ ಆಜ್ಞೆಯಂತೆ ಮಹಾಭಾರತಕ್ಕೆ ಮಹತ್ವ ಹಾಗೂ ಭಾರವತ್ವದ ಪ್ರಯುಕ್ತವಾಗಿ ಮಹಾಭಾರತ ಎಂಬ ಅರ್ಥವು ಬಂದಿದೆ. ಇದು ಮಹಾಭಾರತದ ನಿರುಕ್ತಿ. ಇಂತಹ ನಿರುಕ್ತಿಯನ್ನು ತಿಳಿದರೆ ಎಲ್ಲಾ ಪಾಪಗಳೂ ಸಹ ಪರಿಹಾರವಾಗುತ್ತದೆ ಎಂದು ಹೇಳಲಾಗಿದೆ.

ಈ ಮೇಲೆ ಹೇಳಿದ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯ ಇವುಗಳಲ್ಲಿ ಬಂದಿರುವ ಎರಡು ವಾಕ್ಯಗಳು ಹೀಗಿವೆ – 'ವೇದಾದಪಿ ಪರಂ ಚಕ್ರೇ' ವೇದಕ್ಕಿಂತಲೂ ಸಹ ಉತ್ತಮವಾದ ಗ್ರಂಥವನ್ನು ರಚನೆ ಮಾಡಿದರು. ಯಾವುದು ವೇದಕ್ಕಿಂತಲೂ ಸಹ ಉತ್ತಮವೋ ಅಂತಹ ಮಹಾಭಾರತಕ್ಕೆ ಸಮವಾದ ಶಾಸ್ತ್ರವು ಇಲ್ಲ. ಇತ್ಯಾದಿ ಅನೇಕ ವಾಕ್ಯಗಳಿಂದ ವೇದಾದಿಗಳು ಸರ್ವಶಾಸ್ತ್ರಕ್ಕಿಂತಲೂ ಸಹ ಉತ್ತಮವಾದ ಭಾರತವು ಎಂದು ತೋರುತ್ತದೆ. ಆದರೆ ಮೇಲ್ನೋಟಕ್ಕೆ ಕಾಣುವ ಈ ಅರ್ಥವನ್ನು ವಾಕ್ಯಾರ್ಥ ಎಂಬುದಾಗಿ ಗ್ರಹಣ ಮಾಡಬಾರದು. ಹಾಗಾದಲ್ಲಿ ಮೀಮಾಂಸಾಗ್ರಂಥವು ಆಪಾತತಃ ಪ್ರತೀತವಾದ ಅರ್ಥವನ್ನು ನಿರಾಕರಣೆ ಮಾಡಿ ವಾಕ್ಯಾಭಿಪ್ರೇತವಾದ ಅರ್ಥವನ್ನು ತಿಳಿಸಲು ಹೊರಟಿರುವ ಶಾಸ್ತ್ರವಾಗಿದೆ. ಆಪಾತಪ್ರತೀತವಾದ ಅರ್ಥವನ್ನು ಸ್ವೀಕಾರ ಮಾಡಿದರೆ ಮೀಮಾಂಸಾ ಗ್ರಂಥವೇ ವ್ಯರ್ಥವಾಗುತ್ತದೆ. ಆದ್ದರಿಂದ ಈ ಪ್ರಕರಣದ ವಿಚಾರಣೆಯನ್ನು ಶಾಸ್ತ್ರೀಯವಾಗಿ ಮಾಡಬೇಕು. ಪ್ರಕರಣದ ತಾತ್ಪರ್ಯವನ್ನೂ ಸಹ ಪರ್ಯವಸಾನೆ ಮಾಡಬೇಕು.

## ನ್ಯಾಯದೀಪಿಕೆ ಆಧಾರದಲ್ಲಿ ಚರ್ಚೆ

ಅತ್ರ ನ್ಯಾಯದೀಪಿಕಾಯಾಂ ಪ್ರಮೇಯದೀಪಿಕಾಯಾಂ ಚ ಶ್ರೀಮಜ್ಜಯತೀರ್ಥಪೂಜ್ಯ-ಚರಣಾನಾಂ ತಾತ್ಪರ್ಯಭಾಷ್ಯವ್ಯಾಖ್ಯಾನಮವಶ್ಯಮನುಸಂಧಾಯ ತದನುರೋಧೇನ ಮೂಲ-ತಾತ್ಪರ್ಯಂ ನಿರ್ಣೇಯಂ। ತಥಾಹಿ - ಭಾರತಸ್ಯ ಸರ್ವಶಾಸ್ತ್ರೋತ್ತಮತ್ವಂ, ಭಾರತೇಽಪಿ ಗೀತಾಯಾ ಉತ್ತಮತ್ವಮೇವ ಕುತ ಇತ್ಯತಃ ತತ್‌ಪುರಾಣವಚನೇನ ಸಾಧಯತಿ - ಶಾಸ್ತ್ರೇಷ್ವಿತಿ । ಭಾರತಸ್ಯ





ಲೋಕಪಾಲಕರಾದ ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ಸಹ ಸಂಸಾರದಲ್ಲಿ ದುಃಖಪಡುತ್ತಿದ್ದ ಜನರನ್ನು ನೋಡಿ ಹಾಗೂ ವೇದಾಧಿಕಾರ ಇಲ್ಲದ ಸ್ತ್ರೀಯರೇ ಮೊದಲಾದ ಸಜ್ಜನರನ್ನೂ ಸಹ ನೋಡಿ ಭಗವಂತನ ಬಳಿ ಪ್ರಾರ್ಥಿಸಿದರು. ಆಗ ಭಗವಂತನು ಪ್ರಸನ್ನನಾಗಿ ಅವತಾರ ಮಾಡಿ ವೇದವ್ಯಾಸ ರೂಪದಿಂದ ಹಾಗೂ ಹಯಗ್ರೀವ ಮುಂತಾದ ಬೇರೆ ರೂಪಗಳಿಂದಲೂ ಸಹ ವೇದದಲ್ಲಿ ಹೇಳದೇ ಇರುವ ಅನೇಕ ಅರ್ಥಗಳು ತುಂಬಿದ ಗ್ರಂಥವನ್ನು ರಚನೆ ಮಾಡಿದ. ಇದನ್ನು ಪಂಚಮವೇದ ಎಂದು ಕರೆಯುತ್ತಾರೆ. ಈ ಪಂಚಮವೇದವು ವೇದದ ಅರ್ಥವನ್ನೂ ಒಳಗೊಂಡಿದೆ. ಕೇವಲ ಭಗವಂತನ ಜ್ಞಾನದಿಂದಲೇ ರಚಿತವಾದದ್ದು. ಈ ಭಾರತ, ಪಂಚರಾತ್ರ, ಮೂಲರಾಮಾಯಣ, ಭಾಗವತ ಪುರಾಣ ಇವೆಲ್ಲವೂ ಕೂಡ ಶ್ರೇಷ್ಠವಾಗಿರುವ ಗ್ರಂಥಗಳು. ಇಂತಹ ಗ್ರಂಥಗಳು ಅತ್ಯಂತ ಪೂಜ್ಯವಾದವು. ಇಷ್ಟು ನಾರಾಯಣಾಷ್ಟಾಕ್ಷರಕಲ್ಪದ ವಾಕ್ಯದ ಅಭಿಪ್ರಾಯ.

ಸ್ಕಂದ ಪುರಾಣದಲ್ಲಿ ಹೀಗೆ ಹೇಳಿದ್ದಾರೆ – ಭಗವಂತನು ಉತ್ತಮವಾದ ಮಹಾಭಾರತವನ್ನೂ ಸಹ ರಚನೆ ಮಾಡಿದನು. ಇದಕ್ಕೆ ಪಂಚಮವೇದ ಎಂದು ಹೆಸರು. ಇದರಲ್ಲಿ ಒಂದೊಂದು ಶ್ಲೋಕಗಳಿಗೂ ಸಹ ಹತ್ತಕ್ಕೆ ಕಡಿಮೆ ಇಲ್ಲದೇ ಅರ್ಥವಿದೆ. ಇಡೀ ಮಹಾಭಾರತದ ಎಲ್ಲಾ ಪ್ರಕರಣವೂ ಸಹ ಕೇವಲ ಭಗವಂತನ ವಿಷಯವನ್ನೇ ಬೋಧನೆ ಮಾಡುತ್ತದೆ. ಎಲ್ಲಾ ಕಡೆಯಲ್ಲಿಯೂ ಸಹ ಪರೋಕ್ಷ ಅರ್ಥವು ಇದರಲ್ಲಿ ಇದೆ. ಇಂತಹ ಮಹಾಭಾರತವು 'ವೇದಾದಪಿ ಉತ್ತಮಂ' ವೇದಕ್ಕಿಂತಲೂ ಸಹ ಅತ್ಯುತ್ತಮವಾಗಿದೆ.

ಇದರಂತೆ ಮಹಾಭಾರತದಲ್ಲೇ ಬಂದ ಮತ್ತೂ ಕೆಲವು ವಾಕ್ಯಗಳು ಭಾರತಕ್ಕಿಂತಲೂ ಸಹ ಉತ್ತಮವಾದದ್ದು ಯಾವುದೂ ಸಹ ಇಲ್ಲ ಎಂದು ತೋರಿಸುತ್ತದೆ. ಗೀತಾತಾತ್ಪರ್ಯದಲ್ಲಿ ಬಂದ ಬ್ರಹ್ಮಾಂಡಪುರಾಣದ ವಾಕ್ಯವು ಮಹಾಭಾರತ ಹಾಗೂ ವೇದಗಳ ಸಾಮ್ಯತೆಯನ್ನು ನಿರಾಕರಣೆ ಮಾಡುತ್ತಿದೆ. ಶಾಸ್ತ್ರಗಳಲ್ಲಿ ಅತ್ಯಂತ ಸಾರಭೂತವಾದದ್ದು ಮಹಾಭಾರತ. ಅದರಲ್ಲೂ ಸಹ ವಿಷ್ಣುಸಹಸ್ರನಾಮವು ಅತ್ಯಂತ ಶ್ರೇಷ್ಠವಾದದ್ದು. ಅದರಂತೆ ಶ್ರೀಕೃಷ್ಣ ಉಪದೇಶ ಮಾಡಿದ ಗೀತೆಯೂ ಸಹ ಅತ್ಯಂತ ಸಾರಭೂತವಾದದ್ದು. ಮಹಾಭಾರತದ ವಿಷ್ಣುಸಹಸ್ರನಾಮ ಹಾಗೂ ಗೀತೆಗಳನ್ನು ತಿಳಿದಾಗ ಅವುಗಳ ಜ್ಞಾನದಿಂದ ಮೋಕ್ಷವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಹಿಂದೆ ಬ್ರಹ್ಮಾದಿ ದೇವತೆಗಳು ಹಾಗೂ ಋಷಿಗಳು ಮಹಾಭಾರತ ಹಾಗೂ ವೇದಗಳ ಬಗ್ಗೆ ಅವುಗಳ ತಾರತಮ್ಯದ ಬಗ್ಗೆ ಭಗವಂತನ ಬಳಿ ಪ್ರಾರ್ಥನೆ ಮಾಡಿದರು. ಆಗ ವೇದವ್ಯಾಸರು ಮಹಾಭಾರತದ ಭಾರವು ಶ್ರೇಷ್ಠವಾದ್ದರಿಂದ ಅದರ ಪ್ರಾಮಾಣ್ಯವು ಉಳಿದ ಗ್ರಂಥಗಳಿಗೆ ಸಮವಾಗಿ ತೂಗುವುದು ಸರಿಯಲ್ಲ ಎಂಬ ದೃಷ್ಟಿಯಿಂದ ಆ ಮಹಾಭಾರತವನ್ನು ಪ್ರತ್ಯೇಕವಾಗಿ ತೆಗೆಸಿಟ್ಟರು. ಉಳಿದ ಗ್ರಂಥಗಳನ್ನು ಮಾತ್ರ ತಕ್ಕಡಿಯಲ್ಲಿ ಹಾಕಿ ತೂಗಿ ನೋಡಿದರು. ಈ ಸಂದರ್ಭದಲ್ಲಿ ಮಹಾಭಾರತವು ಒಂದು ಕಡೆ, ಉಳಿದ ವೇದಗಳು ಒಂದು ಕಡೆ ಇಟ್ಟಾಗ ಮಹಾಭಾರತದ ತೂಕವೇ ಹೆಚ್ಚಾಗಿದೆ. ಮಹಾಭಾರತವು ಅತ್ಯಂತ



ಮಹತ್ವಪೂರ್ಣವಾದದ್ದು ಹಾಗೂ ಭಾರವತ್ ಆದ್ದರಿಂದ ಇದಕ್ಕೆ ಮಹಾಭಾರತ ಎಂಬ ಹೆಸರು ಬಂದಿದೆ. ಸ್ವತಃ ನಾರಾಯಣದೇವರೇ ಬ್ರಹ್ಮ, ರುದ್ರ , ಇಂದ್ರ ಮೊದಲಾದ ದೇವತೆಗಳ ಪ್ರಾರ್ಥನೆಗೆ ಅನುಗುಣವಾಗಿ ಅವತಾರ ಮಾಡಿ ವೇದವ್ಯಾಸ ರೂಪದಿಂದ ಮಹಾಭಾರತ ಗ್ರಂಥವನ್ನು ರಚನೆ ಮಾಡಿದ್ದಾರೆ. ಈ ಮಹಾಭಾರತವು ಕೇವಲ ತತ್ವನಿರ್ಣಯದ ಉದ್ದೇಶದಿಂದಲೇ ರಚಿತವಾಗಿದೆ. ಆದಕ್ಕಾಗಿಯೇ ಇದನ್ನು ಪಂಚಮವೇದ ಎಂದು ಕರೆಯಲಾಗಿದೆ. ಹೀಗೆ ಬ್ರಹ್ಮಾಂಡಪುರಾಣದ ವಾಕ್ಯವು ತಿಳಿಸುತ್ತಿದೆ.

ಇದರಂತೆ ಮಹಾಭಾರತದ ನಿರುಕ್ತಿಯನ್ನು ಹೇಳುವಾಗ 'ಮಹತ್ವಾತ್ ಭಾರವತ್ವಾಚ್ಚ' ಎಂಬ ವಾಕ್ಯವನ್ನು ಗೀತಾಭಾಷ್ಯವು ಉಲ್ಲೇಖ ಮಾಡಿದೆ. ಭಾರತ ಹಾಗೂ ಎಲ್ಲಾ ವೇದಗಳನ್ನು ಸೇರಿ ಋಷಿಗಳು ತಕ್ಕಡಿಯಲ್ಲಿ ಇಟ್ಟಾಗ ವೇದವ್ಯಾಸರ ಆಜ್ಞೆಯಂತೆ ಮಹಾಭಾರತಕ್ಕೆ ಮಹತ್ವ ಹಾಗೂ ಭಾರವತ್ವದ ಪ್ರಯುಕ್ತವಾಗಿ ಮಹಾಭಾರತ ಎಂಬ ಅರ್ಥವು ಬಂದಿದೆ. ಇದು ಮಹಾಭಾರತದ ನಿರುಕ್ತಿ. ಇಂತಹ ನಿರುಕ್ತಿಯನ್ನು ತಿಳಿದರೆ ಎಲ್ಲಾ ಪಾಪಗಳೂ ಸಹ ಪರಿಹಾರವಾಗುತ್ತದೆ ಎಂದು ಹೇಳಲಾಗಿದೆ.

ಈ ಮೇಲೆ ಹೇಳಿದ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯ ಇವುಗಳಲ್ಲಿ ಬಂದಿರುವ ಎರಡು ವಾಕ್ಯಗಳು ಹೀಗಿವೆ – 'ವೇದಾದಪಿ ಪರಂ ಚಕ್ರೇ' ವೇದಕ್ಕಿಂತಲೂ ಸಹ ಉತ್ತಮವಾದ ಗ್ರಂಥವನ್ನು ರಚನೆ ಮಾಡಿದರು. ಯಾವುದು ವೇದಕ್ಕಿಂತಲೂ ಸಹ ಉತ್ತಮವೋ ಅಂತಹ ಮಹಾಭಾರತಕ್ಕೆ ಸಮವಾದ ಶಾಸ್ತ್ರವು ಇಲ್ಲ. ಇತ್ಯಾದಿ ಅನೇಕ ವಾಕ್ಯಗಳಿಂದ ವೇದಾದಿಗಳು ಸರ್ವಶಾಸ್ತ್ರಕ್ಕಿಂತಲೂ ಸಹ ಉತ್ತಮವಾದ ಭಾರತವು ಎಂದು ತೋರುತ್ತದೆ. ಆದರೆ ಮೇಲ್ನೋಟಕ್ಕೆ ಕಾಣುವ ಈ ಅರ್ಥವನ್ನು ವಾಕ್ಯಾರ್ಥ ಎಂಬುದಾಗಿ ಗ್ರಹಣ ಮಾಡಬಾರದು. ಹಾಗಾದಲ್ಲಿ ಮೀಮಾಂಸಾಗ್ರಂಥವು ಆಪಾತತಃ ಪ್ರತೀತವಾದ ಅರ್ಥವನ್ನು ನಿರಾಕರಣೆ ಮಾಡಿ ವಾಕ್ಯಾಭಿಪ್ರೇತವಾದ ಅರ್ಥವನ್ನು ತಿಳಿಸಲು ಹೊರಟಿರುವ ಶಾಸ್ತ್ರವಾಗಿದೆ. ಆಪಾತಪ್ರತೀತವಾದ ಅರ್ಥವನ್ನು ಸ್ವೀಕಾರ ಮಾಡಿದರೆ ಮೀಮಾಂಸಾ ಗ್ರಂಥವೇ ವ್ಯರ್ಥವಾಗುತ್ತದೆ. ಆದ್ದರಿಂದ ಈ ಪ್ರಕರಣದ ವಿಚಾರಣೆಯನ್ನು ಶಾಸ್ತ್ರೀಯವಾಗಿ ಮಾಡಬೇಕು. ಪ್ರಕರಣದ ತಾತ್ಪರ್ಯವನ್ನೂ ಸಹ ಪರ್ಯವಸಾನ ಮಾಡಬೇಕು.

## ನ್ಯಾಯದೀಪಿಕೆ ಆಧಾರದಲ್ಲಿ ಚರ್ಚೆ

ಅತ್ರ ನ್ಯಾಯದೀಪಿಕಾಯಾಂ ಪ್ರಮೇಯದೀಪಿಕಾಯಾಂ ಚ ಶ್ರೀಮಜ್ಜಯತೀರ್ಥಪೂಜ್ಯ-ಚರಣಾನಾಂ ತಾತ್ಪರ್ಯಭಾಷ್ಯವ್ಯಾಖ್ಯಾನಮವಶ್ಯಮನುಸಂಧಾಯ ತದನುರೋಧೇನ ಮೂಲ-ತಾತ್ಪರ್ಯಂ ನಿರ್ಣೇಯಂ। ತಥಾಹಿ - ಭಾರತಸ್ಯ ಸರ್ವಶಾಸ್ತ್ರೋತ್ತಮತ್ವಂ, ಭಾರತೇಽಪಿ ಗೀತಾಯಾ ಉತ್ತಮತ್ವಮೇವ ಕುತ ಇತ್ಯತಃ ತತ್‌ಪುರಾಣವಚನೇನ ಸಾಧಯತಿ - ಶಾಸ್ತ್ರೇಷ್ವಿತಿ । ಭಾರತಸ್ಯ





ಸರ್ವಶಾಸ್ತ್ರೋತ್ತಮತ್ವಮೇವ ಕುತ ಇತ್ಯತ ಆಹ - ಭಾರತಮಿತಿ । ವೇದಪದೇನ ವೇದಯಂತೀತಿ ಸರ್ವಶಾಸ್ತ್ರಾಣ್ಯುಚ್ಯಂತೇ। ಭಾರತಸ್ಯೈವಂ ಸರ್ವಶಾಸ್ತ್ರೋತ್ತಮತ್ವೇ ಕಿಂ ನಿಮಿತ್ತಮಿತ್ಯತ; ಪರಮಾಪ್ತಕೃತತ್ವಂ ದರ್ಶಯತಿ ಸ್ವಯಮಿತಿ । ಏವಂಭೂತಾಪ್ತರಚಿತತ್ವಸ್ಯ ಭಾಗವತಾದಿಷ್ವಪಿ ಸಾಮ್ಯಾತ್ಕೋ ವಿಶೇಷೋ ಭಾರತಸ್ಯೇತ್ಯುಕ್ತಂ। ಕೇವಲಮಿತಿ। ನಾಸುರಮೋಹನಾದ್ಯರ್ಥಮಪ್ಯತ್ರಾನ್ಯದುಚ್ಯತೇ। ಅನ್ಯಥಾಪ್ರತೀತಸ್ಯ ಗುಹ್ಯದರ್ಶನಭಾಷಾಭ್ಯಾಮುಕ್ತತ್ವಾತ್ । ಅನ್ಯತ್ರ ಕ್ವಚಿದ್ವ್ಯಾಮೋಹನಾರ್ಥಮನ್ಯಥಾಕಥನಾದಿತಿ' ಭಾವಃ। ಏವಂ ಪರಮಾಪ್ತಿಮೂಲತ್ವೇನೈವ ಭಾರತಸ್ಯ ಸರ್ವಶಾಸ್ತ್ರೋತ್ತಮತ್ವಂ , ಕಿಮು ವೇದಸಂವಾದಿ-ತಯಾ ಪಂಚಮವೇದತ್ವೇನಾಪೀತಿ ಭಾವೇನಾಹ, ಪಂಚಮಮಿತಿ ॥ - (ನ್ಯಾಯದೀಪಿಕಾ)

ಅನುವಾದ - ಈ ಪ್ರಕರಣದ ನ್ಯಾಯದೀಪಿಕೆ ಹಾಗೂ ಪ್ರಮೇಯದೀಪಿಕೆಗಳಲ್ಲಿ ಶ್ರೀಮಜ್ಜಯ-ತೀರ್ಥಶ್ರೀಪಾದರು ತಾತ್ಪರ್ಯ ಹಾಗೂ ಭಾಷ್ಯಗಳ ವ್ಯಾಖ್ಯಾನವನ್ನು ಸರಿಯಾಗಿ ಮಾಡಿದ್ದಾರೆ. ಅದಕ್ಕೆ ಅನುಸಾರವಾಗಿ ಮೂಲದ ತಾತ್ಪರ್ಯವನ್ನು ನಿರ್ಣಯ ಮಾಡಬೇಕಾಗಿದೆ.

ನ್ಯಾಯದೀಪಿಕಾ ವಾಕ್ಯಗಳಲ್ಲಿ ಗೀತಾತಾತ್ಪರ್ಯಕ್ಕೆ ಕೊಟ್ಟ ಅವತಾರಿಕೆಗಳು ಅವುಗಳ ಅಭಿಪ್ರಾಯಗಳು ಈ ಕೆಳಕಂಡಂತೆ ಇವೆ –

ಭಾರತಕ್ಕೆ ಸರ್ವಶಾಸ್ತ್ರೋತ್ತಮತ್ವವು ಹಾಗೂ ಮಹಾಭಾರತದಲ್ಲೂ ಕೂಡ ಗೀತೆಗೆ ಉತ್ತಮತ್ವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ ಉತ್ತರವಾಗಿ ಬ್ರಹ್ಮಾಂಡಪುರಾಣದ ವಾಕ್ಯದಿಂದ ಭಾರತದ ಸರ್ವಶಾಸ್ತ್ರೋತ್ತಮತ್ವವನ್ನು ಸಾಧನೆ ಮಾಡಲು 'ಶಾಸ್ತ್ರೇಷು' ಎಂಬ ವಾಕ್ಯವು ಹೊರಟಿದೆ.

ಭಾರತಕ್ಕೆ ಸರ್ವಶಾಸ್ತ್ರೋತ್ತಮತ್ವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಭಾರತಂ' ಎಂಬ ವಾಕ್ಯವು ಹೊರಟಿದೆ. ವೇದಶಬ್ದದಿಂದ ಸರ್ವಶಾಸ್ತ್ರಗಳನ್ನು ಗ್ರಹಣ ಮಾಡಬೇಕು. 'ವೇದಯಂತಿ ಇತಿ ವೇದಾಃ' ಯಾವುವು ಭಗವಂತನ ವಿಷಯವನ್ನು ಜ್ಞಾಪನ ಮಾಡುತ್ತವೋ ಅವಕ್ಕೆ 'ವೇದ' ಎಂದು ಹೆಸರು.

ಭಾರತಗ್ರಂಥವು ಈ ಕಾರಣದಿಂದ 'ಸರ್ವಶಾಸ್ತ್ರೋತ್ತಮ' ಎಂದು ಹೇಳಲು ಏನು ನಿಮಿತ್ತ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಸ್ವಯಂ ನಾರಾಯಣಃ' ಎಂಬ ವಾಕ್ಯವು ಹೊರಟಿದೆ. ಪರಮಾಪ್ತರಾದ ವೇದವ್ಯಾಸರಿಂದ ರಚಿತವಾಗಿರುವ ಕಾರಣ ಪರಮಾಪ್ತಕೃತತ್ವ ಎಂಬ ನಿಮಿತ್ತದಿಂದ ಭಾರತಕ್ಕೆ ಸರ್ವಶಾಸ್ತ್ರೋತ್ತಮತ್ವವು ಇದೆ ಎಂದು ಇದರ ಅಭಿಪ್ರಾಯ.

ಆಪ್ತರಚಿತತ್ವವು ಭಾಗವತಗ್ರಂಥಾದಿಗಳಲ್ಲೂ ಸಹ ಇದೆ. ಆದ್ದರಿಂದ ಮಹಾಭಾರತಕ್ಕೂ ಭಾಗವತಕ್ಕೂ





ಸಾಮ್ಯವೇ ಬರುವುದರಿಂದ ಭಾರತದಲ್ಲಿರುವ ವಿಶೇಷ ಏನು? ಎಂಬ ಪ್ರಶ್ನೆಗೆ ಉತ್ತರವಾಗಿ 'ಕೇವಲಂ' ಎಂಬ ವಾಕ್ಯವು ಹೊರಟಿದೆ. ಬೇರೆ ಗ್ರಂಥಗಳಲ್ಲಿ ಅಸುರ ಮೋಹನಾದಿಗಳನ್ನೂ ಸಹ ಮಾಡಲು ಅನೇಕ ವಿಷಯಗಳನ್ನು ಹೇಳಲಾಗುತ್ತದೆ. ಮೇಲ್ನೋಟಕ್ಕೆ ಕಾಣುವ ವಿಷಯಗಳನ್ನು ಗುಹ್ಯಭಾಷೆ, ದರ್ಶನ ಭಾಷೆಗಳಿಂದ ಹೇಳಲಾಗಿದೆ. ದೈತ್ಯಮೋಹನಕ್ಕೋಸ್ಕರ ಸರಿಯಾದ ಪ್ರಮೇಯವನ್ನೂ ಸಹ ತಿರುಚಿ ಮೇಲ್ನೋಟಕ್ಕೆ ಬೇರೆಯ ಅರ್ಥವು ಬರುವಂತೆ ಹೇಳಲಾಗಿದೆ. ಆದರೆ ಮಹಾಭಾರತದಲ್ಲಿ ಇಂತಹ ಯಾವುದೇ ಪ್ರಕರಣಗಳು ಇರುವುದಿಲ್ಲ.

ಹೀಗೆ ಕೇವಲ ಮಹಾಭಾರತಕ್ಕೆ ಸರ್ವಶಾಸ್ತ್ರೋತ್ತಮತ್ವವು ಪರಮಾಪ್ತಿಮೂಲತ್ವ ಎಂಬ ಒಂದು ಕಾರಣದಿಂದ ಮಾತ್ರವಲ್ಲ ವೇದಸಂವಾದಿಯೂ ಆದ್ದರಿಂದ ಪಂಚಮವೇದ ಎಂಬ ಕಾರಣದಿಂದ ಮಹಾಭಾರತವು ಸರ್ವಶಾಸ್ತ್ರೋತ್ತಮ ಆಗಿದೆ ಎಂಬುದನ್ನು ತಿಳಿಸಲು 'ಪಂಚಮಂ ವೇದಮುತ್ತಮಂ' ಎಂಬ ವಾಕ್ಯವು ಹೊರಟಿದೆ.

## ಮಹಾಭಾರತದ ಉತ್ತಮತ್ವದ ಬಗ್ಗೆ ಟಿಪ್ಪಣಿಗಳಲ್ಲಿ ಏನಿದೆ ?

'ನನ್ವಿತಿಹಾಸಪುರಾಣಃ ಪಂಚಮೋ ವೇದಾನಾಂ ವೇದ' ಇತಿ ಶ್ರುತ್ಯಾ ವೇದಶಬ್ದೇನ ರೂಢ್ಯಾ ಪಂಚರಾತ್ರದೇಗೃಹೀತುಂ ಶಕ್ಯತ್ವೇऽಪಿ ಬ್ರಹ್ಮತರ್ಕಮಹಾವ್ಯಾಕರಣಾದೇಗೃಹೀತಮಶಕ್ಯತ್ವಾತ್ ಕಥನಮೇವ ತತ್‌ಸಂಗ್ರಹ ಇತ್ಯತೋ ಯೋಗಮಂಗೀಕೃತ್ಯ ವ್ಯಾಚಷ್ಟೇ, ವೇದಪದೇನೇತಿ। - ನ್ಯಾಯದೀಪಿಕಾ ಟಿಪ್ಪಣೀ

ಅನೇನ ವೇದಾಧಿಕಾರಿಣಾಂ ತ್ರೈವರ್ಣಿಕಾನಾಂ ಪುಂಸಾಂ ವೇದಾರ್ಥಜ್ಞಾನೋಪಾಯೋ ಭಾರತಮಿತಿ, ಸೂಚಯತಿ, ವೇದಾನಧಿಕಾರಿಣಾಂ ವೇದತುಲ್ಯತ್ವಾಚ್ಚ ತನ್ನಿರ್ಮಾಣಂ ಯುಕ್ತಮಿತ್ಯಾ-ಶಯೇನಾಹ । ವೇದೇತಿ । ತದನೇನ ಪರಮಾಪ್ತಿಮೂಲತ್ವಾನ್ಮಹಾಭಾರತಸ್ಯ ಪ್ರಾಮಾಣ್ಯಂ । ವೇದಾದಿಸಂವಾದೇನಾಪಿ ಭಾರತಸ್ಯ ಪ್ರಾಮಾಣ್ಯನಿಶ್ಚಯ ಇತ್ಯಾಶಯೇನಾಹ । ಸರ್ವೇತಿ - ಪ್ರಮೇಯದೀಪಿಕಾ.

ವೇದತುಲ್ಯತ್ವಾಚ್ಚೇತಿ । ವೇದಸ್ಥಾನೀಯತ್ವಾದಿತ್ಯರ್ಥಃ, ನ ತು ವೇದಸಮತ್ವಾದಿತ್ಯರ್ಥಃ, ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಂ । ವೇದೋತ್ತಮಂ ತಚ್ಚ ವಿಧಾತೃಶಂಕರಪ್ರಧಾನಕೈಸ್ತನ್ನುಖತಃ ಸುರೈಃ ಶ್ರುತಂ ॥ ಇತಿ ಮಹಾಭಾರತತಾತ್ಪರ್ಯನಿರ್ಣಯ-ವಿರೋಧಾದಿತಿ ಸಂಪ್ರದಾಯವಿದಃ। - (ಶ್ರೀನಿವಾಸತೀರ್ಥೀಯ).

ತಥಾಚ 'ವೇದಾದಪಿ ಪರಂ ಚಕ್ರೇ' - ಇತ್ಯಾದಿ ಭಾಷ್ಯಂ, 'ಶಾಸ್ತ್ರೇಷು ಭಾರತಂ ಸಾರಂ' - ಇತ್ಯಾದಿ ತತ್ತಾತ್ಪರ್ಯಂ ಚ ಭಾರತಸ್ಯ ಪ್ರಾಮಾಣ್ಯೋತ್ತಮತ್ವಯೋಃ ಪ್ರತಿಪಾದನಾಯ ಪ್ರವೃತ್ತ-





ಮಿತ್ಯವಿವಾದಂ । ಪ್ರಾಮಾಣ್ಯಂ ಚೋಭಯತ್ರಾಪಿ ಪರಮಾಪ್ತಿಮೂಲತ್ವಶ್ರುತಿಸಂವಾದಿತ್ವಾದಿನಾ ನಿರೂಪ್ಯ, ಭಾರತಸ್ಯ ಸರ್ವಶಾಸ್ತ್ರೋತ್ತಮತ್ವಂ ವರ್ಣಿತಂ । ಪ್ರಕರಣಾನುರೋಧೇನಾತ್ರ ಸರ್ವ-ಶಾಸ್ತ್ರೋತ್ತಮತ್ವಂ ಪೌರುಷೇಯಸರ್ವಶಾಸ್ತ್ರೋತ್ತಮತ್ವ ಏವ ಪರ್ಯವಸ್ಯತಿ ।

ಅನುವಾದ – ನ್ಯಾಯದೀಪಿಕೆಯ ಟಿಪ್ಪಣಿಯಲ್ಲಿ ಈ ವಾಕ್ಯಕ್ಕೆ ಅವತಾರಿಕೆ ಹೀಗೆ ನೀಡಿದ್ದಾರೆ–

ಪ್ರಶ್ನೆ – 'ಇತಿಹಾಸಃ ಪುರಾಣಃ ಪಂಚಮೋ ವೇದಾನಾಂ ವೇದಃ' ಇತಿಹಾಸ ಹಾಗೂ ಪುರಾಣವು ಪಂಚಮ ವೇದ ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಇಲ್ಲಿ ವೇದಶಬ್ದದಿಂದ ಪಂಚರಾತ್ರವನ್ನೂ ಸಹ ಗ್ರಹಣ ಮಾಡಲು ಬರುತ್ತದೆ. ವೇದ ಶಬ್ದವು ಪಂಚರಾತ್ರದಲ್ಲಿ ರೂಢಿಯಿಂದ ಇರುವುದು ಇದಕ್ಕೆ ಕಾರಣ. ಆದ್ದರಿಂದ ಬ್ರಹ್ಮತರ್ಕ, ಮಹಾವ್ಯಾಕರಣ ಮುಂತಾದವುಗಳನ್ನು ಇಲ್ಲಿ ವೇದ ಶಬ್ದದಿಂದ ಗ್ರಹಣ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವೇದ ಶಬ್ದವು ಸರ್ವಶಾಸ್ತ್ರಗಳನ್ನು ಗ್ರಹಣ ಮಾಡಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಉತ್ತರವಾಗಿ ವೇದ ...... ಎಂಬ ಟೀಕಾ ಗ್ರಂಥವು ಹೊರಟಿದೆ. ರೂಢಿಯಿಂದ ಪಂಚರಾತ್ರಾದಿಗಳನ್ನು ಗ್ರಹಣ ಮಾಡಲು ಬಂದರೂ ಸಹ ಪ್ರಕೃತದಲ್ಲಿ ಲೌಕಿಕವಾದ ಅರ್ಥವನ್ನು ಸ್ವೀಕಾರ ಮಾಡಲಾಗಿದೆ. 'ವೇದಯಂತಿ ಇತಿ' ಎಂಬ ವೈದಿಕ ಅರ್ಥವನ್ನು ತೆಗೆದುಕೊಂಡಾಗ ಕೇವಲ ಪಂಚರಾತ್ರ ಮಾತ್ರವಲ್ಲದೇ ಸರ್ವಶಾಸ್ತ್ರಗಳೂ ಸಹ ವೇದಶಬ್ದದಿಂದ ವಾಚ್ಯವಾಗಿವೆ.

ಪ್ರಮೇಯದೀಪಿಕಾದಲ್ಲಿ ವೇದಾದಪಿ ಎಂಬ ಭಾಷ್ಯವಾಕ್ಯಕ್ಕೆ ಅವತಾರಿಕೆಯನ್ನು ಹೀಗೆ ನೀಡಿದ್ದಾರೆ. ವೇದಾಧಿಕಾರಿಗಳು ತ್ರೈವರ್ಣಿಕರು. ಇಂತಹ ಪುರುಷರು ವೇದಾರ್ಥದ ಜ್ಞಾನವನ್ನು ತಿಳಿಯಲು ಮಹಾಭಾರತವು ಉಪಾಯವಾಗಿದೆ ಎಂದು ಸೂಚನೆ ಮಾಡಲಾಗಿದೆ. ಇವರಿಗೆ ಮಾತ್ರವಲ್ಲದೆ ವೇದಾನಧಿಕಾರಿಗಳಿಗೂ ಸಹ ಪರಮ ಪ್ರಮೇಯದ ಜ್ಞಾನಕ್ಕೋಸ್ಕರ ವೇದ ಸಮಾನವಾದ ಗ್ರಂಥವನ್ನು ನಿರ್ಮಾಣ ಮಾಡಿರುವುದು ಯುಕ್ತವಾಗಿದೆ ಎಂಬ ಅಭಿಪ್ರಾಯದಿಂದ 'ವೇದಾದಪಿ' ಎಂಬ ವಾಕ್ಯವು ಪ್ರವೃತ್ತವಾಗಿದೆ. ಇದರಿಂದ ಮಹಾಭಾರತಕ್ಕೆ ಪರಮಾಪ್ತಿಮೂಲಕತ್ವೇನ ಪ್ರಾಮಾಣ್ಯವನ್ನು ನಿಶ್ಚಯ ಮಾಡಬೇಕು. ವೇದದ ಸಂವಾದವು ಇರುವ ಕಾರಣದಿಂದಲೂ ಕೂಡ ಮಹಾಭಾರತದ ಪ್ರಾಮಾಣ್ಯವು ನಿಶ್ಚಯವಾಗುತ್ತದೆ ಎಂಬ ಅಭಿಪ್ರಾಯದಿಂದ ಸರ್ವ ಎಂಬ ಭಾಷ್ಯವಾಕ್ಯವು ಪ್ರವೃತ್ತವಾಗಿದೆ.

ಪ್ರಮೇಯದೀಪಿಕೆಯ ಈ ಭಾಗದಲ್ಲಿ 'ವೇದತುಲ್ಯತ್ವಾಚ್ಚ' ಎಂಬ ವಾಕ್ಯಕ್ಕೆ ಶ್ರೀನಿವಾಸತೀರ್ಥರು ನೀಡಿದ ವಿವರಣೆ ಹೀಗಿದೆ – ವೇದಸ್ಥಾನೀಯ ಎಂಬುದು ವೇದತುಲ್ಯ ಶಬ್ದದ ಅರ್ಥ ಹೊರತು ವೇದಕ್ಕೆ ಸಮ ಎಂದರ್ಥವಲ್ಲ. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಬಂದ ವಾಕ್ಯವು ಈ ಅಭಿಪ್ರಾಯವನ್ನು ಸಮರ್ಥಿಸುತ್ತಿದೆ.

'ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಂ।

ವೇದೋತ್ತಮಂ ತಚ್ಚ ವಿಧಾತೃಶಂಕರಪ್ರಧಾನಕೈಸ್ತನ್ಮುಖತಃ ಸುರೈಃ ಶ್ರುತಂ।'

ಎಲ್ಲಾ ಶಾಸ್ತ್ರಗಳ ಅರ್ಥವನ್ನು ನಿರ್ಣಯ ಮಾಡುವ ಮಹಾಭಾರತ ಎಂಬ ಗ್ರಂಥವನ್ನು ವೇದವ್ಯಾಸರು ನಿರ್ಮಾಣ ಮಾಡಿದರು. ಇದು ವೇದಕ್ಕಿಂತಲೂ ಉತ್ತಮವಾದದ್ದು. ಇಂತಹ ಮಹಾಭಾರತವನ್ನು ಬ್ರಹ್ಮ, ರುದ್ರ , ಮೊದಲಾದ ಪ್ರಧಾನ ದೇವತೆಗಳು ಶ್ರವಣ ಮಾಡಿದರು.

ಹೀಗೆ ತಾತ್ಪರ್ಯನಿರ್ಣಯವು ಹೇಳುವ ಕಾರಣ 'ವೇದತುಲ್ಯ' ಎಂಬ ಶಬ್ದಕ್ಕೆ 'ವೇದಸ್ಥಾನೀಯ' ಎಂಬರ್ಥವನ್ನು ಸಾಂಪ್ರದಾಯಿಕವಾಗಿ ಹೇಳಬೇಕು ಎಂದು ಇವರ ಅಭಿಪ್ರಾಯ.

ಹೀಗೆ 'ವೇದಾದಪಿ ಪರಂ ಚಕ್ರೇ' ಎಂಬ ಭಾಷ್ಯವಾಕ್ಯ ಹಾಗೂ 'ಭಾರತಂ ಸರ್ವಶಾಸ್ತ್ರೇಷು ಸಾರಂ' ಮುಂತಾದ ಗೀತಾತಾತ್ಪರ್ಯದ ವಾಕ್ಯಗಳು ಭಾರತದ ಪ್ರಾಮಾಣ್ಯ ಹಾಗೂ ಉತ್ತಮತ್ವಗಳನ್ನು ಪ್ರತಿಪಾದನೆ ಮಾಡಲು ಹೊರಟವೆ ಎನ್ನುವ ವಿಷಯದಲ್ಲಿ ಯಾವುದೇ ವಿವಾದವಿಲ್ಲ. ಈ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯ ಎರಡರಲ್ಲೂ ಸಹ ಪರಮಾಪ್ತಿಮೂಲತ್ವ ಹಾಗೂ ಶ್ರುತಿಸಂವಾದದಿಂದ ಪ್ರಾಮಾಣ್ಯವನ್ನು ನಿರೂಪಣೆ ಮಾಡಿ ಮಹಾಭಾರತವು ಸರ್ವಶಾಸ್ತ್ರಗಳಿಗೆ ಉತ್ತಮವಾಗಿದೆ ಎಂಬ ಅಂಶವನ್ನು ವರ್ಣನೆ ಮಾಡಲಾಗಿದೆ. ಈ ಪ್ರಕರಣವನ್ನು ವಿಚಾರ ಮಾಡಿದಾಗ ಈ ಸರ್ವಶಾಸ್ತ್ರೋತ್ತಮತ್ವವು ಪೌರುಷೇಯ ಸರ್ವಶಾಸ್ತ್ರಗಳಿಗಿಂತಲೂ ಸಹ ಉತ್ತಮ ಎಂಬ ಅಭಿಪ್ರಾಯದಿಂದ ಹೊರಟಿದೆ ಎಂಬ ವಿಷಯವೇ ಸ್ಪಷ್ಟವಾಗುತ್ತದೆ ಹೊರತು ಅಪೌರುಷೇಯವಾದ ವೇದಕ್ಕಿಂತಲೂ ಸಹ ಉತ್ತಮ ಎಂಬ ಅಂಶವಲ್ಲ.

## ಮಹಾಭಾರತ ವೇದಕ್ಕಿಂತ ಶ್ರೇಷ್ಠ ಅಲ್ಲವೆ ಅಲ್ಲ

ತಥಾಹಿ; ಆಪ್ತಿಮೂಲತ್ವ - ಶ್ರುತಿಸಂವಾದಿತ್ವಾದಿನಾ ಪ್ರಾಮಾಣ್ಯೋಕ್ತಿಪರೇಽಸ್ಮಿನ್ ಪ್ರಕರಣೇ ತಥಾವಿಧಪ್ರಾಮಾಣ್ಯವತ್ತ್ವೇನ ಸಂಭಾವಿತಾನ್ಯೇವ ಶಾಸ್ತ್ರಾಣ್ಯುಪಾದೇಯಾನಿ ನಾಪೌರುಷೇಯ-ವೇದೋಽತ್ರ ಪ್ರವೇಶಮರ್ಹತಿ, ಪೌರುಷೇಯಶಾಸ್ತ್ರಾಣಾಂ ತಾರತಮ್ಯಮೇವ ಪ್ರಾಕರಣಿಕಮಿತಿ ಭಾರತಸ್ಯಾಪೌರುಷೇಯವೇದಾದುತ್ತಮತ್ವಮುದಾಹೃತಭಾಷ್ಯತಾತ್ಪರ್ಯಾಭ್ಯಾಂ ನ ಸಿಧ್ಯತಿ।

ತರ್ಹಿ 'ವೇದಾದಪಿ ಪರಮ್' ಇತ್ಯಾದಿಸ್ಪಷ್ಟೋಕ್ತೇಃ ಕಾ ಗತಿರಿತಿ ಚೇತ್, ಶೃಣು; ಸ್ತ್ರೀಶೂದ್ರ-ಬ್ರಹ್ಮಬಂಧ್ವಾದಿಸರ್ವಾಧಿಕಾರಿಕಂ ಭಾರತಂ, ವೇದಸ್ತು ತ್ರೈವರ್ಣಿಕಪುರುಷಮಾತ್ರಾಧಿಕಾರಿಕ ಇತ್ಯಧಿಕಾರಿಬಾಹುಲ್ಯಾಭಿಪ್ರಾಯೇಣ, ತದನುಕ್ತಕೇವಲೇಶ್ವರಜ್ಞಾನದೃಷ್ಟಾರ್ಥಯುಕ್ತತ್ವಾಶಯೇನ ಚ ಪರತ್ವೋಕ್ತಿಃ ಸಂಗಚ್ಛತ ಏವೇತಿ। ಭಾರತಸ್ಯ ವೇದಾನುಕ್ತಾರ್ಥಕತ್ವೇ ತತ ಏವ ಮಹತ್ವಸಂಭವೇನ ಸಿದ್ಧಂ





ನಃ ಸಮೀಹಿತಮಿತಿ ನ ಸಂತೋಷ್ಟವ್ಯಂ। ವೇದಾನುಕ್ತಾರ್ಥಯುಕ್ತತ್ವಮಪಿ ನ ಯಥಾಶ್ರುತಂ ವರ್ಣಿತುಂ ಶಕ್ಯಂ 'ಅನಂತಾ ವೈ ವೇದಾಃ' ಇತ್ಯಾದಿನಾ ವೇದಾನಾಮಾನಂತ್ಯಂ ಪ್ರಮಿತಂ; ಭಾರತಂ ತು ಪರಿಮಿತಂ। ತಥಾವಿಧೇ ತಸ್ಮಿನ್ ಅಪರಿಮಿತವೇದರಾಶ್ಯನುಕ್ತಸ್ಯೋಕ್ತಿಃ ಕಥಂ ಸಂಭಾವ್ಯೇತ ? ತಥಾತ್ವೇ ವಾ ವೇದಾನಾಮಾನಂತ್ಯಂ ಕಥಂ ಯುಜ್ಯೇತ ? ಇತಿ ಯಥಾಶ್ರುತಾರ್ಥಸ್ಯ ಬಾಧಿತತ್ವಾತ್ ತದನುಕ್ತ ಕೇವಲೇಶ್ವರಜ್ಞಾನದೃಷ್ಟಾರ್ಥಯುಕ್ತಾಮಿತ್ಯಸ್ಯ ಚತುರ್ಮುಖೋಪದಿಷ್ಟಚತುರ್ವೇದಾನುಕ್ತಕೇವಲೇಶ್ವರ-ಬುದ್ಧಿಸ್ಥಮೂಲವೇದೋಕ್ತಾರ್ಥಯುಕ್ತಾಮಿತ್ಯರ್ಥೋ ವರ್ಣನೀಯಃ। ಅಥವಾ ವೇದೇಽವ್ಯಕ್ತಂ ಕಂಠತೋಽನುಕ್ತಮರ್ಥಾತ್ ಸೂಚಿತಮಪ್ಯರ್ಥಂ ದೃಷ್ಟಾಂತಕಥನಾದಿನಾ ಸ್ಪಷ್ಟಂ ವಿವೃಣೋತಿ ಭಾರತ ಇತಿ ತದನುಕ್ತಾರ್ಥಯುಕ್ತತ್ವಂ ಭಾರತಸ್ಯ ಬೋಧ್ಯಂ। ಅತೋ ನೇದಮಪೌರುಷೇಯವೇದಾದ್ಭಾರತಸ್ಯ ಸ್ವರೂಪತೋಽರ್ಥತೋ ವೋತ್ತಮತ್ವಾಪಾದಕಮಿತ್ಯಕಿಂಚಿತ್ಕರಮೇವ।

ಅನುವಾದ – ಆಪ್ತಿಮೂಲತ್ವ, ಶ್ರುತಿಸಂವಾದಿತ್ವ ಮುಂತಾದ ಕಾರಣಗಳಿಂದ ಪ್ರಾಮಾಣ್ಯವನ್ನು ಈ ಪ್ರಕರಣವು ನಿರೂಪಣೆ ಮಾಡುತ್ತಿದೆ. ಈ ಪ್ರಕರಣದಲ್ಲಿ 'ಶಾಸ್ತ್ರ' ಎಂಬ ಶಬ್ದದಿಂದ ಇಂತಹ ಪ್ರಾಮಾಣ್ಯವು ಯಾವ ಗ್ರಂಥಗಳಿಗೆ ಸಂಭಾವಿತವೋ ಅಂತಹ ಗ್ರಂಥವನ್ನು ಮಾತ್ರ ಗ್ರಹಣೆ ಮಾಡುವುದು ಯೋಗ್ಯ ಹೊರತು ಅಪೌರುಷೇಯವಾದ ವೇದವನ್ನು ಈ ಪ್ರಕರಣದಲ್ಲಿ ಸೇರಿಸುವುದು ಸಮುಚಿತವಲ್ಲ. ಪ್ರಕರಣ ಪ್ರಾಪ್ತವಾದದ್ದೂ ಸಹ ಪೌರುಷೇಯಶಾಸ್ತ್ರಗಳ ತಾರತಮ್ಯವೇ ಆಗಿದೆ. ಆದ್ದರಿಂದ ಭಾರತಕ್ಕೆ ಅಪೌರುಷೇಯವಾದ ವೇದಕ್ಕಿಂತಲೂ ಸಹ ಉತ್ತಮತ್ವ, ಹಿಂದೆ ಹೇಳಿದ ಭಾಷ್ಯ ಹಾಗೂ ತಾತ್ಪರ್ಯವಾಕ್ಯಗಳಿಂದ ಸಿದ್ಧವಾಗುವುದಿಲ್ಲ.

ಪ್ರಶ್ನೆ – ಹಾಗಾದರೆ 'ವೇದಾದಪಿ ಪರಂ' ಎಂಬ ಭಾಷ್ಯವಾಕ್ಯದಲ್ಲಿ ಸ್ಪಷ್ಟವಾಗಿ ವೇದದ ಉತ್ತಮತ್ವವು ವರ್ಣಿತವಾಗಿದೆಯಲ್ಲವೇ? ಈ ವಾಕ್ಯಕ್ಕೆ ಗತಿ ಏನು?

ಉತ್ತರ – ಮಹಾಭಾರತವು ಸರ್ವಾಧಿಕಾರಿಕವಾಗಿದೆ. ಸ್ತ್ರೀಯರು, ಶೂದ್ರರು, ಬ್ರಹ್ಮಬಂಧುಗಳು ಹೀಗೆ ಸರ್ವರೂ ಮಹಾಭಾರತದ ಅಧಿಕಾರಿಗಳು. ಆದರೆ ವೇದವು ಕೇವಲ ತ್ರೈವರ್ಣಿಕರಾದ ಪುರುಷರಿಗೆ ಮಾತ್ರ ಸೀಮಿತವಾಗಿದೆ. ಇವುಗಳಲ್ಲಿ ಅಧಿಕಾರಿಗಳು ಯಾವ ಗ್ರಂಥಕ್ಕೆ ಹೆಚ್ಚು, ಯಾವ ಗ್ರಂಥಕ್ಕೆ ಕಡಿಮೆ ಎಂದು ವಿಚಾರ ಮಾಡಿದಾಗ ಅಧಿಕಾರಿಬಾಹುಲ್ಯವು ಮಹಾಭಾರತಕ್ಕೆ ಇದೆ. ಹಾಗೂ ವೇದದಲ್ಲಿ ಹೇಳದೇ ಇರುವ ಕೇವಲ ಈಶ್ವರನ ಜ್ಞಾನದಿಂದ ಮಾತ್ರ ಕಂಡುಕೊಂಡ ಅನೇಕ ಪ್ರಮೇಯಗಳೂ ಸಹ ಮಹಾಭಾರತದಲ್ಲಿ ಇದೆ. ಈ ಕಾರಣಗಳಿಂದ ಮಹಾಭಾರತವನ್ನು ವೇದಕ್ಕಿಂತಲೂ ಸಹ ಉತ್ತಮ ಎಂಬ ವಾಕ್ಯವು ಪ್ರವೃತ್ತವಾಗಿದೆ.

ಭಾರತವು ವೇದದಲ್ಲಿ ಹೇಳಿದ ಹಾಗೂ ವೇದದಲ್ಲಿ ಹೇಳದೇ ಇರುವ ಎರಡೂ ಅರ್ಥಗಳನ್ನು ಹೇಳುವುದರಿಂದ ಈ ಕಾರಣದಿಂದಲೇ ಮಹತ್ವವು ಬರುತ್ತಿದೆ. ಆದ್ದರಿಂದ ನಮ್ಮ ಇಷ್ಟಾರ್ಥವು ಸಿದ್ಧವಾಯಿತು





ಎಂದು ಪೂರ್ವಪಕ್ಷಿಗಳು ಸಂತೋಷ ಪಡುವ ಅಗತ್ಯವಿಲ್ಲ. ಏಕೆಂದರೆ ವೇದದಲ್ಲಿ ಹೇಳದೇ ಇರುವ ಅರ್ಥವು ಮಹಾಭಾರತದಲ್ಲಿ ಇದೆ ಎಂಬ ವಾಕ್ಯವನ್ನೂ ಸಹ ಯಥಾಸ್ಥಿತವಾಗಿ ವರ್ಣನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ವೇದಗಳು ಅನಂತ. ಶ್ರುತಿಯೇ 'ಅನಂತಾ ವೈ ವೇದಾಃ' ಎಂಬುದಾಗಿ ವೇದಗಳ ಅನಂತ್ಯವನ್ನು ಪ್ರಮಾಣೀಕರಿಸಿದೆ. ಭಾರತವು ಪರಿಮಿತವಾಗಿದೆ. ಪರಿಮಿತವಾದ ಭಾರತದಲ್ಲಿ ಅಪರಿಮಿತವಾದ ವೇದರಾಶಿಯಲ್ಲಿ ಹೇಳದೇ ಇರುವ ಅರ್ಥಗಳೆಲ್ಲವೂ ಸಹ ಒಟ್ಟಿಗೆ ಇರಲು ಹೇಗೆ ತಾನೇ ಸಾಧ್ಯ ? ಹಾಗೆ ಇದ್ದ ಪಕ್ಷದಲ್ಲಿ ವೇದಗಳ ಅನಂತ್ಯವನ್ನು ಹೇಗೆ ತಾನೆ ಕೂಡಿಸಲು ಸಾಧ್ಯ ? ಹೀಗೆ ಯಥಾಶ್ರುತವಾದ ಅರ್ಥವು ಈ ಪ್ರಕರಣದಲ್ಲಿ ಬಾಧಿತವಾದ್ದರಿಂದ ಈ ಶಬ್ದಕ್ಕೆ ಬೇರೆ ರೀತಿಯಾಗಿ ಅರ್ಥವನ್ನು ವರ್ಣನೆ ಮಾಡಬೇಕು. ಭಾಷ್ಯದ ತದನುಕ್ತ ಶಬ್ದಕ್ಕೆ 'ಕೇವಲ ಈಶ್ವರಜ್ಞಾನದೃಷ್ಟಾರ್ಥ ಯುಕ್ತಾಂ' ಎಂದರ್ಥ. ಈ ಶಬ್ದದ ಅಭಿಪ್ರಾಯ ಹೀಗೆ – ಚತುರ್ಮುಖಬ್ರಹ್ಮದೇವರು ಉಪದೇಶ ಮಾಡಿದ ನಾಲ್ಕು ವೇದದಲ್ಲಿ ಇಲ್ಲದಿರುವ ಕೇವಲ ಈಶ್ವರನ ಬುದ್ಧಿಯಲ್ಲಿ ಮಾತ್ರ ಇರುವ ಮೂಲವೇದದಲ್ಲಿರುವ ಅರ್ಥಗಳು ಈ ಮಹಾಭಾರತದಲ್ಲಿ ತುಂಬಿದೆ ಎಂಬುದಾಗಿ.

ಅಥವಾ ಇನ್ನೊಂದು ರೀತಿಯ ಅರ್ಥವನ್ನು ಹೀಗೆ ಹೇಳಬಹುದು – ವೇದದಲ್ಲಿ ಅಸ್ಪಷ್ಟವಾಗಿ ಹೇಳಿದ ಅನೇಕ ಪ್ರಮೇಯಗಳಿವೆ. ಕಂಠತಃ ಅನುಕ್ತವಾದ ಅರ್ಥಾತ್ ಸೂಚನೆ ಮಾಡಿದ ಅರ್ಥಗಳನ್ನೂ ಸಹ ಮಹಾಭಾರತವು ದೃಷ್ಟಾಂತವನ್ನು ನೀಡುವ ಮೂಲಕ ಸ್ಪಷ್ಟಪಡಿಸಿದೆ. ಈ ದೃಷ್ಟಿಯಿಂದ ವೇದದಲ್ಲಿ ಹೇಳದ ಅರ್ಥವು ಭಾರತದಲ್ಲಿ ತುಂಬಿದೆ ಎಂಬ ಅಂಶವನ್ನು ಮಹಾಭಾರತಕ್ಕೆ ಯೋಜನೆ ಮಾಡಬಹುದು. ಆದ್ದರಿಂದ ಅಪೌರುಷೇಯವಾದ ವೇದಕ್ಕಿಂತಲೂ ಕೂಡ ಮಹಾಭಾರತವು ಸ್ವರೂಪತಃ ಆಗಲಿ ಅರ್ಥತಃ ಆಗಲಿ ಉತ್ತಮತ್ವವನ್ನು ಪ್ರತಿಪಾದನೆ ಮಾಡುವ ವಿಷಯದಲ್ಲಿ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯದ ವಾಕ್ಯಗಳು ಸಮರ್ಥವಾಗುವುದಿಲ್ಲ.

## 'ವೇದಸ್ಥಾನೀಯ' ಎಂದು ವ್ಯಾಖ್ಯಾನಿಸಬೇಕು

ಕಿಂಚ ಭಾಷ್ಯೋದಾಹೃತಪ್ರಮಾಣೇಷ್ವೇವ ಕ್ವಚಿದ್ವೇದಾದಪ್ಯುತ್ತಮಮಿತಿ, ಕ್ವಚಿತ್ ಪಂಚಮಂ ವೇದಮುತ್ತಮಮಿತ್ಯಾದಿವಿರುದ್ಧೋಕ್ತಿರಸ್ತೀತಿ ಯಥಾಶ್ರುತಾರ್ಥೋ ವಿವಕ್ಷಿತುಮಶಕ್ಯ ಏವ। ಅಗತ್ಯಾ ಯಥಾಽವಿರೋಧಸ್ತಥಾಽರ್ಥೋ ವಾಚ್ಯ ಇತ್ಯಸ್ಮದುಕ್ತರೀತಿರಾಶ್ರಯಣೀಯೈವ।

ಅತ್ರೈವ ಪ್ರಕರಣೇ ಪ್ರಮೇಯದೀಪಿಕಾಯಾಂ 'ವೇದತುಲ್ಯತ್ವಾಚ್ಚ' - ಇತ್ಯುಕ್ತಂ। ತಸ್ಯ ಚ ಶ್ರೀನಿವಾಸತೀರ್ಥೀಯೇ ವೇದಸ್ಥಾನೀಯತ್ವಾದಿತ್ಯರ್ಥಮುಕ್ತ್ವಾ, ವೇದಸಮತ್ವಾದಿತಿ - ಯಥಾಶ್ರುತಾರ್ಥೇ ವೇದೋತ್ತಮಮಿತಿ ತಾತ್ಪರ್ಯನಿರ್ಣಯವಿರೋಧ ಉದ್ಭಾವಿತಃ। ಅನೇನ ವೇದೋತ್ತಮಮಿತ್ಯಸ್ಯ

ವೇದಾದುತ್ತಮಮಿತಿ ನಾರ್ಥಃ; ವೇದಸ್ಥಾನೀಯಂ ವೇದತ್ವೇನ ಗೃಹೀತಂ ಇತ್ಯಾದ್ಯರ್ಥ ಏವ ಸಾಂಪ್ರದಾಯಿಕ ಇತಿ ಸಿಧ್ಯತೀತಿ ವೇದಮಹತ್ವಸ್ಯ ನ ಕ್ವಾಪಿ ಹಾನಿಃ ॥

ಅನುವಾದ - ಮತ್ತೇನೆಂದರೆ ಗೀತಾಭಾಷ್ಯದಲ್ಲಿ ಉದಾಹರಣೆ ಮಾಡಿದ ಪ್ರಮಾಣಗಳಲ್ಲೇ ಮೇಲ್ನೋಟಕ್ಕೆ ವಿರೋಧಾರ್ಥವು ಕಂಡುಬರುತ್ತದೆ. ಕೆಲವು ಕಡೆ 'ವೇದಾದಪಿ ಉತ್ತಮಂ' 'ವೇದಕ್ಕಿಂತಲೂ ಸಹ ಉತ್ತಮ' ಎಂದು ಹೇಳಿದ್ದಾರೆ. ಮತ್ತೊಂದು ಕಡೆ 'ಪಂಚಮಂ ವೇದಂ' ಎಂಬುದಾಗಿ ಪಂಚಮ ವೇದ ಎಂಬುದಾಗಿ ವೇದ ಸಮಾನ ಕಕ್ಷೆಯಲ್ಲಿ ಪಠನೆ ಮಾಡಿದ್ದಾರೆ. ಇವುಗಳಿಂದ ಯಥಾಶ್ರುತವಾದ ಅರ್ಥವನ್ನು ಈ ಪ್ರಕರಣದಲ್ಲಿ ವಿವಕ್ಷೆ ಮಾಡಬಾರದು. ಅಂತತಃ ಈ ವಾಕ್ಯಗಳಿಗೆ ವಿರೋಧ ಹೇಗೆ ಬರುವುದಿಲ್ಲವೋ, ಅದರಂತೆ ಅರ್ಥವನ್ನು ಯೋಜನೆ ಮಾಡಬೇಕು. ಆಗ ನಾವು ಹೇಳಿದ ಅರ್ಥವನ್ನೇ ಆಶ್ರಯ ಮಾಡಬೇಕು.

ಇದೇ ಪ್ರಕರಣದಲ್ಲೇ ಪ್ರಮೇಯ ದೀಪಿಕೆಯು 'ವೇದತುಲ್ಯತ್ವಾಚ್ಚ' ಎಂಬ ವಾಕ್ಯವನ್ನು ಪ್ರಯೋಗ ಮಾಡಿದೆ. ಇದಕ್ಕೆ ಶ್ರೀನಿವಾಸತೀರ್ಥರು ವೇದಸ್ಥಾನೀಯ ಎಂಬರ್ಥವನ್ನು ಹೇಳಿ ವೇದಸಮ ಎಂಬ ಅರ್ಥವನ್ನು ತೆಗೆದುಕೊಂಡರೆ ವೇದೋತ್ತಮಂ ಎಂಬ ತಾತ್ಪರ್ಯನಿರ್ಣಯದ ವಿರೋಧವು ಬರುತ್ತದೆ ಎಂಬ ಅಂಶವನ್ನು ಉಲ್ಲೇಖ ಮಾಡಿದ್ದಾರೆ. ಇದರಿಂದ ವೇದೋತ್ತಮ ಶಬ್ದಕ್ಕೆ ವೇದಕ್ಕಿಂತಲೂ ಸಹ ಉತ್ತಮ ಎಂಬರ್ಥವನ್ನು ಪ್ರಕೃತದಲ್ಲಿ ಗ್ರಹಣ ಮಾಡಬಾರದು. ಮತ್ತೇನೆಂದರೆ ಸಾಂಪ್ರದಾಯಿಕವಾಗಿ ವೇದದ ಸ್ಥಾನದಲ್ಲಿದ್ದು ವೇದಕ್ಕೆ ಸಮವಾಗಿ ಗ್ರಹೀತವಾದ ಎಂಬರ್ಥವನ್ನೇ ಇಲ್ಲಿ ಸ್ವೀಕಾರ ಮಾಡಬೇಕು. ಇದರಿಂದ ವೇದದ ಮಹತ್ವಕ್ಕೆ ಯಾವುದೇ ಕಾರಣದಿಂದಲೂ ಸಹ ಹಾನಿ ಬರುವುದಿಲ್ಲ.

## ತಕ್ಕಡಿ ಪರೀಕ್ಷೆಯ ರಹಸ್ಯವೇನು ?

ಕಿಂಚ ನ್ಯಾಯದೀಪಿಕಾಯಾಂ ಸರ್ವವೇದಾಶ್ಚೇತ್ಯತ್ರ ವೇದಯಂತೀತಿ ವೇದಾ ಇತಿ ವೇದಸ್ಯ ಯೌಗಿಕಾರ್ಥೋಕ್ತ್ಯಾ ರೂಢ್ಯರ್ಥೋ ವೇದೋ ನಾತ್ರ ಗೃಹೀತುಮುಚಿತ ಇತಿ ಸೂಚನಾತ್ ತುಲಾರೋಪಣಮಪಿ ಭಾರತತದಿತರಪೌರುಷೇಯಶಾಸ್ತ್ರಯೋರೇವೇತಿ ಪೌರುಷೇಯ ಶಾಸ್ತ್ರೋತ್ತಮತ್ವಮೇವ ಪರೀಕ್ಷಯಾ ಸಿದ್ಧಮಿತಿ ಜ್ಞಾಯತೇ। ಅಸ್ಮಿನ್ನೇವ ಪ್ರಕರಣೇ ಸ್ಯಾದೇತದನುಮಾನಮಿತಿ ಪ್ರಮೇಯದೀಪಿಕಾವಾಕ್ಯಾಭಿಮತಾನುಮಾನೇ ಸಜಾತೀಯೋತ್ತಮತ್ವಮೇವ ಸಾಧ್ಯತಯಾ ನಿರ್ದಿಷ್ಟಂ ಟಿಪ್ಪಣೀಷು । ಸಾಜಾತ್ಯಂ ಚ ಪೌರುಷೇಯತ್ವೇನೈವ । ಏವಂ ಚ ಭಾರತಂ ನಿರ್ಣೇಯಸರ್ವ-ಪೌರುಷೇಯಶಾಸ್ತ್ರೋತ್ತಮಂ; ನಾಪೌರುಷೇಯತ್ವೇನ ವಿಜಾತೀಯವೇದೋತ್ತಮಿತಿ ಸಿಧ್ಯತಿ। ಉಕ್ತಂ ಚ 'ಭಾರತಂ ಸಜಾತೀಯೋತ್ತಮಂ' ಇತ್ಯಾದಿ - (ಪ್ರಮೇಯದಿಪೀಕಾ ಉಮ್ಮರ್ಜೀಯಾ)

ಭಾರತಶಬ್ದಃ ಸ್ವಸಜಾತೀಯೋತ್ತಮಾಭಿಧಾಯಕಃ .......... ಭಾರತಂ ಸ್ವಸಜಾತೀಯ-ಸರ್ವಶಾಸ್ತ್ರೋತ್ತಮಮ್ - (ಪ್ರಮೇಯದೀಪಿಕಾಭಾವರತ್ನಕೋಷಃ)

ಅನುವಾದ - ನ್ಯಾಯದೀಪಿಕೆಯಲ್ಲಿ ಸರ್ವವೇದಾಶ್ಚ ಎಂಬ ಶಬ್ದಕ್ಕೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ವೇದ ಶಬ್ದಕ್ಕೆ ಲೌಕಿಕ ಅರ್ಥವನ್ನು ನೀಡಲಾಗಿದೆ. 'ವೇದಯಂತಿ ಇತಿ ವೇದಾಃ' ಎಂಬುದಾಗಿ. ಇದರಿಂದ ವೇದ ಶಬ್ದಕ್ಕೆ ರೂಢಿಯಲ್ಲಿರುವ ಅರ್ಥವನ್ನು ಗ್ರಹಣೆ ಮಾಡುವುದು ಯೋಗ್ಯವಲ್ಲ ಎಂದು ಸೂಚನೆ ಮಾಡಲಾಗಿದೆ. ಭಾರತ ಹಾಗೂ ವೇದಗಳ ತುಲಾರೋಪಣವೂ ಸಹ ಈ ಪ್ರಕರಣವನ್ನು ಈ ರೀತಿಯಾಗಿ ತಿಳಿಸಿಕೊಡುತ್ತಿದೆ. ಭಾರತ ಹಾಗೂ ಭಾರತೇತರವಾದ ಪೌರುಷೇಯ ಶಾಸ್ತ್ರಗಳಲ್ಲಿ ಯಾವ ಗ್ರಂಥವು ಉತ್ತಮ ಎಂಬ ಜಿಜ್ಞಾಸೆ ಬಂದಾಗ ಮಹಾಭಾರತವು ಪೌರುಷೇಯವಾದ ಸರ್ವಶಾಸ್ತ್ರೋತ್ತಮ ಎಂಬುದಾಗಿ ಈ ಪರೀಕ್ಷೆಯಿಂದ ಸಿದ್ಧವಾಗಿದೆ ಎಂಬುದು ಇಲ್ಲಿನ ಅಭಿಪ್ರಾಯ.

ಇದೇ ಪ್ರಕರಣದಲ್ಲೇ ಪ್ರಮೇಯದೀಪಿಕೆಯು 'ಸ್ಯಾದೇತತ್ ಅನುಮಾನಂ' ಎಂಬುದಾಗಿ ಅನುಮಾನವನ್ನು ಉಲ್ಲೇಖ ಮಾಡಿದೆ. ಈ ಪ್ರಮೇಯದೀಪಿಕಾವಾಕ್ಯಕ್ಕೆ ಅಭಿಮತವಾದ ಅನುಮಾನದಲ್ಲಿ ಉತ್ತಮತ್ವವನ್ನು ಹೇಳುವಾಗ ಸಜಾತೀಯವಾದ ಸಕಲ ಶಾಸ್ತ್ರಗಳಿಂದ ಉತ್ತಮತ್ವವನ್ನೇ ಸಾಧ್ಯವನ್ನಾಗಿ ಮಾಡಲಾಗಿದೆ. ಮಹಾಭಾರತಕ್ಕೆ ಸಾಜಾತ್ಯವನ್ನು ಪೌರುಷೇಯತ್ವನಿಮಿತ್ತದಿಂದ ಮಾತ್ರವೇ ವಿವಕ್ಷೆ ಮಾಡಲು ಸಾಧ್ಯ. ವಿಜಾತೀಯವಾದದ್ದು ವೇದ, ಅದು ಅಪೌರುಷೇಯವಾಗಿದೆ. ಹೀಗೆ ಮಹಾಭಾರತವು ನಿರ್ಣೇಯವಾದ ಎಲ್ಲಾ ಪೌರುಷೇಯಶಾಸ್ತ್ರಗಳಿಗಿಂತಲೂ ಸಹ ಉತ್ತಮವಾಗಿದೆ. ಅಪೌರುಷೇಯ- ವಾದ್ದರಿಂದ ವಿಜಾತೀಯವಾದ ವೇದಕ್ಕಿಂತಲೂ ಸಹ ಉತ್ತಮ ಎಂದು ಸಿದ್ಧವಾಗುವುದಿಲ್ಲ. ಈ ಕಾರಣದಿಂದಲೇ ಟೀಕೆಯಲ್ಲಿ 'ಭಾರತಂ ಸಜಾತೀಯೋತ್ತಮಂ' ಎಂಬ ವಾಕ್ಯವು ಹೊರಟಿದೆ. ಹೀಗೆ ಪ್ರಮೇಯದೀಪಿಕೆಯ ಉಮರ್ಜಿಯ ಟಿಪ್ಪಣಿಯಲ್ಲಿ ವಿವರಿಸಿದ್ದಾರೆ.

ಪ್ರಮೇಯದೀಪಿಕೆಯ ಮತ್ತೊಬ್ಬ ವ್ಯಾಖ್ಯಾನಕಾರರಾದ ಶ್ರೀಸುಮತೀಂದ್ರತೀರ್ಥರು ತಮ್ಮ ಭಾವರತ್ನ-ಕೋಶದಲ್ಲೂ ಸಹ ಇದರ ಉತ್ತಮತ್ವವನ್ನು ಹೇಳುವ ಸಂದರ್ಭದಲ್ಲಿ ಎರಡು ಕಡೆ ಹೀಗೆ ಹೇಳಿದ್ದಾರೆ – ೧) ಭಾರತಶಬ್ದವು ಸ್ವಸಜಾತೀಯವಾದ ಉತ್ತಮತ್ವವನ್ನು ಹೇಳುತ್ತದೆ ಎಂದು. ೨) ಭಾರತವು ಸ್ವಸಜಾತೀಯವಾದ ಸರ್ವಶಾಸ್ತ್ರೋತ್ತಮವಾಗಿದೆ ಎಂದು.

## ಸಾಂಪ್ರದಾಯಿಕವಾಗಿ ಅಧ್ಯಯನ ಮಾಡಿರಿ

ಏವಂ ಚೋಕ್ತಾಂತರಂಗಬಹಿರಂಗಸಾಧಕೈಃ ಟೀಕಾಟಿಪ್ಪಣ್ಯಾದಿಸಂವಾದೇನ ಚ ಭಾಷ್ಯತಾತ್ಪರ್ಯ-

ವಚನಾನಾಂ ಭಾರತಸ್ಯ ಪೌರುಷೇಯಶಾಸ್ತ್ರೋತ್ತಮತ್ವಮೇವ, ನ ವೇದಾದಪ್ಯುತ್ತಮತ್ವಮಿತ್ಯೇವಾರ್ಥೋ ಯುಕ್ತ ಇತಿ ಪೌರುಷೇಯಸ್ಯ ವೇದೋತ್ತಮತ್ವೇ ನ ಕಿಂಚಿತ್ ಪ್ರಮಾಣಮಿತಿ ಭಾರತಾದೇಃ ವೇದೋತ್ತಮತ್ವವಚನಮನುಪಾಸಿತಸಾಂಪ್ರದಾಯಿಕಗುರುಚರಣತಯಾ ಗ್ರಂಥಮರ್ಮಾನಭಿಜ್ಞಾನನಿಬಂಧನಮೇವೇತಿ ದ್ರಷ್ಟವ್ಯಂ।

ಅನುವಾದ - ಈ ಮೇಲೆ ಹೇಳಿದ ಅಂತರಂಗಪ್ರಮಾಣ ಹಾಗೂ ಬಹಿರಂಗಪ್ರಮಾಣಗಳಿಂದ ಮತ್ತು ಟೀಕಾ ಟಿಪ್ಪಣಿಗಳ ಸಂವಾದದಿಂದ ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯಗಳ ವಾಕ್ಯಗಳನ್ನು ವಿವೇಚನೆ ಮಾಡಿದಾಗ ಮಹಾಭಾರತವು ಪೌರುಷೇಯವಾದ ಸರ್ವಶಾಸ್ತ್ರಗ್ರಂಥಗಳಿಗಿಂತಲೂ ಸಹ ಉತ್ತಮ ಹೊರತು ವೇದಕ್ಕಿಂತಲೂ ಉತ್ತಮ ಅಲ್ಲ ಎಂಬ ಅಂಶವು ಸ್ಪಷ್ಟವಾಗುತ್ತದೆ. ಹಾಗೂ ಪೌರುಷೇಯವಾದ ಗ್ರಂಥವು ವೇದಕ್ಕಿಂತಲೂ ಸಹ ಉತ್ತಮ ಎನ್ನುವ ವಿಷಯದಲ್ಲಿ ಯಾವುದೇ ಪ್ರಮಾಣ ಇರುವುದಿಲ್ಲ. ಆದ್ದರಿಂದ ಭಾರತವು ವೇದಕ್ಕಿಂತಲೂ ಸಹ ಉತ್ತಮ ಎಂದು ವಾದಿಸುವವರು ಸಂಪ್ರದಾಯಬದ್ಧವಾದ ಗುರುಗಳ ಬಳಿ ಅಧ್ಯಯನ ಮಾಡಿರುವುದಿಲ್ಲ. ಆದ್ದರಿಂದ ಗ್ರಂಥಗಳ ಒಳ ಅಂತರಂಗವನ್ನು ತಿಳಿಯದೇ ಆಡುವ ಮಾತುಗಳು ಎಂಬುದಾಗಿ ಈ ಪ್ರಕರಣದಿಂದ ಸ್ಪಷ್ಟವಾಗುತ್ತದೆ.

## ತಾತ್ಪರ್ಯಚಂದ್ರಿಕೆಯ ಆಧಾರ

ಅಪಿ ಚ ಪೋರುಷೇಯಸ್ಯ ವೇದಾದಪ್ಯಾಧಿಕ್ಯಂ ನ ಯುಕ್ತಮಿತಿ ಕಂಠತ ಏವ ಸಯುಕ್ತಿಕಮುಕ್ತಂ ಶ್ರೀಮದ್ವ್ಯಾಸತೀರ್ಥಪೂಜ್ಯಚರಣೈ :- 'ವೇದವಿರುದ್ಧತಯಾ ನಿರ್ದಿಷ್ಟಸಾಂಖ್ಯಾದ್ಯೈಕ್ಯಮಭಿಪ್ರೇತ್ಯ ಸಾಂಖ್ಯಾದಿಶಬ್ದೇನ ಪಂಚರಾತ್ರವಿವಕ್ಷಾಯಾಂ ತು ಪಂಚರಾತ್ರಾದೇರ್ವೇದಾದಪ್ಯಾಧಿಕ್ಯಮುಕ್ತಂ ಸ್ಯಾತ್; ನ ಚ ತದ್ಯುಕ್ತಂ; ವೇದವಿರೋಧೇನಾಲಬ್ಧಪ್ರಾಮಾಣ್ಯಸ್ಯ ತಸ್ಯ ವೇದಾದಾಧಿಕ್ಯಸ್ಯ ದೂರನಿರಸ್ತತ್ವಾದಿತಿ'

- (ತಾತ್ಪರ್ಯಚಂದ್ರಿಕಾ 1-1-3)

ಅನುವಾದ - ಶ್ರೀಮದ್‌ವ್ಯಾಸತೀರ್ಥಶ್ರೀಮಚ್ಚರಣರು ಪೌರುಷೇಯಗ್ರಂಥವು ವೇದಕ್ಕಿಂತ ಉತ್ತಮವಾಗಲು ಸಾಧ್ಯವಿಲ್ಲ ಎಂಬ ಅಂಶವನ್ನು ಸಾಕ್ಷಾತ್ತಾಗಿಯೇ ಯುಕ್ತಿಪುರಸ್ಸರವಾಗಿ ತಾತ್ಪರ್ಯ ಚಂದ್ರಿಕೆಯ ಮೊದಲನೆಯ ಅಧ್ಯಾಯದ ಮೂರನೆಯ ಅಧಿಕರಣದಲ್ಲಿ ಸ್ಪಷ್ಟಪಡಿಸಿದ್ದಾರೆ. ವೇದಕ್ಕೆ ವಿರುದ್ಧವಾದ ಸಾಂಖ್ಯಾದಿಶಾಸ್ತ್ರಗಳಿಗೂ ಪಂಚರಾತ್ರಕ್ಕೂ ಐಕ್ಯವಿದೆಯೋ ಇಲ್ಲವೋ ? ಎಂಬ ಜಿಜ್ಞಾಸೆ ಬಂದಾಗ ಸಾಂಖ್ಯ ಶಬ್ದದಿಂದ ಪಂಚರಾತ್ರವನ್ನು ಸ್ವೀಕಾರ ಮಾಡಿದರೆ ಪಂಚರಾತ್ರಾದಿಗಳು ವೇದಕ್ಕಿಂತಲೂ ಸಹ ಅಧಿಕ ಎಂದು ಹೇಳಿದಂತಾಗುತ್ತದೆ. ಆ ಕಾರಣದಿಂದ ಸಾಂಖ್ಯ ಶಬ್ದದಿಂದ ಪಂಚರಾತ್ರವನ್ನು ವಿವಕ್ಷೆ ಮಾಡಬಾರದು. ವೇದವಿರುದ್ಧವಾದ್ದರಿಂದ ಅಪ್ರಮಾಣವಾದ ಸಾಂಖ್ಯಶಾಸ್ತ್ರವು ವೇದಕ್ಕಿಂತಲೂ ಅಧಿಕ ಎಂಬುದು ದೂರತಃ

ನಿರಾಸವಾಗುತ್ತದೆ. ಅಪ್ರಮಾಣವಾದದ್ದು ವೇದಕ್ಕಿಂತ ಉತ್ತಮ ಹೇಗೆ ತಾನೇ ಆದೀತು? ಹೀಗೆ ತಾತ್ಪರ್ಯಚಂದ್ರಿಕೆಯಲ್ಲಿ ಹೇಳಿದ್ದಾರೆ.

## 'ವೇದಶಾಸ್ತ್ರಾತ್ ಪರಂ ನಾಸ್ತಿ' ಎಂದು ಶಪಥ ಮಾಡುತ್ತೇನೆ

ನ ಕೇವಲಂ ಸಾಧಕಪ್ರಮಾಣಾಭಾವಃ, ಪ್ರತ್ಯುತ ವೇದಸ್ಯಾವರತ್ವೇ ಸ್ಫುಟತಮಂ ನಿರವಕಾಶಂ ಬಾಧಕಂ ಚಾಸ್ತಿ । ಮಹಾಭಾರತೇ ಅಂತೇ, ಆಶ್ಚರ್ಯಪರ್ವಣಿ ಸದೃಷ್ಟಾಂತಂ ಶಪಥಪೂರ್ವಕಂ ಉಚ್ಛ್ರಿತಬಾಹುಯುಗಂ ವೇದಸ್ಯ ಅಸಂಕುಚಿತಸರ್ವಶಾಸ್ತ್ರೋತ್ತಮತ್ವಸ್ಯೈವ ಉದ್‌ಘೋಷಿತತ್ವಾತ್ । ಉದಾಹೃತಂ ಚ ತದೇವ ಮಹಾಭಾರತತಾತ್ಪರ್ಯನಿರ್ಣಯೇ -

'ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ ॥' ಇತಿ

ಏವಂ ಶಪಥಪೂರ್ವಮುದ್‌ಘೋಷಯಿತುಃ ಭಗವತ್ಪಾದಸ್ಯ ವೇದಾವರತ್ವಾಶಯಕಲ್ಪನಂ ತಸ್ಯ ವ್ಯಾಹತಭಾಷಿತ್ವಮಾಪಾದಯತೀತಿ ನಿಂದಾಯಾಮೇವ ಪರ್ಯವಸಾನೇನ ದ್ರೋಹ ಏವಾಪತೇತ್ । ಅತೋಽಪಸಿದ್ಧಾಂತಪ್ರಚಾರದೂರೀಕರಣಂ ಶ್ರೇಯ ಇತಿ ಸ್ಮರ್ತವ್ಯಂ ।

ಅನುವಾದ - ಹೀಗೆ ಸಾಧಕ ಪ್ರಮಾಣಗಳು ಇಲ್ಲ ಎಂಬ ಅಂಶ ಮಾತ್ರವಲ್ಲದೇ ವೇದಕ್ಕಿಂತಲೂ ಕೂಡ ಭಾರತವು ಉತ್ತಮ ಎನ್ನುವ ಪಕ್ಷಕ್ಕೆ ನಿರವಕಾಶವಾದ ಬಾಧಕಪ್ರಮಾಣವೂ ಸಹ ಇದೆ. ಇದನ್ನು ಮಹಾಭಾರತವೇ ಹೇಳುತ್ತಿದೆ. ಆಶ್ಚರ್ಯಪರ್ವದಲ್ಲಿ ದೃಷ್ಟಾಂತಪೂರ್ವಕವಾಗಿ ಕೈಗಳನ್ನು ಎತ್ತಿ ಶಪಥ ಮಾಡುವ ಮೂಲಕ ವೇದವು ಸರ್ವಶಾಸ್ತ್ರೋತ್ತಮ ಎಂಬ ವಿಷಯವನ್ನು ಘೋಷಣೆ ಮಾಡಿದ್ದಾರೆ. ಮಹಾಭಾರತದಲ್ಲಿ ಬಂದ ಮಾತನ್ನೇ ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಉದಾಹರಿಸಿದ್ದಾರೆ.

'ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ ॥' ಇತಿ

ಸತ್ಯ, ಇದು ಸತ್ಯ , ಮತ್ತೆ ಮತ್ತೆ ಸತ್ಯ ಎಂಬುದಾಗಿ ಎರಡೂ ಕೈಗಳನ್ನು ಮೇಲೆತ್ತಿ ಹೇಳುತ್ತೇನೆ. ವೇದಶಾಸ್ತ್ರಕ್ಕಿಂತ ಉತ್ತಮವಾದ ಮತ್ತೊಂದು ಗ್ರಂಥವಿಲ್ಲ. ಭಗವಂತನಿಗಿಂತ ಉತ್ತಮವಾದ ದೈವ ಮತ್ತೊಂದು ಇಲ್ಲ.

ಹೀಗೆ ಶಪಥಪೂರ್ವಕವಾಗಿ ಘೋಷಣೆ ಮಾಡಿದ ಶ್ರೀಮದಾಚಾರ್ಯರಿಗೆ ಮಹಾಭಾರತವು

ವೇದಕ್ಕಿಂತಲೂ ಉತ್ತಮ ಎಂಬ ಆಶಯವು ಅಭಿಪ್ರೇತವಲ್ಲ. ಹಾಗೆ ಹೇಳಿದರೆ ಶ್ರೀಮದಾಚಾರ್ಯರಿಗೆ ವ್ಯಾಹತಭಾಷಿತ್ವವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಮಹಾಭಾರತವು ವೇದಶಾಸ್ತ್ರಕ್ಕಿಂತ ಉತ್ತಮ ಎಂಬ ವಿಷಯವು ಶ್ರೀಮದಾಚಾರ್ಯರ ದ್ರೋಹದಲ್ಲಿ ಪರ್ಯವಸಾನಗೊಳ್ಳುತ್ತದೆ. ಆದ್ದರಿಂದ ಅಪಸಿದ್ಧಾಂತದ ಪ್ರಚಾರವನ್ನು ದೂರ ಮಾಡುವುದೇ ಶ್ರೇಯಸ್ಸು ಎಂಬುದನ್ನು ಸ್ಮರಣೆಗೆ ತಂದುಕೊಳ್ಳಿರಿ.

## ಸಮಗ್ರ ಪ್ರಕರಣದ ಸಾರಾಂಶ

**ತಥಾಚ ಶಾಸ್ತ್ರಂ (ವಿದ್ಯಾ) ದ್ವಿವಿಧಮಪೌರುಷೇಯಂ ಪೌರುಷೇಯಂ ಚೇತಿ ಅಪೌರುಷೇಯೋ ವೇದ ಏಕ ಏವ । ಪೌರುಷೇಯಮಪಿ ದ್ವಿವಿಧಂ; ನಿರ್ಣೇಯಂ ನಿರ್ಣಾಯಕಂ ಚೇತಿ ? ತತ್ರ (ಪೌರುಷೇಯ) ನಿರ್ಣೇಯೇಷು ಮಹಾಭಾರತಮುತ್ತಮಂ; ನಿರ್ಣಾಯಕೇಷು ಬ್ರಹ್ಮಮೀಮಾಂಸಾ-ಶಾಸ್ತ್ರಮುತ್ತಮಂ। ತತ್ರಾಽಪೌರುಷೇಯವೇದ ಏವ ಸಾಕ್ಷಾದ್ವಿಷ್ಣುಬೋಧಕತ್ವಾನ್ಮುಖ್ಯಪರವಿದ್ಯಾ , ವೇದಸ್ಯ ವಿಷ್ಣುಬೋಧಕತ್ವೌಪಯಿಕತ್ವೇನ ಬ್ರಹ್ಮಸೂತ್ರಾದಿಕಮಪಿ ಪರಂಪರಯಾ ವಿಷ್ಣುವಿಷಯಕತ್ವಾದಮುಖ್ಯಪರ-ವಿದ್ಯೇತ್ಯೇವ ಸಿದ್ಧಾಂತಃ। ತದಭಿಪ್ರಾಯೇಣೈವ ಬ್ರಹ್ಮಸೂತ್ರಾದಿನಾಮಪಿ ಪರವಿದ್ಯಾತ್ವವ್ಯವಹಾರಸ್ತತ್ರತತ್ರ ಕೃತಃ ಸಾಧು ಸಂಗಚ್ಛತ ಇತಿ ದಿಕ್ ॥**

**ಇತಿ ಶ್ರೀಮದ್ವಿದ್ವಚ್ಚಕ್ರಚೂಡಾಮಣಿ ಗೋವಿಂದಕೃಷ್ಣಾಚಾರ್ಯಾತ್ಮಜವಾಸುದೇವಾಚಾರ್ಯ ವಿರಚಿತಃ ಪರವಿದ್ಯಾನಿರ್ಧಾರಣಾಪರನಾಮಾ "ವಿದ್ಯಾವಿನಿರ್ಣಯಃ" ಸಮಾಪ್ತಃ**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

**ಅನುವಾದ -** ಶಾಸ್ತ್ರವು ಎರಡು ವಿಧವಾಗಿದೆ. ಅಪೌರುಷೇಯ ಹಾಗೂ ಪೌರುಷೇಯ ಎಂಬುದಾಗಿ. ಅಪೌರುಷೇಯವಾದದ್ದು ವೇದವಿದ್ಯೆ ಮಾತ್ರವೇ. ಪೌರುಷೇಯವು ಎರಡು ವಿಧವಾಗಿದೆ - ೧) ನಿರ್ಣೇಯ ಗ್ರಂಥ, ೨) ನಿರ್ಣಾಯಕಗ್ರಂಥ.

೧) ಪೌರುಷೇಯವಾದ ನಿರ್ಣೇಯ ಗ್ರಂಥಗಳಲ್ಲಿ ಮಹಾಭಾರತವು ಅತ್ಯುತ್ತಮವಾಗಿದೆ.

೨) ಪೌರುಷೇಯವಾದ ನಿರ್ಣಾಯಕ ಗ್ರಂಥಗಳಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರವು ಅತ್ಯುತ್ತಮವಾಗಿದೆ.

ಇಲ್ಲಿ ಅಪೌರುಷೇಯವಾದ ವೇದವೇ ಸಾಕ್ಷಾತ್ತಾಗಿ ಭಗವಂತನನ್ನು ತಿಳಿಸಿಕೊಡುವುದರಿಂದ ಮುಖ್ಯವಾದ ಪರವಿದ್ಯಾ ಎಂದು ಕರೆಸಿಕೊಳ್ಳುತ್ತದೆ. ವೇದವು ವಿಷ್ಣುವನ್ನು ತಿಳಿಸಿಕೊಡಲು ಬ್ರಹ್ಮಸೂತ್ರಾದಿಗಳು ಉಪಯೋಗಿಯಾಗಿವೆ. ಆದ್ದರಿಂದ ಪರಂಪರಯಾ ಇದೂ ಸಹ ವಿಷ್ಣುವಿಷಯಕವಾಗಿದೆ. ಹೀಗೆ ಅಮುಖ್ಯವಾದ





ಪರವಿದ್ಯಾತ್ವವು ಬ್ರಹ್ಮಸೂತ್ರಾದಿಗಳಿಗೆ ಬರುತ್ತದೆ ಎಂಬುದು ಪರಮಸಿದ್ಧಾಂತವಾಗಿದೆ. ಈ ಅಭಿಪ್ರಾಯದಿಂದಲೇ ಬ್ರಹ್ಮಸೂತ್ರಾದಿಗಳನ್ನು ಪರವಿದ್ಯಾ ಎಂಬ ವ್ಯವಹಾರವನ್ನು ಶಾಸ್ತ್ರಗಳಲ್ಲಿ ಅಲ್ಲಲ್ಲಿ ಮಾಡಲಾಗಿದೆ. ಈ ವಿಮರ್ಶೆಯು ಕೇವಲ ದಿಕ್‌ಪ್ರದರ್ಶನವಾಗಿದೆ.

ಇಲ್ಲಿಗೆ ಶ್ರೀಮತ್ ವಿದ್ವಚ್ಚಕ್ರಚೂಡಾಮಣಿಗಳಾದ ಗೋವಿಂದಕೃಷ್ಣಾಚಾರ್ಯರ ಪುತ್ರರಾದ ಶ್ರೀವಾಸುದೇವಾಚಾರ್ಯರಿಂದ ವಿರಚಿತವಾದ 'ಪರವಿದ್ಯಾನಿರ್ಧಾರಣ' ಎನಿಸಿದ 'ವಿದ್ಯಾವಿನಿರ್ಣಯ' ಎಂಬ ಗ್ರಂಥವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥







# ಸುಧಾಪರೀಕ್ಷೆ

## ಹದಿನೈದು ಪ್ರಶ್ನೆಗಳಿಗೆ ಉತ್ತರಿಸಿ.

1. ನ್ಯಾಯಸುಧೆಯು ಶ್ರೀಕರಗ್ರಂಥವೆಂದು ಹೇಳುವ ಶ್ರೀವಾದಿರಾಜರ ಪೂರ್ಣವಾಕ್ಯವೇನು?

ಉತ್ತರ - ಪುಟ. 39 ನೋಡಿ.

2. ನ್ಯಾಯಸುಧೆಯ ಪ್ರಥಮಶ್ಲೋಕದಲ್ಲಿ 'ಶ್ರಿಯಃ ಪತ್ಯೇ' ಎಂದು ಹೇಳುವ ಬದಲು 'ಶ್ರೀಪತಯೇ' ಎಂದು ಹೇಳಬಹುದಿತ್ತಲ್ಲವೇ?

ಉತ್ತರ - ಪುಟ. 16-17

3. 'ಜಗಜ್ಜನ್ಮಸ್ಥೇಮಪ್ರಲಯರಚನಾ' ಎಂಬಲ್ಲಿ ಜನ್ಮಾದ್ಯಷ್ಟಕಗಳು ವಿವಕ್ಷಿತವೋ ಅಲ್ಲವೋ?

ಉತ್ತರ - ಪುಟ. 27,28,50

4. ಶ್ರೀಮಧ್ವಾಚಾರ್ಯರು ಶುದ್ಧಪ್ರಮಾಣರು; ಹೇಗೆ?

ಉತ್ತರ - ಪುಟ. 96-97

5. ನ್ಯಾಯಸುಧೆಯ ಮಂಗಳಶ್ಲೋಕಗಳಲ್ಲಿ ಮಹಾಭಾರತದ ಮಂಗಳಶ್ಲೋಕದ ಅನುಕರಣೆ ಇದೆ.ಯರಲವ ಇದು ಹೇಗೆ?

ಉತ್ತರ - ಪುಟ 99-100

6. 'ಪದವಾಕ್ಯಪ್ರಮಾಣಜ್ಞಾನ್' ಎಂಬಲ್ಲಿ ಪದ, ವಾಕ್ಯ , ಪ್ರಮಾಣ ಎಂದರೇನು?

ಉತ್ತರ - ಪುಟ 114-115

7. ಪ್ರಸಿದ್ಧವಾದ 'ಪ್ರತಿವಾಕ್ಯಂ ಪ್ರತಿಪದಂ' ಎಂಬ ನುಡಿಗಟ್ಟನ್ನು ರಾಯರು ಯಾವ ಸಂದರ್ಭದಲ್ಲಿ ಹೇಳಿರುವರು?

ಉತ್ತರ - 138-139







8. 'ವಯಂ ಮಾನ್ಯಾಃ ಸ್ಮಃ' ಎಂಬಲ್ಲಿ ಬಹುವಚನ ಹೇಗೆ?

ಉತ್ತರ - ಪುಟ. 140-141

9. 'ನಿಖಿಲಪೂರ್ಣಗುಣೈಕದೇಹಂ' ಎಂಬುದರಿಂದ ಎಷ್ಟು ಲಕ್ಷಣಗಳನ್ನು ಹೇಳಿದ್ದಾರೆ. ಹಾಗೂ ನಿಖಿಲಗುಣತ್ವವು ದೇವರಲ್ಲಿರಲು ಹೇಗೆ ಸಾಧ್ಯ ?

ಉತ್ತರ - ಪುಟ. 269-270

10. ಅನುವ್ಯಾಖ್ಯಾನದ ಮಂಗಳಪದ್ಯದಲ್ಲಿ ಒಟ್ಟು ಎಷ್ಟು ಲಕ್ಷಣ ಹೇಳಿದ್ದಾರೆ?

ಉತ್ತರ - ಪುಟ. 272-273

11. ಮಂಗಳಶ್ಲೋಕಕ್ಕೆ ಟೀಕೆಯಲ್ಲಿ ಏಳು ವ್ಯಾಖ್ಯಾನಗಳನ್ನು ಮಾಡಿದ್ದಾರೆ. ಇವುಗಳಲ್ಲಿ ಉತ್ತರೋತ್ತರ ಪ್ರಾಬಲ್ಯವಿದೆ. ಇದು ಹೇಗೆ?

ಉತ್ತರ - ಪುಟ 315-319.

12. ಮಂಗಳಶ್ಲೋಕದಲ್ಲಿ ದ್ವಿತೀಯಾಂತವಿಶೇಷಣಗಳಿಗೆ ಎಲ್ಲಿ ಅನ್ವಯ?

ಉತ್ತರ - ಪುಟ. 180

13. ಆರ್ಥಿಕಪುನರುಕ್ತಿ ಎಂದರೇನು?

ಉತ್ತರ - ಪುಟ. 199

14. ವಿಶಿಷ್ಟ ಅಧಿಕೃತ ಇಷ್ಟ ಶಬ್ದಗಳ ಅರ್ಥವೇನು?

ಉತ್ತರ - ಪುಟ. 212

15. 'ಪರವಿದ್ಯಾಖ್ಯಂ' ಎಂಬುದಕ್ಕೆ 'ಅನುತ್ತಮಂ ಶಾಸ್ತ್ರಮ್' ಎಂಬುದು ಹೇಗೆ ವ್ಯಾಖ್ಯಾನ ವಾಗುತ್ತದೆ?

ಉತ್ತರ- ಪುಟ. 451-452.

* * * * *









## ವ್ಯಾಕರಣವಿಷಯದಲ್ಲಿ ಹದಿನಾಕು ಪ್ರಶ್ನೆಗಳಿಗೆ ಉತ್ತರಿಸಿ.

1. 'ಜಗಜ್ಜನ್ಮಸ್ಥೇಮಪ್ರಲಯರಚನಾ' ಎಂಬಲ್ಲಿ ಸ್ಥೇಮ ಎಂಬ ಶಬ್ದವು ಹೇಗೆ ಸಾಧುವಾಗುತ್ತದೆ?

ಉತ್ತರ - ಪುಟ 23-27 ಹಾಗೂ 51-53

2. 'ಆಮ್ನಾಯಸ್ಮೃತಿಹೃದಯ' ಎಂಬಲ್ಲಿ ಸ್ಮೃತ್ಯಾಮ್ನಾಯಹೃದಯ ಎಂದಾಗಬೇಕಿತ್ತಲ್ಲವೇ?

ಉತ್ತರ - ಪುಟ. 37-38 ಹಾಗೂ 54-57

3. 'ಉಪತಿಷ್ಠಾಮಿ' ಎಂದು ಹೇಳದೇ ಉಪತಿಷ್ಠೇ ಗುರೂನ್ ಎಂದು ಹೇಗೆ ಹೇಳಿದರು?

ಉತ್ತರ - ಪುಟ 113

4. 'ಚಂಚರೀಕತಿ' ಎಂಬ ಧಾತು ಹೇಗೆ ಸರಿ?

ಉತ್ತರ - ಪುಟ 124,128-129

5. 'ಸರಸೀಭುನಿ' ಎಂದಾಗಬೇಕು ಸರಸೀಭುವಿ ಎಂದು ಹೇಗೆ ಪ್ರಯೋಗಿಸಿದರು?

ಉತ್ತರ - ಪುಟ 126-127

6. 'ಮಾನ್ಯಾಃ ಸ್ಮಃ' ಎಂಬ ಪ್ರಯೋಗ ಹೇಗೆ ಸರಿ?

ಉತ್ತರ - ಪುಟ 143-144

7. 'ಗುಣೈಕದೇಹಂ' ಎಂಬ ಸಮಾಸ ಸಾಧುವೇ?

ಉತ್ತರ - ಪುಟ 218-219

8. 'ಅಸ್ಯೋದ್ಭವಾದಿದಂ' ಎಂಬಲ್ಲಿ 'ಅಸ್ಮೈ' ಎಂದು ಹೇಳಬೇಕಿತ್ತಲ್ಲವೇ?

ಉತ್ತರ - ಪುಟ 221-227 ಹಾಗೂ 229

9. 'ಅಸ್ಯ' ಎಂಬಲ್ಲಿ ಷಷ್ಠೀವಿಚಾರ?

ಉತ್ತರ - ಪುಟ 233-242







10. 'ಅಶೇಷವಿಶೇಷತಃ' ಎಂಬಲ್ಲಿ ಪಂಚಮಿಗೆ ಏನರ್ಥ?

ಉತ್ತರ - ಪುಟ 311

11. ಕರಿಷ್ಯಾಮಿ ಎನ್ನದೇ ಕರೋಮಿ ಎಂಬ ವರ್ತಮಾನಪ್ರಯೋಗವು ಹೇಗೆ ಸರಿ?

ಉತ್ತರ - ಪುಟ 331 ಹಾಗೂ 335-337

12. 'ಶಾಸ್ತ್ರಪ್ರಭವಂ' ಎಂಬಲ್ಲಿ ಸಮಾಸ ಹೇಗೆ?

ಉತ್ತರ - ಪುಟ 345-348

13. ವ್ಯಾಸೋಪಜ್ಞಾ ಎಂಬುದರ ನಿಷ್ಪತ್ತಿ ಹೇಗೆ?

ಉತ್ತರ - ಪುಟ 435-437 ಹಾಗೂ 439-440

14. 'ಚಕ್ರೇ' ಎಂದು ಆತ್ಮನೇಪದಪ್ರಯೋಗವನ್ನು ಮಾಡಲು ಏನು ಕಾರಣ?

ಉತ್ತರ - ಪುಟ 441-450

* * * *

## ವಿಮರ್ಶೆಗಳು

1. 'ಮೇ' ಎಂಬ ಪ್ರಯೋಗ ಎಲ್ಲಿ? ಮಮ ಎಂಬ ಪ್ರಯೋಗ ಎಲ್ಲಿ

ಪುಟ 106-108

2. ಟೀಕಾರಾಯರು 'ನ ಶಬ್ದಾಬ್ಧೌ ಗಾಧಾಃ' ಎಂಬಲ್ಲಿ ಸ್ವಸಾಮರ್ಥ್ಯತೋರಿಸಿದ್ದಾರೆಂದು ಪರಿಮಳದಲ್ಲಿ ವ್ಯಾಖ್ಯಾನ ಮಾಡಿರುವರು. ಇದು ಹೇಗೆ ಸರಿ?

ಪುಟ. 141-143

3. ಉತ್ತಮಪುರುಷಪ್ರಯೋಗದಿಂದ ಅಸ್ಮದ್ಯುಪಪದವು ಹೇಗೆ ತಿಳಿಯುತ್ತದೆ?

ಪುಟ 182-186

4. ನಿಮಿತ್ತದ್ವಯಸಮಾವೇಶವಾದಾಗ ನೈಮಿತ್ತಿಕಗಳಲ್ಲಿ ಲೋಪನಿಯಮ ಏಕಿಲ್ಲ?

ಪುಟ 354-360







5. ಗ್ರಂಥದಲ್ಲಿ ಮಂಗಳಾಚರಣೆ ಮಾಡಲು ಹೇಗೆ ಸಾಧ್ಯ ?

ಪುಟ 369-372

6. ವಿದ್ಯಾಶಬ್ದಕ್ಕೆ ಜ್ಞಾನ ಹಾಗೂ ಜ್ಞಾನಸಾಧನ ಎಂಬರ್ಥ ಹೇಗೆ?

ಪುಟ 416-423

7. ಮತತ್ರಯಗಳಲ್ಲಿ ಪರವಿದ್ಯಾ ಎಂದರೇನು?

ಪುಟ 458-462

8. ಕಾಶೀಟಪ್ಪಣಿಯಲ್ಲಿ ಯಾವುದನ್ನು ಪರವಿದ್ಯೆ ಎಂದಿದ್ದಾರೆ?

ಪುಟ 490-503

ಹದಿನೈದು ಶಾಸ್ತ್ರೀಯಪ್ರಶ್ನೆಗಳಿಗೆ ಸುಲಭದಲ್ಲಿ ಉತ್ತರಿಸಿ,
ಹದಿನಾಕು ವ್ಯಾಕರಣ ಪ್ರಶ್ನೆಗಳಿಗೆ ವ್ಯುತ್ಪತ್ತಿ ಪೂರ್ವಕವಾಗಿ ಉತ್ತರಿಸಿ;
ಎಂಟು ವಿಮರ್ಶೆಗಳಲ್ಲಿ ತೊಡಗಿ ಮತ್ತಷ್ಟು ಚಾಣಾಕ್ಷ ಬುದ್ಧಿ ತೋರಿಸಿ.
ಆಗ ಸುಧಾಪರೀಕ್ಷೆ ನಿಮಗೆ ಬಲು ಸುಲಭ.

ಅಸ್ಮದ್ಗುರ್ವಂತರ್ಗತಹನುಮದ್ಭೀಮಮಧ್ವಾಂತರ್ಗತ-
ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಮ್

-----



ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರ ದಿವ್ಯ ಅಧ್ಯಕ್ಷತೆ, ಮಾರ್ಗದರ್ಶನ ಆಶೀರ್ವಾದಗಳಿಂದ ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯರು ಅನುವಾದ ಮಾಡುತ್ತಿರುವ ಗ್ರಂಥಗಳ ಯಾದಿ:

1. ಬ್ರಹ್ಮಸೂತ್ರ
2. ಬ್ರಹ್ಮಸೂತ್ರಭಾಷ್ಯ
3. ಸತ್ತರ್ಕದೀಪಾವಳಿ
4. ತತ್ವಪ್ರದೀಪ
5. ತತ್ವಪ್ರಕಾಶಿಕಾ
6. ಭಾವದೀಪ
7. ತಂತ್ರದೀಪಿಕಾ
8. ತರ್ಕತಾಂಡವ
9. ನ್ಯಾಯದೀಪ
10. ಅಭಿನವತಾಂಡವ



ಪ್ರಕಾಶನ :
ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀ ರಾಘವೇಂದ್ರಸ್ವಾಮಿಗಳ ಮಠ
ಮಂತ್ರಾಲಯ – **518 345** (ಆಂಧ್ರ ಪ್ರದೇಶ)